ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ ಜನ್ಮಶತಮಾನೋತ್ಸವ
ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

# ಸತ್ಕಥಾಸಾಗರ

## ಭಾರತ ಕಥಾತರಂಗ–2



ಸಂಗ್ರಹ - ಪ್ರೇರಣೆ

**ಶ್ರೀ ಶ್ರೀ 108 ಶ್ರೀ ವಿದ್ಯೇಶತೀರ್ಥಶ್ರೀಪಾದರು, ಶ್ರೀಭಂಡಾರಕೇರಿ ಮಠ ,ಉಡುಪಿ**

ಶ್ರೀ ಐತರೇಯಶೋಧಪ್ರಕಾಶನಪೀಠ
ಶ್ರೀ ಭಾಗವತಾಶ್ರಮ ಪ್ರತಿಷ್ಠಾನ, ಶ್ರೀಭಂಡಾರಕೇರಿ ಮಠ, ಗಿರಿನಗರ, ಬೆಂಗಳೂರು-560 085

# ಸತ್ಕಥಾಸಾಗರ

## ಭಾರತ ಕಥಾತರಂಗ–೨

(ದಿ.ವಿದ್ವಾನ್. ಕೊಯಮತ್ತೂರು ವಾದಿರಾಜಾಚಾರ್ಯ
ಇವರು ಬರೆದ ''ಸಾವಿರ ಕಥೆಗಳು'' ಇಂದ ಆಯ್ದ ಕಥೆಗಳು)

ಪ್ರಾತಃ ಸ್ಮರಣೀಯ ಗುರುಗಳಾದ ಶ್ರೀಶ್ರೀವಿದ್ಯಾಮಾನ್ಯತೀರ್ಥರ
ಜನ್ಮಶತಮಾನೋತ್ಸವ ಹಾಗೂ ಶ್ರೀಶ್ರೀ ವಿದ್ಯೇಶತೀರ್ಥಶ್ರೀಪಾದರ
ಷಷ್ಟ್ಯಬ್ದ ಮಹೋತ್ಸವ ಸ್ಮಾರಕ ವಿಶೇಷ ಪ್ರಕಾಶನ

ಸಂಗ್ರಹ - ಪ್ರೇರಣೆ

ಶ್ರೀ ಶ್ರೀ ೧೦೮ ಶ್ರೀ ವಿದ್ಯೇಶತೀರ್ಥಶ್ರೀಪಾದರು

ಶ್ರೀಭಂಡಾರಕೇರಿ ಮಠ – ಉಡುಪಿ


ಪ್ರಕಾಶನ

''ಶ್ರೀ ಐತರೇಯಶೋಧಪ್ರಕಾಶನಪೀಠ''

ಶ್ರೀ ಭಾಗವತಾಶ್ರಮ ಪ್ರತಿಷ್ಠಾನ

ಶ್ರೀಭಂಡಾರಕೇರಿ ಮಠ,

ಗಿರಿನಗರ, ಬೆಂಗಳೂರು-560 085

ದೂ. 080-26721527

www.vidyeshabhandara.org

**SATKATHA SAGARA - BHARATA KATHA TARANGA-2** -Collection of short stories from Puranas and Mahabharata, Upanishats written by **Nyaya Siromani, Late Vidwan Sri Coimbatore Vadirajacharya,** Udupi.

*This book is published in commemoration of Janmasatamanotsava of His Holiness Sri Vidyamanya Tirtha Swamiji and Sastyabda Mahotsava of H.H. Sri Vidyesa Tirtha Swamiji of Bhandarakeri Matha, Udupi.*

| | | |
|---|---|---|
| Edited by | : | **Dr. G. Sheshagiri Acharya Vedagarbha** |
| Published by | : | **Aitareya Shodha Prakashana Peetha**<br>a research and publication unit of<br>Sri Bhagavatashrama Pratisthana, Sri<br>Bhandarakeri Matha(Udupi).<br>Bengaluru-560 085 |
| First edition | : | 2014 |
| Copies | : | 1000 |
| Copyright | : | Reserved |
| Price | : | Rs. 350 |
| Pages | : | 504 + 28 |
| Page Design | : | **Sri R.S.Premkumar** |
| Cover Page | : | **Sri K.M.Sheshagiri** |
| Copies available at | | **Sri Bhagavatashrama Pratishthana,**<br>Sri Bhandarakere Matha,<br>1343, Ist H Main, 8th Cross,<br>2nd Stage, Girinagar, Bengaluru-85.<br>Ph. 080-26721527 |
| Printed at | : | **Vagartha Printers**, N.R.Colony, Bengaluru-4<br>Ph. 080-22427677 |

# ಹೃದಯವಾಣಿ

ಕಲಿಯುಗದಲ್ಲಿ ಸತ್ಕಥಾಶ್ರವಣವು ವಿಶಿಷ್ಟಯಜ್ಞವೆಂದು ವಿಹಿತವಾಗಿದೆ. ಇದು ಮಾಡಲು ಸುಲಭವೆನಿಸಿದೆ. ಅದನ್ನು ಅನುಷ್ಠಾನ ಮಾಡಲು ಹೇರಳ ಧನ-ಕನಕಗಳ ಅಗತ್ಯವಿಲ್ಲ. ಶ್ರದ್ಧಾಳು 'ಕನಕಮನಸ್ಸು' ಮಾತ್ರ ಬೇಕೇ ಬೇಕು.

ಇತಿಹಾಸ-ಪುರಾಣಗಳ ಮೂಲಕ ಬೃಹತ್‌ಕಥಾಸಾಗರವನ್ನು ಜನಮಾನಸದಲ್ಲಿ ಹರಿಸಿದ ಭಗವಾನ್ ವೇದವ್ಯಾಸರು ಭಾರತದಲ್ಲಿ ಅವತರಿಸಿ ಮಹಾಭಾರತವೆಂಬ ಮೇರುಕೃತಿ ರತ್ನವನ್ನು ನೀಡಿ ಭಾರತಭಾಗ್ಯವಿಧಾತ ಎನಿಸಿದ್ದಾರೆ. ಭಾರತದೇಶವನ್ನು ಜಗದ್ಗುರು ಸ್ಥಾನದಲ್ಲಿ ನಿಲ್ಲಿಸಿ 'ಬೋಧಕಲ್ಪವೃಕ್ಷ'ವೆಂದು ಗುರುತಿಸುವಂತೆ ಮಾಡಿದ್ದಾರೆ. 'ಭಾರತಬೋಧ ಮಹಾನ್ ಹೈ' ಎಂದು ಹೆಮ್ಮೆಯಿಂದಲುದ್ಗರಿಸುವಂತೆ ಮಾಡಿದ್ದಾರೆ.

ನಮ್ಮ ಪ್ರಾತಃಸ್ಮರಣೀಯ ಗುರುಗಳಾದ ಶ್ರೀವಿದ್ಯಾಮಾನ್ಯತೀರ್ಥರ ಶ್ರದ್ಧಾಳು ಶಿಷ್ಯರಾದ ದಿ. ಶ್ರೀ ವಾದಿರಾಜಾಚಾರ್ಯರು ಬರೆದ '**ಸಾವಿರ ಕಥೆಗಳು**' ಎಂಬ ಆಕರದಿಂದ ಭಾರತಕಥೆಗಳನ್ನು ಸಂಗ್ರಹಿಸಿ '**ಸತ್ಕಥಾಸಾಗರ**'ದ ಎರಡನೇ ತರಂಗ ವೆನಿಸಿದ '**ಭಾರತಕಥಾತರಂಗ-2**' ಎಂಬ ಶೀರ್ಷಿಕೆಯಲ್ಲಿ ಪ್ರಕಟಪಡಿಸಿ ಜ್ಞಾನಪ್ರಸಾದ ರೂಪದಲ್ಲಿ ಜಿಜ್ಞಾಸುವರ್ಗಕ್ಕೆ ನೀಡುತ್ತಿದ್ದೇವೆ. ಇದು ಗುರುಗಳ ಜನ್ಮಶತಮಾನೋತ್ಸವ ಹಾಗೂ ನಮ್ಮ ಷಷ್ಟ್ಯಬ್ದಮಹೋತ್ಸವದಅಂಗವಾದ ನಾಲ್ಕನೇ ಪ್ರಕಟಣೆ.

ಹಿಂದೆ ಹೇಳಿದ ಆಕರಗ್ರಂಥದಿಂದ ಭಾರತಕಥೆಗಳನ್ನು ಶ್ರದ್ಧೆಯಿಂದ ಕ್ರಮಬದ್ಧ ವಾಗಿ ಸಂಗ್ರಹಿಸಿ ಪರಿಶೀಲಿಸಿ ಕರಡುತಿದ್ದುಪಡಿ ಮಾಡಿ ಮತ್ತು ಆಕರ ಗ್ರಂಥಗಳನ್ನು ನಮೂದಿಸಿ ಅಂದವಾಗಿ ಮುದ್ರಣದಲ್ಲಿ ಮೂಡಿಬರುವಂತೆ ಮಹಾಶ್ರಮವನ್ನು ವಹಿಸಿದವರು ನಮ್ಮ ಶಿಷ್ಯರಾದ ವೇದಗರ್ಭ ಶೇಷಗಿರಿರಾಯರು. ಇವರನ್ನು ಅಭಿನಂದಿಸುತ್ತೇವೆ; ಶುಭ ಹಾರೈಸುತ್ತೇವೆ. ನಮ್ಮ ಇನ್ನೊಬ್ಬ ಶಿಷ್ಯನಾದ ಶ್ರೀನಿಧಿ ವಾಸಿಷ್ಠನೂ ಸಕಾಲದಲ್ಲಿ ಮುದ್ರಣವಾಗುವಂತೆ ಪರಿಶ್ರಮಪಟ್ಟಿದ್ದಾನೆ. ಆತನಿಗೂ ನಮ್ಮ ಅಭಿನಂದನ ಗರ್ಭಿತವಾದ ಶುಭಹಾರೈಕೆ. ಅಂದವಾಗಿ ಮುಖಪುಟ ವಿನ್ಯಾಸವನ್ನು ಮಾಡಿದ ಚಿತ್ರಕಲಾ ಪ್ರವೀಣನಾದ ಕೆ.ಎಮ್. ಶೇಷಗಿರಿಗೂ ಶುಭಹಾರೈಕೆ.

**ಉದಾರವಾಗಿ ಆರ್ಥಿಕ ದೇಣಿಗೆಯನ್ನು ನೀಡಿದ ರಾಘವೇಂದ್ರನ್ ಅವರನ್ನು ಶ್ರೇಯಃಪ್ರಾರ್ಥನಾಪೂರ್ವಕವಾಗಿ ಅಭಿನಂದಿಸುತ್ತೇವೆ.**

21.5.2014

ಇತಿ ಶ್ರೀಮನ್ನಾರಾಯಣಸ್ಮರಣೆಗಳು

**ಶ್ರೀ ವಿದ್ಯೇಶತೀರ್ಥರು**

ಶ್ರೀಭಂಡಾರಕೇರಿ ಮಠ

## ಬನ್ನಂಜೆ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು

ಬನ್ನಂಜೆ ಮಠ, ಉಡುಪಿ-676 101

# ಕೊಯಮತ್ತೂರು ವಾದಿರಾಜಾಚಾರ್ಯರು

ಕೊಯಮತ್ತೂರು ವಾದಿರಾಜಾಚಾರ್ಯರು ನಮ್ಮ ಪೂರ್ವಾಶ್ರಮದ ದೊಡ್ಡಪ್ಪನವರು. ಇವರು ಉಡುಪಿಯವರಾಗಿದ್ದರೂ ಕೊಯಮತ್ತೂರಿನಲ್ಲಿ ಬಹಳ ವರ್ಷ ಪಾಠ ಪ್ರವಚನ ನೆರವೇರಿಸಿಕೊಂಡು ಬಂದುದರಿಂದ 'ಕೊಯಮತ್ತೂರಿನ ವಾದಿರಾಜಾಚಾರ್ಯ'ರೆಂದೇ ಪ್ರಸಿದ್ಧರಾದರು.

'ನ್ಯಾಯಶಿರೋಮಣಿ'ಯಾಗಿರುವ ಇವರು ಶ್ರೀ ವಿದ್ಯಾಮಾನ್ಯತೀರ್ಥರಲ್ಲಿ 'ಶ್ರೀಮನ್ನ್ಯಾಯಸುಧಾ'ದಿ ಗ್ರಂಥಗಳನ್ನು ಅಧ್ಯಯನ ಮಾಡಿ ಗುರುಗಳ ಆದೇಶದಂತೆ ಕೊಯಮತ್ತೂರಿನಲ್ಲಿನ ತಾಮ್ರಪರ್ಣಿ ಸುಬ್ಬಾಚಾರ್ಯರಿಗೆ ತರ್ಕಪಾಠ ಹೇಳುತ್ತಿದ್ದರು. ಉಳಿದವರಿಗೆ ಬೇರೆಬೇರೆ ಪಾಠಗಳನ್ನು ಹೇಳುತ್ತಿದ್ದರು.

12 ಸುಧಾ ಮಂಗಳ, 108 ಶ್ರೀಮದ್ಭಾಗವತ ಸಪ್ತಾಹಗಳನ್ನು ನೆರವೇರಿಸಿರುವ ಇವರು ಮಹಾಭಾರತ, ರಾಮಾಯಣ, ಹರಿವಂಶಾದಿಗಳಲ್ಲಿ ಕತೆಗಳನ್ನು ಹೇಳುತ್ತಿದ್ದರು. ಅವುಗಳನ್ನು ಬರೆದು ಇಡುತ್ತಿದ್ದರು.

ಉಡುಪಿಯ ಸಂಸ್ಕೃತ ಪಾಠಶಾಲೆಯಲ್ಲಿ ಓದುತ್ತಿದ್ದಾಗ ಶ್ರೀ ಶ್ರೀ ಸತ್ಯಪ್ರಮೋದರು ಪೂರ್ವಾಶ್ರಮದ ಬಾಲ್ಯದಲ್ಲಿ ಇವರ ಗೆಳೆಯರಾಗಿದ್ದರು. ಶಾಲೆಗೆ ಹೋಗುವಾಗ, ಭೋಜನಶಾಲೆಗೆ ಹೋಗುವಾಗ, ಮನೆಗೆ ಬರುವಾಗ, ಆಟವಾಡುವಾಗ ಚಿಂತನ-ಮನನ ಮಾಡುವಾಗ ಜೊತೆ ಜೊತೆಯಲ್ಲಿ ಇರುತ್ತಿದ್ದರು. ಈ ಗೆಳೆತನ ಕೊನೇತನಕವೂ ಇತ್ತು.

ಇವರ ಬುದ್ಧಿ ಅತಿ ತೀಕ್ಷ್ಣವಾಗಿತ್ತು. ಅಪಾರ ಪ್ರತಿಭಾವಂತರಾಗಿದ್ದರು. ಇದನ್ನು ಗುರುತಿಸಿದ ಪಾಠಶಾಲೆಯವರು ಒಂದನೇ ತರಗತಿಯಿಂದ ಮೂರನೇ ತರಗತಿಗೂ, ಅಲ್ಲಿಂದ ಐದನೇ ತರಗತಿಗೂ, ಅಲ್ಲಿಂದ ಏಳನೇ ತರಗತಿಗೂ, ಅಲ್ಲಿಂದ ಒಂಬತ್ತನೇ ತರಗತಿಗೂ ಹಾಕುತ್ತಿದ್ದರು. ಆಗಿನ ಶಿಕ್ಷಣ ಪದ್ಧತಿ ಹಾಗಿತ್ತು. ಕಿರುವಯಸ್ಸಿನಲ್ಲೇ **'ನ್ಯಾಯಶಿರೋಮಣಿ'**ಯಾದರು.

ಶ್ರೀ ವಿದ್ಯಾಮಾನ್ಯರು ಶ್ರೀ ಸತ್ಯಧ್ಯಾನರಲ್ಲಿ ವ್ಯಾಸಂಗಕ್ಕೆ ಬಂದಿದ್ದಾಗ ಇವರ ಜೊತೆಯಲ್ಲೇ ಇರುತ್ತಿದ್ದರು. ಶ್ರೀ ಸತ್ಯಧ್ಯಾನರ ದಿವಾನರಾಗಿದ್ದ ಪಾಂಡುರಂಗಿ

ಜಯಾಚಾರ್ಯರು ಇವರ ಪ್ರತಿಭೆಯನ್ನು ಗುರುತಿಸಿ 'ತರ್ಕ ತಾಂಡವ' ಪಾಠವನ್ನು ಹೇಳಿ ಮುಗಿಸಿದರು. ನ್ಯಾಯಶಿರೋಮಣಿಯಾಗಿದ್ದರಿಂದ ಪಾಠ ಬೇಗ ಅರ್ಥವಾಗುತ್ತಿತ್ತು. ಪರೀಕ್ಷೆಯಲ್ಲಿ ನೂರಕ್ಕೆ ನೂರು ಅಂಕ.

ಸಹ ವಿದ್ಯಾರ್ಥಿಗಳಿಗೆ ಬೇರೆ ಬೇರೆ ಗ್ರಂಥಗಳ ಚಿಂತನೆ–ಮನನ ಮಾಡಿಸುತ್ತಿದ್ದ ಕಾರಣ ಎಲ್ಲ ಪಾಠಗಳೂ ಕಂಠಸ್ಥ ಬುದ್ಧಿಸ್ಥವಾಗುತ್ತಿತ್ತು. ಹೀಗಾಗಿ ಎಲ್ಲ ಪರೀಕ್ಷೆಯಲ್ಲಿ ನೂರಕ್ಕೆ ನೂರು ಅಂಕ ಸಿಗುತ್ತಿದ್ದವು. ಶ್ರೀ ಸತ್ಯಧ್ಯಾನರು ಇದನ್ನು ಗಮನಿಸುತ್ತಿದ್ದರು. ತಾವು ಪರೀಕ್ಷೆ ಮಾಡಿ ಸಂತೋಷಪಡುತ್ತಿದ್ದರು.

ಒಮ್ಮೆ ಸತ್ಯಧ್ಯಾನರು ವಾದಿರಾಜಾಚಾರ್ಯರನ್ನು ಕರೆದು ಕೇಳಿದರು.

''ಮದುವೆ ಯಾಕೆ ಮಾಡಿಕೊಳ್ಳಲ್ಲವೋ''

''ದುಡ್ಡಿಲ್ಲ ಅದಕ್ಕೆ ಮಾಡಿಕೊಳ್ಳಲ್ಲ''

''ಎಷ್ಟು ದುಡ್ಡು ಬೇಕು''

''ನೂರು ರೂಪಾಯಿಯಾದರೂ ಬೇಕಾಗುತ್ತೆ''

''ದುಡ್ಡು ಕೊಟ್ಟರೆ ಮದುವೆ ಮಾಡಿಕೊಳ್ಳುತ್ತೀಯಾ?''

''ಹೂಂ''

''ಇಗೋ, ನೂರು ರೂಪಾಯಿ ಮದುವೆ ಮಾಡಿಕೊಂಡು ಬಾ''

ನೂರು ರೂಪಾಯಿಯಲ್ಲಿ ವಾದಿರಾಜಾಚಾರ್ಯರೂ ಮದುವೆಯಾಗಿ, ಉಳಿದ ಹಣದಲ್ಲಿ ಅವರ ತಮ್ಮ ಗೋಪಾಲಕೃಷ್ಣಾಚಾರ್ಯರ ಉಪನಯನವೂ ಆಯಿತು. (ಇವರ ತಮ್ಮ ಪೂರ್ವಾಶ್ರಮದ ತಂದೆ)

ಹಿಂದೆಲ್ಲ ಸ್ವಾಮಿಗಳವರ ಉಪನ್ಯಾಸ ಮಾಡುವ ಪದ್ಧತಿ ಇದ್ದಿಲ್ಲ. ವಾಕ್ಯಾರ್ಥ, ಪಾಠಪ್ರವಚನ ಮಾತ್ರ ನಡೆಸುತ್ತಿದ್ದರು. ಕೆಲವು ಪಂಡಿತರು ಮಾತ್ರ ಉಪನ್ಯಾಸ ಮಾಡುತ್ತಿದ್ದರು.

ಒಂದುದಿನ ವಾದಿರಾಜಾಚಾರ್ಯರು ಶ್ರೀ ವಿದ್ಯಾಮಾನ್ಯತೀರ್ಥ ಗುರುಗಳಲ್ಲಿ ಬಂದು ''ಸ್ವಾಮೀ ತಾವ್ಯಾಕೆ ಉಪನ್ಯಾಸ ಮಾಡಬಾರದು?'' ಎಂದು ಕೇಳಿದರು.

''ಏನು ಉಪನ್ಯಾಸ ಮಾಡುವುದು? ಯಾರು ಕೇಳುತ್ತಾರೆ''

''ಯಾಕೆ ಕೇಳೋಲ್ಲ? ನಾನು ಮನೆ ಮನೆಗೆ ಹೋಗಿ ಜನರನ್ನು ಬರಲಿಕ್ಕೆ ಹೇಳುತ್ತೇನೆ. ಭಗವದ್ಗೀತೆ, ಸಂಧ್ಯಾವಂದನೆ, ದೇವರಪೂಜೆ, ಆಚಾರ–ವಿಚಾರ,

ಏಕಾದಶಿ ಮಹತ್ವ, ಸ್ತ್ರೀಧರ್ಮ ಇವುಗಳ ಬಗ್ಗೆ ಹೇಳಬಹುದು. ಸಣ್ಣ ಸಣ್ಣ ಕತೆಗಳನ್ನು ಹೇಳಬಹುದು. ಸ್ವಾಮಿಗಳ ಉಪನ್ಯಾಸ ಮಾಡುತ್ತಾರೆಂದರೆ ಜನರು ಕುತೂಹಲ ದಿಂದ ಬರುತ್ತಾರೆ.

ಸ್ವಾಮಿಗಳಿಗೆ ಸರಿ ಎಂದನಿಸಿತು. ಆದಿನ ಮಾಡಬೇಕಾದ ಉಪನ್ಯಾಸದ ಸಿದ್ಧತೆ ಮಾಡಿಕೊಂಡರು. ಜನರು ಬಂದು ಸೇರಿದರು. ಉಪನ್ಯಾಸ ತುಂಬಾ ಚೆನ್ನಾಗಿ ಮೂಡಿಬಂದಿತು.

ಅನಂತರ ಇತಿಹಾಸ.

ಅದುವರೆಗೆ ವಿದ್ಯಾರ್ಥಿಗಳಿಗೆ, ಪಂಡಿತರಿಗೆ ಮಾತ್ರ ಅರ್ಥವಾಗುವಂತೆ ಪಾಠ ಪ್ರವಚನ, ವಾಕ್ಯಾರ್ಥ ಮಾಡುತ್ತಿದ್ದ ಸ್ವಾಮಿಗಳು, ಪಾಮರರಿಗೆ ಅರ್ಥವಾಗುವಂತೆ ಉಪನ್ಯಾಸ ಮಾಡಲು ಆರಂಭ ಮಾಡಿ ಕ್ರಾಂತಿಯನ್ನೇ ಮಾಡಿದರು.

ಶ್ರೀ ಸತ್ಯಧ್ಯಾನರು ನಡೆಸುತ್ತಿದ್ದ ವಿದ್ವತ್ ಸಭೆಗಳನ್ನು ಸೂಕ್ಷ್ಮವಾಗಿ ಗಮನಿಸುತ್ತಿದ್ದ ವಾದಿರಾಜಾಚಾರ್ಯರು ಶ್ರೀ ವಿದ್ಯಾಮಾನ್ಯ ಗುರುಗಳಲ್ಲಿ ಬಂದರು.

''ಸ್ವಾಮಿ ತಾವು ಯಾಕೆ ವಿದ್ವತ್ ಸಭೆಗಳನ್ನು ನಡೆಸಬಾರದು? ಅದಕ್ಕೆ ಸ್ವಾಮಿಗಳು ಹೇಳಿದರು ''ಅದಕ್ಕೆ ನಿಧಿ ಸಂಗ್ರಹವಾಗಬೇಕು. ಪಂಡಿತರು ಬರಬೇಕು. ಪ್ರಚಾರ ಮಾಡಬೇಕು. ಬೇಕಾದ ಏರ್ಪಾಟು ಆಗಬೇಕು. ಇವೆಲ್ಲ ನಮ್ಮ ಕೈಯಲ್ಲಾಗುತ್ತಾ? ಎಂದರು. ಅದಕ್ಕೆ ಆಚಾರ್ಯರು ''ಯಾಕೆ ಆಗೋಲ್ಲ? ನಾವೆಲ್ಲ ಒಬ್ಬೊಬ್ಬರು ಒಂದೊಂದು ಕೆಲಸ ಹಂಚಿಕೊಂಡು ಮಾಡುತ್ತೇವೆ.

ಸಭೆಯ ನಿಯಮಾವಳಿಯನ್ನು (ರೂಲ್ಸ್ ಅಂಡ್ ರೆಗ್ಯುಲೇಷನ್ಸ್) ನಾನು ಬರೆದುಕೊಡುತ್ತೇನೆ ಎಂದರು ಆಚಾರ್ಯರು. ಸ್ವಾಮಿಗಳು ಸಮ್ಮತಿಸಿದರು. ಅಂದುಕೊಂಡಂತೆ ಸಭೆಯೂ ಆಯಿತು. ನಂತರ ಪ್ರತಿವರ್ಷವೂ ವೈಭವದಿಂದ ಸಭೆ ನಡೆಯುತ್ತಿದ್ದುದು ಇತಿಹಾಸ. ಈರೀತಿ ಎಲೆಮರೆಕಾಯಾಗಿ ವಾದಿರಾಜಾಚಾರ್ಯರ ಕೊಡುಗೆ ಅಪಾರ.

'ಪಾಠ ಪ್ರವಚನದಿಂದಲೇ ಸಕಲತೀರ್ಥ ಕ್ಷೇತ್ರಯಾತ್ರೆಯ ಫಲ ಸಿಗುತ್ತೆ' ಎಂಬುದರಲ್ಲಿ ದೃಢವಿಶ್ವಾಸ ಆಚಾರ್ಯರಲ್ಲಿತ್ತು. ಆದ್ದರಿಂದಲೇ ಬದರಿ–ಕಾಶಿ–ರಾಮೇಶ್ವರಗಳಿಗೆ ಕೊನೇತನಕ ಹೋಗ್ಲೇ ಇಲ್ಲ. ತುಲಾಕಾವೇರಿ ಸ್ನಾನಕ್ಕಾಗಿ ಶ್ರೀರಂಗಕ್ಕೆ ವರ್ಷಕ್ಕೊಂದು ಸಲ ಹೋಗುತ್ತಿದ್ದರಷ್ಟೆ. ಹರಿವಾಯುಸ್ತುತಿ ಪುನಶ್ಚರಣೆ ಯಿಂದ ಹಲವಾರು ಜನರ ಕಷ್ಟ ಪರಿಹರಿಸುತ್ತಿದ್ದರು. ಮಹಾಭಾರತ ತಾತ್ಪರ್ಯ ನಿರ್ಣಯ ಪ್ರಶ್ನೆ ನೋಡಿ ಅನೇಕರ ಸಮಸ್ಯೆಗಳಿಗೆ ಪರಿಹಾರ ಹೇಳುತ್ತಿದ್ದರು.

''ಪ್ರವಚನ ಪರಂಪರೆ ಉಳಿಯಬೇಕು. ಅದರಿಂದಲೇ ಧರ್ಮ ಜಾಗೃತಿ ಸಾಧ್ಯ'' ಎಂದು ನಂಬಿದ್ದರು. ಅದಕ್ಕಾಗಿ ನೂರಾರು–ಸಾವಿರಾರು ಕಿರು ಉಪನ್ಯಾಸ ಗಳನ್ನು, ಕತೆಗಳನ್ನು ಬರೆದಿಡುತ್ತಿದ್ದರು. ನಮ್ಮಿಂದ ಓದಿಸುತ್ತಿದ್ದರು. ಕಂಠಪಾಠ ಮಾಡಿಸುತ್ತಿದ್ದರು–ಸಭೆಗಳಲ್ಲಿ ಹೇಳಿಸುತ್ತಿದ್ದರು.

ಪ್ರವಚನ ಪರಂಪರೆ ತನ್ನಲ್ಲೇ ನಿಂತುಬಿಡುತ್ತದಲ್ಲಾ ಎಂಬ ಕೊರಗು ಅವರಲ್ಲಿತ್ತು. ಒಮ್ಮೆ ನಮ್ಮ ಹತ್ತಿರ ''ಭಾಗವತ ಪ್ರವಚನ ಪರಂಪರೆ ನಮ್ಮೊಂದಿಗೆ ನಿಂತು ಹೋಯಿತಲ್ಲಾ ಎಂದು ಕೊರಗುತ್ತಿದ್ದೆ. ದೇವರು ನಿಮ್ಮ ಮೂಲಕ ಮುಂದುವರೆಯುವಂತೆ ಮಾಡಿದ. ಭಾಗವತ ದೀಪ ನನ್ನೊಂದಿಗೆ ನಿಂತು ಹೋಗಿಲ್ಲ. ನಿಮ್ಮ ಹೃದಯದಲ್ಲಿ ಹತ್ತಿಕೊಂಡು ಮುಂದುವರಿಯುತ್ತಿದೆ. ಈಗ ಸಮಾಧಾನ ವಾಯಿತು'' ಎಂದಿದ್ದರು. ನಮ್ಮಲ್ಲಿ ಧನ್ಯತಾ ಭಾವನೆ ಮೂಡಿತು. ನಿಜ ಹೇಳ ಬೇಕಾದರೆ ಅವರ ಭಾಗವತ ಸಪ್ತಾಹ ಕೇಳಿಯೇ ನಾವು ಮನಃಪರಿವರ್ತನೆಗೊಂಡು ಸನ್ಯಾಸಿಯಾದದ್ದು. ಭಾಗವತ ಸಿದ್ಧಿ ಅವರಲ್ಲಿತ್ತು.

ಇಂತಹ ವಾದಿರಾಜಾಚಚಾರ್ಯರು ಬರೆದಿಟ್ಟ **'ಸಾವಿರ ಕತೆ'**ಗಳನ್ನು ಪರಮ ಪೂಜ್ಯ ಭಂಡಾರಕೇರಿ ಮಠಾಧೀಶರಾದ ಶ್ರೀಶ್ರೀ ವಿದ್ಯೇಶತೀರ್ಥ ಗುರುಗಳು ಪ್ರಕಟಿಸಿ ಪರಮಾನುಗ್ರಹ ಮಾಡುತ್ತಿದ್ದಾರೆ. ವಾದಿರಾಜಾಚಾರ್ಯರ ಪರವಾಗಿ, ಅವರ ಮಕ್ಕಳ ಪರವಾಗಿ, ವೈಯಕ್ತಿಕವಾಗಿ ಕೃತಜ್ಞತಾಪೂರ್ವಕ ಅನಂತ ಕೋಟಿ ಪ್ರಣಾಮಗಳನ್ನು ಶ್ರೀಗಳವರಿಗೆ ಸಮರ್ಪಿಸುತ್ತಿದ್ದೇವೆ. ಸಜ್ಜನರು ಇದರ ಲಾಭ ಹೊಂದುವಂತಾಗಲಿ.

ನಾರಾಯಣ ಸ್ಮರಣೆಗಳು

**ಬನ್ನಂಜೆ ಶ್ರೀ ರಾಘವೇಂದ್ರತೀರ್ಥ ಶ್ರೀಪಾದಂಗಳವರು**

# ಕನ್ನಡ ಸಾಹಿತ್ಯ ಪರಿಷತ್ತು

ಪಂಪ ಮಹಾಕವಿ ರಸ್ತೆ ಚಾಮರಾಜಪೇಟೆ ಬೆಂಗಳೂರು-೫೬೦ ೦೧೮
ದೂ : ೨೬೬೧೨೯೯೧, ೨೬೬೨೩೫೮೪  ಫ್ಯಾಕ್ಸ್ : ೨೨೪೨೩೮೬೭

ಸ್ಥಾಪನೆ ೧೯೧೫  ಕ್ರಮಸಂಖ್ಯೆ: ಕಸಾಪ/ದಾಖಲೆ/೨೦೧೩-೧೪

ದಿನಾಂಕ: ೧೨-೦೩-೨೦೧೪

ಇವರಿಂದ

**ಪುಂಡಲೀಕ ಹಾಲಂಬಿ**

ಅಧ್ಯಕ್ಷರು

ಇವರಿಗೆ

**ಪೂಜ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಶ್ರೀಪಾದರು**

ಭಂಡಾರಕೆರೆ ಮಠ, ಉಡುಪಿ

ಪೂಜ್ಯರೇ,

ತಮ್ಮ ಪತ್ರ ಡಾ.ಶೇಷಗಿರಿಆಚಾರ್ಯರ ಮೂಲಕ ತಲುಪಿತು. ತಮ್ಮ ಮಠದಿಂದ ಪ್ರಕಾಶಿತವಾಗಲಿರುವ **''ಸಾವಿರ ಕಥೆಗಳು''** ಇದರ ಕೆಲವು ಮಾದರಿ ಕಥೆಗಳನ್ನು ಅವಲೋಕಿಸಿದೆ. ಸುಂದರವಾದ ಕನ್ನಡ ಗದ್ಯದಲ್ಲಿ ದಿ|| ಕೊಯ ಮತ್ತೂರು ವಾದಿರಾಜಾಚಾರ್ಯರು ಅವರು ಬರೆದ ಈ ಕಥಾಸಂಕಲನ ಕನ್ನಡಿಗರಿಗೆ ತುಂಬಾ ಉಪಯುಕ್ತವಾಗಿದೆ. ವಿಶೇಷವಾಗಿ ಮಕ್ಕಳಿಗೆ ಹಾಗೂ ಮಹಿಳೆಯರಿಗೆ ಪುರಾಣ, ಮಹಾಭಾರತ, ರಾಮಾಯಣಗಳಲ್ಲಿ ಬಂದಿರುವ ಕಥೆಗಳಲ್ಲಿ ಬಂದಿರುವ ವಿಷಯ ಸಂದೇಶದಿಂದ ಕೂಡಿದೆ.

ಕೃತಿ ಉತ್ತಮವಾಗಿ ಲೋಕಾರ್ಪಣೆಗೊಂಡು ಜನರಿಗೆ ತಲುಪಲಿ ಎಂದು ನಿಮ್ಮಲ್ಲಿ ನಮಸ್ಕಾರಗಳೊಂದಿಗೆ ಪ್ರಾರ್ಥಿಸುತ್ತೇನೆ.

ಇಂತಿ ನಮಸ್ಕಾರಗಳು

ತಮ್ಮ ವಿಶ್ವಾಸಿ
ಸಹಿ
**(ಪುಂಡಲೀಕ ಹಾಲಂಬಿ)**
ಅಧ್ಯಕ್ಷರು

**ಪ್ರೊ.ಜಿ.ವೆಂಕಟಸುಬ್ಬಯ್ಯ ಎಂ.ಎ ಬಿ.ಟಿ**
ನಂ. 58,31ನೆ ಕ್ರಾಸ್, 7ನೆ ಬ್ಲಾಕ್, ಜಯನಗರ, ಬೆಂಗಳೂರು 560 070
ದೂ : 080-26649232
ನಿವೃತ್ತ ಪ್ರಾಧ್ಯಾಪಕರು ವಿಜಯ ಕಾಲೇಜು ಬೆಂಗಳೂರು
ನಿವೃತ್ತ ಪ್ರಾಂಶುಪಾಲರು ವಿಜಯ ಸಂಜೆ ಕಾಲೇಜು ಬೆಂಗಳೂರು
ಮಾಜಿ ಅಧ್ಯಕ್ಷರು ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು
ಮಾಜಿ ಅಧ್ಯಕ್ಷರು ಹಾಗೂ ಪ್ರಧಾನ ಸಂಪಾದಕರು ಬೃಹತ್ ಕನ್ನಡ-ಕನ್ನಡ ನಿಘಂಟು
ಅಧ್ಯಕ್ಷರು ಶ್ರೀ ರಾಮಕೃಷ್ಣ ಸ್ಟೂಡೆಂಟ್ಸ್ ಹೋಂ

ಡಾ|| ವೇದಗರ್ಭ ಜಿ. ಶೇಷಗಿರಿರಾಯರಲ್ಲಿ ವಿಜ್ಞಾಪನೆಗಳು

ಸನ್ಮಾನ್ಯ ಶ್ರೀ ಶ್ರೀ ಶ್ರೀ ವಿದ್ಯೇಶತೀರ್ಥ ಮಹಾಸ್ವಾಮಿಗಳಿಗೆ ನನ್ನ ಸಾಷ್ಟಾಂಗ ಪ್ರಣಾಮಗಳನ್ನು ತಿಳಿಸಿ. ತಾವು ನನಗೆ ಕೊಟ್ಟ ಕೆಲವು ಜೆರಾಕ್ಸ್ ಪುಟಗಳನ್ನು ಆಳವಾಗಿ ಪರಿಶೀಲಿಸಿದ್ದೇನೆ. ತಾವು ತಿಳಿಸಿದ **ಸಾವಿರಕಥೆಗಳ** ಸಂಬಂಧದ ಈ ಬರವಣಿಗೆಯನ್ನು ಮಾಡಿರುವವರು ನಿಜವಾಗಿ ರಾಮಾಯಾಣ, ಮಹಾಭಾರತ, ಭಾಗವತ ಮತ್ತು ಎಲ್ಲ ಮಹಾಪುರಾಣಗಳನ್ನು ಓದಿ ಜೀರ್ಣಿಸಿಕೊಂಡಿರುವ ವಿದ್ವಾಂಸರಾಗಿರಬೇಕು. ಈ ಪುಸ್ತಕಗಳಲ್ಲಿರುವ ಎಲ್ಲ ಬರಹಗಳೂ ಜನೋಪಯೋಗಿ ದೃಷ್ಟಿಯಿಂದ ರಚಿತವಾಗಿದೆ. ಎಲ್ಲಿಯೂ ಲೇಖಕರು ತಮ್ಮ ವಿದ್ವತ್ತನ್ನು ಪ್ರದರ್ಶಿಸಲು ಪ್ರಯತ್ನಪಟ್ಟಿಲ್ಲ.

ಅವರ ವಾಕ್ಯ ಸರಣಿಯು ಸರಳವಾಗಿದ್ದು ವಾಕ್ಯಗಳು ಚಿಕ್ಕದಾಗಿದ್ದು ಓದುಗರಿಗೆ ಸುಲಭವಾಗಿ ಅರ್ಥವಾಗುತ್ತದೆ. ವಾಕ್ಯಗಳು ವ್ಯಾಕರಣಬದ್ಧವಾಗಿದೆ, ಶೈಲಿಯು ಸುಲಲಿತ ವಾಗಿದೆ. ಸಾಮಾನ್ಯರು ಓದಿ ತಮ್ಮ ಪ್ರಾಚೀನ ಗ್ರಂಥಗಳ ಸಾರವನ್ನು ಅರ್ಥಮಾಡಿ ಕೊಂಡು ಸಜ್ಜನರಾಗಿ ಬಾಳಲಿ ಎಂಬ ಉದ್ದೇಶವನ್ನು ಹೊಂದಿರುವುದು ಸ್ಪಷ್ಟ.

ತಾವು ಈ ಲೇಖಕರ ಎಲ್ಲ ಹಸ್ತಪ್ರತಿಗಳನ್ನು ಸಂಗ್ರಹಿಸಿ ಭಾಗಗಳಾಗಿ ಪ್ರಕಟಿಸಿದರೆ ಕನ್ನಡ ಜನತೆಗೆ ಸಹಾಯ ಮಾಡಿದ ಹಾಗಾಗುತ್ತದೆ, ತಮಗೆ ಪುಣ್ಯಬರುತ್ತದೆ, ಪರಮಾಚಾರ್ಯರ ಆಶೀರ್ವಾದ ಲಭಿಸುತ್ತದೆ. ನನಗೆ ನಿಜವಾಗಿ ಸಂತೋಷವಾಗುತ್ತಿದೆ.

ಇಂತಿ ತಮ್ಮವ

27-02-2014 **ಜಿ. ವೆಂಕಟಸುಬ್ಬಯ್ಯ**

**ನಾಡೋಜ ಡಾ||.ಎಂ.,ಚಿದಾನಂದಮೂರ್ತಿ,**
ಎಂ.ಎ., ಪಿ.ಎಚ್.ಡಿ(ಮೈ).,ಡಿ.ಲಿಟ್(ಬೆಂ)
ವಿಶ್ರಾಂತ ಕನ್ನಡ ಪ್ರಾಧ್ಯಾಪಕರು(ಬೆಂಗಳೂರು ವಿಶ್ವವಿದ್ಯಾಲಯ)
ಕೇಂದ್ರ ಸಾಹಿತ್ಯ ಅಕಾಡೆಮಿ ಮತ್ತು ಪಂಪ ಪ್ರಶಸ್ತಿ ವಿಜೇತರು
'ವಿಜಯ' ನಂ 1013/ಬಿ, 4ನೆ ಅಡ್ಡರಸ್ತೆ ,11ನೆ ಮುಖ್ಯರಸ್ತೆ ,
ಹಂಪಿನಗರ, ಬೆಂಗಳೂರು-560 104 ದೂ. 080-23300687

ದಿನಾಂಕ 20-2-2014

## ಅಪೂರ್ವ ಪೌರಾಣಿಕ ಕಥೆಗಳ ಸಂಕಲನ

ದಿ || ವಿದ್ವಾನ್ ಕೊಯಮತ್ತೂರು ವಾದಿರಾಜಾಚಾರ್ಯರು ಹುಟ್ಟಿನಿಂದ ಕರ್ನಾಟಕ ಉಡುಪಿ ಪ್ರಾಂತದವರು, ದ್ವೈತವೇದಾಂತ ಮತ್ತು ಇತರ ಭಾರತೀಯ ತತ್ವಶಾಸ್ತ್ರ ಶಾಖೆಗಳನ್ನು ಆಳವಾಗಿ ಬಲ್ಲವರಾಗಿದ್ದು ಅವರು ಉಡುಪಿಯ ತಮ್ಮ ಗುರುಗಳ ಆದೇಶದ ಮೇರೆಗೆ ತಮಿಳುನಾಡಿನ ಕೊಯಮತ್ತೂರಿನಲ್ಲಿ ನೆಲಸಿ ಅಲ್ಲಿ ಸಂಸ್ಕೃತ ಪಾಠ ಪ್ರವಚನಗಳನ್ನು ಮಾಡಿಕೊಂಡು ಶಿಷ್ಯರ ಜ್ಞಾನವನ್ನು ಬೆಳಗಿದ ಮಹಾಮೇಧಾವಿಗಳು. ಕರ್ನಾಟಕದ ದಕ್ಷಿಣದ ಗಡಿಗೆ ಅಂಟಿಕೊಂಡಂತಿರುವ ಕೊಯಮತ್ತೂರು ಇಂದಿಗೂ ತಮಿಳು-ಕನ್ನಡ ದ್ವಿಭಾಷಾ ಪ್ರದೇಶ, ಹೀಗಾದ್ದರಿಂದಲೇ ಶ್ರೀ ಪರಮಾಚಾರ್ಯರು ಸಂಸ್ಕೃತದಲ್ಲಿ ಸ್ಥಳೀಯ ತಮಿಳಿನಲ್ಲಿ ಮತ್ತು ತಮ್ಮ ಮಾತೃಭಾಷೆ ಕನ್ನಡದಲ್ಲಿಯೂ ಪ್ರವಚನ ನೀಡುತ್ತಿರಬಹುದು.

ಅವರು ಮಹಾಭಾರತ, ರಾಮಾಯಣ ಮತ್ತು ಇತರ ಪುರಾಣಗಳಿಂದ ಸಂಗ್ರಹಿಸಿ ರಚಿಸಿರುವ **'ಒಂದು ಸಾವಿರ ಕಥೆಗಳು'** ಕೃತಿಯ ಪೂರ್ಣಪಾಠ ಲಭ್ಯವಾಗಿರದಿದ್ದರೂ ಅದರ ಹಸ್ತಪ್ರತಿಯ ಆರುನೂರುಎಪ್ಪತ್ತು ಕತೆಗಳು ಲಭ್ಯವಾಗಿದೆ. ಸಂಸ್ಕೃತಗಳಲ್ಲಿನ ಕತೆಗಳನ್ನು ಕನ್ನಡೀಕರಿಸಿ ಮನಮುಟ್ಟುವಂತೆ ಬಹು ಅಚ್ಚುಕಟ್ಟಾಗಿ, ಕೆಲವೆಡೆ ಮೋಹಕವಾದ ಶೈಲಿಯಲ್ಲಿ ನೀಡಿದ್ದಾರೆ. ಉದಾಹರಣೆಗೆ ಹರಿಶ್ಚಂದ್ರನ ಕಥೆ, ನರಕಾಸುರನ ವಧೆ,ಪಾಂಡವರ ಕಥೆಗಳನ್ನು ನೋಡಬಹುದು.

ನಮ್ಮ ರಾಷ್ಟ್ರ ಭಾರತದ ಸಮೃದ್ಧ ಸಾಂಸ್ಕೃತಿಕ ಸಂಪತ್ತನ್ನು ಅರಿಯಬೇಕಾದರೆ ರಾಮಾಯಣ, ಮಹಾಭಾರತ ಕಥೆಗಳನ್ನು , ಪುರಾಣಗಳಲ್ಲಿ ಬರುವ ಕಥೆಗಳನ್ನು ವಿಶ್ಲೇಷಿಸಿ ನೋಡಬೇಕು. ಎಲ್ಲ ಕಡೆ ಕಾಣುವ ಅತ್ಮವೆಂದರೆ 'ಧರ್ಮ'ದ ಪರಿಕಲ್ಪನೆ.

'ಧರ್ಮ'ವೆಂಬುದು ಮತವಲ್ಲ ಅದೊಂದು ಇನ್ನೊಂದು ಬಾಷೆಗೆ ಅನುವಾದಿಸಲು ಸಾಧ್ಯವಾಗದಂತಹ ಉದಾತ್ತ ಪರಿಕಲ್ಪನೆಯನ್ನು ಹೊಂದಿದೆ. ಆದರ ಅರ್ಥವಂತಿಕೆ ಗಡಿಯನ್ನು ಮೀರಿದ್ದು. 'ಸತ್ಯಂ ವದ ಧರ್ಮಂ ಚರ' ಈ ಮಾತೇ ಅದನ್ನು ಸೂಚಿಸುತ್ತದೆ. ಬದುಕಿನಲ್ಲಿ ಸತ್ಯಪ್ರಿಯತೆ, ನ್ಯಾಯಯುತ ನಡವಳಿಕೆ, ಪರೋಪಕಾರ, ದ್ವೇಷ ಅಸೂಯೆಗಳ ತ್ಯಾಜ್ಯ ಇತ್ಯಾದಿಗಳನ್ನು ಮೋಹಕ ಕತೆಗಳ ಮೂಲಕ ರಾಮಾಯಣ, ಮಹಾಭಾರತದ ಕಥೆಗಳು, ಪೌರಾಣಿಕ ಕತೆಗಳು ಜನರಿಗೆ ತಮ್ಮದೇ ಆದ ರೀತಿಯಲ್ಲಿ ತಲುಪಿಸುತ್ತವೆ. ಅಂತಹ ನೂರಾರು ಕಥೆಗಳನ್ನು ದಿ। ವಾದಿರಾಜಾಚಾರ್ಯರು ತಮ್ಮ ಕೃತಿಯಲ್ಲಿ ನೀಡಿ ಕನ್ನಡದ ಸಂಪತ್ತನ್ನು ಹೆಚ್ಚಿಸಿರುವುದಲ್ಲದೆ ಭಾರತೀಯ ಸಂಸ್ಕೃತಿಯ ಬಗೆಗಿನ ನಮ್ಮ ಅಭಿಮಾನವನ್ನು ವರ್ಧಿಸಿದ್ದಾರೆ. ಅವರ ಕೃತಿಯು ಓದುಗರಿಗೆ ಮುದವನ್ನು ನೀಡುತ್ತದೆ, ಅಂತೆಯೇ ಅದರ ಪರಂಪರೆಯ ಬಗ್ಗೆ ಓದುಗರಿಗೆ ಅರಿವನ್ನು ಹೆಚ್ಚಿಸುವುದಲ್ಲದೆ ಅವರ ಜೀವನ ವಿಧಾನವನ್ನೂ ಬದಲಾಯಿಸುತ್ತದೆ, ನಮ್ಮ ರಾಷ್ಟ್ರ ಭಾರತದ ಬಗ್ಗೆ ಅಭಿಮಾನವನ್ನು ವರ್ಧಿಸುತ್ತದೆ.

**ಎಂ. ಚಿದಾನಂದ ಮೂರ್ತಿ**



**ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ**

# ಲೇಖಕರ ಕಿರು ಪರಿಚಯ

| | | |
|---|---|---|
| ಲೇಖಕರು | : | **ದಿ|| ಶ್ರೀ ಬನ್ನಂಜೆ ವಾದಿರಾಜಾಚಾರ್ಯ**, ಉಡುಪಿ (ಕೊಯಮತ್ತೂರು ವಾದಿರಾಜಾಚಾರ್ಯ) |
| ಮಾತಾಪಿತೃಗಳು | : | **ದಿ|| ಶ್ರೀ ರಾಮಚಂದ್ರ ಭಟ್ ಹಾಗೂ ಶ್ರೀಮತಿ ಭೂಮಿ** |
| ವಂಶದ ಹೆಸರು | : | **ಪೆರಲ್ತಾಯ** |
| ಹುಟ್ಟಿದ ಊರು | : | **ಕೃಷ್ಣಾಪುರ** |
| ಹುಟ್ಟಿದ ವರ್ಷ | : | **1916** |
| ವಿದ್ಯಾಭ್ಯಾಸ | : | ಬನ್ನಂಜೆಯ ಪ್ರಾಥಮಿಕ ಶಾಲೆಯಲ್ಲಿ ಓದಿದ ನಂತರ ಉಡುಪಿಯ ಸಂಸ್ಕೃತ ಕಾಲೇಜಿನಲ್ಲಿ ವ್ಯಾಸಂಗ. ಮದ್ರಾಸು ವಿಶ್ವವಿದ್ಯಾಲಯದಿಂದ "**ನ್ಯಾಯಶಿರೋಮಣಿ**" ಎಂಬ ಪದವಿ ಪ್ರಾಪ್ತಿ. |
| ವಿದ್ಯಾಗುರುಗಳು | : | ಪರಮಪೂಜ್ಯ **ಶ್ರೀ ವಿದ್ಯಾಮಾನ್ಯ ತೀರ್ಥಶ್ರೀಪಾದಂಗಳವರು** ಇವರಲ್ಲಿ **ಶ್ರೀಮನ್ನ್ಯಾಯಸುಧಾ** ಗ್ರಂಥದ ಅಧ್ಯಯನ. ನಂತರ ವ್ಯಾಸರಾಜರ **ತರ್ಕತಾಂಡವದ** ಅಧ್ಯಯನವನ್ನು **ದಿ. ಪಾಂಡುರಂಗೀ ಜಯತೀರ್ಥಾಚಾರ್ಯರ** ಬಳಿ ನಡೆಸಿದರು. ಇವರೇ ಮುಂದೆ ಉತ್ತರಾದಿ ಮಠಾಧೀಶರಾದ ಶ್ರೀ ಸತ್ಯಪ್ರಜ್ಞ ತೀರ್ಥ ಶ್ರೀಪಾದರಾದರು. |

1937ರಲ್ಲಿ ಉಚ್ಚಿಲದಲ್ಲಿ ದಾಂಪತ್ಯ ಜೀವನ ಪ್ರವೇಶಿಸಿ ಗುರುಗಳ ಆದೇಶದ ಮೇರೆಗೆ ಕೊಯಮತ್ತೂರಿನಲ್ಲಿ ನೆಲೆಸಿ ಅಲ್ಲಿ ಜಿಜ್ಞಾಸುಗಳಿಗೆ ತತ್ವಜ್ಞಾನ ಪ್ರಸಾರ ಮಾಡುತ್ತಾ ದ್ವೈತಸಿದ್ಧಾಂತದ ಪ್ರಚಾರದಲ್ಲಿ ನಿರತರಾದರು. ನ್ಯಾಯಸುಧೆಯ ಮಂಗಳವನ್ನು ಹನ್ನೆರಡು ಬಾರಿ ನಡೆಸಿದರು. 108 ಬಾರಿ ಶ್ರೀಮಧ್ಭಾಗವತ ಸಪ್ತಾಹ ಮಂಗಳವನ್ನು ಮಾಡಿದ್ದಾರೆ. **ಭಾಗವತ ದಶಮ ಸ್ಕಂದದ ಹೋಮವನ್ನು ಮಾಡಿದ್ದಾರೆ. ಮುತ್ತಿನಂತಹ ತಮ್ಮ ಹಸ್ತಾಕ್ಷರದಲ್ಲಿ 'ಸಾವಿರ ಕಥೆಗಳು' ಎಂಬ ಸತ್ಕಥಾ ಸಂಕಲನ ಸಂಗ್ರಹಿಸಿದ್ದಾರೆ.** ಕೊಯಮತ್ತೂರಿನ ಪ್ರಖ್ಯಾತರಾದ ದಿ। ತಾಮ್ರಪರ್ಣಿ ಸುಬ್ಬಾ ಚಾರ್ಯರೇ ಮೊದಲಾದ ಶಿಷ್ಯರಿಗೆ ಪಾಠಹೇಳಿ ಅವರಿಂದ ಅನೇಕ ಗ್ರಂಥಗಳನ್ನು ರಚನೆ ಮಾಡಲಿಕ್ಕೆ ಮಾರ್ಗದರ್ಶನ ನೀಡಿದ್ದಾರೆ.

ಸಾರ್ಥಕ ದಾಂಪತ್ಯ ಜೀವನ ನಡೆಸಿದ ಆಚಾರ್ಯರು ಪತ್ನಿಯಾದ ಶ್ರೀಮತಿ ಲಕ್ಷ್ಮಿಯಲ್ಲಿ ಎರಡು ಗಂಡು ಹಾಗೂ ಒಬ್ಬ ಮಗಳನ್ನು ಪಡೆದಿದ್ದಾರೆ.

।। श्रीरस्तु ।।

**जयति हरिरचिन्त्यः सर्वदेवैकवन्द्यः परमगुरुरभीष्टावाप्तिदः सज्जानाम् ।।**
**निखिलगुणगणार्णो नित्यनिर्मुक्तदोषः सरसिजनयनोऽसौ श्रीपतिर्मानदो नः ।।**

श्रीमन्मध्वशास्त्र संपन्न वेदमूर्ति उडुपीश्री वादिराजभट्टरवर पादसन्निधानग ळल्लि, कोयमुत्तूरु पुर वासिगळाद नावेल्लरु विद्वत् शिरोभूषणराद निंमन्नु अनेक सा ष्टांग नमस्कारगुळु निंम पादगळल्लि समार्पिसिरुव मान्य पत्र ।।

**महनीयरे**

श्रीमत्परमहंसेत्यादि गुणगणालंकृतराद श्री श्री १०८ श्री भण्डारकेरी मठाधीश श्री विद्यामान्यतीर्थ श्रीपादंगळवरिंद आज्ञप्तरागि नीवु ई कोयमुत्तूरिगे बंदु अज्ञगळाद नंमन्नु उद्धरिसि इरूविरि । निंमिंद कोयमुत्तुरिन अनेक माध्वरु **नावु माध्वरु यंत हेळि कोळ्ळुव बगेयल्लि** मध्व शास्त्रद ज्ञानैश्वर्यवन्नु पडदिरुवरु । नीवु हरि वायुगुरुगळल्लि निर्व्याज भक्तियन्नु माडि अवर कृपाकटाक्षके पात्रागि इरूविरि ।

**पूज्यरे**

कळेद साधारण संवत्सर कार्तिकमासदल्लि नीवु परमानुग्रह माडिद कारण कोयमुत्तूरिन अशेष स्त्री पुरुष माध्वरु ७ दिनगळ पर्यन्तवागि ''श्रीमद्भागवत, श्रीमन्नयसुधा श्रीसर्वमूल ग्रन्थगळ पारायण अर्थ कथन गळन्नु श्रवणमाडि ग्रन्थगळ प्रतिपाद्य श्री भारतीरमण मुख्यप्राणांतर्गत वेदव्यास देवर परमानुग्रहवन्नु होंदिरुवरु ।। ईरीतियागि पदे पदे नमगेश्रवण माडुव भाग्यवन्नु कोडिसबेकु ।।

**मध्वशास्त्रदल्लि दीक्षा उळ्ळवरे**

ई काल पर्यन्त याव मनुष्यन दया दाक्षिण्यक्कू नीवु ओळगागदे पारमार्थिकदिंद प्रवर्तकरागि इरुविरि । कोयमुत्तूरिन माध्वरु मडिद भाग्य विशेषदिंद निम्मन्नु श्रीहरियु नमगे कोट्टिरुवनु । नीवु हरि वायु गुरुगळ अनुग्रहदिंद बहुकाल नम्मेल्लरिगू ज्ञानोपदेशकरागि इरबेकेनुत श्रीभारतीरमण मुख्यप्राणान्तर्गत सर्व स्वामी श्रीकृपणनन्नु पदे पदे प्रार्थना माडि निमगे नंम विनय भक्तिपूर्वकवाद साष्टंग नमस्कारगळन्नु समर्पिसिरुत्तेवे ।।

कोयमुत्तूरु — कोयमुत्तूरु पुरवासिनः

विरोधकृत् श्रावणकृष्णद्वितीय । ८.८.१९७१

# ಸಂಪಾದಕೀಯ

''ನಾರಾಯಣಾಯ ಪರಿಪೂರ್ಣಗುಣಾರ್ಣವಾಯ
ವಿಶ್ವೋದಯಸ್ಥಿತಿಲಯೋನ್ನಿಯತಿಪ್ರದಾಯ ।
ಜ್ಞಾನಪ್ರದಾಯ ವಿಬುಧಾಸುರಸೌಖ್ಯದುಃಖ-
ಸತ್ಕಾರಣಾಯ ವಿತತಾಯ ನಮೋ ನಮಸ್ತೇ ॥''

''ತೇನ ವ್ಯಾಸದಿವಾಕರೇಣ ಸತತಂ ಮಾ ತ್ಯಾಜಿ ಮೇ ಮಾನಸಂ''

''ವಂದೇ ವಿಷ್ಣುಂ ನಮಾಮಿ ಶ್ರಿಯಮಥ ಚ ಭುವಂ ಬ್ರಹ್ಮವಾಯೂ ಚ ವಂದೇ ।
ಗಾಯತ್ರೀಂ ಭಾರತೀಂ ತಾಮಪಿ ಗರುಡಮನಂತಂ ಭಜೇ ರುದ್ರದೇವಂ ॥
ದೇವೀಂ ವಂದೇ ಸುಪರ್ಣೀಮಹಿಪತಿದಯಿತಾಂ ವಾರುಣೀಮಪ್ಯುಮಾಂ ತಾಂ ।
ಇಂದ್ರಾದೀನ್ ಕಾಮಮುಖ್ಯಾನಪಿ ಸಕಲಸುರಾನ್ ತದ್ಗುರೂನ್ ಮದ್ಗುರೂಂಶ್ಚ ॥

ಪರಮಪೂಜ್ಯ ಗುರುಗಳಾದ ಶ್ರೀ ಶ್ರೀ ವಿದ್ಯೇಶತೀರ್ಥರ ಆದೇಶ ಹಾಗೂ ಅನುಗ್ರಹದ ಪುಣ್ಯದಿಂದ ಪೂಜ್ಯ ಕೊಯಮತ್ತೂರು ವಾದಿರಾಜಾಚಾರ್ಯರು ಬರೆದ 'ಸಾವಿರ ಕಥೆಗಳು' ಸಂಗ್ರಹದ ಮೊದಲ ಸಂಪುಟ '**ಭಗವತ್ಕಥಾ ತರಂಗ-1**' ಶ್ರೀಮತ್ಪೂಜ್ಯ ವಿದ್ಯಾಮಾನ್ಯತೀರ್ಥರ ಪುಣ್ಯದಿನದಂದು (ವೈಶಾಖ ಶುಕ್ಲ ದ್ವಾದಶೀ) ಬಿಡುಗಡೆಯಾಗಿದೆ. ಇದೇ ಸಂಗ್ರಹದ 2ನೇ ಸಂಪುಟ 'ಭಾರತ ಕಥಾ ತರಂಗ' ಕೂಡಾ ಬಿಡುಗಡೆಗೆ ಸಿದ್ಧವಾಗಿದೆ.

ಈ ಸಂಪುಟದಲ್ಲಿ ಪ್ರಕೃತ '**ಸಾವಿರ ಕಥೆಗಳು**' ಸಂಗ್ರಹ ಕೇವಲ ಮಹಾಭಾರತದ ಮೂಲಕಥೆಗೆ ಸಂಬಂಧಿಸಿದ 116 ಕಥೆಗಳನ್ನು ಸಂಗ್ರಹಿಸಲಾಗಿದೆ. ಇದರಲ್ಲಿ ಮೊದಲು ಮಹಾಭಾರತವೆಂಬ ಲೇಖನವು 'ಅನುಕ್ರಮಣಿಕಾಖ್ಯಾಧ್ಯಾಯ' (ಆದಿಪರ್ವ–ಅಧ್ಯಾಯ1)ದಂತಿದೆ. ನಮಗೆ ಸಿಕ್ಕಿರುವ ಉಳಿದ ಕಥೆಗಳನ್ನು ಸಾಧ್ಯವಾದಷ್ಟುಮಟ್ಟಿಗೆ ಪರ್ವಾನುಕ್ರಮಣಿಗೆ ಅನುಗುಣವಾಗಿ ಕಥೆಗಳನ್ನು ಸಂಗ್ರಹಿಸಲಾಗಿದೆ. ಇವುಗಳಲ್ಲಿ ಪಾಂಡವರು, ಭೀಮಸೇನ, ದ್ರೌಪದೀದೇವಿ, ನಕುಲ, ಸಹದೇವ, ಕರ್ಣ, ವಿದುರರ ಪಾತ್ರಗಳಲ್ಲದೆ ದುರ್ಯೋಧನ, ದುಃಶಾಸನರ ಪಾತ್ರಗಳನ್ನು ಸಂಗ್ರಹಿಸಲಾಗಿದೆ. ಪಾಂಡವರಲ್ಲಿ ಅರ್ಜುನ, ಧರ್ಮರಾಜ, ಕೌರವರ ಪೈಕಿ ಭೀಷ್ಮ ಹಾಗೂ ದ್ರೋಣ, ಅಶ್ವತ್ಥಾಮ, ಕೃಪಾಚಾರ್ಯ ಮೊದಲಾದವರ ಕಥೆಗಳು ಸಿಕ್ಕಿಲ್ಲ. ಪಾಂಡುರಾಜ, ಧೃತರಾಷ್ಟ್ರರಾಜರ ಬಗ್ಗೆಯೂ ಸಿಕ್ಕಿಲ್ಲ. ಸಿಕ್ಕ ಕಥೆಗಳನ್ನು ಆದಷ್ಟು ಪರ್ವಾನುಕ್ರಮದಲ್ಲಿ ಜೋಡಿಸಲಾಗಿದೆ.

ಮೇಲಿನ ಪಾತ್ರಗಳ ಕಥೆಗಳು ಕೂಡಾ ಆದಿಪರ್ವದಿಂದ ಸ್ವರ್ಗಾರೋಹಣ

ಪರ್ವದವರೆಗೆ ಸಂಕ್ಷಿಪ್ತವಾಗಿ ಸಂಯೋಜಿಸಿ ಕಥಾ ಪ್ರವಾಹವನ್ನು ಒಂದೇ ಓಘದಲ್ಲಿ ಬರುವಂತೆ ನೋಡಿಕೊಳ್ಳಲಾಗಿದೆ. ಮಾನ್ಯ ಲೇಖಕರು ಎಲ್ಲ ಪಾತ್ರವಿವೇಚನೆಯನ್ನು ಮಹಾಭಾರತ ಮೂಲಕ್ಕೆ ಅನುಗುಣವಾಗಿ ಹಾಗೂ ಶ್ರೀ ಮನ್ಮಧ್ವಾಚಾರ್ಯರ ಮಹಾಭಾರತ ತಾತ್ಪರ್ಯ ನಿರ್ಣಯದ ಮಾರ್ಗದರ್ಶನದಲ್ಲಿ ಮಾಡಿದ್ದಾರೆ. ವಿಶೇಷವಾಗಿ ಯುದ್ಧಪರ್ವಗಳ ಸಂಗ್ರಹದಲ್ಲಿ ಭೀಮಸೇನನ ಪಾತ್ರಕ್ಕೆ ಒತ್ತುಕೊಟ್ಟು ಸಂಗ್ರಹಿಸಿರುವುದು ಗಮನಾರ್ಹ. ಕಥೆಗಳ ಶೀರ್ಷಿಕೆಗಳೂ ಕೆಲವೆಡೆ ಹಾಗೆಯೇ ಇದೆ. ಕಾರಣ ಐದೂ ಯುದ್ಧಪರ್ವಗಳಲ್ಲಿ ಕೌರವಪಾಂಡವರ ಸೇನೆಯಲ್ಲಿ ಭೀಮಸೇನದೇ ಅಪೂರ್ವ ಅಪ್ರತಿಮಪ್ರತಾಪ. ಆದ್ದರಿಂದಲೇ ಭೀಮನನ್ನು ಶ್ರೀಕೃಷ್ಣನ ತರುವಾಯದ ಭಾರತದ ನಾಯಕನೆಂದು ಕರೆಯುತ್ತಾರೆ. ಕೌರವರ ಹನ್ನೊಂದು ಅಕ್ಷೋಹಿಣೀ ಸೈನ್ಯದಲ್ಲಿ 6 ಅಕ್ಷೋಹಿಣಿ ಸೈನ್ಯ ಸಂಹಾರ ಭೀಮನಿಂದಲೇ ಆಯಿತು. ಹೀಗಾಗಿ ಭೂಭಾರಹರಣದಲ್ಲಿ ಭೀಮನದು 'ಪ್ರಥಮಾಂಗ'. (ಪ್ರಧಾನ ಪಾತ್ರ)

''ಭೂಭಾರಹರಣೇ ವಿಷ್ಣೋಃ ಪ್ರಧಾನಾಂಗಂ ಹಿ ಮಾರುತಿಃ''

ಹೀಗೆ ಸಾಮಾನ್ಯಾಕಾರವಾಗಿ ಹದಿನೆಂಟು ಪರ್ವಗಳ ಸಾರವನ್ನು ಕಥೆಗಳಿಂದ ಸಂಗ್ರಹಿಸಿ ಪೂಜ್ಯ ವಾದಿರಾಜಚಾರ್ಯರು '**ವಿರಾಟ ಪರ್ವಕಥೆ**'ಯನ್ನು ಸುಮಾರು 135 ಪುಟಗಳಲ್ಲಿ ಕತೆಗಳ ಮೂಲಕ ಪುನಃ ಸಂಗ್ರಹಿಸಿದ್ದಾರೆ. ಇದಕ್ಕೆ ಕಾರಣ '**ವಿರಾಟೋದ್ಯೋಗಸಾರವಾನ್**' ಎಂಬ ಮಹಾಭಾರತದ್ದೇ ಮಾತಿರಬೇಕು. ಆದರೆ ಉದ್ಯೋಗಪರ್ವದ ಬಗ್ಗೆ ಬರೆಯದೇ ಕೇವಲ ವಿರಾಟಪರ್ವಕ್ಕೆ ವಿಶೇಷ ಮಹತ್ತ್ವಾನುಸಂಧಾನ ಲೇಖಕ ಆಚಾರ್ಯರದು. ಪಾಂಡವರ ಕಷ್ಟಕೋಟಲೆಗಳ ಉಪಸಂಹಾರ ಹಾಗೂ ಉತ್ತರೆಯ ಕಲ್ಯಾಣೋತ್ಸವದೊಂದಿಗೆ ಪಾಂಡವರ ಭಾಗ್ಯೋದಯಾರಂಭವೂ ವಿರಾಟಪರ್ವದ ವೈಶಿಷ್ಟ್ಯವೂ ಒಂದು ಮುಖ್ಯ ಕಾರಣ ಎಂದು ತೋರುತ್ತದೆ. ಆದ್ದರಿಂದಲೇ ಮಹಾಭಾರತ ಪುರಾಣ ಪ್ರವಚನಗಳಲ್ಲಿ ಹಿಂದೆಲ್ಲಾ ವಿರಾಟಪರ್ವಕ್ಕೆ ಆದ್ಯತೆ ಇತ್ತು.

ಹೀಗೆ ಶ್ರೀವಾದಿರಾಜಾಚಾರ್ಯರು ಮಹಾಭಾರತದ ಸಂಕ್ಷಿಪ್ತ ವಿವರಣೆಯನ್ನು ಮತ್ತು ವಿರಾಟಪರ್ವವನ್ನು ವಿಶೇಷವಾಗಿಯೂ ತಮ್ಮದೇ ಆದರೀತಿಯಲ್ಲಿ ಸುಂದರ ಕನ್ನಡಗದ್ಯದಲ್ಲಿ ನಿರೂಪಿಸಿ ಯಶಸ್ವಿಯಾಗಿದ್ದಾರೆ. 'ದ್ರೌಪದೀ ಪಂಚಪತಿತ್ವ', ವನಪರ್ವದ ಭೀಮಧರ್ಮರಾಜ 'ಹಠವಾದ' ಮೊದಲಾದ ಕಠಿಣ ವಿಚಾರಗಳನ್ನು ಮಹಾಭಾರತ ತಾತ್ಪರ್ಯ ನಿರ್ಣಯದ ನೆರಳಲ್ಲಿ ನಿರೂಪಿಸಿದ್ದಾರೆ.

ಮಹಾಭಾರತದ ಮೂಲಕಥೆ ಭಾರತೀಯರಿಗೆ – ಪಂಡಿತ ಪಾಮರರಿಗೆ ಜನಜನಿತವಾದುದೇ. ಇಡೀ ಕಥೆಯ ನಾಯಕ– ಪ್ರೇರಕ, ಸೂತ್ರಧಾರ ಶ್ರೀಕೃಷ್ಣ.

ಭೀಮನದು ನಂತರದ ಉಪನಾಯಕನ ಪಾತ್ರ. ಧರ್ಮಸಂಸ್ಥಾಪನೆಗೆ ಅವತರಿಸಿದ ಕೃಷ್ಣಾವತಾರ ಕಾರ್ಯದಲ್ಲಿ 'ಭೂಮಪಾಲು' ಭೀಮನದು. ನಂತರದ್ದು ಅರ್ಜುನಾದಿಗಳದ್ದು.

28ನೇ ದ್ವಾಪರದ ಕೊನೆಯ ಭಾಗವು–ಕಲಿಯುಗದ ಆರಂಭದ ಮುನ್ಸೂಚನೆಗಳನ್ನು ಒಳಗೊಂಡಂತೆ ಭಾರತದೇಶದ ಉದ್ದಗಲಕ್ಕೆ ಜರಾಸಂಧ, ಸಾಲ್ವ, ನರಕಾಸುರ, ಬಕಾಸುರ, ಕೀಚಕ, ಜಟಾಸುರ, ಕಂಸ ಮೊದಲಾದ ಮಾನವ ವೇಷದ ಕ್ಷತ್ರಿಯ, ಬ್ರಾಹ್ಮಣ ವರ್ಣದಲ್ಲಿಯೇ (ಕೆಲವರು) ಮಾನವ ವಿರೋಧಿ, ನೀತಿವಿರೋಧಿ, ಧರ್ಮವಿರೋಧಿಗಳಿಂದ ತುಂಬಿತುಳುಕುತ್ತಿತ್ತು. ಅಂತೆಯೇ ಬ್ರಹ್ಮಾದಿ ದೇವತೆಗಳಿಂದ ಪ್ರಾರ್ಥಿತನಾದ ನಾರಾಯಣನು ಕೃಷ್ಣನಾಗಿ, ದೇವತೆಗಳು ನಾರಾಯಣನ ಆದೇಶದ ಮೇರೆಗೆ ಪಾಂಡವರಾಗಿ, ಕೌರವರಲ್ಲಿ ಭೀಷ್ಮ ಮೊದಲಾದವರಾಗಿ ಅಲ್ಲದೆ ದ್ರೋಣ, ಕೃಪ, ಅಶ್ವತ್ಥಾಮಾದಿ ಬ್ರಾಹ್ಮಣರಾಗಿ ಬಲರಾಮ, ಉದ್ಧವ, ಅಕ್ರೂರ ಮೊದಲಾದ ಯಾದವರಾಗಿ ಅವತರಿಸಿ ಮೇಲಿನ ದೈತ್ಯರ ಸಂಹಾರ ಕಾರ್ಯದಲ್ಲಿ ಕೃಷ್ಣನಿಗೆ ಸೇವೆ ಮಾಡಿದರು. ಅವರಲ್ಲಿ ಭೀಮಾರ್ಜುನರೇ ಪ್ರಮುಖರು. ಇದೆಲ್ಲ ಮಹಾಭಾರತ, ಭಾಗವತಾದಿ ಇತಿಹಾಸ ಪುರಾಣಗಳಿಂದ ತಿಳಿಯುತ್ತದೆ. ಅಂತೆಯೇ ಮಹಾಭಾರತದ ಅಧ್ಯಯನದ ಹಿನ್ನೆಲೆಯನ್ನೂ ಅರ್ಥ ಮಾಡಿಕೊಳ್ಳಬೇಕು. ಆದರೆ ಇದಕ್ಕೆ ವ್ಯತಿರಿಕ್ತವಾಗಿ ಅನೇಕ ಆಧುನಿಕರು ಮಹಾಭಾರತದ ಮೂಲ ಸ್ರೋತಸ್ಸನ್ನೇ ತಿರುಚಿ ಅಪಚಾರ ಮಾಡುತ್ತಿರುವುದು ಅಲ್ಲಲ್ಲಿ ನೋಡಬಹುದು. ಆದರೆ ಮಹಾಭಾರತವು ತನ್ನ ವಸ್ತುವನ್ನು ತಾನೇ ವಿಶದಪಡಿಸಿದೆ.

''ವಾಸುದೇವಸ್ಯ ಮಾಹಾತ್ಮ್ಯಂ ಪಾಂಡವಾನಾಂ ಚ ಸತ್ಯತಾಮ್ ।
ದುರ್ವೃತ್ತಂ ಧಾರ್ತರಾಷ್ಟ್ರಾಣಾಂ ಉಕ್ತವಾನ್ ಭಗವಾನೃಷಿಃ ॥''

ಮಹಾಭಾರತದಲ್ಲಿ ನಾಯಕರು ಯಾರು? ಒಳ್ಳೆಯವರು ಯಾರು? ಕೆಟ್ಟವರ್‍ಯಾರು? ಎಂಬವೇ ಮೊದಲಾದ ವಿಷಯಗಳು ಮೇಲಿನ ಹಾಗೂ ಇಂತಹ ನೂರಾರು ಪ್ರಮಾಣಗಳಿಂದ ನಿರ್ಮಲ ಮನಸ್ಸಿರುವವರೆಗೆ ತಿಳಿದೇ ತಿಳಿಯುತ್ತದೆ.

ಇದೆಲ್ಲವನ್ನೂ ಶ್ರೀಮದಾಚಾರ್ಯರು ಮಹಾಭಾರತ ತಾತ್ಪರ್ಯವೆಂಬ ತಮ್ಮ ದೀರ್ಘವಾದ ಕಾವ್ಯಪ್ರಬಂಧದಲ್ಲಿ (5200 ಶ್ಲೋಕ) ವಿಮರ್ಶಿಸಿದ್ದಾರೆ. ಇದರ ಆಧಾರದ ಮೇಲೆ ಮಾನ್ಯ ಲೇಖಕರು ಭಾರತದ ಕಥೆಗಳನ್ನು ಸಂಗ್ರಹಿಸಿ ಭಾರತವನ್ನು ಅತ್ಯಂತ ಸಮರ್ಪಕವಾಗಿ ಆಬಾಲವೃದ್ಧರಿಗೂ ತಿಳಿಯುವಂತೆ ಸುಲಲಿತ ಕನ್ನಡ ಗದ್ಯದಲ್ಲಿ ಬರೆದು ಸಮಾಜಕ್ಕೆ ನೀಡಿದ್ದಾರೆ.

ಪಾಂಡವರು ಧರ್ಮ, ತತ್ತ್ವಜ್ಞಾನ, ಭಕ್ತಿ, ವೈರಾಗ್ಯ, ವಿನಯ, ಶೀಲಗಳಿಗೆ

ಸಂಕೇತವಾಗಿದ್ದಾರೆ. ದುರ್ಯೋಧನಾದಿ ಸೋದರರು ಪಾಪಗಳಿಗೆ ಸಂಕೇತ ವೆನ್ನುವುದು ಅವರ ಚರಿತ್ರೆಯಿಂದಲೇ ತಿಳಿಯುತ್ತದೆ. ಆದ್ದರಿಂದಲೇ ಸಾಂಪ್ರದಾಯಿಕ ಸ್ತೋತ್ರವೊಂದು ಪಾಂಡವರನ್ನು ಹೀಗೆ ವರ್ಣಿಸಿದೆ.

''ಧರ್ಮೋ ವಿವರ್ಧತಿ ಯುಧಿಷ್ಠಿರ ಕೀರ್ತನೇನ
ಪಾಪಂ ವಿನಶ್ಯತಿ ವೃಕೋದರ ಕೀರ್ತನೇನ ।
ಶತ್ರುರ್ವಿನಶ್ಯತಿ ಧನಂಜಯಕೀರ್ತನೇನ
ಮಾದ್ರೀಸುತೌ ಕಥಯತಾಂ ನ ಭವಂತಿ ರೋಗಾಃ''॥

ಆದರೆ ದುರ್ಯೋಧನನು ಕ್ರೋಧದ ಆಗರ—

''ದುರ್ಯೋಧನೋ ಮನ್ಯುಮಯೋ ಮಹಾದ್ರುಮಃ'' (1-1-128)(ಮ.ಭಾ)

ಆದರೆ ಧರ್ಮರಾಜನು ಧರ್ಮಮೂರ್ತಿ—

''ಯುಧಿಷ್ಠಿರೋ ಧರ್ಮಮಯೋ ಮಹಾದ್ರುಮಃ'' (1-1-129)(ಮ.ಭಾ)

ಭೀಮನು ತನ್ನ ಸ್ವಾಭಾವಿಕ ಬಲದಿಂದ ಎಲ್ಲರನ್ನೂ ಮೀರಿ ನಿಂತಾಗ ದುರ್ಯೋಧನನ ದುಷ್ಟಬುದ್ಧಿಯ ಅವತಾರವಾಗಿ ಕೊನೆಯವರೆಗೂ ದ್ವೇಷದಲ್ಲಿ ಅವನ ವ್ಯಕ್ತಿತ್ವ ಪರ್ಯವಸಾನವಾಗುತ್ತದೆ.

''ತತೋ ಬಲಮತಿಖ್ಯಾತಂ ಧಾರ್ತರಾಷ್ಟ್ರಃ ಪ್ರತಾಪವಾನ್ ।''
''ಭೀಮಸೇನಸ್ಯ ತತ್ ಜ್ಞಾತ್ವಾ ದುಷ್ಟಭಾವಮದರ್ಶಯತ್''
ಏವಂ ಸ ಧಾರ್ತರಾಷ್ಟ್ರಾಂಶ್ಚ ಸ್ಪರ್ಧಮಾನೋ ವೃಕೋದರಃ ।
ಅಪ್ರಿಯೇಽತಿಷ್ಠದತ್ಯಂತಂ ಬಾಲ್ಯಾನ್ನದ್ರೋಹ ಚೇತಸಾ ॥
ಮೋಹಾದೈಶ್ವರ್ಯಲೋಭಾಚ್ಚ ಪಾಪಾ ಮತಿರಜಾಯತ ॥

ವ.ಪ.ಅ.137. 25 ರಿಂದ 27

ಹೀಗೆ ಮಹಾಭಾರತದಲ್ಲಿಯೇ ಸಿಗುವ ನೂರಾರು ಮಾತುಗಳು ದುರ್ಯೋಧನನ ಅಪ್ರಚೋದಿತ ಪಾಂಡವ ದ್ವೇಷವನ್ನು ತಿಳಿಸುತ್ತಿದ್ದರೂ ದುರ್ಯೋಧನನೇ ಕೆಲವರಿಗೆ ನಾಯಕ, ಸಾಧುಪುರುಷ, ಭೀಮ ಹುಂಬ, ಹೊಟ್ಟೆಬಾಕ, ಅವಿವೇಕಿ, ಪೂರ್ವಾಗ್ರಹಿ ಇತ್ಯಾದಿಯಾಗಿ ಕೆಲವರು ಇಂದಿಗೂ ಆಪಾದಿಸುತ್ತಿರುವುದು ಅವರ ಮಹಾಭಾರತದ ಅಜ್ಞಾನಕ್ಕೆ ಸಾಕ್ಷಿ ಎಂದು ಹೇಳಬೇಕಾಗುತ್ತದೆ.

ಒಟ್ಟಾರೆ ಭಾರತದ ಪ್ರತಿಪಾದ್ಯ ವ್ಯಕ್ತಿ, ದೇವತೆ ನಾರಾಯಣನ ಅವತಾರಿ ಕೃಷ್ಣರೂಪಿ ವಾಸುದೇವ, ಪಾಂಡವರು ಅವನ ಭಕ್ತರು. ಪಾಂಡವರಂತೆ ಕೃಷ್ಣ ಭಕ್ತರಾಗಿ ಬದುಕಬೇಕು. ದುರ್ಯೋಧನನಂತೆ ಕಾಮ ಕ್ರೋಧ, ಅಸೂಯೆ ಮೊದಲಾದ ದೋಷಗಳಿಗೆ ಆಗರವಾದವನಂತೆ ಬದುಕಬಾರದು ಎಂದು ಮಹಾಭಾರತವು

ತಿಳಿಸುತ್ತದೆ. ಭಗವದ್ಗೀತೆಯಂತೂ ಭಾರತದ ಅಂತರಂಗ ಆಧ್ಯಾತ್ಮ ತತ್ತ್ವಗಳ ಗಣಿ. ಭೀಷ್ಮರು ಉಪದೇಶಿಸಿದ ವಿಷ್ಣುಸಹಸ್ರನಾಮ ನಿತ್ಯ ಪಠನೀಯ ಸಂಸಾರ ಮೋಚಕ ಸ್ತೋತ್ರ. ಇವೆಲ್ಲ ಮಹಾಭಾರತದ ಮಹತ್ವ ನಿರೂಪಕ ಒಂದು ಬಿಂದು ಮಾತ್ರ.

**ಕೃತಜ್ಞತೆಗಳು**

1. ಈ ಕಥೆಗಳನ್ನು ಸಂಪಾದನೆ ಮಾಡಲು ಆದೇಶಿಸಿದ ನನ್ನ ಗುರುಗಳಾದ ಪರಮಪೂಜ್ಯ ಶ್ರೀ ಶ್ರೀ ವಿದ್ಯೇಶತೀರ್ಥರಿಗೆ ಅನಂತಸಾಷ್ಟಾಂಗ ಪ್ರಣಾಮಗಳು.

2. ಹೀಗೆ ನೂರಾರು ಸಂದೇಶಗಳನ್ನು ನೀಡುವ ಮಹಾಭಾರತದ ವಸ್ತುವನ್ನು ಕಥೆಗಳ ಮೂಲಕ ಬರೆದ ಮಹಾಪುಣ್ಯಾ ಚೇತನ ಪೂಜ್ಯ ಕೊಯಮತ್ತೂರು ವಾದಿರಾಜಾಚಾರ್ಯರು ಈಗಿಲ್ಲ. ಆ ಚೇತನಕ್ಕೆ ನನ್ನ ನಮನಗಳು.

3. ಸಂಪಾದನೆಯಲ್ಲಿ ಸಹಾಯ ಮಾಡಿದ ಪೂಜ್ಯ ಗುರುಗಳಾದ ಡಾ.ಹೆಚ್.ಸತ್ಯನಾರಾಯಣಾಚಾರ್ಯರಿಗೆ ನಮನಗಳು.

4. ಪೂಜ್ಯ ಲೇಖಕರ ಕೃತಿಯನ್ನು ನೋಡಿ ಅವುಗಳನ್ನು ಪರಿಶೀಲಿಸಿ ತಮ್ಮ ಅಮೂಲ್ಯ ಅಭಿಪ್ರಾಯಗಳನ್ನು ನೀಡಿದ ಸನ್ಮಾನ್ಯರಾದ ಶ್ರೀಯುತ ಪುಂಡಲೀಕ ಹಾಲಂಬಿ, ಅಧ್ಯಕ್ಷರು, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು, ಪ್ರೊ.ಜಿ.ವೆಂಕಟ ಸುಬ್ಬಯ್ಯ, ನಾಡಿನ ಹಿರಿಯ ದಿಗ್ಗಜ ಸಾಹಿತಿಗಳು, ನಾಡೋಜ ಡಾ.ಎಂ.ಚಿದಾನಂದ ಮೂರ್ತಿ, ಖ್ಯಾತ ಕನ್ನಡ ಇತಿಹಾಸ ತಜ್ಞರು, ಸಂಶೋಧಕರು ಇವರಿಗೆ ನನ್ನ ಹೃತ್ಪೂರ್ವಕ ಕೃತಜ್ಞತೆಗಳು.

5. ನನ್ನ ನೆಚ್ಚಿನ ಗೆಳೆಯ ಶ್ರೀರಾಯಸಂ ಶ್ರೀಧರ ಅವರಿಗೆ ಶ್ರೀ ನಾಗೇಂದ್ರ ಪ್ರಸಾದ್, ಹೆಚ್.ಪಿ.ನರಸಿಂಹಮೂರ್ತಿ ಸಂಪಾದನೆಯ ಕೆಲವು ಹಂತದಲ್ಲಿ ನೆರವಾಗಿದ್ದಾರೆ. ಅವರಿಗೆ ಕೃತಜ್ಞತೆಗಳು.

6. ಕಲಾತ್ಮಕವಾಗಿ ಮುಖಪುಟ ರಚಿಸಿದ ಶ್ರೀ ಕೆ.ಎಂ.ಶೇಷಗಿರಿಯವರಿಗೆ ಅಭಿನಂದನೆಗಳು.

7. ಅಂದವಾಗಿ ಬಲುಶೀಘ್ರವಾಗಿ ಅಕ್ಷರಜೋಡಣೆ ಮಾಡಿರುವ ಆರ್.ಎಸ್. ಪ್ರೇಮಕುಮಾರ್ ಅವರಿಗೆ—

8. ಕೃತಿಯನ್ನು ಅಂದವಾಗಿ ಸಕಾಲದಲ್ಲಿ ಮುದ್ರಣಮಾಡಿಕೊಟ್ಟ ವಾಗರ್ಥ ಪ್ರಿಂಟಿಂಗ್ ಪ್ರೆಸ್ ಇವರಿಗೆ ಕೃತಜ್ಞತೆಗಳು.

ಜಿಜ್ಞಾಸುಗಳ ಸಲಹೆಗಳಿಗೆ ಸ್ವಾಗತವಿದೆ.

ಬೆಂಗಳೂರು **ಡಾ. ಜಿ. ಶೇಷಗಿರಿ ಆಚಾರ್ಯ ವೇದಗರ್ಭ**

ಜಯ–ವೈಶಾಖ ಬ.ತೃತೀಯ 17.5.2014 ದೂರವಾಣಿ : 080–26721028

# ವಿಷಯಾನುಕ್ರಮಣಿಕೆ

**ಉದ್ಯೋಗಪರ್ವ**

**ಸ್ವರ್ಗಾರೋಹಣ ಪರ್ವ**



**ವಿರಾಟಪರ್ವ (ವಿಶೇಷ)**

# ಸಂಕೇತಾಕ್ಷರಗಳು

| | | |
|---|---|---|
| ಮ.ತಾ.ನಿ. | : | ಮಹಾಭಾರತ ತಾತ್ಪರ್ಯ ನಿರ್ಣಯ |
| ವ.ಪ. ಅ | : | ವನಪರ್ವ ಅಧ್ಯಾಯ |
| ಆ.ಪ. | : | ಆದಿಪರ್ವ |
| ಆಶ್ರ.ಪ. | : | ಆಶ್ರಮವಾಸಿಕ ಪರ್ವ |
| ಭಾ. | : | ಭಾಗವತ |
| ಮ.ಭಾ | : | ಮಹಾಭಾರತ |
| ಹ.ವಂ.ಭ.ಪ. | : | ಹರಿವಂಶ ಭವಿಷ್ಯಪರ್ವ |
| ಹ.ವಂ.ವಿ.ಪ. | : | ಹರಿವಂಶ ವಿಷ್ಣುಪರ್ವ |
| ಹ.ವಂ.ಪ. | : | ಹರಿವಂಶಪರ್ವ |
| ಪು.ನಾ.ಚೂ. | : | ಪುರಾಣನಾಮ ಚೂಡಾಮಣಿ |
| E.P.W. | : | Encyclopedia of Puranic words. |

ನಾರಾಯಣಂ ಸುರಗುರುಂ ಜಗದೇಕನಾಥಂ
ಭಕ್ತಪ್ರಿಯಂ ಸಕಲಲೋಕನಮಸ್ಕೃತಂ ಚ ।
ತ್ರೈಗುಣ್ಯವರ್ಜಿತಮಜಂ ವಿಭುಮಾದ್ಯಮೀಶಂ
ವಂದೇ ಭವಘ್ನಮಮರಾಸುರಸಿದ್ಧವಂದ್ಯಮ್ ॥

ನಾರಾಯಣಂ ನಮಸ್ಕೃತ್ಯ ನರಂ ಚೈವ ನರೋತ್ತಮಮ್ ।
ದೇವೀಂ ಸರಸ್ವತೀಂ ವ್ಯಾಸಂ ತತೋ ಜಯಮುದೀರಯೇತ್ ॥

ನಾಸ್ತಿ ನಾರಾಯಣಸಮಂ ನ ಭೂತಂ ನ ಭವಿಷ್ಯತಿ ।
ಏತೇನ ಸತ್ಯವಾಕ್ಯೇನ ಸರ್ವಾರ್ಥಾನ್ ಸಾಧಯಾಮ್ಯಹಮ್ ॥

ಧರ್ಮೇ ಚಾರ್ಥೇ ಚ ಕಾಮೇ ಚ ಮೋಕ್ಷೇ ಚ ಭರತರ್ಷಭ ।
ಯದಿಹಾಸ್ತಿ ತದನ್ಯತ್ರ ಯನ್ನೇಹಾಸ್ತಿ ನ ಕುತ್ರಚಿತ್ ॥

# ಆದಿಪರ್ವ

## ಮಹಾಭಾರತವು [1]

ಮಹಾಭಾರತವು ವೇದವ್ಯಾಸದೇವರಿಂದ ಪ್ರಣೀತವಾದದ್ದು. ಈ ಮಹಾಭಾರತವು ವಿಚಾರ್ಯಶಾಸ್ತ್ರಗಳಲ್ಲಿ ಅತ್ಯುತ್ತಮ ಗ್ರಂಥವೆಂದು ಪ್ರಮಾಣವಿದೆ. ವೇದಗಳಲ್ಲಿಯೂ ಹೇಳದೆ ಕೇವಲ ತನ್ನ ಪ್ರತ್ಯಕ್ಷಕ್ಕೇ ವಿಷಯವಾದ ಅನೇಕ ವಿಷಯಗಳನ್ನು ಇದರಲ್ಲಿ ಬಾದರಾಯಣರು ಹೇಳಿರುವರು. ಇದರಲ್ಲಿ ಹೇಳದೆ ಇರುವ ಪ್ರಮೇಯವು ಬೇರೆ ಯಾವ ಗ್ರಂಥದಲ್ಲಿಯೂ ಹೇಳಿಲ್ಲವೆಂದೂ, ಇದರಲ್ಲಿ ಹೇಳಿರುವ ಪ್ರಮೇಯಗಳೇ ಇತರ ಶಾಸ್ತ್ರಗಳಲ್ಲಿ ಉಕ್ತವಾಗಿವೆಯೆಂದೂ ಪ್ರಮಾಣದಲ್ಲಿ ಹೇಳಿದೆ. ಇದು ತುಂಬಾ ಕಠಿಣವಾದ ಗ್ರಂಥವೆಂದೂ ಇತರ ಅರ್ಥವನ್ನು ವೇದವ್ಯಾಸದೇವರೇ ತಿಳಿಯು ವವರು. ಅವರ ಅನುಗ್ರಹದಿಂದ ಬ್ರಹ್ಮದೇವರಾದರೂ ತಿಳಿಯುವರು. ಇದಕ್ಕೆ ಹತ್ತು ಅರ್ಥಕ್ಕೆ ಕಡಿಮೆಯಿಲ್ಲದ ಅರ್ಥಗಳು ಇರುವುವು.

ಭಾರತದಲ್ಲಿ ಸಮಾಧಿಭಾಷಾ ದರ್ಶನಭಾಷಾ, ಗುಹ್ಯಭಾಷಾ ಎಂದು ಮೂರು ಭಾಷೆಗಳಿಂದ ಕಥೆಯನ್ನು ಹೇಳಿರುವರು. ವಿಷ್ಣುವು ಸರ್ವೋತ್ತಮನು ಇತ್ಯಾದಿ ಸ್ಪಷ್ಟವಾಗಿ ಹೇಳಿದ್ದು ಸಮಾಧಿಭಾಷೆಯಿಂದ. ಶಿವಸರ್ವೋತ್ತಮತ್ವಾದಿ ಪರಮತ ದವರು ಹೇಳಿದ್ದನ್ನು ಅನುವಾದ ಮಾಡುವುದು ದರ್ಶನಭಾಷೆಯಿಂದ. ಮೇಲಾಗಿ ನೋಡುವಾಗ ವಿರುದ್ಧವಾಗಿ ಕಂಡು, ಸರಿಯಾದ ಬೇರೆ ಅರ್ಥವಿದ್ದರೆ ಗುಹ್ಯಭಾಷೆ ಯೆಂದು ಹೆಸರು.

'ಉಚ್ಛಿಷ್ಟಂ ಶಿವನಿರ್ಮಾಲ್ಯಂ ವಮನಂ ಶವಕರ್ಪಟಂ।
ಕಾಕವಿಷ್ಠಾಸಮುದ್ಭೂತಂ ಪಂಚಪೂತಾನಿ ಭಾರತ'

ಅಂದರೆ ಎಂಜಲು, ರುದ್ರದೇವರ ನಿರ್ಮಾಲ್ಯವು ವಾಂತಿಮಾಡಿದ್ದು, ಶವಕ್ಕೆ

---

1. ಮ.ಭಾ.ಆ.ಪ.ಅ.-1, 2 ಮ.ತಾ.ನಿ. ಅ-2

ಹೊದಿಸಿದ ವಸ್ತ್ರವು, ಕಾಗೆಯ ಮಲದಿಂದ ಹುಟ್ಟಿದ್ದು ಇವುಗಳು ಐದು ಪವಿತ್ರವಾಗಿದೆ ಎಂದಿರುವುದು. ಇದು ಮೇಲಾಗಿ ನೋಡುವಾಗ ತುಂಬಾ ವಿರುದ್ಧವಾಗಿದೆ. ಇದರ ಗೂಢಾರ್ಥವು ಬೇರೆ ಇದೆ. ಉಚ್ಛಿಷ್ಟವೆಂದು ಕರುವಿನ ಎಂಜಲಾದ ದನದ ಹಾಲು ಎಂದರ್ಥವು. ಶಿವನಿರ್ಮಾಲ್ಯವೆಂದರೆ ರುದ್ರದೇವರ ತಲೆಯಿಂದ ಬಂದಿರುವ ಗಂಗಾನದಿಯು ಎಂದರ್ಥವು. ವಮನ ಎಂದರೆ ಭ್ರಮಗಳು ಪುಷ್ಪರಸವನ್ನು ಹೀರಿ ಬಂದು ವಾಂತಿಮಾಡಿದ ಜೇನುತುಪ್ಪವೆಂರ್ಥವು. ಶವಕರ್ಪಟವೆಂದರೆ ಪಟ್ಟೆಯ ವಸ್ತ್ರ. ಪಟ್ಟೆಯ ಹುಳುಗಳು ತಮ್ಮ ಸುತ್ತಲೂ ನೂಲನ್ನು ಸುತ್ತಿಕೊಂಡು ಇರಲು, ಅವುಗಳನ್ನೆಲ್ಲಾ ಕುದಿಯುವ ಬಿಸಿನೀರಿನಲ್ಲಿ ಹಾಕಿ, ಕೊಂದು ಆಮೇಲೆ ಆ ನೂಲನ್ನು ಬಿಡಿಸಿ ಪಟ್ಟೆಯ ವಸ್ತ್ರವನ್ನು ಮಾಡುವರು. ಆದುದರಿಂದ ಶವಕ್ಕೆ ಹೊದಿಸಿದ ವಸ್ತ್ರವಾಯಿತು. ಕಾಗೆಯ ಮಲದಿಂದ ಹುಟ್ಟಿದ್ದು ಅಶ್ವತ್ಥದ ಮರವು. ಅಶ್ವತ್ಥದ ಹಣ್ಣು ಕೆಳಗೆಬಿದ್ದು ಎಷ್ಟು ಬೀಜಗಳು ಉದುರಿದ್ದರೂ ಅಶ್ವತ್ಥದ ಗಿಡವಾಗುವುದಿಲ್ಲ. ಕಾಗೆಯು ಅಶ್ವತ್ಥದ ಹಣ್ಣನ್ನು ತಿಂದು ಅದರ ಮಲದಲ್ಲಿ ಬೀಜವು ಬಂದರೆ ಆ ಬೀಜದಿಂದ ಅಶ್ವತ್ಥದ ಗಿಡವು ಬೆಳೆಯುವುದು. ಈರೀತಿಯಾಗಿ ಮೂರು ಭಾಷೆಯಿಂದ ಹೇಳಿರುವುದರಿಂದ ಭಾರತದ ಅರ್ಥವನ್ನು ತಿಳಿಯುವುದು ಕಠಿಣವು.

ಮತ್ತು ಭಾರತಕ್ಕೆ ಮನ್ವಾದಿ, ಆಸ್ತಿಕಾದಿ, ಉಪರಿಚರಾದಿ ಎಂಬ ಮೂರು ಅರ್ಥಗಳು ಇವೆಯೆನ್ನುವರು. ಪರಮಾತ್ಮನ ಜ್ಞಾನಕ್ಕೆ ಕಾರಣಗಳಾದ ಧರ್ಮಗಳು, ಭಕ್ತ್ಯಾದಿಗಳು, ಶ್ರವಣಾದಿಗಳು, ಶೀಲ, ವಿನಯ, ವೇದ ಇವುಗಳಿಗೆ ಮನು ಎಂದು ಹೆಸರು. ಧರ್ಮಕ್ಕೆ ಅಭಿಮಾನಿ ಧರ್ಮರಾಜನು. ಭಕ್ತ್ಯಾದಿಗಳಿಗೆ ಅಭಿಮಾನಿ ಭೀಮಸೇನದೇವರು. ಕೃಷ್ಣಪರಮಾತ್ಮನ ಮುಖದಿಂದ ಗೀತಾಶ್ರವಣಮಾಡಿ ಅದನ್ನು ಮನನಮಾಡಿದ ಅರ್ಜುನನು ಶ್ರವಣಾದಿಗಳಿಗೆ ಅಭಿಮಾನಿಯು. ಶೀಲಕ್ಕೆ ನಕುಲನೂ, ವಿನಯಕ್ಕೆ ಸಹದೇವನೂ, ವೇದಗಳಿಗೆ ದ್ರೌಪದೀದೇವಿಯರೂ ಅಭಿಮಾನಿಯರು. ಆದುದರಿಂದ ಭಾರತದಲ್ಲಿ ಧರ್ಮಾದಿಗಳನ್ನು ಹೇಳುವ ಭಾಗವು ಪಾಂಡವರ ಸ್ತೋತ್ರಮಾಡಲಿಕ್ಕೆ ಹೊರಟಿದ್ದು ಎಂಬ ಭಾಗವೇ ಮನ್ವಾದಿ ಭಾಗವು.

ಆಸ್ತೀಕ ಅಂದರೆ ಪರಲೋಕವಿದೆ. ಪರಮಾತ್ಮನು ಇದ್ದಾನೆ ಎಂದು ಸರ್ವದಾ ತಿಳಿದುಕೊಂಡಿರುವ ಪಂಚಪಾಂಡವರೂ ದ್ರೌಪದೀದೇವಿಯರು. ಅಂತಹ ಆಸ್ತಿಕರಾದ ಪಾಂಡವರನ್ನೇ ಮುಂದೆ ಮಾಡಿಕೊಂಡು ಅವರ ಉತ್ಪತ್ತಿ, ಅವರು ಮಾಡಿದ ಯುದ್ಧ ಇತ್ಯಾದಿಗಳನ್ನು ಹೇಳಿದ ಭಾಗವು ಆಸ್ತೀಕಾದಿ.

ಭಾರತದಲ್ಲಿ ಇರುವ ಎಲ್ಲ ಶಬ್ದಗಳೂ ಭಗವಂತನನ್ನು ಹೇಳುವುದು

ಔಪರಿಚರವು. ಉಪರಿಚರ ಅಂದರೆ ಸರ್ವೋತ್ತಮನಾದ ಪರಮಾತ್ಮನು ಎಂದರ್ಥವು.

ಏವಂಚ ಧರ್ಮಭಕ್ತ್ಯಾದಿಗಳನ್ನು ಹೊಂದುವುದು ಮನ್ವಾದಿ. ಪಾಂಡವರ ಕಥೆಯನ್ನು ಹೇಳುವುದು ಆಸ್ತೀಕಾದಿ. ಸರ್ವಶಬ್ದವೂ ಪರಮಾತ್ಮನನ್ನೇ ಹೇಳುತ್ತದೆ ಎನ್ನುವುದು ಉಪರಿಚರ. ಈಪ್ರಕಾರವಾಗಿ ಇರುವುದರಿಂದ ಭಾರತಾರ್ಥವನ್ನು ತಿಳಿಯುವುದು ತುಂಬಾ ಅಶಕ್ಯವಾದದ್ದು.

ಮತ್ತು ಒಂದು ಸಮಯದಲ್ಲಿ ದೇವತೆಗಳೂ ಋಷಿಗಳು ಸೇರಿ ವೇದವ್ಯಾಸದೇವರ ಆಜ್ಞೆಯಿಂದ ಸಮತೂಕವುಳ್ಳ ಎರಡು ರತ್ನಗಳನ್ನು ತಂದು ಒಂದು ರತ್ನದಲ್ಲಿ ಭಾರತದ ಅಭಿಮಾನಿಯನ್ನೂ, ಮತ್ತೊಂದು ರತ್ನದಲ್ಲಿ ಸಮಸ್ತ ಶಾಸ್ತ್ರಾಭಿಮಾನಿ ದೇವತೆಗಳನ್ನೂ ಆವಾಹನಮಾಡಿ ತಕ್ಕಡಿಯಲ್ಲಿ ತೂಕಮಾಡಲು ಮಹಾಭಾರತಾಭಿಮಾನಿಯನ್ನು ಆವಾಹನಮಾಡಿದ ಮಣಿಯೇ ಭಾರತವಾಗಿತ್ತು. ಆದುದರಿಂದ ಮಹಾಭಾರತವೆಂದು ಹೆಸರು ಎಂದು ಪ್ರಮಾಣವಿದೆ.

ಈ ಭಾರತದಲ್ಲಿ ಸಂಭವ ಸಭಾ, ಅರಣ್ಯ, ವಿರಾಟ, ಉದ್ಯೋಗ, ಭೀಷ್ಮ, ದ್ರೋಣ, ಕರ್ಣ, ಶಲ್ಯ, ಗದಾ, ಸೌಪ್ತಿಕ, ಸ್ತ್ರೀ, ಅನುಶಾಸನ, ಶಾಂತಿ, ಆಶ್ವಮೇಧಿಕ, ಆಶ್ರಮವಾಸಿಕ, ಮೌಸಲ, ಮಹಾಪ್ರಸ್ಥಾನ, ಸ್ವರ್ಗಾರೋಹಣ ಎಂಬ ಹದಿನೆಂಟು ಪರ್ವಗಳಿವೆ. ಸಂಭವಪರ್ವದಲ್ಲಿ ಅನೇಕ ಕಥೆಗಳನ್ನು ನಿರೂಪಿಸಿ ಪಾಂಡವರ ಉತ್ಪತ್ತಿ, ಕೊನೆಗೆ ಖಾಂಡವವನದಾಹಪರ್ಯಂತ ಕಥೆಗಳನ್ನು ನಿರೂಪಿಸಿರುವರು. ಸಭಾಪರ್ವದಲ್ಲಿ ರಾಜಸೂಯಯಾಗ ಮೊದಲಾದವನ್ನು ತಿಳಿಸಿ ಪಾಂಡವರಿಗೆ ನಡೆದ ದ್ಯೂತ ಸಭೆಯಲ್ಲಿ ನಡೆದ ಅವಮಾನ ಇವನ್ನೆಲ್ಲಾ ತಿಳಿಸಿ ಪಾಂಡವರು ವನಕ್ಕೆ ಹೋದ ಪರ್ಯಂತ ತಿಳಿಸಿದ್ದಾರೆ. ಅರಣ್ಯಪರ್ವದಲ್ಲಿ ಪಾಂಡವರ ವನವಾಸ ಇನ್ನೂ ಅನೇಕ ಕಥೆಗಳನ್ನು ಹೇಳಿದ್ದಾರೆ. ವಿರಾಟಪರ್ವದಲ್ಲಿ ಪಾಂಡವರು ಅಜ್ಞಾತವಾಸ ಮಾಡಿದ್ದನ್ನು ಹೇಳಿದ್ದಾರೆ. ಉದ್ಯೋಗಪರ್ವದಲ್ಲಿ ಯುದ್ಧೋದ್ಯೋಗವನ್ನು ಹೇಳಿರುವರು. ಭೀಷ್ಮಪರ್ವದಲ್ಲಿ ಗೀತೋಪದೇಶ, ಭೀಷ್ಮಾಚಾರ್ಯರು **ಹತ್ತು** ದಿವಸ ಸೇನಾಧಿಪತ್ಯವನ್ನು ವಹಿಸಿ ಮಾಡಿದ ಭಯಂಕರ ಯುದ್ಧವನ್ನು ನಿರೂಪಿಸಿರುವರು. ದ್ರೋಣಪರ್ವದಲ್ಲಿ ದ್ರೋಣಾಚಾರ್ಯರು ಸೇನಾಪತಿಯಾಗಿ **ಐದು** ದಿವಸ ಮಾಡಿದ ಕಥಾ ಈ ಪರ್ವದಲ್ಲಿಯೇ ಅಭಿಮನ್ಯುವು ಮೃತನಾಗಿರುವನು. ಕರ್ಣಪರ್ವದಲ್ಲಿ ಕರ್ಣನು ಸೇನಾಪತಿಯಾಗಿ ಯುದ್ಧಮಾಡಿ ಅರ್ಜುನನಿಂದ ಮೃತನಾದ ವಿಷಯವನ್ನು ಹೇಳಿರುವರು. ಶಲ್ಯಪರ್ವದಲ್ಲಿ ಶಲ್ಯನು

ಸೇನಾಪತಿಯಾಗಿ ಯುದ್ಧಮಾಡಿ ಧರ್ಮರಾಜನಿಂದ ಮೃತನಾದ ಕಥೆಯನ್ನು ಹೇಳಿದೆ. ಈ ಪರ್ವದಲ್ಲಿಯೇ ಭೀಮಸೇನದೇವರಿಂದ ದುರ್ಯೋಧನನು ಸತ್ತ ಕಥೆಯನ್ನು ಹೇಳಿದೆ. ಸೌಪ್ತಿಕಪರ್ವದಲ್ಲಿ ಅಶ್ವತ್ಥಾಮಾಚಾರ್ಯರು ರಾತ್ರಿಯಲ್ಲಿ ಮಲಗಿರುವ ಧೃಷ್ಟದ್ಯುಮ್ನಾದಿಗಳನ್ನೂ ಸ್ತ್ರೀಬಾಲಕರನ್ನೂ ಕೂಡ ಸಂಹಾರಮಾಡಿದ ಭಯಂಕರ ವಾದ ಕಥೆಯು ನಿರೂಪಿಸಲ್ಪಟ್ಟಿದೆ. ಸ್ತ್ರೀಪರ್ವದಲ್ಲಿ ದುರ್ಯೋಧ ನಾದಿಗಳು ಸ್ತ್ರೀಯರೂ ಮಾಡಿದ ವಿಲಾಪವನ್ನು ಹೇಳಿದೆ. ಶಾಂತಿಪರ್ವದಲ್ಲಿ ಸರಳಮಂಚದಲ್ಲಿ ಮಲಗಿರುವ ಭೀಷ್ಮಾಚಾರ್ಯರು ಅಂದರೆ ಅವರಲ್ಲಿ ಸನ್ನಿಹಿತನಾಗಿದ್ದುಕೊಂಡು ಪರಮಾತ್ಮನು ಹೇಳಿರುವ ನಾನಾ ಧರ್ಮಗಳನ್ನು ಇತಿಹಾಸಪೂರ್ವಕವಾಗಿ ಹೇಳಿದೆ. ಆನುಶಾಸಕನಿಕಪರ್ವದಲ್ಲಿಯೂ ಅನೇಕ ಧರ್ಮಗಳನ್ನು ಹೇಳಿ, ಭೀಷ್ಮಾಚಾರ್ಯರ ನಿರ್ಯಾಣವನ್ನು ಹೇಳಿದೆ. ಆಶ್ವಮೇಧಿಕಪರ್ವದಲ್ಲಿ ಪಾಂಡವರು ಅಶ್ವಮೇಧ ಯಾಗವನ್ನು ಮಾಡಿದ ಕಥೆಯನ್ನು ಹೇಳಿದೆ. ಮೌಸಲಪರ್ವದಲ್ಲಿ ಯಾದವರು ಪರಸ್ಪರ ಬಡಕೊಂಡು ಸ್ವರ್ಗಸ್ಥರಾದ ಕಥೆಯನ್ನು ಹೇಳಿದೆ. ಮಹಾಪ್ರಸ್ಥಾನ ಪರ್ವದಲ್ಲಿ ಪಾಂಡವರು ರಾಜ್ಯವನ್ನು ಪರಿತ್ಯಾಗಮಾಡಿದ ಪ್ರಯಾಣ ಮಾಡಿದ ಕಥೆಯನ್ನು ಹೇಳಿದೆ. ಸ್ವರ್ಗಾರೋಹಣಪರ್ವದಲ್ಲಿ ಪಾಂಡವರು ಸ್ವರ್ಗವನ್ನು ಹೊಂದಿದ ಕಥೆಯನ್ನು ಹೇಳಿದೆ. ಹದಿನೈದನೆಯದಾದ ಆಶ್ರಮವಾಸಿಕಪರ್ವದಲ್ಲಿ ಧೃತರಾಷ್ಟ್ರನು ಕಾಡಿಗೆ ಹೋದ ಕಥೆಯನ್ನು ಹೇಳಿದೆ.

ಈರೀತಿ ಹದಿನೆಂಟು ಪರ್ವಗಳು. ಭಾರತ ಖಿಲ ಹರಿವಂಶಪರ್ವವಿದೆ. ಆದರಲ್ಲಿ ಹರಿವಂಶಪರ್ವ, ವಿಷ್ಣುಪರ್ವ, ಭವಿಷ್ಯಪರ್ವ ಎಂಬ ಅವಾಂತರ ಪರ್ವಗಳಿವೆ. ಈ ಮಹಾಭಾರತವು ಅತ್ಯುತ್ತಮವಾದ ಗ್ರಂಥವು. ಇದರ ಪಾರಾಯಣದಿಂದ ಸಮಸ್ತ ಪಾಪವೂ ಪರಿಹೃತವಾಗುತ್ತದೆ. ಭಾರತ ಶ್ರವಣ ಮಾಡುವುದರಿಂದ ನೂರು ಗೋದಾನ ಮಾಡಿದ ಪುಣ್ಯವು ಬರುವುದು. ಇತ್ಯಾದಿ ವಿಷಯವು ಪ್ರಮಾಣ ಪ್ರಮಿತವಾಗಿದೆ.



# ಪಾಂಡವರು

ಧರ್ಮರಾಜ ಭೀಮಸೇನ ಅರ್ಜುನ ನಕುಲ ಸಹದೇವ ಈ ಐದು ಜನರಿಗೆ ಪಾಂಡುರಾಜನ ಮಕ್ಕಳಾದ ಕಾರಣ ಪಾಂಡವರು ಎಂದು ಹೆಸರು. ಧರ್ಮರಾಜನಿಗೆ ಯುಧಿಷ್ಠಿರ ಎಂದೂ ಹೆಸರಿದೆ. ಅವನು ಯಮದೇವರ ಅವತಾರಭೂತನು. ಅವನು ಹುಟ್ಟಿದ ಮೇಲೆ ಭೀಮಸೇನದೇವರು ಹುಟ್ಟಿದರು. ಇವರು ವಾಯುದೇವರ ಅವತಾರಭೂತರು. (ಭೃತಾಃ ಮಾಃ ಯೇನಸಃ ಭೀಮ. ಇನೇನ ಸಹ ವರ್ತತ ಇತಿಸೇನಃ ಭೀಮಶ್ಚಾಸೌ ಸೇನಶ್ಚ ಭೀಮಸೇನಃ) ಪ್ರಮಾಣಗಳನ್ನು ತಿಳಿದವರಾದ ಕಾರಣ ಭೀಮ ಎಂದೂ ಸರ್ವಕಾಲದಲ್ಲಿ ಪರಮಾತ್ಮನನ್ನು ಧ್ಯಾನ ಮಾಡುತ್ತಲೇ ಇರುವ ಕಾರಣ ಸೇನ ಎಂದೂ ಒಟ್ಟಿಗೆ ಭೀಮಸೇನ ಎಂದು ಹೆಸರುಳ್ಳವರು. ಇವರ ಒಂದು ವರ್ಷದ ಮೇಲೆ ಅರ್ಜುನನು ಹುಟ್ಟಿದನು. ಅರ್ಜುನನು ಇಂದ್ರದೇವರ ಅವತಾರಭೂತನು. ಇವನಲ್ಲಿ ನರನ ಆವೇಶವಿರುವುದು. ಪರಮಾತ್ಮನ ಆವೇಶವೂ ಇದ್ದಿತು. ನಕುಲನು ಮತ್ತು ಸಹದೇವನು ಅಶ್ವಿನೀದೇವತೆಗಳ ಅವತಾರರು. ಧರ್ಮ ರಾಜ, ಭೀಮ, ಅರ್ಜುನರು ಕುಂತೀದೇವಿಯಲ್ಲಿ ಹುಟ್ಟಿದರು. ನಕುಲಸಹದೇವರು ಮಾದ್ರಿಯಲ್ಲಿ ಹುಟ್ಟಿದರು. ಧರ್ಮರಾಜನಲ್ಲಿ ವಾಯುದೇವರು ಸೌಮ್ಯರೂಪದಿಂದ ಆವಿಷ್ಟರಾಗಿದ್ದರು. ಅರ್ಜುನನಲ್ಲಿ ವೀರರೂಪದಿಂದ ಆವಿಷ್ಟರಾಗಿದ್ದರು. ನಕುಲನಲ್ಲಿ ಶೃಂಗಾರರೂಪದಿಂದಲೂ ಸಹದೇವನಲ್ಲಿ ಸುನೀತಿ ರೂಪದಿಂದಲೂ ಆವಿಷ್ಟರಾಗಿ ದ್ದರು. ವಾಯುದೇವರು ತಾನೇ ಭೀಮಸೇನದೇವರಾಗಿ ಅವತರಿಸಿದ್ದರು. ಕೆಲವು ಪುರಾಣಗಳಲ್ಲಿ ಪಾಂಡವರು ಇಂದ್ರಾವತಾರಭೂತರೆಂದು ಹೇಳಿರುವುದು. ಎರಡನೇ ಮನ್ವಂತರದಲ್ಲಿ ವಾಯುದೇವರೂ, ಮೂರನೇ ಮನ್ವಂತರದಲ್ಲಿ ಯಮದೇವರೂ, ನಾಲ್ಕನೇ ಮತ್ತು ಐದನೇ ಮನ್ವಂತರದಲ್ಲಿ ಅಶ್ವಿನೀದೇವತೆಗಳೂ, ಆರನೇ ಮತ್ತು ಏಳನೇ ಮನ್ವಂತರಗಳಲ್ಲಿ ಪುರಂದರನೂ ಇಂದ್ರರಾಗಿದ್ದರು. ಅವರೇ ಪಾಂಡವರಾಗಿ ಅವತರಿಸಿದ ಕಾರಣ ಆ ಪುರಾಣವಾಕ್ಯಗಳೂ ಸರಿಯಾಗುವುವು. ಈ ಐದು ಪಾಂಡವರಿಗೂ ದ್ರೌಪದೀದೇವಿಯರು ಪತ್ನಿಯು. ದ್ರೌಪದೀದೇವಿಯರಲ್ಲಿ ಧರ್ಮರಾಜನಿಂದ ಪ್ರತಿವಿಂಧ್ಯ ಎಂಬ ಮಗನೂ, ಭೀಮಸೇನದೇವರಿಂದ ಶ್ರುತಸೋಮ ಎಂಬ ಮಗನೂ, ಅರ್ಜುನನಿಂದ ಶ್ರುತಕೀರ್ತಿ ಎಂಬ ಮಗನೂ, ನಕುಲನಿಂದ ಶ್ರುತಾನೀಕನೂ, ಸಹದೇವನಿಂದ ಶ್ರುತಕ್ರಿಯ ಎಂಬ ಮಗನೂ

---

1. ಮ.ಭಾ.ಆ.ಪ.ಅ.1-2, ಮ.ತಾ.ನಿ. ಅ-12

ಹುಟ್ಟಿದರು. ಆ ಮಕ್ಕಳು ಕ್ರಮದಿಂದ ಐದು ಜನರ ವಿಶ್ವೇದೇವತೆಗಳು ಅವರು ಕ್ರಮದಿಂದ ಚಿತ್ರರಥ, ಅಭಿತಾಮ್ರ, ಕಿಶೋರ, ಗೋಪಾಲ, ಬಲ, ಎಂಬ ಗಂಧರ್ವರಿಂದ ಆವಿಷ್ಟರಾಗಿದ್ದರು.

ಧರ್ಮರಾಜನು ಶಿಶುಪಾಲನ ಮಗಳದ ದೇವಕಿಯೆಂಬ ಕನ್ಯೆಯನ್ನು ಮದುವೆಯಾದನು. ಅವಳು ಪೂರ್ವಜನ್ಮದಲ್ಲಿ ಯಮದೇವರ ಪತ್ನಿಯೇ. ಅವಳಲ್ಲಿ ಧರ್ಮರಾಜನಿಂದ ಸುಹೋತ್ರ ಎಂಬ ಮಗನು ಹುಟ್ಟಿದನು. ಸುಹೋತ್ರನು ಪೂರ್ವದಲ್ಲಿ ಚಿತ್ರಗುಪ್ತನೆಂಬ ಲೇಖಕನು.

ಭೀಮಸೇನದೇವರಿಗೆ ಹಿಡಿಂಬಿಯೆಂಬ ಹೆಂಡತಿಯಿದ್ದಳು. ಅವಳು ಇಂದ್ರಲೋಕದ ಅಭಿಮಾನಿನಿಯಾದವಳು. ಇಂದ್ರದೇವರ ಪತ್ನಿಯಾದವಳು. ಶಚೀದೇವಿಯ ಶಾಪದಿಂದ ರಾಕ್ಷಸದೇಹವನ್ನು ಹೊಂದಿದಳು. ಅವಳು ಶಚೀದೇವಿಯ ಶಾಪವನ್ನು ಹೊಂದಿದ ಮೇಲೆ ಭಾರತೀದೇವಿಯರನ್ನು ಕಠಿಣವಾಗಿ ತಪಸ್ಸನ್ನು ಮಾಡಿದಳು. ಆಗ ಭಾರತೀದೇವಿಯರನ್ನು ಕುರಿತು ಕಠಿಣವಾಗಿ ತಪಸ್ಸನ್ನು ಮಾಡಿದಳು. ಆಗ ಭಾರತೀದೇವಿಯರು ಪ್ರಸನ್ನರಾಗಿ ತನ್ನ ಆವೇಶವನ್ನು ತನ್ನ ಪತಿಯ ಸಂಬಂಧದಿಂದ ಶಾಪಪರಿಹಾರವಾಗುವಂತೆಯೂ ವರವನ್ನು ಕೊಟ್ಟರು. ಆದುದರಿಂದ ಹಿಡಿಂಬಿಯಲ್ಲಿ ಭಾರತೀದೇವಿಯರ ಆವೇಶವೂ ಇದ್ದಿತು. ಆ ಹಿಡಿಂಬಿಯಲ್ಲಿ ಘಟೋತ್ಕಚ ಎಂಬ ಮಗನು ಹುಟ್ಟಿದನು. ಘಟೋತ್ಕಚನು ಪೂರ್ವದಲ್ಲಿ ರಾಕ್ಷಸದೇಹವುಳ್ಳ ನಿಋತಿಯೆಂಬ ದೇವತೆಯು. ಅವನಲ್ಲಿ ರುದ್ರದೇವರ ಆವೇಶವೂ ಇದ್ದಿತು.

ಮತ್ತು ಭೀಮಸೇನದೇವರಿಗೆ ಕಾಲೀದೇವಿಯೆಂಬ ಪತ್ನಿಯಿದ್ದರು. ಅವರು ಕೇವಲ ಭಾರತೀದೇವಿಯರ ಅವತಾರಭೂತರು. ಅವರಲ್ಲಿ ಶರ್ವತ್ರಾತ ಎಂಬ ಮಗನು ಹುಟ್ಟಿದನು. ಅವನ ಪೂರ್ವದಲ್ಲಿ ಸಮಾನವಾಯುವು.

ಮತ್ತು ಭೀಮಸೇನದೇವರಿಗೆ ದೇವಿಯೆಂದು ಹೆಸರುಳ್ಳ ರೋಹಿಣಿಯ ಮಗಳು ಪತ್ನಿಯಾಗಿದ್ದಳು. ಅವಳು ಪೂರ್ವದಲ್ಲಿ ರಾಕಾ ಎಂಬ ದೇವತೆಯೂ ಅವಳಲ್ಲಿ ಸರ್ವೋತ್ತುಂಗ ಎಂಬ ಮಗನು ಹುಟ್ಟಿದನು. ಸರ್ವೋತ್ತುಂಗನು ಪೂರ್ವದಲ್ಲಿ ಪ್ರಾಣವಾಯುವು.

ದಿಕ್ಕಿಗೆ ಅಭಿಮಾನಿಗಳಾದ ಮತ್ತು ನೀರಿಗೆ ಅಭಿಮಾನಿಗಳಾದ ದೇವತೆಗಳು ಇಪ್ಪತ್ತು ಜನರು ವಸುದೇವನ ಹೆಣ್ಣುಮಕ್ಕಳಾಗಿ ಇದ್ದರು. ಅವರೂ ಭೀಮಸೇನದೇವರ ಪತ್ನಿಯರಾಗಿದ್ದರು.

ಅರ್ಜುನನಿಗೆ ಸುಭದ್ರೆಯೆಂಬ ಹೆಂಡತಿಯು. ಅವಳು ಪೂರ್ವಜನ್ಮದಲ್ಲಿ ತ್ರಿಜಟೆಯಾಗಿದ್ದಳು. ಅವಳು ಸೀತಾಕೃತಿಯ ಸೇವೆಯನ್ನು ಮಾಡಿದ್ದ ಕಾರಣ ಕೃಷ್ಣಪರಮಾತ್ಮನಿಗೆ ತಂಗಿಯಾಗಿ ಹುಟ್ಟಿದಳು. ಅವಳಲ್ಲಿ ಪಾರ್ವತೀದೇವಿಯ ಆವೇಶವೂ ಇದ್ದಿತು. ಆ ಸುಭದ್ರೆಯಲ್ಲಿ ಅರ್ಜುನನಿಂದ ಅಭಿಮನ್ಯುವೆಂಬ ಮಗನು ಹುಟ್ಟಿದನು. ಅವನು ಪೂರ್ವದಲ್ಲಿ ಬುಧನು. ಚಂದ್ರನ ಆವೇಶವುಳ್ಳವನು. ಯಮ, ವಾಯು, ಇಂದ್ರ, ಅಶ್ವಿನೀದೇವತೆಗಳ ಆವೇಶವುಳ್ಳವನು. ಮತ್ತು ಕೃಷ್ಣಪರಮಾತ್ಮನ ಸನ್ನಿಧಾನವುಳ್ಳವನು.

ಅರ್ಜುನನು ತೀರ್ಥಯಾತ್ರೆಗೆ ಹೋಗುವಾಗ ಉಲೂಪಿಯೆಂಬ ನಾಗ ಕನ್ಯೆಯ ಗಂಡನು ಗರುಡದೇವರಿಂದ ಭಕ್ಷಿತನಾಗಿದ್ದನು. ಆದರಿಂದ ಅವಳ ತಂದೆಯು ಅರ್ಜುನನೊಡನೆ ಪ್ರಾರ್ಥಿಸಲು ಅರ್ಜುನನು ಅವಳಲ್ಲಿ ಇರಾವಂತನೆಂದು ಹೆಸರುಳ್ಳ ಮಗನನ್ನು ಹುಟ್ಟಿಸಿದನು. (ಇರಾವಾನ್)

ಮತ್ತು ವೀರಸೇನರಾಜನ ಮಗಳಾದ ಚಿತ್ರಾಂಗದೆಯನ್ನು ಅರ್ಜುನನು ಮದುವೆಯಾದನು. ಚಿತ್ರಾಂಗದೆಯು ಪೂರ್ವದಲ್ಲಿ ಶಚೀದೇವಿಯು ಅವಳಲ್ಲಿ ಬಭ್ರುವಾಹನ ಎಂಬ ಮಗನು ಹುಟ್ಟಿದನು. ಬಭ್ರುವಾಹನನು ಪೂರ್ವದಲ್ಲಿ ಜಯಂತನು. ಅವನಲ್ಲಿ ಕಾಮದೇವನ ಆವೇಶವಿದ್ದಿತು.

ನಕುಲನಿಗೆ ಪಾರ್ವತಿಯೆಂಬ ಹೆಂಡತಿಯಿದ್ದಳು. ಅವಳು ಪೂರ್ವದಲ್ಲಿ ತಿಲೋತ್ತಮೆಯೆಂಬ ಅಪ್ಸರಸ್ತ್ರೀಯು. ಮತ್ತು ಶಲ್ಯನ ಮಗಳೂ ಅವನ ಪತ್ನಿಯು. ಅವಳು ಪೂರ್ವದಲ್ಲಿ ಅಶ್ವಿನೀದೇವತೆಗಳ ಪತ್ನಿಯಾದ ಉಷಾದೇವಿಯು.

ಸಹದೇವನಿಗೆ ಜರಾಸಂಧನ ಮಗಳು ಹೆಂಡತಿಯು. ಅವಳೂ ಪೂರ್ವದಲ್ಲಿ ಅಶ್ವಿನೀದೇವತೆಗಳ ಹೆಂಡತಿಯಾದ ಉಷಾದೇವಿಯೇ.



---

**ವಿ.ಸೂ. : ಪಾಂಡವರ ಬಗ್ಗೆ ಆದಿಪರ್ವವಲ್ಲದೆ ಮುಂದಿನ ಸಭಾ, ಅರಣ್ಯ, ವಿರಾಟ, ಉದ್ಯೋಗ-ಯುದ್ಧ ಪರ್ವಗಳು, ಅಲ್ಲದೆ ಸ್ವರ್ಗಾರೋಹಣ ಪರ್ವದವರೆಗೆ ಅವರ ಇತಿಹಾಸ ಅಲ್ಲಲ್ಲಿ ವಿಶದವಾಗಿ ಬಂದಿದೆ.**

# ದ್ರೌಪದೀದೇವಿಯರು

ದ್ರೌಪದೀದೇವಿಯರು ದ್ರುಪದರಾಜನ ಮಗಳು. ದ್ರುಪದರಾಜನು ಬಾಲ್ಯದಲ್ಲಿ ದ್ರೋಣಾಚಾರ್ಯರೊಡನೆ ಅವರ ತಂದೆಯಾದ ಭರದ್ವಾಜ ಋಷಿಗಳಲ್ಲಿ ವಿದ್ಯಾಭ್ಯಾಸವನ್ನು ಮಾಡಿದ್ದನು. ವಿದ್ಯಾಭ್ಯಾಸಕಾಲದಲ್ಲಿ ದ್ರುಪದರಾಜನು ದ್ರೋಣಾಚಾರ್ಯರೊಡನೆ 'ನಾನು ರಾಜನ ಮಗನು. ನನಗೆ ರಾಜ್ಯವು ಸಿಗುವುದು. ರಾಜ್ಯವು ಸಿಕ್ಕಿದ ಮೇಲೆ ನಾವಿಬ್ಬರೂ ಅರ್ಧ ಅರ್ಧ ರಾಜ್ಯವನ್ನು ಅನುಭವಿಸುವ' ಎಂದು ಹೇಳಿದ್ದನು. ತರುವಾಯ ದ್ರುಪದರಾಜನಿಗೆ ರಾಜ್ಯವು ಸಿಕ್ಕಿದ ಮೇಲೆ ದ್ರೋಣಾಚಾರ್ಯರು ತನ್ನ ಮಗನಾದ ಅಶ್ವತ್ಥಾಮಾಚಾರ್ಯರಿಗೆ ಹಾಲು ಕುಡಿಸುವುದಕ್ಕಾಗಿ ಒಂದು ದನವನ್ನು ಸಂಪಾದಿಸಬೇಕು ಎಂಬ ಅಭಿಪ್ರಾಯದಿಂದ ದ್ರುಪದರಾಜನಿದ್ದಲ್ಲಿಗೆ ಹೋದರು. ತಾನು ಬಾಲ್ಯದ ಸ್ನೇಹಿತನು ಬಂದಿರುವೆನೆಂದು ದ್ರುಪದರಾಜನಿಗೆ ಹೇಳಿಕಳುಹಿಸಿದರು. ದ್ರುಪದರಾಜನು 'ದರಿದ್ರ ಬ್ರಾಹ್ಮಣನು ರಾಜನ ಮಿತ್ರನಾಗಲಾರನು. ಬಂದಂತೆಯೇ ಹಿಂದೆಹೋಗು' ಎಂದು ಹೇಳಿ ಕಳುಹಿಸಿದನು. ಇದರಿಂದ ದ್ರೋಣಾಚಾರ್ಯರು ಕುಪಿತರಾಗಿ ತನ್ನ ಶಿಷ್ಯರಿಂದ ದ್ರುಪದರಾಜನನ್ನು ಬಂಧಿಸಬೇಕೆಂದು ಅಭಿಪ್ರಾಯದಿಂದ ಕೌರವಪಾಂಡವರು ಇದ್ದಲ್ಲಿಗೆ ಹೋಗಿ ಅವರನ್ನು ಶಿಷ್ಯರನ್ನಾಗಿ ಮಾಡಕೊಂಡು ಅವರೊಡನೆ ತನಗೆ ಗುರುದಕ್ಷಿಣೆಯ ಬದಲಾಗಿ ದ್ರುಪದರಾಜನನ್ನು ಕಟ್ಟಿ ತಂದುಕೊಡಬೇಕೆಂದು ಹೇಳಿದರು.

ಆಗ ಕೌರವರೂ ಪಾಂಡವರೂ ದ್ರುಪದರಾಜನೊಡನೆ ಯುದ್ಧಕ್ಕೆ ಹೋದರು. ಕೌರವರಿಂದ ದ್ರುಪದರಾಜನನ್ನು ಜಯಿಸಲು ಸಾಧ್ಯವಾಗಲಿಲ್ಲ. ಅವರೇ ಪೆಟ್ಟು ತಿಂದು ಹಿಂದೆ ಓಡಿಬಂದರು. ತರುವಾಯ ಭೀಮಾರ್ಜುನರು ಹೋಗಿ ಯುದ್ಧ ಮಾಡಿದರು. ಅರ್ಜುನನು ಯುದ್ಧದಲ್ಲಿ ದ್ರುಪದರಾಜನನ್ನು ಸೆರೆಹಿಡಿದನು. ಭೀಮಸೇನದೇವರು ಸೈನಿಕರನ್ನು ಸಂಹರಿಸುತ್ತಿದ್ದರು. ಆಗ ಅರ್ಜುನನು ಭೀಮಸೇನ ದೇವರೊಡನೆ 'ಈ ರಾಜನ ಸೇನೆಯನ್ನು ಸಂಹರಿಸುವುದು ಬೇಡ. ಈ ರಾಜನು ಧರ್ಮಿಷ್ಠನು. ತಮ್ಮ ತಂದೆಗಳಿಗೆ ಮಿತ್ರನಾದವನು. ನಮಗೆ ಸಂಬಂಧವನ್ನು ಮಾಡಲಿಕ್ಕೆ ಯೋಗ್ಯನು' ಎಂದು ಹೇಳಿದನು. ಆಗ ಭೀಮಸೇನದೇವರು ಸೈನ್ಯವನ್ನು ಕೊಲ್ಲುವುದನ್ನು ಬಿಟ್ಟುಬಿಟ್ಟರು. ದ್ರುಪದರಾಜನು ಅರ್ಜುನನ ಮೃದುಸ್ವಭಾವವನ್ನು

1. ಮ.ತಾ.ನಿ. ಅ-2, 18 ರಿಂದ 23, 30-32

ನೋಡಿ ಅರ್ಜುನನಲ್ಲಿ ಸ್ನೇಹವನ್ನು ಮಾಡಿದನು. ತರುವಾಯ ಭೀಮಾರ್ಜುನರು ದ್ರುಪದರಾಜನನ್ನು ಕಟ್ಟಿ ದ್ರೋಣಾಚಾರ್ಯರ ಬಳಿಗೆ ಕರೆದುಕೊಂಡು ಹೋದರು. ದ್ರೋಣಾಚಾರ್ಯರು ದ್ರುಪದರಾಜನೊಡನೆ 'ಈಗ ನಿನಗೆ ನನ್ನಲ್ಲಿ ಸ್ನೇಹವಿದೆಯೋ ಇಲ್ಲವೋ ಎಂದು ಕೇಳಿದರು. ಆಗ ದ್ರುಪದರಾಜನು ಈಗ ಇದೆ' ಎಂದನು. ಅದಕ್ಕೆ ದ್ರೋಣಾಚಾರ್ಯರು 'ನನಗೆ ನಿನ್ನ ಸ್ನೇಹವು ಬೇಕಾಗಿದೆ. ನಾನು ರಾಜನಾಗದೆ ಇದ್ದರೆ ನಿನ್ನ ಸ್ನೇಹವು ಕೂಡಲಾರದು. ಇಬ್ಬರಿಗೂ ರಾಜ್ಯವಿದ್ದರೆ ಮಾತ್ರ ಇಬ್ಬರಿಗೂ ಸ್ನೇಹವು ಕೂಡುವುದು. ಆದುದರಿಂದ ನಿನ್ನ ಅರ್ಧರಾಜ್ಯವನ್ನು ಅಪಹರಿಸಿರುವೆನು. ಗಂಗೆಯ ದಕ್ಷಿಣಪಾರ್ಶ್ವದಲ್ಲಿ ಕಾಂಪಿಲ್ಯನಗರದಲ್ಲಿ ನೀನು ರಾಜನಾಗಿರು. ಉತ್ತರಭಾಗದಲ್ಲಿ ಅಹಿಚ್ಛತ್ರದಲ್ಲಿ ನಾನು ರಾಜನಾಗಿರುವೆನು' ಎಂದು ಹೇಳಿ ಅರ್ಧರಾಜ್ಯವನ್ನು ಅಪಹರಿಸಿ ಅವನನ್ನು ಕಳುಹಿಸಿದರು.

ದ್ರುಪದರಾಜನು ಅರ್ಜುನನ ಮೃದುಸ್ವಭಾವವನ್ನು ನೋಡಿ ಅವನ ಮೇಲೆ ವಿಶ್ವಾಸವುಳ್ಳವನಾಗಿ ಅರ್ಜುನನು ಭೀಮಸೇನದೇವರೊಡನೆ 'ಇವನು ಸಂಬಂಧ ಮಾಡಲಿಕ್ಕೆ ಯೋಗ್ಯನು' ಎಂದು ಹೇಳಿದ ಮಾತನ್ನು ಸತ್ಯವನ್ನಾಗಿ ಮಾಡಬೇಕೆಂಬ ಅಭಿಪ್ರಾಯದಿಂದ ಅರ್ಜುನನಿಗೆ ಮದುವೆ ಮಾಡಿಕೊಡಲಿಕ್ಕೆ ಒಂದು ಹೆಣ್ಣು ಮಗಳನ್ನೂ, ದ್ರೋಣಾಚಾರ್ಯರನ್ನು ಸಂಹರಿಸುವ ಗಂಡುಮಗನನ್ನು ಪಡೆಯ ಬೇಕೆಂದು ಅಭಿಪ್ರಾಯವುಳ್ಳವನಾಗಿ ಯಾಜೋಪಯೋಜರೆಂದು ಹೆಸರುಳ್ಳ ಇಬ್ಬರು ಬ್ರಾಹ್ಮಣರನ್ನು ಅರ್ಬುದ ಗೋವುಗಳನ್ನು ಕೊಟ್ಟು ಕರೆದುಕೊಂಡು ಬಂದನು. ಆ ಯಾಜೋಪಯಾಜರಿಂದ ಒಂದು ಇಷ್ಟಿಯನ್ನು ಮಾಡಿದನು. ಇಷ್ಟಿಯು ಮುಗಿದಮೇಲೆ ಯಾಜೋಪಯಾಜರು ಹವಿಸ್ಸಿನ ಶೇಷವನ್ನು ದ್ರುಪದರಾಜನ ಪತ್ನಿಗೆ ಕೊಡಬೇಕೆಂದು ಅವಳನ್ನು ಕರೆದಳು. ಆಗ ದ್ರುಪದರಾಜನ ಪತ್ನಿಯು ಈ ಬ್ರಾಹ್ಮಣರು ಯಾಗ ಮಾಡಿದರೂ ಮಕ್ಕಳಾಗಬೇಕಾದರೆ ನಾನು ಬೇಕೇ ಬೇಕಲ್ಲವೇ ಎಂದು ಅಹಂಕಾರದಿಂದ ಸಾವಕಾಶ ಮಾಡಿದಳು. ಆಗ ಯಾಜೋಪಯಾಜರು ಇವಳಿಂದ ಏನಾಗಬೇಕು ಎಂದು ತಿರಸ್ಕಾರಮಾಡಿ ದ್ರುಪದರಾಜನ ಪತ್ನಿಯು ತಿನ್ನಬೇಕಾದ ಹವಿಸ್ಸನ್ನು ಹೋಮದಲ್ಲಿಯೇ ಹಾಕಿಬಿಟ್ಟರು. ಭಗವಂತನ ವಿಷಯಕ ಗಳಾದ ಮಂತ್ರಗಳಿಂದ ಹೋಮಮಾಡಲು ಕಿರೀಟಕುಂಡಲಗಳನ್ನು ಧರಿಸಿಕೊಂಡು ಖಡ್ಗವನ್ನು ಹಿಡಿದುಕೊಂಡು ಸೂರ್ಯನಂತೆ ಪ್ರಕಾಶಿಸುವ ರಥದಲ್ಲಿ ಕೂತುಕೊಂಡು ಅಗ್ನಿದೇವರೇ ಒಂದು ರೂಪದಿಂದ ಹೋಮ ಮಧ್ಯದಿಂದ ದ್ರುಪದರಾಜನಿದ್ದಲ್ಲಿಗೆ ಓಡಿಬಂದರು. ದ್ರುಪದರಾಜನೂ ಎಲ್ಲಾ ಮುನಿಗಳೂ ಅವನು ಧೈರ್ಯಶಾಲಿಯಾದ

ಪ್ರಯುಕ್ತವೂ ಪ್ರಕಾಶಮಾನನಾಗಿದ್ದ ಪ್ರಯುಕ್ತವೂ ಅವನನ್ನು ಧೃಷ್ಟದ್ಯುಮ್ನ ಎಂದು ಕರೆದರು.

ಧೃಷ್ಟದ್ಯುಮ್ನನ ಅನಂತರದಲ್ಲಿ ಭಾರತೀದೇವಿಯರೇ ಯಜ್ಞಕುಂಡದಿಂದ ಮೇಲಕ್ಕೆ ಬಂದರು. ವಾಯುದೇವರಿಗೆ ಸರ್ವವನ್ನು ಧರಿಸಿರುವ ಕಾರಣ ಭರತ ಎಂದು ಹೆಸರು. ಅವರ ಪತ್ನಿಗೆ ಭಾರತೀ ಎಂದು ಹೆಸರು. ಅವರು ಸುಖರೂಪಿ ಯಾದ ವಾಯುದೇವರನ್ನು ಆಶ್ರಯಿಸಿರುವ ಕಾರಣ ಅವರಿಗೆ ಶ್ರೀ ಎಂಬ ಹೆಸರೂ ಇರುತ್ತದೆ. ಅವರಲ್ಲಿ ಶಚೀ, ಶ್ಯಾಮಲಾ, ಉಷಾ, ಪಾರ್ವತೀಯರ ಆವೇಶವೂ ಇರುತ್ತದೆ. ಅವರಿಗೂ ಇಂದ್ರ, ಯಮ, ಅಶ್ವಿನೀದೇವತೆಗಳು ರುದ್ರದೇವರು ಇವರ ಪತ್ನಿಯರಾದ ಪ್ರಯುಕ್ತ ಇವರನ್ನು ಆಶ್ರಯಿಸಿರುವ ಕಾರಣ ಶ್ರೀ ಎಂಬ ಹಸರೇ ಇದ್ದಿರುತ್ತದೆ. ಈರೀತಿ ಆ ನಾಲ್ಕು ದೇವಿಯರ ಆವೇಶವುಳ್ಳವರಾಗಿ ಭಾರತೀ ದೇವಿಯರು ದ್ರುಪದರಾಜನಿಗೆ ಮಗಳಾಗಿ ಅವತರಿಸಿದರು. ಅವರಿಗೆ ದ್ರುಪದರಾಜನ ಮಗಳಾದ ಪ್ರಯುಕ್ತ ದ್ರೌಪದಿ ಎಂದು ಹೆಸರು. ಅವರಿಗೇ ಕೃಷ್ಣಾ ಎಂಬ ಹೆಸರೂ ಇದ್ದಿತು. ಅವರು ಕಪ್ಪುಬಣ್ಣವುಳ್ಳವರಾಗಿದ್ದ ಕಾರಣವೂ ಸ್ತ್ರೀಯರಲ್ಲಿ ಉತ್ಕೃಷ್ಟರಾಗಿದ್ದ ಕಾರಣವೂ ಉತ್ಕೃಷ್ಟ ಆನಂದಉಳ್ಳವರಾದ ಪ್ರಯುಕ್ತವೂ ಅವರಿಗೆ ಕೃಷ್ಣಾ ಎಂಬ ಹೆಸರು ಸರಿಯಾಗಿ ಇತ್ತು. ಅವರು ಹುಟ್ಟುವಾಗಲೇ ಸರ್ವಜ್ಞರಾಗಿದ್ದರು. ಸರ್ವಾಭರಣಗಳಿಂದ ಅಲಂಕೃತರಾಗಿದ್ದರು. ಲೋಕದಲ್ಲಿ ಪರಮಸುಂದರಿಯಾಗಿ ದ್ದರು. ಮುದಿತನ ರಹಿತರಾಗಿದ್ದರು. ಸರ್ವಲಕ್ಷಣವುಳ್ಳವರಾಗಿದ್ದರು.

ಪೂರ್ವದಲ್ಲಿ ಒಂದು ಸಮಯದಲ್ಲಿ ಪಾರ್ವತೀ, ಶಚೀ, ಶ್ಯಾಮಲಾ, ಉಷಾದೇವಿಯರು ತಮ್ಮ ಪತಿಗಳಿಂದ ಸಹಿತರಾಗಿ ಇದ್ದುಕೊಂಡು ಬ್ರಹ್ಮದೇವರ ಸಭೆಯಲ್ಲಿ ಬ್ರಹ್ಮದೇವರು ನೋಡುವಂತೆ ವಿಲಾಸವನ್ನು ತೋರಿಸಿದರು. ಇದನ್ನು ನೋಡಿ ಬ್ರಹ್ಮದೇವರು ಕೋಪಿಸಿಕೊಂಡು ನೀವು ಮನುಷ್ಯರಾಗಿ ಹುಟ್ಟಿರಿ. ಅಲ್ಲಿ ಪರಪುರುಷರ ಸ್ಪರ್ಶವುಳ್ಳವರಾಗಿರಿ ಎಂದು ಶಾಪವನ್ನು ಕೊಟ್ಟರು. .ಮತ್ತು ಅದಕ್ಕಿಂತ ಪೂರ್ವದಲ್ಲಿ ಆ ನಾಲ್ಕು ದೇವಿಯರೂ ಒಂದೇ ದೇಹದಲ್ಲಿ ಇದ್ದುಕೊಂಡು 'ಬ್ರಹ್ಮದೇವರಿಗೆ ತಾವು ಒಂದೇ ದೇಹದಲ್ಲಿ ನಾಲ್ಕು ಜನರು ಇರುವುದು ತಿಳಿಯುತ್ತದೋ ಇಲ್ಲವೋ ಎಂದು ಪರೀಕ್ಷಿಸಬೇಕೆಂದು ಮೂರು ಬಾರಿ ಬ್ರಹ್ಮದೇವರ ಬಳಿಗೆ ಬಂದಿದ್ದರು. ಬ್ರಹ್ಮದೇವರು ಕೊನೆಗೆ 'ನೀವು ನನ್ನನ್ನು ಮೂರು ಬಾರಿ ಒಂದೇ ದೇಹದಲ್ಲಿ ಇದ್ದುಕೊಂಡು ನನ್ನನ್ನು ಮೋಸಮಾಡಲಿಕ್ಕೆ ಬಂದಿರಿ. ಆದುದರಿಂದ ನಾವು ಮೂರುಬಾರಿ ಒಂದೇ ದೇಹದಲ್ಲಿ ಇರುವವರಾಗಿ ಮನುಷ್ಯರಾಗಿ ಹುಟ್ಟಿರಿ ಎಂದು

ಶಾಪವನ್ನು ಕೊಟ್ಟರು.

ಈರೀತಿಯಾಗಿ ಶಾಪವನ್ನು ಹೊಂದಿದ ಆ ಸ್ತ್ರೀಯರು ಯೋಚಿಸಿ ಭಾರತೀದೇವಿಯರ ಸಮೀಪಕ್ಕೆ ಬಂದರು. ಅವರನ್ನು ಸಾವಿರವರ್ಷ ಸೇವಾಮಾಡಿ ಆಮೇಲೆ ಅವರ ಹತ್ತಿರ ಮಾತಾಡಿದರು. 'ದೇವಿ! ನಮಗೆ ಮನುಷ್ಯಜನ್ಮವು ಬರಬೇಕಾಗಿದೆ. ಅದರಲ್ಲಿ ಇತರ ಪುರುಷರ ಸ್ಪರ್ಶವಾಗಬೇಕಾಗಿದೆ. ಹೀಗೆ ನಮಗೆ ಬ್ರಹ್ಮದೇವರ ಶಾಪವಿದೆ. ಆದರೆ ನಾವು ವಾಯುದೇವರನ್ನು ಹೊರತು ಇತರರ ಸ್ಪರ್ಶವನ್ನು ಮಾಡಲಾರೆವು. ನಮಗೆ ಬ್ರಹ್ಮದೇವರ ಎರಡು ಶಾಪದಿಂದ ನಾಲ್ಕು ಜನ್ಮಗಳು ಭೂಮಿಯಲ್ಲಿ ಆಗಬೇಕಾಗಿದೆ. ನಿಮ್ಮನ್ನು ವಾಯುದೇವರು ಹೊರತು ಇನ್ನೊಬ್ಬರು ಹೊಂದಲಿಕ್ಕೆ ಆಗಲಾರದು. ಹೀಗೆ ನಿಯಮವಿದೆ. ಆದುದರಿಂದ ನಾವು ನಾಲ್ಕು ಜನ್ಮಗಳಲ್ಲಿಯೂ ನಿಮ್ಮ ಸಹಿತರಾಗಿಯೇ ಒಂದು ದೇಹದಲ್ಲಿ ಇರಬೇಕು ಎಂದು ಅಪೇಕ್ಷಿಸುತ್ತೇವೆ'. ಈರೀತಿಯಾಗಿ ಹೇಳಲು ಭಾರತೀದೇವಿಯರು ಪಾರ್ವತ್ಯಾದಿ ದೇವಿಯರಿಂದ ಕೂಡಿಕೊಂಡು ಬ್ರಾಹ್ಮಣಕನ್ಯೆಯಾಗಿ ಹುಟ್ಟಿದರು. ಆ ಕನ್ಯಾದೇಹದಲ್ಲಿ ನಾಲ್ಕು ದೇವಿಯರೂ ಇದ್ದುಕೊಂಡು ರುದ್ರದೇವರ ತಪಸ್ಸನ್ನು ಮಾಡಿದರು. ಅಲ್ಲಿದ್ದ ಭಾರತೀದೇವಿಯರೂ ಇತರ ನಾಲ್ಕು ದೇವಿಯರು ಮಾಡಿದಂತೆ ತಾನೂ ಮಾಡಬೇಕೆಂದು ರುದ್ರಾಂತರ್ಯಾಮಿ ಪರಮಾತ್ಮನನ್ನು ಕುರಿತು ತಪಸ್ಸು ಮಾಡಿದರು. ತರುವಾಯ ರುದ್ರದೇವರು ಪ್ರತ್ಯಕ್ಷರಾದರು. ಭಾರತೀ ದೇವಿಯರಿಗೆ ರುದ್ರಾಂತರ್ಯಾಮಿಯಾದ ಪರಮಾತ್ಮನು 'ಪತಿಯಿಂದ ಕೂಡಿ ಕೊಂಡು ಪ್ರತಿಯೊಂದು ಜನ್ಮದಲ್ಲಿಯೂ ಶ್ರೀಭಗವಂತನನ್ನು ಸಂತೋಷಪಡಿಸು' ಎಂದು ವರವನ್ನು ಕೊಟ್ಟರು. ಇತರ ನಾಲ್ಕು ಜನರಿಗೂ ರುದ್ರದೇವರೇ ಮನುಷ್ಯ ಜನ್ಮಗಳಲ್ಲಿಯೂ ನಿಮ್ಮ ನಿಮ್ಮ ಪತಿಗಳ ಸಂಬಂಧವು ಆಗಲಿ ಎಂದು ವರವನ್ನು ಕೊಟ್ಟರು.

ತರುವಾಯ ಆ ದೇವಿಯರು ಆ ದೇಹವನ್ನು ಬಿಟ್ಟು ನಳರಾಯನ ಮಗಳಾಗಿ ಹುಟ್ಟಿದರು. ಆಮೇಲೆ ಇಂದ್ರಸೇನಾ ಎಂಬ ಹೆಸರಿನಿಂದ ಹುಟ್ಟಿದರು. ಆ ಸಮಯ ದಲ್ಲಿ ಮುದ್ಗಲರೆಂಬ ಋಷಿಗಳಿದ್ದರು. ಅವರು ಕಥೆಯನ್ನು ಕೇಳುವಾಗ ಮಧ್ಯದಲ್ಲಿ ಬ್ರಹ್ಮದೇವರು ತನ್ನ ಮಗಳಾದ ಸರಸ್ವತೀದೇವಿಯನ್ನು ಮದುವೆಯಾದರು ಅನ್ನುವ ಕಥೆಯನ್ನು ಕೇಳಿದರು. ಆಗ ಬ್ರಹ್ಮದೇವರನ್ನು ಅಪಹಾಸ ಮಾಡಿದರು. ಇದರಿಂದ ಬ್ರಹ್ಮದೇವರು ಕೋಪಿಸಿಕೊಂಡು ನೀನು ಭಾರತ್ಯಾದಿದೇವಿಯರನ್ನು ನಿನ್ನ ಅನರ್ಥ ಕ್ಕಾಗಿ ಮದುವೆಯಾಗು ಎಂದು ಶಾಪವನ್ನು ಕೊಟ್ಟರು. ಆಗ ಮುದ್ಗಲರು ಬ್ರಹ್ಮದೇವ

ರನ್ನು ತಪಸ್ಸುಮಾಡಿ ಸಂತೋಷಪಡಿಸಿದರು. ಆಮೇಲೆ ಬ್ರಹ್ಮದೇವರು ಅವರಿಗೆ ಅನುಗ್ರಹ ಮಾಡಿದರು. 'ನೀನು ಆ ದೇವಿಯರನ್ನು ಹೊಂದುವುದಲ್ಲ. ನಿನ್ನ ದೇಹ ದಲ್ಲಿರುವ ವಾಯುದೇವರು ಹೊಂದುವರು. ಆ ಸಮಯದಲ್ಲಿ ನೀನು ಮೂರ್ಛಿತ ನಾಗಿ ಒಂದೂ ತಿಳಿಯುವುದಿಲ್ಲ. ನಿನಗೆ ಇದರಿಂದ ಪಾಪವೂ ಸಂಭವಿ ಸುವುದಿಲ್ಲ' ಎಂದು ಹೇಳಿದರು. ತರುವಾಯ ಮುದ್ಗಲರಲ್ಲಿ ವಾಯುದೇವರನ್ನು ಪ್ರವೇಶಿಸಿ ಇಂದ್ರಸೇನಾದೇವಿಯನ್ನು ಮದುವೆಯಾಗಿ ಸುಖವಾಗಿ ಕೆಲವು ಸಮಯವಿದ್ದರು. ಆಮೇಲೆ ವಾಯುದೇವರು ಮುದ್ಗಲರನ್ನು ಎಬ್ಬಿಸಿ ತಾನು ಹೊರಟುಹೋದರು. ಮುದ್ಗಲರು ತನ್ನ ಮನೆಯನ್ನು ಬಿಟ್ಟು ದೇಶಾಂತರಕ್ಕೆ ಹೋಗಿ ತಪಸ್ಸು ಮಾಡಿದರು.

ಇಂದ್ರಸೇನಾದೇವಿಯರು ಪತಿಯ ವಿಯೋಗವುಳ್ಳವರಾಗಿ ಮಹಾತಪಸ್ಸು ಮಾಡಿದರು. ಪಾರ್ವತ್ಯಾದಿ ನಾಲ್ಕು ದೇವಿಯರು ರುದ್ರದೇವರ ತಪಸ್ಸನ್ನು ಮಾಡಿದರು. ಭಾರತೀದೇವಿಯರು ರುದ್ರದೇವರಲ್ಲಿ ಇರುವ ಪರಮಾತ್ಮನ ತಪಸ್ಸು ಮಾಡಿದರು. ತರುವಾಯ ರುದ್ರದೇವರೂ ರುದ್ರದೇವರಲ್ಲಿ ಇರುವ ಪರಮಾತ್ಮನು ಪ್ರತ್ಯಕ್ಷರಾಗಲು ಒಂದೇ ದೇಹದಲ್ಲಿ ಇದ್ದ ಐದು ದೇವಿಯರೂ ಪತಿಯನ್ನು ಕೊಡಿ ಎಂದು ಹೇಳಿದರು. ಐದು ಜನರು ಹೇಳಿದ್ದು ಐದು ಬಾರಿ ಹೇಳಿದ್ದಾಯಿತು. ಭಾರತೀದೇವಿಯರಿಗೆ ರುದ್ರದೇವರ ದೇಹದಲ್ಲಿದ್ದ ಭಗವಂತನೂ ಇತರ ದೇವಿಯರಿಗೆ ರುದ್ರದೇವರೂ ಪತಿಗಳನ್ನು ಕೊಟ್ಟರು. ರುದ್ರದೇವರಲ್ಲಿ ಇದ್ದ ಭಗವಂತನೂ ರುದ್ರದೇವರೂ ನಿನಗೆ ಐದು ಜನ ಪತಿಗಳು ಆಗುವರು ಎಂದು ವರವನ್ನು ಕೊಟ್ಟರು. ಭಾರತೀದೇವಿಯರಿಗೆ ಅಜ್ಞಾನವಿಲ್ಲ. ಇತರ ದೇವಿಯರು ಮಾತ್ರ ಒಂದೇ ದೇಹದಲ್ಲಿ ಇದ್ದ ಪ್ರಯುಕ್ತ ನಾನೊಬ್ಬನೇ ಈ ದೇಹದಲ್ಲಿ ಇರುವುದು ಎಂದು ತಿಳಿದುಕೊಂಡು ತನಗೊಬ್ಬಳಿಗೆ ಐದು ಪತಿಗಳಾಗುವಂತೆ ರುದ್ರದೇವರು ಹೇಳಿದರು ಎಂದು ತಿಳಿದುಕೊಂಡು ಅಳಲಿಕ್ಕೆ ಆರಂಭಿಸಿದರು. ಆಗ ಅಲ್ಲಿಗೆ ಇಂದ್ರದೇವರು ಬಂದರು. ಇಂದ್ರದೇವರು ಅಳುತ್ತಿರುವ ಆ ಸ್ತ್ರೀಯನ್ನು ನೋಡಿ ಯಾಕೆ ಅಳುತ್ತಿರುವಿ ಎಂದು ಕೇಳಿದರು. ಆಗ ಆ ದೇವಿಯು ಬ್ರಹ್ಮಚಾರಿರೂಪದಿಂದ ಬಂದಿರುವ ರುದ್ರದೇವರನ್ನು ತೋರಿಸಿ ನಾನು ವರವನ್ನು ಕೊಡಬೇಕೆಂದು ಪ್ರಾರ್ಥಿಸಿದ್ದಕ್ಕೆ ಇವರು ಐದು ಪತಿಗಳಾಗುವಂತೆ ಹೇಳಿದರು ಎಂದು ಹೇಳಿದರು. ಆಗ ಇಂದ್ರದೇವರು ರುದ್ರದೇವರು ಎಂಬ ವಿಷಯವನ್ನು ತಿಳಿಯದೆ ಗಟ್ಟಿಯಾಗಿ 'ನನ್ನಿಂದ ರಕ್ಷಿತವಾದ ಈ ಮೂರು ಲೋಕದಲ್ಲಿ ಈ ಸ್ತ್ರೀಗೆ ವ್ಯರ್ಥವಾಗಿ ಏಕೆ ಶಾಪಕೊಟ್ಟಿರುವಿ? ದುರ್ಬುದ್ಧಿಯುಳ್ಳವನೇ' ಎಂದು ಕೇಳಿದರು. ಅದಕ್ಕೆ

ರುದ್ರದೇವರು 'ನೀನೂ ಮನುಷ್ಯನಾಗಿ ಹುಟ್ಟು. ಆಗ ನೀನು ಇವಳಿಗೆ ಗಂಡನಾಗುವಿ. ಇವಳು ನಿನ್ನನ್ನೇ ವರಿಸುವಳು. ನಿನ್ನಂತೆಯೇ ನನ್ನನ್ನು ಯಾರು ಎಂದು ತಿಳಿಯದೆ ಎಷ್ಟು ಜನರು ಈ ಪರ್ವತದ ಕೆಳಗೆ ಬಿದ್ದಿರುವರು ಎಂದು ನೋಡು' ಎಂದರು. ಇಂದ್ರದೇವರು ಕೈಲಾಸಪರ್ವತವನ್ನು ಎತ್ತಿ ನೋಡಿದರು. ಪರ್ವತದ ಕೆಳಗೆ ಪೂರ್ವದಲ್ಲಿ ಇಂದ್ರಪದವಿಯನ್ನು ಆಳಿದವರಾದ ವಾಯುದೇವರು ಯಮದೇವರು ಅಶ್ವಿನೀದೇವತೆಗಳು ಎಂಬ ನಾಲ್ಕು ದೇವತೆಗಳು ಮನುಷ್ಯಲೋಕದಲ್ಲಿ ಅವತಾರಮಾಡಲು ರಹಸ್ಯವಾಗಿ ಯೋಚನೆ ಮಾಡುತ್ತಿರುವುದನ್ನು ನೋಡಿದರು. ಇಂದ್ರದೇವರು ರುದ್ರದೇವರು ಹೇಳಿದಂತೆ ರುದ್ರದೇವರ ಆಜ್ಞಾನದಿಂದ ಅಲ್ಲಿ ಬದ್ಧರಾಗಿರುವರು ಎಂದೇ ಭ್ರಮಿಸಿಕೊಂಡು ಭಗವಂತನನ್ನು ತಪಸ್ಸುಮಾಡಿ ಅವನ ಅನುಗ್ರಹದಿಂದ ನರಾವೇಶವುಳ್ಳವರಾಗಿ ಭೂಮಿಯಲ್ಲಿ ಅರ್ಜುನನಾಗಿ ಹುಟ್ಟಿದರು.

ತರುವಾಯ 'ನನ್ನ ತಿರಸ್ಕಾರದಿಂದ ಕೆಳಗೆ ಬಿದ್ದಿರುವರು' ಎಂದು ರುದ್ರದೇವರು, ವಾಯುದೇವರೇ ಮೊದಲಾದವರು ತನ್ನ ತಿರಸ್ಕಾರದಿಂದ ಕೈಲಾಸಪರ್ವತದ ಕೆಳಗೆ ಇರುವರೆಂದು ಇಂದ್ರದೇವರೊಡನೆ ಸುಳ್ಳು ಹೇಳಿದರೆಂದು ಬ್ರಹ್ಮದೇವರು ರುದ್ರದೇವರಿಗೆ 'ನೀನು ಬೇಗನೆ ಮನುಷ್ಯನಾಗಿ ಹುಟ್ಟಿ ಯಾವ ಇಂದ್ರನೊಡನೆ ಸುಳ್ಳು ಹೇಳಿದಿಯೋ ಅದೇ ಮನುಷ್ಯನಾಗಿ ಹುಟ್ಟಿದ ಇಂದ್ರನೊಡನೆ ಸೋತು ಹೋಗುವಿ. ಮತ್ತು ನನ್ನಿಂದ ಶಾಪವನ್ನು ಹೊಂದಿದ ಪಾರ್ವತೀದೇವಿ ಮೊದಲಾದವರಿಗೆ ನನ್ನೊಡನೆ ವಿಚಾರಿಸದೆ ಪತಿಗಳ ಸಂಬಂಧವಾಗುವಂತೆ ವರವನ್ನು ಕೊಟ್ಟಿರುವಿಯಲ್ಲಾ! ಆ ವರವು ನಿನ್ನ ಹೆಂಡತಿಯ ವಿಷಯದಲ್ಲಿ ವ್ಯರ್ಥವಾಗುವುದು. ಅಂದರೆ ನೀನು ಮನುಷ್ಯನಾಗಿರುವಾಗ ನಿನ್ನ ಪತ್ನಿಯನ್ನು ಹೊಂದಲಾರೆ. ಆಮೇಲೆ ನಿನ್ನ ಲೋಕಕ್ಕೆ ಹೋದಮೇಲೆ ಅಲ್ಲಿ ನಿನ್ನ ಹೆಂಡತಿಯನ್ನು ಹೊಂದುವಿ. ಅಂತೂ ನೀನು ಕೊಟ್ಟ ವರವು ನಿನ್ನ ವಿಷಯದಲ್ಲಿ ವ್ಯರ್ಥವಾಗುವುದು. ಯಾವ ವಾಯುದೇವರು ಮೊದಲಾದವರ ವಿಷಯದಲ್ಲಿ ಸುಳ್ಳು ಹೇಳಿದಿಯೋ ಅವರು ಭಾರತೀದೇವಿಯರೇ ಮೊದಲಾದವರು ಐದು ದೇವಿಯರಿಂದ ಸಹಿತರಾಗಿ ಭೂಮಿಯಲ್ಲಿ ಅವತರಿಸಿದ ದೇವಿಗೆ ಪತಿಗಳಾಗುವರು. ವಾಯುದೇವರೇ ಮೊದಲಾದವರು ದೇವತೆಗಳ ಕಾರ್ಯಕ್ಕಾಗಿ ಅವತರಿಸಿರುವರು ಎಂದು ಶ್ರುತಿಯಲ್ಲೇ ಹೇಳಿರುವುದು. ನಿನ್ನನ್ನು ತಿರಸ್ಕಾರ ಮಾಡಿದ ಪ್ರಯುಕ್ತವಲ್ಲ. ನೀನು ಭೂಮಿಯಲ್ಲಿ ಬಹುಕಾಲ ಮನುಷ್ಯನಾಗಿ ಇರುವಿ' ಎಂದು ಶಾಪವನ್ನು ಕೊಟ್ಟುಹೋದರು. ತರುವಾಯ ರುದ್ರದೇವರು ಅಶ್ವತ್ಥಾಮಾಚಾರ್ಯರಾಗಿ ಹುಟ್ಟಿದರು.

ತರುವಾಯ ದ್ರುಪದರಾಜನು ಹೆಂಡತಿಯು ಹುಟ್ಟಿರುವ ಮಕ್ಕಳಿಗೆ ತನ್ನಲ್ಲಿ ತಾಯಿಯೆಂಬ ಸ್ನೇಹವುಂಟಾಗಬೇಕೆಂದು ಕೇಳಿಕೊಂಡಳು. ಅವರು ಹಾಗೆಯೇ ಆಗಲಿ ಎಂದು ಹೇಳಿದರು.

ಈರೀತಿಯಾಗಿ ಮಕ್ಕಳು ಹುಟ್ಟಲು ಎಲ್ಲಾ ಪಂಚಾಲದೇಶದವರೂ ಸಂತೋಷಪಟ್ಟರು.

ಹೀಗೆಯೇ ಸ್ವಲ್ಪ ಸಮಯವು ಕಳೆಯಲು ಪಾಂಡವರು ಅರಗಿನ ಮನೆಯಲ್ಲಿ ಸುಟ್ಟುಹೋದರು ಎಂಬ ವರ್ತಮಾನವನ್ನು ಕೇಳಿದನು. ಅದನ್ನು ಕೇಳಿ ದ್ರುಪದರಾಜನು ತಾನು ಅರ್ಜುನನಿಗೆ ತನ್ನ ಮಗಳನ್ನು ಮದುವೆ ಮಾಡಬೇಕೆಂಬ ಆಸೆಯು ನೆರವೇರಲಿಲ್ಲವೆಂದು ಬಹಳ ವ್ಯಸನವನ್ನು ಹೊಂದಿದನು. ತರುವಾಯ ಯೋಚನೆ ಮಾಡಿ ಯಾಜೋಪಯಾಜರ ಮುಖದಿಂದ ಬಂದ ಮಂತ್ರವು ವ್ಯರ್ಥವಾಗಲಾರದ ಕಾರಣ ಪಾಂಡವರು ಬದುಕಿರುವರೆಂದು ಯೋಚನೆ ಮಾಡಿದನು. ಪಾಂಡವರು ಎಲ್ಲಿಯಾದರೂ ಮರೆಯಾಗಿರಬಹುದೆಂದು ತಿಳಿದುಕೊಂಡು ಅರ್ಜುನನು ಇಲ್ಲಿಗೆ ಬಂದು ಸೇರಲಿ ಎಂದು ದ್ರೌಪದೀದೇವಿಯರಿಗೆ ಸ್ವಯಂವರವನ್ನು ಮಾಡುವೆನೆಂದು ಪ್ರಸಿದ್ಧಿಯನ್ನು ಉಂಟುಮಾಡಿದನು.

ಆ ಸಮಯದಲ್ಲಿ ಪಾಂಡವರೂ ಬ್ರಾಹ್ಮಣರ ವೇಷದಿಂದ ಏಕಚಕ್ರ ನಗರದಲ್ಲಿ ಇದ್ದರು. ಭೀಮಸೇನದೇವರು ರುದ್ರದೇವರ ವರದಿಂದ ರಕ್ಷಿತನಾದ ಬಕಾಸುರನನ್ನು ಸಂಹರಿಸಿ ಕೆಲವು ದಿವಸವಲ್ಲೇ ಇದ್ದು ಆಮೇಲೆ ವೇದವ್ಯಾಸದೇವರ ಮಾತಿನಿಂದ ಅಲ್ಲಿಂದ ಹೊರಟರು. ವೇದವ್ಯಾಸದೇವರು ದ್ರೌಪದೀದೇವಿಯರ ಉತ್ಪತ್ತಿ ಕಥೆಯನ್ನೆಲ್ಲಾ ಹೇಳಿ ಅಲ್ಲಿಗೆ ಹೋಗಿರಿ ಎಂದರು. ಇತರ ಬ್ರಾಹ್ಮಣರೂ ಪಾಂಡವರನ್ನು ಬ್ರಾಹ್ಮಣರೆಂದೇ ತಿಳಿದುಕೊಂಡು ಒಳ್ಳೇ ಊಟವು ದೊರೆಯುವುದು. ಹೋಗೋಣ' ಎಂದರು. ತರುವಾಯ ಪಾಂಡವರು ಪಾಂಚಾಲನಗರಕ್ಕೆ ಬಂದು ಸೇರಿದರು.

ಅಲ್ಲಿ ದೊಡ್ಡ ರಾಜರ ಸಭೆಯು ಸೇರಿತ್ತು. ಈರೀತಿಯಾಗಿ ರಾಜರೆಲ್ಲರೂ ನೆರೆದಿರುವುದನ್ನು ನೋಡಿ ಧೃಷ್ಟದ್ಯುಮ್ನನು ಕೈಯಲ್ಲಿ ಮಾಲೆಯನ್ನು ಹಿಡಿದುಕೊಂಡಿರುವ ತನ್ನ ತಂಗಿಯಾದ ದ್ರೌಪದೀದೇವಿಯರನ್ನು ಕರೆದುಕೊಂಡು ಸಭೆಯಲ್ಲಿ ಪ್ರವೇಶಿಸಿದನು. ಅಲ್ಲಿ ಬಂದಿರುವ ಎಲ್ಲಾ ರಾಜರ ಹೆಸರನ್ನೂ ವಂಶವನ್ನೂ ಪರಾಕ್ರಮವನ್ನೂ ವಿವರಿಸಿದನು. ಆಮೇಲೆ ಒಂದು ಧನುಸ್ಸನ್ನೂ ಐದು ಬಾಣಗಳನ್ನು ಇಟ್ಟು 'ಈ ಮರದ ಮೇಲೆ ಇರುವ ಮತ್ಸ್ಯಯಂತ್ರದ ಪ್ರತಿಬಿಂಬವನ್ನು ಕೆಳಗೆ

ನೀರಿನಲ್ಲಿ ನೋಡಿ ಈ ಧನುಸ್ಸಿನಿಂದ ಈ ಬಾಣಗಳಿಂದ ಯಾರು ಬಡಿಯುವನೋ ಅವನಿಗೆ ಈ ದ್ರೌಪದಿಯು ಸೇರುವಳು' ಎಂದು ಗಟ್ಟಿಯಾಗಿ ಹೇಳಿದನು.

ಈ ಮಾತನ್ನು ಕೇಳಿ ಅಲ್ಲಿದ್ದ ರಾಜಪುತ್ರರೆಲ್ಲರೂ ಎದ್ದರು. ಅವರಲ್ಲಿ ಕೆಲವರು ಧನುಸ್ಸನ್ನು ನೋಡಿಯೇ ನಮ್ಮಿಂದ ಸಾಧ್ಯವಿಲ್ಲವೆಂದರು. ಇನ್ನು ಕೆಲವರು ಕೈಯಿಂದ ಹಿಡಿದು ಆಡಿಸಿ ಸಾಧ್ಯವಿಲ್ಲವೆಂದು ಹೊರಟುಹೋದರು. ಶಿಶುಪಾಲನು ಬಂದು ಧನುಸ್ಸನ್ನು ಬಗ್ಗಿಸಿ ಹಗ್ಗವನ್ನು ಬಿಗಿಯಲಿಕ್ಕೆ ಪ್ರಯತ್ನ ಮಾಡಿದನು. ಧನುಸ್ಸನ್ನು ಬಗ್ಗಿಸಿ ಹಗ್ಗವನ್ನು ಕಟ್ಟಲಿಕ್ಕೆ ಒಂದು ಉದ್ದಿನಕಾಳಿನಷ್ಟು ಇರಲು ಕೈತಪ್ಪಿಹೋಗಿ ರುದ್ರದೇವರ ವರವು ಅರ್ಜುನನೇ ಬಾಗಿಸಬೇಕು ಎಂದು ಇದ್ದ ಪ್ರಯುಕ್ತ ಶಿಶುಪಾಲನನ್ನೇ ಆ ಧನುಸ್ಸು ಬಡಿಯಿತು. ಅವನು ಸೋತು ಹೊರಟುಹೋದನು. ಶಲ್ಯನು ಬಂದು ಧನುಸ್ಸನ್ನು ಸೆಳೆದು ಹೆಸರಿನ ಕಾಳಿನಷ್ಟು ಇರುವಾಗ ತಪ್ಪಿಹೋಗಿ ಪೆಟ್ಟುತಿಂದು ಹೋದನು. ತರುವಾಯ ಜರಾಸಂಧನು ಬಂದು ಧನುಸ್ಸನ್ನು ಸೆಳೆದು ಸಾಸಿವೆ ಕಾಳಿನಷ್ಟು ಇರಲು ತಪ್ಪಿಹೋಗಿ ಪೆಟ್ಟುತಿಂದು ಅವಮಾನವನ್ನು ಹೊಂದಿ ರಾಜರಿಗೆ ತನ್ನ ಮುಖವನ್ನು ತೋರಿಸಲಿಕ್ಕೆ ನಾಚಿಕೆಯಾಗಿ ಹೊರಟುಹೋದನು. ತರುವಾಯ ಅನೇಕವಾಗಿ ಎಲ್ಲಾ ರಾಜರೂ ಹೊರಟುಹೋದರು. ತರುವಾಯ ಕರ್ಣನು ಪರಶುರಾಮರಿಂದ ಶಿಕ್ಷೆಯನ್ನು ಹೊಂದಿದ ಬಲದಿಂದ ಆ ಧನುಸ್ಸನ್ನು ಸೆಳೆದು ರೋಮದಷ್ಟು ಉಳಿಯಲು ಪೆಟ್ಟುತಿಂದು ಬಿದ್ದನು.

ತರುವಾಯ ಬ್ರಾಹ್ಮಣರ ಸಭೆಯಲ್ಲಿ ಕೂತಿರುವ ಭೀಮಾರ್ಜುನರು ಎದ್ದು ನಿಂತರು. ಬ್ರಾಹ್ಮಣರೆಲ್ಲರೂ ಭಯದಿಂದ ಬೇಡಬೇಡವೆನ್ನುತ್ತಿದ್ದರು. ಕೆಲವು ಬ್ರಾಹ್ಮಣರು ಮಾತ್ರ ಇವರು ಸಮರ್ಥರು ಎಂದು ಹೇಳುತ್ತಿದ್ದರು. ಭೀಮಾರ್ಜುನರು ಕೃಷ್ಣಪರಮಾತ್ಮನ ಮುಖಕಮಲವನ್ನು ನೋಡಿ ಧನುಸ್ಸಿನ ಬಳಿಗೆ ಹೋದರು. ಅರ್ಜುನನು ಭೀಮಸೇನದೇವರಿಂದ ಅನುಜ್ಞೆಯನ್ನು ಪಡೆದು ಆ ಮತ್ಸ್ಯಯಂತ್ರ ವನ್ನು ಭೇದಿಸಿದನು. ಆಗ ದ್ರೌಪದೀದೇವಿಯರು ಬಂದು ಅರ್ಜುನನ ಕೊರಳಿಗೆ ಮಾಲೆಯನ್ನು ಹಾಕಿದರು. ತರುವಾಯ ಭೀಮಾರ್ಜುನರು ತಮ್ಮ ಮಧ್ಯದಲ್ಲಿ ದ್ರೌಪದೀದೇವಿಯರನ್ನು ಇಟ್ಟುಕೊಂಡು ಭಗವಂತನಿಗೆ ನಮಸ್ಕರಿಸಿ ಹೋದರು. ಆಗ ಎಲ್ಲಾ ರಾಜರೂ ಕೋಪಿಸಿಕೊಂಡು ಬಂದರು.

ಶ್ರೀಕೃಷ್ಣಪರಮಾತ್ಮನು ಬರುವಾಗಲೇ ಯಾದವರೊಡನೆ ನಾವೀಗ ಸ್ವಯಂವರ ವನ್ನು ನೋಡುವುದಕ್ಕೆ ಮಾತ್ರ ಹೋಗುವುದು. ಹೆಣ್ಣಿಗಾಗಿ ಅಲ್ಲ. ಆದುದರಿಂದ ನೀವೊಬ್ಬರೂ ಧನುಸ್ಸನ್ನು ಮುಟ್ಟಬಾರದು' ಎಂದು ಹೇಳಿದ್ದ ಪ್ರಯುಕ್ತ ಯಾವ

ಯಾದವರೂ ಧನುಸ್ಸನ್ನು ಮುಟ್ಟಲಿಕ್ಕೇ ಬಂದಿರಲಿಲ್ಲ. ತರುವಾಯ ಭೀಮಸೇನ ದೇವರು ಯುದ್ಧಕ್ಕೆ ಬಂದಿರುವ ರಾಜ ಸಮೂಹವನ್ನು ನೋಡಿ ನೂರು ಯೋಜನ ಎತ್ತರವಾದ ಮರವನ್ನು ಕಿತ್ತಿ ಎಲ್ಲ ರಾಜರ ಎದುರಾಗಿ ನಿಂತುಕೊಂಡರು. ರಾಜರೆಲ್ಲರೂ ಅದನ್ನು ನೋಡಿ ಓಡಿಹೋದರು. ಆಗ ಕೃಷ್ಣಪರಮಾತ್ಮನು ಬಲರಾಮದೇವರೊಡನೆ ಪಾಂಡವರ ಪರಿಚಯವನ್ನು ಹೇಳಿದನು. ಬಲರಾಮ ದೇವರು ನೋಡಿ ಸಂತೋಷಹೊಂದಿದರು. ಸಾತ್ಯಕಿಯು ಸಂತೋಷದಿಂದ ಖಡ್ಗವನ್ನು ಹಿಡಿದುಕೊಂಡು ಕುಣಿದನು.

ಸರ್ವ ಯಾದವರೂ ಇದನ್ನು ತಿಳಿದು ಸಂತೋಷದಿಂದ ಇರುತ್ತಿರಲು ಎಲ್ಲಾ ರಾಜರೂ ಭೀಮಸೇನದೇವರ ಭಯದಿಂದ ಓಡಿಹೋಗುತ್ತಿರಲು ಕರ್ಣನು ಅರ್ಜುನನೊಡನೆ ಯುದ್ಧಕ್ಕೆ ಬಂದನು. ಶಲ್ಯನು ಭೀಮಸೇನದೇವರೊಡನೆ ಯುದ್ಧಕ್ಕೆ ಬಂದನು. ಬ್ರಾಹ್ಮಣರೆಲ್ಲರೂ ಕೋಪಿಸಿಕೊಂಡು ದಂಡ ವಸ್ತ್ರ ದರ್ಭೆ ಕೃಷ್ಣಾಜಿನಗಳನ್ನು ಬಿಸಾಡುತ್ತಿರಲು ದ್ರುಪದರಾಜನು ಕೃಷ್ಣಪರಮಾತ್ಮನೊಡನೆ ಸಮಾಧಾನಪಡಿಸಬೇಕೆಂದು ಪ್ರಾರ್ಥಿಸುತ್ತಿದ್ದನು. ಆಗ ಭೀಮಸೇನದೇವರು ಶಲ್ಯನ ಬಳಿಗೆ ಬಂದರು. ಭೀಮಸೇನದೇವರು ತಾನು ಹಿಡಿದುಕೊಂಡಿರುವ ಮರವನ್ನು ಕೆಳಗೆ ಇಟ್ಟು ಶಲ್ಯನನ್ನು ಹಿಡಿದು ಆಕಾಶಕ್ಕೆ ಬಿಸಾಡಿದರು. ಆದರೂ ಬಂಧುವಾದ ಪ್ರಯುಕ್ತ ಕೆಳಗೆ ಬೀಳದಂತೆ ಕೈಯಲ್ಲಿ ಹಿಡಿದು ಮೆಲ್ಲನೆ ಕೆಳಗೆ ಇಟ್ಟರು. ಇದರಿಂದ ಅವರ ಸಾಮರ್ಥ್ಯವನ್ನು ತಿಳಿದುಕೊಂಡು ಶಲ್ಯವನ್ನು ತನ್ನ ಊರಿಗೆ ಹೋದನು.

ತರುವಾಯ ಅರ್ಜುನನು ಅದೇ ಧನುಸ್ಸಿನಿಂದ ಕರ್ಣನೊಡನೆ ಯುದ್ಧವನ್ನು ಮಾಡಿದನು. ಕೊನೆಗೆ ಕರ್ಣನು ಯುದ್ಧದಲ್ಲಿ ಶ್ರಮವುಳ್ಳವನಾಗಿ 'ನೀನು ಅರ್ಜುನನೋ? ಇಂದ್ರನೋ? ಮೂರ್ತಿಮತ್ತಾಗಿ ಬಂದಿರುವ ಬ್ರಾಹ್ಮಣರ ತಪಸ್ಸೋ? ಬೇರೆ ಯಾರಾದರೂ ನನ್ನ ಎದುರಲ್ಲಿ ನಿಂತು ಯುದ್ಧ ಮಾಡಲಿಕ್ಕೆ ಆಗುತ್ತಿರಲಿಲ್ಲ' ಎಂದು ಹೇಳಿದನು. ಅದಕ್ಕೆ ಅರ್ಜುನನು 'ನಾನು ಯಾರಾದ ರೇನಾಯಿತು? ಸಾಮರ್ಥ್ಯವಿದ್ದರೆ ಬಾಣಗಳನ್ನು ಬಿಡು. ಇಲ್ಲದಿದ್ದರೆ ಯುದ್ಧವನ್ನು ಬಿಟ್ಟು ಹೊರಟುಹೋಗು' ಎಂದು ಹೇಳಿದನು. ಅದಕ್ಕೆ ಕರ್ಣನು ನಾನು ಹಾಗೆಲ್ಲಾ ಬ್ರಾಹ್ಮಣನೊಡನೆ ಯುದ್ಧವನ್ನು ಮಾಡಲಾರೆನು' ಎಂದು ಹೇಳಿ ದುರ್ಯೋಧನಾದಿ ಗಳೊಡನೆ ಹೊರಟುಹೋದನು. ಭೀಮಸೇನದೇವರು ಅರ್ಜುನನೊಡನೆ ದ್ರೌಪದೀದೇವಿಯರನ್ನು ಕರೆದುಕೊಂಡು ಹೋದರು. ಮುಂದೆ ನಕುಲಸಹದೇವ ರಿಂದ ಕೂಡಿಕೊಂಡು ಧರ್ಮರಾಜನು ಹೋದನು. ಅವನ ಹಿಂದಿನಿಂದ

ಭೀಮಾರ್ಜುನರೂ ಕುಂಬಾರನ ಮನೆಗೆ ಹೋದರು. ನಾವು ಭಿಕ್ಷೆಯನ್ನು ತಂದಿರುವೆವು ಎಂದು ಅವರು ಹೇಳಲು ಕುಂತೀದೇವಿಯು ನೀವೆಲ್ಲರೂ ಹಂಚಿಕೊಳ್ಳಿರಿ ಎಂದು ಹೇಳಿ ಆಮೇಲೆ ದ್ರೌಪದೀದೇವಿಯರನ್ನು ನೋಡಿದರು. ಕುಂತೀದೇವಿಯು ಯಾವಾಗಲೂ ಮರೆತುಹೋಗಿಯೂ ಕೂಡ ಸುಳ್ಳು ಹೇಳಿದ್ದಿಲ್ಲ. ಇದು ಹೇಗೆ ಆಗಬೇಕು ಎಂದೆಲ್ಲರೂ ಯೋಚಿಸತೊಡಗಿದರು. ಅಲ್ಲಿಗೆ ಶ್ರೀಕೃಷ್ಣಪರಮಾತ್ಮನೂ ಬಂದು ಸ್ನೇಹದಿಂದ ಪಾಂಡವರೊಡನೆ ಎಲ್ಲಾ ಮಾತನಾಡಿ ಯಾದವರಿಂದ ಕೂಡಿ ದ್ವಾರಕಾಪಟ್ಟಣಕ್ಕೆ ಹೊರಟುಹೋದನು.

ದ್ರುಪದರಾಜನು ಮಗಳು ಎಲ್ಲಿಗೆ ಹೋಗಿರುವಳು? ನೋಡಿಕೊಂಡು ಬಾ ಎಂದು ಧೃಷ್ಟದ್ಯುಮ್ನನನ್ನು ಕಳುಹಿಸಿದನು. ಧೃಷ್ಟದ್ಯುಮ್ನನು ಮರೆಯಾಗಿ ಇದ್ದುಕೊಂಡು ಪಾಂಡವರನ್ನೆಲ್ಲಾ ನೋಡಿದನು. ಭಿಕ್ಷಾನ್ನವನ್ನು ಭೋಜನಮಾಡಿರುವ ಪಾಂಡವರನ್ನು ತೃಪ್ತಿಯಿಂದ ಇದ್ದ ತಂಗಿಯಾದ ದ್ರೌಪದೀದೇವಿಯರನ್ನೂ ನೋಡಿ ಅವರು ಮಾತಾಡುತ್ತಿದ್ದ ಯುದ್ಧವಾರ್ತೆಯನ್ನು ಅವರ ಸಿಂಹದಂತೆ ಗರ್ಜನೆಯನ್ನು ಕೇಳಿ ಇವರು ಕ್ಷತ್ರಿಯ ಶ್ರೇಷ್ಠರು ಎಂದು ನಿಶ್ಚಯಿಸಿದನು.

ಮರುದಿನ ಬೆಳಿಗ್ಗೆ ದ್ರುಪದರಾಜನ ಮಾತಿನಿಂದ ಅವನ ಪುರೋಹಿತರು ಪಾಂಡವರಿದ್ದಲ್ಲಿಗೆ ಬಂದರು. ಭೀಮಸೇನದೇವರು ಅವರನ್ನು ಸತ್ಕರಿಸಲು ತರುವಾಯ ಪುರೋಹಿತರು ತಾಯಿಯಿಂದ ಸಹಿತರಾದ ಪಾಂಡವರನ್ನು ರಾಜನ ಮನೆಗೆ ಕರೆದುಕೊಂಡು ಹೋದರು. ದ್ರುಪದರಾಜನು ಬಂದಿರುವ ಅವರನ್ನು ಸತ್ಕರಿಸಿದನು. ಅಲ್ಲಿ ಬ್ರಾಹ್ಮಣಾದಿ ನಾಲ್ಕುವರ್ಣದವರೂ ವಾಸಿಸಲಿಕ್ಕೆ ಯೋಗ್ಯ ಗಳಾದ ಮನೆಯನ್ನು ಮಾಡಿಟ್ಟಿದ್ದನು. ಪಾಂಡವರು ಕ್ಷತ್ರಿಯರು ವಾಸಮಾಡಲಿಕ್ಕೆ ಯೋಗ್ಯವಾದ ಮನೆಯನ್ನು ಪ್ರವೇಶಿಸಿದರು.

ದ್ರುಪದರಾಜನು ಪಾಂಡವರ ವ್ಯಾಪಾರ ಸ್ವರ ಆಕಾರ ವೀರ್ಯಕಾರ್ಯ ಇತ್ಯಾದಿ ಗುಣಗಳಿಂದ ರಾಜಪುತ್ರರು ಎಂದು ತಿಳಿದುಕೊಂಡವನಾಗಿ ಧರ್ಮರಾಜನ ಬಳಿಗೆ ಬಂದು 'ಪುರುಷಶ್ರೇಷ್ಠನೇ! ನೀನು ಯಾರು? ಸತ್ಯ ಹೇಳಬೇಕು' ಎಂದು ಹೇಳಿದನು. ಅದಕ್ಕೆ ಧರ್ಮರಾಜನು ಮುಗುಳು ನಗೆಯುಳ್ಳವನಾಗಿ 'ರಾಜನೇ ಪೂರ್ವದಲ್ಲಿ ನಿನ್ನ ಮಗಳನ್ನು ವಿವಾಹವಾಗುವ ವಿಷಯದಲ್ಲಿ ಜಾತಿಯ ವಿಷಯವಾಗಿ ಒಂದನ್ನು ನಿನ್ನ ಮಗನು ಹೇಳಲಿಲ್ಲ. ಮತ್ಸ್ಯಯಂತ್ರವನ್ನು ಭೇದಿಸಬೇಕೆಂದು ಹೇಳಿದ್ದನು. ಅದನ್ನು ಇವನು ಮಾಡಿರುವನು' ಎಂದು ಹೇಳಿದನು. ಈರೀತಿಯಾಗಿ ಹೇಳುತ್ತಿದ್ದ ರಾಜನೊಡನೆಯೂ ಕುಂತೀದೇವಿಯೊಡನೆಯೂ ದ್ರುಪದರಾಜನು

ನೀವು ಯಾರೆಂದು ತಿಳಿಸಬೇಕೆಂದು ಬಹಳವಾಗಿ ಹೇಳಿಕೊಂಡನು. ತರುವಾಯ ಧರ್ಮರಾಜನೂ ಕುಂತೀದೇವಿಯೂ ಸಮಸ್ತವಿಷಯಗಳನ್ನು ತಿಳಿಸಿದರು. ಅದನ್ನು ಕೇಳಿ ರಾಜನು 'ನಾನೀಗ ಕೃತಾರ್ಥನಾದೆನು. ಅರ್ಜುನನಿಗೆ ಹೆಣ್ಣನ್ನು ಕೊಡಬೇಕೆಂದೇ ನಾನಿಷ್ಟು ಪ್ರಯತ್ನ ಮಾಡಿದ್ದು. ಪ್ರಕೃತ ಅರ್ಜುನನೋ ನೀನೋ ಅಥವಾ ನಿಮ್ಮಲ್ಲಿ ಬೇರೆ ಯಾರಾದರೂ ನನ್ನ ಮಗಳನ್ನು ಮದುವೆಯಾಗಿರಿ' ಎಂದನು. ಧರ್ಮರಾಜನು 'ನಾವೆಲ್ಲರೂ ನಿನ್ನ ಮಗಳನ್ನು ಮದುವೆಯಾಗುವೆವು ಎಂದು ನನ್ನ ಮನಸ್ಸಿನಲ್ಲಿ ಇದೆ. ಇದರಲ್ಲಿ ಪ್ರಮಾಣವೊಂದೂ ತಿಳಿಯದು. ಆದರೆ ನನ್ನ ಮನಸ್ಸಿಗೆ ಸರಿ ಎಂದು ತೋರುತ್ತದೆ. ನನ್ನ ಮನಸ್ಸು ಧರ್ಮವನ್ನು ಬಿಡತಕ್ಕದಲ್ಲ. ಆದುದರಿಂದ ನನ್ನ '1ಮನಸ್ಸೇ ಪ್ರಮಾಣವು' ಎಂದು ಹೇಳಲು ದ್ರುಪದರಾಜನೂ ಅವನ ಮಗನಾದ ಧೃಷ್ಟದ್ಯುಮ್ನನೂ ಐದು ಜನರು ಮದುವೆಯಾಗುವ ವಿಷಯವನ್ನು ಅಂಗೀಕರಿಸಲಿಲ್ಲ.

ಆಸಮಯದಲ್ಲಿ ಅಲ್ಲಿಗೆ ವೇದವ್ಯಾಸದೇವರು ಬಂದರು. ರಾಜನು ವ್ಯಾಸರಿಗೆ ಯೋಗ್ಯಪೂಜೆಯನ್ನು ಮಾಡಿದನು. ಎಲ್ಲರೂ ಅವರನ್ನು ಸತ್ಕರಿಸಿ ಅವರ ಆಜ್ಞೆಯಿಂದ ಆಸನದಲ್ಲಿ ಕೂತುಕೊಂಡರು. ಆಗ ವೇದವ್ಯಾಸದೇವರು ದ್ರುಪದರಾಜನೊಡನೆ 'ರಾಜನೇ! ಈ ಐದು ಜನರಿಗೂ ನಿನ್ನ ಮಗಳನ್ನು ಮದುವೆಮಾಡಿಕೊಡು. ಇವರು ಯಮ, ವಾಯು, ಪುರಂದರ, ಆಶ್ವಿನೇಯರೆಂಬ ದೇವತೆಗಳು. ಇವರು ಇಂದ್ರಪದವಿಯನ್ನು ಆಳಿದವರು. ಈ ಐದು ಜನರ ಹೆಂಡತಿಯರೂ ಒಂದೇ ದೇಹವುಳ್ಳವರಾಗಿ ನಿನ್ನ ಮಗಳಾಗಿ ಅವತರಿಸಿರುವುದು. ಆದುದರಿಂದ ನಿನ್ನ ಮಗಳನ್ನು ಇವರಿಗೆ ಮದುವೆ ಮಾಡಿಕೊಡುವುದರಿಂದ ಯಾವ ವಿರೋಧವೂ ಇರುವುದಿಲ್ಲ' ಎಂದು ಹೇಳಿದರು. ಹಾಗೆ ಹೇಳಿದರೂ ದ್ರುಪದರಾಜನೂ ಅವನ ಮಗನೂ ಸಮ್ಮತಿಯನ್ನು ತೋರಿಸದಿರಲು ವ್ಯಾಸರು 'ರಾಜನೇ! ನಿನಗೆ ದಿವ್ಯದೃಷ್ಟಿಯನ್ನು ಕೊಟ್ಟಿರುವೆನು. ಈ ಪಾಂಡವರನ್ನು ಸ್ವರ್ಗದಲ್ಲಿರುವವರನ್ನು ನೋಡು. ಅದೇ ಪ್ರಕಾರವಾಗಿ ಅವರ ಬಳಿಯಲ್ಲಿರುವ ಬೇರೆಬೇರೆ ರೂಪದಿಂದ ಇರುವ ಅವರ ಪತ್ನಿಯರಾದ ನಿನ್ನ ಮಗಳನ್ನು ನೋಡು. ಆಮೇಲೆ ನಿನ್ನ ಮನಸ್ಸಿಗೆ ಬಂದಂತೆ ಮಾಡು' ಎಂದು ಹೇಳಿದರು.

---

1. ಮ.ತಾ.ನಿ.ಅ.19-152

1. ''ಸತಾಂಹಿ ಸಂದೇಹ ಪದೇಷು ವಸ್ತುಷು ಪ್ರಮಾಣಮಂತಃ ಕರಣಪ್ರವೃತ್ತಯಃ''

-ಅಭಿಜ್ಞಾನ ಶಾಂಕುತಲ ನಾಟಕದಲ್ಲಿ ಇಂತಹ ಮಾತಿದೆ.

ಈರೀತಿಯಾಗಿ ಹೇಳಲು ದ್ರುಪದರಾಜನು ವೇದವ್ಯಾಸದೇವರ ಅನುಗ್ರಹ ದಿಂದ ಎಲ್ಲವನ್ನು ನೋಡುವವನಾಗಿ ಅವರ ಮಾತಿನಲ್ಲಿ ವಿಶ್ವಾಸವಿಡದಿದ್ದದ್ದಕ್ಕೆ ಭಯವುಳ್ಳವನಾಗಿ ಅವರ ಪಾದಕ್ಕೆ ಅಡ್ಡಬಿದ್ದನು. ವ್ಯಾಸರು ಅವನಿಗೆ ಅಭಯಪ್ರದಾನ ಮಾಡಿ ದ್ರುಪದರಾಜನು ತನ್ನ ಮಗಳನ್ನು ಮದುವೆ ಮಾಡಿಕೊಡುವೆನು ಎಂದು ಒಪ್ಪಿಕೊಂಡ ಮೇಲೆ ತಾನೇ ಧೌಮ್ಯಾಚಾರ್ಯರಿಂದ ಕೂಡಿಕೊಂಡು ವಿವಾಹ ಕಾರ್ಯವನ್ನು ಮಾಡಿಸಿದರು. ತರುವಾಯ ಪಾಂಡವರು ಐವರೂ ಕ್ರಮದಿಂದ ದ್ರೌಪದೀದೇವಿಯರ ಪ್ರಾಣಿಗ್ರಹಣವನ್ನು ಮಾಡಿದರು. ಆ ದಿವಸದಲ್ಲಿ ಪಾಂಚಾಲ ದೇಶದಲ್ಲಿ ಮಹಾ ಉತ್ಸವವು ನಡೆಯಿತು. ದ್ರುಪದರಾಜನೂ ಧೃಷ್ಟದ್ಯುಮ್ನನೂ ಸಂತೋಷವನ್ನು ಹೊಂದಿದರು. ಎಲ್ಲಾ ಊರಿನ ಜನರೂ ಸಂತೋಷವನ್ನು ಹೊಂದಿದರು.

ಈರೀತಿಯಾಗಿ ಪಾಂಡವರು ಮದುವೆಯಾಗಿ ಅಲ್ಲಿಯೇ ಇರುತ್ತಿರಲು ಅದನ್ನು ಕೇಳಿ ಕೃಷ್ಣಪರಮಾತ್ಮನೂ ಬಲರಾಮದೇವರೂ ಎಲ್ಲಾ ಯಾದವರಿಂದ ಸಹಿತರಾಗಿ ಸಂತೋಷವುಳ್ಳವರಾಗಿ ಬೇಕಾದ ಉಡುಗರೆಯನ್ನು ಹಿಡಿದುಕೊಂಡು ಪಾಂಡವ ರಿದ್ದಲ್ಲಿಗೆ ಬಂದರು. ಪಾಂಡವರು ಕೃಷ್ಣಪರಮಾತ್ಮನನ್ನು ನೋಡಿ ಸಂತೋಷಪಟ್ಟರು. ಆಲಿಂಗನ ಮಾಡಿ ನಮಸ್ಕಾರ ಮಾಡಿದರು. ಭಗವಂತನು ದ್ರೌಪದೀದೇವಿಯರನ್ನು ನೋಡಿ ಅವರಿಗೆ ಮನೆಗೆ ಬೇಕಾದ ಪಾತ್ರೆಗಳನ್ನು ಬಂಗಾರದ ಆಭರಣಗಳನ್ನು ಕೊಟ್ಟು ಎಲ್ಲಾ ಪಾಂಡವರಿಗೂ ಕುಂತೀದೇವಿಯರಿಗೂ ಯೋಗ್ಯ ಆಭರಣಗಳನ್ನು ಕೊಟ್ಟರು. ರತ್ನಗಳನ್ನು ಆನೆ ಕುದುರೆ ರಥಗಳನ್ನು ಬಂಗಾರದ ರಾಶಿಗಳನ್ನು ಭಗವಂತನು ಅವರಿಗೆ ಕೊಟ್ಟನು. ವೇದವ್ಯಾಸದೇವರು ಉತ್ತಮ ಆಶೀರ್ವಾದ ಗಳನ್ನು ಮಾಡಿದರು. ದ್ರುಪದರಾಜನೂ ಆಭರಣಗಳನ್ನೂ ರಥ ಆನೆ ಕುದುರೆ ಇತ್ಯಾದಿಗಳನ್ನು ಕೊಟ್ಟನು. ಸಾವಿರಾರು ದಾಸರನ್ನು ದಾಸಿಯರನ್ನೂ ಪರಮಾತ್ಮನೂ ರಾಜನೂ ಕೊಟ್ಟರು. ಆ ದಾಸಿಯರಿಗೆ ಬೇಕಾದ ಸೀರೆಗಳನ್ನು ಆಭರಣಗಳನ್ನು ಕೊಟ್ಟರು. ತರುವಾಯ ಕೆಲವು ತಿಂಗಳವರೆಗೆ ಶ್ರೀಕೃಷ್ಣಪರಮಾತ್ಮನು ಪಾಂಡವ ರೊಡನೆ ಸಂತೋಷದಿಂದ ಇದ್ದು ಆಮೇಲೆ ಬಲರಾಮದೇವರೊಡನೆ ದ್ವಾರಕೆಗೆ ಹೊರಟು ಹೋದರು. ವೇದವ್ಯಾಸದೇವರೂ ಹೊರಟು ಹೋದರು. ಆಮೇಲೆ ಪಾಂಡವರು ಅಲ್ಲಿ ಒಂದು ವರ್ಷಕಾಲ ಇದ್ದರು.

ತರುವಾಯ ಕೌರವರು ಕರ್ಣನಿಂದಲೂ ಸೈಂಧವನಿಂದಲೂ ಸಹಿತರಾಗಿ ದ್ರುಪದರಾಜನನ್ನು ಕೊಲ್ಲಬೇಕೆಂದು ಬಂದರು. ದ್ರುಪದರಾಜನಿಗೂ ಅವರಿಗೂ

ಬಹಳ ಯುದ್ಧವು ನಡೆಯಿತು. ಚಿತ್ರ ಚಿತ್ರಕೇತು ಎಂಬ ದ್ರುಪದರಾಜನ ಇಬ್ಬರು ಮಕ್ಕಳು ಮೃತರಾದರು. ಸೈನಿಕರೆಲ್ಲರೂ ಓಡತೊಡಗಿದರು. ತರುವಾಯ ಪಾಂಡವರೇ ಯುದ್ಧಕ್ಕೆ ಬಂದರು. ಭೂರಿಶ್ರವನೂ ಕರ್ಣನೂ ಸೇರಿ ಅರ್ಜುನನ ರಥವನ್ನು ನಾಶಮಾಡಿದರು. ಆಗ ಭೀಮಸೇನದೇವರು ಪರ್ವತದಂತೆ ಇದ್ದ ದೊಡ್ಡ ಮರವನ್ನು ಕಿತ್ತಿದರು. ಆ ದೊಡ್ಡ ಮರವನ್ನು ಹಿಡಿದುಕೊಂಡು ಅಟ್ಟಿಸಿಕೊಂಡು ಬರಲು ದುರ್ಯೋಧನಾದಿಗಳೆಲ್ಲರೂ ಭಯದಿಂದ ತಮ್ಮ ಹಸ್ತಿನಾವತೀಗೇ ಓಡಿಹೋದರು.

ಈ ಎಲ್ಲಾ ವಿಷಯವನ್ನೂ ತಿಳಿದುಕೊಂಡು ವಿದುರನು ಧೃತರಾಷ್ಟ್ರರೊಡನೆ 'ರಾಜನೇ! ನಿನ್ನ ಮಕ್ಕಳು ತುಂಬಾ ಅಭಿವೃದ್ಧಿಯನ್ನು ಹೊಂದಿರುವರು' ಎಂದು ಹೇಳಿದನು. ಅದನ್ನು ಕೇಳಿದ ಧೃತರಾಷ್ಟ್ರನು ದ್ರೌಪದೀ ಸ್ವಯಂವರಕ್ಕೆ ಹೋದ ತನ್ನ ಮಕ್ಕಳು ದುರ್ಯೋಧನಾದಿಗಳನ್ನು ದ್ರೌಪದೀದೇವಿಯರನ್ನು ಹೊಂದಿದರು ಎಂದು ತಿಳಿದುಕೊಂಡು ಸಂತೋಷದಿಂದ ಸೀರೆ ಧೋತ್ರ ಆಭರಣಗಳನ್ನೆಲ್ಲಾ ಕೊಟ್ಟು ಕಳುಹಿಸಲಿಕ್ಕೆ ಹೇಳಿದನು. ಆಗ ವಿದುರನು 'ರಾಜನೇ! ಯಾವ ಮಕ್ಕಳು ಎಂದು ತಿಳಿದುಕೊಂಡೆ. ಪಾಂಡವರನ್ನು ಹೇಳುತ್ತಿರುವೆನು' ಎಂದನು. ಅದನ್ನು ಕೇಳಿ ಧೃತರಾಷ್ಟ್ರನಿಗೆ ಮನಸ್ಸಿನಲ್ಲಿ ಅಪ್ರೀತಿ ಉಂಟಾಗಲು ಅದನ್ನು ತಿಳಿಸದೆ ಹಾಗಾದರೆ ಬಹಳ ಸಂತೋಷವಾಯಿತು. ಅವರೂ ಕುಂತಿಯೂ ಮೃತರಾಗಿಲ್ಲವೇ? ಅವರ ವೃತ್ತಾಂತವನ್ನೆಲ್ಲಾ ತಿಳಿಸು ಎಂದು ಹೇಳಿದನು. ವಿದುರನು ಹಿಡಿಂಬಾಸುರನ ಸಂಹಾರವೇ ಮೊದಲಾದ ಎಲ್ಲಾ ವೃತ್ತಾಂತವನ್ನು ತಿಳಿಸಿದನು. ದ್ರೌಪದೀ ದೇವಿಯರ ಸ್ವಯಂವರ ವಿಷಯವನ್ನೂ ತಿಳಿಸಿದನು. ಅದನ್ನು ಕೇಳಿ ಭೀಷ್ಮಾಚಾರ್ಯರೇ ಮೊದಲಾದವರಿಗೆ ಬಹು ಸಂತೋಷವಾಯಿತು. ಹೀಗೇ ಪಾಂಡವರು ದ್ರುಪದ ರಾಜನ ಮನೆಯಲ್ಲೇ ಒಂದು ವರ್ಷ ಕಳೆದರು. ಕೃಷ್ಣಪರಮಾತ್ಮನು ಪಾಂಚಾಲ ನಗರಕ್ಕೆ ಬಂದು ಪಾಂಡವರಿಗೆ ಬೇಕಾದ ಧನವನ್ನು ಕೊಟ್ಟು ಹೋದ ವೃತ್ತಾಂತವನ್ನು ಕೇಳಿ ದುರ್ಯೋಧನಾದಿಗಳು ಯೋಚನೆಮಾಡಿ ಯುದ್ಧಕ್ಕೆ ಹೊರಟುಹೋದರು. ಆಗ ವಿದುರನು ಧೃತರಾಷ್ಟ್ರನೊಡನೆಯೂ ಭೀಷ್ಮಾದಿಗಳೊಡನೆಯೂ ಪಾಪಿಗಳಾದ ದುರ್ಯೋಧನಾದಿಗಳು ಪಾಂಡವರೊಡನೆ ಯುದ್ಧಕ್ಕೆ ಹೋಗಿ ಮರಣವನ್ನು ಹೊಂದುವರು. ಭೀಮಾರ್ಜುನರನ್ನು ಯುದ್ಧದಲ್ಲಿ ಸಹಿಸುವವರು ಮೂರು ಲೋಕದಲ್ಲಿಯೂ ಯಾರೊಬ್ಬರೂ ಇಲ್ಲ. ಅವರನ್ನು ತಿಳಿದೂ ಕೂಡ ನಾವು ಅವರನ್ನು ಇಲ್ಲಿಗೆ ಕರಕೊಂಡು ಬರದೆ ಸುಮ್ಮನೆ ಇರುವುದು ಬಹಳ ತಪ್ಪಾಗಿರುವುದು. ಅವರನ್ನು ಇಲ್ಲಿಗೆ ಕರತರಲು ಜನರನ್ನು ಕಳುಹಿಸು. ಸಮಾಧಾನದಿಂದ ಅವರನ್ನು

ತರಿಸಿ ಅವರಿಗೆ ಅರ್ಧರಾಜ್ಯವನ್ನು ಕೊಡು. ಹೀಗೆ ಮಾಡಿದರೆ ಕುಲ ಅಭಿವೃದ್ಧಿಗೆ ಕಾರಮವಾಗುವುದು' ಎಂದು ಹೇಳಿದನು. ಅದನ್ನು ಕೇಳಿ ಭೀಷ್ಮಾಚಾರ್ಯರೂ ಕೃಪಾಚಾರ್ಯರೂ ದ್ರೋಣಾಚಾರ್ಯರೂ ಹಾಗೆ ಮಾಡುವುದೇ ಸರಿಯಾಗಿರು ವುದು ಎಂದರು. ಧೃತರಾಷ್ಟ್ರನು ವಿದುರನೊಡನೆ ನೀನೇ ಹೋಗಿ ಪಾಂಡವರನ್ನು ಕರೆದುಕೊಂಡು ಬಾ ಎಂದನು. ವಿದುರನು ಬಹುವೇಗದಿಂದ ರಥದಲ್ಲಿ ಕೂತುಕೊಂಡು ಪಾಂಚಾಲದೇಶಕ್ಕೆ ಹೋದನು. ಅಲ್ಲಿ ಪಾಂಡವರಿಂದ ಸತ್ಕೃತ ನಾದನು. ಆ ಸಮಯದಲ್ಲೇ ಅಲ್ಲಿಗೆ ವೇದವ್ಯಾಸದೇವರೂ ಕೃಷ್ಣಪರಮಾತ್ಮನೂ ಬಂದಿದ್ದರು. ಅವರು ವಿದುರನಿಂದ ಸಹಿತರಾಗಿ ಕುಂತೀದೇವಿಯನ್ನೂ ದ್ರೌಪದೀ ದೇವಿಯರನ್ನು ಪಾಂಡವರನ್ನು ಕರೆದುಕೊಂಡು ಹಸ್ತಿನಾವತಿಗೆ ಬಂದರು. ಅದರ ಬದಲು ಊರ ಜನರಿಗೆಲ್ಲಾ ಅತಿ ಸಂತೋಷವಾಯಿತು. ಭೀಷ್ಮಾದಿಗಳು ಸಂತೋಷವುಳ್ಳವರಾಗಿ ಅವರನ್ನು ಸತ್ಕರಿಸಿ ಧೃತರಾಷ್ಟ್ರನಿಂದ ಕೂಡಿಕೊಂಡು ಬಹುಸಂಭ್ರಮದಿಂದ ಮನೆಗೆ ಕರೆದುಕೊಂಡು ಹೋದರು. ಗಾಂಧಾರಿಯೂ ದುರ್ಯೋಧನನ ಹೆಂಡತಿಯೂ ದ್ರೌಪದೀದೇವಿ ಯರನ್ನು ಅತ್ಯಂತ ಸತ್ಕರಿಸಿದರು. ಕೆಲವು ಸಮಯ ಪಾಂಡವರೂ ಕೌರವರೂ ಒಟ್ಟಿಗೆ ಇದ್ದರು. ಆಮೇಲೆ ಗಾಂಧಾರಿಯು ತನ್ನ ಮಕ್ಕಳ ದುರ್ಬುದ್ಧಿಯಿಂದ ದ್ರೌಪದೀದೇವಿಯರ ನಿಮಿತ್ತವಾಗಿ ಭಯವುಳ್ಳವಳಾಗಿ ಕುಂತೀದೇವಿಯೊಡನೆ 'ಕುಂತಿ! ನೀನು ನಿನ್ನ ಸೊಸೆಯನ್ನು ಕರೆದುಕೊಂಡು ನಿನ್ನ ಮನೆಗೆ ಹೋಗು. ನನ್ನ ಮಕ್ಕಳ ದುರ್ಬುದ್ಧಿಯಿಂದ ಭೀಮಸೇನನಿಂದ ಭಯಪಡುತ್ತೇನೆ. ದ್ರೌಪದಿಯು ಪರಮಸುಂದರಿಯಾಗಿರುವಳು' ಎಂದು ಹೇಳಲು ಕುಂತೀದೇವಿಯು ಪಾಂಡವ ರಿಂದ ಸಹಿತಳಾಗಿ ಪಾಂಡುರಾಜನಿದ್ದ ಮನೆಗೆ ಹೋದಳು. ಅಲ್ಲಿ ಪಾಂಡವರು ಐದುವರ್ಷಗಳ ಕಾಲ ಸುಖದಿಂದ ವಾಸಮಾಡುತ್ತಿದ್ದರು.

ತರುವಾಯ ಧೃತರಾಷ್ಟ್ರನು ಪಾಂಡವರಿಗೆ ಅರ್ಧರಾಜ್ಯವನ್ನು ಕೊಟ್ಟು ಇಂದ್ರಪ್ರಸ್ಥಕ್ಕೆ ಕಳುಹಿಸಿ ದುರ್ಯೋಧನನಿಗೆ ತಾನೂ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿ ಸಂತೋಷದಿಂದ ಇದ್ದನು. ದುಃಶಾಸನಿಗೆ ಯೌವ ರಾಜ್ಯದಲ್ಲಿ ಅಭಿಷೇಕ ಮಾಡಿದನು.

ಪಾಂಡವರು ಇಂದ್ರಪ್ರಸ್ಥದಲ್ಲಿ ಸಂತೋಷದಿಂದ ಇದ್ದರು. ದ್ರೌಪದೀದೇವಿ ಯರಲ್ಲಿ ಪಾಂಡವರಿಂದ ಐದು ಜನ ಮಕ್ಕಳು ಆದರು. ಕ್ರಮದಿಂದ ಧರ್ಮರಾಜಾದಿ ಗಳಿಂದ ಹುಟ್ಟಿದವರು ಪ್ರತಿವಿಂಧ್ಯ, ಶುತಸೋಮ, ಶ್ರುತಕೀರ್ತಿ, ಶತಾನೀಕ,

ಶ್ರುತಕ್ರಿಯ ಎಂಬುವರು. ಅವರು ಐದು ಜನ ವಿಶ್ವೇದೇವತೆಗಳು. ಚಿತ್ರರಥ ಅಭಿತಾಮ್ರ, ಕಿಶೋರ ಗೋಪಾಲ ಬಲ ಎಂಬ ಗಂಧರ್ವ ಶ್ರೇಷ್ಠರ ಆವೇಶ ವುಳ್ಳವರು. ಎಲ್ಲರೂ ಪರಾಕ್ರಮಶಾಲಿಗಳು. ಪರಮಾತ್ಮನು ಭಕ್ತರು. ಅವರಿಂದ ಕೂಡಿಕೊಂಡು ಪಾಂಡವರು ಸಂತೋಷದಿಂದ ಇದ್ದರು.

ತರುವಾಯ ಪಾಂಡವರು ರಾಜಸೂಯಯಾಗವನ್ನು ಮಾಡಿದ ಮೇಲೆ ರಾಜಸೂಯ ಸಭೆಯಲ್ಲಿ ದುರ್ಯೋಧನನು ಬೀಳಲು ದ್ರೌಪದೀದೇವಿಯರೂ ಭೀಮಸೇನದೇವರೂ ನಗಾಡಿದರು ಎಂಬುದನ್ನೇ ಮುಖ್ಯಕಾರಣವನ್ನಿಟ್ಟುಕೊಂಡು ಪಗಡೆ ಆಟವನ್ನು ಆಡಿದನು. ಅದರಲ್ಲಿ ಧರ್ಮರಾಜನು ಎಲ್ಲ ರಾಜ್ಯವನ್ನೂ ಸೋತು ಸಹೋದರರನ್ನೂ ಸೋತರು. ದ್ರೌಪದೀದೇವಿಯರನ್ನೂ ಸೋತು ಕೊನೆಗೆ ತನ್ನನ್ನು ಸೋತುಕೊಂಡನು. ಆಗ ದುರ್ಯೋಧನನು ದ್ರೌಪದೀದೇವಿಯರನ್ನು ಕರೆದು ಕೊಂಡು ಬರುವಂತೆ ತನ್ನ ಸೂತನನ್ನು ಕಳುಹಿಸಿದನು. ಅವನು ದ್ರೌಪದೀದೇವಿಯರ ಬಳಿಗೆ ಹೋಗಿ 'ಪಗಡೆ ಆಟದಲ್ಲಿ ನಿಮ್ಮನ್ನು ಧರ್ಮರಾಜರು ಸೋತಿರುವರು. ಆದುದರಿಂದ ರಾಜರ ಸಭೆಗೆ ಬರಬೇಕು' ಎಂದು ಹೇಳಿದನು. ದ್ರೌಪದೀ ದೇವಿಯರು ನಾನು ಕೌರವರ ಸಭೆಗೆ ಬರಲಾರೆನು ಎಂದರು. ಅವನು ಹಾಗೆಯೇ ಹೊರಟುಹೋದನು. ದುರ್ಯೋಧನನು ಅವನನ್ನು ನೋಡಿ ಭೀಮಸೇನ ದೇವರಿಂದ ಭಯಪಟ್ಟಿರುವನೆಂದು ತಿಳಿದು ತನ್ನ ತಮ್ಮನಾದ ದುಃಶಾಸನನನ್ನೇ ಕಳುಹಿಸಿದನು. ಆ ಪಾಪಿಯು ಹೋಗಿ ದ್ರೌಪದೀದೇವಿಯರ ತಲೆಯನ್ನು ಹಿಡಿದು ರಜಸ್ವಲೆಯಾದ ಅವರನ್ನು ಸಭೆಗೆ ಎಳೆದುಕೊಂಡು ಬಂದನು. ಸಭೆಗೆ ಬಂದ ದ್ರೌಪದೀದೇವಿಯರು ಭೀಷ್ಮಾದಿಗಳೊಡನೆ 'ನೀವು ಈ ಅಧರ್ಮವನ್ನು ಯಾಕೆ ತಡೆಯುವುದಿಲ್ಲ. ಕಪಟದ್ಯೂತದಲ್ಲಿ ಸೋತುಹೋದರೆ ಅದು ಸೋತಂತೆ ಹೇಗೆ ಆಗುವುದು? ದ್ಯೂತವು (ಪಗಡೆ ಆಟವು) ವಿಶೇಷವಾಗಿ ರಾಜರಿಗೆ ಧರ್ಮವೇ ಅಲ್ಲವೆನ್ನುವರಲ್ಲ. ನನ್ನ ಪತಿಗಳು ಸೋಲದೆ ಇರುವಾಗ ನಾನು ಹೇಗೆ ಸೋತೆನು? ಸೋತರೂ ಪತ್ನಿಯು ಪತಿಯ ಸಮಾನಧರ್ಮವುಳ್ಳವಳಾದ ಪ್ರಯುಕ್ತ ಪತಿಯೊಡನೇ ಕಾರ್ಯವನ್ನು ಮಾಡಬೇಕಲ್ಲದೆ ಪ್ರತ್ಯೇಕವಾಗಿ ನಾನು ಹೇಗೆ ದಾಸಿಯಾಗುವೆನು?' ಇತ್ಯಾದಿ ಪ್ರಶ್ನೆಯನ್ನು ಕೇಳಿದರು. ಈರೀತಿಯಾಗಿ ದ್ರೌಪದೀದೇವಿಯರು ಕೇಳಿದರೂ ಭೀಷ್ಮಾಚಾರ್ಯರೇ ಮೊದಲಾದವರು ಕಲ್ಯಾವೇಶವುಳ್ಳವರಾದ ಕಾರಣ ಧರ್ಮರಾಜನ ಕೈಯಲ್ಲಿಯೇ ಕೇಳು ಎಂದು ಹೇಳಿ ಸುಮ್ಮನೆ ಆದರು. ಒಬ್ಬರೂ ದುರ್ಯೋಧನನಿಗೆ ವಿರೋಧವನ್ನು ಮಾಡಲು ಸಮರ್ಥರಾಗಲಿಲ್ಲ. ವಿದುರನು

ಮಾತ್ರ ಇದು ಧರ್ಮವಲ್ಲವೆಂದನು. ಅವನ ಮಾತನ್ನು ಧೃತರಾಷ್ಟನೂ ದುರ್ಯೋಧನಾದಿಗಳೂ ಕೇಳಲೇ ಇಲ್ಲ. ಆಗ ವಿದುರನು ಕೈಯನ್ನು ಮೇಲೆ ಎತ್ತಿಕೊಂಡು ಇದು ಅಧರ್ಮವೆಂದು ಕೂಗಿಕೊಂಡನು. ಇದನ್ನು ನಿಲ್ಲುವಂತೆ ಮಾಡುವ ಶಕ್ತಿ ನನಗೆ ಇಲ್ಲವೆಂದನು. 'ಅಮ್ಮ ದ್ರೌಪದಿ! ನೀನು ಧರ್ಮದಿಂದ ಸೋತಿಲ್ಲ. ಮಹಾ ಅಧರ್ಮ ಈ ಸಭೆಯನ್ನು ಆಕ್ರಮಿಸಿದೆ ಎಂದು ಹೇಳಿದನು. ಆಗ ದುರ್ಯೋಧನನ ತಮ್ಮನಾದ ವಿಕರ್ಣನು ಪಾಪಿಯಾದರೂ ತಾನು ಧರ್ಮವನ್ನು ತಿಳಿದದುವನೆಂದು ಪ್ರಸಿದ್ಧನಾಗಬೇಕೆಂದು. ಇದು ಅಧರ್ಮವೇ ಎಂದನು. ಆಗ ಕರ್ಣನು ಅವನನ್ನು ಗದರಿಸಿದನು.

ಆ ಸಮಯದಲ್ಲಿ ಕ್ಲೇಶಪಡುತ್ತಿದ್ದ ದ್ರೌಪದೀದೇವಿಯರನ್ನು ನೋಡಿ ಧರ್ಮರಾಜನ ಧರ್ಮದ ಅತಿಕ್ರಮಣವನ್ನೂ ನೋಡಿ ಭೀಮಸೇನದೇವರು ರಾಜನು ಧರ್ಮವನ್ನು ಬಿಟ್ಟರೆ ಅವನನ್ನು ಯುವರಾಜನು ಶಿಕ್ಷಿಸಬೇಕು ಎಂಬ ನ್ಯಾಯವನ್ನು ತೋರಿಸುತ್ತಾ 'ಈ ದ್ರೌಪದಿಯನ್ನು ದ್ಯೂತದಲ್ಲಿ ಇಟ್ಟವನ ಎರಡು ಕೈಗಳನ್ನೂ ಸುಟ್ಟುಹಾಕಬೇಕು' ಎಂದರು. ಆಗ ಅರ್ಜುನನು 'ಅಣ್ಣನಲ್ಲವೇ? ಹಾಗೆ ಮಾಡಬಾರದು' ಎಂದನು. ಅದಕ್ಕೆ ಭೀಮಸೇನದೇವರು 'ಬಾಯಿಯಲ್ಲಿ ಹೇಳ ಬಹುದು. ಕಾರ್ಯದಿಂದ ಮಾಡಬಾರದು. ಆದುದರಿಂದಲೇ ನಾನು ಮಾಡಲಿಲ್ಲ. ಉತ್ತಮರಿಗೆ ಮಾತಿನಿಂದಲೇ ಶಿಕ್ಷೆ, ಮಧ್ಯಮರಿಗೆ ಹಣವನ್ನು ಅಪಹರಿಸುವುದು ಶಿಕ್ಷೆಯು, ಅಧಮರಿಗೆ ಬಡಿಯುವುದೇ ಶಿಕ್ಷೆಯು ಎಂದರು.

ತರುವಾಯ ಕರ್ಣನು ದ್ರೌಪದೀದೇವಿಯನ್ನು ನೋಡಿ 'ಸುಂದರಿ! ನಿನಗೆ ಗಂಡಂದಿರೇ ಇಲ್ಲ. ದುರ್ಯೋಧನನ ಮನೆಗೆ ಹೋಗು' ಎಂದನು. ತರುವಾಯ ದುರ್ಯೋಧನನು ಪಾಂಡವರಿಗೇ ಪರಸ್ಪರ ವಿರೋಧವನ್ನುಂಟು ಮಾಡಬೇಕೆಂದು ಅಭಿಪ್ರಾಯದಿಂದ 'ನಿಮಗೆಲ್ಲಾ ಧರ್ಮರಾಜನು ದುಃಖಕ್ಕೆ ಕಾರಣನು. ಧರ್ಮರಾಜ ನನ್ನು ಇತರ ತಮ್ಮಂದಿರು ಧರ್ಮರಾಜನು ನಮ್ಮ ಗುರುಗಳಲ್ಲವೆನ್ನಲಿ. ಅಥವಾ ಭೀಮಾರ್ಜುನರು ಹೇಳಲಿ. ಕೊನೆಗೆ ಭೀಮಸೇನನಾಗಲೀ ಹಾಗೆ ಹೇಳಲಿ. ನಾನು ನಿನ್ನನ್ನು ಬಿಟ್ಟು ಬಿಡುವೆನು' ಎಂದು ದ್ರೌಪದೀದೇವಿಯೊಡನೆ ಹೇಳಿದನು.

ಅದಕ್ಕೆ ಭೀಮಸೇನದೇವರು 'ಧರ್ಮರಾಜನು ನಮಗೆ ಪೂಜ್ಯನೇ ಇದರಲ್ಲಿ ಸಂದೇಹವೇ ಇಲ್ಲ. ನಿಮಗೆಲ್ಲಾ ನಾನು ಗುರುವು. ಕ್ಷತ್ರಿಯರಲ್ಲಿ ಬಲವು ಯಾರಿಗೆ ಹೆಚ್ಚಿಗೆ ಇರುವುದೋ ಅವರೇ ಶ್ರೇಷ್ಠರು. ನನಗೆ ಬಲವು ಹೆಚ್ಚಿಗೆ ಇರುವ ವಿಷಯದಲ್ಲಿ ನಿಮಗೆ ಸಂದೇಹವಿದ್ದರೆ ಯುದ್ಧಕ್ಕೆ ಏಳಿರಿ. ನಿಮ್ಮನ್ನೆಲ್ಲಾ ಕಾಲಿನಿಂದ ಮೆಟ್ಟಿ

ಪುಡಿಪುಡಿ ಮಾಡುತ್ತೇನೆ. ಈರೀತಿ ಹೇಳುತ್ತಾ ಭೀಮಸೇನದೇವರು ಗರ್ಜನೆ ಮಾಡುತ್ತಾ ಎದ್ದು ನಿಂತರು. ಸಭೆಯೆಲ್ಲಾ ಭಯದಿಂದ ನಡುಗಿತು. ಒಬ್ಬರೂ ಒಂದೂ ಮಾತಾಡಲಿಲ್ಲ. ಆಗ ಭೀಷ್ಮಾಚಾರ್ಯರೂ ದ್ರೋಣಾಚಾರ್ಯರೂ ವಿದುರನೂ 'ಕ್ಷಮಿಸಬೇಕು. ನಿಮ್ಮ ಮಾತೆಲ್ಲಾ ಸತ್ಯವು' ಎಂದು ಹೇಳಿ ಕೂತುಕೊಳ್ಳಿಸಿರಿದರು. ಭೀಮಸೇನರು ಕೂತುಕೊಂಡಮೇಲೆ ಎಲ್ಲಾ ದುರ್ಯೋಧನಾದಿಗಳೂ ಶಾಂತಿಯನ್ನು ಹೊಂದಿದರು. ಆಗ ಧರ್ಮರಾಜನಿಂದಲೂ ಇತರ ದೊಡ್ಡವರಿಂದಲೂ ತಡೆಯಲ್ಪಟ್ಟವರಾಗಿ ಭೀಮಸೇನದೇವರು ದುರ್ಯೋಧನಾದಿಗಳನ್ನು ಕೊಲ್ಲಲಿಲ್ಲ. ತರುವಾಯ ಪಾಪಿಯಾದ ದುರ್ಯೋಧನನು ಭೀಮಸೇನದೇವರು ನೋಡುವಂತೆ ದ್ರೌಪದೀದೇವಿಯರಿಗೆ ತನ್ನ ತೊಡೆಯನ್ನು ತೋರಿಸಿದನು. ಆಗ ಭೀಮಸೇನ ದೇವರು ನಿನ್ನ ಈ ತೊಡೆಯನ್ನು ಯುದ್ಧದಲ್ಲಿ ಗದೆಯಿಂದ ಸೀಳಿಹಾಕುತ್ತೇನೆ ಎಂದು ಹೇಳಿದರು. ದುರ್ಯೋಧನನು 'ಇನ್ನು ಮೇಲೆ ನಿಮಗೆ ಪಗಡೆ ಆಟದಲ್ಲಿ ಇಡಲಿಕ್ಕೆ ಒಂದೂ ಇಲ್ಲ. ಕೃಷ್ಣನನ್ನೇ ಇಟ್ಟು ಆಡಿರಿ' ಎಂದು ಹೇಳಿದನು. ಈರೀತಿಯಾಗಿ ಭಗವಂತನಿಗೆ ಅವಮಾನವನ್ನು ಮಾಡಲು 'ನಿನ್ನನ್ನು ಭೂಮಿಯಲ್ಲಿ ಬೀಳಿಸಿ ನಿನ್ನ ತಲೆಯನ್ನು ಮೆಟ್ಟುವೆನು' ಎಂದು ಪ್ರತಿಜ್ಞಾ ಮಾಡಿದರು.

ತರುವಾಯ ಕರ್ಣನು ದ್ರೌಪದೀದೇವಿಯರೊಡನೆ 'ನಮ್ಮ ರಾಜರ ಮನೆಗೆ ಹೋಗು. ನಿನ್ನ ಗಂಡಂದಿರು ಪಾಂಡವರು ಇಲ್ಲ' ಎಂದು ಹೇಳಿದನು. ಆಗ ಭೀಮಾರ್ಜುನರು ಎದ್ದು ನಿಂತರು. ಧರ್ಮರಾಜನು ಅವರನ್ನು ತಡೆದನು. ಆಮೇಲೆ ಅವರಿಬ್ಬರೂ ಕೂತುಕೊಂಡ ಮೇಲೆ ದುರ್ಯೋಧನನು 'ದುಃಶಾಸನ! ನಮ್ಮ ದಾಸರ ವಸ್ತ್ರಗಳನ್ನು ಎಳೆದುಕೊಳ್ಳು' ಎಂದನು. ದುಃಶಾಸನನು ಪಾಂಡವರ ಬಳಿಗೆ ಹೋಗಲು ಅವರು ನಾರುವಸ್ತ್ರವನ್ನು ಧರಿಸಿ ತಮ್ಮ ವಸ್ತ್ರಗಳನ್ನು ಕೊಟ್ಟರು. ತರುವಾಯ ದುರ್ಯೋಧನನ ಮಾತಿನಿಂದ ದುಃಶಾಸನನು ಪಾಂಡವರು ನೋಡುತ್ತಿರುವಂತೆ ದ್ರೌಪದೀದೇವಿಯರ ಸೀರೆಯನ್ನು ಹಿಡಿದು ಸೆಳೆಯಲಿಕ್ಕೆ ಆರಂಭಿಸಿದನು. ಆಗ ಭೀಮಸೇನದೇವರು ಪಾಪಿಗಳಲ್ಲಿ ಪ್ರಧಾನನಾದ ಕುರುವಂಶದಲ್ಲಿ ಅಧಮನಾದ ಈ ದುಃಶಾಸನನ ಎದೆಯನ್ನು ಸೀಳಿ ಎಲ್ಲರೂ ನೋಡುತ್ತಿರುವಂತೆ ರಕ್ತವನ್ನು ಪಾನಮಾಡುವೆನು' ಎಂದು ಪ್ರತಿಜ್ಞೆಯನ್ನು ಮಾಡಿದರು. ದುಃಶಾಸನನು ಸೀರೆಯನ್ನು ಸೆಳೆಯುತ್ತಿರಲು ದ್ರೌಪದೀದೇವಿಯರು ವಿಶೇಷವಾಗಿ ಶ್ರೀಕೃಷ್ಣಪರಮಾತ್ಮನನ್ನು ಸ್ಮರಿಸಿದರು. ಆಗ ಬೇರೆಬೇರೆ ವಸ್ತ್ರಗಳು ಉಂಟಾದವು. ದುಃಶಾಸನು ಎಳೆದು ಎಳೆದು ಸೋತು ಕೂತುಕೊಂಡನು. ವಸ್ತ್ರದ ರಾಶಿಯು ಬೆಟ್ಟದಂತೆ ಆಗಲು

ದುರ್ಯೋಧನನು ಕೋಪಿಸಿಕೊಂಡು 'ದುಃಶಾಸನ! ಇವಳನ್ನು ಒಳಗೆ ಎಳೆದುಕೊಂಡು ಹೋಗು' ಎಂದನು. ಆ ಮಾತನ್ನು ಕೇಳಿ ದ್ರೌಪದೀದೇವಿಯರು 'ಭೀಮಸೇನದೇವರು ದುರ್ಯೋಧನನನ್ನು ಸಂಹರಿಸುವರು. ಅರ್ಜುನರು ಕರ್ಣನನ್ನು ಕೊಲ್ಲುವರು. ಶಕುನಿಯನ್ನು ಸಹದೇವರು ಸಂಹರಿಸುವರು' ಎಂದು ಹೇಳಿದರು. ಆ ಮಾತನ್ನು ಸಭೆಯಲ್ಲಿ ಭೀಮಸೇನದೇವರೂ ಅರ್ಜುನನೂ ಸಹದೇವನೂ ಅಂಗೀಕರಿಸಿದರು. ನಕುಲನು ಶಕುನಿಯ ಮಗನನ್ನು ಸಂಹರಿಸುವೆ ನೆಂದು ಪ್ರತಿಜ್ಞಾಮಾಡಿದನು.

ತರುವಾಯ ದುಃಶಾಸನನು ಒಳಗೆ ಕರೆದುಕೊಂಡು ಹೋಗುವೆನೆಂದು ಹಿಡಿದು ಸೆಳೆದನು. ಆಗ ಭೀಮಸೇನದೇವರು 'ಅರ್ಜುನ! ಅರ್ಜುನ! ಇನ್ನು ನಾನು ಕ್ಷಮಿಸಲಾರೆನು. ವಿದ್ಯಾಕರ್ಮ ಮಕ್ಕಳು ಎಂದು ಈ ದೇಹಕ್ಕೆ ಮೂರು ಫಲಗಳು. ಹೆಂಡತಿಯನ್ನು ಇನ್ನೊಬ್ಬರು ಸೆಳೆದುಕೊಂಡು ಹೋದರೆ ಸತ್ಪುತ್ರರಾಗಲಾರರು. ಪತ್ನಿಯು ಕೆಟ್ಟುಹೋದರೆ ಅವನು ಉತ್ತಮಲೋಕಗಳನ್ನು ಹೊಂದಲಾರನು. ಅವನ ಅಧರ್ಮವೇ ದುಷ್ಟವಾಗುವುದು. ನಾವು ರಕ್ಷಣೆ ಮಾಡದೆ ಸ್ತ್ರೀಯು ಕೆಟ್ಟುಹೋದರೆ ಅವಳನ್ನು ಪರಿತ್ಯಾಗ ಮಾಡಿದರೂ ಶುಭವಾಗಲಾರದು. ಆದುದರಿಂದ ಈ ದುರ್ಯೋಧನಾದಿಗಳನ್ನೆಲ್ಲರೂ ಕೊಂದುಬಿಡುವೆನು' ಎಂದು ಹೇಳಿ ಎದ್ದು ನಿಂತರು. ರೋಷದಿಂದ ಘೋರವಾದ ಪರಿಘ ಎಂಬ ಆಯುಧವನ್ನು ನೋಡಿದರು. ಆಗ ಹೆಣ್ಣುನರಿಗಳು ದುರ್ಯೋಧನನ ಅಗ್ನಿಹೋತ್ರದ ಮನೆಯ ಸಮೀಪದಲ್ಲಿ ಕೂಗಿದವು. ಹಾಗೆಯೇ ಧೃತರಾಷ್ಟ್ರನ ಮನೆಯಲ್ಲಿಯೂ ಅನೇಕ ಭಯಂಕರ ಸೂಚನಗಳಾದವು. ಅವುಗಳನ್ನು ತಿಳಿದು ಧೃತರಾಷ್ಟ್ರನು ವಿದುರನೊಡನೆ ಈ ಶಕುನಗಳಿಗೆ ಫಲವೇನೆಂದು ಕೇಳಿದನು. ಅದಕ್ಕೆ ವಿದುರನು ಇದೇ ಕ್ಷಣದಲ್ಲಿ ನಿನ್ನ ಮಕ್ಕಳೆಲ್ಲರೂ ಪರಿವಾರ ಸಹಿತರಾಗಿ ಭೀಮಸೇನದೇವರ ಬಲದಿಂದ ಸತ್ತವರಾಗಿ ಉಳಿಯಲಿಕ್ಕೆ ಹೋಗುವುದಿಲ್ಲ. ಚಿಕ್ಕ ಹುಡುಗರಂತೆ ನೀನು ಮಕ್ಕಳೊಡನೆ ಏನು ಜಯಿಸಿದಿರಿ ಎಂದು ಕೇಳುತ್ತಾ ಆಡುತ್ತಿರುವೆ. ಅಧರ್ಮದಿಂದ ಜಯಿಸಲ್ಪಟ್ಟವರನ್ನು ಧರ್ಮದಿಂದ ಜಿತರೆಂದು ತಿಳಿದುಕೊಂಡಿರುವಿ! ಇತ್ಯಾದಿ ಹೇಳಲು ಧೃತರಾಷ್ಟ್ರನು ಈ ಶಕುನಗಳ ಫಲಗಳು ಏನು ಮಾಡಿದರೆ ಆಗಲಾರದು? ಎಂದು ಕೇಳಿದನು. ಅದಕ್ಕೆ ವಿದುರನು 'ಬೇಗನೇ ದ್ರೌಪದೀದೇವಿಯನ್ನು ದಾಸ್ಯದಿಂದ ಬಿಡಿಸು. ವರಗಳನ್ನು ಕೊಟ್ಟು ಸಂತೋಷಪಡಿಸು. ಇಲ್ಲದಿದ್ದರೆ ನಿನ್ನ ಮಕ್ಕಳು ಈಗಲೇ ಸತ್ತರು ಎಂದು ತಿಳಿ' ಎಂದನು. ಧೃತರಾಷ್ಟ್ರನು ದುಃಶಾಸನನನ್ನು ಗದರಿಸಿ ದ್ರೌಪದೀದೇವಿಯರನ್ನು

ಬಿಡಿಸಿದನು. ಬೇಕಾದ ವರಗಳನ್ನು ಕೇಳುವಂತೆ ಹೇಳಿಕೊಂಡನು. ದ್ರೌಪದೀ ದೇವಿಯರು ಧರ್ಮರಾಜನನ್ನು ಸಹೋದರರಿಂದ ಸಹಿತನಾಗಿ ರಾಜ್ಯದಿಂದ ಸಹಿತನಾಗಿ ಬಿಡಿಸುವಂತೆ ಹೇಳಿದರು. ರಾಜನು ಹಾಗೆಯೇ ಬಿಡಿಸಿದನು. ಮತ್ತೂ ವರವನ್ನು ಕೇಳಿಕೊಳ್ಳುವಂತೆ ಧೃತರಾಷ್ಟ್ರನು ಹೇಳಿದನು. ಆದಕ್ಕೆ ದ್ರೌಪದೀ ದೇವಿಯರು ಆಮೇಲೆ ವರವನ್ನು ಕೇಳಿಕೊಳ್ಳಲಿಲ್ಲ. ಪರಮಾತ್ಮನಿಂದ ಮತ್ತು ಗಂಡನಿಂದ ಹೊರತು ಇನ್ನೊಬ್ಬರಿಂದ ವರವನ್ನು ಸ್ವೀಕರಿಸಬಾರದು ಎಂದು ಭಾಗವತ ಧರ್ಮವು. ರಾಜ್ಯಾದಿಗಳನ್ನು ಅಧರ್ಮದಿಂದ ದುರ್ಯೋಧನಾದಿಗಳು ಅಪಹರಿಸಿದ ಕಾರಣ ಅದನ್ನು ಕೇಳಿದರೆ ವರವಾಗಲಾರದು ಎಂಬ ಅಭಿಪ್ರಾಯ ದಿಂದ ಕೇಳಿಕೊಂಡರು. ಮತ್ತು ಕ್ಷತ್ರಿಯಸ್ತ್ರೀಯು ಮಾವನಿಂದ ಐಹಿಕ ಮೂರು ವರಗಳನ್ನು ಕೇಳಬಹುದು. ಬ್ರಾಹ್ಮಣಸ್ತ್ರೀಯು ನೂರು ವರಗಳನ್ನು ಕೇಳಬಹುದು ಎಂದು ಭಾಗವತ ಧರ್ಮವು. ಆದುದರಿಂದ ದ್ರೌಪದೀದೇವಿಯರು ಆಮೇಲೆ ಧೃತರಾಷ್ಟ್ರನಿಂದ ಬೇರೆ ವರಗಳನ್ನು ಕೇಳಲಿಲ್ಲ.

ತರುವಾಯ ಪಾಂಡವರು ಬಿಡುಗಡೆಯನ್ನು ಹೊಂದಿದವರಾಗಿ ದೊಡ್ಡವರಾಗಿ ನಮಸ್ಕರಿಸಿ ದ್ರೌಪದೀದೇವಿಯರಿಂದ ಸಹಿತರಾಗಿ ಹೊರಟುಹೋದರು. ತರುವಾಯ ದುಃಶಾಸನನು ಧೃತರಾಷ್ಟ್ರನೊಡನೆ 'ಪಾಂಡವರ ಸಮಸ್ತ ಐಶ್ವರ್ಯ ವನ್ನೂ ನಮಗೆ ಬಂದು ಸೇರಿದ್ದನ್ನು ತಪ್ಪಿಸಿ ಬಿಟ್ಟೆಯಲ್ಲಾ. ಭೀಮಸೇನನು ನಮ್ಮನ್ನು ಕೊಲ್ಲುವುದಂತೂ ನಿಶ್ಚಿತವಾದದ್ದು. ಆದುದರಿಂದ ಪುನಃ ಪಾಂಡವರನ್ನು ಕರೆಯಿ. ಪುನಃ ದ್ಯೂತವನ್ನು ಆಡುವೆವು' ಎಂದು ಹೇಳಿದನು. ಹಾಗೆಯೇ ಧೃತರಾಷ್ಟ್ರನು ಪಾಂಡವರನ್ನು ಪುನಃ ಪಗಡೆ ಆಟಕ್ಕೆ ಕರೆದನು. ಧರ್ಮರಾಜನು ಪುನಃ ಸಹೋದರರೂ ದ್ರೌಪದೀದೇವಿಯರೂ ಬೇಡವೆಂದರೂ ಪಗಡೆ ಆಟದ ಸಭೆಗೆ ಬಂದನು. ಆಗ ದುಃಶಾಸನನ ಯೋಚನೆಯಿಂದ ಪಗಡೆ ಆಟದಲ್ಲಿ ಸೋತು ಹೋದವರು ಹನ್ನೆರಡು ವರ್ಷ ವನವಾಸವನ್ನು ಒಂದು ವರ್ಷಕಾಲ ಹತ್ತಿರದಲ್ಲೇ ಒಬ್ಬ ಪ್ರಸಿದ್ಧರಾಜನ ಊರಿನಲ್ಲಿ ಯಾರಿಗೂ ತಿಳಿಯದಂತೆ ವಾಸ ಮಾಡುವುದನ್ನೂ ಹಾಗೆ ವಾಸಮಾಡುವ ಸಮಯದಲ್ಲಿ ದ್ರೌಪದೀದೇವಿಯರನ್ನೋ ಅಥವಾ ಪಾಂಡವರಲ್ಲಿ ಯಾರಾದರನ್ನೂ ಕಂಡುಹಿಡಿದರೆ ಪುನಃ ಹನ್ನೆರಡುವರ್ಷ ವನವಾಸವನ್ನು ಪುನಃ ಒಂದು ವರ್ಷ ತಿಳಿಯದಂತೆ ವಾಸಮಾಡುವಂತೆಯೂ ಪಂಥವನ್ನು ಹಾಕಿದನು.

ತರುವಾಯ ಧರ್ಮರಾಜನು ಪಗಡೆ ಆಟದಲ್ಲಿ ಸೋತು ಹೋಗಿ ವನಕ್ಕೆ

ಹೋಗಲು ಇಚ್ಛಿಸಿದನು. ಆಗ ದುಃಶಾಸನನು ನಗುತ್ತಾ ಭೀಮಸೇನ ದೇವರನ್ನು ಪಶು ಪಶು ಎಂದು ಹೇಳುತ್ತಾ ಕುಣಿದನು. ದ್ರೌಪದೀದೇವಿಯರೊಡನೆ 'ಸುಂದರಿ! ನಿನಗೆ ಗಂಡಂದಿರು ಇಲ್ಲ. ನೀನು ದುರ್ಯೋಧನನ ಮನೆಗೆ ಹೋಗು. ಈ ಪಾಂಡವರೆಲ್ಲರೂ ಹೊಟ್ಟು ಎಳ್ಳಿಗೆ ಸಮಾನರು. ಇವರಿಗೆ ಈ ಆಪತ್ತಿನಿಂದ ಉದ್ಧಾರವೇ ಇರುವುದಿಲ್ಲ' ಎನ್ನುತ್ತಾ ಭೀಮಸೇನದೇವರ ಹಿಂದೆಯೇ ಅವರಂತೆಯೇ ನಡೆಯುತ್ತಾ ಹೋದನು. ಅವನ ತಮ್ಮಂದಿರೆಲ್ಲಾ ಗಟ್ಟಿಯಾಗಿ ನಗಾಡಿದರು. ಆಗ ಭೀಮಸೇನದೇವರು ನಿಮ್ಮನ್ನೆಲ್ಲಾ ಕೊಂದುಹಾಕುವೆನು ಎಂದು ಪ್ರತಿಜ್ಞಾ ಮಾಡಿದರು. ಆಗ ಎಲ್ಲರೂ ತಮ್ಮನ್ನು ರಕ್ಷಿಸುವಂತೆ ದ್ರೋಣಾಚಾರ್ಯರನ್ನು ಮರೆ ಹೊಂದಿದರು. ಆಗ ದ್ರೋಣಾಚಾರ್ಯರು 'ನಾನು ಬ್ರಾಹ್ಮಣನಾಗಿದ್ದರೂ ನನ್ನ ಮಗನಿಂದಲೂ ಕೃಪಾಚಾರ್ಯರಿಂದಲೂ ಸಹಿತನಾಗಿ ಶಸ್ತ್ರವನ್ನು ಧರಿಸುವೆನು. ಶಕ್ತಿಯನ್ನು ಮೀರಿ ಯುದ್ಧವನ್ನು ಮಾಡುವೆನು. ಆದರೆ ನಾನು ನಿಮ್ಮನ್ನು ಭೀಮಸೇನದೇವರಿಂದ ರಕ್ಷಿಸಲು ಸಮರ್ಥನಲ್ಲ. ನಾನು ಹೇಳುವ ಮಾತು ಸತ್ಯವಾದದ್ದು' ಎಂದು ಹೇಳಿದರು.

ತರುವಾಯ ಪಾಂಡವರೆಲ್ಲರೂ ದ್ರೌಪದೀದೇವಿಯೊಡನೆ ಸಭೆಯಿಂದ ಹೊರಗೆ ಹೋದರು. ಆಗ ದುರ್ಯೋಧನನು ಭೀಮಸೇನದೇವರಂತೆ ನಡೆಯುತ್ತಾ ಹಿಂದೆಯೇ ನಗುತ್ತಾ ಹೋದನು. ಆಗ ಸಭೆಯಿಂದ ಅರ್ಧ ಹೊರಗೆ ಹೋದ ದೇಹವುಳಳವರಾಗಿ ಹಿಂದೆ ತಿರುಗಿ ಕಣ್ಣುಕೆಂಪಗೆ ಮಾಡಿಕೊಂಡು ನಿನ್ನ ಇನ್ನೊಂದು ತೊಡೆಯನ್ನು ಮುರಿದು ಹಾಕುವೆನು ಎಂದು ಹೇಳಿದರು. ಹಾಗೆಯೇ ಸಭೆಯಿಂದ ಹೊರಟುಹೋದರು. ಪಾಂಡವರ ಹಿಂದೆಯೇ ಕುಂತೀದೇವಿಯು ಅಳುತ್ತಾ ಹೋದರು. ಅವರನ್ನು ವಿದುರನು ತನ್ನ ಮನೆಯಲ್ಲಿ ಇರಿಸಿಕೊಂಡನು. ಪಾಂಡವರು ದ್ರೌಪದೀದೇವಿಯರಿಂದ ಕೂಡಿಕೊಂಡು ಕುಂತೀದೇವಿಗೆ ನಮಸ್ಕರಿಸಿ ಶೀಘ್ರವಾಗಿ ಹೋದರು. ಆಗ ಧರ್ಮರಾಜನು ತಾನು ಕ್ರೋಧದೃಷ್ಟಿಯಿಂದ ಕೌರವರನ್ನು ನೋಡಿದರೆ ಸುಟ್ಟುಹೋಗುವರು ಎಂದು ಕರುಣೆಯುಳ್ಳವನಾಗಿ ಮುಖವನ್ನು ತಗ್ಗಿಸಿಕೊಂಡು ಹೋದನು. ಭೀಮಸೇನದೇವರು ಇದೇ ಕೈಗಳಿಂದ ಶತ್ರು ಗಳೆಲ್ಲರನ್ನೂ ಕೊಲ್ಲಲು ಸಮರ್ಥನೆಂದು ತಿಳಿಸುವುದಕ್ಕಾಗಿ ಎರಡು ಕೈಗಳನ್ನು ಎತ್ತಿಕೊಂಡು ಹೋದರು. ದ್ರೌಪದೀದೇವಿಯರು ಇದೇ ರೀತಿಯಾಗಿ ದುರ್ಯೋಧನಾದಿಗಳ ಹೆಂಡತಿಯರು ತಲೆಯನ್ನು ಬಿಚ್ಚಿಹಾಕುವರು ಎಂದು ತೋರಿಸುವುದಕ್ಕಾಗಿ ತಾನು ತಲೆಯನ್ನು ಬಿಚ್ಚಿಕೊಂಡು ಹೋದರು. ಅರ್ಜುನನು ಇದೇರೀತಿಯಾಗಿ ಬಾಣಗಳನ್ನು ಸುರಿಸುವೆನು ಎಂದು ತೋರಿಸುತ್ತಾ ಉಸುಬುಗಳನ್ನು

ಸುರಿಸುತ್ತಾ ಹೋದನು. ನಕುಲಸಹದೇವರು ಈ ಅವಸ್ಥೆಯಲ್ಲಿ ಶತ್ರುಗಳು ನಮ್ಮ ಮುಖವನ್ನು ನೋಡಬಾರದು ಎಂಬ ಅಭಿಪ್ರಾಯದಿಂದ ಮುಖವನ್ನು ತಗ್ಗಿಸಿಕೊಂಡು ಹೋದರು. ಧೌಮ್ಯಾಚಾರ್ಯರು ದುರ್ಯೋಧನಾದಿಗಳ ಮರಣಾನಂತರದಲ್ಲಿ ತಾನು ಈ ಕಾರ್ಯವನ್ನು ಮಾಡಿಸಬೇಕೆಂದು ತಿಳಿಸುತ್ತಾ ಪ್ರೇತಸೂಕ್ತಗಳನ್ನು ಹೇಳುತ್ತಾ ಹೋದರು. ಹೀಗೆ ಎಲ್ಲರೂ ವನಕ್ಕೆ ಹೋದರು—

ಪಾಂಡವರು ವನದಲ್ಲಿ ಇದ್ದುಕೊಂಡು ಶ್ರೀಕೃಷ್ಣಪರಮಾತ್ಮನಿಗೆ ಈ ವರ್ತಮಾನ ವನ್ನು ಹೇಳಿ ಕಳುಹಿಸಿದರು. ಆಗ ಭಗವಂತನು ಸತ್ಯಾಭಾಮಾದೇವಿಯರಿಂದ ಸಹಿತನಾಗಿ ಅಲ್ಲಿಗೆ ಬಂದನು. ಆಗ ಕೋಪಿಸಿಕೊಂಡಿರುವ ಕೃಷ್ಣಪರಮಾತ್ಮನನ್ನು ಪಾಂಡವರು ಸ್ತೋತ್ರ ಮಾಡುತ್ತಾ ಸಮಾಧಾನಪಡಿಸಿದರು. ಆಗ ದ್ರೌಪದೀ ದೇವಿಯರು ಭಗವಂತನನ್ನು ಸ್ತುತಿಸುತ್ತಾ ತಾನು ಅನುಭವಿಸಿದ ದುಃಖಗಳನ್ನೆಲ್ಲಾ ಹೇಳಿಕೊಂಡರು. ಅದನ್ನೆಲ್ಲಾ ಕೇಳಿ ಭಗವಂತನು ಭೀಮಸೇನನಿಂದ ಮೃತರಾದ ತನ್ನ ಗಂಡದಿರನ್ನು ಆಲಂಗಿಸಿಕೊಂಡು ತಲೆಬಿಚ್ಚಿಕೊಂಡು ಅಳುತ್ತಿರುವ ದುರ್ಯೋಧನಾದಿಗಳ ಹೆಂಡತಿಯರನ್ನು ನಿನಗೆ ತೋರಿಸುವೆನೆಂದು ಪ್ರತಿಜ್ಞಾ ಮಾಡಿದನು. ತರುವಾಯ ಭಗವಂತನು ಪಾಂಡವರಿಗೆಲ್ಲಾ ಸಮಾಧಾನವನ್ನು ಹೇಳಿ ಕೆಲವು ದಿಪಸ ಅಲ್ಲಿಯೇ ಇದ್ದು ಸುಭದ್ರೆಯನ್ನು ಅಭಿಮನ್ಯುವನ್ನು ಕರೆದುಕೊಂಡು ದ್ವಾರಕೆಗೆ ಹೋದನು.

ತರುವಾಯ ಹೀಗೆಯೇ ವನದಲ್ಲಿ ಒಂದು ವರ್ಷಕಾಲ ನಡೆಯಿತು. ತರುವಾಯ ಧರ್ಮರಾಜನು ಅತಿಮೃದು ಸ್ವಭಾವದವನಾದ ಕಾರಣ ಹದಿನಾಲ್ಕನೇ ವರ್ಷದಲ್ಲಿಯೂ ಯುದ್ಧಮಾಡಲಿಕ್ಕೆ ಸಮ್ಮತಿಯನ್ನು ಕೊಡಲಾರನೆಂದು ಈಗಲೇ ಅವನ ಬಾಯಿಯಿಂದ ಹದಿನಾಲ್ಕನೇ ವರ್ಷದಲ್ಲಿ ಯುದ್ಧಕ್ಕೆ ಹೋಗುವಂತೆ ಪ್ರತಿಜ್ಞಾ ಮಾಡಿಸಬೇಕೆಂದು ಭೀಮಸೇನದೇವರ ಅಭಿಪ್ರಾಯದಂತೆ ದ್ರೌಪದೀದೇವಿಯರು ಧರ್ಮರಾಜನೊಡನೆ ದುರ್ಯೋಧನಾದಿ ಅಯೋಗ್ಯರಲ್ಲಿ ಕ್ಷಮೆಯನ್ನು ತೋರಿಸಿದ್ದು ಸರಿಯಲ್ಲವೆಂದು ಸಮರ್ಥಿಸಿದರು. ಧರ್ಮರಾಜರು ಕೋಪಿಸಿಕೊಂಡು ನೀನು ಕುಯುಕ್ತಿಯಿಂದ ದೇವರಿಗೇ ಸ್ವಾತಂತ್ರ್ಯವಿಲ್ಲವೆಂದು ಹೇಳುವಿ ಎಂದು ಗದರಿಸಿದರು. ಆಗ ದ್ರೌಪದೀದೇವಿಯು ಸ್ತ್ರೀಯಾದವಳು ಹೆಚ್ಚಿಗೆ ಮಾತಾಡಬಾರದೆಂದು ಸುಮ್ಮನೆ ಆದರೂ ಆಮೇಲೆ ಭೀಮಸೇನದೇವರು ಜೀವನಿಗೆ ಕರ್ತೃತ್ವವಿದೆಯೆಂದೂ ಅದು ಭಗವದಧೀನವೆಂದೂ ಸಮರ್ಥಿಸಿ ಹದಿಮೂರು ವರ್ಷದ ಮೇಲೆ ಯುದ್ಧಕ್ಕೆ ಹೋಗುವೆನೆಂದು ಅವನ ಬಾಯಿಯಿಂದ ಪ್ರತಿಜ್ಞೆ ಮಾಡಿಸಿದರು. ತರುವಾಯ

ಅರ್ಜುನನು ಅಸ್ತ್ರವಿದ್ಯೆಗಳನ್ನು ಪಡೆಯಲು ಇಂದ್ರಕೀಲ ಪರ್ವತಕ್ಕೆ ಹೋಗಿ ಅಲ್ಲಿ ರುದ್ರದೇವರನ್ನು ಪ್ರತ್ಯಕ್ಷೀಕರಿಸಿ ಪಾಶುಪತಾಸ್ತ್ರವನ್ನು ಪಡೆದು ಸ್ವರ್ಗಲೋಕಕ್ಕೆ ಹೋದನು. ಪಾಂಡವರು ತೀರ್ಥಯಾತ್ರೆಯನ್ನು ಮಾಡುತ್ತಾ ಹಿಮವವತ್ಪರ್ವತಕ್ಕೆ ಹೋದರು. ಅಲ್ಲಿ ದ್ರೌಪದೀದೇವಿಯರು ನಡೆಯಲಿಕ್ಕೆ ಶ್ರಮಪಡಲು ಪಾಂಡವರು ಸ್ಮರಣೆ ಮಾಡಿದ ಕಾರಣ ಘಟೋತ್ಕಚನು ಪರಿವಾರ ಸಹಿತನಾಗಿ ಬಂದನು. ಘಟೋತ್ಕಚನು ದ್ರೌಪದೀದೇವಿಯನ್ನು ಹೊತ್ತುಕೊಂಡು ಹೋದನು. ರಾಕ್ಷಸರೆಲ್ಲರೂ ಪಾಂಡವರನ್ನೂ ಬ್ರಾಹ್ಮಣರನ್ನೂ ಹೊತ್ತುಕೊಂಡು ಹೋದನು. ತರುವಾಯ ಅವರು ಹಿಮವರ್ತ್ವತವನ್ನು ದಾಟಿ ಹೇಮಕೂಟಪರ್ವತವನ್ನು ನಿಷಧ ಪರ್ವತವನ್ನು ದಾಟಿ ಮೇರುಪರ್ವತದ ಪೂರ್ವದಲ್ಲಿ ಗಂಧಮಾದನ ಪರ್ವತದ ಬುಡದಲ್ಲಿರುವ ಬದರಿಕಾಶ್ರಮವನ್ನು ಹೊಂದಿದರು. ಅಲ್ಲಿ ಮುನೀಂದ್ರರಿಂದ ಸತ್ಕೃತರಾಗಿ ನಾರಾಯಣನನ್ನು ಪೂಜಿಸುತ್ತಾ ತಪಸ್ಸು ಮಾಡುತ್ತಾ ಇದ್ದರು.

ಈರೀತಿಯಾಗಿ ಬದರಿಯಲ್ಲಿ ವಾಸಿಸುತ್ತಿರಲು ಒಂದುದಿನ ಏಕಾಂತದಲ್ಲಿ ದ್ರೌಪದೀದೇವಿಯರೊಡನೆ ಭೀಮಸೇನದೇವರು ಕುಳಿತಿರಲು ಗರುಡದೇವರು ಒಂದು ಹಾವನ್ನು ಎತ್ತಿಕೊಂಡು ಹೋದರು. ಅವರ ರೆಕ್ಕೆಯ ಗಾಳಿಯಿಂದ ಆಪರ್ವತವೇ ನಡುಗಲು ಒಂದು ಬಂಗಾದರ ತಾವರೆಹೂವು ಭೀಮಸೇನದೇವರ ಮತ್ತು ದ್ರೌಪದೀದೇವಿಯರ ಸಮೀಪಕ್ಕೆ ಬಂದು ಬಿದ್ದಿತು. ಅತಿಸುವಾಸನೆಯುಳ್ಳ ಆ ಹೂವನ್ನು ನೋಡಿ ದ್ರೌಪದೀದೇವಿಯರು ಆ ಹೂವಿದ್ದ ಸರೋವರಕ್ಕೆ ಹೋಗಿ ಅಲ್ಲಿ ರಕ್ಷಕರಾಗಿದ್ದ ರಾಕ್ಷಸರನ್ನು ಕೊಂದರು. ತರುವಾಯ ಪಾಂಡವರೆಲ್ಲರೂ ಅಲ್ಲಿಗೆ ಹೋಗಿ ಸೇರಿದರು. ಅಲ್ಲಿ ಕುಬೇರಮನೆಯಲ್ಲಿ ಪಾಂಡವರು ವಾಸಮಾಡುತ್ತಿದ್ದರು. ಅಲ್ಲಿರುವಾಗಲೇ ಅರ್ಜುನನ್ನು ಸ್ವರ್ಗಲೋಕದಿಂದ ಬಂದು ಸೇರಿದನು. ತರುವಾಯ ಅಲ್ಲಿಯೇ ನಾಲ್ಕು ವರ್ಷಗಳಿದ್ದು ಆಮೇಲೆ ಅಲ್ಲಿಂದ ಕೆಳಗೆ ಬಂದು ವಾಸಿಸುತ್ತಿದ್ದರು.

ಒಂದು ದಿವಸದಲ್ಲಿ ಪಾಂಡವರು ಅರಣ್ಯದಲ್ಲಿ ಇರಲು ಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರಿಂದ ಸಹಿತನಾಗಿ ಅಲ್ಲಿಗೆ ಬಂದನು. ಆಗ ಸತ್ಯಭಾಮಾ ದೇವಿಯರು ತಾನು ಸರ್ವಜ್ಞರಾಗಿದ್ದರೂ ಪರೀಕ್ಷಿಸುವುದಕ್ಕಾಗಿ ದ್ರೌಪದೀದೇವಿ ಯರೊಡನೆ ಸ್ತ್ರೀಯರ ಧರ್ಮಗಳನ್ನು ಕೇಳಲು ದ್ರೌಪದೀದೇವಿಯರು ಅವರ ಅಭಿಪ್ರಾಯವನ್ನು ತಿಳಿದವರಾಗಿ ಸ್ತ್ರೀಧರ್ಮಗಳನ್ನೆಲ್ಲಾ ಹೇಳಿದರು. ತರುವಾಯ ಕೆಲವು ದಿವಸ ಪರಮಾತ್ಮನು ಅಲ್ಲೇ ಇದ್ದು ಹೊರಟುಹೋದನು.

ತರುವಾಯ ಒಂದುದಿನ ಪಾಂಡವರು ಮೃಗಭೇಟೆಗೆ ಹೋಗಿರಲು ಸೈಂಧವನು

'ಕೋಟಿಕಾಶ್ಯ'ನೆಂಬವನಿಂದ ಸಹಿತನಾಗಿ ಸೈನ್ಯ ಸಹಿತನಾಗಿ ಒಂದು ಮದುವೆಗೆ ಹೋಗುವವನು. ದ್ರೌಪದೀದೇವಿಯರನ್ನು ಆಶ್ರಮದಲ್ಲಿ ನೋಡಿದನು. ಕೋಟಿಕಾಶ್ಯನನ್ನು ಕಳುಹಿಸಿ ಕೊನೆಗೆ ತಾನೇ ಹೋಗಿ ತನ್ನನ್ನು ಮದುವೆಯಾಗುವಂತೆ ಹೇಳಿದನು. ಕೈಯಲ್ಲಿ ಹೋಗಿ ಹಿಡಿದನು. ದ್ರೌಪದೀದೇವಿಯರು ತಳ್ಳಲು ದೂರಹೋಗಿಬಿದ್ದನು. ತರುವಾಯ ದ್ರೌಪದೀದೇವಿಯರು ಸಹಾಯಕ್ಕೆ ಒಬ್ಬರೂ ಇಲ್ಲದ ಕಾರಣ ಧೌಮ್ಯಾಚಾರ್ಯರೊಡನೆ ಅಗ್ನಿಯಿಂದ ಸಹ ತನ್ನನ್ನು ಅನುಸರಿಸಿ ಬರುವಂತೆ ಹೇಳಿ ನೀನು ಕ್ಷೇಮದಿಂದ ಹೋಗಿ ಸೇರಲಾರಿ ಎಂದು ಹೇಳಿ ಸೈಂಧವನ ರಥವನ್ನೇ ಹತ್ತಿದರು.

ಆಸಮಯದಲ್ಲಿ ಪಾಂಡವರು ದುಃಶಕುನಗಳನ್ನು ನೋಡಿ ಆಶ್ರಮಕ್ಕೆ ಹೋಗಿ ದಾಸಿಯ ವಚನದಿಂದ ಎಲ್ಲವನ್ನೂ ತಿಳಿದುಕೊಂಡು ಬೇಗನೇ ಸೈಂಧವನನ್ನು ಅನುಸರಿಸಿಕೊಂಡು ಹೋದರು. ಭೀಮಸೇನರನ್ನು ಕರೆಯುತ್ತಿರುವ ಧೌಮ್ಯಾ ಚಾರ್ಯರನ್ನು ಅವರ ಮುಂದಿನಲ್ಲಿ ಹೋಗುತ್ತಿದ್ದ ಪಾಪಿಯಾದ ಸೈಂಧವನನ್ನು ನೋಡಿ ಪಾಂಡವರು ಸಿಂಹದಂತೆ ಗರ್ಜನೆಯನ್ನು ಮಾಡಿದರು. ಅವರನ್ನು ನೋಡಿ ದ್ರೌಪದೀದೇವಿಯರು ರಥದಿಂದ ಕೆಳಗೆ ಇಳಿದು ಬಿಟ್ಟರು. ಅವರು ಧೌಮ್ಯಾ ಚಾರ್ಯರೊಡನೆ ಆಶ್ರಮಕ್ಕೆ ಹೊರಟುಹೋದರು. ಪಾಂಡವರು ಸೈನ್ಯವನ್ನು ನಾಶಮಾಡಿದರು. ದ್ರೌಪದೀದೇವಿಯರನ್ನು ಸೈಂಧವನ ಬಳಿಗೆ ಹೋಗು ಎಂದು ಹೇಳಿದ ಪಾಪಿಯಾದ ಕೋಟಿಕಾಶ್ಯನನ್ನು ಭೀಮಸೇನದೇವರು ಸಂಹಾರ ಮಾಡಿದರು. ಭೀಮಾರ್ಜುನರು ಸೈಂಧವನ ಸೈನ್ಯವನ್ನೆಲ್ಲಾ ನಾಶಮಾಡಿ ಧರ್ಮರಾಜ ನನ್ನು ನಕುಲಸಹದೇವರನ್ನೂ ಆಶ್ರಮಕ್ಕೆ ಕಳುಹಿಸಿ ಓಡುತ್ತಿದ್ದ ಸೈಂಧವನನ್ನು ಬೆನ್ನಟ್ಟಿ ಹೋದರು. ಅರ್ಜುನನು ಸೈಂಧವನ ರಥವನ್ನು ನಾಶಮಾಡಿದನು. ಕಾಲಿನಿಂದಲೇ ಓಡುತ್ತಿದ್ದ ಸೈಂಧವನನ್ನು ಭೀಮಸೇನದೇವರು ಹಿಡಿದು ಕಾಲಿನಿಂದ ಚೆನ್ನಾಗಿ ಒದೆದು ಎಳೆದುಕೊಂಡು ಹೋಗಿ ದ್ರೌಪದೀದೇವಿಯರ ಕಾಲಿನಲ್ಲಿ ಬೀಳಿಸಿದರು. ಧರ್ಮರಾಜನು ಅವನನ್ನು ಬಿಡಲಿಕ್ಕೆ ಹೇಳಿದರು. ನಾನು ದ್ರೌಪದೀದೇವಿಯ ದಾಸನು ಎಂದು ಅವನ ಬಾಯಿಯಿಂದ ಹೇಳಿಸಿ ಬಿಟ್ಟುಬಿಟ್ಟರು. ಅವನು ನಾಚಿಕೆಯಿಂದ ಮುಖವನ್ನು ತಗ್ಗಿಸಿಕೊಂಡು ಹೋದನು.

ಆಮೇಲೆ ಪಾಂಡವರು ಹನ್ನೆರಡುವರ್ಷ ವನವಾಸವನ್ನು ಮುಗಿಸಿ ಒಂದು ವರ್ಷ ಅಜ್ಞಾತವಾಸವನ್ನು ಮಾಡಿದರು. ದ್ರೌಪದೀದೇವಿಯರು ಸೈರಂಧ್ರಿಯೆಂಬ ವೇಷವನ್ನು ಅಂದರೆ ಶೂದ್ರಸ್ತ್ರೀಯ ವೇಷವನ್ನು ಧರಿಸಿದರು. ವಿರಾಟನಗರದಲ್ಲಿ

ಇದ್ದರು. ಅಲ್ಲಿ ಕೀಚಕನು ಅವರನ್ನು ನೋಡಿ ಮೋಹಿತನಾದನು. ಬಲಾತ್ಕಾರ ಮಾಡಲಿಕ್ಕೆ ಬಂದನು. ಅವನನ್ನು ಭೀಮಸೇನದೇವರು ರಾತ್ರಿಯಲ್ಲಿ ಸಂಹರಿಸಿದರು. ತರುವಾಯ ಭಾರತಯುದ್ಧವು ನಡೆದು ಪಾಂಡವರು ದುರ್ಯೋಧನಾದಿಗಳನ್ನೆಲ್ಲಾ ಸಂಹರಿಸಿದ ಮೇಲೆ ದ್ರೌಪದೀದೇವಿಯರಿಂದ ಕೂಡಿಕೊಂಡು ಧರ್ಮದಿಂದ ರಾಜ್ಯಭಾರ ಮಾಡಿದರು. ಕೊನೆಗೆ ಪಾಂಡವರು ಭೂಮಿಯನ್ನು ಬಿಟ್ಟು ಸ್ವರ್ಗಕ್ಕೆ ಹೋಗಲು ದ್ರೌಪದೀದೇವಿಯರೂ ಸ್ವರ್ಗಕ್ಕೆ ಹೋದರು. ಅವರು ಸ್ವರ್ಗಕ್ಕೆ ಹೋದರೂ ತನ್ನ ಮೂಲರೂಪದಿಂದ ಐಕ್ಯವನ್ನು ಹೊಂದದಿಲ್ಲ. ಆ ರೂಪದಿಂದ ಹಾಗೆಯೇ ಇದ್ದರು. ಅನಂತರದಲ್ಲಿ ಭೀಮಸೇನದೇವರ ರೂಪವೇ ಭೂಮಿಯಲ್ಲಿ ಶ್ರೀಪೂರ್ಣಪ್ರಜ್ಞಾಚಾರ್ಯರಾಗಿ ಅವತರಿಸಿದರು. ಆ ಕಾಲದಲ್ಲಿ ದ್ರೌಪದೀ ದೇವಿಯರು ಕಲ್ಯಾಣೀ ದೇವಿಯೆಂಬ ಹೆಸರಿನಿಂದ ತ್ರಿವಿಕ್ರಮಪಂಡಿತಾಚಾರ್ಯರ ತಂಗಿಯಾಗಿ ಅವತರಿಸಿದರು. ಅವರು ಕೊನೆಯವರೆಗೂ ಮದುವೆಯಾಗಲಿಲ್ಲ. ಆಕಾಲದ ದುಷ್ಟಜನರು ಕಲ್ಯಾಣಿದೇವಿಯರಿಗೂ ಶ್ರೀಮದಾಚಾರ್ಯರಿಗೂ ಅಪವಾದವನ್ನು ಹೇಳಿ ಮಹಾನರಕವನ್ನು ಹೊಂದಿದರು. ಈವಿಷಯವನ್ನು ಶ್ರೀಮದಾಚಾರ್ಯರು ತಾತ್ಪರ್ಯನಿರ್ಣಯದಲ್ಲಿ ಸೂಚಿಸಿರುವರು.



## ನಕುಲನು[1]

ನಕುಲನು ನಾಲ್ಕನೇ ಪಾಂಡವನು. ಅಂದರೆ ಪಾಂಡುರಾಜನ ಮಗನು. ತಾಯಿಯು ಮಾದ್ರಿಯು. ಪೂರ್ವದಲ್ಲಿ ಋತಾಯನ ಎಂದು ಹೆಸರುಳ್ಳ ಮದ್ರರಾಜನು ತನಗೆ ಇಂದ್ರನಿಗೆ ಸಮಾನನಾದ ಮಗನು ಹುಟ್ಟಬೇಕೆಂದೂ, ಒಬ್ಬಳು ಮಗಳು ಹುಟ್ಟಬೇಕೆಂದೂ ಬ್ರಹ್ಮದೇವರನ್ನು ತಪಸ್ಸು ಮಾಡಿ ವರವನ್ನು ಪಡೆದನು. ಆ ವರದಂತೆ ಅವನಿಗೆ ಶಲ್ಯನೆಂಬ ಮಗನೂ, ಮಾದ್ರಿಯೆಂಬ ಮಗಳೂ ಹುಟ್ಟಿದರು. ಪ್ರಹ್ಲಾದನ ತಮ್ಮನಾದ ಸಹ್ಲಾದನೇ ವಾಯುದೇವರ ಆವೇಶವುಳ್ಳವನಾಗಿ ಶಲ್ಯ ಎಂದು ಹೆಸರಿನಿಂದ ಹುಟ್ಟಿದ್ದನು. ಮಾದ್ರಿಯು ಪೂರ್ವಜನ್ಮದಲ್ಲಿ ಪರಾವಹ ಎಂಬ ಮರುತನ ಹೆಂಡತಿಯು. ಈಗಲೂ ಪರಾವಹನ ಅವತಾರನಾದ ಪಾಂಡುರಾಜನಿಗೆ ಮದುವೆಯಾದಳು. ಪಾಂಡುರಾಜನು ತನ್ನ ಜ್ಯೇಷ್ಠ ಪತ್ನಿಯಾದ ಕುಂತಿಯಿಂದಲೂ,

1. ಮ.ತಾ.ನಿ. ಅ-2, 12, 21, 23, 24, 29

ಚಿಕ್ಕಹೆಂಡತಿಯಾದ ಮಾದ್ರಿಯಿಂದಲೂ ಸಹಿತನಾಗಿ ಬೇಕಾದ ಭೋಗಗಳನ್ನು ಅನುಭವಿಸಿ ಆಮೇಲೆ ವೈರಾಗ್ಯವುಳ್ಳವನಾಗಿ ರಾಜ್ಯವನ್ನು ಅಣ್ಣನಾದ ಧೃತರಾಷ್ಟ್ರನಿಗೇ ಒಪ್ಪಿಸಿ ತಾನು ಇಬ್ಬರು ಪತ್ನಿಯರಿಂದ ಸಹಿತನಾಗಿ ಕಾಡಿಗೆ ಬಂದು ಅಲ್ಲಿ ಭೋಗಗಳನ್ನು ಅನುಭವಿಸುತ್ತಲೂ, ತಪಸ್ಸನ್ನು ಮಾಡುತ್ತಲೂ ಇದ್ದನು.

ಒಂದು ದಿವಸದಲ್ಲಿ ಅವನು ಕಾಮದಿಂದ ಜಿಂಕೆಯನ್ನು ಧರಿಸಿದ್ದ ಕಿಂದಮ ಋಷಿಗಳನ್ನು ಬಾಣದಿಂದ ಕೊಂದು 'ಸ್ತ್ರೀಯ ಸಂಬಂಧವನ್ನು ಮಾಡುವಾಗ ಮರಣವನ್ನು ಹೊಂದುವಿ' ಎಂದು ಶಾಪವನ್ನು ಹೊಂದಿದನು. ಆಗ ಪಾಂಡುರಾಜನು ಬಹಳವಾಗಿ ವೈರಾಗ್ಯವುಳ್ಳವರಾಗಿ ಸನ್ಯಾಸಶ್ರಮವನ್ನು ಸ್ವೀಕರಿಸುವೆನೆಂದು ಯೋಚಿಸಲು ಕುಂತೀದೇವಿಯು ನಮಸ್ಕಾರಮಾಡಿ ಬೇಡವೆಂದು ಕೇಳಿಕೊಂಡಳು. ತರುವಾಯ ಪಾಂಡುರಾಜನು ಹಾಗೆಯೇ ಪತ್ನಿಯರಿಂದ ಸಹಿತನಾಗಿ ಶತಶೃಂಗ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದನು. ತರುವಾಯ ಪಾಂಡುರಾಜನ ಆಜ್ಞೆಯಿಂದ ದುರ್ವಾಸರು ಉಪದೇಶಿಸಿದ ಮಂತ್ರಗಳ ಬಲದಿಂದ ಕುಂತಿದೇವಿಯಲ್ಲಿ ಯಮದೇವರಿಂದ ಧರ್ಮರಾಜನೂ, ವಾಯುದೇವರಿಂದ ಭೀಮಸೇನದೇವರೂ, ಇಂದ್ರದೇವರಿಂದ ಅರ್ಜುನನೂ ಹುಟ್ಟಿದರು. ತರುವಾಯ ಪಾಂಡುರಾಜನು ಸುಂದರನಾದ ಇನ್ನೊಬ್ಬ ಮಗನು ಉಂಟಾಗಬೇಕೆಂದು ಕುಂತೀದೇವಿಯೊಡನೆ ಹೇಳಲು ಕುಂತೀದೇವಿಯು 'ಇನ್ನು ಧರ್ಮವಲ್ಲ, ಬೇಡ' ಎಂದು ಹೇಳಿದಳು.

ಅರ್ಜುನನು ಹುಟ್ಟಿದ ಮೇಲೆ ಮಾದ್ರಿಯು ಪಾಂಡುರಾಜನೊಡನೆ 'ಕುಂತಿ ಯಲ್ಲಿ ಉತ್ತಮರಾದ ಮಕ್ಕಳು ಹುಟ್ಟಿದರು. ನಾನೊಬ್ಬಳು ಮಕ್ಕಳಿಂದ ರಹಿತನಾಗಿರುವೆನು. ನಿಮ್ಮ ಅನುಗ್ರಹದಿಂದ ನಾನು ಮಕ್ಕಳನ್ನು ಪಡೆಯಬೇಕು. ಆದುದರಿಂದ ನೀವು ಕುಂತಿಯೊಡನೆ ನನಗೆ ಮಂತ್ರವನ್ನು ಉಪದೇಶ ಮಾಡುವಂತೆ ಹೇಳಬೇಕು' ಎಂದು ಕೇಳಿಕೊಂಡಳು. ಆಗ ಪಾಂಡುರಾಜನು ಕುಂತಿಯೊಡನೆ 'ಮಾದ್ರಿಗೆ ಪುತ್ರಪ್ರದವಾದ ಉತ್ತಮವಾದ ಮಂತ್ರವನ್ನು ಉಪದೇಶಿಸು' ಎಂದು ಹೇಳಿದನು. ಈ ಪ್ರಕಾರವಾಗಿ ಹೇಳಿದ ಮಾತನ್ನು ಕೇಳಿ ಕುಂತಿಯು ಪತಿಯೊಡನೆ 'ನಾನು ನಿಮಗಾಗಿ ಒಂದೇ ಬಾರಿ ಫಲವಾಗುವಂತೆ ಮಂತ್ರವನ್ನು ಉಪದೇಶಿಸುವೆನು' ಎಂದು ಹೇಳಿದಳು. ಆಮೇಲೆ ಮಾದ್ರಿಯೊಡನೆ ಮಂತ್ರವನ್ನು ಉಪದೇಶಿಸಿ 'ನೀನು ಈ ಮಂತ್ರವನ್ನು ಒಂದು ಬಾರಿ ಜಪಿಸಿದರೆ ಮಾತ್ರ ಫಲವುಂಟಾಗುವುದು. ಆಮೇಲೆ ಜಪಿಸಿದರೆ ಪುನಃ ಫಲವುಂಟಾಗಲಾರದು' ಎಂದು ಹೇಳಿದಳು.

ಮಾದ್ರಿಯು ಮಂತ್ರವನ್ನು ಸ್ವೀಕರಿಸಿ ತಾನು ಹೇಗೆ ಇಬ್ಬರು ಮಕ್ಕಳನ್ನು

ಪಡೆಯಲಿ ಎಂದು ಯೋಚಿಸಿದಳು. 'ದೇವತೆಗಳಲ್ಲಿ ಅಶ್ವಿನೀದೇವತೆಗಳು ಯಾವಾಗಲೂ ವಿಯೋಗ ರಹಿತರಾಗಿರುವರು. ಅವರಿಬ್ಬರಿಗೂ ಹೆಸರಿನ ವ್ಯತ್ಯಾಸವೂ ಇರುವುದಿಲ್ಲ. ಅವರಿಬ್ಬರಿಗೆ ಉಷಾ ಎಂದು ಹೆಸರುಳ್ಳ ಒಬ್ಬಳೇ ಹೆಂಡತಿಯು. ಆದುದರಿಂದ ಒಂದೇ ಬಾರಿ ಮಂತ್ರವನ್ನು ಜಪಿಸಿ ಅವರನ್ನು ಕೂಗಿದರೆ ಅವರಿಬ್ಬರೂ ಬರುವರು' ಎಂದು ಯೋಚಿಸಿ ಅಶ್ವಿನೀದೇವತೆಗಳನ್ನು ಆಹ್ವಾನಮಾಡಲು ಬೇಗನೇ ಇಬ್ಬರೂ ಬಂದರು. ಅವರಿಂದ ಮಾದ್ರಿಯಲ್ಲಿ ಇಬ್ಬರು (ಅವಳಿ)ರಟ್ಟೆ ಮಕ್ಕಳು ಹುಟ್ಟಿದರು. ಅವರೇ ಮಕ್ಕಳಾಗಿ ಹುಟ್ಟಿದರು. ಅವರಲ್ಲಿ ದೊಡ್ಡವನು ನಕುಲನು. ಚಿಕ್ಕವನು ಸಹದೇವನು. ಆಮೇಲೆ ಪಾಂಡುರಾಜನೊಡನೆ ನನಗೆ ಪುನಃ ಮಂತ್ರದ ಫಲವುಂಟಾಗುವಂತೆ ಕುಂತಿಯೊಡನೆ ಹೇಳಬೇಕೆಂದು ಕೇಳಿಕೊಂಡಳು. ಪಾಂಡುರಾಜನು ಕುಂತಿಯೊಡನೆ ಹೇಳಲು ಕುಂತಿಯು 'ಇವಳು ವಕ್ರಸ್ವಭಾವವುಳ್ಳವಳು. ನನ್ನ ಆಜ್ಞೆಯಿಲ್ಲದೆ ಅಶ್ವಿನೀದೇವತೆಗಳನ್ನು ಕರೆದಳು. ಆದುದರಿಂದ ಇವಳು ನನ್ನ ಮಕ್ಕಳಿಗೆ ವಿರೋಧವನ್ನು ಮಾಡಬೇಕೆಂದು ಅಂಜಿಕೆಯುಳ್ಳ ನನಗೆ ತಾವು ಪುನಃ ಆಜ್ಞೆಯನ್ನು ಮಾಡಬಾರದು' ಎಂದು ಹೇಳಲು ಪಾಂಡುರಾಜನು ಸುಮ್ಮನೆ ಆದನು.

ಪಾಂಜುರಾಜನು ಅರ್ಜುನನು ಹುಟ್ಟಿದ ಮೇಲೆ ಸುಂದರನಾದ ಇನ್ನೊಬ್ಬ ಮಗನು ಬೇಕೆಂದು ಕೇಳಿದ್ದನು. ಯದ್ಯಪಿ ಭೀಮಸೇನದೇವರೂ ಅರ್ಜುನನೂ ಸುಂದರರೇ. ಆದರೂ ಲೋಕದಲ್ಲಿ ಸಾಮಾನ್ಯವಾದ ಮೃದುವಾದ ದೇಹವುಳ್ಳವನನ್ನು ಸುಂದರ ಎಂದು ಹೇಳುವರು. ಭೀಮಾರ್ಜುನರು ವಜ್ರಕಾಯರಾದ ಕಾರಣ ಗಟ್ಟಿಯಾದ ದೇಹವುಳ್ಳವರಾಗಿದ್ದರು. ಮತ್ತು ಉತ್ತಮ ಲಕ್ಷಣವುಳ್ಳ ದೇಹವು ಜ್ಞಾನಿಗಳ ದೃಷ್ಟಿಗೆ ಮಾತ್ರ ಸುಂದರವಾಗಿ ಕಾಣಿಸುವುದು. ಪಾಮರರಿಗೆ ಕಾಣಿಸಲಾರದು. ಆದುದರಿಂದ ಪಾಂಡುರಾಜನು ಪಾಮರರ ದೃಷ್ಟಿಯಿಂದ ಸುಂದರನಾದ ಮಗನು ಬೇಕೆಂದು ಕೇಳಿದ್ದನು. ಆದುದರಿಂದ ಈ ನಕುಲದಲ್ಲಿ ಅಂತಹ ಸೌಂದರ್ಯವನ್ನು ತೋರಿಸುತ್ತಾ ವಾಯುದೇವರು ಆವಿಷ್ಟರಾಗಿದ್ದರು. ಆದುದರಿಂದ ನಕುಲನು ಪಾಂಡುರಾಜನ ಇಷ್ಟದಂತೆ ಸುಂದರನಾಗಿದ್ದನು.

ತರುವಾಯ ಪಾಂಡುರಾಜನು ಮಾದ್ರಿಯ ಸಂಬಂಧವನ್ನು ಮಾಡಿ ಮೃತನಾದ ಮೇಲೆ ಮಾದ್ರಿಯು ಸಹಗಮನ ಮಾಡಿದ ಅನಂತರದಲ್ಲಿ ಪಾಂಡವರು ಹಸ್ತಿನಾವತಿಗೆ ಬಂದು ಇದ್ದು ವಿದ್ಯಾಭ್ಯಾಸಮಾಡಿ ಅರಗಿನ ಮನೆಗೆ ಹೋಗಿ ಅಲ್ಲಿಂದ ತಪ್ಪಿಸಿಕೊಂಡು ಹೋಗಿ ಪಾಂಡವರಿಗೆ ಐದು ಜನರಿಗೂ ದ್ರೌಪದೀದೇವಿಯರಿಂದ ಮದುವೆಯಾದ ಮೇಲೆ ನಕುಲನಿಗೆ ದ್ರೌಪದೀದೇವಿಯರ ದೇಹದಲ್ಲಿ ಇದ್ದ ತನ್ನ ಹೆಂಡತಿಯಾದ

ಉಷಾದೇವಿಯ ಸಂಬಂಧದಿಂದ 'ಶ್ರುತಾನೀಕ' ಎಂದು ಹೆಸರುಳ್ಳ ಮಗನು ಹುಟ್ಟಿದನು. ಧರ್ಮರಾಜನು ಧೃತರಾಷ್ಟ್ರನ ಅನುಮತಿಯಿಂದ ಇಂದ್ರಪ್ರಸ್ಥದಲ್ಲಿ ಪಟ್ಟಾಭಿಷಿಕ್ತನಾಗಿ ರಾಜ್ಯಭಾರವನ್ನು ಮಾಡುತ್ತಿರಲು ನಕುಲನು ಜನರಿಗೆಲ್ಲಾ ಸಂಬಳವನ್ನು ಕೊಡುವ ಉದ್ಯೋಗವನ್ನು ಮಾಡುತ್ತಿದ್ದನು. ಪೂರ್ವದಲ್ಲಿ ತಿಲೋತ್ತಮೆಯೆಂದು ಹೆಸರುಳ್ಳ ಅಪ್ಸರಸ್ತ್ರೀಯು ಪಾರ್ವತಿಯೆಂಬ ಹೆಸರಿನಿಂದ ಹುಟ್ಟಿದ್ದಳು. ಅವಳೂ ನಕುಲನ ಪತ್ನಿಯಾಗಿದ್ದಳು. ಅದೇ ರೀತಿಯಾಗಿ ಅಶ್ವಿನೀ ದೇವತೆಗಳ ಪತ್ನಿಯಾದ ಉಷಾದೇವಿಯೇ ಎರಡುರೂಪದಿಂದ ಶಲ್ಯನಿಗೆ ಮಗಳಾಗಿಯೂ ಜರಾಸಂಧನಿಗೆ ಮಗಳಾಗಿಯೂ ಹುಟ್ಟಿದಳು. ಶಲ್ಯನ ಮಗಳಿಗೆ 'ಕರೇಣುಮತಿ'ಯೆಂದು ಹೆಸರು. ಅವಳೂ ನಕುಲನಿಗೆ ಹೆಂಡತಿಯಾಗಿದ್ದಳು. ನಕುಲನು ಈ ಇಬ್ಬರು ಹೆಂಡತಿಯರನ್ನು ಮದುವೆಯಾದ ಮೇಲೆ ದ್ರೌಪದೀ ದೇವಿಯರನ್ನು ತನ್ನ ಅಣ್ಣಂದಿರ ಪತ್ನಿಯೆಂದೇ ಭಾವಿಸುತ್ತಿದ್ದನು.

ರಾಜಸೂಯಯಾಗಕ್ಕಾಗಿ ದಿಗ್ವಿಜಯವನ್ನು ಮಾಡಲಿಕ್ಕೆ ಹೋಗುವಾಗ ನಕುಲನು ಪಶ್ಚಿಮದಿಕ್ಕಿಗೆ ಹೋದನು. ಅಲ್ಲಿ ಎಲ್ಲಾ ರಾಜರನ್ನು ಜಯಿಸಿದನು. ಮಾವನಾದ ಶಲ್ಯನು ಮಾತ್ರ ಸ್ನೇಹದಿಂದಲೇ ಅವನಿಗೆ ಕಪ್ಪವನ್ನು ಕೊಟ್ಟನು. ದಿಗ್ವಿಜಯ ಸಮಯದಲ್ಲಿ ನಕುಲನು ಕೃಷ್ಣಪರಮಾತ್ಮನಿಗೂ ಕಪ್ಪಕೊಡಬೇಕೆಂದು ಹೇಳಿ ಕಳುಹಿಸಿದನು. ಇದೊಂದು ಅವನು ಭಗವಂತನಲ್ಲಿ ಮಾಡಿದ ವಿರೋಧವೇ ಆಯಿತು. ರಾಜಸೂಯಯಾಗದ ಸಭೆಯನ್ನು ನೋಡಿ ದುರ್ಯೋಧನನು ಭ್ರಾಂತನಾಗಿ ಒಳಗೆ ಬರಲು ಅಶಕ್ತನಾದಾಗ ಧರ್ಮರಾಜನು ಹೇಳಿದ ಮಾತಿನಿಂದ ನಕುಲ ಸಹದೇವರು ಅವನ ಕೈಹಿಡಿದು ಒಳಗೆ ಕರೆದುಕೊಂಡು ಬಂದರು. ಪಗಡೆ ಆಟದ ಸಭೆಯಲ್ಲಿ ದ್ರೌಪದೀದೇವಿಯರು ಭೀಮಸೇನದೇವರು ದುರ್ಯೋಧನನನ್ನು ಸಂಹರಿಸುವರೆಂದೂ ಅರ್ಜುನನು ಕರ್ಣನನ್ನು ಸಂಹರಿಸುವನೆಂದೂ ಶಕುನಿಯನ್ನು ಸಹದೇವನು ಸಂಹರಿಸುವನೆಂದೂ ಪ್ರತಿಜ್ಞಾ ಮಾಡಿದಾಗ ನಕುಲನು ಶಕುನಿಯ ಮಕ್ಕಳನ್ನು ಸಂಹರಿಸುವನೆಂದು ಪ್ರತಿಜ್ಞಾ ಮಾಡಿದನು. ಪಗಡೆ ಆಟದಲ್ಲಿ ಸೋತು ಸಭೆಯನ್ನು ಬಿಟ್ಟು ಹೋಗುವಾಗ ನಕುಲನು ಈ ಅವಸ್ಥೆಯನ್ನು ಶತ್ರುಗಳು ತನ್ನ ಮುಖವನ್ನು ನೋಡಬಾರದು ಎಂದು ಮುಖವನ್ನು ತಗ್ಗಿಸಿಕೊಂಡೇ ಹೋದರು. ಪಾಂಡವರು ವನವಾಸವನ್ನು ಮುಗಿಸಿ ಅಜ್ಞಾತವಾಸವನ್ನು ವಿರಾಟನಗರದಲ್ಲಿ ಮಾಡಿದಾಗ ನಕುಲನು ದಾಮಗ್ರಂಥಿ ಎಂದು ಹೆಸರನ್ನು ಇಟ್ಟುಕೊಂಡು ಸೂತಜಾತಿಯವನ ವೇಷವನ್ನು ಧರಿಸಿಕೊಂಡು ಅಶ್ವರಕ್ಷಕನಾಗಿದ್ದನು.

ಭಾರತ ಯುದ್ಧದಲ್ಲಿ ಮೊದಲು ನಕುಲನಿಗೂ ವಿಕರ್ಣನಿಗೂ ದ್ವಂದ್ವಯುದ್ಧವು ನಡೆಯಿತು. ಅದರಲ್ಲಿ ವಿಕರ್ಣನೇ ಜಯಿಸಿದನು. ಕರ್ಣನು ಸೇನಾಧಿಪತಿಯಾಗಿರುವಾಗ ಕರ್ಣನಿಗೂ ನಕುಲನಿಗೂ ಬಾಣಗಳಿಂದ ಯುದ್ಧವು ನಡೆಯಿತು. ಕರ್ಣನು ನಕುಲನ ರಥವನ್ನು ಪುಡಿ ಮಾಡಿದವನಾಗಿ ಓಡಿ ಹೋಗುತ್ತಿದ್ದ ಅವನ ಹಿಂದೆಯೇ ವೇಗದಿಂದ ಹೋಗಿ ಅವನ ಕುತ್ತಿಗೆಗೆ ಧನುಸ್ಸಿನ ಹಗ್ಗವನ್ನು ಹಾಕಿ ಸೆಳೆದು ಕ್ರೂರವಾದ ಮಾತುಗಳನ್ನು ಆಡಿದನು. ಆದರೆ ಕುಂತಿಯ ಮಾತಿನ ಗೌರವದಿಂದ ಅವನನ್ನು ಕೊಲ್ಲಲಿಲ್ಲ. ಅವನನ್ನು ಹಾಗೆಯೇ ಬಿಟ್ಟು ಬಿಟ್ಟು ಬೇರೆ ಶತ್ರುಗಳ ಹತ್ತಿರ ಯುದ್ಧಕ್ಕೆ ಹೋದನು. ಹಾಗೆಯೇ ದುರ್ಯೋಧನನಿಂದಲೂ ನಕುಲನು ಸೋತುಹೋದನು. ಭೀಮಸೇನದೇವರು ದುಃಶಾಸನನನ್ನು ಸಂಹಾರಮಾಡಿದ ಮೇಲೆ ಕರ್ಣನ ಮಗನಾದ ವೃಷಸೇನನು ನಕುಲನೊಡನೆ ಯುದ್ಧಕ್ಕೆ ಬಂದನು. ಆಗ ನಕುಲನು ವೃಷಸೇನನನ್ನು ಬಾಣಗಳ ಸಮೂಹಗಳಿಂದ ತಡೆದನು. ಆಗ ವೃಷಸೇನನು ನಕುಲನ ರಥವನ್ನು ಪುಡಿಮಾಡಿದನು. ನಕುಲನು ಖಡ್ಗಚರ್ಮಗಳನ್ನು ಕೈಯಲ್ಲಿ ಹಿಡಿದುಕೊಂಡು ಬಂದು ವೃಷಸೇನನ ಸಹಾಯಕರಾದ ಮೂರುಸಾವಿರ ಜನರನ್ನು ಸಂಹರಿಸಿದನು. ಆಮೇಲೆ ಕರ್ಣನ ಮಗನು ನಕುಲನ ಕೈಯಲ್ಲಿ ಇದ್ದ ಖಡ್ಗಚರ್ಮಗಳನ್ನು ಕತ್ತರಿಸಿ ಭೀಮಾರ್ಜುನರ ಮೇಲೆಯೂ ಬಾಣಗಳನ್ನು ಬಿಡುತ್ತಾ ಹೋಗಿ ಕೊನೆಗೆ ಅರ್ಜುನನಿಂದ ಮೃತನಾದನು. ಭಾರತಯುದ್ಧವು ಮುಗಿದಮೇಲೆ ನಕುಲನು ದುರ್ಮುಖನ ಮನೆಯಲ್ಲಿ ವಾಸಮಾಡುತ್ತಿದ್ದನು. ಶಲ್ಯನ ಮಗಳಾದ ತನ್ನ ಪತ್ನಿಯಿಂದ ಸಂತೋಷದಿಂದ ಇದ್ದನು. ಕೊನೆಗೆ ಎಲ್ಲಾ ಪಾಂಡವರೊಡನೆ ತಾನೂ ದೇಹವನ್ನು ಪರಿತ್ಯಾಗ ಮಾಡಿ ತನ್ನ ಮೂಲರೂಪದೊಡನೆ ಐಕ್ಯವನ್ನು ಹೊಂದದೆ ತನ್ನ ಲೋಕದಲ್ಲಿ ಇದ್ದನು. ಭಗವಂತನ ಪ್ರೀತಿಗಾಗಿ ಪುನಃ ಭೂಮಿಯಲ್ಲಿ ಅವತರಿಸಿ ಆಮೇಲೆ ಮೋಕ್ಷವನ್ನು ಹೊಂದುವನು.



# ಸಹದೇವನು [1]

ಸಹದೇವನು ಪಾಂಡವರಲ್ಲಿ ಕೊನೆಯವನು. ಪಾಂಡುರಾಜನ ಅನುಜ್ಞೆಯಿಂದ ಮಾದ್ರಿಯಲ್ಲಿ ಅಶ್ವಿನೀದೇವತೆಗಳಿಂದ ಹುಟ್ಟಿದವನು. ಇವನೂ ನಕುಲನೂ ಅವಳಿಜವಳಿ ಮಕ್ಕಳು. ಇವನು ಅರ್ಜುನನಿಗಿಂತ ಒಂದುವರ್ಷ ಚಿಕ್ಕವನು. ಅಶ್ವಿನೀ ದೇವತೆಗಳಲ್ಲಿ ಒಬ್ಬನ ಅವತಾರನು. ಇವನಲ್ಲಿ ಸುನೀತಿರೂಪದಿಂದ ವಾಯು ದೇವರು ಆವಿಷ್ಟರಾಗಿದ್ದರು. ಸಹದೇವನೂ ಭೀಮಾರ್ಜುನರೊಡನೆ ಭಗವಂತ ನಿದ್ದಲ್ಲಿಗೆ ಹೋಗಿ ಅಲ್ಲಿ ಮೂರು ವರ್ಷಕಾಲವಿದ್ದು ಬಂದಿದ್ದನು. ಅಲ್ಲಿ ಅವನು ಉದ್ಧವನಿಂದ ಸಕಲ ಉತ್ತಮವಾದ ನೀತಿಶಾಸ್ತ್ರವನ್ನು ಅಭ್ಯಾಸ ಮಾಡಿದ್ದನು. ಈ ಸಹದೇವನು ಕೃಷ್ಣಪರಮಾತ್ಮನ ವಂಶದವರು ಪರಸ್ಪರವಾಗಿ ಜಗಳವಾಡಿ ಮೃತರಾದ ಕಾರಣ ಪರಮಾತ್ಮನ ಬುದ್ಧಿಯು ಚೆನ್ನಾಗಿಲ್ಲವೆಂದು ಅವಮಾನ ಮಾಡಿದ್ದನು. ಇದು ಅವನಿಗೆ ಒಂದು ದೋಷವೇ. [2]

ಪಾಂಡವರು ದ್ರೌಪದೀದೇವಿಯರನ್ನು ಮದುವೆ ಯಾಗಿ ಇಂದ್ರಪ್ರಸ್ಥದಲ್ಲಿ ರಾಜ್ಯಭಾರವನ್ನು ಮಾಡುತ್ತಿರುವಾಗ ಸಹದೇವನು 'ಯಾರ ಹತ್ತಿರ ಯುದ್ಧವನ್ನು ಮಾಡಬೇಕು. ಯಾರ ಹತ್ತಿರ ರಾಜಿ ಮಾಡಿಕೊಳ್ಳಬೇಕು' ಎಂಬ ವಿಷಯದಲ್ಲಿ ನೋಡಿಕೊಳ್ಳುತ್ತಿದ್ದನು. ಮತ್ತು ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಧರ್ಮರಾಜನ ಹಿಂದೆಯೇ ಇದ್ದು ಅವನಿಗೆ ಅಂಗರಕ್ಷಕನಾಗಿದ್ದನು. ಭೀಮಸೇನದೇವರು ಜರಾಸಂಧನನ್ನು ಸಂಹರಿಸಿದಮೇಲೆ ಜರಾಸಂಧನ ಮಗನಾದ ಸಹದೇವನು ತನ್ನ ತಂಗಿಯನ್ನು ಭೀಮಸೇನದೇವರಿಗೆ ಕೊಟ್ಟನು. ಭೀಮಸೇನ ದೇವರು ತನ್ನ ತಮ್ಮನಾದ ಈ ಸಹದೇವನಿಗಾಗಿ ಆ ಕನ್ಯೆಯನ್ನು ಸ್ವೀಕರಿಸಿದರು. ಅಶ್ವಿನೀ ದೇವತೆಗಳ ಪತ್ನಿಯಾದ ಉಷಾದೇವಿಯು ಶಲ್ಯನ ಮಗಳಾಗಿಯೂ ಜರಾಸಂಧನ ಮಗಳಾಗಿಯೂ ಎರಡು ರೂಪದಿಂದ ಹುಟ್ಟಿದ್ದಳು. ಶಲ್ಯನ ಮಗಳನ್ನು ನಕುಲನು ಮದುವೆಯಾಗಿದ್ದನು. ಜರಾಸಂಧನ ಮಗಳನ್ನು ಸಹದೇವನು ಮದುವೆಯಾದನು. ಈ ಮದುವೆಯಾದ ಮೇಲೆ ಸಹದೇವನೂ ದ್ರೌಪದೀ ದೇವಿಯರನ್ನು ಅಣ್ಣಂದಿರ ಪತ್ನಿಯೆಂದೇ ಭಾವನಾ ಮಾಡುತ್ತಿದ್ದನು. ಸಹದೇವನಿಗೆ ದ್ರೌಪದೀದೇವಿಯರ ದೇಹದಲ್ಲಿ ಇದ್ದ ತನ್ನ ಪತ್ನಿಯ ಸಂಬಂಧದಿಂದ 'ಶ್ರುತಕ್ರಿಯ' ಎಂಬ ಮಗನು ಹುಟ್ಟಿದ್ದನು. ರಾಜಸೂಯಯಾಗಕ್ಕಾಗಿ ದಿಗ್ವಿಜಯಕ್ಕೆ ಹೋದಾಗ ಸಹದೇವನು ದಕ್ಷಿಣದಿಕ್ಕಿಗೆ ಹೋದನು. ಅಲ್ಲಿ ಇದ್ದ

---

1. ಮ.ತಾ.ನಿ. ಅ-2, 12, 21, 23, 24, 29    2. ಭಿನ್ನ ಭಾಗವತನೆಂಬ

ರಾಜರನ್ನು ಜಯಿಸಿ ರತ್ನಗಳನ್ನು ತಂದನು. ಅಲ್ಲಿ ಪರಾಕ್ರಮಶಾಲಿಯಾದ ರುಕ್ಮಿಯು ಸಹದೇವನೊಡನೆ ಯುದ್ಧ ಮಾಡಲಿಲ್ಲ. ರುಕ್ಮಿಯು ಪೂರ್ವದಲ್ಲಿ ಕೃಷ್ಣಪರಮಾತ್ಮ ನಿಂದ ಸೋತುಹೋದವನು ರುದ್ರದೇವರನ್ನು ತಪಸ್ಸು ಮಾಡಿದನು. ರುದ್ರದೇವರು ಸಂತುಷ್ಟರಾಗಿ ಪ್ರತ್ಯಕ್ಷರಾಗಿ ಅವನಿಗೆ ಒಂದು ಧನುಸ್ಸನ್ನು ಕೊಟ್ಟರು. 'ನೀನು ಈ ಧನುಸ್ಸಿನಿಂದ ಎಲ್ಲರನ್ನೂ ಜಯಿಸುವಿ. ಯಾವಾಗ ನಿನಗೆ ಕೃಷ್ಣನ ವಿರೋಧ ವುಂಟಾಗುವುದೋ ಆಗ ಈ ಧನುಸ್ಸು ನನ್ನ ಕೈಗೇ ಬಂದು ಬಿಡುವುದು' ಎಂದು ರುದ್ರದೇವರು ಹೇಳಿದ್ದರು. ಆದರಿಂದಲೂ ತಂಗಿಯ ಮೇಲಿನ ಸ್ನೇಹದಿಂದಲೂ ಅವನು ಕೃಷ್ಣಪರಮಾತ್ಮನಲ್ಲಿ ವಿರೋಧವನ್ನು ಮಾಡುತ್ತಿದ್ದಿಲ್ಲ. ಪ್ರಕೃತ ರಾಜಸೂಯ ಯಾಗವನ್ನು ಕೃಷ್ಣಪರಮಾತ್ಮನೇ ಮಾಡಿಸುತ್ತಾ ಇದ್ದಕಾರಣವೂ ಭೀಮಾರ್ಜುನರ ಭಯದಿಂದಲೂ ಸಹದೇವನಿಗೆ ಕಪ್ಪವನ್ನು ಕೊಟ್ಟನು. ಪ್ರತಾಪಶಾಲಿಯಾದ ಸಹದೇವನು ಇತರ ರಾಜರನ್ನು ತನ್ನ ಸಾಮರ್ಥ್ಯದಿಂದಲೇ ಜಯಿಸಿದನು. ಮತ್ತು ಸಹದೇವನು ಘಟೋತ್ಕಚನನ್ನು ಸ್ಮರಿಸಲು ಅವನು ಬಂದನು. ಅವನನ್ನು ವಿಭೀಷಣನಿದ್ದಲ್ಲಿಗೆ ಕಪ್ಪವನ್ನು ತರಲಿಕ್ಕೆ ಕಳುಹಿಸಿದನು. ವಿಭೀಷಣನು ಪೂರ್ವದಲ್ಲಿ ರಾಮದೇವರು ಹೇಳಿದ್ದನ್ನು ಸ್ಮರಿಸಿಕೊಂಡು ಎಲ್ಲವನ್ನೂ ವಿಚಾರಿಸಿಕೊಂಡು ಕೃಷ್ಣಪರಮಾತ್ಮನ ವಿಷಯವನ್ನು ವಿಚಾರಿಸಿ ಭೀಮಾರ್ಜುರನ ಬಲವನ್ನು ವಿಚಾರಿಸಿ ಪಾಂಡವರು ದೇವತೆಗಳೆಂದು ತಿಳಿದವನಾಗಿ ಬಹಳವಾದ ಕಪ್ಪವನ್ನು ಕೊಟ್ಟನು. ಘಟೋತ್ಕಚನು ವಿಭೀಷಣನಿಂದ ಮಹಾರತ್ನ ಸಮೂಹವನ್ನು ಹೊಂದಿ ಸಹದೇವನಿದ್ದಲ್ಲಿಗೆ ಬಂದನು. ತರುವಾಯ ಸಹದೇವನು ಹಸ್ತಿನಾವತಿಗೆ ಬಂದನು.

ಪಗಡೆ ಆಟದ ಸಭೆಯಲ್ಲಿ ದುರ್ಯೋಧನನು ದ್ರೌಪದೀದೇವಿಯನ್ನು ಜಯಿಸಿದೆ ನೆಂದು 'ಒಳಗೆ ಎಳೆದುಕೊಂಡು ಹೋಗು' ಎಂದು ಹೇಳಲು ದ್ರೌಪದೀದೇವಿಯು ಭೀಮಸೇನದೇವರು ದುರ್ಯೋಧನನ್ನು ಸಂಹರಿಸುವ ರೆಂದೂ ಕರ್ಣನನ್ನು ಅರ್ಜುನನು ಸಂಹರಿಸುವನೆಂದೂ ಹೇಳಿ ಕಪಟದೂತವಾಡಿದ ಶಕುನಿಯನ್ನು ಸಹದೇವನು ಸಂಹರಿಸುವನೆಂದು ಹೇಳಲು ಸಹದೇವನು ಹಾಗೆಯೇ ಮಾಡುವೆನೆಂದು ಅಂಗೀಕಾರ ಮಾಡಿದನು. ಆಮೇಲೆ ಪುನಃ ಪಗಡೆ ಆಟದಲ್ಲಿ ಸೋತು ಸಭೆಯಿಂದ ವನಕ್ಕಾಗಿ ಹೋಗುವಾಗ ಸಹದೇವನು ಈ ಅವಸ್ಥೆಯಲ್ಲಿ ಶತ್ರುಗಳು ತನ್ನ ಮುಖವನ್ನು ನೋಡಬಾರದು ಎಂದು ಮುಖವನ್ನು ತಗ್ಗಿಸಿಕೊಂಡು ಹೋದನು. ವನವಾಸವನ್ನು ಮುಗಿಸಿ ಅಜ್ಞಾತವಾಸಮಾಡಿದಾಗ ವಿರಾಟನಗರದಲ್ಲಿ 'ದಾಮಗ್ರಂಥಿ' ಎಂಬ ಹೆಸರಿನಿಂದ ಗೋಪಾಲನ ವೇಷವನ್ನು ಹಾಕಿದ್ದನು.

ಅಜ್ಞಾತವಾಸವು ಮುಗಿದು ಕೃಷ್ಣಪರಮಾತ್ಮನು ಸಂಧಿಗಾಗಿ ದುರ್ಯೋಧನಾದಿಗಳು ಇದ್ದಲ್ಲಿಗೆ ಹೋಗುವಾಗ ಸಹದೇವನು ಕೃಷ್ಣಪರಮಾತ್ಮನೊಡನೆ 'ನಮ್ಮ ಶೌರ್ಯವು ಪ್ರಸಿದ್ಧವಾಗುವುದಕ್ಕಾಗಿ ಯುದ್ಧವನ್ನೇ ನಿಶ್ಚಯಿಸಿಕೊಂಡು ಬಾ' ಎಂದು ಹೇಳಿದ್ದನು. ಯುದ್ಧದಲ್ಲಿ ಮೊದಲಿನ ದಿನದಲ್ಲಿ ದುಃಶಾಸನನೊಡನೆ ದ್ವಂದ್ವಯುದ್ಧವನ್ನು ಮಾಡಿದನು. ಆಗ ದುಃಶಾಸನನೇ ಜಯವನ್ನು ಹೊಂದಿದನು. ಕೊನೆಗೆ ಯುದ್ಧದಲ್ಲಿ ಸಹದೇವನು ಅತಿಪಾಪಿಯಾದ ಶಕುನಿಯನ್ನು ಅವನ ಮಗನಾದ ಉಲೂಕನನ್ನು ಸಂಹರಿಸಿದನು. ಯುದ್ಧವೆಲ್ಲವೂ ಮುಗಿದು ಧರ್ಮರಾಜನು ರಾಜ್ಯಭಾರ ಮಾಡುವಾಗ ದುರ್ಮರ್ಷಣನ ಮನೆಯಲ್ಲಿ ವಾಸಮಾಡುತ್ತಾ ಖಡ್ಗ ಹಿಡಿದುಕೊಂಡು ಧರ್ಮರಾಜನಿಗೆ ಅಂಗರಕ್ಷಕನಾಗಿದ್ದನು. ಜರಾಸಂಧನ ಮಗಳಿಂದ ಸುಖವಾಗಿ ಇದ್ದನು. ಕೊನೆಗೆ ದೇಹಪರಿತ್ಯಾಗ ಮಾಡಿ ತನ್ನ ಲೋಕಕ್ಕೆ ಹೋಗಿ ಸುಖವಾಗಿ ಇದ್ದನು.



## ವಿದುರನು [1]

ವಿದುರನು ವೇದವ್ಯಾಸದೇವರಿಂದ ವಿಚಿತ್ರವೀರ್ಯನ ದಾಸಿಯಲ್ಲಿ ಹುಟ್ಟಿದವನು. ವಿಚಿತ್ರವೀರ್ಯನು ಕ್ಷಯರೋಗದಿಂದ ಮೃತನಾದಾಗ ಅವನ ತಾಯಿಯಾದ ಸತ್ಯವತಿಯು ವೇದವ್ಯಾಸದೇವರನ್ನು ಸ್ಮರಿಸಿಕೊಂಡಳು. ಆಗ ಅವರು ಪ್ರತ್ಯಕ್ಷರಾಗಿ ಬಂದು ಏನಾಗಬೇಕೆಂದು ಕೇಳಿದರು. ಕಲಿಯುಗವನ್ನು ಬಿಟ್ಟು ಇತರ ಯುಗಗಳಲ್ಲಿ ಸಂತಾನವಿಲ್ಲದೆ ಇರುವಾಗ ಸ್ತ್ರೀಯಲ್ಲಿ ಅವಳ ಗಂಡನ ಅಣ್ಣನಿಂದಲೋ ಅಥವಾ ಶ್ರೇಷ್ಠಬ್ರಾಹ್ಮಣರಿಂದಲೋ ಸಂತತಿಯನ್ನು ಹೊಂದಬಹುದೆಂಬ ಧರ್ಮವಿದ್ದಿತು. (ಅದನ್ನು ನಿಯೋಗ ಪದ್ಧತಿ ಎನ್ನುವರು) ಆದುದರಿಂದ ಸತ್ಯವತಿಯು ವೇದವಾಸ ದೇವರೊಡನೆ ವಿಚಿತ್ರವೀರ್ಯನು ಮೃತನಾಗಿರುವ ಕಾರಣ ಅವನ ಪತ್ನಿಯಾದ ಅಂಬಿಕೆಯಲ್ಲಿ ಸಂತತಿಯನ್ನು ಉಂಟು ಮಾಡಬೇಕೆಂದು ಹೇಳಿಕೊಂಡಳು. ಅದಕ್ಕೆ ವೇದವ್ಯಾಸದೇವರು ತಾಯಿಯಾದ ಸತ್ಯವತಿಯೊಡನೆ ರಮಾದೇವಿಯನ್ನು ಬಿಟ್ಟು ನನ್ನ ಅಂಗ ಸಂಗಕ್ಕೆ ಯೋಗ್ಯಳಾದ ಸ್ತ್ರೀಯು ಸ್ವರ್ಗದಲ್ಲಿಯೂ ಕೂಡ ಇರುವುದಿಲ್ಲ. ಆದರೂ ನಾನು ನಿನ್ನ ಮಾತಿನಂತೆ ಮಾಡುವೆನು. ನಿನ್ನ ಸೊಸೆಯು ಒಂದು ವರ್ಷ

---

1. ಮ.ತಾ.ನಿ. ಅ-11, 19, 21 ರಿಂದ 23, 29, 31

ವಿಷ್ಣು ಪಂಚಕವ್ರತವನ್ನು(ವೈಷ್ಣವವ್ರತ) ಮಾಡಲಿ. ಅದರಿಂದ ಶುದ್ಧವಾದ ದೇಹವುಳ್ಳವಳಾಗಿ ನನ್ನಿಂದ ಸತ್ಪುತ್ರನನ್ನು ಪಡೆಯುವಳು ಎಂದರು. ಅದಕ್ಕೆ ಸತ್ಯವತಿಯು ರಾಜ್ಯಕ್ಕೆ ರಕ್ಷಕರು ಇಲ್ಲ. ಆದುದರಿಂದ ಒಂದು ವರ್ಷದಷ್ಟು ಅವಕಾಶವಿರುವುದಿಲ್ಲ. ಬೇಗನೇ ಆಗಬೇಕು ಎಂದಳು. ಆಗ ವೇದವ್ಯಾಸದೇವರು ನಾನು ಶಾಂತರೂಪ ನಾಗಿದ್ದರೂ ನಿನ್ನ ಸೊಸೆಯ ಕಣ್ಣಿಗೆ ಭಯಂಕರವಾಗಿ ಕಾಣಿಸುವೆನು. ಆ ರೂಪವನ್ನು ಅವಳು ಸಹಿಸುವ ಪಕ್ಷದಲ್ಲಿ ಉತ್ತಮನಾದ ಮಗನನ್ನು ಹಡೆಯುವಳು ಎಂದರು. ಸತ್ಯವತಿಯು ಹಾಗೆಯೇ ಆಗಲಿ ಎಂದು ಹೇಳಿ ಸೊಸೆಯಾದ ಅಂಬಿಕೆಯೊಡನೆ ಹಾಗೆಯೇ ಹೇಳಿದಳು. ಅದಕ್ಕೆ ಅಂಬಿಕೆಯು ಅಂಜಿ ಕೊಂಡು ಕಣ್ಣುಮುಚ್ಚಿಕೊಂಡಳು. ಅದರಿಂದ ಅವಳಲ್ಲಿ ಕುರುಡನಾದ ಧೃತರಾಷ್ಟ್ರನು ಹುಟ್ಟಿದನು. ತರುವಾಯ ಅಂಬಾಲಿಕೆಯೊಡನೆ ಸತ್ಯವತಿಯು ತಿಳಿಸಲು ಅವಳು ಅಂಜಿಕೆಯಿಂದ ಕಣ್ಣುತೆರೆದುಕೊಂಡು ಇದ್ದಳು. ಅದರಿಂದ ಪಾಂಡುವರ್ಣವುಳ್ಳ ಪಾಂಡುರಾಜನು ಹುಟ್ಟಿದನು. ಆಮೇಲೆ ಸತ್ಯವತೀದೇವಿಯು ನಿರ್ದೋಷನಾದ ಮತ್ತೊಬ್ಬ ಮಗನು ಹುಟ್ಟಬೇಕೆಂದು ಅಂಬಿಕೆಯೊಡನೆ ನೀನು ಕಣ್ಣುಮುಚ್ಚಿಕೊಂಡು ಇದ್ದ ಕಾರಣ ನಿನಗೆ ಕುರುಡನಾದ ಮಗನು ಹುಟ್ಟಿದನು. ಆದುದರಿಂದ ಕಣ್ಣನ್ನು ಮುಚ್ಚಬೇಡ' ಎಂದು ಹೇಳಿದಳು. ತರುವಾಯ ಅಂಬಿಕೆಯು ಭಯದಿಂದ ದಾಸಿಗೆ ತನ್ನ ವೇಷವನ್ನು ಹಾಕಿ ಕಳುಹಿಸಿದಳು. ಅವಳು ಪರಮಭಕ್ತಿಯಿಂದ ವೇದವ್ಯಾಸ ದೇವರನ್ನು ಹೊಂದಿದಳು. ಅವಳಲ್ಲಿ ವಿದುರನು ಹುಟ್ಟಿದನು.

ಮಾಂಡವ್ಯರೆಂಬ ಋಷಿಗಳು ತನಗೆ ವಸಿಷ್ಠರ ಸಾಮ್ಯವು ಬರಬೇಕೆಂದು ತಪಸ್ಸನ್ನು ಮಾಡುತ್ತಿದ್ದರು. ತಮಗೆ ದೊಡ್ಡವರ ಪದವಿಯನ್ನು ಅಪೇಕ್ಷಿಸುವುದು ಬಹಳ ಅನ್ಯಾಯವು. ಆದರಿಂದ ಅವರಿಗೆ ಶೂಲಾರೋಪವು ಉಂಟಾಯಿತು. ಅಂದರೆ ಅವರು ತಪಸ್ಸನ್ನು ಮಾಡುತ್ತಿರುವಾಗ ರಾಜನ ಮನೆಯಿಂದ ಕಳ್ಳರು ಹಣವನ್ನು ಕದ್ದುಕೊಂಡು ಬಂದರು. ಅವರ ಹಿಂದೆಯೇ ಅವರನ್ನು ಅಟ್ಟಿಸಿಕೊಂಡು ರಾಜಭೃತ್ಯರು ಬಂದರು. ಅದನ್ನು ನೋಡಿ ಕಳ್ಳರು ಹಣವನ್ನು ಮಾಂಡವ್ಯರ ಬಳಿಯಲ್ಲಿಯೇ ಹಾಕಿ ಓಡಿಹೋದರು. ರಾಜಭೃತ್ಯರು ಬಂದು ಮಾಂಡವ್ಯರ ಬಳಿಯಲ್ಲಿ ರಾಜನ ಮನೆಯ ಹಣವು ಇರುವುದನ್ನು ಕಂಡು ಅವರೇ ಕಳ್ಳನೆಂದು ತಿಳಿದು ಅವರನ್ನು ಎಳೆದುಕೊಂಡು ರಾಜನಿದ್ದಲ್ಲಿಗೆ ಬಂದರು. ರಾಜನು ಅವರನ್ನು ಶೂಲದಲ್ಲಿ ಹಾಕಿಸಿದನು. ಅವರು ಶೂಲದಲ್ಲಿಯೇ ಕೂತುಕೊಂಡು ತಪಸ್ಸನ್ನು ಮಾಡುತ್ತಲೇ ಇದ್ದರು. ತರುವಾಯ ರಾಜನು ಈ ವಿಷಯವನ್ನು ತಿಳಿದು ಯಾರೋ

ದೊಡ್ಡವರು ಎಂದು ತಿಳಿದುಕೊಂಡು ಶೂಲದಿಂದ ಕೆಳಗೆ ಇಳಿಸಿ ಪ್ರಾರ್ಥಿಸಿದನು. ಶೂಲವನ್ನು ಸೆಳೆದಾಗ ಅದರ ಒಂದು ತುಂಡು ಅವರ ಕುತ್ತಿಗೆಯಲ್ಲಿ ಹಾಗೆಯೇ ಉಳಿದಿತ್ತು. ಆದರಿಂದ ಅಣಿಮಾಂಡವ್ಯರೆಂದು ಹೆಸರಾಯಿತು. ಅವರು ಯಮದೇವರ ಬಳಿಗೆ ಹೋಗಿ ನೀನು ಅಧರ್ಮಕ್ಕೆ ಶಿಕ್ಷಿಸುವವನಷ್ಟೆ! ನನಗೆ ಶೂಲಾರೋಪವು ಯಾವ ಪಾಪದಿಂದ ಆಯಿತು? ಹೇಳು ಎಂದು ಕೇಳಿದರು. ಅದಕ್ಕೆ ಯಮದೇವರು ಅವರಿಂದ ಶಾಪವನ್ನು ಹೊಂದಬೇಕೆಂಬ ಅಭಿಪ್ರಾಯ ದಿಂದಲೇ ನೀವು ಬಾಲ್ಯದಲ್ಲಿ ಸೊಳ್ಳೆಗೆ ಮುಳ್ಳನ್ನು ಕುಕ್ಕಿ ಕೊಂದ ಕಾರಣ ಹೀಗಾಯಿತೆಂದು ಅದೂ ಕಾರಣವಾದ ಕಾರಣ ಯಮದೇವರ ಮಾತೂ ಸುಳ್ಳಲ್ಲ. ಆದರೆ ಮುಖ್ಯಕಾರಣವು ಅದಲ್ಲ. ತನಗೆ ಅಯೋಗ್ಯವಾದ ವಸಿಷ್ಠರ ಪದವಿಯನ್ನು ಅಪೇಕ್ಷಿಸಿದುದೇ. ಮಾಂಡವ್ಯರು ಯಮದೇವರ ಮಾತನ್ನು ಕೇಳಿ ಕೋಪಿಸಿಕೊಂಡು ನೀನು ಶೂದ್ರನಾಗು ಎಂದು ಶಾಪವನ್ನು ಕೊಟ್ಟರು. ಯಮದೇವರು ತನ್ನ ಇಚ್ಛೆಯಿಂದಲೇ ಶಾಪವನ್ನು ಹೊಂದಿ ಶೂದ್ರಜಾತಿಯ ವಿದುರನಾಗಿ ಹುಟ್ಟಿದರು.

ವಿದ್ಯೆಯಲ್ಲಿ ಆಸಕ್ತನಾಗಿದ್ದ ಕಾರಣವೇ ಅವನಿಗೆ ವಿದುರ ಎಂದು ಹೆಸರು. ಶೂರರಾಜನಿಗೆ ಶೂದ್ರಸ್ತ್ರೀಯಲ್ಲಿ ಹುಟ್ಟಿದ್ದ ಆರುಣಿಯೆಂಬ ಗುಣವಂತೆಯಾದ ಕನ್ಯೆಯನ್ನು ಮದುವೆಯಾದನು. ಒಳ್ಳೇ ನೀತಿಯನ್ನು ತಿಳಿದವನಾಗಿದ್ದನು. ಅವನು ಧೃತರಾಷ್ಟ್ರನಿಗೆ ಉಪದೇಶಿಸಿದ ನೀತಿಯು ವಿದುರನೀತಿಯೆಂದು ಪ್ರಸಿದ್ಧವಾಗಿರು ವುದು. ಅವನು ಪಾಂಡವರಲ್ಲಿ ವಿಶೇಷವಾಗಿ ಪಕ್ಷಪಾತವುಳ್ಳವನಾಗಿದ್ದನು. ಪಾಂಡವರನ್ನು ದುರ್ಯೋಧನನು ವಾರಣಾವತಕ್ಕೆ ಕಲುಹಿಸುವಾಗ ವಿದುರನೇ ಮ್ಲೇಂಛಭಾಷೆಯಿಂದ ವಿಷದಿಂದಲೂ ಅಗ್ನಿಯಿಂದಲೂ ಜಾಗ್ರತೆಯಿಂದ ಇರಿ ಎಂದು ಹೇಳಿದನು ಮತ್ತು ದುರ್ಯೋಧನನು ಕಟ್ಟಿಸಿದ್ದ ಅರಗಿನ ಮನೆಯ ಸುತ್ತಲೂ ಪ್ರಾಕಾರವನ್ನು ಕಟ್ಟಿಸುವ ನೆಪದಿಂದ ದೊಡ್ಡ ಬಿಲವನ್ನು ಒಡ್ಡನಿಂದ ಮಾಡಿಸಿ ಅದರ ಬಾಯಿಯನ್ನು ಮುಚ್ಚಿಸಿದನು. ಭೀಮಸೇನದೇವರು ಅರಗಿನ ಮನೆಗೆ ಬೆಂಕಿಯನ್ನು ಹಚ್ಚಿ ಪಾಂಡವರನ್ನು ಹೊತ್ತುಕೊಂಡು ಹೋದಾಗ ಗಂಗಾನದಿಯನ್ನು ದಾಟಿಸಲಿಕ್ಕೆ ದೋಣಿಗರನ್ನು ಕಳುಹಿಸಿದ್ದನು. ಪಾಂಡವರು ಮೃತರಾದರೆಂದು ವರ್ತಮಾನವನ್ನು ಕೇಳಿ ದುರ್ಯೋಧನಾದಿಗಳು ಕಪಟದಿಂದ ಅಳುತ್ತಿರಲು ವಿದುರನೂ ಪಾಂಡವರು ಬದುಕಿರುವೆಂದು ತಿಳಿದವನಾದ ಕಾರಣ ಕಪಟಕ್ಕೆ ಅಳುವವನಾದನು. ಆಗ ಭೀಷ್ಮಾಚಾರ್ಯರು ತುಂಬಾ ದುಃಖಪಡಲು ಅವರಿಗೆ ಮಾತ್ರ ಪಾಂಡವರು ಬದುಕಿರುವರೆಂದು ತಿಳಿಸಿದನು.

ಪಾಂಡವರು ದ್ರೌಪದೀದೇವಿಯರನ್ನು ಮದುವೆಯಾದಾಗ ವಿದುರನು ಧೃತರಾಷ್ಟ್ರನೊಡನೆ ನಿನ್ನ ಮಕ್ಕಳು ಅಭಿವೃದ್ಧಿಯನ್ನು ಹೊಂದಿದರು ಎಂದು ಹೇಳಿದನು. ಆಗ ಧೃತರಾಷ್ಟ್ರನು ತನ್ನ ಮಕ್ಕಳು ದುರ್ಯೋಧನಾದಿಗಳು ದ್ರೌಪದೀಸ್ವಯಂವರಕ್ಕೆ ಹೋಗಿರುವ ಕಾರಣ ಅವರಿಗೆ ದ್ರೌಪದೀವಿವಾಹ ವಾಯಿತೆಂದು ಭ್ರಮಿಸಿಕೊಂಡು ಬೇಕಾದ ಬಹುಮಾನಗಳನ್ನು ಕಳುಹಿಸಿದನು. ಆಗ ವಿದುರನು ನಿನ್ನ ಮಕ್ಕಳು ಎಂದರೆ ಪಾಂಡವರು ಎಂದು ಹೇಳಿದನು. ಅದನ್ನು ಕೇಳಿ ಧೃತರಾಷ್ಟ್ರನು ತನಗೆ ಇದು ಇಷ್ಟವಲ್ಲವೆಂಬ ಅಭಿಪ್ರಾಯವನ್ನು ತಿಳಿಸಬಾರದೆಂದು ಮರೆಮಾಡಿಕೊಂಡು ಹಾಗಾದರೆ ಬಹಳ ಸಂತೋಷವಾಯಿತೆಂದು ಹೇಳಿ ಪಾಂಡವರ ವಿಷಯವೆಲ್ಲವನ್ನೂ ವಿಚಾರಿಸಿದನು. ಆಮೇಲೆ ವಿದುರನ ಮಾತಿ ನಿಂದಲೇ ಪಾಂಡವರನ್ನು ದ್ರುಪದರಾಜನ ನಗರದಿಂದ ಹಸ್ತಿನಾವತಿಗೆ ಧೃತರಾಷ್ಟ್ರನು ಕರೆಯಿಸಿದನು. ಪಗಡೆ ಆಟವನ್ನು ಆಡಲಿಕ್ಕೆ ಧೃತರಾಷ್ಟ್ರನು ಪಾಂಡವನ್ನು ಕರೆತರಬೇಕೆಂದು ವಿದುರನೊಡನೆ ಹೇಳಿದಾಗಲೂ ಮೊದಲು ಧೃತರಾಷ್ಟ್ರನೊಡನೆ ಇದು ಕುಲನಾಶಕ್ಕೆ ಕಾರಣವಾದ ವ್ಯಾಪಾರವು. ಇದನ್ನು ಮಾಡಲೇಬಾರದು ಎಂದು ನಿಷೇಧಿಸಿದನು. ಆಗ ಧೃತರಾಷ್ಟ್ರನು ಅದು ಏಕೆ ಹಾಗೆ ಆಗಬೇಕು? ನಾವು ಇಲ್ಲವೇ. ಜಗಳವು ಆಗದಂತೆ ನೋಡಿಕೊಂಡರಾಯಿತು. ಮಕ್ಕಳು ಒಂದು ಸ್ಥಳದಲ್ಲಿ ಸೇರಿಕೊಂಡು ಆಡುವುದನ್ನು ನೋಡಬೇಕೆಂದು ಆಸೆಯುಂಟಾಗಿದೆ. ಆದುದರಿಂದ ನೀನು ಹೋಗಿ ಅವಶ್ಯವಾಗಿ ಪಾಂಡವರನ್ನು ಕರತರಬೇಕು ಎಂದು ಹೇಳಿದನು. ಹಾಗೆಯೇ ಅನಂತರ ವಿದುರನು ಪಾಂಡವರಿದ್ದಲ್ಲಿಗೆ ಹೋಗಿ ವಿಷಯವನ್ನು ತಿಳಿಸಿ ಪಗಡೆ ಆಟದಿಂದ ಸಂಭವಿಸುವ ದೋಷಗಳೆಲ್ಲವನ್ನೂ ವಿವರಿಸಿ ಇಷ್ಟೆಲ್ಲಾ ದೋಷಗಳಿರುವುವು. ಆದುದರಿಂದ ನೀನು ಪಗಡೆ ಆಟವಾಡಲಿಕ್ಕೆ ಬರುವುದು ಸರಿಯಲ್ಲ. ಆದರೆ ನಿನ್ನ ದೊಡ್ಡ ತಂದೆಯು ಹೇಳಿಕಳುಹಿಸಿರುವನು. ಆದುದರಿಂದ ನಿನ್ನ ಮನಸ್ಸಿಗೆ ತೋರಿದಂತೆ ಮಾಡು' ಎಂದು ಹೇಳಿರುವನು. ಮತ್ತು ಪಗಡೆ ಆಟದ ಸಭೆಯಲ್ಲಿ ಧರ್ಮರಾಜನಿಂದ ಇತರರಾದ ಪಾಂಡವರನ್ನು ಹೊರತು ಭೀಷ್ಮಾದಿ ಸಮಸ್ತರಿಗೂ ಕಲಿಯ ಆವೇಶವಿದ್ದರೂ ವಿದುರನಿಗೆ ಮಾತ್ರ ಕಲಿ ಆವೇಶವಿರಲಿಲ್ಲ. ಆದುದರಿಂದಲೇ ದುಃಶಾಸನನು ಲೋಕದೃಷ್ಟಿಯಿಂದ ರಜಸ್ವಲೆಯಾಗಿದ್ದ ದ್ರೌಪದೀದೇವಿಯರ ತಲೆಕೂದಲನ್ನು ಹಿಡಿದುಕೊಂಡು ಸಭೆಗೆ ಸೆಳೆದುಕೊಂಡು ಬಂದಾಗಲೂ ಭೀಷ್ಮಾದಿಗಳು ಒಬ್ಬರೂ ಅದನ್ನು ಅಧರ್ಮವೆಂದು ಹೇಳಲಿಲ್ಲ. ದ್ರೌಪದಿದೇವಿಯರು ಕೇಳಿದಾಗಲೂ ಕೂಡ ನಿನ್ನ ಗಂಡನಾದ ಧರ್ಮರಾಜನನ್ನೇ

ಕೇಳಿಕೋ ಎಂದು ಹೇಳಿದರಲ್ಲದೆ ಧರ್ಮವಲ್ಲ ಎಂಬ ಮಾತು ಅವರ ಬಾಯಿಯಲ್ಲಿಯೂ ಬರಲಿಲ್ಲ. ಅಷ್ಟು ಜನರ ಮಧ್ಯದಲ್ಲಿ ವಿದುರನೊಬ್ಬನೇ ಇದು ಧರ್ಮವಲ್ಲ. ಈ ಸಭೆಯಲ್ಲಿ ಮಹಾ ಅಧರ್ಮವು ನಡೆಯುತ್ತಿದೆ. ನನಗೆ ಇದನ್ನು ನಿಲ್ಲಿಸಲಿಕ್ಕೆ ಶಕ್ತಿಯಿಲ್ಲ ಎಂದು ಕೈಯನ್ನು ಮೇಲೆ ಎತ್ತಿ ಕೂಗಿಕೊಂಡನು. ಈರೀತಿಯಾಗಿ ಭೀಷ್ಮದ್ರೋಣಾದಿಗಳು ಕೂಡ ಪಗಡೆ ಆಟದ ಸಭೆಯಲ್ಲಿ ದ್ರೌಪದೀದೇವಿಯರನ್ನು ಉಪೇಕ್ಷಾ ಮಾಡಿದರು ಎಂಬ ಕೋಪದಿಂದಲೇ ಶ್ರೀಕೃಷ್ಣಪರಮಾತ್ಮನು ಸಂಧಿ ಮಾಡಲಿಕ್ಕೆ ಹಸ್ತಿನಾವತಿಗೆ ಹೋದಾಗ ಭೀಷ್ಮಾದಿಗಳ ಮನೆಗೆ ಎಲ್ಲಿಗೂ ಭೋಜನಕ್ಕೆ ಹೋಗದೆ ವಿದುರನ ಮನೆಗೆ ಹೋದನು.

ಪಾಂಡವರು ಸೋತು ವನಕ್ಕೆ ಹೋದಮೇಲೆ ವಿದುರನೊಡನೆ ಧೃತರಾಷ್ಟ್ರನು ನಾನೇನು ಮಾಡಬೇಕು? ಎಂದು ಕೇಳಿದನು. ಅದಕ್ಕೆ ವಿದುರನು ಪಾಂಡವರನ್ನು ಕೂಗಿ(ಕರೆಯಿಸಿ) ಅವರ ರಾಜ್ಯವನ್ನು ಕೊಟ್ಟುಬಿಡು ಎಂದು ಹೇಳಿದನು. ಆಗ ಧೃತರಾಷ್ಟ್ರನಿಗೆ ಕೋಪವು ಬಂದಿತು. 'ನೀನು ಯಾವಾಗಲೂ ಪಾಂಡವರ ಪಕ್ಷಪಾತಿಯಾಗಿರುವಿ. ನನ್ನ ಮಕ್ಕಳಿಗೆ ವಿರೋಧಿಯಾಗಿರುವಿ. ಆದುದರಿಂದ ನೀನು ಇಲ್ಲಿ ಇರಬೇಕಾಗಿಲ್ಲ. ಹೋದರೂ ಹೋಗಬಹುದು' ಎಂದು ಹೇಳಿದನು. ಅದಕ್ಕೆ ವಿದುರನು ಹಾಗಾದರೆ ನಾನು ಹೋಗುತ್ತೇನೆ ಎಂದು ಹೇಳಿ ಪಾಂಡವರಿದ್ದಲ್ಲಿಗೆ ಹೋದನು. ಅವನು ಹೋದ ಕೂಡಲೇ ಧೃತರಾಷ್ಟ್ರನು ದುಃಖದಿಂದ ಮೂರ್ಛಿತ ನಾಗಿ ಬಿದ್ದುಬಿಟ್ಟನು. ಆಮೇಲೆ ಎದ್ದು ನಾನು ಬದುಕಬೇಕಾಗಿದ್ದರೆ ನನ್ನ ತಮ್ಮನಾದ ವಿದುರನನ್ನು ಕರತರಬೇಕೆಂದು ಸಂಜಯನನ್ನು ಕಳುಹಿಸಿದನು. ಅವನು ಪಾಂಡವರ ಬಳಿಗೆ ಹೋಗಿ ವಿದುರನೊಡನೆ ತಿಳಿಸಲು ಧೃತರಾಷ್ಟ್ರನಿದ್ದಲ್ಲಿಗೆ ಕೋಪವಿಲ್ಲದೆ ಬಂದುಬಿಟ್ಟನು. ಧೃತರಾಷ್ಟ್ರನು ಅವನನ್ನು ತೊಡೆಯಮೇಲೆ ಕೂತುಕೊಳ್ಳಿಸಿಕೊಂಡು ಆಲಿಂಗಿಸಿಕೊಂಡನು. ಬಂದವನು ಧೃತರಾಷ್ಟ್ರನೊಡನೆ ಭೀಮಸೇನದೇವರು ಕಿರ್ಮೀರಾದಿರಾಕ್ಷಸರನ್ನು ವನದಲ್ಲಿ ಸಂಹರಿಸಿದ ಮಹಿಮೆಯನ್ನು ಹೇಳಿದನು.

ಭಾರತ ಯುದ್ಧವು ನಡೆಯುವ ಪೂರ್ವದಲ್ಲಿಯೂ ಧೃತರಾಷ್ಟ್ರನು ವಿದುರ ನೊಡನೆ ಏನು ಮಾಡಲಿ ಎಂದು ವಿಚಾರಿಸಿದಾಗ ಪಾಂಡವರಿಗೆ ರಾಜ್ಯವನ್ನು ಕೊಡುವುದೇ ಧರ್ಮವೆಂದು ನೀತಿಯನ್ನು ಹೇಳಿ ಆಮೇಲೆ 'ನಿನ್ನ ಬಳಿಯಲ್ಲಿ ಭಗವಂತನ ದ್ವೇಷಿಯೊಬ್ಬನಿರುವನಲ್ಲಾ! ಅವನನ್ನು ಮಗನೆಂದು ಪೋಷಿಸುತ್ತಿರುವಿ. ನಿನ್ನ ಕುಲವು ಉಳಿಯುವುದಕ್ಕಾಗಿ ಆ ಅಯೋಗ್ಯನನ್ನು ಪರಿತ್ಯಾಗ ಮಾಡು' ಎಂದು ದುರ್ಯೋಧನಾದಿಗಳು ಕೂತಿದ್ದ ಸಭೆಯಲ್ಲಿ ಧೈರ್ಯದಿಂದ ಹೇಳಿದವನಾದನು.

ಅದನ್ನು ಕೇಳಿ ದುರ್ಯೋಧನು ಕೋಪಿಸಿಕೊಂಡವನಾಗಿ 'ಈ ದಾಸಿಯ ಮಗನನ್ನು ಇಲ್ಲಿಗೆ ಯಾರು ಕೂಗಿದರು? ಯಾರ ಅನ್ನವನ್ನು ತಿನ್ನುತ್ತಿರುವನೋ ಅವರಿಗೇ ದ್ವೇಷ ಮಾಡುತ್ತಿರುವನು. ಇವನನ್ನು ಹಿಡಿದು ಬಡಿದು ಶ್ವಾಸ ಮಾತ್ರ ಉಳಿಸಿ ಊರಿನ ಹೊರಗೆ ತಳ್ಳಿ ಬನ್ನಿರಿ ಎಂದು ಬೆದರಿಸಿದನು. ಹಾಗೆ ಹೇಳಿದಾಗ ಧೃತರಾಷ್ಟನು ಒಂದು ಉತ್ತರವನ್ನು ಹೇಳಲಿಲ್ಲ. ಇದರಿಂದ ಇವನಿಗೆ ಇಷ್ಟು ಪುತ್ರಸ್ನೇಹವಿರುವುದು ಎಂದು ಹೇಳಿಕೊಂಡು ತನ್ನ ಧನುಸ್ಸನ್ನು ಅಲ್ಲಿಯೇ ಬಿಟ್ಟು ಊರನ್ನೇ ಬಿಟ್ಟು ಹೊರಟುಹೋದನು. ಯುದ್ಧವಾಗುವ ಸಮಯದಲ್ಲಿ ಆಗಾಗ್ಗೆ ಹಸ್ತಿನಾವತಿಗೆ ಬರುತ್ತಿದ್ದನು. ಹೆಚ್ಚಾಗಿ ತೀರ್ಥಯಾತ್ರೆಯನ್ನೇ ಮಾಡುತ್ತಿದ್ದನು. ತೀರ್ಥಯಾತ್ರೆ ಮಾಡಲಿಕ್ಕೆ ಹೋದಲ್ಲಿ ಮೈತ್ರೇಯರ ಹತ್ತಿರ ಅನೇಕ ಸಂಶಯಗಳನ್ನು ಕೇಳಿಕೊಂಡು ಪಾಂಡವರು ರಾಜ್ಯಭಾರ ಮಾಡುತ್ತಿರುವಾಗ ಬಂದು ಸೇರಿದನು.

ತರುವಾಯ ಕೆಲವು ಸಮಯ ಅಲ್ಲಿಯೇ ಇದ್ದು ಧೃತರಾಷ್ಟನಿಗೆ ವೈರಾಗ್ಯವು ಬರುವಂತೆ ಉಪದೇಶವನ್ನು ಮಾಡಿ ಕೊನೆಗೆ ಧೃತರಾಷ್ಟನನ್ನು ವನಕ್ಕೆ ಕರೆದುಕೊಂಡು ಹೋದನು. ವನದಲ್ಲಿ ಇದ್ದಾಗ ಒಂದು ಸಮಯದಲ್ಲಿ ಪಾಂಡವರು ಧೃತರಾಷ್ಟನನ್ನು ನೋಡಲಿಕ್ಕೆ ಹೋಗಿದ್ದರು. ಆಗ ವಿದುರನು ಧರ್ಮರಾಜನನ್ನು ನೋಡಿ ಓಡಲಿಕ್ಕೆ ಆರಂಭಿಸಿದನು. ಆಗ ಧರ್ಮರಾಜನು ಅವನ ಹಿಂದೆಯೇ 'ನಾನು ಧರ್ಮರಾಜನು ಬಂದಿರುವೆನು. ನಿನಗೆ ನಾನು ಬೇಕಾದವನಷ್ಟೆ' ಎಂದು ಹೇಳುತ್ತಾ ಓಡಿದನು. ಸ್ವಲ್ಪ ದೂರ ಹೋಗಿ ವಿದುರನು ಒಂದು ಮರದ ಬಳಿಯಲ್ಲಿ ವಿದುರನು ಧರ್ಮರಾಜನನ್ನೇ ನೋಡುತ್ತಾ ನಿಂತುಬಿಟ್ಟನು. ವಿದುರನ ದೇಹದಲ್ಲಿ ಇದ್ದ ಜೀವನು ಧರ್ಮರಾಜನಲ್ಲಿ ಪ್ರವೇಶಿಸಿದನು. ಅಂದರೆ ಯಮದೇವರೇ ಎರಡು ರೂಪದಿಂದ ಧರ್ಮರಾಜನಾಗಿಯೂ ವಿದುರನಾಗಿಯೂ ಅವತರಿಸಿದ್ದು. ಆದುದರಿಂದ ವಿದುರನ ದೇಹದಲ್ಲಿ ಇದ್ದ ಅಂಶವು ಧರ್ಮರಾಜನ ದೇಹದಲ್ಲಿಯೇ ಪ್ರವೇಶಿಸಿತು. ಅದರಿಂದ ಧರ್ಮರಾಜನಿಗೆ ವಿಶೇಷವಾಗಿ ಬಲವು ಬಂದಿತೆಂದು ತೋರಿತು ತರುವಾಯ ಧರ್ಮರಾಜನು ವಿದುರನ ದೇಹಕ್ಕೆ ಸಮಸ್ಕಾರ ಮಾಡಬೇಕೆಂದು ಯೋಚಿಸಿದಾಗ ಅವನು ಸನ್ಯಾಸಧರ್ಮವನ್ನು ವಹಿಸಿರುವನು. ಆದುದರಿಂದ ಅವನ ದೇಹವು ಹಾಗೆಯೇ ಇರಲಿ' ಎಂದು ಅಶರೀರವಾಣಿಯಾಯಿತು.



# ಕರ್ಣನು[1]

ಯಾದವರಲ್ಲಿ ಶೂರನೆಂದು ಹೆಸರುಳ್ಳ ರಾಜನಿದ್ದನು. ಅವನಿಗೆ ಪೃಥೆಯೆಂಬ ಮಗಳಿದ್ದಳು. ಅವಳನ್ನು ಅವನು ತನ್ನ ಮಿತ್ರನಾದ ಕುಂತೀಭೋಜನಿಗೆ ಕೊಟ್ಟನು. ಕುಂತೀಭೋಜನು ಅವಳನ್ನು ಸಲಹಿದನು. ಅದರಿಂದಲೇ ಪೃಥೆಗೆ ಕುಂತಿಯೆಂಬ ಹೆಸರಾಯಿತು. ಕುಂತಿಯು ಚಿಕ್ಕವಳಾಗಿರುವಾಗ ದುರ್ವಾಸಮುನಿಗಳು ಕುಂತಿ ಭೋಜನ ಬಳಿಗೆಬಂದು ನಾನು ನಿನ್ನ ಮನೆಯಲ್ಲಿ ಕೆಲವು ಸಮಯ ವಾಸ ಮಾಡಿಕೊಂಡಿರುವೆನೆಂದು ಹೇಳಿದರು. ಆದಕ್ಕೆ ರಾಜನು 'ನನ್ನ ಮಗಳು ಕುಂತಿಯು ತನ್ನ ಶಕ್ತಿಯನ್ನು ಮೀರಿ ಸೇವೆ ಮಾಡುವಳು. ತಾವು ಕೋಪಿಸದೆ ಕ್ಷಮಿಸಿಕೊಂಡು ಇರುವಾದರೆ ಎಷ್ಟು ಸಮಯಬೇಕಾದರೂ ಇರಬಹುದು' ಎಂದನು. ದುರ್ವಾಸರು ಹಾಗೆಯೇ ಆಗಲಿ ಎಂದು ಹೇಳಿ ಅಲ್ಲಿ ವಾಸಮಾಡಿದರು. ಕುಂತೀದೇವಿಯು ಮನಃಪೂರ್ವಕವಾಗಿ ದೇಹಶ್ರಮದಿಂದ ಇನ್ನೊಬ್ಬರಿಂದ ಆಗದಷ್ಟು ಸೇವೆಯನ್ನು ಮಾಡಿದಳು. ಹದಿಮೂರು ವರ್ಷ ಕುಂತಿಯು ಭಕ್ತಿಯಿಂದ ದುರ್ವಾಸರ ಸೇವೆಯನ್ನು ಮಾಡಲು ದುರ್ವಾಸರು ಸಂತುಷ್ಟರಾಗಿ ಸಮಸ್ತದೇವತೆಗಳನ್ನು ವಶಮಾಡುವ ಉತ್ತಮವಾದ ಮಂತ್ರವನ್ನು ಉಪದೇಶಿಸಿದರು.

ಒಂದು ದಿವಸದಲ್ಲಿ ಕುಂತಿಯು ಋತುಸ್ನಾನವನ್ನು ಮಾಡುವವಳಾಗಿ ದುರ್ವಾಸರು ಉಪದೇಶಿಸಿದ ಮಂತ್ರವನ್ನು ಪರೀಕ್ಷಿಸುವುದಕ್ಕಾಗಿ ಮಂತ್ರವನ್ನು ಜಪಿಸಿ ಸೂರ್ಯದೇವರನ್ನು ಕೂಗಿದಳು. ಆ ಕ್ಷಣದಲ್ಲಿಯೇ ಸೂರ್ಯದೇವರು ಕುಂತಿದೇವಿಯು ಇದ್ದಲ್ಲಿಗೆ ಬಂದರು. ಕುಂತೀದೇವಿಯು ಎಷ್ಟು ಸಮಾಧಾನ ಪಡಿಸಿದರೂ ಕುಂತಿಯೊಡನೆ ವಿಹಾರಮಾಡದೆ ಹೋಗಲಿಕ್ಕೆ ಸೂರ್ಯದೇವರು ಕೇಳಲಿಲ್ಲ. ತರುವಾಯ ಸೂರ್ಯದೇವರು ಕುಂತಿದೇವಿಯ ಸಂಗವನ್ನು ಮಾಡಿದರು. ಮಗನಾಗಿ ಹುಟ್ಟಿದರು. ಹುಟ್ಟುವಾಗಲೇ ದಿವ್ಯವಾದ ಕವಚ ಕುಂಡಲ ಸಹಿತವಾಗಿಯೇ ಮಗುವು ಹುಟ್ಟಿತು.

ಸೂರ್ಯದೇವರು ಪೂರ್ವಾವತಾರದಲ್ಲಿ ಸುಗ್ರೀವನಾಗಿರುವಾಗ ವಾಲಿಯನ್ನು ಸಂಹಾರಮಾಡಿಸಿದ ಮಹಾದೋಷದಿಂದ ಸಹಸ್ರವರ್ಮ ಎಂದು ಹೆಸರುಳ್ಳ ಅಸುರನಿಂದ ಆವಿಷ್ಟನಾಗಿಯೇ ಹುಟ್ಟಿದರು. ಲೋಕದಲ್ಲಿ ಪಿಶಾಚಿಗಳಿಂದ ಮನುಷ್ಯರ ಬುದ್ಧಿಯು ಕೆಡಿಸಲ್ಪಡುವಂತೆ ಸೂರ್ಯ ರೂಪಿಯಾದ ಆ ಶಿಶುವಿನ ಬುದ್ಧಿಯು

---

1. ಮ.ತಾ.ನಿ. ಅ-11, 15, 18, 19, 21, 22 ರಿಂದ 28

ಯಾವಾಗಲೂ ದೂಷಿತವಾಗಿತ್ತು. ಆದರೂ ರಾಮದೇವರ ಸೇವೆಯನ್ನು ಮಾಡಿದ ಪುಣ್ಯದಿಂದ ಭಗವಂತನ ಸನ್ನಿಧಾನವುಳ್ಳವರಾಗಿಯೂ ಇದ್ದಿತು. ಆ ಬಾಲನು ಸುಂದರವಾದ ಕಿವಿಯುಳ್ಳವನಾಗಿದ್ದ ಕಾರಣ ಕರ್ಣ ಎಂದು ಹೆಸರುಳ್ಳವನಾಗಿದ್ದನು. ತರುವಾಯ ಕುಂತಿಯು ಜನರ ಅಪವಾದದ ಭಯದಿಂದ ಒಂದು ಪೆಟ್ಟಿಗೆಯಲ್ಲಿ ರತ್ನಗಳನ್ನು ತುಂಬಿಸಿ ಮಗುವನ್ನೂ ಇಟ್ಟು ಯಮುನಾನದಿಯಲ್ಲಿ ಬಿಟ್ಟುಬಿಟ್ಟಳು. ನದೀಪ್ರವಾಹದಲ್ಲಿ ತೇಲುತ್ತಾ ಬಂದ ಆ ಪೆಟ್ಟಿಗೆಯನ್ನು ಅಧಿರಥ ಎಂಬ ಸೂತನು ನೋಡಿ ಆ ಪೆಟ್ಟಿಗೆಯನ್ನು ಹಿಡಿದನು. ಅದರ ಒಳಗೆ ಇದ್ದ ರತ್ನಗಳನ್ನು ಆ ಮಗುವನ್ನು ಸ್ವೀಕರಿಸಿದನು. ಅವನೂ ಅವನ ಹೆಂಡತಿಯಾದ ರಾಧೆಯೂ ಆ ಕರ್ಣನನ್ನು ಬೆಳೆಸಿದರು. ಹಣದ ಒಟ್ಟಿಗೆ ಇದ್ದ ಪ್ರಯುಕ್ತ ಕರ್ಣನಿಗೆ ವಸುಷೇಣ ಎಂಬ ಹೆಸರೂ ಆಯಿತು. ಕರ್ಣನು ಬಾಲ್ಯದಲ್ಲಿಯೇ ಎಲ್ಲಾ ವೇದಗಳನ್ನೂ ಅಧ್ಯಯನ ಮಾಡಿದನು. ಸರ್ವಶಾಸ್ತ್ರಗಳನ್ನು ಓದಿದನು. ಮಹಾಬಲಿಷ್ಠನಾಗಿದ್ದನು.

ಹಸ್ತಿನಾವತಿಯಲ್ಲಿ ದ್ರೋಣಾಚಾರ್ಯರು ಕೌರವರಿಗೂ ಪಾಂಡವರಿಗೂ ಅಸ್ತ್ರವಿದ್ಯೆಯ ಪಾಠಹೇಳುತ್ತಿದ್ದರು. ಅವರು ಪರಶುರಾಮದೇವರ ಬಳಿಯಲ್ಲಿ ಹನ್ನೆರಡುವರ್ಷ ಕಾಲ ಅಸ್ತ್ರವಿದ್ಯೆಗಳನ್ನು ಅಭ್ಯಾಸ ಮಾಡಿದ್ದರು. ಪರಶುರಾಮ ದೇವರು ಇಪ್ಪತ್ತೊಂದು ಬಾರಿ ಕ್ಷತ್ರಿಯರನ್ನು ಸಂಹರಿಸುತ್ತಲೇ ಇದ್ದವರಾದ ಕಾರಣ ಅವರು ಯಾವ ಕ್ಷತ್ರಿಯರಿಗೂ ಅಸ್ತ್ರವಿದ್ಯೆಗಳನ್ನು ಪಾಠ ಹೇಳಿದ್ದಿಲ್ಲ. ಹೀಗೆ ಆ ವಿದ್ಯೆಗಳು ಅಪೂರ್ವವಾಗಿದ್ದವು. ಅವನ್ನು ದ್ರೋಣಾಚಾರ್ಯರು ಅಭ್ಯಾಸ ಮಾಡಿಕೊಂಡು ಬಂದು ಪಾಠಹೇಳಲು ಆರಂಭಿಸಲು ಎಲ್ಲಾ ರಾಜಪುತ್ರರೂ ಬಂದು ಪಾಠಕೇಳಲಿಕ್ಕೆ ಆರಂಭಿಸಿದರು. ಆ ಸಂದರ್ಭದಲ್ಲಿ ಕರ್ಣನು ಈ ವಿಷಯವನ್ನು ತಿಳಿದು ತಾನೂ ಪಾಠಕೇಳಬೇಕೆಂಬ ಆಸೆಯಿಂದ ದ್ರೋಣಾಚಾರ್ಯರ ಬಳಿಗೆ ಬಂದನು. ಆಗ ದ್ರೋಣಾಚಾರ್ಯರು ಕರ್ಣನೊಡನೆ ನೀನು ಸೂತಜಾತಿಯವ ನಾದ ಕಾರಣ ನಾನು ನಿನಗೆ ಪಾಠವನ್ನು ಹೇಳಲಾರೆನು ಎಂದುಬಿಟ್ಟರು.

ಅಭಿಮಾನಿಯಾದ ಕರ್ಣನು ತನ್ನ ಇಷ್ಟವು ಲಭಿಸದೆ ಇರಲು ಈ ಬ್ರಾಹ್ಮಣನು ಯಾವ ಪರಶುರಾಮದೇವರಿಂದ ಅಸ್ತ್ರವಿದ್ಯೆಯ ಅಭ್ಯಾಸಮಾಡಿದನೋ ಆ ಪರಶುರಾಮದೇವರ ಬಳಿಗೇ ಹೋಗಿ ತಾನು ಅಭ್ಯಾಸಮಾಡುವೆನು ಎಂದು ಯೋಚಿಸಿಕೊಂಡು ಪರಶುರಾಮದೇವರ ಆಶ್ರಮಕ್ಕೆ ಹೋದನು. ಕರ್ಣನು ಪರಶುರಾಮದೇವರ ಭಯದಿಂದ ಅಸ್ತ್ರಗಳ ಮೇಲಿನ ಲೋಭದಿಂದ ನಾನು ಬ್ರಾಹ್ಮಣನೆಂದು ಸುಳ್ಳಿಹೇಳಿಕೊಂಡನು. ಸರ್ವಜ್ಞಶಿಖಾಮಣಿಯಾದ ಪರಶುರಾಮ

ದೇವರಿಗೆ ತಿಳಿಯದವಿಷಯವಿಲ್ಲ. ಆದರೂ ಅಸ್ತ್ರಜ್ಞಾನಿಗಳಲ್ಲಿ ಶ್ರೇಷ್ಠನಾದ ಕರ್ಣನನ್ನು ಆಶ್ರಯಿಸಿ ದುರ್ಯೋಧನನು ಅರ್ಜುನನನ್ನು ಸಂಹರಿಸುವೆನೆಂಬ ದೃಢನಿಶ್ಚಯವನ್ನು ಹೊಂದಲಿ ಎಂಬ ಅಭಿಪ್ರಾಯದಿಂದ ಕರ್ಣನು ಬ್ರಾಹ್ಮಣನಲ್ಲವೆಂದು ತಿಳಿದು ಕೊಂಡೇ ಕರ್ಣನಿಗೆ ಅಸ್ತ್ರಮಂತ್ರಗಳನ್ನು ಉಪದೇಶಿಸಿದರು. ಕರ್ಣನು ಪರಶುರಾಮ ದೇವರಿಂದ ಉತ್ತಮವಾದ ಭಗವಜ್ಞಾನವನ್ನೂ ಉತ್ತಮವಾದ ವಿದ್ಯೆಗಳನ್ನು ಪಡೆದನು. ಮತ್ತು ಅವರಿಂದ ಜಯಶೀಲವಾದ ಧನುಸ್ಸನ್ನು ರಥವನ್ನು ಪಡೆದನು. ನಾಲ್ಕುವರ್ಷ ಸಮಯ ಪರಶುರಾಮದೇವರ ಬಳಿಯಲ್ಲಿ ವಾಸಮಾಡಿದ್ದನು. ಆಮೇಲೆಯೂ ಕೂಡ ಕರ್ಣನು ಪರಶುರಾಮದೇವರನ್ನು ಬಿಟ್ಟುಹೋಗಲಿಕ್ಕೆ ಅಸಮರ್ಥನಾಗಿ ಅಲ್ಲಿಯೇ ವಾಸಮಾಡುತ್ತಿದ್ದನು.

ಒಂದು ದಿವಸದಲ್ಲಿ ಪರಶುರಾಮದೇವರು ದೇವತಾಕಾರ್ಯಕ್ಕಾಗಿ ಪೂರ್ವಾವ ತಾರದಲ್ಲಿ ವಾಲಿಯ ಸಂಹಾರವನ್ನು ಮಾಡಿಸಿದ್ದಕ್ಕೆ ಫಲವನ್ನು ಕೊಡುವುದಕ್ಕಾಗಿ ತಾನು ನಿದ್ರಾರಹಿತರಾಗಿದ್ದರೂ ನಿದ್ರೆಯು ಬಂದಂತೆ ತೋರಿಸುತ್ತಾ ಕರ್ಣನ ತೊಡೆಯಲ್ಲಿ ತಲೆಯನ್ನು ಇಟ್ಟು ಮಲಗಿದರು. ಆ ಸಮಯದಲ್ಲಿ ಹೇತಿಯೆಂದು ಹೆಸರುಳ್ಳ ರಾಕ್ಷಸನೊಬ್ಬನು ಸರಿಯಾದ ಸಮಯದಲ್ಲಿ ಇಂದ್ರದೇವರನ್ನು ಪೂಜಿಸದೆ ಇದ್ದಕಾರಣ ಇಂದ್ರದೇವರ ಶಾಪದಿಂದ ಒಂದು ಕೀಟವಾಗಿದ್ದನು. ಆಗ ಇಂದ್ರ ದೇವರು ತನ್ನ ಮಗನಾದ ಅರ್ಜುನನಿಗಾಗಿ ಕರ್ಣನಿಗೆ ಪರಶುರಾಮದೇವರಿಂದ ಶಾಪವನ್ನು ಉಂಟುಮಾಡಿಸುವುದಕ್ಕಾಗಿ ಆ ಕೀಟದ ಒಳಗೆ ಪ್ರವೇಶಿಸಿದರು. ಪರಶುರಾಮದೇವರು ಕರ್ಣನ ತೊಡೆಯ ಮೇಲೆ ತಲೆಯನ್ನು ಇಟ್ಟುಕೊಂಡು ಮಲಗಿರಲು ಕೀಟದಲ್ಲಿ ಪ್ರವೇಶಿಸಿದ ಇಂದ್ರದೇವರು ತೊಡೆಯ ಕೆಳಗಿನಿಂದ ಕೊರೆದುಕೊಂಡು ಮೇಲಿನ ಚರ್ಮದವರೆಗೆ ಬಂದರು. ಆಗ ರಕ್ತದ ಪ್ರವಾಹವೇ ಸುರಿಯಿತು. ಆಗ ಪರಶುರಾಮದೇವರು ನಿದ್ರೆಯಿಂದ ಎಚ್ಚೆತ್ತಂತೆ ನಟಿಸುತ್ತಾ ಎದ್ದು ಕುಳಿತರು. ಅಪಾವಿತ್ರ್ಯಕ್ಕೆ ಕಾರಣವಾದ ರಕ್ತಪ್ರವಾಹವು ಬಂದರೂ ನನ್ನನ್ನು ಎಬ್ಬಿಸದೆ ಇರುವಿ? ನೀನು ಬ್ರಾಹ್ಮಣನಾಗಿದ್ದಿದ್ದರೆ ಹೀಗೆ ಕೂತುಕೊಂಡು ಇರಲಾರಿ. (ಇರುತ್ತಿದ್ದಿಲ್ಲ) ನೀನು ಯಾರು ಎಂಬುದನ್ನು ತಿಳಿಸು ಎಂದು ಕೇಳಿದರು.

ಆದಕ್ಕೆ ಕರ್ಣನು 'ನಿದ್ರೆಗೆ ವಿರೋಧವನ್ನು ಮಾಡಬಾರದು ಎಂದು ನಾನು ಕೀಟವನ್ನು ಉಪೇಕ್ಷಿಸಿದೆನು. ನಾನು ಸೂತಜಾತಿಯವನು. ನೀವೇ ಜಗತ್ತಿಗೆ ಮುಖ್ಯವಾಗಿ ತಂದೆಯು. ತಾಯಿಯು. ಆದುದರಿಂದ ನಾನು ತಮ್ಮ ಮಗನೆಂದು ಬ್ರಾಹ್ಮಣನೆಂದು ಹೇಳಿಕೊಂಡೆನು' ಎಂದು ಹೇಳಿದನು.

ಕರ್ಣನು ಈರೀತಿಯಾಗಿ ಹೇಳುತ್ತಿರಲು ಆ ಕೀಟವು ಪರಶುರಾಮದೇವರ ದೃಷ್ಟಿಗೆ ವಿಷಯವಾಗಿ ಆ ಪರಶುರಾಮದೇವರ ಅನುಗ್ರಹದಿಂದ ತನ್ನ ನಿಜರೂಪ ವನ್ನು ಹೊಂದಿ ವಿಮಾನದಲ್ಲಿ ಕೂತುಕೊಂಡು ಸ್ವರ್ಗಕ್ಕೆ ಹೋಯಿತು. ಪರಶುರಾಮ ದೇವರ ಅನುಗ್ರಹವನ್ನು ಪಡೆದಕಾರಣ ಆ ಅಸುರನು ಅಸುರದೇಹವುಳ್ಳ ಸಜ್ಜೀವನಾಗಿರಬೇಕು.

ತರುವಾಯ ಪರಶುರಾಮದೇವರು ಕರ್ಣನೊಡನೆ 'ಸುಳ್ಳು ಹೇಳಿದ ನಿನಗೆ ನನ್ನ ಬಳಿಯಲ್ಲಿ ವಾಸಮಾಡುವ ಯೋಗ್ಯತೆಯಿರುವುದಿಲ್ಲ. ನೀನು ನನ್ನನ್ನು ಇಷ್ಟು ಸಮಯ ಸೇವೆಮಾಡಿದ್ದು ವ್ಯರ್ಥವಾಗುವುದಿಲ್ಲ. ನೀನು ಎಲ್ಲಾ ಶತ್ರುಗಳನ್ನು ಜಯಿಸುವಿ. ಸ್ಪರ್ಧೆಯಿಲ್ಲದೆ ನೀನು ಯುದ್ಧ ಮಾಡಿದೆಯಾದರೆ ನಿನ್ನನ್ನು ಯಾರೂ ಜಯಿಸಲಾರರು. ಯಾರೊಡನೆ ಸ್ಪರ್ಧೆಯಿಂದ ಯುದ್ಧಕ್ಕೆ ಹೋಗುವಿಯೋ ಅವನಿಂದ ಪರಾಜಯವನ್ನೇ ಹೊಂದುವಿ. ಅದರಲ್ಲಿ ಸಂದೇಹವೇ ಇಲ್ಲ. ಆ ಸಮಯದಲ್ಲಿ ನಿನಗೆ ಅಸ್ತ್ರಮಂತ್ರಗಳೆಲ್ಲವೂ ಮರೆತು ಹೋಗುವುದು. ಇಲ್ಲಿಂದ ಹೊರಟುಹೋಗು' ಎಂದು ಹೇಳಿದರು. ಕರ್ಣನು ಪರಶುರಾಮದೇವರಿಗೆ ನಮಸ್ಕರಿಸಿ ಹೊರಟುಹೋದನು.

ದ್ರೋಣಾಚಾರ್ಯರು ಹಸ್ತಿನಾವತಿಯಲ್ಲಿ ಪಾಂಡವರಿಗೂ ಕೌರವರಿಗೂ ರಾಜಪುತ್ರರಿಗೂ ಶಸ್ತ್ರವಿದ್ಯೆಯನ್ನು ಹೇಳಿಕೊಟ್ಟ ಮೇಲೆ ರಂಗಸ್ಥಳದ ಮಧ್ಯದಲ್ಲಿ ಅವರವರ ಚಾತುರ್ಯವನ್ನು ತೋರಿಸಿದರು. ಜನರೆಲ್ಲರೂ ಸೇರಿದ್ದರು. ಧೃತರಾಷ್ಟ್ರ ಕುಂತೀ, ಗಾಂಧಾರಿ, ಭೀಷ್ಮಾಚಾರ್ಯರೇ ಮೊದಲಾದವರೂ ಕೂತುನೋಡು ತ್ತಿದ್ದರು. ಒಬ್ಬೊಬ್ಬ ರಾಜಪುತ್ರರೂ ತಾವು ಅಭ್ಯಾಸಮಾಡಿದ ವಿದ್ಯೆಯನ್ನು ತೋರಿಸಿದರು. ಅಶ್ವತ್ಥಾಮಾಚಾರ್ಯರು ವಿಚಿತ್ರವಾಗಿ ತೋರಿಸಲು ಅರ್ಜುನನು ಅವರಿಗಿಂತಲೂ ಅಧಿಕವಾಗಿ ತೋರಿಸಿದನು. ಆ ಸಮಯದಲ್ಲಿಯೇ ಕರ್ಣನೂ ಅಲ್ಲಿಗೆ ಬಂದು ತಾನು ಪರಶುರಾಮದೇವರಿಂದಲೇ ಅಭ್ಯಾಸಮಾಡಿಕೊಂಡು ಬಂದಿದ್ದ ವಿದ್ಯೆಯನ್ನು ತೋರಿಸಿ ಆರಾಜಸಭೆಯಲ್ಲಿ ಅರ್ಜುನನಿಗಿಂತಲೂ ಅಧಿಕ ನಾದನು. ಸಹಜವಾದ ಕವಚಕುಂಡಲಗಳನ್ನು ಧರಿಸಿದ್ದ ಕಾರಣ ಕರ್ಣನನ್ನು ಕುಂತಿಯು ತನ್ನ ಮಗನೆಂದು ತಿಳಿದಳು. ಆದರೆ ಲಜ್ಜೆಯಿಂದ ತನ್ನ ಮಗನೆಂದು ಹೇಳಿಕೊಳ್ಳಲಿಲ್ಲ. ಆಗ ಅರ್ಜುನನು ಕರ್ಣನ ಆಧಿಕ್ಯವನ್ನು ಸಹಿಸದೆ ಸಭೆಯಲ್ಲಿ ಯುದ್ಧಕ್ಕೆ ಕೂಗಿದನು. ಆಗ ಭೀಮಸೇನದೇವರು ಕ್ಷತ್ರಿಯೇತರನನ್ನು ಯುದ್ಧಕ್ಕೆ ಕೂಗುವುದು ಧರ್ಮಕ್ಕೆ ವಿರುದ್ಧವೆಂದು ತಿಳಿದವರಾಗಿ ಅರ್ಜುನನನ್ನು ಯುದ್ಧಕ್ಕೆ

ಹೋಗದಂತೆ ತಡೆದು ಕರ್ಣನಿಗೆ ಚಾಟುವಾರಿಯನ್ನು (ಬಾರುಕೋಲನ್ನು) ಕೊಟ್ಟರು. ಸರ್ವಜ್ಞರಾದ ಭೀಮಸೇನದೇವರಿಗೆ ಕರ್ಣನು ಕುಂತಿಯ ಮಗನಾದ ಕಾರಣ ಕ್ಷತ್ರಿಯಕುಲದಲ್ಲಿ ಹುಟ್ಟಿದವನೆಂದು ತಿಳಿಯದೆ ಇಲ್ಲ. ಆದುದರಿಂದ ಹೇಗೆ ಬ್ರಾಹ್ಮಣಜಾತಿಯಲ್ಲಿ ಹುಟ್ಟಿದವನಾದರೂ ಜಾತಿಭ್ರಷ್ಟನಾದರೆ ಅವನು ಬ್ರಾಹ್ಮಣನೆನಿಸಿ ಕೊಳ್ಳಲಾರನು. ಹಾಗೆಯೇ ಕರ್ಣನು ಕ್ಷತ್ರಿಯಕುಲದಲ್ಲಿ ಹುಟ್ಟಿದವನಾಗಿದ್ದರೂ ಕ್ಷತ್ರಿಯ ಸಂಸ್ಕಾರಗಳಿಂದ ರಹಿತನಾದ ಕಾರಣ ಕ್ಷತ್ರಿಯನೆನಿಸಿಕೊಳ್ಳಲಾರನೆಂದು ಅಭಿಪ್ರಾಯದಿಂದ ಹಾಗೆ ಮಾಡಿದರು. ಕರ್ಣನು ಉತ್ತರಹೀನನಾಗಲು ದುರ್ಯೋಧನನು ತಂದೆಯ ಆಜ್ಞೆಯಿಂದ ಕರ್ಣನಿಗೆ ಅಂಗದೇಶದಲ್ಲಿ ರಾಜನನ್ನಾಗಿ ಪಟ್ಟಾಭಿಷೇಕವನ್ನು ಮಾಡಿದನು. ಧೃತರಾಷ್ಟ್ರನು ಪಕ್ಷಪಾತದಿಂದ ಮಗನ ವಶನಾಗಿ ದ್ದನು. ಕರ್ಣನಿಗೆ ಪಟ್ಟಾಭಿಷೇಕವು ನಡೆಯಲು ಅಲ್ಲಿಗೆ ಕರ್ಣನ ತಂದೆಯಾದ ಅಧಿರಥನು ಬಂದನು. ಕರ್ಣನು ಎಲ್ಲಾ ರಾಜರ ಸಭೆಯ ಮಧ್ಯದಲ್ಲಿ ಅವನಿಗೆ ನಮಸ್ಕರಿಸಿದನು. ಅವನು ಮಾಡಿದ (ಸಾಕು ತಂದೆಗೆ ಮಾಡಿದ ನಮಸ್ಕಾರದಿಂದ) ಕರ್ಮದಿಂದ ಅಲ್ಲಿ ಬಂದಿದ್ದ ಸಜ್ಜನರೆಲ್ಲರೂ ಸಂತೋಷವನ್ನು ಹೊಂದಿದರು.

ತರುವಾಯ ಭೀಮಸೇನದೇವರೂ, ದುರ್ಯೋಧನನೂ ತಮ್ಮ ವಿದ್ಯೆಯನ್ನು ತೋರಿಸುವ ನೆಪದಿಂದ ಭಾರವುಳ್ಳ ಗದೆಗಳನ್ನು ಹಿಡಿದುಕೊಂಡು ಕೋಪದಿಂದ ಬಂದರು. ಆಗ ಎಲ್ಲಾ ಪ್ರಪಂಚವೂ ಭೀಮಸೇನದೇವರ ಮತ್ತು ದುರ್ಯೋನನ ಪಕ್ಷವನ್ನು ವಹಿಸಿ ಎರಡು ವಿಧವಾಗಿ ಆಯಿತು. ದೇವತೆಗಳೂ ಅವರನ್ನು ಅನುಸರಿಸಿ ಇರುವವರೂ ಭೀಮಸೇನದೇವರನ್ನು ಆಶ್ರಯಿಸಿದರು. ಅಸುರರೂ ಅವರಿಗೆ ಅನುಕೂಲವಾಗಿಇರುವವರೂ ದುರ್ಯೋಧನನ ಪಕ್ಷವನ್ನು ವಹಿಸಿದರು. ಮನುಷ್ಯರೂ ಎರಡುಪಕ್ಷ ವಹಿಸಿದರು. ಭೀಮ! ನಿನಗೆ ಜಯವಾಗಲಿ ಎಂದು ದೇವತೆಗಳ ಪಕ್ಷದವರು ಹೇಳಿದರು. ದುರ್ಯೋಧನ! ನಿನಗೆ ಜಯವಾಗಲಿ ಎಂದು ಮತ್ತೊಂದು ಪಕ್ಷದವರು(ಅಸುರ) ಹೇಳಿದರು. ಹೀಗೆ ಜಗತ್ತೇ ಕೋಪಿಸಿ ಕೊಂಡದ್ದನ್ನು ನೋಡಿ ದ್ರೋಣಾಚಾರ್ಯರು ಭೀಮದುರ್ಯೋಧನಾಶ್ರಯದಿಂದ ಈ ಲೋಕವು ನಾಶವನ್ನು ಹೊಂದದೆ ಇರಲಿ ಎಂಬ ಅಭಿಪ್ರಾಯದಿಂದ ಮಗನಾದ ಅಶ್ವತ್ಥಾಮಾಚಾರ್ಯರಿಂದ ಅವರಿಬ್ಬರನ್ನು ಯುದ್ಧದಲ್ಲಿ ನಿಲ್ಲಿಸಿದರು. ಅಶ್ವತ್ಥಾಮಾ ಚಾರ್ಯರು ಹೋಗಿ ನಿಮ್ಮ ನಿಮ್ಮ ಯೋಗ್ಯತೆಯಲ್ಲಿ ನಿಮಗೆ ಸಮಾನರಾದವರು ಇನ್ನೊಬ್ಬರು ಇರುವುದಿಲ್ಲ ಎಂದು ಹೇಳಿ ಸಮಾಧಾನಪಡಿಸಿದರು. ದ್ರೋಣಾ ಚಾರ್ಯರ ಆಜ್ಞೆಯಿಂದ ತಡೆಯಲ್ಪಟ್ಟವರಾಗಿ ಇವರಿಬ್ಬರೂ ತಮ್ಮ ತಮ್ಮ ಮನೆಗೆ

ಹೋದರು. ಕೋಪಿಸಿಕೊಂಡಿದ್ದ ಸುರಾಸುರರನ್ನು ಬ್ರಹ್ಮದೇವರು ಕಾಲಾಂತರದಲ್ಲಿ ನೀವು ಯುದ್ಧವನ್ನು ನೋಡಿರಿ ಎಂದು ಹೇಳಿ ಸಮಾಧಾನಪಡಿಸಿ ರುದ್ರದೇವರಿಂದ ಸಹಿತರಾಗಿ ತನ್ನ ಮಂದಿರಕ್ಕೆ ಹೋದರು. ದುರ್ಯೋಧನನು ಮನೆಗೆ ಹೋಗುವಾಗ ಕರ್ಣನನ್ನು ಕೈಯಲ್ಲಿ ಹಿಡಿದುಕೊಂಡೇ ಹೋದನು. ಭೀಮಸೇನದೇವರು ಮನೆಗೆ ಹೋಗುವಾಗ ಅರ್ಜುನನನ್ನು ಕೈಯಲ್ಲಿ ಹಿಡಿದುಕೊಂಡು ಹೋದರು. ಅರ್ಜುನ ನಿಂದ ಕರ್ಣನನ್ನು ಕೊಲ್ಲಿಸಬೇಕೆಂದು ಭೀಮಸೇನದೇವರ ನಿಶ್ಚಯವಾಗಿದ್ದಿತು. ದುರ್ಯೋಧನನಿಗೆ ಅದಕ್ಕೆ ವಿಪರೀತವಾದ(ವಿರುದ್ಧವಾದ) ನಿಶ್ಚಯವಿದ್ದಿತು. ಅದಕ್ಕಾಗಿ ಇಬ್ಬರೂ ನೀತಿಯನ್ನು ಮಾಡಿದರು. ಅರ್ಜುನನಿಗೆ ಕೀರ್ತಿಯೂ ವಿಜಯವೂ ಹೆಚ್ಚಾಗುವಂತೆ ಭೀಮಸೇನದೇವರು ಪ್ರಯತ್ನ ಮಾಡುತ್ತಿದ್ದರು. ದುರ್ಯೋಧನನು ಇದಕ್ಕೆ ವಿಪರೀತವಾಗಿ ಮಾಡುತ್ತಿದ್ದನು. ರಾಮಾವತಾರದಲ್ಲಿ ಸುಗ್ರೀವನು ಹನುಮಂತ ದೇವರನ್ನು ಆಶ್ರಯಿಸಿದ ಕಾರಣ ರಾಮದೇವರೂ ಇತರ ದೇವತೆಗಳೂ ಸುಗ್ರೀವನ ಪಕ್ಷವನ್ನು ಹೇಗೆ ವಹಿಸಿದರೋ, ಹಾಗೆಯೇ ಭೀಮಸೇನ ದೇವರಿಗಾಗಿ ಕೃಷ್ಣಪರಮಾತ್ಮನೂ ಇತರ ದೇವತೆಗಳೂ ಅರ್ಜುನನ ಪಕ್ಷದವ ರಾಗಿದ್ದರು. ಅದಕ್ಕಾಗಿಯೇ ಇಂದ್ರ ದೇವರು ಭೀಮಸೇನದೇವರ ತಮ್ಮನಾಗಿ ಹುಟ್ಟಿದರು. ಆದುದರಿಂದ ಭೀಮಸೇನ ದೇವರು ಅರ್ಜುನನಿಗೆ ಅನುಗ್ರಹ ಮಾಡಿದರು. ದುರ್ಯೋನನಿಗಾಗಿ ದೈತ್ಯ ದಾನವರು ಕರ್ಣನ ಪಕ್ಷದವರಾಗಿದ್ದರು. ಈರೀತಿಯಾಗಿ ಕರ್ಣಾರ್ಜುನರು ಪಗಡೆಕಾಳಿನಂತೆ ಎರಡು ಪಕ್ಷದವರಿಗೆ ಇದ್ದರು.

ಕರ್ಣನು ದ್ರೌಪದೀದೇವಿಯರ ಸ್ವಯಂವರಕ್ಕೆ ದುರ್ಯೋಧನನೊಡನೆ ಹೋಗಿದ್ದನು. ಅಲ್ಲಿ ಧನುಸ್ಸನ್ನೂ ಶಲ್ಯ ಶಿಶುಪಾಲ ಜರಾಸಂಧಾದಿಗಳಿಗಿಂತ ಹೆಚ್ಚಾಗಿಯೇ ಸೆಳೆಯುವವನಾಗಿ ಹಗ್ಗವನನು ಬಿಗಿಯಲು ಒಂದು ರೋಮದಷ್ಟು ಇರುವಾಗ ಕೈತಪ್ಪಿ ಹೋಗಿ ಆ ಧನುಸ್ಸಿನ ಕೊನೆಯು ಅವನನ್ನೇ ಬಡಿಯಿತು. ತರುವಾಯ ಹಿಂದೆ ತಿರುಗಿದನು. ಅನಂತರದಲ್ಲಿ ಬ್ರಾಹ್ಮಣವೇಷವುಳ್ಳ ಅರ್ಜುನನು ಮತ್ಸ್ಯಯಂತ್ರವನ್ನು ಭೇದಿಸಿದಾಗ ದ್ರೌಪದೀದೇವಿಯರು ಅವನಿಗೆ ಮಾಲೆಯನ್ನು ಹಾಕಲು ಕರ್ಣನು ಸಹಿಸದೆ ಬ್ರಾಹ್ಮಣರೂಪವುಳ್ಳ ಅರ್ಜುನನೊಡನೆ ಯುದ್ಧವನ್ನು ಮಾಡಿದನು. ಬಹುಯುದ್ಧವು ನಡೆಯಿತು. ಕೊನೆಗೆ ಕರ್ಣನು ಯುದ್ಧದಲ್ಲಿ ಬಹುಶ್ರಮವುಳ್ಳವನಾಗಿ 'ನೀನು ಅರ್ಜುನನೋ? ಇಂದ್ರನೋ? ಮೂರ್ತಿಮತ್ತಾದ ಬ್ರಾಹ್ಮಣರ ತಪಸ್ಸೋ? ಬೇರೆಯಾರಾದರೂ ಆದರೆ ನನ್ನ ಮುಂಭಾಗದಲ್ಲಿ ನಿಲ್ಲಲಿಕ್ಕೆ ಸಮರ್ಥನಾಗಲಾರನು' ಎಂದು ಹೇಳಿದನು. ಅದಕ್ಕೆ ಅರ್ಜುನನು 'ನಾನು ಯಾರೇ

ಆಗಿರಲಿ. ನಿನಗೆ ಸಾಮರ್ಥ್ಯವಿದ್ದರೆ ಈಗ ಬಾಣಗಳನ್ನು ಬಿಡು. ಇಲ್ಲದಿದ್ದರೆ ಯುದ್ಧರಂಗದಿಂದ ಹೊರಟುಹೋಗುವಂಥವನಾಗು' ಎಂದನು. ಆದಕ್ಕೆ ಕರ್ಣನು 'ಬ್ರಾಹ್ಮಣಶ್ರೇಷ್ಠರೊಡನೆ ಯುದ್ಧಮಾಡಿ ನನಗೆ ಏನೂ ಆಗಬೇಕಾಗಿಲ್ಲ' ಎಂದು ಹೇಳಿ ದುರ್ಯೋಧನಾದಿಗಳೊಡನೆ ಹಸ್ತಿನಾವತಿಗೆ ಹೋದನು.

ಪಾಂಡವರು ವನಕ್ಕೆ ಹೋಗಿರಲು ಕಾಶಿರಾಜನ ಮಗಳಿಗೆ ಸ್ವಯಂವರ ವಾಯಿತು. ಅಲ್ಲಿ ಬಹುರಾಜರು ಬಂದು ಸೇರಿದ್ದರು. ಅಲ್ಲಿ ಬಂದಿರುವ ರಾಜರನ್ನು ಎಣಿಸುವಾಗ ಮೊದಲು ಜರಾಸಂಧನ ಹೆಸರನ್ನು ಹೇಳಿದರೆಂದು ಕೋಪದಿಂದ ಅಹಂಕಾರಿಯಾದ ದುರ್ಯೋಧನನು ಸ್ವಯಂವರ ಮಂಟಪದಲ್ಲಿ ಇದ್ದ ರಾಜಕನ್ಯೆಯನ್ನು ಬಲಾತ್ಕಾರದಿಂದ ಸೆಳೆದನು. ಆಗ ಎಲ್ಲಾ ರಾಜರೂ ಯುದ್ಧಕ್ಕೆ ಬಂದರು. ಕರ್ಣನಿಂದ ಸಹಿತರಾದ ದುರ್ಯೋಧನಾದಿಗಳಿಂದ ಸೋತು ಹೋದರು. ಪುನಃ ಅವರು ಧನುಸ್ಸನ್ನು ಹಿಡಿದು ಯುದ್ಧಕ್ಕೆ ಸಿದ್ಧರಾಗುತ್ತಿರಲು ಕರ್ಣನು ದುರ್ಯೋನನೊಡನೆ 'ನೀನು ಸಹೋದರರಿಂದಲೂ, ಭೀಷ್ಮಾದಿ ಗಳಿಂದಲೂ ಸಹಿತನಾಗಿ ಹಸ್ತನಾವತಿಗೆ ತಿರುಗಿಹೋಗು. ದ್ರೋಣಾಚಾರ್ಯರು ಭೀಷ್ಮಾಚಾರ್ಯರು ಮೊದಲಾದವರಿಂದ ಯುಕ್ತನಾದ ನಿನ್ನನ್ನು ಹಸ್ತಿನಾವತಿಗೆ ಬಂದು ಜಯಿಸಲಿಕ್ಕೆ ಈ ರಾಜರು ಸಮರ್ಥರಾಗಲಾರರು. ಜರಾಸಂಧನೂ ಕೂಡ ನಿಶ್ಚಯವಾಗಿಯೂ ಜಯವಾಗುತ್ತದೋ ಇಲ್ಲವೋ ಎಂದು ತಿಳಿಯದೆ ಬರಲಾರನು. ಮತ್ತು ರುದ್ರಭಕ್ತನಾದ ಅವನು ಅಶ್ವತ್ಥಾಮಾಚಾರ್ಯರನ್ನು ರುದ್ರಾವತಾರವೆಂದು ಸರ್ವದಾ ತಿಳಿದವನಾದ ಕಾರಣ ಅವರ ಹತ್ತಿರ ಯುದ್ಧವನ್ನು ಅಪೇಕ್ಷಿಸುವುದಿಲ್ಲ. ನಾನೊಬ್ಬನೇ ಎಲ್ಲಾ ರಾಜರನ್ನೂ ಎದುರಿಸುವೆನು. ಈ ರಾಜರಿಂದ ನಾನು ಸೋತುಹೋದರೂ ನಿನ್ನ ಕೀರ್ತಿಗೆ ಭಂಗವು ಇರುವುದಿಲ್ಲ. ಇವರು ಪೌರುಷದಿಂದ ನಿನ್ನ ಒಬ್ಬ ತಮ್ಮನನ್ನು ಹಿಡಿದುಬಿಟ್ಟರೂ ನಿನ್ನ ಕೀರ್ತಿಗೆ ನಾಶವು ಉಂಟಾಗುವುದು. ಜರಾಸಂಧನೊಡನೆ ಭೀಷ್ಮಾಚಾರ್ಯರೇ ಮೊದಲಾದವರೂ ಯುದ್ಧಮಾಡಲಿಕ್ಕೆ ಸಮರ್ಥರಾಗಲಾರರು. ಆದುದರಿಂದಲೇ ಮಹಾಬಲಿಷ್ಠನಾದ ಬಾಹ್ಲಿಕರಾಜನೂ ಇವನ ಭೃತ್ಯನಾಗಿರುವನು. ಭೀಷ್ಮಾಚಾರ್ಯರು ರಾಜನಲ್ಲವೆಂಬ ಅಭಿಪ್ರಾಯದಿಂದ ಜರಾಸಂಧನು ಅವರೊಡನೆ ಯುದ್ಧಕ್ಕೆ ಬರಲಿಲ್ಲ. ಮಾತ್ರವಲ್ಲದೆ ಅವರೊಡನೆ ವಿರೋಧವೂ ಇರಲಿಲ್ಲ' ಎಂದು ಹೇಳಿದನು. ದುರ್ಯೋಧನನು ಕರ್ಣನ ಮಾತನ್ನು ಕೇಳಿ ಯೋಚಿಸಿ ಸರಿಯೆಂದು ತಿಳಿದು ಹಸ್ತಿನಾವತಿಗೆ ಹೊರಟುಹೋದನು. ಕರ್ಣನು ಎಲ್ಲರೊಡನೆ ಯುದ್ಧವನ್ನು ಮಾಡಿದನು. ಕರ್ಣನ ಪರಾಕ್ರಮವನ್ನು ಲಕ್ಷ್ಯಮಾಡದೆ

ಜರಾಸಂಧನು ಒಬ್ಬೊಬ್ಬರನ್ನೇ ಯುದ್ಧಕ್ಕೆ ಕಳುಹಿಸಿದನು. ಎಲ್ಲರನ್ನೂ ಕರ್ಣನು ಜಯಿಸಲು ಕೊನೆಗೆ ಜರಾಸಂಧನ ರಥವನ್ನು ಆಯುಧಗಳನ್ನು ಮುರಿದುಹಾಕಿದನು. ತರುವಾಯ ಇಬ್ಬರೂ ಮುಷ್ಟಿಯುದ್ಧವನ್ನು ಮಾಡಿಕೊಂಡರು. ಆಗ ಕರ್ಣನು ಜರಾಸಂಧನಿಗೆ ಜರಾರಾಕ್ಷಸಿಯು ಸೇರಿಸಿದ ಸಂದನ್ನೇ ನೋಡಿ ಗುದ್ದಲಿಕ್ಕೆ ಆರಂಭಿಸಿದನು. ಅದನ್ನು ನೋಡಿ ಜರಾಸಂಧನು ಬಹುಸಂತೋಷಪಟ್ಟನು. 'ಈ ಮರ್ಮವು ಬಲರಾಮನಿಗೂ ತಿಳಿದಿಲ್ಲ. ನೀನು ತಿಳಿದಿರುವಿ. ತುಂಬಾ ಸಂತೋಷವಾಯಿತು. ಆದುದರಿಂದ ನೀನು ಯುದ್ಧದಲ್ಲಿ ನನಗೆ ಭೃತ್ಯನಾಗಿರು.

ಈಪ್ರಕಾರವಾಗಿ ಅತಿಚತುರತನದ ಯುದ್ಧದಲ್ಲಿ ಬಹುಪಂಡಿತನಾದ ನಿನ್ನನ್ನು ನಾನು ಕೊಲ್ಲಲಾರೆನು. ಪೂರ್ವದಲ್ಲಿ ನಾನು ಬಾಹುಬಲದಿಂದ ನಿನ್ನ ತಂದೆಯಾದ ಅಧಿರಥನ ಅಂಗರಾಜ್ಯವನ್ನು ಅಪಹರಿಸಿರುವೆನು. ಅದನ್ನು ನೀನು ತೆಗೆದುಕೊ. ಯುದ್ಧದಲ್ಲಿ ನನಗೆ ಸಹಾಯವನ್ನು ಮಾಡುವವನಾಗು' ಎಂದು ಹೇಳಿದನು. ಕರ್ಣನು ಹಾಗೆಯೇ ಆಗಲಿ ಎಂದು ಅಂಗೀಕಾರ ಮಾಡಿದನು. ಪೂರ್ವದಲ್ಲಿ ಭೀಮಸೇನದೇವರು ದಿಗ್ವಿಜಯಮಾಡಿಕೊಂಡು ಬರುವಾಗ ಜರಾಸಂಧನನ್ನು ಜಯಿಸಿ ಅವನ ಅಧೀನದಲ್ಲಿ ಇದ್ದ ಅಂಗರಾಜ್ಯದ ಅರ್ಧಭಾಗವನ್ನು ಅಪಹರಿಸಿ ಧೃತರಾಷ್ಟ್ರನ ವಶಮಾಡಿದ್ದನ್ನು ದುರ್ಯೋಧನನು ಕರ್ಣನಿಗೆ ಕೊಟ್ಟಿದ್ದನು. ಈಗ ಜರಾಸಂಧನು ಉಳಿದಿದ್ದ ಅರ್ಧಭಾಗವನ್ನು ಅವನಿಗೆ ಕೊಟ್ಟುಬಿಟ್ಟನು. ಈರೀತಿಯಾಗಿ ಕರ್ಣನು ಅಂಗದೇಶದ ಆಧಿಪತ್ಯವನ್ನು ಜರಾಸಂಧನ ಸ್ನೇಹವನ್ನು ಸಂಪಾದಿಸಿ ಕೊಂಡು ಕೌರವರ ಬಳಿಗೆ ಬಂದನು. ಅವನನ್ನು ನೋಡಿ ದುರ್ಯೋಧನಾದಿಗಳು ಸಂತೋಷವನ್ನು ಹೊಂದಿದರು. ಶ್ರೀಕೃಷ್ಣನೂ ಕೂಡ ಜರಾಸಂಧನಿಗೆ ಭಯಪಟ್ಟು ಓಡಿಹೋದವನಾದ ಕಾರಣ ಜರಾಸಂಧನನ್ನು ಜಯಿಸಿಕೊಂಡು ಬಂದ ಕರ್ಣನಿಗೆ ಸಮಾನನಾಗಲಾರನು ಎಂದು ತಿಳಿದುಕೊಂಡರು.

ಹಾಗೆಯೇ ಸುವಜ್ರ ಎಂದು ಹೆಸರುಳ್ಳ ಕಲಿಂಗರಾಜನ ಮಗಳಿಗೆ ಸ್ವಯಂವರವಾಗಲು ಅಲ್ಲಿಯೂ ದುರ್ಯೋಧನನು ಗರ್ವದಿಂದ ರಾಜಕನ್ಯೆಯನ್ನು ಸೆಳೆದನು. ಆಗ ಮಾತ್ರ ರುದ್ರದೇವರ ವರದಿಂದ ಪರಾಜಯಶೂನ್ಯನಾದ ಸುವಜ್ರನು ಜರಾಸಂಧನ ಸಹಾಯದಿಂದ ದುರ್ಯೋಧನನನ್ನು ಬೇಗನೇ ಜಯಿಸಿ ಬಂಧಿ ಸಿದನು. ಆಗ ಕರ್ಣನು ಪಾಂಡವರ ಮೇಲೆ ಸ್ಪರ್ಧೆಯಿಂದ ಹೋಗಿದ್ದ ಕಾರಣ ಪರಶುರಾಮದೇವರ ಮಾತಿನಂತೆ ಸೋತುಹೋಗಿಬಿಟ್ಟನು. ಕೊನೆಗೆ ಭೀಮಸೇನ ದೇವರೇ ಭೀಷ್ಮಾಚಾರ್ಯರ ಧೃತರಾಷ್ಟ್ರನ ಧರ್ಮರಾಜನ ಮತ್ತು ವಿದುರನ

ಮಾತಿನಿಂದ ಜರಾಸಂಧಾದಿರಾಜರನ್ನು ಜಯಿಸಿ ಸುವಜ್ರನನ್ನು ಸಂಹರಿಸಿ ದುರ್ಯೋಧನನನ್ನು ಬಿಡಿಸಿದರು.

ಪಾಂಡವರು ಪಗಡೆ ಆಡಿದಾಗ ಕರ್ಣನು ಅಸುರಾವೇಶದಿಂದ ದ್ರೌಪದೀ ದೇವಿಯರೊಡನೆ 'ಕಲ್ಯಾಣಿ! ನಿನಗೆ ಗಂಡದಿರು ಇರುವುದಿಲ್ಲ. ನೀನು ದುರ್ಯೋಧನನ ಮನೆಗೆ ಹೋಗು' ಎಂದು ಹೇಳಿದನು. ಮತ್ತು 'ದುರ್ಯೋಧನನ ಮನೆಗೆ ಹೋಗು. ಪಾಂಡವರು ಇಲ್ಲ' ಎಂದೂ ಹೇಳಿದ್ದನು. ಅದಕ್ಕಾಗಿ ಅವನನ್ನು ಅರ್ಜುನನು ಸಂಹರಿಸುವನೆಂದು ದ್ರೌಪದೀದೇವಿಯರು ಪ್ರತಿಜ್ಞಾ ಮಾಡಿದ್ದರು.

ಪಾಂಡವರ ವನವಾಸ ಸಮಯದಲ್ಲಿ ಪಾಂಡವರು ತಮ್ಮ ಐಶ್ವರ್ಯವನ್ನು ನೋಡಿ ಅಸೂಯೆಯನ್ನು ಹೊಂದಬೇಕೆಂಬ ಅಭಿಪ್ರಾಯದಿಂದ ದುರ್ಯೋಧನನು ಸಪರಿವಾರವಾಗಿ ಹೋಗಿರಲು ಇಂದ್ರದೇವರ ಆಜ್ಞೆಯಿಂದ ಯುದ್ಧಮಾಡಲು ಚಿತ್ರಸೇನ ಗಂಧರ್ವನು ಬಂದಿದ್ದನು. ಚಿತ್ರಸೇನನು ಮೊದಲು ಕರ್ಣನೊಡನೆಯೇ ಯುದ್ಧವನ್ನು ಮಾಡಿದನು. ಆಗ ಕರ್ಣನು ಅರ್ಜುನನ ಮೇಲಿನ ಸ್ಪರ್ಧೆಯಿಂದ ಯುದ್ಧವನ್ನು ಮಾಡುವವನಾಗಿ ಪರಶುರಾಮದೇವರ ಮಾತಿನಂತೆ ಜಯಿಸಲು ಸಮರ್ಥನಾಗಲಿಲ್ಲ. ತನ್ನ ರಥವು ಮುರಿದುಹೋಗಲು ವಿಕರ್ಣನ ರಥದಲ್ಲಿ ಕುಳಿತುಕೊಂಡು ಅವನ ಕುದುರೆಗಳನ್ನು ಓಡಿಸುತ್ತಾ ಅವನ ಒಟ್ಟಿಗೆ ಓಡಿಹೋದನು. ತರುವಾಯ ದುರ್ಯೋಧನನು ಚಿತ್ರಸೇನನಿಂದ ಬಂಧಿಸಲ್ಪಟ್ಟ ಮೇಲೆ ಅರ್ಜುನನು ಬಿಡಿಸಿದ ಮೇಲೆ ದಾರಿಯಲ್ಲಿ ಸಿಕ್ಕಿದ ಆ ದುರ್ಯೋಧನನ್ನು ನೋಡಿ ನೀನು ದೈವೇಚ್ಛೆಯಿಂದ ಗಂಧರ್ವರನ್ನು ಜಯಿಸಲಿಲ್ಲವೆಂದನು. ದುರ್ಯೋಧನನು ತಾನು ರಾಜ್ಯಕ್ಕೆ ಬರುವುದಿಲ್ಲವೆಂದು ಹೇಳಿಬಿಟ್ಟನು. ರಾತ್ರಿಸಮಯದಲ್ಲಿ ರಾಕ್ಷಸರು ಅವನನ್ನು ಪಾತಾಳಕ್ಕೆ ಕರೆದುಕೊಂಡು ಹೋಗಿ ಸಮಾಧಾನಮಾಡಿ ಕಳುಹಿಸಿದ ಮೇಲೆ ಕರ್ಣನು ದುರ್ಯೋಧನನೊಡನೆ 'ರಾಜನೇ! ನಿನ್ನ ಭೃತ್ಯರಾದ ಪಾಂಡವರೇ ನಿನ್ನನ್ನು ಬಿಡಿಸಿದ ಕಾರಣ ನೀನು ಬಹಳ ಬಹುಮಾನಕ್ಕೆ ಪಾತ್ರನಾಗಿರುವಿ. ನಿನ್ನ ಭೃತ್ಯರೇ ಹೀಗೆ ಇರುವಾಗ ನಿನ್ನ ಸಾಮರ್ಥ್ಯವನ್ನು ಏನು ಹೇಳಬೇಕು? ಏಳು. ಸ್ಥಿರನಾಗು. ಅರ್ಜುನನ ಮಹಿಮೆಯ ವಿಷಯದಲ್ಲಿ ಇರುವ ಸಂದೇಹವನ್ನು ಬಿಟ್ಟುಬಿಡು. ನಾನು ಅರ್ಜುನನನ್ನು ಕೊಲ್ಲುವವರೆಗೆ ಇನ್ನೊಬ್ಬರಿಂದ ಕಾಲನ್ನು ತೊಳೆಸಿಕೊಳ್ಳಲಾರೆನು' ಎಂದು ಸಮಾಧಾನಪಡಿಸಿ ಕರೆದುಕೊಂಡು ಹೋದನು.

ಕರ್ಣನು ಕವಚಕುಂಡಲಗಳಿಂದ ಸಹಿತನಾಗಿರುವಾಗ ಅವಧ್ಯನೆಂದು ತಿಳಿದು ಇಂದ್ರದೇವರು ಅವನ ಕವಚಕುಂಡಲಗಳನ್ನು ಅಪಹರಿಸಬೇಕೆಂದು ಇಚ್ಛಿಸಿದರು.

ಆದನ್ನು ತಿಳಿದು ಸೂರ್ಯದೇವರು ಕರ್ಣನೊಡನೆ ತಿಳಿಸಿ ಕೊಡಬೇಡವೆಂದರು. ಕರ್ಣನು ಸರ್ವಥಾ ನಾನು ಕೊಡುವೆನು ಎಂದನು. ಹಾಗಾದರೆ ಒಂದು ಆಯುಧವನ್ನು ಇಂದ್ರದೇವರಿಂದ ಪಡೆಯುವವನಾಗು ಎಂದು ಸೂರ್ಯದೇವರು ಹೇಳಿದರು. ತರುವಾಯ ಬ್ರಾಹ್ಮಣರೂಪಿಯಾದ ಇಂದ್ರದೇವರು ಬಂದು ಕೇಳಲು ಕರ್ಣನು ಕವಚಕುಂಡಲಗಳನ್ನು ಕಿತ್ತಿ ತೆಗೆದುಕೊಟ್ಟನು. ಇಂದ್ರದೇವರು ಅವನಿಗೆ ಅರ್ಜುನ ಒಬ್ಬನನ್ನು ಬಿಟ್ಟು ಇತರರನ್ನು ಸಂಹರಿಸುವ ಶಕ್ತಿಯನ್ನು ಕೊಟ್ಟರು.

ಪಾಂಡವರು ವನವಾಸದಲ್ಲಿ ಇರುವಾಗ ಕರ್ಣನು ಪರಶುರಾಮದೇವರ ಅನುಗ್ರಹದಿಂದ ದಿಗ್ವಿಜಯವನ್ನು ಮಾಡಿಕೊಂಡು ಬಂದಿದ್ದನು.

ಶ್ರೀಕೃಷ್ಣಪರಮಾತ್ಮನು ಭಾರತಯುದ್ಧಕ್ಕಿಂತ ಮೊದಲು ಸಂಧಿಗಾಗಿ ದುರ್ಯೋಧನನ ಸಭೆಗೆ ಹೋಗಿ ಅಲ್ಲಿ ಸಂಧಿಕಾರ್ಯವು ನಡೆಯದೆ ಆಮೇಲೆ ಉಪಪ್ಲಾವ್ಯಕ್ಕೆ ಹಿಂದಿರುಗಿ ಹೋಗುವಾಗ ಕರ್ಣನನ್ನು ತನ್ನ ರಥದಲ್ಲಿ ಕೂತುಕೊಳ್ಳಿಸಿಕೊಂಡು 'ಕರ್ಣ! ನೀನು ವೇದಶಾಸ್ತ್ರ ಪಾರಂಗತರಾದ ಬ್ರಾಹ್ಮಣರನ್ನು ಸೇವಿಸಿರುವಿ. ನೀನೇ ವೇದಶಾಸ್ತ್ರಗಳನ್ನು ತಿಳಿದಿರುವಿ. ಕನ್ಯಾ ಅವಸ್ಥೆಯಲ್ಲಿ ಹುಟ್ಟಿದ ಮಗನು ಆ ಮೇಲೆ ಆ ಕನ್ಯೆಯನ್ನು ಮದುವೆಯಾದವನಿಗೆ ಸೇರಿದವನೆಂದು ಶಾಸ್ತ್ರದಲ್ಲಿ ಹೇಳುವರು. ನೀನು ಆರೀತಿಯಾಗಿ ಕುಂತೀದೇವಿಯಲ್ಲಿ ಕನ್ಯಾವಸ್ಥೆಯಲ್ಲಿ ಹುಟ್ಟಿರುವಿ. ಆದುದರಿಂದ ನೀನು ಧರ್ಮದಿಂದ ಪಾಂಡುರಾಜನ ಮಗನಾಗಿರುವಿ. ನೀನು ಪಾಂಡವರ ಪಕ್ಷಕ್ಕೆ ಬಾ. ನೀನೇ ರಾಜನಾಗುವಿ. ನಿನಗೆ ತಂದೆಯ ಪಕ್ಷದಲ್ಲಿ ಪಾಂಡವರಿರುವರು. ತಾಯಿಯ ಪಕ್ಷದಲ್ಲಿ ಯಾದವರಿರುವರು. ನನ್ನೊಡನೆ ಈಗ ಹೋಗಿರುವ ನಿನ್ನನ್ನು ಪಾಂಡವರು ಧರ್ಮರಾಜನಿಂದಲೂ ಮೊದಲು ಕುಂತೀದೇವಿಯಲ್ಲಿ ಹುಟ್ಟಿದವನೆಂದು ತಿಳಿಯಲಿ. ಐದು ಜನ ಪಾಂಡವರೂ ನಿನ್ನ ಪಾದವನ್ನು ಮುಟ್ಟಿ ನಮಸ್ಕರಿಸುವರು. ದ್ರೌಪದೀಪುತ್ರರೂ ಅಭಿಮನ್ಯುವೂ ಪಾಂಡವರಿಗಾಗಿ ಬಂದಿರುವ ರಾಜರೂ ರಾಜಕನ್ಯೆಯರೂ ನಿನಗೆ ಪಟ್ಟಾಭಿಷೇಕಮಾಡುವುದಕ್ಕಾಗಿ ಬಂಗಾರದ ಬೆಳ್ಳಿಯ ಮಣ್ಣಿನ ಕೊಡಗಳನ್ನು ಓಷಧಿಗಳನ್ನು ಬೀಜಗಳನ್ನು ಸರ್ವರತ್ನಗಳನ್ನು ತರಲಿ. ಧೌಮ್ಯಾಚಾರ್ಯರು ಹೋಮವನ್ನು ಮಾಡಲಿ. ಈದಿವಸವೇ ಬ್ರಾಹ್ಮಣರು ನಿನಗೆ ಅಭಿಷೇಕವನ್ನು ಮಾಡಲಿ. ಪಾಂಡವರ ಪುರೋಹಿತರೂ ಐದು ಜನ ಪಾಂಡವರೂ ದ್ರೌಪದೀಪುತ್ರರು ಪಾಂಚಾಲದೇಶದವರೂ ಚೇದಿದೇಶದವರೂ ಅಭಿಷೇಕವನ್ನು ಮಾಡುವರು. ನಾನೂ ನಿನ್ನನ್ನು ರಾಜನನ್ನಾಗಿ ಅಭಿಷೇಕ ಮಾಡುವೆನು. ಧರ್ಮರಾಜನು ಯುವರಾಜನಾಗಲಿ. ಧರ್ಮರಾಜನು ನಿನ್ನ ರಥದಲ್ಲಿ ನಿನಗೆ ಚಾಮರವನ್ನು

ಬೀಸಲಿ. ಪಟ್ಟಾಭಿಷಿಕ್ತನಾದ ನಿನಗೆ ಭೀಮಸೇನನು ಶ್ವೇತಚ್ಛತ್ರವನ್ನು ಹಿಡಿಯಲಿ. ನೂರಾರು ಗಂಟೆಗಳಿಂದ ಯುಕ್ತವಾದ ಹುಲಿಯ ಚರ್ಮವನ್ನು ಹೊದ್ದಿಸಿರುವ ಬಿಳಿ ಕುದುರೆಗಳಿಂದ ಸಹಿತವಾದ ರಥವನ್ನು ಅರ್ಜುನನು ಓಡಿಸುವನು. ಅಭಿಮನ್ಯುವು ನಿತ್ಯವೂ ನಿನ್ನ ಸಮೀಪದಲ್ಲಿಯೇ ಇರುವನು. ನಕುಲನೂ ಸಹದೇವನೂ ಐದು ಜನ ದ್ರೌಪದೀಪುತ್ರರೂ ಪಾಂಚಾಲದೇಶದವರೂ ಶಿಖಂಡಿಯೂ ನಿನ್ನನ್ನು ಅನುಸರಿಸು ವರು. ನಾನೂ ನಿನ್ನನ್ನು ಅನುಸರಿಸುವೆನು. ಯಾದವರೆಲ್ಲರೂ ಅನುಸರಿಸುವರು. ಸಹೋದರರಾದ ಪಾಂಡವರಿಂದ ಸಹಿತನಾಗಿ ರಾಜ್ಯವನ್ನು ಅನುಭವಿಸು. ಪಾಂಡವರಿಂದ ಕೂಡಿಕೊಂಡು ರಾಜ್ಯವನ್ನು ಆಳು. ಕುಂತೀದೇವಿಯನ್ನು ಸಂತೋಷಪಡಿಸು. ನಿನ್ನ ಮಿತ್ರರು ಸಂತೋಷಪಡಲಿ. ಶತ್ರುಗಳು ದುಃಖಿಸಲಿ. ಪಾಂಡವರಲ್ಲಿ ನಿನಗೆ ಸಹೋದರ ಸ್ನೇಹವುಂಟಾಗಲಿ' ಎಂದು ಹೇಳಿದನು.

ಅದಕ್ಕೆ ಕರ್ಣನು 'ಕೃಷ್ಣ! ನನ್ನ ಮೇಲಿನ ಸೌಹಾರ್ದದಿಂದಲೂ ಪ್ರೀತಿ ಯಿಂದಲೂ ಸಖ್ಯದಿಂದಲೂ ನನಗೆ ಶ್ರೇಯಸ್ಸು ಆಗಬೇಕೆಂಬ ಇಚ್ಛೆಯಿಂದಲೂ ಹೇಳುವಿ. ನಾನು ಎಲ್ಲಾ ವಿಷಯವನ್ನು ತಿಳಿದಿರುವೆನು. ಧರ್ಮಶಾಸ್ತ್ರದ ನಿಶ್ಚಯದಿಂದ ಧರ್ಮದಿಂದ ನಾನು ಪಾಂಡುಮಹಾರಾಜರ ಮಗನಾಗಿರುವೆನು. ಕುಂತೀದೇವಿಯು ಕನ್ಯೆಯಾಗಿರುವಾಗ ಸೂರ್ಯದೇವರಿಂದ ನನ್ನನ್ನು ಗರ್ಭದಲ್ಲಿ ಧರಿಸಿದಳು. ಸೂರ್ಯದೇವರ ಮಾತಿನಿಂದಲೇ ಹುಟ್ಟಿದ ನನ್ನನ್ನು ಬಿಟ್ಟುಬಿಟ್ಟಳು. ಸೂತನಾದ ಅಧಿ ರಥನು ನನ್ನನ್ನು ನೋಡಿ ಮನೆಗೆ ತೆಗೆದುಕೊಂಡು ಹೋದನು. ತನ್ನ ಹೆಂಡತಿಯಾದ ರಾಧೆಯ ಕೈಯಲ್ಲಿ ಸ್ನೇಹದಿಂದ ಕೊಟ್ಟನು. ನನ್ನ ಮೇಲಿನ ಸ್ನೇಹದಿಂದ ಆಗಲೇ ರಾಧೆಯ ಸ್ತನದಲ್ಲಿ ಹಾಲುಸುರಿಯಿತು. ಅವಳು ನನ್ನ ಮಲಮೂತ್ರಗಳನ್ನು ತೆಗೆದು ರಕ್ಷಿಸಿದಳು. ಧರ್ಮವನ್ನು ತಿಳಿದ ಧರ್ಮಶಾಸ್ತ್ರವನ್ನು ಕೇಳಿರುವ ನಾನು ಅವಳ ಮಗನಲ್ಲ ಎಂದು ಹೇಗೆ ಹೇಳಿಕೊಳ್ಳಲಿ? ಸೂತನಾದ ಅಧಿರಥನೂ ನನ್ನನ್ನು ಮಗನೆಂದು ತಿಳಿದಿರುವನು. ನಾನೂ ಅವನನ್ನು ಯಾವಾಗಲೂ ಸ್ನೇಹದಿಂದ ತಂದೆಯೆಂದೇ ಭಾವಿಸಿಕೊಂಡು ಇರುವೆನು. ಅವನೇ ನನಗೆ ಪುತ್ರಪ್ರೀತಿಯಿಂದ ಶಾಸ್ತ್ರೋಕ್ತಪ್ರಕಾರವಾಗಿ ಜಾತಕರ್ಮಾದಿಗಳನ್ನು ಮಾಡಿಸಿದನು. ಬ್ರಾಹ್ಮಣರಿಂದ ವಸುಷೇಣ ಎಂದು ನಾಮವನ್ನೂ ಇಡಿಸಿದನು. ಯೌವನದಲ್ಲಿ ಅವನಿಂದಲೇ ಸೂತಜಾತಿಯ ಕನ್ಯೆಯರನ್ನೇ ಮದುವೆಯಾದೆನು. ಅವರಲ್ಲಿ ನನಗೆ ಮಕ್ಕಳೂ ಮೊಮ್ಮಕ್ಕಳೂ ಉಂಟಾದರು. ಅವರಲ್ಲೆಲ್ಲರಲ್ಲಿಯೂ ಸ್ನೇಹಯುಕ್ತವಾದ ನನ್ನ ಮನಸ್ಸೂ ಬದ್ಧವಾಗಿರುವುದು. ಅದನ್ನು ನಾನು ಸಕಲಭೂಮಿಯಿಂದಲೋ

ಬಂಗಾರದ ರಾಶಿಯಿಂದಲೋ ಹರ್ಷದಿಂದಲೋ ಭಯದಿಂದಲೋ ವ್ಯರ್ಥಮಾಡ ಲಾರೆನು.

ಕೃಷ್ಣ! ಮತ್ತು ನಾನು ಧೃತರಾಷ್ಟ್ರನ ಮನೆಯಲ್ಲಿ ದುರ್ಯೋಧನನ ಆಶ್ರಯದಿಂದ ಹದಿಮೂರು ವರ್ಷ ರಾಜ್ಯವನ್ನು ಅನುಭವಿಸಿದೆನು. ಸೂತರಿಂದ ಕೂಡಿಕೊಂಡು ಅನೇಕ ಯಜ್ಞಗಳನ್ನು ಮಾಡಿರುವೆನು. ಸೂತಜಾತಿಯಂತೆ ಕುಲ ಧರ್ಮಗಳನ್ನು ವಿವಾಹವನ್ನು ಮಾಡಿಕೊಂಡಿರುವೆನು. ನಾನು ಸಹಾಯ ಮಾಡುವನೆಂಬ ಧೈರ್ಯದಿಂದಲೇ ಪಾಂಡವರೊಡನೆ ವಿರೋಧವನ್ನು ಮಾಡಿರು ವನು. ದುರ್ಯೋಧನ ಅರ್ಜುನನಿಗೆ ಎದುರಾಗಿ ಯುದ್ಧ ಮಾಡಬೇಕೆಂದು ನನ್ನೊಡನೆ ಕೇಳಿ ಕೊಂಡಿರುವನು. ನಾನು ಮರಣದ ಅಥವಾ ಬಂಧನದ ಭಯ ದಿಂದಲೋ, ಲೋಭದಿಂದಲೋ, ದುರ್ಯೋಧನನಿಗೆ ಕೊಟ್ಟ ಮಾತನ್ನು ಸುಳ್ಳು ಮಾಡಲಾರೆನು. ನಾನೀಗ ಅರ್ಜುನನೊಡನೆ ಯುದ್ಧಕ್ಕೆ ಹೋಗದೆ ಇದ್ದರೆ ನನಗೂ ಅರ್ಜುನನಿಗೂ ಇಬ್ಬರಿಗೂ ಅಪಕೀರ್ತಿಯೂ ಬರುವುದು. ಶ್ರೀಭಗವಂತನೇ! ನೀನೇನೋ ನಿಶ್ಚಯವಾಗಿಯೂ ನನ್ನ ಹಿತಕ್ಕಾಗಿ ಹೇಳುವಿ. ಪಾಂಡವರೆಲ್ಲರೂ ನಿನ್ನ ಅಧೀನರಾದ ಕಾರಣ ನೀನು ಹೇಳಿದಂತೆ ಎಲ್ಲವನ್ನು ಮಾಡುವರು. ಈ ವಿಷಯವನ್ನು ಎಂದರೆ ನಾನು ಕುಂತೀದೇವಿಯ ಮಗನು ಎಂಬ ವಿಷಯವನ್ನು ರಹಸ್ಯವಾಗಿಯೇ ಇಟ್ಟುಕೋ. ಈ ಸಂದರ್ಭದಲ್ಲಿ ರಹಸ್ಯವಾಗಿ ಇರುವುದೇ ಉಚಿತವಾಗಿರುವುದು. ಧರ್ಮರಾಜನು ನನ್ನನ್ನು ಕುಂತೀದೇವಿಯಲ್ಲಿ ಪ್ರಥಮದಲ್ಲಿ ಹುಟ್ಟಿದ ಮಗನೆಂದು ತಿಳಿದ ಪಕ್ಷದಲ್ಲಿ ರಾಜ್ಯವನ್ನು ಅಂಗೀಕರಿಸಲಾರನು. ನನಗೆ ಮಹಾರಾಜ್ಯವು ಸಿಕ್ಕಿದರೂ ನಾನು ಅದನ್ನು ದುರ್ಯೋಧನನಿಗೇ ಕೊಟ್ಟು ಬಿಡುವೆನು. ಆದುದರಿಂದ ಧರ್ಮಾತ್ಮನಾದ ಆ ಧರ್ಮರಾಜನೇ ರಾಜನಾಗಿರಲಿ. ಯಾರಿಗೆ ಭಗವಂತನಾದ ನೀನೇ ನಿಯಾಮಕ ನಾಗಿರುವೆಯೋ ಅರ್ಜುನನು ಯುದ್ಧಮಾಡುವವನೋ ಭೀಮಸೇನನು ಸಹಾಯಕನೋ ಆ ಧರ್ಮರಾಜನಿಗೇ ರಾಜ್ಯವು ಸಿಗುವುದು. ಧರ್ಮರಾಜನಿಗೇ ಬಹುರಾಜರು ಸಹಕರಿಸುವರು. ಮಹತ್ತಾದ ಕ್ಷತ್ರಿಯ ಸಮೂಹವು ಸೇರಿರುವುದು.

ದುರ್ಯೋಧನನ ಶಸ್ತ್ರಯಜ್ಞವು ನಡೆಯುವುದು. ಶ್ರೀಕೃಷ್ಣ! ಈ ಯಜ್ಞದಲ್ಲಿ ನೀನೇ ಅಧ್ವರ್ಯುವಾಗುವಿ. ಅರ್ಜುನನು ಹೋತೃ ಎಂಬ ಋತ್ವಿಕ್ ಆಗುವನು. ಗಾಂಡೀವ ಧನುಸ್ಸು ಸ್ರುಕ್, ಪುರುಷರ ಪರಾಕ್ರಮವೇ ಯಜ್ಞಕ್ಕೆ ಬೇಕಾದ ತುಪ್ಪವು. ಅರ್ಜುನನು ಬಿಡುವ ನಾನಾ ಅಸ್ತ್ರಮಂತ್ರಗಳೇ ಮಂತ್ರಗಳು. ತಂದೆಯಾದ

ಅರ್ಜುನನನ್ನು ಅನುಸರಿಸಿರುವ ಅಥವಾ ಅವನಿಂದ ಅಧಿಕನಾಗಿಯೇ ಇರುವ ಅಭಿಮನ್ಯುವು ಸ್ತೋತ್ರವನ್ನು ಹೇಳುವನು. ಅವನು ಉದ್ಗಾತನು. ಭೀಮನು ಪ್ರಸ್ತೋತನು. ಧರ್ಮರಾಜನೇ ಬ್ರಹ್ಮ ಎಂಬ ಋತ್ವಿಕ್ ಆಗುವನು. ಶಂಖಶಬ್ದಗಳೂ ಮುರಜ ಶಬ್ದಗಳೂ ಭೇರಿಯ ಶಬ್ದಗಳೂ ಸಿಂಹಗರ್ಜನೆಗಳೂ ಸುಬ್ರಹ್ಮಣ್ಯಾಖ್ಯ ಸಾಮಗಾನವಾಗುವುವು. ನಕುಲ ಸಹದೇವರು ಪಶುಹಿಂಸಾಕಾರ್ಯವನ್ನು ಮಾಡುವರು. ರಥಗಳ ಪಂಕ್ತಿಗಳೇ ಯಜ್ಞಸ್ತಂಭಗಳು. ಬಾಣಗಳೆಲ್ಲವೂ ಸೋಮಕಲಶಗಳು. ಧನುಸ್ಸುಗಳು ಪವಿತ್ರಗಳು ಖಡ್ಗಗಳು ಕಪಾಲಗಳು. ತಲೆಗಳೇ ಪುರೋಡಾಶಗಳು ರಕ್ತವು ಹವಿಸ್ಸು. ಶಕ್ತಿ ಗದಾ ಎಂಬ ಆಯುಧಗಳೇ ಇಧ್ಮಪರಿಧಿಗಳು. ದ್ರೋಣಾಚಾರ್ಯರ ಮತ್ತು ಕೃಪಾಚಾರ್ಯರ ಶಿಷ್ಯರು ಸದಸ್ಯರು. ಅರ್ಜುನನೂ, ದ್ರೋಣ, ಅಶ್ವತ್ಥಾಮಕೃಪಾದಿಗಳು ಬಿಡುವ ಬಾಣಗಳೇ ಸೋಮ ಚಮಸಾದಿಗಳು. ಪ್ರತಿಪಸ್ಥಾತೃ ಎಂಬ ಋತ್ವಿಕ್ಕಿನ ಕಾರ್ಯವನ್ನು ಸಾತ್ಯಕಿಯು ಮಾಡುವನು. ದುರ್ಯೋಧನನು ದೀಕ್ಷಿತನಾಗಿರುವನು. ಈ ಮಹಾಸೇನೆಯು ಅವನ ಪತ್ನಿಯು. ಘಟೋತ್ಕಚನೂ ಹಿಂಸೆಯನ್ನು ಮಾಡುವನು. ಯಜ್ಞಕುಂಡದಿಂದ ಹುಟ್ಟಿರುವ ಧೃಷ್ಟದ್ಯುಮ್ನನೇ ಈ ಯಜ್ಞದಲ್ಲಿ ದಕ್ಷಿಣೆಯು. ನಾನು ದುರ್ಯೋಧನನ ಪ್ರಿಯಕ್ಕಾಗಿ ಪಾಂಡವರನ್ನು ಕುರಿತು ಕಠಿಣ ಮಾತುಗಳನ್ನು ಆಡಿರುವೆನು. ಆದರಿಂದ ನಾನು ಪಶ್ಚಾತ್ತಾಪವನ್ನು ಹೊಂದುವೆನು.

ಯಾವಾಗ ಅರ್ಜುನನಿಂದ ಮೃತನಾದ ನನ್ನನ್ನು ನೋಡುವಿಯೋ ಆ ಪುನಃ ಚಿತಿಯು ನಡೆಯುವುದು. ಭೀಮನು ಯಾವಾಗ ದುಃಶಾಸನನ ರಕ್ತವನ್ನು ಪಾನಮಾಡುವನೋ ಆಗ ಸೂಯ ಎಂಬ ಕಾರ್ಯವು ನಡೆಯುವುದು. ದ್ರೋಣಾಚಾರ್ಯರನ್ನೂ ಭೀಷ್ಮಾಚಾರ್ಯರನ್ನೂ ಪಾಂಚಾಲದೇಶದವರು ಬೀಳಿಸಿದಾಗ ಯಜ್ಞಾವಸಾನವಾಗುವುದು. ಮಹಾಬಲಿಷ್ಠನಾದ ಭೀಮಸೇನನು ದುರ್ಯೋಧನನನ್ನು ಸಂಹರಿಸಿದಾಗ ಯಜ್ಞವು ಸಂಪೂರ್ಣವಾಗಿ ಮುಗಿಯುವುದು. ಧೃತರಾಷ್ಟ್ರನ ಸೊಸೆಯರೂ ಸೊಸೆಯರ ಸೊಸೆಯರೂ ಮಕ್ಕಳನ್ನು ಗಂಡಂದಿರನ್ನೂ ಕಳೆದುಕೊಂಡವರಾಗಿ ಗಾಂಧಾರಿಯಿಂದ ಕೂಡಿಕೊಂಡು ನಾಯಿಹದ್ದುಗಳಿಂದ ಕೂಡಿದ ಯುದ್ಧರಂಗದಲ್ಲಿ ಅಳುತ್ತಿರುವಾಗ ಆ ಯಜ್ಞದಲ್ಲಿ ಅವಭೃಥವಾಗುವುದು. ವಿದ್ಯಾವೃದ್ಧರಾದ ವಯೋವೃದ್ಧರಾದ ಕ್ಷತ್ರಿಯರು ವ್ಯರ್ಥವಾಗಿ ಸಾಯಬಾರದು. ಕ್ಷತ್ರಿಯರೆಲ್ಲರೂ ಶಸ್ತ್ರದಿಂದ ಸಾಯಬೇಕು. ಮೂರುಲೋಕದಲ್ಲಿಯೂ ಪವಿತ್ರವಾದ ಕುರುಕ್ಷೇತ್ರದಲ್ಲಿ ಮರಣವನ್ನು ಹೊಂದಲಿ. (ನೀನು) ಭಗವಂತನೇ ಆದುದರಿಂದ

ಕ್ಷತ್ರಿಯರೆಲ್ಲರೂ ಸ್ವರ್ಗವನ್ನು ಹೊಂದುವಂತೆ ಮಾಡು. ಪರ್ವತಗಳೂ ನದಿಗಳೂ ಇರುವವರೆಗೆ ಕೀರ್ತಿಯು ಶಾಶ್ವತವಾಗಿ ಇರುವುದು. ಬ್ರಾಹ್ಮಣರು ಸಭೆಗಳಲ್ಲಿ ಕ್ಷತ್ರಿಯರ ಕೀರ್ತಿರೂಪವಾದ ಮಹಾಭಾರತಯುದ್ಧವನ್ನು ಹೇಳುತ್ತಿರುವರು. ಶ್ರೀಭಗವಂತನೇ! ನನ್ನ ರಹಸ್ಯವಾದ ವಿಷಯವನ್ನು ತಿಳಿಯದೆ ಧರ್ಮರಾಜನನ್ನು ಯುದ್ಧಕ್ಕಾಗಿ ಇಲ್ಲಿಗೆ ಕರೆದುಕೊಂಡು ಬಾ' ಎಂದು ಹೇಳಿದನು.

ಕರ್ಣನ ಮಾತನ್ನು ಕೇಳಿ ಶ್ರೀಕೃಷ್ಣಪರಮಾತ್ಮನು ಮಂದಹಾಸವನ್ನು ಮಾಡುತ್ತಾ 'ಕರ್ಣ! ನಿನಗೆ ರಾಜ್ಯವನ್ನು ಅನುಭವಿಸುವ ಅದೃಷ್ಟವಿರುವುದಿಲ್ಲ. ಆದುದರಿಂದಲೇ ನಾನು ಕೊಡುವ ಭೂಮಿಯನ್ನು ನೀನು ಆಳುವುದಕ್ಕೆ ಇಚ್ಛಿಸುವುದಿಲ್ಲ. ಪಾಂಡವರಿಗೆ ಜಯವಾಗುವುದೆಂಬುದು ನಿಶ್ಚಯವಾದ ವಿಷಯವು. ಈ ವಿಷಯದಲ್ಲಿ ಸಂದೇಹ ವಿಲ್ಲ. ಅರ್ಜುನನ ಜಯಸೂಚಕವಾದ ಹನುಮಧ್ವಜವು ಪ್ರಕಾಶಿಸುತ್ತಿರುವುದು. ಕರ್ಣ! ಇಲ್ಲಿಂದ ದ್ರೋಣಾಚಾರ್ಯರ ಭೀಷ್ಮಾಚಾರ್ಯರ ಕೃಪಾಚಾರ್ಯರ ಬಳಿಗೆ ಹೋಗಿ ತಿಳಿಸು 'ಇದು ಒಳ್ಳೇ ಸಮಯವಾಗಿರುವುದು. ಹುಲ್ಲೂ ಕಟ್ಟಿಗೆಯೂ ಸಿಗುವ ಸಮಯ. ಸರ್ವಔಷಧಿಗಳಿಂದ ಯುಕ್ತವಾಗಿರುವುದು. ಬೇಕಾದ ಹಣ್ಣುಗಳಾಗುವ ಸಮಯ. ಸೊಳ್ಳೆಗಳು ಕಡಿಮೆಯಾಗಿರುವ ಸಮಯವು. ಕೆಸರೂ ಇರುವುದಿಲ್ಲ. ಒಳ್ಳೇ ನೀರಿದೆ. ತುಂಬಾ ಉಷ್ಣವೂ ಛಳಿಯೂ ಇರುವುದಿಲ್ಲ. ಸುಖಕರವಾದ ಸಮಯ ವಾಗಿರುವುದು. ಈ ದಿನದಿಂದ ಏಳನೇ ದಿನದಲ್ಲಿ ಅಮಾವಾಸ್ಯೆಯಾಗುವುದು. ಆ ದಿವಸವೇ ಯುದ್ಧ ಆರಂಭವಾಗಲಿ. ರಾಜರೂ ರಾಜಪುತ್ರರೂ ದುರ್ಯೋಧನನ ವಶರಾಗಿ ಶಸ್ತ್ರಗಳಿಂದ ಮರಣವನ್ನು ಹೊಂದಿರಿ ಉತ್ತಮವಾದ ಗತಿಯನ್ನು ಹೊಂದುವರು' ಎಂದು ಹೇಳಿದನು.

ಶ್ರೀಭಗವಂತನ ಹಿತಕರವಾದ ಶುಭವಾದ ಮಾತನ್ನು ಕೇಳಿ ಶ್ರೀಭಗವಂತನನ್ನು ಪೂಜಿಸಿ 'ಶ್ರೀಭಗವಂತನೇ! ತಿಳಿದುಕೊಂಡೇ ನನ್ನನ್ನು ಮೋಹಗೊಳಿಸಲಿಕ್ಕೆ ಇಚ್ಛಿಸುವಿ. ಸಮಸ್ತ ಪೃಥಿವಿಯ ನಾಶವೇ ಸಮೀಪಿಸಿರುವುದು. ಅದಕ್ಕೆ ಶಕುನಿಯೂ, ನಾನೂ, ದುಃಶಾಸನೂ, ದುರ್ಯೋಧನನೂ ಕಾರಣರು. ಶ್ರೀಕೃಷ್ಣ! ನಿಶ್ಚಯ ವಾಗಿಯೂ ಮಹಾಯುದ್ಧವು ಸಮೀಪಿಸಿರುವುದು. ರಾಜರೂ ರಾಜಪುತ್ರರೂ ದುಯೋರ್ಧನನ ವಶರಾಗಿ ಯುದ್ಧದಲ್ಲಿ ಶಸ್ತ್ರಾಗ್ನಿಯಿಂದ ದಗ್ಧರಾಗಿ ಯಮ ಲೋಕವನ್ನು ಹೊಂದುವರು. ಘೋರಸ್ವಪ್ನಗಳು ಕಾಣಿಸುತ್ತಿರುವುವು. ಇನ್ನೂ ಅನೇಕ ದುರ್ನಿಮಿತ್ತಗಳು ಕಾಣಿಸುತ್ತಿರುವುವು. ದುರ್ಯೋಧನನಿಗೆ ಪರಾಜಯವನ್ನು, ಧರ್ಮರಾಜನಿಗೆ ಜಯವನ್ನು ಸೂಚಿಸುವಂತೆ ರೋಮಾಂಚಜನಕಗಳಾದ

ಶಕುನಗಳು ಕಾಣಿಸುತ್ತಿರುವುವು. ಚಂದ್ರನಲ್ಲಿ ಕಪ್ಪುಕಾಣಿಸುವುದಿಲ್ಲ. ಸೂರ್ಯನನ್ನು ರಾಹು ಹಿಡಿಯಲಿಕ್ಕೆ ಹೋಗುತ್ತಿರುವನು. ಆಕಾಶದಲ್ಲಿ ಮೇಘವಿಲ್ಲದೆ ಗರ್ಜನೆಯು ಕೇಳಿಸುತ್ತಿದೆ. ಉಲ್ಕಗಳು ಬೀಳುತ್ತಿವೆ. ಆನೆಗಳು ಕೂಗುತ್ತಿವೆ. ಕುದುರೆಗಳು ಕಣ್ಣೀರು ಸುರಿಸುತ್ತಿವೆ. ನೀರನ್ನೂ ಹುಲ್ಲನ್ನೂ ಸ್ವೀಕರಿಸುವುದಿಲ್ಲ. ಹೀಗೆಲ್ಲಾ ಆದರೆ ಮಹಾಭಯವು ಸಮೀಪಿಸುವುದೆಂದೂ ಪ್ರಾಣಿಗಳ ನಾಶವಾಗುವುದೆಂದೂ ಹೇಳು ವರು. ಸ್ವಲ್ಪ ಆಹಾರ ತಿಂದರೂ ಬಹಳ ಮಲವುಂಟಾಗುತ್ತಿರುವುದು. ಆನೆಗಳಿಗೂ ಕುದುರೆಗಳಿಗೂ ಮನುಷ್ಯರಿಗೂ ಹೀಗೆ ಆಗುತ್ತಿರುವುದು. ಅದೂ ದುರ್ಯೋಧನನ ಸೈನ್ಯದಲ್ಲಿ ಆಗುತ್ತಿರುವುದು. ಅದು ಪರಾಜಯ ಸೂಚಕವಾದದ್ದು.

ಪಾಂಡವರ ವಾಹನಗಳೆಲ್ಲವೂ ಸಂತೋಷದಿಂದ ಇರುವುದೆಂದು ಹೇಳುತ್ತಾರೆ. ಮೃಗಗಳು ಪ್ರದಕ್ಷಿಣೆಯಾಗಿ ಬರುವುವು. ಅದು ಅವರ ಜಯಕ್ಕೆ ಸೂಚಕವಾದದ್ದು. ದುರ್ಯೋಧನನಿಗೆ ಮೃಗಗಳೆಲ್ಲವೂ ಅಪ್ರದಕ್ಷಿಣೆಯಾಗಿ ಹೋಗುತ್ತಿರುವುವು. ಅಶರೀರ ಮಾತುಗಳೂ ಕೇಳಿಸುವುವು. ಇದೆಲ್ಲಾ ಪರಾಜಯಸೂಚಕವಾದದ್ದು. ನವಿಲು ಹಂಸ ಮೊದಲಾದ ಶುಭಪಕ್ಷಿಗಳು ಪಾಂಡವರನ್ನು ಅನುಸರಿಸಿ ಹೋಗುತ್ತಿರು ವುವು. ಹದ್ದುಗಳೂ, ಬಕಗಳೂ, ರಾಕ್ಷಸರೂ, ತೋಳಗಳೂ, ಸೊಳ್ಳೆಗಳೂ, ಕೌರವರನ್ನು ಅನುಸರಿಸಿ ಹೋಗುತ್ತಿರುವುವು. ದುರ್ಯೋಧನನ ಸೈನ್ಯದಲ್ಲಿ ನಗಾರಿ ಯನ್ನು ಬಡಿದರೂ ಶಬ್ದವು ಕೇಳಿಸುವುದೇ ಇಲ್ಲ. ಪಾಂಡವರ ಸೈನ್ಯದಲ್ಲಿ ಬಡಿಯದೆಯೇ ಪಟಹ ಇತ್ಯಾದಿ ವಾದ್ಯಗಳು ಶಬ್ದಮಾಡುವುವು. ಕೌರವರ ಸೈನ್ಯದಲ್ಲಿ ಭಾವಿಕೆರೆಗಳು ಗರ್ಜನೆ ಮಾಡುತ್ತಿರುವುವು. ಅದೂ ಪರಾಜಯ ಸೂಚಕವು. ಮಾಂಸರಕ್ತಗಳ ಮಳೆಯು ಬರುತ್ತಿರುವುದು. ಹೆಣ್ಣುನರಿಗಳು ಕೂಗುತ್ತಿರುವುವು. ಒಂದೇ ರೆಕ್ಕೆ ಕಣ್ಣುಪಾದಗಳುಳ್ಳ ಪಕ್ಷಿಗಳು ಘೋರವಾಗಿ ಕೂಗುತ್ತಿರುವುವು. ಕಪ್ಪು ಕುತ್ತಿಗೆಯುಳ್ಳ ಕೆಂಪುಪಾದಗಳುಳ್ಳ ಭಯಂಕರ ಪಕ್ಷಿಗಳು ಸಂಧ್ಯಾಕಾಲದಲ್ಲಿ ಅಭಿಮುಖವಾಗಿ ಹೋಗುತ್ತಿರುವುವು. ಮೊದಲು ಬ್ರಾಹ್ಮಣರನ್ನು ದ್ವೇಷಿಸುತ್ತಿರುವರು. ಆಮೇಲೆ ಗುರುಗಳನ್ನು ದ್ವೇಷಿಸುತ್ತಿರುವರು. ಇವೆಲ್ಲವೂ ಪರಾಜಯ ಸೂಚಕ ವಾಗಿರುವುವು. ಹಾಗೆಯೇ ಭಕ್ತಿಯುಳ್ಳ ಭೃತ್ಯರನ್ನು ಜಯಿಸುತ್ತಿರುವರು. ಸ್ವಪ್ನದಲ್ಲಿ ಕೊನೆಗೆ ಸಾವಿರ ಕಂಬಗಳುಳ್ಳ ಮಾಳಿಗೆ ಮನೆಯನ್ನು ಧರ್ಮರಾಜನು ಸಹೋದರ ರಿಂದ ಸಹಿತನಾಗಿ ಹತ್ತಿಹೋಗುವಂತೆ ನೋಡಿದೆನು. ಅವರೆಲ್ಲರೂ ಬಿಳಿ ರುಮಾಲೆ ಯುಳ್ಳವರಾಗಿ ಬಿಳಿವಸ್ತ್ರವುಳ್ಳವರಾಗಿ ಕಾಣಿಸಿದರು. ಎಲ್ಲರ ಆಸನಗಳೂ ಬೆಳ್ಳಗೆ ಇದ್ದವು.

ಶ್ರೀಭಗವಂತನೇ! ನಿನಗೂ ನಾನು ಹಾಗೆಯೇ ನೋಡಿದೆನು. ಭೂಮಿಯು ರಕ್ತಮಯವಾಗಿ ಕರುಳುಗಳಿಂದ ಯುಕ್ತವಾಗಿ ಕಾಣಿಸಿತು. ಬಂಗಾರದ ಪಾತ್ರೆಯಲ್ಲಿ ತುಪ್ಪದಿಂದ ಯುಕ್ತವಾದ ಪಾಯಸವನ್ನು ಉಣ್ಣುತ್ತಿದ್ದನು. ಮತ್ತು ಭೂಮಿಯನ್ನು ನುಂಗುತ್ತಿರುವುದನ್ನು ಸ್ವಪ್ನದಲ್ಲಿ ನೋಡಿದೆನು. ನಿಶ್ಚಯವಾಗಿಯೂ ಧರ್ಮರಾಜನು ನೀನು ಕೊಡುವ ಭೂಮಿಯನ್ನು ಅನುಭವಿಸುವನು. ಭಯಂಕರವಾದ ಕರ್ಮವುಳ್ಳ ಭೀಮಸೇನನು ಕೈಯಲ್ಲಿ ಗದೆಯನ್ನು ಹಿಡಿದುಕೊಂಡು ಭೂಮಿಯನ್ನೇ ನುಂಗುವಂತೆ ಎತ್ತರವಾದ ಪರ್ವತದಲ್ಲಿ ಹತ್ತಿರುವುದನ್ನು ನೋಡಿದೆನು. ನಿಶ್ಚಯವಾಗಿಯೂ ಯುದ್ಧದಲ್ಲಿ ನಮ್ಮೆಲ್ಲರನ್ನೂ ನಾಶಗೊಳಿಸುವನು. ನಾನು ತಿಳಿದಿರುವುದು. ಯಾರ ಪಕ್ಷದಲ್ಲಿ ಧರ್ಮವಿರುವುದೋ ಅವರಿಗೇ ಜಯವಾಗುವುದು. ಅರ್ಜುನನು ನಿನ್ನಿಂದ ಸಹಿತನಾಗಿ ಬಿಳಿಯಾದ ಆನೆಯ ಮೇಲೆ ಕೂತಿರುವುದನ್ನು ಸ್ವಪ್ನದಲ್ಲಿ ನಾನು ನೋಡಿರುವೆನು. ಶ್ರೀಭಗವಂತನೇ! ನೀವೆಲ್ಲರೂ ನಮ್ಮನ್ನು ಸಂಹರಿಸುವಿರಿ. ಆ ವಿಷಯದಲ್ಲಿ ಸಂದೇಹವಿರುವುದಿಲ್ಲ. ದುರ್ಯೋಧನಾದಿ ರಾಜರೆಲ್ಲರೂ ಸಾಯುವರು. ನಕುಲನೂ, ಸಹದೇವನೂ, ಸಾತ್ಯಕಿಯೂ ಬಿಳಿವಸ್ತ್ರವುಳ್ಳವರಾಗಿ ಬಿಳಿಮಾಲೆಯುಳ್ಳವರಾಗಿ ಶ್ವೇತಚ್ಛತ್ರವುಳ್ಳವರಾಗಿ ಉತ್ತಮವಾದ ಮನುಷ್ಯವಾಹನದಲ್ಲಿ ಕೂತಿರುವುದನ್ನು ಸ್ವಪ್ನದಲ್ಲಿ ನೋಡಿದೆನು. ದುರ್ಯೋಧನನ ಸೈನ್ಯದಲ್ಲಿ ಅಶ್ವತ್ಥಾಮ, ಕೃಪ, ಕೃತವರ್ಮ ಈಮೂರು ಜನರು ಮಾತ್ರ ಬಿಳಿರುಮಾಲೆಯುಳ್ಳವರಾಗಿ ಕಾಣಿಸಿದರು. ಮತ್ತೆ ಎಲ್ಲರೂ ಕೆಂಪು ರುಮಾಲೆಯುಳ್ಳವರಾಗಿ ಕಾಣಿಸಿದರು. ಭೀಷ್ಮಾಚಾರ್ಯರೂ, ದ್ರೋಣಾಚಾರ್ಯರೂ, ದುರ್ಯೋಧನನಿಂದಲೂ ನನ್ನಿಂದಲೂ ಸಹಿತರಾಗಿ ಒಂಟೆಯು ಸೆಳೆಯುವ ರಥದಲ್ಲಿ ಕೂತುಕೊಂಡ ದಕ್ಷಿಣದಿಕ್ಕಿಗೆ ಹೋಗುತ್ತಿದ್ದರು. ಬಹುಬೇಗನೇ ನಾವು ಯಮಲೋಕವನ್ನು ಹೊಂದಿದೆವು. ನಾನೂ ಇತರ ರಾಜರೂ ಗಾಂಡೀವ ಎಂಬ ಅಗ್ನಿಯನ್ನು ಪ್ರವೇಶಿಸುವೆವು. ಇದರಲ್ಲಿ ನನಗೆ ಸಂಶಯವೇ ಇಲ್ಲ' ಎಂದು ಹೇಳಿದನು.

ಕೃಷ್ಣನು 'ಕರ್ಣ! ನಿಶ್ಚಯವಾಗಿಯೂ ಈ ಭೂಮಿಯ ನಾಶವು ಸಮೀಪಿಸಿರುವುದು. ಆದುದರಿಂದಲೇ ನಾನು ಹೇಳಿದ ಮಾತು ನಿನ್ನ ಮನಸ್ಸಿಗೆ ಬರುವುದಿಲ್ಲ. ಎಲ್ಲಾ ಪ್ರಾಣಿಗಳಿಗೂ ಮರಣವು ಸಮೀಪಿಸಿದಾಗ ಅನ್ಯಾಯವು ನ್ಯಾಯದಂತೆ ಕಾಣುವುದು' ಎಂದನು.

ಕರ್ಣನು 'ಶ್ರೀಕೃಷ್ಣ! ವೀರಕ್ಷತ್ರಿಯರ ನಾಶಕ್ಕೆ ಕಾರಣವಾದ ಈ ಯುದ್ಧದಿಂದ ನಾವು ಬದುಕಿಕೊಂಡು ನೋಡುವೆವಾ? ಅಥವಾ ಸ್ವರ್ಗದಲ್ಲಿ ಸಂಗಮವಾಗುವುದು. ಅಲ್ಲಿ ಪುನಃ ನಿನ್ನೊಡನೆ ಸೇರುವೆವು' ಎಂದು ಹೇಳಿದನು.

ಈಪ್ರಕಾರವಾಗಿ ಹೇಳಿ ಕರ್ಣನು ಕೃಷ್ಣಪರಮಾತ್ಮನಿಂದ ಆಲಿಂಗಿಸಲ್ಪಟ್ಟವನಾಗಿ ರಥದಿಂದ ಕೆಳಗೆ ಇಳಿದನು. ತರುವಾಯ ಬಂಗಾರದ ಅಲಂಕೃತವಾದ ತನ್ನ ರಥದಲ್ಲಿ ಕೂತುಕೊಂಡು ದೈನ್ಯಯುಕ್ತವಾದ ಮನಸ್ಸುಳ್ಳವನಾಗಿ ಹೋದನು. ಶ್ರೀಭಗವಂತನು ಸಾತ್ಯಕಿಯಿಂದ ಸಹಿತನಾಗಿ ಸಾರಥಿಯೊಡನೆ ಹೋಗು, ಹೋಗು ಎಂದು ಹೇಳುತ್ತಾ ಅತಿಶೀಘ್ರವಾಗಿ ಹೊರಟುಹೋದನು.

ತರುವಾಯ ಕುಂತೀದೇವಿಯೂ ಒಂದು ದಿನದಲ್ಲಿ ಕರ್ಣನನ್ನು ಪಾಂಡವರ ಪಕ್ಷಕ್ಕೆ ಸೇರುವಂತೆ ಹೇಳಬೇಕೆಂದು ಕರ್ಣನ ಬಳಿಗೆ ಹೋದಳು. ಗಂಗಾತೀರದಲ್ಲಿ ಕರ್ಣನು ಜಪಮಾಡುತ್ತಿರುವ ಸ್ಥಳವನ್ನು ನೋಡಿದನು. ಅಲ್ಲಿ ಕರ್ಣನು ಪೂರ್ವಾಭಿಮುಖವಾಗಿ ಕೈಗಳನ್ನು ಮೇಲೆ ಎತ್ತಿಕೊಂಡು ನಿಂತುಕೊಂಡು ಜಪವನ್ನು ಮಾಡುತ್ತಿದ್ದನು. ಕುಂತೀದೇವಿಯು ಕರ್ಣನ ಅವಸಾನವನ್ನು ನಿರೀಕ್ಷಿಸುತ್ತಾ ಬಿಸಿಲಿನಲ್ಲಿ ಬಳಲುತ್ತಾ ನಿಂತಿದ್ದಳು. ಬೆನ್ನಿಗೆ ಬಿಸಿಲು ಬರುವವರೆಗೆ ಕರ್ಣನು ಜಪಮಾಡುತ್ತಾ ಇದ್ದು ಆಮೇಲೆ ಹಿಂದೆ ತಿರುಗಿ ನೋಡಿ ಕುಂತೀದೇವಿಯನ್ನು ನೋಡಿ ನಮಸ್ಕರಿಸಿ ಕೈಮುಗಿದು ಮಂದಹಾಸವನ್ನು ಮಾಡುತ್ತಾ 'ಅಧಿರಥ ಪುತ್ರನಾದ ರಾಧೇಯನಾದ ಕರ್ಣನು ನಮಸ್ಕಾರ ಮಾಡುವೆನು. ಪೂಜ್ಯಳಾದ ನೀನು ಇಲ್ಲಿಗೆ ಯಾಕೆ ಬಂದಿರುವಿ? ಹೇಳು. ಆಕಾರ್ಯವನ್ನು ಮಾಡುವೆನು' ಎಂದನು. ಅದಕ್ಕೆ ಕುಂತಿಯು 'ನೀನು ರಾಧೆಯನಲ್ಲ, ಕೌಂತೇಯನು. ನಿನ್ನ ತಂದೆಯು ಅಧಿರಥನೂ ಅಲ್ಲ, ಕರ್ಣ! ನೀನು ಸೂತಕುಲದಲ್ಲಿ ಹುಟ್ಟಿದವನಲ್ಲ, ನನ್ನ ಮಾತನ್ನು ಕೇಳು. ನೀನು ಕುಂತಿಭೋಜರಾಜನ ಮನೆಯಲ್ಲಿ ಕನ್ಯಾವಸ್ಥೆಯಲ್ಲಿ ನನ್ನಿಂದ ಹುಟ್ಟಿದವನಾಗಿರುವಿ. ಈ ಸೂರ್ಯದೇವರೇ ನನ್ನಲ್ಲಿ ನಿನ್ನನ್ನು ಪಡೆದರು. ಕವಚಕುಂಡಧಾರಿಯಾಗಿಯೇ ನನ್ನ ತಂದೆಯ ಮನೆಯಲ್ಲಿ ಹುಟ್ಟಿರುವಿ. ನೀನು ನಿನ್ನ ತಮ್ಮಂದಿರನ್ನು ತಿಳಿಯದೆ ಮೋಹದಿಂದ ಕೌರವರನ್ನು ಸೇವಿಸುತ್ತಿರುವುದು ಸರಿಯಲ್ಲ. ತಂದೆಯೂ ತಾಯಿಯೂ ಸಂತೋಷಪಡುವಂತ ಮಾಡುವುದು ಮಕ್ಕಳ ಧರ್ಮವು. ಅರ್ಜುನನು ಸಂಪಾದಿಸಿರುವ ಸಂಪತ್ತನ್ನು ಅಯೋಗ್ಯರಾದ ದುರ್ಯೋಧನಾದಿಗಳು ಲೋಭದಿಂದ ಅಪಹರಿಸಿದ್ದನ್ನು ಆ ಅಯೋಗ್ಯರಿಂದ ಅಪಹರಿಸಿ ಅನುಭವಿಸುವವನಾಗು. ಈಗ ಕೌರವರು ಕರ್ಣಾರ್ಜುನರ ಸಮಾಗವನ್ನು ನೋಡಲಿ. ಕೃಷ್ಣಬಲರಾಮರಂತೆ ಕರ್ಣಾರ್ಜುನರು ಒಟ್ಟಿಗೆ ಸೇರಿದರೆ ಮೂರುಲೋಕದಲ್ಲಿಯೂ ನಿಮಗೆ ದುರ್ಲಭವಾದದ್ದು ಇರಲಾರದು. ಕರ್ಣ! ನೀನು ಐದು ಜನ ಸಹೋದರರಿಂದ ಸಹಿತನಾಗಿ ಶೋಭಿಸುವಿ. ನಿನಗೆ ಸೂತಪುತ್ರನೆಂಬ ಹೆಸರು ಬೇಡ. ನೀನು ಪಾರ್ಥನಾಗಿರುವಿ ಎಂದು ಹೇಳಿದಳು.

ತರುವಾಯ ಕರ್ಣನು 'ಕರ್ಣನೇ! ಪೃಥೆಯು ಸತ್ಯವಾದ ಮಾತನ್ನು ಆಡಿರುವಳು. ನೀನು ತಾಯಿಯ ಮಾತಿನಂತೆ ಮಾಡು. ಹಾಗೆ ಮಾಡಿದರೆ ನಿನಗೆ ಶ್ರೇಯಸ್ಸಾಗುವುದು' ಎಂದು ಸೂರ್ಯದೇವರಿಂದ ಹೊರಟುಬಂದ ಮಾತನ್ನು ಕೇಳಿದನು.

ಹೀಗೆ ತಂದೆತಾಯಿಗಳು ಇಬ್ಬರು ಹೇಳಿದರೂ ಕರ್ಣನ ಮನಸ್ಸು ಚಲಿಸಲಿಲ್ಲ. ಅವನು ಕುಂತೀದೇವಿಯೊಡನೆ 'ಕ್ಷತ್ರಿಯಳೇ! ಈ ನಿನ್ನ ಮಾತನ್ನು ಕರ್ತವ್ಯವೆಂದು ನಾನು ಶ್ರದ್ಧೆಯುಳ್ಳವನಾಗಿಲ್ಲ. ನೀನು ಹೇಳಿದಂತೆ ನಡೆಯುವುದು ನನಗೆ ಧರ್ಮಹಾನಿಗೆ ಕಾರಣವಾಗುವುದು. ನೀನು ನನಗೆ ಜಾತಿಭ್ರಂಶಕ್ಕೆ ಕಾರಣವಾದ ಮಹಾಪಾಪವನ್ನು ಮಾಡಿರುವಿ. ನನ್ನನ್ನು ನೀನು ಪರಿತ್ಯಾಗ ಮಾಡಿದ್ದು ನನ್ನ ಕೀರ್ತಿನಾಶಕ್ಕೆ ಕಾರಣವಾಯಿತು. ಕ್ಷತ್ರಿಯಜಾತಿಯಲ್ಲಿ ಹುಟ್ಟಿದ ನಾನು ಕನ್ಯಾವಸ್ಥೆಯಲ್ಲಿ ಹುಟ್ಟಿದ ಗರ್ಭವೆಂದು ಜನರು ತಿಳಿಯಬಾರದೆಂದು ತನ್ನ ಸುಖಕ್ಕಾಗಿ ನಿನ್ನಿಂದಾಗ ಕ್ಷತ್ರಿಯಸಂಸ್ಕಾರವನ್ನು ಹೊಂದಿಲ್ಲವೆಂದರೆ ಯಾವ ಶತ್ರುವು ನನಗೆ ಇದಕ್ಕಿಂತ ಹೆಚ್ಚಾದ ಅನಿಷ್ಟವನ್ನು ಮಾಡುವನು? ಕ್ಷತ್ರಿಯರಿಗೆ ಉಚಿತವಾದ ಸಂಸ್ಕಾರವನ್ನು ಮಾಡುವ ಸಮಯದಲ್ಲಿ ನನ್ನಲ್ಲಿ ದಯೆಯನ್ನು ತೋರಿಸದೆ ಈಗ ಬಂದು ನನ್ನನ್ನು ಸ್ವಕಾರ್ಯಕ್ಕಾಗಿ ಪ್ರೇರಿಸುವಿ. ಪೂರ್ವದಲ್ಲಿ ನೀನು ನನಗೆ ತಾಯಿಯಂತೆ ಹಿತವನ್ನು ಮಾಡಲಿಲ್ಲ. ಈಗ ಮಾತ್ರ ತನ್ನ ಹಿತಕ್ಕಾಗಿ ಬಂದು ನನ್ನೊಡನೆ ಹೇಳುತ್ತಿರುವಿ. ಕೃಷ್ಣನಿಂದ ಸಹಿತನಾದ ಅರ್ಜುನನಿಂದ ಯಾರು ಭಯಪಡಲಾರರು? ಈಗ ನಾನು ಪಾಂಡವರ ಪಕ್ಕಕ್ಕೆ ಹೋದರೆ ನಾನು ಭಯದಿಂದ ಸೇರಿಕೊಂಡೆನೆಂದು ಯಾರು ತಿಳಿಯದೆ ಇರುವರು? ಇಷ್ಟರವರೆಗೆ ನಾನು ಸಹೋದರನೆಂದು ತಿಳಿಯದೆ ಯುದ್ಧಕಾಲದಲ್ಲಿ ಮಾತ್ರ ನಾನು ಸಹೋದರನೆಂದು ಹೇಳಿಕೊಂಡು ಪಾಂಡವರ ಪಕ್ಷಕ್ಕೆ ಹೋದರೆ ನನ್ನನ್ನು ನೋಡಿ ಕ್ಷತ್ರಿಯರು ಏನು ಹೇಳುವರು? ಕೌರವರು ನನಗೆ ಸರ್ವ ಅಭೀಷ್ಟವನ್ನು ಕೊಟ್ಟಿರುವರು. ಸತ್ಕಾರವನ್ನು ಮಾಡಿರುವರು. ಅದನ್ನು ನಾನು ಹೇಗೆ ನಿಷ್ಫಲವನ್ನಾಗಿ ಮಾಡುವೆನು? ಯಾವ ದುರ್ಯೋಧನಾದಿಗಳು ಪಾಂಡವ ರೊಡನೆ ವಿರೋಧವನ್ನು ಮಾಡಿ ನಿತ್ಯವೂ ನನ್ನನ್ನು ಆಶ್ರಯಿಸಿರುವರೋ ನನಗೆ ಯಾವಾಗಲೂ ನಮಸ್ಕರಿಸುವರೋ ನನ್ನ ಸಾಮರ್ಥ್ಯದಿಂದ ಶತ್ರುಗಳನ್ನು ಜಯಿಸಲಿಕ್ಕೆ ಸಮರ್ಥರಾಗಿರುವೆವು ಎಂದು ತಿಳಿದಿರುವರೋ ಆ ದುರ್ಯೋಧನಾದಿಗಳ ಮನೋಭಿಲಾಷೆಯನ್ನು ನಾನು ಹೇಗೆ ವ್ಯರ್ಥಗೊಳಿಸಲಿ? ದೋಣಿಯಂತೆ ಇರುವ ನನ್ನಿಂದ ಯುದ್ಧವನ್ನು ದಾಟಬೇಕೆಂದು ಯೋಚಿಸಿರುವರು. ಕೌರವರನ್ನು ಆಶ್ರಯಿಸಿ

ಜೀವಿಸಿದವರಿಗೆ ಈಗ ಋಣ ಪರಿಹಾರ ಮಾಡಿಕೊಳ್ಳುವ ಸಮಯವು ಇದು. ಈ ಸಮಯದಲ್ಲಿ ನಾನು ಪ್ರಾಣಗಳನ್ನು ರಕ್ಷಣೆ ಮಾಡಿಕೊಳ್ಳದೆ ಋಣಪರಿಹಾರ ಮಾಡಿಕೊಳ್ಳಬೇಕು. ಯಾರು ಉಪಕಾರವನ್ನು ಪಡೆದವರು ಪ್ರತ್ಯುಪಕಾರವನ್ನು ಮಾಡಬೇಕಾದ ಸಮಯ ಬಂದಾಗ ಉಪಕಾರವನ್ನು ಮರೆತುಬಿಡುವವರಾಗುವರೋ ಅಂತಹ ಯಜಮಾನನ ಪಿಂಡವನ್ನು ಅಪಹಾರಮಾಡಿದವರಿಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಿರಲಾರದು. ಆದುದರಿಂದ ಕೌರವರಿಗಾಗಿ ನನ್ನ ಬಲವನ್ನೂ ಶಕ್ತಿಯನ್ನೂ ಆಶ್ರಯಿಸಿ ನಿನ್ನ ಮಕ್ಕಳೊಡನೆ ಯುದ್ಧವನ್ನು ಮಾಡುವೆನು. ನಿನ್ನಲ್ಲಿ ನಾನು ಸುಳ್ಳು ಹೇಳುವುದಿಲ್ಲ. ನಿನ್ನ ಮಾತಿನಂತೆ ನಾನು ನಡೆಯಲಾರೆನು. ಆದರೂ ನೀನು ನನ್ನೊಡನೆ ಇಷ್ಟು ಹೇಳಿಕೊಂಡದ್ದು ಕೇವಲ ವ್ಯರ್ಥವಾಗಲಾರದು. ಸಂಹಾರ ಮಾಡಲಿಕ್ಕೆ ಶಕ್ಯರಾಗಿದ್ದರೂ ನಿನ್ನ ಮಕ್ಕಳನ್ನು ನಾವು ಯುದ್ಧದಲ್ಲಿ ಸಂಹರಿಸುವುದಿಲ್ಲ. ಅರ್ಜುನನೊಬ್ಬನನ್ನು ಬಿಟ್ಟು ಧರ್ಮರಾಜನನ್ನು ಭೀಮಸೇನನನ್ನೂ ನಕುಲನನ್ನೂ ಸಹದೇವನನ್ನೂ ಸಂಹರಿಸುವುದಿಲ್ಲ. ಅರ್ಜುನನೊಡನೆ ನಾನು ಯುದ್ಧವನ್ನು ಮಾಡುವೆನು. ಯುದ್ಧದಲ್ಲಿ ಅರ್ಜುನನನ್ನು ಸಂಹರಿಸಿದರೆ ನಾನು ಫಲವನ್ನು ಹೊಂದಿದಂತೆ ಆಯಿತು. ನಾನು ಅರ್ಜುನನಿಂದ ಸತ್ತರೆ ಕೀರ್ತಿಯನ್ನು ಹೊಂದುವೆನು. ನಿನ್ನ ಐದು ಜನ ಮಕ್ಕಳು ಸಾಯುವುದಿಲ್ಲ. ಒಂದೋ ಅರ್ಜುನನಿಲ್ಲದೆ ಕರ್ಣನಿಂದ ಸಹಿತರಾದ ಐದು ಜನರು ಅಥವಾ ನಾನು ಸತ್ತರೆ ಅರ್ಜುನನಿಂದ ಸಹಿತರಾದ ಐದು ಜನ ಮಕ್ಕಳು ಉಳಿಯುವರು' ಎಂದು ಹೇಳಿದನು.

ಈರೀತಿಯಾಗಿ ಕರ್ಣನು ಹೇಳಿದ ಮಾತನ್ನು ಕೇಳಿ ಕುಂತೀದೇವಿಯು ದುಃಖದಿಂದ ನಡುಗುತ್ತಾ ಧೈರ್ಯಶಾಲಿಯಾದ ಮಗನಾದ ಕರ್ಣನನ್ನು ಆಲಿಂಗಿಸಿ 'ಕರ್ಣ! ನೀನು ಹೇಳಿದಂತೆ ಹೀಗೆಯೇ ಆಗಬೇಕಾಗಿದೆ. ಕೌರವರು ನಾಶವನ್ನು ಹೊಂದುವರು. ದೈವವು ಪ್ರಬಲವಾಗಿದೆ. ನೀನು ಹೇಳಿದಂತೆ ನಾಲ್ಕು ಜನ ಸಹೋದರರನ್ನು ಬಿಟ್ಟುಬಿಡುವೆನೆಂದು ಪ್ರತಿಜ್ಞೆಯನ್ನು ಮಾಡು. ಕ್ಷೇಮವಾಗಲಿ' ಎಂದು ಹೇಳಿದಳು. ಅವಳೊಡನೆ ಕರ್ಣನು ಪ್ರೀತಿಯಿಂದ ಮಾತಾಡಿದನು. ತರುವಾಯ ಅವರಿಬ್ಬರೂ ಪ್ರತ್ಯೇಕಪ್ರತ್ಯೇಕವಾಗಿ ಹೊರಟುಹೋದರು.

ಯುದ್ಧ ಸಮಯದಲ್ಲಿ ಭೀಷ್ಮಾಚಾರ್ಯರು ದುರ್ಯೋಧನನೊಡನೆ ಒಂದೋ ಕರ್ಣನು ಮೊದಲು ಯುದ್ಧ ಮಾಡಲಿ. ಒಂದೋ ನಾನು ಯುದ್ಧವನ್ನು ಮಾಡುವೆನು. ಸೂತಪುತ್ರನಾದ ಕರ್ಣನು ಯಾವಾಗಲೂ ಯುದ್ಧದಲ್ಲಿ ಸ್ಪರ್ಧೆಯನ್ನು ಮಾಡುತ್ತಿರು

ವನು' ಎಂದು ಹೇಳಿದರು. ಅದಕ್ಕೆ ಕರ್ಣನು 'ನಾನು ಗಾಂಗೇಯರು ಬದುಕಿರುವಾಗ ಎಷ್ಟು ಮಾತ್ರಕ್ಕೂ ಯುದ್ಧವನ್ನು ಮಾಡಲಾರೆನು. ಭೀಷ್ಮಾಚಾರ್ಯರು ಸತ್ತಮೇಲೆ ನಾನು ಅರ್ಜುನನೊಡನೆ ಯುದ್ಧಮಾಡುವೆನು' ಎಂದು ಹೇಳಿಬಿಟ್ಟನು.

ಮತ್ತು ಭೀಷ್ಮಾಚಾರ್ಯರು ಸೇನಾಧಿಪತಿಯಾಗಿ ದುರ್ಯೋಧನನ ಪ್ರಾರ್ಥನೆಯಂತೆ ಮಹಾರಥಿಕರನ್ನು ಎಣಿಸಿಕೊಂಡು ಬರುವಾಗ 'ರಾಜನೇ! ಯಾವ ಕರ್ಣನು ನಿನ್ನನ್ನು ಯಾವಾಗಲೂ ಪಾಂಡವರೊಡನೆ ವಿರೋಧವನ್ನು ಮಾಡಲಿಕ್ಕೆ ಉತ್ಸಾಹಪಡಿಸುವನೋ ಕಠಿಣವಾಗಿ ಮಾತಾಡುವನೋ ತನ್ನನ್ನು ಹೊಗಳಿಕೊಳ್ಳು ವನೋ ನಿನಗೆ ಮಂತ್ರಿಯಾಗಿರುವನೋ ಬಂಧುವಾಗಿರುವನೋ ಅತ್ಯಂತ ಅಭಿಮಾನಿಯಗಿರುವನೋ ಈ ಕರ್ಣನು ರಥಿಕನೂ ಅಲ್ಲ. ಅತಿರಥನೂ ಅಲ್ಲ. ಇವನು ಸ್ವಾಭಾವಿಕ ಕವಚದಿಂದ ರಹಿತನಾಗಿರುವನು. ಕುಂಡಲದಿಂದಲೂ ರಹಿತ ನಾಗಿರುವನು. ಪರಶುರಾಮದೇವರ ಮತ್ತು ಒಬ್ಬ ಬ್ರಾಹ್ಮಣನ ಶಾಪದಿಂದ ಯುಕ್ತನಾಗಿರುವನು. ಇದರಿಂದ ಇವನು ಅರ್ಧರಥಿಕನು. ಇವನು ಅರ್ಜುನನ ಸಮೀಪಕ್ಕೆ ಹೋದರೆ ಬದುಕಿಕೊಂಡು ಹಿಂದೆ ತಿರುಗಿಬರುವುದಿಲ್ಲ' ಎಂದು ಹೇಳಿದರು. ಅದನ್ನು ಕೇಳಿ ದ್ರೋಣಾಚಾರ್ಯರೂ 'ನೀವು ಹೇಳಿದ ಮಾತು ಸತ್ಯವು. ಸುಳ್ಳಲ್ಲ. ಒಂದೊಂದು ಯುದ್ಧದಲ್ಲಿಯೂ ಅಭಿಮಾನಿಯಾಗಿರುವನು. ಪರಾಙ್ ಮುಖನಾಗಿ ಬರುವನು. ಪ್ರಮಾದವುಳ್ಳವನು. ಆದರಿಂದ ಅರ್ಧರಥಿಕನೆಂದು ನನ್ನ ಅಭಿಪ್ರಾಯವೂ ಇರುವುದು' ಎಂದು ಹೇಳಿದರು.

ಅದನ್ನು ಕೇಳಿ ಕರ್ಣನಿಗೆ ಬಹುಕೋಪವು ಬಂದಿತು. 'ಪಿತಾಮಹರೇ! ನಿರಪರಾಧಿಯಾದ ನನ್ನನ್ನು ದ್ವೇಷದಿಂದಲೇ ಒಂದೊಂದು ಸಮಯದಲ್ಲಿಯೂ ವ್ಯರ್ಥವಾಗಿ ನಿಂದಿಸುತ್ತಿರುವಿರಿ. ಅದೆಲ್ಲವನ್ನೂ ದುರ್ಯೋಧನನಿಗಾಗಿ ಸಹಿಸಿ ಕೊಂಡಿರುವೆನು. ನೀನು ನನ್ನನ್ನು ಅರ್ಧರಥಿಕನೆಂದು ತಿಳಿದುಕೊಂಡಿದ್ದರೆ ನಿನ್ನನ್ನು ನಾನೂ ಅರ್ಧರಥನೆಂದು ತಿಳಿದಿರುವೆನು. ನೀನು ನನ್ನನ್ನು ಅರ್ಧರಥ ಎಂದು ಹೇಳಿದರೆ ನಿನ್ನ ಮಾತೇ ಸತ್ಯವೆಂದು ತಿಳಿದುಕೊಂಡು ಎಲ್ಲರೂ ನನ್ನನ್ನು ನಿಂದಿಸುವರು. ನೀನು ಯಾವಾಗಲೂ ಕೌರವರಿಗೆ ಅಹಿತವನ್ನು ಮಾಡುವವನು. ರಾಜನಿಗೆ ಅದು ತಿಳಿಯುವುದಿಲ್ಲ. ಯಾರು ಸಮಾನರಾದ ರಾಜರ ಮಧ್ಯದಲ್ಲಿ ಪರಸ್ಪರ ವಿರೋಧವನ್ನು ಉಂಟುಮಾಡುವುದಕ್ಕಾಗಿ ಈ ತೇಜೋವಧವನ್ನು ಮಾಡು ವರು? ವಯಸ್ಸಾದ ಕಾರಣವೂ, ತಲೆ ಬೆಳ್ಳಗಾದ ಕಾರಣವೂ, ಹಣದಿಂದಲೋ, ಬಂಧುತ್ವದಿಂದಲೋ, ಮಹಾರಥತ್ವವನ್ನು ತಿಳಿಯಲಿಕ್ಕೆ ಆಗಲಾರದು. ಬಲದಿಂದ

ಕ್ಷತ್ರಿಯರು ಶ್ರೇಷ್ಠರಾಗುವರು. ಮಂತ್ರದಿಂದ ಬ್ರಾಹ್ಮಣರು ಶ್ರೇಷ್ಠರು. ವೈಶ್ಯರು ಹಣದಿಂದ ಶ್ರೇಷ್ಠರು. ಶೂದ್ರರು ವಯಸ್ಸಿನಿಂದ ಶ್ರೇಷ್ಠರು. ನೀನು ಕಾಮದ್ವೇಷವುಳ್ಳವನಾಗಿ ಮನಸ್ಸಿಗೆ ಬಂದಂತೆ ರಥಿಕರನ್ನು ಅರ್ಧರಥಿಕನೆಂದು ಹೇಳುತ್ತೀ.

ದುರ್ಯೋಧನ! ಸ್ವಲ್ಪ ಚೆನ್ನಾಗಿ ನೋಡಿಕೊ. ದುಷ್ಟಭಾವವುಳ್ಳ ನಿನಗೆ ಅಹಿತವನ್ನು ಮಾಡುವ ಈ ಭೀಷ್ಮನನ್ನು ಬಿಟ್ಟುಬಿಡು. ಹೀಗೆಲ್ಲಾ ಮಾಡಿದರೆ ಸೈನ್ಯದಲ್ಲಿಯೇ ಪರಸ್ಪರ ವೈಮನಸ್ಯವು ಬಂದು ಐಕಮತ್ಯವು ಬರಲಾರದು. ರಥಿಕರ ಜ್ಞಾನವೆಲ್ಲಿ? ಈ ಅಲ್ಪಬುದ್ಧಿಯುಳ್ಳ ಭೀಷ್ಮನೆಲ್ಲಿ? ಪಾಂಡವರ ಸೈನ್ಯವನ್ನು ನಾನು ತಡೆಯುವೆನು. ನನ್ನನ್ನು ಹೊಂದಿ ಪಾಂಡವರು ಹತ್ತು ದಿಕ್ಕುಗಳಿಗೆ ಓಡುವರು. ಯುದ್ಧವೆಲ್ಲಿ? ಮಂತ್ರಾಲೋಚನೆಯೆಲ್ಲಿ? ವಯಸ್ಸಾದ ಮಂದಬುದ್ಧಿಯುಳ್ಳ ಭೀಷ್ಮನೆಲ್ಲಿ? ಎಲ್ಲಾ ಜಗತ್ತಿನೊಡನೆ ತಾನೊಬ್ಬನೇ ಸ್ಪರ್ಧಿಸುತ್ತಾನೆ. ತನಗೆ ಸಮಾನವೇ ಇಲ್ಲವೆಂದು ತಿಳಿದುಕೊಂಡಿರುವನು. ವೃದ್ಧರ ಮಾತನ್ನು ಕೇಳಬೇಕೆಂದು ಶಾಸ್ತ್ರವಿದೆ. ಆದರೆ ಇಂತಹ ಅತಿವೃದ್ಧರ ಮಾತನ್ನು ಕೇಳಬಾರದು. ಇವರು ಬಾಲಕರಿಗೆ ಸಮಾನರು. ಈ ಯುದ್ಧದಲ್ಲಿ ಇವನನ್ನು ಸೇನಾಪತಿಯನ್ನಾಗಿ ಮಾಡಿದ ಕಾರಣ ಯಾರು ಯುದ್ಧಮಾಡಿದರೂ ಸೇನಾಪತಿಯಾದ ಈ ಭೀಷ್ಮನಿಗೇ ಕೀರ್ತಿಯು ಬರುವುದು. ಯುದ್ಧಮಾಡಿದವರಿಗೆ ಬರಲಾರದು. ಆದುದರಿಂದ ರಾಜನೇ! ಈ ಭೀಷ್ಮನು ಬದುಕಿರುವಾಗ ನಾನು ಯುದ್ಧವನ್ನು ಮಾಡುವುದಿಲ್ಲ. ಭೀಷ್ಮನು ಸತ್ತಮೇಲೆ ಯುದ್ಧಮಾಡುವೆನು' ಎಂದು ಹೇಳಿದನು.

ಆಗ ಭೀಷ್ಮಾಚಾರ್ಯರು 'ಈಗ ಮಹಾಯುದ್ಧವು ಆಗಲಿದೆ. ಇಂತಹ ರೋಮಾಂಚಜನಕವಾದ ಸಮಯದಲ್ಲಿ ನಮ್ಮಲ್ಲಿಯೇ ಪರಸ್ಪರ ಜಗಳವನ್ನು ಉಂಟುಮಾಡಬಾರದು. ಆದುದರಿಂದ ನೀನು ಬದುಕಿರುವಿ. ಸೂತ್ರಪುತ್ರನೆ! ಇಲ್ಲದಿದ್ದರೆ ನಾನು ಮುದುಕನಾದರೂ ಪರಾಕ್ರಮವನ್ನು ತೋರಿಸಿ ಶಿಶುವಾದ ನಿನ್ನ ಯುದ್ಧದಲ್ಲಿ ಶ್ರದ್ಧೆಯನ್ನು ನಿನ್ನ ಪ್ರಾಣವನ್ನು ಬಿಡಿಸುತ್ತಿದ್ದೆನು. ಪರಶುರಾಮದೇವರು ಮಹಾಅಸ್ತ್ರಗಳನ್ನು ಬಿಡುವಾಗಲೇ ನನಗೆ ಒಂದು ವ್ಯಥೆಯೂ ಉಂಟಾಗಲಿಲ್ಲ. ನೀನು ನನಗೆ ಏನು ಮಾಡುವಿ? ಯದ್ಯಪಿ ಸಜ್ಜನರು ತಮ್ಮನ್ನು ಸ್ತೋತ್ರ ಮಾಡಿಕೊಳ್ಳುವುದಿಲ್ಲ. ನೀಚನೇ! ಆದರೂ ಸಂತಾಪವಶನಾಗಿ ನಿನ್ನೊಡನೆ ಹೇಳಿಕೊಳ್ಳುತ್ತೇನೆ. ಕಾಶಿರಾಜ ಸ್ವಯಂವರದಲ್ಲಿ ಬಂದಿದ್ದ ಕ್ಷತ್ರಿಯರೆಲ್ಲರನ್ನೂ ಒಂದೇ ರಥದಲ್ಲಿ ಕೂತುಕೊಂಡು ಹೋಗಿ ಒಬ್ಬನೇ ಜಯಿಸಿ ಕನ್ಯೆಯರನ್ನು ಕರೆದುಕೊಂಡು ಬಂದಿರುವೆನು. ನಿನ್ನಂತೆ ಇರುವ ನಿನ್ನಿಂದ ಅಧಿಕರಾಗಿರುವ ಸಾವಿರಾರು ರಾಜರನ್ನು ಜಯಿಸಿರುವೆನು.

ನಿನ್ನಿಂದಾಗಿ ವಿನಾಶಕ್ಕಾಗಿ ಕೌರವರಿಗೆ ಮಹಾಯುದ್ಧವು ಸಮೀಪಿಸಿರುವುದು. ನಿನ್ನ ಪೌರುಷವನ್ನು ತೋರಿಸು. ಯಾವ ಅರ್ಜುನನೊಡನೆ ಸ್ಪರ್ಧಿಸುವಿಯೋ ಅವನೊಡನೆ ಯುದ್ಧಮಾಡು. ದುರ್ಬುದ್ಧಿಯುಳ್ಳವನೇ! ಈ ಯುದ್ಧದಿಂದ ನೀನು ಬದುಕಿ ಬರುವುದನ್ನು ನೋಡುತ್ತೇನೆ' ಎಂದು ಹೇಳಿದರು. ತರುವಾಯ ದುರ್ಯೋಧನನು ಬಂದು ಭೀಷ್ಮಾಚಾರ್ಯರನ್ನು ಸಮಾಧಾನಪಡಿಸಿದನು.

ಕರ್ಣನು ಪ್ರತಿಜ್ಞಾಮಾಡಿದಂತೆಯೇ ಭೀಷ್ಮಾಚಾರ್ಯರು ಸೇನಾಧಿಪತಿಯಾಗಿದ್ದ ಹತ್ತುದಿವಸಗಳಲ್ಲಿಯೂ ಯುದ್ಧವನ್ನೂ ಮಾಡಲೇ ಇಲ್ಲ. ಭೀಷ್ಮಾಚಾರ್ಯರು ಹತ್ತನೆಯ ದಿವಸದಲ್ಲಿ ಸರಳಮಂಚದಲ್ಲಿ ಮಲಗಿದ ಮೇಲೆ ಕರ್ಣನು ಅವರ ಬಳಿಗೆ ಹೋಗಿ ನಮಸ್ಕರಿಸಿ ಅನುಮತಿಯನ್ನು ಪಡೆದು ಮರುದಿವಸದಿಂದ ಯುದ್ಧವನ್ನು ಮಾಡಲಿಕ್ಕೆ ಆರಂಭಿಸಿದನು.

ಅಭಿಮನ್ಯುವನ್ನು ಸಂಹರಿಸಲಿಕ್ಕೆ ಕರ್ಣನೂ ಸೇರಿದ್ದನು. ಅಂದರೆ ಕರ್ಣನು ಅವನ ಧನುಸ್ಸನ್ನು ಕತ್ತರಿಸಿದನು. ಕೃಪಾಚಾರ್ಯರು ಸಾರಥಿಯನ್ನು ದ್ರೋಣಾಚಾರ್ಯರು ಕುದುರೆಗಳನ್ನು ಸಂಹರಿಸಿದನು. ದುಃಶಾಸನನ ಮಗನು ಗದಾಯುದ್ಧವನ್ನು ಮಾಡಿ ಅವನನ್ನು ಸಂಹರಿಸಿದನು.

ಒಂದು ದಿವಸದಲ್ಲಿ ಕರ್ಣನೂ, ವಿಕರ್ಣ, ಚಿತ್ರಸೇನ ಎಂಬ ದುರ್ಯೋಧನನ ತಮ್ಮಂದಿರೂ ಭೀಮಸೇನದೇವರ ಹತ್ತಿರ ಯುದ್ಧಕ್ಕೆ ಬಂದರು. ಆಗ ಭೀಮಸೇನದೇವರು ವಿಕರ್ಣನನ್ನು, ಚಿತ್ರಸೇನನನ್ನೂ ಸಂಹರಿಸಿ ಕರ್ಣನ ರಥವನ್ನು ಪುಡಿಮಾಡಿದರು. ಕರ್ಣನು ಓಡಿಹೋಗಿಬಿಟ್ಟನು. ಸಮಾಧಾನ ಮಾಡಿಕೊಂಡು ಪುನಃ ಯುದ್ಧಕ್ಕೆ ಬಂದನು. ಆಗಲೂ ಭೀಮಸೇನದೇವರು ಅವನ ಕುದುರೆಗಳನ್ನು ಆಯುಧಗಳನ್ನೂ ಪುಡಿಮಾಡಿ ಓಡಿಸಿದರು. ಕರ್ಣನ ಸಹಾಯಕ್ಕೆ ಬಂದ ಇಪ್ಪತ್ತಮೂರು ದುರ್ಯೋಧನನ ತಮ್ಮಂದಿರನ್ನು ಭೀಮಸೇನದೇವರು ಕರ್ಣನು ನೋಡುವಂತೆ ಕೊಂದು ಹಾಕಿದರು. ಇಪ್ಪತ್ತ ಒಂದು ಬಾರಿ ಕರ್ಣನ ಕುದುರೆಗಳನ್ನೂ ಸಾರಥಿಯನ್ನೂ ರಥಗಳನ್ನೂ ಧ್ವಜಗಳನ್ನೂ ಪುಡಿಮಾಡಿ ತೀಕ್ಷ್ಣಬಾಣಗಳಿಂದ ಬಲವಾಗಿ ಬಡೆದು ಪ್ರಾಣಸಂಶಯವುಂಟಾಗುವಂತೆ ಮಾಡಿದರು.

ಇಪ್ಪತ್ತೆರಡನೆ ಬಾರಿ ಕರ್ಣನು ಪರಶುರಾಮರಿಂದ ಪಡೆದ ಜಯಶೀಲವಾದ ರಥವನ್ನು ಏರಿಕೊಂಡು ಅವರು ಕೊಟ್ಟ ಧನುಸ್ಸನ್ನೇ ತೆಗೆದುಕೊಂಡು ಬಾಣಚೀಲಗಳನ್ನು ಧರಿಸಿಕೊಂಡು ರೋಷದಿಂದ ಭೀಮಸೇನದೇವರ ಬಳಿಗೆ ಯುದ್ಧಕ್ಕೆ ಬಂದನು. ಆಗ ಭಯಂಕರವಾದ ಯುದ್ಧವು ನಡೆಯಿತು. ಭೀಮಸೇನದೇವರು

ಕ್ಷತ್ರಿಯರು ಶ್ರೇಷ್ಠರಾಗುವರು. ಮಂತ್ರದಿಂದ ಬ್ರಾಹ್ಮಣರು ಶ್ರೇಷ್ಠರು. ವೈಶ್ಯರು ಹಣದಿಂದ ಶ್ರೇಷ್ಠರು. ಶೂದ್ರರು ವಯಸ್ಸಿನಿಂದ ಶ್ರೇಷ್ಠರು. ನೀನು ಕಾಮದ್ವೇಷವುಳ್ಳವನಾಗಿ ಮನಸ್ಸಿಗೆ ಬಂದಂತೆ ರಥಿಕರನ್ನು ಅರ್ಧರಥಿಕನೆಂದು ಹೇಳುತ್ತೀ.

ದುರ್ಯೋಧನ! ಸ್ವಲ್ಪ ಚೆನ್ನಾಗಿ ನೋಡಿಕೊ. ದುಷ್ಟಭಾವವುಳ್ಳ ನಿನಗೆ ಅಹಿತವನ್ನು ಮಾಡುವ ಈ ಭೀಷ್ಮನನ್ನು ಬಿಟ್ಟುಬಿಡು. ಹೀಗೆಲ್ಲಾ ಮಾಡಿದರೆ ಸೈನ್ಯದಲ್ಲಿಯೇ ಪರಸ್ಪರ ವೈಮನಸ್ಯವು ಬಂದು ಐಕಮತ್ಯವು ಬರಲಾರದು. ರಥಿಕರ ಜ್ಞಾನವೆಲ್ಲಿ? ಈ ಅಲ್ಪಬುದ್ಧಿಯುಳ್ಳ ಭೀಷ್ಮನೆಲ್ಲಿ? ಪಾಂಡವರ ಸೈನ್ಯವನ್ನು ನಾನು ತಡೆಯುವೆನು. ನನ್ನನ್ನು ಹೊಂದಿ ಪಾಂಡವರು ಹತ್ತು ದಿಕ್ಕುಗಳಿಗೆ ಓಡುವರು. ಯುದ್ಧವೆಲ್ಲಿ? ಮಂತ್ರಾಲೋಚನೆಯೆಲ್ಲಿ? ವಯಸ್ಸಾದ ಮಂದಬುದ್ಧಿಯುಳ್ಳ ಭೀಷ್ಮನೆಲ್ಲಿ? ಎಲ್ಲಾ ಜಗತ್ತಿನೊಡನೆ ತಾನೊಬ್ಬನೇ ಸ್ಪರ್ಧಿಸುತ್ತಾನೆ. ತನಗೆ ಸಮಾನವೇ ಇಲ್ಲವೆಂದು ತಿಳಿದುಕೊಂಡಿರುವನು. ವೃದ್ಧರ ಮಾತನ್ನು ಕೇಳಬೇಕೆಂದು ಶಾಸ್ತ್ರವಿದೆ. ಆದರೆ ಇಂತಹ ಅತಿವೃದ್ಧರ ಮಾತನ್ನು ಕೇಳಬಾರದು. ಇವರು ಬಾಲಕರಿಗೆ ಸಮಾನರು. ಈ ಯುದ್ಧದಲ್ಲಿ ಇವನನ್ನು ಸೇನಾಪತಿಯನ್ನಾಗಿ ಮಾಡಿದ ಕಾರಣ ಯಾರು ಯುದ್ಧಮಾಡಿದರೂ ಸೇನಾಪತಿಯಾದ ಈ ಭೀಷ್ಮನಿಗೇ ಕೀರ್ತಿಯು ಬರುವುದು. ಯುದ್ಧಮಾಡಿದವರಿಗೆ ಬರಲಾರದು. ಆದುದರಿಂದ ರಾಜನೇ! ಈ ಭೀಷ್ಮನು ಬದುಕಿರುವಾಗ ನಾನು ಯುದ್ಧವನ್ನು ಮಾಡುವುದಿಲ್ಲ. ಭೀಷ್ಮನು ಸತ್ತಮೇಲೆ ಯುದ್ಧಮಾಡುವೆನು' ಎಂದು ಹೇಳಿದನು.

ಆಗ ಭೀಷ್ಮಾಚಾರ್ಯರು 'ಈಗ ಮಹಾಯುದ್ಧವು ಆಗಲಿದೆ. ಇಂತಹ ರೋಮಾಂಚಜನಕವಾದ ಸಮಯದಲ್ಲಿ ನಮ್ಮಲ್ಲಿಯೇ ಪರಸ್ಪರ ಜಗಳವನ್ನು ಉಂಟುಮಾಡಬಾರದು. ಆದುದರಿಂದ ನೀನು ಬದುಕಿರುವಿ. ಸೂತ್ರಪುತ್ರನೆ! ಇಲ್ಲದಿದ್ದರೆ ನಾನು ಮುದುಕನಾದರೂ ಪರಾಕ್ರಮವನ್ನು ತೋರಿಸಿ ಶಿಶುವಾದ ನಿನ್ನ ಯುದ್ಧದಲ್ಲಿ ಶ್ರದ್ಧೆಯನ್ನು ನಿನ್ನ ಪ್ರಾಣವನ್ನು ಬಿಡಿಸುತ್ತಿದ್ದೆನು. ಪರಶುರಾಮದೇವರು ಮಹಾಅಸ್ತ್ರಗಳನ್ನು ಬಿಡುವಾಗಲೇ ನನಗೆ ಒಂದು ವ್ಯಥೆಯೂ ಉಂಟಾಗಲಿಲ್ಲ. ನೀನು ನನಗೆ ಏನು ಮಾಡುವಿ? ಯದ್ಯಪಿ ಸಜ್ಜನರು ತಮ್ಮನ್ನು ಸ್ತೋತ್ರ ಮಾಡಿಕೊಳ್ಳುವುದಿಲ್ಲ. ನೀಚನೇ! ಆದರೂ ಸಂತಾಪವಶನಾಗಿ ನಿನ್ನೊಡನೆ ಹೇಳಿಕೊಳ್ಳುತ್ತೇನೆ. ಕಾಶಿರಾಜ ಸ್ವಯಂವರದಲ್ಲಿ ಬಂದಿದ್ದ ಕ್ಷತ್ರಿಯರೆಲ್ಲರನ್ನೂ ಒಂದೇ ರಥದಲ್ಲಿ ಕೂತುಕೊಂಡು ಹೋಗಿ ಒಬ್ಬನೇ ಜಯಿಸಿ ಕನ್ಯೆಯರನ್ನು ಕರೆದುಕೊಂಡು ಬಂದಿರುವೆನು. ನಿನ್ನಂತೆ ಇರುವ ನಿನ್ನಿಂದ ಅಧಿಕರಾಗಿರುವ ಸಾವಿರಾರು ರಾಜರನ್ನು ಜಯಿಸಿರುವೆನು.

ನಿನ್ನಿಂದಾಗಿ ವಿನಾಶಕ್ಕಾಗಿ ಕೌರವರಿಗೆ ಮಹಾಯುದ್ಧವು ಸಮೀಪಿಸಿರುವುದು. ನಿನ್ನ ಪೌರುಷವನ್ನು ತೋರಿಸು. ಯಾವ ಅರ್ಜುನನೊಡನೆ ಸ್ಪರ್ಧಿಸುವಿಯೋ ಅವನೊಡನೆ ಯುದ್ಧಮಾಡು. ದುರ್ಬುದ್ಧಿಯುಳ್ಳವನೇ! ಈ ಯುದ್ಧದಿಂದ ನೀನು ಬದುಕಿ ಬರುವುದನ್ನು ನೋಡುತ್ತೇನೆ' ಎಂದು ಹೇಳಿದರು. ತರುವಾಯ ದುರ್ಯೋಧನನು ಬಂದು ಭೀಷ್ಮಾಚಾರ್ಯರನ್ನು ಸಮಾಧಾನಪಡಿಸಿದನು.

ಕರ್ಣನು ಪ್ರತಿಜ್ಞಾಮಾಡಿದಂತೆಯೇ ಭೀಷ್ಮಾಚಾರ್ಯರು ಸೇನಾಧಿಪತಿಯಾಗಿದ್ದ ಹತ್ತುದಿವಸಗಳಲ್ಲಿಯೂ ಯುದ್ಧವನ್ನೂ ಮಾಡಲೇ ಇಲ್ಲ. ಭೀಷ್ಮಾಚಾರ್ಯರು ಹತ್ತನೆಯ ದಿವಸದಲ್ಲಿ ಸರಳಮಂಚದಲ್ಲಿ ಮಲಗಿದ ಮೇಲೆ ಕರ್ಣನು ಅವರ ಬಳಿಗೆ ಹೋಗಿ ನಮಸ್ಕರಿಸಿ ಅನುಮತಿಯನ್ನು ಪಡೆದು ಮರುದಿವಸದಿಂದ ಯುದ್ಧವನ್ನು ಮಾಡಲಿಕ್ಕೆ ಆರಂಭಿಸಿದನು.

ಅಭಿಮನ್ಯುವನ್ನು ಸಂಹರಿಸಲಿಕ್ಕೆ ಕರ್ಣನೂ ಸೇರಿದ್ದನು. ಅಂದರೆ ಕರ್ಣನು ಅವನ ಧನುಸ್ಸನ್ನು ಕತ್ತರಿಸಿದನು. ಕೃಪಾಚಾರ್ಯರು ಸಾರಥಿಯನ್ನು ದ್ರೋಣಾಚಾರ್ಯರು ಕುದುರೆಗಳನ್ನು ಸಂಹರಿಸಿದನು. ದುಃಶಾಸನನ ಮಗನು ಗದಾಯುದ್ಧವನ್ನು ಮಾಡಿ ಅವನನ್ನು ಸಂಹರಿಸಿದನು.

ಒಂದು ದಿವಸದಲ್ಲಿ ಕರ್ಣನೂ, ವಿಕರ್ಣ, ಚಿತ್ರಸೇನ ಎಂಬ ದುರ್ಯೋಧನನ ತಮ್ಮಂದಿರೂ ಭೀಮಸೇನದೇವರ ಹತ್ತಿರ ಯುದ್ಧಕ್ಕೆ ಬಂದರು. ಆಗ ಭೀಮಸೇನದೇವರು ವಿಕರ್ಣನನ್ನು, ಚಿತ್ರಸೇನನನ್ನೂ ಸಂಹರಿಸಿ ಕರ್ಣನ ರಥವನ್ನು ಪುಡಿಮಾಡಿದರು. ಕರ್ಣನು ಓಡಿಹೋಗಿಬಿಟ್ಟನು. ಸಮಾಧಾನ ಮಾಡಿಕೊಂಡು ಪುನಃ ಯುದ್ಧಕ್ಕೆ ಬಂದನು. ಆಗಲೂ ಭೀಮಸೇನದೇವರು ಅವನ ಕುದುರೆಗಳನ್ನು ಆಯುಧಗಳನ್ನೂ ಪುಡಿಮಾಡಿ ಓಡಿಸಿದರು. ಕರ್ಣನ ಸಹಾಯಕ್ಕೆ ಬಂದ ಇಪ್ಪತ್ತಮೂರು ದುರ್ಯೋಧನನ ತಮ್ಮಂದಿರನ್ನು ಭೀಮಸೇನದೇವರು ಕರ್ಣನು ನೋಡುವಂತೆ ಕೊಂದು ಹಾಕಿದರು. ಇಪ್ಪತ್ತ ಒಂದು ಬಾರಿ ಕರ್ಣನ ಕುದುರೆಗಳನ್ನೂ ಸಾರಥಿಯನ್ನೂ ರಥಗಳನ್ನೂ ಧ್ವಜಗಳನ್ನೂ ಪುಡಿಮಾಡಿ ತೀಕ್ಷ್ಣಬಾಣಗಳಿಂದ ಬಲವಾಗಿ ಬಡೆದು ಪ್ರಾಣಸಂಶಯವುಂಟಾಗುವಂತೆ ಮಾಡಿದರು.

ಇಪ್ಪತ್ತೆರಡನೆ ಬಾರಿ ಕರ್ಣನು ಪರಶುರಾಮರಿಂದ ಪಡೆದ ಜಯಶೀಲವಾದ ರಥವನ್ನು ಏರಿಕೊಂಡು ಅವರು ಕೊಟ್ಟ ಧನುಸ್ಸನ್ನೇ ತೆಗೆದುಕೊಂಡು ಬಾಣಚೀಲಗಳನ್ನು ಧರಿಸಿಕೊಂಡು ರೋಷದಿಂದ ಭೀಮಸೇನದೇವರ ಬಳಿಗೆ ಯುದ್ಧಕ್ಕೆ ಬಂದನು. ಆಗ ಭಯಂಕರವಾದ ಯುದ್ಧವು ನಡೆಯಿತು. ಭೀಮಸೇನದೇವರು

ಕರ್ಣನು ಧರಿಸಿದ್ದ ಕವಚವನ್ನು ಕುಂಡಲಗಳನ್ನು ಕತ್ತರಿಸಿದರು. ಇದರಿಂದ ಕರ್ಣನನ್ನು ಸ್ವಾಭಾವಿಕ ಕವಚಕುಂಡಲ ಸಹಿತನಾಗಿದ್ದರೂ ತಾನು ಸಂಹರಿಸುತ್ತಿದ್ದೆನೆಂದು ತಿಳಿಸಿದರು. ತರುವಾಯ ಸ್ಪರ್ಧೆಯಿಲ್ಲದೆ ಯುದ್ಧಮಾಡುತ್ತಿದ್ದ ಕಾರಣ ಕರ್ಣನಿಗೆ ಪರಶುರಾಮದೇವರ ವರದಪ್ರಕಾರ ಜಯವಾಗಬೇಕೆಂದು ಭೀಮಸೇನದೇವರು ಯೋಚಿಸಿ ಅವನಿಗೆ ಅವಕಾಶವನ್ನು ಕೊಟ್ಟರು. ಆಗ ಕರ್ಣನು ಭೀಮಸೇನದೇವರ ಧನುಸ್ಸನ್ನು ಕತ್ತರಿಸಿದನು. ಕುದುರೆಗಳ ಹಗ್ಗವನ್ನು ಕತ್ತರಿಸಿದನು. ಆಗ ಭೀಮಸೇನದೇವರು ತನಗೆ ರಥಾದಿಗಳಿಂದಲೂ ಧನುಸ್ಸಿನಿಂದಲೂ ಒಂದೂ ಏನೂ ಆಗಬೇಕಾಗಿಲ್ಲ ಎಂದು ತಿಳಿಸುವುದಕ್ಕಾಗಿ ರಥದಿಂದ ಹಾರಿ ಕರ್ಣನ ರಥವನ್ನು ಏರಿದರು. ಕರ್ಣನು ಭಯಪಟ್ಟವನಾಗಿ ಅಲ್ಲಿಯೇ ಅಡಗಿ ಕೂತುಕೊಂಡನು. ಭೀಮಸೇನದೇವರು ಆಯುಧವಿಲ್ಲದಿದ್ದರೂ ಶತ್ರುನಿಗ್ರಹ ಮಾಡಲಿಕ್ಕೆ ಸಾಮರ್ಥ್ಯವಿರುವುದೆಂದು ತಿಳಿಸಿ ಕೆಳಗೆ ಬಂದುಬಿಟ್ಟರು.

ಭೀಮಸೇನದೇವರು ಕರ್ಣನನ್ನು ಹಿಡಿಯಲಿಕ್ಕೋ ಸಂಹರಿಸಲಿಕ್ಕೋ ಅವನ ರಥವನ್ನೋ ಧನುಸ್ಸನ್ನೋ ಅಪಹರಿಸಲಿಕ್ಕೆ ಇಚ್ಛಿಸಲಿಲ್ಲ. ಭಕ್ತಿಯಿಂದ ಪರಶುರಾಮದೇವರ ಮಾತನ್ನು ಬಹುಮಾನಮಾಡುವವರಾಗಿಯೂ ಅರ್ಜುನನ ಪ್ರತಿಜ್ಞೆಯನ್ನು ಸತ್ಯವನ್ನು ಮಾಡುವುದಕ್ಕಾಗಿಯೂ ವಿಷ್ಣುಭಕ್ತನಾದ ಕಾರಣ ಕರ್ಣನನ್ನು ಬಹುಮಾನ ಮಾಡುವುದಕ್ಕಾಗಿಯೂ ಕರ್ಣನನ್ನು ಭೀಮಸೇನದೇವರು ಸಂಹರಿಸಲಿಲ್ಲ. ಕರ್ಣನಿಗೆ ಬಾಣಬಿಡಲಿಕ್ಕೆ ಅವಕಾಶ ಕೊಡುವುದಕ್ಕಾಗಿ ಭೀಮಸೇನದೇವರು ದೂರನಿಂತರು. ಆಗ ಕರ್ಣನು ಭೀಮಸೇನದೇವರು ಪರಶುರಾಮದೇವರ ಮಾತಿಗೆ ಗೌರವವನ್ನು ಕೊಡುತ್ತಿರುವರೆಂದು ತಿಳಿದವನಾಗಿ ಬಾಣಗಳಿಂದ ಬಡೆದನು. ಭೀಮಸೇನದೇವರು ಸತ್ತ ಆನೆಗಳನ್ನು ಕರ್ಣನ ಮೇಲೆ ಬಿಸಾಡಿದರು ಕರ್ಣನು ಅವುಗಳನ್ನು ಬಾಣಗಳಿಂದ ಕತ್ತರಿಸಿದನು. ತರುವಾಯ ಕರ್ಣನು ಆನೆಯ ಹೆಣಗಳನ್ನು ಬಿಸಾಡುತ್ತಿದ್ದ ಭೀಮಸೇನದೇವರ ಬಳಿಗೆ ಬಂದು ಅವರನ್ನು ಧನುಸ್ಸಿನಿಂದ ಸ್ಪರ್ಶಮಾಡಿ ಅವರ ಪರಾಕ್ರಮವನ್ನು ತಿಳಿದವರಾಗಿದ್ದರೂ ದುರ್ಯೋಧನನ ಪ್ರೀತಿಗಾಗಿ ದುಷ್ಟಮಾತುಗಳನ್ನು ಆಡಿದನು. ಆಗ ಅರ್ಜುನನು ಬಂದು ಕರ್ಣನನ್ನು ಬಡೆದನು. ಕರ್ಣನು ಅಲ್ಲಿಂದ ಹೊರಟುಹೋದನು. ಕರ್ಣನು ಕುಂತೀದೇವಿಯೊಡನೆ ಅರ್ಜುನನನ್ನು ಬಿಟ್ಟು ಇನ್ನೊಬ್ಬರನ್ನು ಸಂಹರಿಸಲಾರೆನೆಂದು ಪ್ರತಿಜ್ಞೆಯನ್ನು ಮಾಡಿದ್ದ ಕಾರಣ ಇಂದ್ರದೇವರು ಕೊಟ್ಟಿದ್ದ ಶಕ್ತಿಯನ್ನು ಭೀಮಸೇನದೇವರಲ್ಲಿ ಬಿಟ್ಟಿಲ್ಲ. ಬಿಟ್ಟಿದ್ದರೂ ಭೀಮಸೇನದೇವರಿಗೆ ಒಂದೂ ಆಗುತ್ತಿದ್ದಿಲ್ಲ. ತರುವಾಯ

ಕರ್ಣನು ಬೇರೊಂದು ರಥದಲ್ಲಿ ಕೂತುಕೊಂಡು ಅರ್ಜುನನ ಬಳಿಗೆ ಹೋದನು. ಆಗ ಕರ್ಣನ ರಥದಲ್ಲಿ ಇಂದ್ರದೇವರು ಕೊಟ್ಟಿದ್ದ ಶಕ್ತಿಯನ್ನು ನೋಡಿ ಕೃಷ್ಣ ಪರಮಾತ್ಮನು ಅರ್ಜುನನ್ನು ಯುದ್ಧಕ್ಕೆ ಹೋಗಲಿಕ್ಕೆ ಬಿಡದೆ ಸಾತ್ಯಕಿಗೆ ತನ್ನ ರಥವನ್ನೂ, ಬಲವನ್ನೂ ಕೊಟ್ಟು ಕರ್ಣನೊಡನೆ ಯುದ್ಧಕ್ಕೆ ಕಳುಹಿಸಿದನು. ಆಗ ಕರ್ಣನು ತನ್ನ ಬಳಿಗೆ ಅರ್ಜುನನು ಅಶಕ್ತನಾದ ತನ್ನ ಶಿಷ್ಯನನ್ನು ಕೊಟ್ಟು ಕಳುಹಿಸಿದನೆಂದು ಸಾತ್ಯಕಿಯನ್ನು ನೋಡುತ್ತಾ ಸ್ಪರ್ಧೆಯಿಂದ ಯುದ್ಧಮಾಡಿದನು. ಆಕಾರಣದಿಂದಲೂ ಕೃಷ್ಣ ಪರಮಾತ್ಮನ ರಥದಲ್ಲಿ ಕೂತಿದ್ದ ಕಾರಣವೂ ಕರ್ಣನ ರಥವನ್ನು ಪುಡಿಮಾಡಿದನು.

ತರುವಾಯ ಕರ್ಣನು ಭೀಮಸೇನದೇವರು ತನ್ನನ್ನು ತೂಬರ ಎಂದು ಹೇಳಿದವರನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿದ್ದರು. ಅದಕ್ಕಾಗಿ ಅವರಿಗೆ ಕೋಪ ಬರಬೇಕೆಂದು ದುರ್ಯೋಧನನ ಪ್ರೀತಿಗಾಗಿ ಕರ್ಣನು ಹಾಗೆ ಹೇಳಿದನು. ತೂಬರ ಎಂದರೆ ಮೀಸೆಯಿಲ್ಲದವನೆಂದು ಹೆಸರು. ಭೀಮಸೇನ ದೇವರಿಗೆ ಸ್ಪಷ್ಟವಾಗಿಯೇ ಮೀಸೆಯು ಕಾಣಿಸುವುದು. ಆದರೂ ಕರ್ಣನು ಭೀಮಸೇನದೇವರಿಗೆ ಕೋಪವನ್ನು ಉಂಟುಮಾಡುವುದಕ್ಕಾಗಿಯೇ ಹಾಗೆ ಹೇಳಿ ದನು. ಆಗ ಭೀಮಸೇನದೇವರು ಅರ್ಜುನನೊಡನೆ ನನ್ನ ಪ್ರತಿಜ್ಞೆಯಂತೆ ಕರ್ಣನನ್ನು ನಾನು ಸಂಹಾರ ಮಾಡಬೇಕಾಯಿತು. ನೀನೂ ಇವನನ್ನು ಕೊಲ್ಲುವೆನೆಂದು ಪ್ರತಿಜ್ಞೆ ಮಾಡಿರುವಿ. ಆದುದರಿಂದ ನೀನೋ ನಾನೋ ಇವನನ್ನು ಕೊಲ್ಲಬೇಕಾಗಿದೆ' ಎಂದು ಹೇಳಿದರು. ಅದಕ್ಕೆ ಅರ್ಜುನನು 'ನಾನೇ ಕರ್ಣನನ್ನು ಕೊಲ್ಲುವೆನು. ನಾನು ನಿಮ್ಮ ಶಿಷ್ಯನಾದ ಪ್ರಯುಕ್ತ ನಾನು ಮಾಡಿದರೆ ನೀವು ಮಾಡಿದಂತೆ ಆಗುವುದು. ಆದರೆ ನೀವು ಮಾಡಿದರೆ ನಾನು ಮಾಡಿದಂತೆ ಆಗಲಾರದು. ಆದುದರಿಂದ ನಾನೇ ಸಂಹರಿಸುವೆನು' ಎಂದು ಹೇಳಿ ಕರ್ಣನೊಡನೆ 'ಕೃಷ್ಣಪರಮಾತ್ಮನು ಕೇಳುವಂತೆ ಭೀಮಸೇನರಿಗೆ ಕಠಿಣವಾದ ಮಾತನ್ನು ಹೇಳಿದಿ. ನೀವೆಲ್ಲರೂ ಸೇರಿ ಅಭಿಮನ್ಯುವನ್ನು ಸಂಹರಿಸಿದಿರಿ. ಅದರಿಂದ ನಿನ್ನನ್ನು ನಾನು ಸಂಹರಿಸುವೆನು. ನಿನ್ನ ಮುಂಭಾಗದಲ್ಲಿಯೇ ನಿನ್ನ ಮಗನನ್ನು ಸಂಹರಿಸುವೆನು' ಎಂದು ಹೇಳಿದನು. ಆಗ ಕರ್ಣನು ಮತ್ತೊಂದು ರಥವನ್ನು ಏರಿ ಜಯದ್ರಥನನ್ನು ರಕ್ಷಿಸಲಿಕ್ಕೆ ಹೋದನು.

ತರುವಾಯ ಅರ್ಜುನನು ಜಯದ್ರಥನನ್ನು ಸಂಹರಿಸಿದ ಮೇಲೆ ಭಯಂಕರವಾದ ಯುದ್ಧವು ನಡೆಯಿತು. ಆಗ ದುರ್ಯೋಧನನು ಕರ್ಣನೊಡನೆ ಭೀಮನನ್ನು ಸಂಹರಿಸು ಎಂದು ಹೇಳಿದನು. ಆಗ ಕರ್ಣನು 'ರಾಜನೇ! ಇಂದ್ರಾದಿದೇವತೆಗಳು ಬಂದರೂ ಭೀಮನನ್ನು ಸಂಹರಿಸಲಿಕ್ಕೆ ಆಗಲಾರದು. ನಾನು ಯುದ್ಧದಲ್ಲಿ ಅವನಿಂದ

ಅತ್ಯಂತ ಪೀಡಿತನಾಗಿ ದೈವೇಚ್ಛೆಯಿಂದ ಬದುಕಿರುವೆನು. ಆದುದರಿಂದ ನಮ್ಮ ಶಕ್ತಿಯನ್ನು ಅನುಸರಿಸಿ ಯುದ್ಧವನ್ನು ಮಾಡುವೆವು. ಯುದ್ಧದಲ್ಲಿ ಜಯವಾಗುವುದು ದೈವಾಧೀನವಾದದ್ದು ಎಂದು ಹೇಳಿದನು.

ತರುವಾಯ ರಾತ್ರಿಯುದ್ಧವು ನಡೆಯಿತು. ಭೀಮಸೇನದೇವರು ಸೇನೆಯನ್ನು ಓಡಿಸುತ್ತಿದ್ದರು. ಆಗ ಕರ್ಣನು ಅವರೊಡನೆ ಯುದ್ಧಕ್ಕೆ ಬಂದನು. ಆಗ ಭೀಮಸೇನದೇವರು ಕರ್ಣನ ಮುಂಭಾಗದಲ್ಲಿ ದುರ್ಯೋಧನನ ತಮ್ಮಂದಿರಾದ ಕರ್ಣ ದುಷ್ಕರ್ಣ ಎಂಬ ಇಬ್ಬರನ್ನೂ ಒಂದೇ ಕ್ಷಣದಲ್ಲಿ ಕಾಲಿನಿಂದ ಚೆನ್ನಾಗಿ ಒದೆದರು. ಆಗ ಅವರು ರಥ ಕುದುರೆ ಧ್ವಜ ಸೂತರಿಂದ ಸಹಿತರಾಗಿ ಪುಡಿಪುಡಿಯಾದರು. 'ಪೂರ್ವದಲ್ಲಿ ನಾನು ಆಯುಧರಹಿತನಾಗಿದ್ದೆನೆಂದು ನನಗೆ ಕಠಿಣವಾದ ಮಾತನ್ನು ಆಡಿದಿ. ಆಯುಧವಿಲ್ಲದೆಯೇ ನಾನು ನಿನ್ನನ್ನು ಕಾಲಿನಿಂದ ಮೆಟ್ಟಿ ಕೊಲ್ಲಲಿಕ್ಕೆ ಸಮರ್ಥನಾಗಿದ್ದೆನು' ಎಂದು ತಿಳಿಸಿದರು. ಮುಷ್ಟಿಯಿಂದಲೂ ಕೊಲ್ಲಲಿಕ್ಕೆ ಸಮರ್ಥನಾಗಿದ್ದೆನು ಎಂದು ತೋರಿಸುತ್ತಾ ಕಾಲಿಂಗರಾಜನನ್ನು ಮುಷ್ಟಿಯಿಂದ ಬಡೆದು ಕೊಂದು ಹಾಕಿದರು. ಪೂರ್ವದಲ್ಲಿ ಭೀಷ್ಮಾಚಾರ್ಯರು ಸೇನಾಧಿಪತ್ಯವನ್ನು ಮಾಡುತ್ತಿರುವಾಗ ರಾತ್ರಿಯಲ್ಲಿ ಭೀಮಸೇನದೇವರು ಕರ್ಣನ ತಮ್ಮಿಂದಿರಾದ ಧ್ರುವ ಮೊದಲಾದವರನ್ನು ಬಹುಜನರನ್ನು ರಾತ್ರಿಯಲ್ಲಿ ಸಂಹರಿಸಿದ್ದರು. ಭೀಮಸೇನದೇವರು ಮಾಡಿದ ಸಂಜ್ಞೆಯನ್ನು ತಿಳಿದು 'ನಾನು ದಿವ್ಯವಾದ ಶಕ್ತಿಯನ್ನು ಬಿಡಲಿಲ್ಲ. ಆದರಿಂದ ಜೀವಿಸಿರುವಿ' ಎಂದು ತಿಳಿಸುವುದಕ್ಕಾಗಿ ಒಂದು ಸಾಮಾನ್ಯವಾದ ಶಕ್ತಿಯನ್ನು ಬಿಟ್ಟನು. ಅದನ್ನು ತಿಳಿದು ಭೀಮಸೇನದೇವರು ಆಕ್ಷಣದಲ್ಲಿ ಮೇಲೆ ಹಾರಿ ಆಶಕ್ತಿಯನ್ನು ಹಿಡಿದು ಕರ್ಣನ ಮೇಲೆಯೇ ಹಾಕಿದರು. 'ನೀನು ಆ ಶಕ್ತಿಯನ್ನು ಬಿಟ್ಟಿದ್ದರೆ ಅದು ನಿನ್ನನ್ನೇ ಸಂಹರಿಸುತ್ತಿತ್ತು' ಎಂದು ತಿಳಿಸಿದರು.

ಆದರೆ ಕರ್ಣನನ್ನು ಕೊಲ್ಲುವ ಅಭಿಪ್ರಾಯವಿಲ್ಲದೆ ಭೀಮಸೇನದೇವರು ಅದನ್ನು ಕರ್ಣನ ಬಲಭುಜಕ್ಕೆ ಬಿಟ್ಟಕಾರಣ ಆ ಶಕ್ತಿಯು ಕರ್ಣನ ಬಲಭುಜವನ್ನು ಸೀಳಿ ಭೂಮಿಯನ್ನು ಭೇದಿಸಿಕೊಂಡು ಹೋಯಿತು. ಆಮೇಲೆ ಭೀಮಸೇನದೇವರು ಕರ್ಣನ ಮುಂಭಾಗದಲ್ಲಿ ಸೇನೆಯನ್ನು ಓಡಿಸಿದರು. ಭೀಮಸೇನದೇವರನ್ನು ಕರ್ಣನು ಬಾಣಗಳಿಂದ ತಡೆದನು. ಆಗ ಭೀಮಸೇನದೇವರು ಕರ್ಣನ ರಥದ ಮೇಲೆ ವೇಗದಿಂದ ಗದೆಯನ್ನು ಹಾಕಿದರು. ಆಗ ಕರ್ಣನು ಆ ಗದೆಯನ್ನು ತಡೆಯುವುದಕ್ಕಾಗಿ ಸ್ಥೂಣಾಕರ್ಣಾಸ್ತ್ರವನ್ನು ಬಿಟ್ಟನು. ಆ ಅಸ್ತ್ರದಿಂದ ತಡೆಯಲ್ಪಟ್ಟು ಗದೆಯು ಭೀಮಸೇನದೇವರ ಬಳಿಗೆ ಬಂದುಬಿಟ್ಟಿತು. ಭೀಮಸೇನದೇವರು

ಗದೆಯನ್ನು ಹಿಡಿದುಕೊಂಡು ಕರ್ಣನ ರಥದ ಕೂಬರವನ್ನು ಪುಡಿಮಾಡಿದರು. 'ಹೀಗೆಯೇ ನಿನ್ನನ್ನು ಪುಡಿಮಾಡಲಿಕ್ಕೆ ಶಕ್ತನಾಗಿರುವೆನು. ನನ್ನ ಇಚ್ಛೆಯಿಂದ ನೀನು ಬದುಕಿರುವಿ' ಎಂದು ಸೂಚನೆಯನ್ನು ಮಾಡಿದರು. ಆಮೇಲೆ ತನ್ನ ರಥಕ್ಕೆ ಬಂದು ಕರ್ಣನ ಮುಂಭಾಗದಲ್ಲಿ ಬಹುಸೇನೆಯನ್ನು ಸಂಹರಿಸಿದರು. ಕರ್ಣನು ಭೀಸೇನದೇವರನ್ನು ಬಿಟ್ಟು ಸಹದೇವನ ಬಳಿಗೆ ಹೋದನು. ಅವನ ರಥವನ್ನು ಪುಡಿಮಾಡಿ ಅವನ ಕುತ್ತಿಗೆಯಲ್ಲಿ ಧನುಸ್ಸನ್ನು ಹಾಕಿ ಸೆಳೆದು ಬಹಳವಾಗಿ ನಿಂದಿಸಿದನು. ಆದರೆ ಕುಂತೀದೇವಿಗೆ ತಾನು ಕೊಟ್ಟ ಮಾತನ್ನು ಸ್ಮರಿಸಿಕೊಂಡು ಅವನನ್ನು ಕೊಲ್ಲಲಿಲ್ಲ. ಆಮೇಲೆ ಅವನನ್ನು ಬಿಟ್ಟು ಪಾಂಡವರ ಸೇನೆಗೆ ಯುದ್ಧಕ್ಕೆ ಹೋದನು.

ತರುವಾಯ ರಾತ್ರಿಯಲ್ಲಿಯೇ ಕರ್ಣನು ಅರ್ಜುನನೊಡನೆ ಯುದ್ಧಕ್ಕೆ ಬಂದದ್ದನ್ನು ನೋಡಿ ಕೃಷ್ಣಪರಮಾತ್ಮನು ಅರ್ಜುನನ ರಕ್ಷೆಗಾಗಿ ಇಂದ್ರದೇವರ ಶಕ್ತಿಯನ್ನು ಘಟೋತ್ಕಚನಲ್ಲಿ ಬಿಡಿಸುವುದಕ್ಕಾಗಿ ಆಗ ಕರ್ಣನೊಡನೆ ಯುದ್ಧಕ್ಕಾಗಿ ಘಟೋತ್ಕಚನನ್ನು ಕಳುಹಿಸಿದನು. ಘಟೋತ್ಕಚನು ಕರ್ಣನನ್ನು ಕೂಗಿ ಯುದ್ಧ ಮಾಡಿದನು. ಮತ್ತು ದುರ್ಯೋಧನ ದ್ರೋಣಾದಿಗಳೊಡನೆಯೂ ಯುದ್ಧವನ್ನು ಮಾಡಿದನು. ಬಲಿಷ್ಠನಾದ ಘಟೋತ್ಕಚನಿಂದ ಪೀಡಿತರಾದ ಅವರೆಲ್ಲರೂ ಕರ್ಣನನ್ನು ಮುಂದೆ ಮಾಡಿಕೊಂಡು ಯುದ್ಧ ಮಾಡಿದರು. ಮಹಾಸ್ತ್ರಜ್ಞಾನಿಯಾದ ಕರ್ಣನು ತನ್ನ ಪರಾಕ್ರಮದಿಂದ ಶ್ರಮವಿಲ್ಲದೆ ಯುದ್ಧ ಮಾಡುತ್ತಿದ್ದನು. ತರುವಾಯ ಬಲಿಷ್ಠನಾದ ಘಟೋತ್ಕಚನು ಅಲಂಬಲ, ಅಲಾಯುಧ ಎಂಬ ರಾಕ್ಷಸರ ತಲೆಯನ್ನು ಕಡೆದು ದುರ್ಯೋಧನನ ಎದೆಯ ಮೇಲೆ ಬಿಸಾಡಿ ಎಲ್ಲರನ್ನೂ ಪೀಡಿಸಲು ಎಲ್ಲರೂ ಕರ್ಣನನ್ನು ಘಟೋತ್ಕಚನ ಮೇಲೆ ಶಕ್ತಿಯನ್ನು ಬಿಡಲಿಕ್ಕೆ ಪ್ರೇರಿಸಿದರು. ತರುವಾಯ ಕರ್ಣನು ಘಟೋತ್ಕಚನಿಂದ ಪ್ರೇರಿತರಾದ ಎಲ್ಲರಿಂದಲೂ ಪ್ರೇರಿತನಾಗಿ ತಾನೂ ಅವನಿಂದ ಪ್ರೇರಿತನಾಗಿ ಇಂದ್ರದೇವರು ಕೊಟ್ಟಿದ್ದ ಅರ್ಜುನನಿಗೆ ಬಿಡಬೇಕೆಂದು ಇಟ್ಟುಕೊಂಡಿದ್ದ ಶಕ್ತಿಯನ್ನು ಆಕಾಶದಲ್ಲಿ ಇದ್ದ ಘಟೋತ್ಕಚನ ಮೇಲೆ ಬಿಟ್ಟನು. ಅದರಿಂದ ಘಟೋತ್ಕಚನು ಎದೆಯು ಸೀಳಿಹೋಗಿ ಮೃತನಾದನು.

ತರುವಾಯ ದ್ರೋಣಾಚಾರ್ಯರು ಮೃತರಾದ ಮೇಲೆ ದುರ್ಯೋಧನನು ಕರ್ಣನನ್ನು ಸೇನಾಪತಿಯನ್ನಾಗಿ ಮಾಡಿದನು. ಕರ್ಣನು ಯುದ್ಧಕ್ಕೆ ಹೋದನು. ನಕುಲನೂ ಕರ್ಣನೂ ಅತ್ಯಂತವಾಗಿ ಬಾಣಗಳಿಂದ ಬಡೆದುಕೊಂಡರು. ಕರ್ಣನು ನಕುಲನ ರಥವನ್ನು ಪುಡಿಮಾಡಿ ಓಡುತ್ತಿದ್ದ ಅವನ ಕುತ್ತಿಗೆಯಲ್ಲಿ ಧನುಸ್ಸನ್ನು ಹಾಕಿ ಸೆಳೆದು ನಾನಾ ಕ್ರೂರಮಾತುಗಳನ್ನು ಆಡಿದನು. ಕುಂತಿಯ ಮಾತಿನ ಗೌರವದಿಂದ

ಅವನನ್ನು ಸಂಹರಿಸಲಿಲ್ಲ. ಆಮೇಲೆ ಅವನನ್ನು ಬಿಟ್ಟು ಇತರರ ಹತ್ತಿರ ಯುದ್ಧಕ್ಕೆ ಹೋದನು. ತರುವಾಯ ಸೈನ್ಯವನ್ನು ಓಡಿಸುತ್ತಿದ್ದ ಕರ್ಣನನ್ನು ಎದುರಿಸಿಕೊಂಡು ಅರ್ಜುನನು ಬಂದನು. ಒಂದೇ ಕ್ಷಣದಲ್ಲಿ ಅರ್ಜುನನು ಕರ್ಣನ ರಥವನ್ನು ಪುಡಿಮಾಡಿದನು. ತರುವಾಯ ಕರ್ಣನು ಸೈನ್ಯವನ್ನು ಅಪಹಾರ ಮಾಡಿಕೊಂಡು ಹೋದನು. ತರುವಾಯ ಅರ್ಜುನನಿಂದ ಯುದ್ಧದಲ್ಲಿ ಸೋತುಹೋದ ಕರ್ಣನು ದುರ್ಯೋಧನನ ಕೈಯಲ್ಲಿ ಹಿಡಿದುಕೊಂಡು 'ನಾನು ಯುದ್ಧದಲ್ಲಿ ಎಲ್ಲಿಯೋ ಮನಸ್ಸುಳ್ಳವನಾಗಿರುವಾಗ ಅರ್ಜುನನು ಜಯಿಸಿಬಿಟ್ಟನು. ನನಗೆ ಪರಶುರಾಮ ದೇವರು ಕೊಟ್ಟಿರುವ ಅಭೇದ್ಯವಾದ ರಥವೂ ಧನುಸ್ಸೂ ಇರುವುದು. ಆದರೆ ಅರ್ಜುನನಿಗೆ ಕೃಷ್ಣನಿರುವಂತೆ ನನಗೆ ಸರಿಯಾದ ಸಾರಥಿಯಿಲ್ಲ. ನನಗೆ ಶಲ್ಯನು ಸಾರಥಿಯಾದರೆ ನಿನ್ನ ಶತ್ರುವನ್ನು ಜಯಿಸುವೆನು' ಎಂದು ದುರ್ಯೋಧನನೊಡನೆ ಹೇಳಿದನು. ದುರ್ಯೋಧನನು ಶಲ್ಯನೊಡನೆ ಅನೇಕ ವಿಧವಾಗಿ ಹೇಳಿ ಸಾರಥ್ಯವನ್ನು ಮಾಡುವಂತೆ ಒಪ್ಪಿಸಿದನು.

ತರುವಾಯ ಕರ್ಣನು ಶಲ್ಯನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧ ರಂಗಕ್ಕೆ ಹೋಗುವವನಾಗಿ ದರ್ಪದಿಂದ ನನಗೆ ಯಾರು ಅರ್ಜುನನನ್ನು ತೋರಿಸುವನೋ ಅವನಿಗೆ ನಾನು ಪ್ರೀತನಾಗಿ ಬೇಕಾದಷ್ಟು ಹಣವನ್ನು ಕೊಡುವೆನು ಎಂದು ಪುನಃಪುನಃ ಹೇಳಿದನು. ಅದನ್ನು ಕೇಳಿ ಶಲ್ಯನು ನಗುತ್ತಾ 'ಯಾವ ಅರ್ಜುನನಿಂದ ನಿವಾತಕವಚರು ಸಂಹರಿಸಲ್ಪಟ್ಟರೋ, ಖಾಂಡವವನವು ಸುಡಲ್ಪಟ್ಟಿತೋ ಅಂತಹ ಅರ್ಜುನನನ್ನು ಯಾವ ಮನುಷ್ಯನು ಜಯಿಸುವನು? ಗೋಗ್ರಹಣ ಕಾಲದಲ್ಲಿ ಅವನ ಪರಾಕ್ರಮವನ್ನು ನೋಡಿಲ್ಲವೇ? ಕಾಗೆಯಂತೆಯೂ, ನರಿಯಂತೆಯೂ ಇರುವ ನೀನು ಹಂಸಪಕ್ಷಿಯಂತೆಯೂ ಸಿಂಹದಂತೆಯೂ ಇರುವ ಅರ್ಜುನನೊಡನೆ ಯುದ್ಧಕ್ಕೆ ಹೋಗಬೇಡ. ಹೋದರೆ ಸತ್ತು ಯಮಲೋಕಕ್ಕೆ ಹೋಗುವಿ' ಎಂದು ಹೇಳಿದನು. ಅದನ್ನು ಕೇಳಿ ಕರ್ಣನು ಮದ್ರದೇಶದವರೇ ತುಂಬಾ ಕೆಟ್ಟವರು. ಅಯೋಗ್ಯರು ಎಂದು ನಿಂದಿಸಿದರು. ಆ ಶಲ್ಯನು ಎಲ್ಲಾ ದೇಶ ಗಳಲ್ಲಿಯೂ ಉತ್ತಮರೂ ಮಧ್ಯಮರೂ ಅಧಮರೂ ಆದ ಜನರು ಇದ್ದೇ ಇರುವರು ಎಂದು ಹೇಳಿ ಅರ್ಜುನನಿಗೆ ಹಿತಮಾಡುವ ಇಚ್ಛೆಯಿಂದ ಸಾರಥ್ಯವನ್ನು ಮಾಡಿದನು.

ಕರ್ಣನು ಯುದ್ಧಮಾಡುತ್ತಾ ಸೈನ್ಯವನ್ನು ಮರ್ದನಮಾಡುತ್ತಾ ಧರ್ಮರಾಜನ ಬಳಿಗೆ ಹೋಗಿ ಅವನ ರಥವನ್ನು ಪುಡಿಮಾಡಿ ಅವನ ಕುತ್ತಿಗೆಯಲ್ಲಿ ಧನುಸ್ಸನ್ನು ಹಾಕಿ ಸೆಳೆದು ಗಟ್ಟಿಯಾಗಿ ಕೆಟ್ಟ ಮಾತುಗಳನ್ನು ಆಡಿದನು. ಅದನ್ನು ನೋಡಿ

ಭೀಮಸೇನದೇವರು ದುರ್ಯೋಧನನ ರಥವನ್ನು ಪುಡಿಮಾಡಿ ಧನುಸ್ಸನ್ನು ಮುರಿದು ಚೆನ್ನಾಗಿ ಮರ್ದನಮಾಡಿದರು. ಪ್ರಾಣಸಂಶಯವನ್ನು ಹೊಂದಿದ ದುರ್ಯೋಧನನನ್ನು ನೋಡಿ ಶಲ್ಯನು ಕರ್ಣನಿಗೆ ತೋರಿಸಿ ಯಾರಿಗೋಸ್ಕರ ಈ ಯುದ್ಧವು ನಡೆಯುತ್ತಿರುವುದೋ ನೀನೂ ನಾನು ಇರುವೆವೋ ಆ ದುರ್ಯೋಧನನು ಯಮಲೋಕಕ್ಕೆ ಹೋಗಲಿರುವನು. ಅವನನ್ನು ಭೀಮನಿಂದ ಬಿಡಿಸು. ಧರ್ಮರಾಜನನ್ನು ಪೀಡಿಸಿ ಏನು ಪ್ರಯೋಜನವಿದೆ?' ಎಂದು ಹೇಳಿದನು. ಅದನ್ನು ಕೇಳಿ ಕರ್ಣನು ಧರ್ಮರಾಜನನ್ನು ಬಿಟ್ಟು ದುರ್ಯೋಧನನನ್ನು ಬಿಡಿಸುವುದಕ್ಕಾಗಿ ಭೀಮಸೇನದೇವರ ಬಳಿಗೆ ಹೋದನು. ಆಗ ಭೀಮಸೇನದೇವರು ಕೋಪದಿಂದ ಸುಡುವಂತೆ ಕರ್ಣನನ್ನು ನೋಡುತ್ತಾ ಧರ್ಮರಾಜನನ್ನು ನೋಡಲಿಕ್ಕೆ ಸಾತ್ಯಕಿ ಧೃಷ್ಟದ್ಯುಮ್ನರೊಡನೆ ಹೇಳಿ ನರಸಿಂಹದೇವರಂತೆ ರೂಪವುಳ್ಳವರಂತೆ ಕರ್ಣನನ್ನು ಎದುರಿಸಿಕೊಂಡು ಹೋದರು. ಅವರ ವೇಗದಿಂದ ಭೂಮಿಯೇ ನಡುಗಿ ಹೋಯಿತು. ಸೇನೆಯು ಓಡಿಹೋಯಿತು. ಕರ್ಣನಿಗೆ ವಜ್ರದಂತೆ ಇರುವ ಬಾಣವನ್ನು ಬಿಟ್ಟರು. ಅದರಿಂದ ಕರ್ಣನು ಸತ್ತವನಂತೆ ಬಿದ್ದುಬಿಟ್ಟನು. ಆಗ ಭೀಮಸೇನದೇವರು ಖಡ್ಗವನ್ನು ಹಿಡಿದುಕೊಂಡು ಕಾಲುನಡೆಯಿಂದ ಭಗವಂತನ ನಿಂದೆಯನ್ನು ಮಾಡಿದ್ದ ಕರ್ಣನ ನಾಲಿಗೆಯನ್ನು ಕತ್ತರಿಸುವೆನೆಂದು ಹೋದನು. ಹತ್ತಿರ ಬರುವ ಭೀಮಸೇನದೇವರ ಅಭಿಪ್ರಾಯವನ್ನು ತಿಳಿದು ಶಲ್ಯನು 'ಅರ್ಜುನನ ಪ್ರತಿಜ್ಞೆಯನ್ನು ವ್ಯರ್ಥ ಮಾಡಬಾರದು. ಅದರಿಂದ ಕರ್ಣನ ನಾಲಿಗೆಯನ್ನು ಕತ್ತರಿಸಬಾರದು' ಎಂದು ಹೇಳಿ ಎಲ್ಲರೂ ನೋಡುವಂತೆ ಕರ್ಣನ ರಥವನ್ನು ಭೀಮಸೇನದೇವರ ಎದುರಿನಿಂದ ಓಡಿಸಿದನು.

ತರುವಾಯ ಒಂದು ಸಮಯದಲ್ಲಿ ಕರ್ಣನು ಯುದ್ಧಕ್ಕೆ ಬಂದಿರುವುದನ್ನು ನೋಡಿ ಭೀಮಸೇನದೇವರು ವೇಗದಿಂದ ಅವನನ್ನು ಎದುರಿಸಿಕೊಂಡು ಹೋದರು. ಅವನ ಎದುರಲ್ಲಿಯೇ ಒಂದೇ ಕ್ಷಣದಲ್ಲಿ ದುರ್ಯೋಧನನ ರಥವನ್ನು ಪುಡಿ ಮಾಡಿದರು. ಕರ್ಣನನ್ನು ತಡೆದು ಬಾಣಗಳಿಂದ ಕರ್ಣನ ಮಗನಾದ ಸುಷೇಣನ ತಲೆಯನ್ನು ಕತ್ತರಿಸಿದನು. ಪೂರ್ವದಲ್ಲಿ ಭೀಮಸೇನದೇವರಿಂದಲೇ ಸತ್ಯಸೇನ ಎಂಬ ಮಗನು ಮೃತನಾದಂ ಸುಷೇಣನೂ ಕರ್ಣನ ಮುಂಭಾಗದಲ್ಲಿ ಸತ್ತುಬಿದ್ದನು. ಹಾಗೆಯೇ ಪೂರ್ವದಲ್ಲಿ ರಾತ್ರಿಯುದ್ಧದಲ್ಲಿ ಕರ್ಣನ ಮುಂಭಾಗದಲ್ಲಿ ಕರ್ಣನ ತಮ್ಮಂದಿರನ್ನು ಸಂಹರಿಸಿದ್ದರು. ಮಗನು ಮೃತನಾದದ್ದನ್ನು ನೋಡಿ ಕರ್ಣನು ಕೋಪವುಳ್ಳವನಾಗಿ ಭೀಮಸೇನದೇವರನ್ನು ಬಿಟ್ಟು ಸೇನೆಯನ್ನು ಮರ್ದನ

ಮಾಡುತ್ತಾ ಧರ್ಮರಾಜನ ಬಳಿಗೆ ಹೋದನು. ಆಗ ಸಾತ್ಯಕಿಯೂ ಧೃಷ್ಟದ್ಯುಮ್ನನೂ ದ್ರೌಪದೀಪುತ್ರರೂ ಪಾಂಚಾಲದೇಶದವರೂ ಕರ್ಣನನ್ನು ತಡೆದರು. ಕರ್ಣನು ಅವರೆಲ್ಲರ ರಥಗಳನ್ನು ಪುಡಿಮಾಡಿ ನಕುಲಸಹದೇವರಿಂದ ಸಹಿತನಾದ ಧರ್ಮರಾಜನ ಬಳಿಗೆ ಹೋದನು. ಧರ್ಮರಾಜನ ರಥವನ್ನು ಪುಡಿಮಾಡಿ ನಕುಲಸಹದೇವರ ಆಯುಧಗಳನ್ನು ಪುಡಿಮಾಡಿದನು. ಆಮೇಲೆ ಒಂದೇ ವಾಹನದಲ್ಲಿ ಕೂತುಕೊಂಡು ಬಂದ ಅವರನ್ನು ಬಾಣಗಳಿಂದ ಮರ್ದನ ಮಾಡಿದನು. ಕ್ರೂರಮಾತುಗಳನ್ನು ಆಡಿದನು. ಅದನ್ನು ನೋಡಿ ಭೀಮಸೇನದೇವರು ಅವರನ್ನು ಕರ್ಣನಿಂದ ಬಿಡಿಸುವುದಕ್ಕಾಗಿ ದುರ್ಯೋಧನನ ರಥವನ್ನು ಪುಡಿಮಾಡಿ ಅತಿತೀಕ್ಷ್ಣಬಾಣಗಳಿಂದ ಮರ್ಮಸ್ಥಳಗಳಲ್ಲಿ ಒಡೆದರು. ಅದನ್ನು ಶಲ್ಯನು ಕರ್ಣನಿಗೆ ತೋರಿಸಿದನು. ಆಗ ಕರ್ಣನು ಧರ್ಮರಾಜನನ್ನು ಬಿಟ್ಟು ಹೊರಟು ಹೋದನು. ಕರ್ಣನು ದುರ್ಯೋಧನನನ್ನು ಬಿಡಿಸಲಿಕ್ಕಾಗಿ ಹೋಗಲು ಧರ್ಮರಾಜನು ಮೆಲ್ಲನೆ ಶಿಬಿರಕ್ಕೆ ಹೋಗಿ ಮಲಗಿದನು.

ತರುವಾಯ ಭೀಮಸೇನದೇವರ ಆಶ್ರಯದಿಂದ ಪಾಂಚಾಲದೇಶದವರಿಂದ ಸಂಹರಿಸಲ್ಪಡುತ್ತಿದ್ದ ಸೈನ್ಯವನ್ನು ನೋಡಿ ಕರ್ಣನು ಕೋಪದಿಂದ ಜ್ವಲಿಸಿದನು. ಅವನು ಸರ್ವಾಸ್ತ್ರನಾಶಕನಾದ ಭಾರ್ಗವಸ್ತ್ರಾವನ್ನು ಭೀಮಸೇನದೇವರಿಂದ ಸಹಿತವಾದ ಪಾಂಡವ ಸೈನ್ಯದಲ್ಲಿ ಬಿಟ್ಟನು. ಆ ಅಸ್ತ್ರವು ಪರಶುರಾಮದೇವರ ಅನುಗ್ರಹದಿಂದ ಭೀಮಸೇನದೇವರನ್ನು ಬಿಟ್ಟುಬಿಟ್ಟಿತು. ಇತರಲೆಲ್ಲರೂ ಓಡಿಹೋದವರು ಆ ಅಸ್ತ್ರದಿಂದ ತಪ್ಪಿಸಿಕೊಂಡರು. ಆ ಅಸ್ತ್ರವು ಓಡಿಹೋಗುವವರನ್ನು ಕೊಲ್ಲುತ್ತಿರಲಿಲ್ಲ. ಆದರಿಂದ ಧೃಷ್ಟದ್ಯುಮ್ನನೂ ಪಾಂಚಾಲದೇಶದವರೂ ದ್ರೌಪದೀಪುತ್ರರೂ ಸಾತ್ಯಕಿಯೇ ಮೊದಲಾದವರೂ ಓಡಿಹೋಗಿ ತಪ್ಪಿಸಿಕೊಳ್ಳುವವರಾದರು. ಅರ್ಜುನನೂ ಪ್ರತ್ಯಸ್ತ್ರಹೀನವಾದ ಅಸ್ತ್ರವನ್ನು ನೋಡಿ ಕರ್ಣನ ಬಳಿಗೆ ಹೋಗದೆ ಶ್ರೀಭಗವಂತನೊಡನೆ 'ನಾನು ಕರ್ಣನನ್ನು ಬಿಟ್ಟು ಬೇರೆ ಸ್ಥಳಕ್ಕೆ ಹೋಗುವೆನು. ಇಲ್ಲದಿದ್ದರೆ ಈ ಅಸ್ತ್ರದಿಂದ ಬದುಕಲಿಕ್ಕೆ ಆಗಲಾರದು ಎಂದು ಹೇಳಿದನು. ಆಗ ಪರಮಾತ್ಮನು ಕರ್ಣನ ಬಳಿಗೆ ಹೋಗದೆ ಬೇರೆ ಮಾರ್ಗದಿಂದ ಭೀಮಸೇನದೇವರಿದ್ದಲ್ಲಿಗೆ ರಥವನ್ನು ಓಡಿಸಿದನು.

ತರುವಾಯ ಭೀಮಸೇನದೇವರು ಭಯಂಕರವಾದ ರೀತಿಯಿಂದ ದುಃಶಾಸನನನ್ನು ಸಂಹರಿಸುತ್ತಿರಲು ಅದನ್ನು ಕಂಡು ಕರ್ಣನ ಧನುಸ್ಸು ಕೈಯಿಂದ ಕೆಳಗೆ ಬಿದ್ದಿತು. ಭಯದಿಂದ ಕಣ್ಣುಗಳನ್ನು ಮುಚ್ಚಿದನು. ಆಗ ಶಲ್ಯನು ಧೈರ್ಯವನ್ನು

ಹೇಳಲು ಬಹುಕಷ್ಟದಿಂದ ಯುದ್ಧರಂಗದಲ್ಲಿ ಕರ್ಣನು ನಿಂತಿದ್ದನು.

ತರುವಾಯ ಕರ್ಣನ ಮಗನಾದ ವೃಷಸೇನನು ನಕುಲಾದಿಗಳನ್ನು ಜಯಿಸಿ ಕೊಂಡು ಬರಲು ಅರ್ಜುನನು ಅವನ ಕುತ್ತಿಗೆಯನ್ನು ಬಾಹುಗಳನ್ನು ತೊಡೆಗಳನ್ನು ಏಕಕಾಲದಲ್ಲಿ ಕತ್ತರಿಸಿದನು. ಆಗ ಕರ್ಣನು ಯುದ್ಧಕ್ಕೆ ಬಂದನು. ಸರ್ವಾಸ್ತ್ರಗಳನ್ನು ತಿಳಿದವರಾದ ಅವರಿಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಆಕಾಶ ಮಾರ್ಗದಲ್ಲಿ ದೇವಾಸುರರು ನಿಂತುಕೊಂಡು ಆ ಯುದ್ಧವನ್ನು ನೋಡುತ್ತಿದ್ದರು. ಅವರಿಗೆ ಕರ್ಣಾರ್ಜುನರ ವಿಷಯದಲ್ಲಿ ಬಹಳವಾಗಿ ವಿವಾದವು ನಡೆಯಿತು. ಆಗ ರುದ್ರದೇವರು ಬ್ರಹ್ಮದೇವರೊಡನೆ ಸುರಾಸುರರಿಗೆ ಭೀಮ ದುರ್ಯೋಧನರು ಆಶ್ರಯರಾಗಿರುವರು. ಅವರಿಬ್ಬರಿಗೆ ಅರ್ಜುನ ಕರ್ಣರು ಪ್ರಿಯರಾಗಿರುವರು. ಪ್ರಾಣಕ್ಕೆ ಸಮಾನರು. ಆದರಿಂದ ಕರ್ಣಾರ್ಜುನರಿಗಾಗಿ ಈಗ ದೇವಾಸುರರು ಯುದ್ಧ ಮಾಡಲಿಕ್ಕೆ ಇಚ್ಛಿಸಿದ್ದಾರೆ. ಆದರಿಂದ ಜಗತ್ತಿನ ನಾಶವೇ ಏರ್ಪಡುವುದು. ಆದರಿಂದ ಕರ್ಣನಿಗೂ ಅರ್ಜುನನಿಗೂ ಸಮವಾಗಿ ಯುದ್ಧವು ಆಗಲಿ' ಎಂದು ಹೇಳಿದರು. ಅದನ್ನು ಕೇಳಿ ಇಂದ್ರದೇವರು ಬ್ರಹ್ಮದೇವರಿಗೆ ನಮಸ್ಕರಿಸಿ 'ಯಾವ ಪಕ್ಷದಲ್ಲಿ ಕೃಷ್ಣಪರಮಾತ್ಮನಿರುವನೋ ಆ ಪಕ್ಷಕ್ಕೆ ಜಯವು ಏರ್ಪಡುವುದು. ಕೃಷ್ಣಪರಮಾತ್ಮನ ಇಚ್ಛೆಯು ವ್ಯರ್ಥವಾಗಲಾರದು. ಕೃಷ್ಣಪರಮಾತ್ಮನಿಗೆ ಅರ್ಜುನನಿಗೆ ಜಯವನ್ನು ಕೊಡುವ ಇಚ್ಛೆಯಿರುವುದು. ಆದುದರಿಂದ ಅರ್ಜುನನಿಗೆ ಜಯವಾಗಲಿ. ಕರ್ಣನಿಗೆ ನಾಶವಾಗಲಿ' ಎಂದು ಹೇಳಿದರು. ಆಗ ಬ್ರಹ್ಮದೇವರು ಹಾಗೆಯೇ ಆಗಲಿ ಎಂದು ಹೇಳಿ ದೇವತೆಗಳೊಡನೆಯೂ ಅಸುರರೊಡನೆಯೂ ನೀವು ಕರ್ಣಾ ರ್ಜುನರಿಗಾಗಿಯೋ ಭೀಮದುರ್ಯೋಧನರಿಗಾಗಿಯೋ ವಿರೋಧವನ್ನು ಮಾಡಿ ಕೊಳ್ಳಬೇಡಿರಿ. ಸುಮ್ಮನೆ ಯುದ್ಧವನ್ನು ನೋಡುತ್ತಾ ಇರುವವರಾಗಿರಿ ಎಂದು ಹೇಳಲು ಎಲ್ಲರೂ ಶಾಂತರಾಗಿ ಅವರಿಬ್ಬರ ಯುದ್ಧವನ್ನು ನೋಡುತ್ತಾ ಇರುವವ ರಾದರು. ಕರ್ಣನೂ ಅರ್ಜುನನೂ ಇಬ್ಬರೂ ಮಹಾಸ್ತ್ರ ಅಸ್ತ್ರಗಳನ್ನು ಸುರಿಸಿ ಕೊಂಡರು. ಭೀಮಸೇನದೇವರು ರಥದಲ್ಲಿ ಇದ್ದುಕೊಂಡು ತಮ್ಮನಾದ ಅರ್ಜುನ ನನ್ನು ರಕ್ಷಿಸಿದನು. ಸಾತ್ಯಕಿಧೃಷ್ಟದ್ಯುಮ್ನ ಮೊದಲಾದವರೂ ಗರ್ಜನ ಮಾಡುತ್ತಾ ಅರ್ಜುನನ ಸುತ್ತಲೂ ನಿಂತುಕೊಂಡರು. ದುರ್ಯೋಧನ ಅಶ್ವತ್ಥಾಮಾಚಾರ್ಯ ಮೊದಲಾದವರು ಸುತ್ತಲೂ ನಿಂತುಕೊಂಡು ಕರ್ಣನನ್ನು ರಕ್ಷಣೆಮಾಡಿದರು. ಆಗ ಕರ್ಣನು ಅರ್ಜುನನಿಗಿಂತ ಅಧಿಕವಾಗಿ ಅರ್ಜುನನಿಗೆ ಬಾಣವನ್ನು ಬಿಟ್ಟನು. ಅದನ್ನು ನೋಡಿ ಭೀಮಸೇನದೇವರು ಗರ್ಜನೆ ಮಾಡುತ್ತಾ ರೋಷದಿಂದ ಗದೆಯನ್ನು

ಹಿಡಿದರು. ನಾನು ಗದೆಯಿಂದ ಕರ್ಣನನ್ನು ಅಪ್ಪಳಿಸಿ ಬಿಡುವೆನು. ಅಥವಾ ನೀನು ಪರಾಕ್ರಮವುಳ್ಳವನಾಗಿ ಕರ್ಣನನ್ನು ಸಂಹರಿಸು' ಎಂದು ಹೇಳಿದರು. ಕೃಷ್ಣ ಪರಮಾತ್ಮನೂ ಆಗ ಅರ್ಜುನನಲ್ಲಿ ನರಾವೇಶವನ್ನು ಅಧಿಕವನ್ನಾಗಿ ಮಾಡಿದರು. ಆಗ ಅರ್ಜುನನು ಹೆಚ್ಚಾದ ಪರಾಕ್ರಮವುಳ್ಳವನಾಗಿ ದುರ್ಯೋಧನ, ಅಶ್ವತ್ಥಾಮ, ಕೃಪ, ಕೃತವರ್ಮರನ್ನು ಬಾಣಗಳಿಂದ ರಥಹೀನರನ್ನಾಗಿ ಮಾಡಿದನು. ಅವರನ್ನು ಬಾಣಗಳಿಂದ ಏರಿದನು. ತರುವಾಯ ಅವರೆಲ್ಲರೂ ಅದ್ಭುತವಾದ ಯುದ್ಧವನ್ನು ನೋಡುತ್ತಾ ಸ್ವಲ್ಪ ದೂರದಲ್ಲಿ ನಿಂತುಕೊಂಡರು. ಅರ್ಜುನನ ಆ ಅಮಾನುಷವಾದ ಕರ್ಮವನ್ನು ನೋಡಿ ಅಶ್ವತ್ಥಾಮಾಚಾರ್ಯರು ದುರ್ಯೋಧನನ ಕೈಯನ್ನು ಹಿಡಿದುಕೊಂಡು 'ನೀನು ಭೀಮಸೇನನ ಸಾಮರ್ಥ್ಯವನ್ನು ನೋಡಿದೆಯಲ್ಲಾ! ಹಾಗೆಯೇ ಅರ್ಜುನನ ಸಾಮರ್ಥ್ಯವನ್ನು ಈಗ ನೋಡಿದೆಯಷ್ಟೆ! ನಾವೆಲ್ಲರೂ ಸೋತು ಹೋಗಿರುವೆವು. ಪಾಂಡವರೊಡನೆ ವಿರೋಧವು ಸಾಕು. ನನ್ನಿಂದ ಸಹಿತನಾಗಿ ಪಾಂಡವರಿಂದ ಕೂಡಿಕೊಂಡು ರಾಜ್ಯವನ್ನು ಅನುಭವಿಸು. ನಾನು ತಡೆದರೆ ಅರ್ಜುನನು ಸುಮ್ಮನೆ ಆಗುವನು. ಶ್ರೀಕೃಷ್ಣನಿಗೆ ವಿರೋಧದಲ್ಲಿ ಇಚ್ಛೆಯಿಲ್ಲ. ಭೀಮಸೇನನೂ ಶ್ರೀಕೃಷ್ಣಪರಮಾತ್ಮನ ಮಾತಿನಂತೆ ಇರುವವನು. ಇದು ನಿನ್ನ ಹಿತಕ್ಕಾಗಿ ಹೇಳಿದ ಮಾತು. ನನಗೊಂದು ಭಯವಿಲ್ಲ. ನಾನು ನನ್ನ ಮಾವ ಕೃಪಾಚಾರ್ಯರೂ ಸಾಯುವವರಲ್ಲ. ಆದುದರಿಂದ ನನ್ನ ಮಾತಿನ ಮೇಲೆ ನಿನ್ನ ಸಂದೇಹಪಡಬಾರದು' ಎಂದು ಹೇಳಿದರು. ಆಗ ದುರ್ಯೋಧನನು 'ಭೀಮನು ದುಃಶಾಸನನ ರಕ್ತವನ್ನು ಪಾನ ಆಡಿದನು. ಹುಲಿಯಂತೆ ನರ್ತನವನ್ನು ಮಾಡಿದನು. ಆದುದರಿಂದ ನನಗೆ ಸಂಧಿಯು ಬೇಕಾಗಿರುವುದಿಲ್ಲ' ಎಂದು ಹೇಳಿಬಿಟ್ಟನು. ಆಗ ಅಶ್ವತ್ಥಾಮಾಚಾರ್ಯರು ಸುಮ್ಮನೆ ಆಗಿಬಿಟ್ಟನು.

ತರುವಾಯ ಕರ್ಣಅರ್ಜುನರು ಅಸ್ತ್ರಶಸ್ತ್ರಗಳಿಂದ ಆಕಾಶದಲ್ಲಿ ಅವಕಾಶವಿಲ್ಲದಂತೆ ಮಾಡಿದರು. ಆಗ್ನೇಯಾ ವಾರುಣ ಇಂದ್ರ ಮೊದಲಾದ ಅಸ್ತ್ರಗಳನ್ನು ಪರಸ್ಪರವಾಗಿ ಬಿಟ್ಟುಕೊಂಡು ಬ್ರಹ್ಮಾಸ್ತ್ರವನ್ನು ಬಿಟ್ಟುಕೊಂಡು ಗರ್ಜನೆ ಮಾಡಿದರು. ಪರಸ್ಪರ ಒಬ್ಬೊಬ್ಬರ ಅಸ್ತ್ರಗಳನ್ನು ಪರಿಹರಿಸಿ ಕೊಂಡರು. ತರುವಾಯ ಶ್ರಮದಿಂದ ಅಭಿವೃದ್ಧವಾದ ಬಲವುಳ್ಳ ಅರ್ಜುನನಿಂದ ನಿರಾಕರಿಸಲ್ಪಟ್ಟ ಕರ್ಣನು ಬ್ರಹ್ಮಾಸ್ತ್ರಯುಕ್ತವಾದ ನಾಗಾಸ್ತ್ರವನ್ನು ಬಿಟ್ಟನು. ಆಗ ಕೃಷ್ಣಪರಮಾತ್ಮನು ರಥವನ್ನು ತಗ್ಗಿಸಿ ಆ ಬಾಣವನ್ನು ವ್ಯರ್ಥಮಾಡಿದನು. ಅದು ಅರ್ಜುನನ ಕಿರೀಟವನ್ನು ಪುಡಿಮಾಡಿತು. ಆ ಬಾಣದಲ್ಲಿ ಇದ್ದ ಸರ್ಪವು ಆಕಾಶದಲ್ಲಿ ಹೋಯಿತು. ಶ್ರೀಕೃಷ್ಣಪರಮಾತ್ಮನು ಐದು

ಅಂಗುಲ ಕೆಳಗೆ ರಥವನ್ನು ತಗ್ಗಿಸಿದ್ದ ಕಾರಣ ಕರ್ಣನು ಅರ್ಜುನನ ಹಣೆಗೆ ಗುರಿ ನೋಡಿ ಬಿಟ್ಟಿದ್ದ ಬಾಣವು ಕುರೀಟವನ್ನು ಪುಡಿಮಾಡಿಹೋಯಿತು. ತರುವಾದ ಪರಾತ್ಮನಿಂದ ಹೇಳಲ್ಪಟ್ಟವನಾಗಿ ಅರ್ಜುನನು ಆಕಾಶ ಮಾರ್ಗದಲ್ಲಿ ಹೋಗುತ್ತಿದ್ದ ಪೂರ್ವವೈರಿಯಾದ ತಕ್ಷಕಪುತ್ರನಾದ ಅಶ್ವಸೇನ ಎಂಬ ಆ ಸರ್ಪವನ್ನು ಕರ್ಣನು ನೋಡುತ್ತಿರುವಂತೆ ಸಂಹಾರ ಮಾಡಿದನು. ಕರ್ಣನು ಪರಶುರಾಮದೇವರ ಅನುಗ್ರಹದಿಂದ ಬ್ರಹ್ಮಾಸ್ತ್ರಕ್ಕೆ ಅತಿವೇಗವನ್ನು ಹೊಂದಿದ್ದನು.

ತರುವಾಯ ಕರ್ಣನು ಅರ್ಜುನನೊಡನೆ ಮಹಾಸ್ತ್ರಯುದ್ಧವನ್ನು ಮಾಡು ತ್ತಿರಲು ಬ್ರಾಹ್ಮಣಶಾಪದಿಂದ ರಥಚಕ್ರವು ಭೂಮಿಯು ನುಂಗಿತು. ಅಂದರೆ ರಥಚಕ್ರವು ಭೂಮಿಯಲ್ಲಿ ಹೂತುಹೋಯಿತು. ಪರಶುರಾಮದೇವರ ಮಾತಿನಂತೆ ಅಸ್ತ್ರಗಳೆಲ್ಲವೂ ಮರೆತುಹೋದವು. ತರುವಾಯ ಕರ್ಣನು ರಥಚಕ್ರವನ್ನು ಮೇಲೆ ಎತ್ತಲಿಕ್ಕೆ ಅವಕಾಶವನ್ನು ಕೊಡಬೇಕೆಂದು ಅರ್ಜುನನೊಡನೆ ಕೇಳಿಕೊಂಡನು. ಆಗ ಕೃಷ್ಣಪರಮಾತ್ಮನು ಅರ್ಜುನನೊಡನೆ ಅವಕಾಶವನ್ನು ಕೊಡಬೇಡವೆಂದನು. ತರುವಾಯ ಅರ್ಜುನನು ಅತಿಭಯಂಕರವಾದ ರುದ್ರದೇವರು ಕೊಟ್ಟಿದ್ದ ಅಂಜಲಿಕ ಎಂಬ ಬಾಣವನ್ನು ತೆಗೆದು ಸತ್ಯಧರ್ಮದಿಂದ ಜೋಡಿಸಿ ಕರ್ಣನ ಸಂಹಾರಕ್ಕಾಗಿ ಆ ಬಾಣವನ್ನು ಬಿಟ್ಟನು. ಆ ಬಾಣದಿಂದ ಘೋರವಾದ ಬಾಣವನ್ನು ಧನುಸ್ಸಿಗೆ ಜೋಡಿಸುತ್ತಿದ್ದ ಕರ್ಣನ ಶಿರಸ್ಸನ್ನು ಕತ್ತರಿಸಿದನು. ಅಪರಾಹ್ನದಲ್ಲಿ ವಯಸ್ಸಾದವನಾದ ಕರ್ಣನ ತಲೆಯು ಅಂಜಲಿಕ ಎಂಬ ಬಾಣದಿಂದ ಕತ್ತರಿಸಿ ಮೇಲೆ ಹಾರಿ ಕೆಳಗೆ ಬಿದ್ದಿತು. ಈರೀತಿಯಾಗಿ ಕರ್ಣನು ಮೃತನಾದುದನ್ನು ನೋಡಿ ದುರ್ಯೋಧನನು ದೀನನಾಗಿ ಶಲ್ಯ ಸಹಿತನಾಗಿ ಸೈನ್ಯವನ್ನು ಅಪಹಾರ ಮಾಡಿಕೊಂಡು ಹೋದನು. ಧರ್ಮರಾಜನು ಕರ್ಣನ ವಧೆಯನ್ನು ಕೇಳಿ ತಾನು ಯುದ್ಧರಂಗಕ್ಕೆ ಬಂದು ಕರ್ಣನ ದೇಹವನ್ನು ನೋಡಿ ಕರ್ಣನನ್ನು ಅರ್ಜುನನನ್ನೂ ಭೀಮಸೇನದೇವರನ್ನು ಇತರರನ್ನು ಸ್ತೋತ್ರಮಾಡಿದನು. ಎಲ್ಲರೂ ಕೃಷ್ಣಪರಮಾತ್ಮನಿಂದ ಸಹಿತರಾಗಿ ಶಿಬಿರಕ್ಕೆ ಹೋಗಿ ಸಂತೋಷದಿಂದ ಇದ್ದರು.



# ದುರ್ಯೋಧನನು [1]

ದುರ್ಯೋಧನನು ಧೃತರಾಷ್ಟ್ರನ ಮಗನು. ಕಲಿಯ ಅವತಾರಭೂತನು. ಗಾಂಧಾರಿಯು ಗರ್ಭಿಣಿಯಾಗಿದ್ದಳು. ಬಹಳ ಸಮಯ ಅವಳು ಹಡೆಯಲೇ ಇಲ್ಲ. ಕುಂತೀದೇವಿಯು ಯುಧಿಷ್ಠಿರನನ್ನು ಹಡೆದಳು. ಆ ವರ್ತಮಾನವನ್ನು ಕೇಳಿ ಗಾಂಧಾರಿಯು ಹೊಟ್ಟೆಕಿಚ್ಚಿನಿಂದ ಹೊಟ್ಟೆಯನ್ನು ಹಿಸುಕಿಕೊಂಡು ಗರ್ಭವನ್ನು ಪುಡಿಮಾಡಿಕೊಂಡಳು. ಗರ್ಭಪಿಂಡವು ಕೆಳಗೆ ಬಿದ್ದಿತು. ಆಗ ಶ್ರೀವೇದವ್ಯಾಸ ದೇವರು ಅಲ್ಲಿಗೆ ಬಂದರು. ದೇವಕಾರ್ಯಸಿದ್ಧಿಗಾಗಿ ಶ್ರೀವೇದವ್ಯಾಸದೇವರು ಆ ಗರ್ಭವನ್ನು ರಕ್ಷಿಸಿದರು. ಅಂದರೆ ದುರ್ಯೋಧನನಿಂದಾಗಿ ಭಾರತ ಯುದ್ಧವು ನಡೆದು ಭೂಮಿಯ ಭಾರವು ಕಡಿಮೆಯಾಗಬೇಕೆಂದು ದೇವತಾಕಾರ್ಯವು. ಅದಕ್ಕಾಗಿ ವೇದವ್ಯಾಸದೇವರು ಬಂದು ಗರ್ಭಪಿಂಡವನ್ನು ನೂರ ಒಂದಾಗಿ(101) ವಿಭಾಗಿಸಿ ನೂರಒಂದು ಗಡಿಗೆಗಳಲ್ಲಿ ತುಂಬಿಸಿ ಹಾಕಿ ಇಟ್ಟರು. ಆಮೇಲೆ ಮೊದಲಿನ ದಿವಸದಲ್ಲಿ ಕಲಿಯೇ ಹುಟ್ಟಿದನು. ಅವನೇ ದುರ್ಯೋಧನನು ಪ್ರಧಾನ ವಾಯುದೇವರ ಸನ್ನಿಧಾನವಿದ್ದ ಕಾರಣ ಅವನಲ್ಲಿ ಅಧಿಕವಾದ ಬಲವಿದ್ದಿತು.

ಪೂರ್ವದಲ್ಲಿ ಮೇರುಪರ್ವತದಲ್ಲಿ ಸಭೆಯನ್ನು ಸೇರಿಸಿ ಅಲ್ಲಿ ಅಸುರರ ಭಾರವನ್ನು ಪರಿಹಾರ ಮಾಡುವುದಕ್ಕಾಗಿ ಭಗವಂತನು ಅವತರಿಸುವಂತೆ ದೇವತೆಗಳು ಪ್ರಾರ್ಥಿಸಿಕೊಂಡು ಅವನ ಸೇವೆಗಾಗಿ ತಾವೂ ಅವತರಿಸುವಂತೆ ಮಾತಾಡಿಕೊಂಡ ವಿಷಯವನ್ನು ಅಸುರರು ಕೇಳುತ್ತಿದ್ದರು. ಅದರಿಂದ ಆ ದೈತ್ಯರು ರುದ್ರದೇವರನ್ನು ತಪಸ್ಸುಮಾಡಿ ಸಂತೋಷಪಡಿಸಿದರು. ಕಲಿಯು ದೇವತೆಗಳಿಗೆ ಶತ್ರುವಾಗಿರಬೇಕೆಂದು ವರವನ್ನು ಕೇಳಿಕೊಂಡರು. ಎಲ್ಲರಿಂದಲೂ ಮರಣವು ರಹಿತನಾಗಿರಬೇಕೆಂದೂ ವಜ್ರಕಾಯವುಳ್ಳವನಾಗಿರಬೇಕೆಂದೂ ವರವನ್ನು ಕೇಳಿ ಕೊಂಡರು. ಆ ವರದಂತೆ ಮಹಾಬಲಿಷ್ಠನಾಗಿ ದುರ್ಯೋಧನನು ಹುಟ್ಟಿದನು. ಅಶ್ವತ್ಥಾಮಾಚಾರ್ಯರು ಹುಟ್ಟಿ ನಾಲ್ಕನೇ ದಿನದಲ್ಲಿಯೇ ದುರ್ಯೋಧನನು ಹುಟ್ಟಿದನು. ದುರ್ಯೋಧನನು ಹುಟ್ಟಿದ ಮರುದಿನವೇ ಭೀಮಸೇನದೇವರು ಅವತರಿಸಿದರು.

ಪಾಂಡುರಾಜನ ಮರಣದ ಅನಂತರದಲ್ಲಿ ಋಷಿಗಳು ಕುಂತೀದೇವಿಯಿಂದ ಸಹಿತರಾದ ಪಾಂಡವರನ್ನು ಹಸ್ತಿನಾವತಿಗೆ ಕರತಂದುಬಿಟ್ಟಾಗ(ಕರೆದುತಂದಾಗ)

---

**1. ಮ.ತಾ.ನಿ. ಅ-2, 11, 12, 14, 18 ರಿಂದ 28**

ದುರ್ಯೋಧನನು ಶಕುನಿಯಿಂದ ಸಹಿತನಾಗಿ 'ಪಾಂಡುರಾಜನು ಮೊದಲೇ ಮೃತನಾಗಿರುವನಲ್ಲ! ಅವನಿಗೆ ಮಕ್ಕಳೆಲ್ಲಿ? ತಂದೆಯು ಮೃತನಾದ ಮೇಲೆ ಸ್ವಕೀಯರಿಂದ ಸರಿಯಾದ ಅನುಮತಿಯಿಲ್ಲದೆ ಹುಟ್ಟಿದರೆ ಅವರು ಕ್ಷೇತ್ರಜಪುತ್ರ ರೆಂದು ಗ್ರಹಣ ಮಾಡಲಿಕ್ಕೆ ಯೋಗ್ಯರಲ್ಲ' ಎಂದು ಹೇಳಿದನು. ಆಗ ವಾಯು ದೇವರು ಅದೃಶ್ಯರಾಗಿದ್ದುಕೊಂಡು ಆಕಾಶದಲ್ಲಿ ಇದ್ದುಕೊಂಡು ಕೌರವರನ್ನು ಕೂಗಿ 'ಇವರು ತಂದೆಯು ಬದುಕಿರುವಾಗಲೇ ಯಮ,ವಾಯು, ಇಂದ್ರ, ಅಶ್ವಿನೀ ದೇವತೆಗಳಿಂದ ಹುಟ್ಟಿರುವರು. ಸರ್ವದಾ ಶ್ರೀನಾರಾಯಣನಿಂದ ರಕ್ಷಿತರಾಗಿರುವ ಕಾರಣ ಇವರನ್ನು ನೀವು ಗ್ರಹಣ ಮಾಡದಿರಲಿಕ್ಕೆ ಶಕ್ಯವೇ ಇಲ್ಲ' ಎಂದರು. ಆದರೂ ಎಲ್ಲರಿಗೂ ಸಂದೇಹ ವುಂಟಾಗಿರಲು ವೇದವ್ಯಾಸದೇವರೇ ಬಂದು ಪಾಂಡವರನ್ನು ಪಾಂಡುರಾಜನ ಮನೆಗೆ ಕರೆದುಕೊಂಡು ಹೋದರು. ಆಗ ಎಲ್ಲರೂ ಅಂಗೀಕಾರ ಮಾಡಿದರು.

ತರುವಾಯ ದುರ್ಯೋಧನಾದಿಗಳು ಪಾಂಡವರಿಂದ ಸಹಿತರಾಗಿ ಕೃಪಾಚಾರ್ಯರಿಂದ ಅಸ್ತ್ರವಿದ್ಯೆಯನ್ನು ಅಭ್ಯಾಸಮಾಡಿದರು. ಆಗ ಎಲ್ಲರೂ ಭೀಮಸೇನದೇವರಿಂದ ಸೋತುಹೋದರು. ದುರ್ಯೋಧನನು ಭೀಮಸೇನ ದೇವರ ಮೇಲೆ ಬಹಳ ದ್ವೇಷವುಳ್ಳವನಾಗಿದ್ದರು. ಭೀಮಸೇನದೇವರನ್ನು ಸಂಹರಿಸಬೇಕೆಂದು ಬಹಳ ಪ್ರಯತ್ನ ಮಾಡಿದನು. ವಿಷವನ್ನು ಆಹಾರದಲ್ಲಿ ಹಾಕಿಸಿದನು. ಮಾಳಿಗೆಯಿಂದ ಮಲಗಿರುವಾಗ ಗಂಗೆಯಲ್ಲಿ ತಳ್ಳಿದನು. ತನ್ನ ಸಾರಥಿಯ ಮೂಲಕ ಹಾವುಗಳನ್ನು ಕಚ್ಚಲಿಕ್ಕೆ ಬಿಟ್ಟನು. ಏನೇನು ಮಾಡಿದರೂ ತನ್ನ ಕಾರ್ಯಸಿದ್ಧಿಯನ್ನು ಹೊಂದಲಿಲ್ಲ.

ದ್ರೋಣಾಚಾರ್ಯರ ಹತ್ತಿರ ಶಸ್ತ್ರಾಭ್ಯಾಸಮಾಡಿದ ಮೇಲೆ ಅವರು ಹುಡುಗ ರನ್ನು ಪರೀಕ್ಷಿಸಿದಾಗ ದುರ್ಯೋಧನನು ತನ್ನ ಶಿಕ್ಷೆಯನ್ನು ತೋರಿಸಿದ ವ್ಯಾಜದಿಂದ ಭೀಮಸೇನದೇವರ ಹತ್ತಿರ ಯುದ್ಧಕ್ಕೆ ಹೋದನು. ಕೊನೆಗೆ ದ್ರೋಣಾಚಾರ್ಯರ ಮಾತಿನಿಂದ ಅಶ್ವತ್ಥಾಮಾಚಾರ್ಯರು ಬಂದು ಅವರ ಯುದ್ಧವನ್ನು ನಿಲ್ಲಿಸಿದರು. ತರುವಾಯ ಭೀಮಸೇನದೇವರು ಕರ್ಣನು ಕ್ಷತ್ರಿಯನಲ್ಲವೆಂದು ಯುಕ್ತಿಯುಕ್ತನಾಗಿ ಹೇಳಿದಾಗ ಅದನ್ನು ತಿರಸ್ಕರಿಸಿ ಕರ್ಣನಿಗೆ ಅಂಗದೇಶದಲ್ಲಿ ಪಟ್ಟಕಟ್ಟಿ ಅವನಲ್ಲಿ ಅತ್ಯಂತ ಸ್ನೇಹ ವುಳ್ಳವನಾದನು. ಆ ಕರ್ಣನಿಂದ ಅರ್ಜುನನನ್ನು ಸಂಹರಿಸಬೇಕೆಂದು ನಿಶ್ಚಯ ವುಳ್ಳವನಾಗಿ ಅದಕ್ಕೆ ಬೇಕಾದ ಪ್ರಯತ್ನವನ್ನು ಮಾಡುತ್ತಿದ್ದನು. ದ್ರೋಣಾಚಾರ್ಯರು ಮಾತಿನಂತೆ ಗುರುದಕ್ಷಿಣೆಯನ್ನಾಗಿ ದ್ರುಪದರಾಜನನ್ನು ಕಟ್ಟಿ

ತರಲು ಇತರ ರಾಜಕುಮಾರರೊಡನೆ ಹೋಗಿ ತಾನು ಸೋತುಹೋದನು– ಶುಕ್ರಾಚಾರ್ಯರ ಶಿಷ್ಯನಾದ ಶಕುನಿಯ ಗುರುವಾದ ಕಲಿಂಗ ಎಂಬ ಬ್ರಾಹ್ಮಣನಿಂದ ಕುತ್ಸಿತವಾದ ನಾಸ್ತಿಕನೀತಿಯನ್ನು ಸಹೋದರಿಂದ ಕೂಡಿಕೊಂಡು ಅಭ್ಯಾಸ ಮಾಡಿದನು. ಆ ಶಾಸ್ತ್ರವೇ ಅವನಿಗೆ ರುಚಿಸಿತು.

ಸಂಪೂರ್ಣ ದುರ್ಬುದ್ಧಿಯುಳ್ಳ ದುರ್ಯೋಧನನು ಪಾಂಡವರ ಸಂಪತ್ತನ್ನೂ ವಿಜಯವನ್ನೂ ನೋಡಿ ರಾತ್ರಿಹಗಲೂ ಸಂತಾಪಯುಕ್ತವಾದ ಮನಸ್ಸುಳ್ಳವನಾಗಿ ಶಕುನಿಯಿಂದ ಸಹಿತನಾಗಿ ತಂದೆ ಧೃತರಾಷ್ಟ್ರನ ಬಳಿಗೆ ಹೋಗಿ ಹೇಳಿದನು. 'ಜ್ಯೇಷ್ಠನಾದ ನಿನ್ನ ಹೊಟ್ಟೆಯಿಂದ ಹುಟ್ಟಿದ ಮಕ್ಕಳಾದ ನಾವು ನಿನ್ನಿಂದಲೇ ರಾಜ್ಯಕ್ಕೆ ಅನರ್ಹರಾಗಿ ಮಾಡಲ್ಪಟ್ಟೆವು. ನಿನ್ನ ತಮ್ಮನ ಹೆಂಡತಿಯಲ್ಲಿ ಇನ್ನೊಬ್ಬರಿಂದ ಹುಟ್ಟಿದ ಮಕ್ಕಳಿಗೆ ನೀನೇ ರಾಜ್ಯವು ಸಿಗುವಂತೆ ಮಾಡಿರುವಿ. ನಿನ್ನ ಅನಂತರದಲ್ಲಿ ಧರ್ಮರಾಜನು ತಮ್ಮಂದಿರ ಸಾಮರ್ಥ್ಯದಿಂದ ಮಹತ್ತಾದ ರಾಜ್ಯವನ್ನು ಹೊಂದು ವನು. ನಾವು ನಮ್ಮ ವಂಶದಿಂದ ಸಹಿತರಾಗಿ ಧರ್ಮರಾಜನು ಆಮೇಲೆ ಅವನ ವಂಶದವರ ದಾಸ್ಯವನ್ನು ಹೊಂದುವೆವು. ನನಗಾಗಿ ನನಗೆ ದುಃಖವಾಗುವುದಿಲ್ಲ. ಅತಿಶುದ್ಧವಾದ ಲೋಕಪ್ರಸಿದ್ಧವಾದ ಕೀರ್ತಿಯುಳ್ಳ ನಿನ್ನ ಕೀರ್ತಿಯು ನಾಶವನ್ನು ಹೊಂದುವುದೆಂದು ವ್ಯಸನವಾಗುತ್ತದೆ. ಅದೂ ನಮ್ಮ ನಿಮಿತ್ತವಾಗಿ ನಿನ್ನ ಕೀರ್ತಿಯು ನಾಶವನ್ನು ಹೊಂದುವುದೆಂದು ನಾವು ಸಾಯಲಿಕ್ಕೆ ಇಚ್ಛಿಸುವೆವು. ನಮಗೆ ಸಾಯಲಿಕ್ಕೆ ಅನುಜ್ಞೆಯನ್ನು ಕೊಡುವವನಾಗು' ಎಂದು ಹೇಳುವವನಾದನು. ಆಗ ಧೃತರಾಷ್ಟ್ರನು ಪಾಂಡವರ ಹತ್ತಿರ ವಿರೋಧ ಮಾಡುವುದು ಕ್ಷೇಮಕರವಲ್ಲವೆಂದು ಸಮಾಧಾನ ಪಡಿಸಿದನು. ಆದರೆ ದುರ್ಯೋಧನನು ಅವನ ಮಾತನ್ನು ಕೇಳದೆ ನೀನು ಪಾಂಡವರನ್ನು ಹಸ್ತಿನಾವತಿಯಿಂದ ಬೇರೆ ಸ್ಥಳಕ್ಕೆ ಕಳುಹಿಸದೆ ಇದ್ದರೆ ನಾವೆಲ್ಲರೂ ಸತ್ತದ್ದನ್ನು ನೋಡಿ ಪಾಂಡವರಿಂದಲೇ ಸಂತೋಷಪಡುತ್ತಾ ಇರು' ಎಂದನು.

ಅಷ್ಟು ದುರ್ಯೋಧನನು ಹೇಳಲು ಭಗವದಿಚ್ಛೆಯಿಂದಲೇ ಧೃತರಾಷ್ಟ್ರನು ಮಕ್ಕಳ ಸ್ನೇಹಪಾಶದ ವಶನಾದನು. 'ಏನು ಮಾಡಲಿ? ಪಾಂಡವರು ಬಲಿಷ್ಠ ರಾಗಿರುವರು. ಅವರನ್ನು ಊರಿನಿಂದ ಹೊರಡಿಸಲಿಕ್ಕೆ ಎಷ್ಟು ಮಾತ್ರಕ್ಕೂ ಸಾಧ್ಯವಾಗಲಾರದು' ಎಂದು ಹೇಳಿದನು.

ಆದಕ್ಕೆ ದುರ್ಯೋಧನನು ಶಕುನಿಯನ್ನು ನೋಡುತ್ತಾ ಧೃತರಾಷ್ಟ್ರನೊಡನೆ ಹೇಳಿದನು. 'ಅದಕ್ಕೆ ಬೇಕಾದ ವಿಧಾನವನ್ನು(ಉಪಾಯವನ್ನು) ನಾನು ಮಾಡಿರುವೆನು. ಅದನ್ನು ಕೇಳಬೇಕು. ಪಾಂಡವರು ಹಸ್ತಿನಾವತಿಗೆ ಬಂದು

ಹದಿಮೂರು ವರ್ಷಗಳಾದವು. ಇಷ್ಟು ಸಮಯವೂ ಇದೇ ಉಪಾಯವನ್ನೇ ಯೋಚಿಸುತ್ತಿರುವೆನು. ಅಶ್ವತ್ಥಾಮಾ ಚಾರ್ಯರಿಗೆ ಸಮಾನ ಬಲಿಷ್ಠನೂ ಪ್ರತೀಪಶಾಲಿಯೂ ಯಾರೂ ಇರುವುದಿಲ್ಲ. ಅವರನ್ನು ನಾನು ನಾನಾ ಉಪಾಯ ಗಳಿಂದ ವಶಮಾಡಿಕೊಂಡಿರುವೆನು. ಅವರ ತಂದೆಯಾದ ದ್ರೋಣಾಚಾರ್ಯರೂ, ಸೋದರ ಮಾವನಾದ ಕೃಪಾಚಾರ್ಯರೂ ಅಶ್ವತ್ಥಾಮಾಚಾರ್ಯರ ಅಧಿ ೕನರಾಗಿರುವರು. ದ್ರೋಣಾಚಾರ್ಯರನ್ನು ಅನುಸರಿಸಿ. ಭೀಷ್ಮಾಚಾರ್ಯರೂ ಇರುವರು. ಹಾಗೆಯೇ ಸೈನಿಕರಿಗೂ ಕೆಲವರಿಗೆ ಹಣವನ್ನು ಕೊಟ್ಟು ಕೆಲವರಿಗೆ ಬಹುಮಾನ ಮಾಡಿ ವಶಮಾಡಿಕೊಂಡಿರುವೆನು. ನಮ್ಮ ಕರ್ಣನು ಅಸ್ತ್ರದಲ್ಲಿಯೂ ಬಲದಲ್ಲಿಯೂ ಅರ್ಜುನನಿಗಿಂತ ಉತ್ತಮನಾದವನು. ಭೀಮನನ್ನು ನಾನೇ ಮಂತ್ರಬಲದಿಂದ ಸಂಹರಿಸುವೆನು. ನಾನು ದುರ್ವಾಸರಿಂದ ದೇವತೆಗಳಿಗೂ ದುರ್ಲಭಗಳಾದ [1]ಮುನ್ನೂರು ಮಂತ್ರಗಳನ್ನು ಪಡೆದಿರುವೆನು. ಅವುಗಳನ್ನು ಇನ್ನೊಬ್ಬರಲ್ಲಿ ಉಪಯೋಗಿಸಿದರೆ ವೀರ್ಯಹೀನಗಳಾಗುವುದೆಂದು ನಾನು ಯಾರಲ್ಲಿಯೂ ಉಪಯೋಗಿಸುವುದಿಲ್ಲ. ಆ ಮಂತ್ರಗಳು ವೀಯಪ್ರದಗಳು. ವಿಜಯವನ್ನು ಕೊಡುವುವು. ಅಗ್ನಿಸ್ತಂಭ ಜಲಸ್ತಂಭಗಳನ್ನು ಉಂಟುಮಾಡುವುವು. ಸಕಲದೇವತೆಗಳನ್ನು ತಡೆಯುವ ಸಾಮರ್ಥ್ಯವನ್ನು ಕೊಡುವುವು. ಮಳೆಯೇ ಮೊದಲಾದ ಅಭೀಷ್ಟವನ್ನು ಕೊಡುವುವು. ಈ ವೀರ್ಯವತ್ತಾದ ಮಂತ್ರಗಳಿಂದ ಭೀಮಸೇನನನ್ನು ಜಯಿಸುವೆನು.

ನೀನು ಪಾಂಡವರಲ್ಲಿ ಸ್ನೇಹವನ್ನು ಮಾಡುವಿ ಯಾದರೆ ಅದಕ್ಕೂ ನಾನು ವಿರೋಧ ಮಾಡುವುದಿಲ್ಲ. ಅವರು ವಾರಣಾವತದಲ್ಲಿ ವಾಸಮಾಡಲಿ. ಅವರಿಗೆ ಅದೇ ರಾಜ್ಯವಾಗಲಿ. ನನಗೆ ನಿನಗಾಗಿ ಹಸ್ತಿನಾವತಿಯಿರಲಿ. ನೀನು ಹೀಗೆ ಮಾಡಿದಿಯಾದರೆ ಸ್ವಪುತ್ರರನ್ನು ರಕ್ಷಣೆ ಮಾಡಿದ್ದರಿಂದ ಕೀರ್ತಿಯುಂಟಾಗುವುದು. ಇನ್ನೊಬ್ಬರ ಮಕ್ಕಳನ್ನು ಅತಿಯಾಗಿ ರಕ್ಷಣೆ ಮಾಡಿದಿಯಾದರೆ ಕೀರ್ತಿಯು ನಾಶವನ್ನು ಹೊಂದುವುದು. ಪಾಂಡವರು ತಮಗೆ ಬಲವು ಬಂದಮೇಲೆ ನಿನ್ನ ಹತ್ತಿರ ವಿರೋಧವನ್ನು ಮಾಡುವರು. ಅಷ್ಟರವರೆಗೆ ಸ್ವಾರ್ಥಕ್ಕಾಗಿ ನಿನ್ನನ್ನು ಅನುಸರಿಸುವರು. ವಿದುರನೊಬ್ಬನೇ ಯಾವಾಗಲೂ ಅವರ ರಕ್ಷಕನು. ನನಗೆ ದ್ವೇಷಿಯು. ಅವನ ಮಂತ್ರಾಲೋಚನ ಬಲದಿಂದ ಊರಿನ ಜನರೆಲ್ಲರೂ ನನ್ನನ್ನು ದ್ವೇಷಿಸುವರು. ಪಾಂಡವರಲ್ಲಿ ದೃಢವಾದ ಸ್ನೇಹವುಳ್ಳವಳಾಗಿರುವರು. ಪಾಂಡವರು ದೂರ

1. ಮ.ತಾ.ನಿ. ವ್ಯಾಖ್ಯಾನಗಳಲ್ಲಿ 130, 300, 3000 ಎಂದೂ ಅಭಿಪ್ರಾಯಪಡಲಾಗಿದೆ.

ತರಲು ಇತರ ರಾಜಕುಮಾರರೊಡನೆ ಹೋಗಿ ತಾನು ಸೋತುಹೋದನು– ಶುಕ್ರಾಚಾರ್ಯರ ಶಿಷ್ಯನಾದ ಶಕುನಿಯ ಗುರುವಾದ ಕಲಿಂಗ ಎಂಬ ಬ್ರಾಹ್ಮಣನಿಂದ ಕುತ್ಸಿತವಾದ ನಾಸ್ತಿಕನೀತಿಯನ್ನು ಸಹೋದರಿಂದ ಕೂಡಿಕೊಂಡು ಅಭ್ಯಾಸ ಮಾಡಿದನು. ಆ ಶಾಸ್ತ್ರವೇ ಅವನಿಗೆ ರುಚಿಸಿತು.

ಸಂಪೂರ್ಣ ದುರ್ಬುದ್ಧಿಯುಳ್ಳ ದುರ್ಯೋಧನನು ಪಾಂಡವರ ಸಂಪತ್ತನ್ನೂ ವಿಜಯವನ್ನೂ ನೋಡಿ ರಾತ್ರಿಹಗಲೂ ಸಂತಾಪಯುಕ್ತವಾದ ಮನಸ್ಸುಳ್ಳವನಾಗಿ ಶಕುನಿಯಿಂದ ಸಹಿತನಾಗಿ ತಂದೆ ಧೃತರಾಷ್ಟ್ರನ ಬಳಿಗೆ ಹೋಗಿ ಹೇಳಿದನು. 'ಜ್ಯೇಷ್ಠನಾದ ನಿನ್ನ ಹೊಟ್ಟೆಯಿಂದ ಹುಟ್ಟಿದ ಮಕ್ಕಳಾದ ನಾವು ನಿನ್ನಿಂದಲೇ ರಾಜ್ಯಕ್ಕೆ ಅನರ್ಹರಾಗಿ ಮಾಡಲ್ಪಟ್ಟೆವು. ನಿನ್ನ ತಮ್ಮನ ಹೆಂಡತಿಯಲ್ಲಿ ಇನ್ನೊಬ್ಬರಿಂದ ಹುಟ್ಟಿದ ಮಕ್ಕಳಿಗೆ ನೀನೇ ರಾಜ್ಯವು ಸಿಗುವಂತೆ ಮಾಡಿರುವಿ. ನಿನ್ನ ಅನಂತರದಲ್ಲಿ ಧರ್ಮರಾಜನು ತಮ್ಮಂದಿರ ಸಾಮರ್ಥ್ಯದಿಂದ ಮಹತ್ತಾದ ರಾಜ್ಯವನ್ನು ಹೊಂದುವನು. ನಾವು ನಮ್ಮ ವಂಶದಿಂದ ಸಹಿತರಾಗಿ ಧರ್ಮರಾಜನು ಆಮೇಲೆ ಅವನ ವಂಶದವರ ದಾಸ್ಯವನ್ನು ಹೊಂದುವೆವು. ನನಗಾಗಿ ನನಗೆ ದುಃಖವಾಗುವುದಿಲ್ಲ. ಅತಿಶುದ್ಧವಾದ ಲೋಕಪ್ರಸಿದ್ಧವಾದ ಕೀರ್ತಿಯುಳ್ಳ ನಿನ್ನ ಕೀರ್ತಿಯು ನಾಶವನ್ನು ಹೊಂದುವುದೆಂದು ವ್ಯಸನವಾಗುತ್ತದೆ. ಅದೂ ನಮ್ಮ ನಿಮಿತ್ತವಾಗಿ ನಿನ್ನ ಕೀರ್ತಿಯು ನಾಶವನ್ನು ಹೊಂದುವುದೆಂದು ನಾವು ಸಾಯಲಿಕ್ಕೆ ಇಚ್ಛಿಸುವೆವು. ನಮಗೆ ಸಾಯಲಿಕ್ಕೆ ಅನುಜ್ಞೆಯನ್ನು ಕೊಡುವವನಾಗು' ಎಂದು ಹೇಳುವವನಾದನು. ಆಗ ಧೃತರಾಷ್ಟ್ರನು ಪಾಂಡವರ ಹತ್ತಿರ ವಿರೋಧ ಮಾಡುವುದು ಕ್ಷೇಮಕರವಲ್ಲವೆಂದು ಸಮಾಧಾನ ಪಡಿಸಿದನು. ಆದರೆ ದುರ್ಯೋಧನನು ಅವನ ಮಾತನ್ನು ಕೇಳದೆ ನೀನು ಪಾಂಡವರನ್ನು ಹಸ್ತಿನಾವತಿಯಿಂದ ಬೇರೆ ಸ್ಥಳಕ್ಕೆ ಕಳುಹಿಸದೆ ಇದ್ದರೆ ನಾವೆಲ್ಲರೂ ಸತ್ತದ್ದನ್ನು ನೋಡಿ ಪಾಂಡವರಿಂದಲೇ ಸಂತೋಷಪಡುತ್ತಾ ಇರು' ಎಂದನು.

ಅಷ್ಟು ದುರ್ಯೋಧನನು ಹೇಳಲು ಭಗವದಿಚ್ಛೆಯಿಂದಲೇ ಧೃತರಾಷ್ಟ್ರನು ಮಕ್ಕಳ ಸ್ನೇಹಪಶದ ವಶನಾದನು. 'ಏನು ಮಾಡಲಿ? ಪಾಂಡವರು ಬಲಿಷ್ಠರಾಗಿರುವರು. ಅವರನ್ನು ಊರಿನಿಂದ ಹೊರಡಿಸಲಿಕ್ಕೆ ಎಷ್ಟು ಮಾತ್ರಕ್ಕೂ ಸಾಧ್ಯವಾಗಲಾರದು' ಎಂದು ಹೇಳಿದನು.

ಅದಕ್ಕೆ ದುರ್ಯೋಧನನು ಶಕುನಿಯನ್ನು ನೋಡುತ್ತಾ ಧೃತರಾಷ್ಟ್ರನೊಡನೆ ಹೇಳಿದನು. 'ಅದಕ್ಕೆ ಬೇಕಾದ ವಿಧಾನವನ್ನು(ಉಪಾಯವನ್ನು) ನಾನು ಮಾಡಿರುವೆನು. ಅದನ್ನು ಕೇಳಬೇಕು. ಪಾಂಡವರು ಹಸ್ತಿನಾವತಿಗೆ ಬಂದು

ಹದಿಮೂರು ವರ್ಷಗಳಾದವು. ಇಷ್ಟು ಸಮಯವೂ ಇದೇ ಉಪಾಯವನ್ನೇ ಯೋಚಿಸುತ್ತಿರುವೆನು. ಅಶ್ವತ್ಥಾಮಾ ಚಾರ್ಯರಿಗೆ ಸಮಾನ ಬಲಿಷ್ಠನೂ ಪ್ರತೀಪಶಾಲಿಯೂ ಯಾರೂ ಇರುವುದಿಲ್ಲ. ಅವರನ್ನು ನಾನು ನಾನಾ ಉಪಾಯ ಗಳಿಂದ ವಶಮಾಡಿಕೊಂಡಿರುವೆನು. ಅವರ ತಂದೆಯಾದ ದ್ರೋಣಾಚಾರ್ಯರೂ, ಸೋದರ ಮಾವನಾದ ಕೃಪಾಚಾರ್ಯರೂ ಅಶ್ವತ್ಥಾಮಾಚಾರ್ಯರ ಅಧಿ ೀನರಾಗಿರುವರು. ದ್ರೋಣಾಚಾರ್ಯರನ್ನು ಅನುಸರಿಸಿ. ಭೀಷ್ಮಾಚಾರ್ಯರೂ ಇರುವರು. ಹಾಗೆಯೇ ಸೈನಿಕರಿಗೂ ಕೆಲವರಿಗೆ ಹಣವನ್ನು ಕೊಟ್ಟು ಕೆಲವರಿಗೆ ಬಹುಮಾನ ಮಾಡಿ ವಶಮಾಡಿಕೊಂಡಿರುವೆನು. ನಮ್ಮ ಕರ್ಣನು ಅಸ್ತ್ರದಲ್ಲಿಯೂ ಬಲದಲ್ಲಿಯೂ ಅರ್ಜುನನಿಗಿಂತ ಉತ್ತಮನಾದವನು. ಭೀಮನನ್ನು ನಾನೇ ಮಂತ್ರಬಲದಿಂದ ಸಂಹರಿಸುವೆನು. ನಾನು ದುರ್ವಾಸರಿಂದ ದೇವತೆಗಳಿಗೂ ದುರ್ಲಭಗಳಾದ [1]ಮುನ್ನೂರು ಮಂತ್ರಗಳನ್ನು ಪಡೆದಿರುವೆನು. ಅವುಗಳನ್ನು ಇನ್ನೊಬ್ಬರಲ್ಲಿ ಉಪಯೋಗಿಸಿದರೆ ವೀರ್ಯಹೀನಗಳಾಗುವುದೆಂದು ನಾನು ಯಾರಲ್ಲಿಯೂ ಉಪಯೋಗಿಸುವುದಿಲ್ಲ. ಆ ಮಂತ್ರಗಳು ವೀಯಪ್ರದಗಳು. ವಿಜಯವನ್ನು ಕೊಡುವುವು. ಅಗ್ನಿಸ್ತಂಭ ಜಲಸ್ತಂಭಗಳನ್ನು ಉಂಟುಮಾಡುವುವು. ಸಕಲದೇವತೆಗಳನ್ನು ತಡೆಯುವ ಸಾಮರ್ಥ್ಯವನ್ನು ಕೊಡುವುವು. ಮಳೆಯೇ ಮೊದಲಾದ ಅಭೀಷ್ಟವನ್ನು ಕೊಡುವುವು. ಈ ವೀರ್ಯವತ್ತಾದ ಮಂತ್ರಗಳಿಂದ ಭೀಮಸೇನನನ್ನು ಜಯಿಸುವೆನು.

ನೀನು ಪಾಂಡವರಲ್ಲಿ ಸ್ನೇಹವನ್ನು ಮಾಡುವಿ ಯಾದರೆ ಅದಕ್ಕೂ ನಾನು ವಿರೋಧ ಮಾಡುವುದಿಲ್ಲ. ಅವರು ವಾರಣಾವತದಲ್ಲಿ ವಾಸಮಾಡಲಿ. ಅವರಿಗೆ ಅದೇ ರಾಜ್ಯವಾಗಲಿ. ನನಗೆ ನಿನಗಾಗಿ ಹಸ್ತಿನಾವತಿಯಿರಲಿ. ನೀನು ಹೀಗೆ ಮಾಡಿದಿಯಾದರೆ ಸ್ವಪುತ್ರರನ್ನು ರಕ್ಷಣೆ ಮಾಡಿದ್ದರಿಂದ ಕೀರ್ತಿಯುಂಟಾಗುವುದು. ಇನ್ನೊಬ್ಬರ ಮಕ್ಕಳನ್ನು ಅತಿಯಾಗಿ ರಕ್ಷಣೆ ಮಾಡಿದಿಯಾದರೆ ಕೀರ್ತಿಯು ನಾಶವನ್ನು ಹೊಂದುವುದು. ಪಾಂಡವರು ತಮಗೆ ಬಲವು ಬಂದಮೇಲೆ ನಿನ್ನ ಹತ್ತಿರ ವಿರೋಧವನ್ನು ಮಾಡುವರು. ಅಷ್ಟರವರೆಗೆ ಸ್ವಾರ್ಥಕ್ಕಾಗಿ ನಿನ್ನನ್ನು ಅನುಸರಿಸುವರು. ವಿದುರನೊಬ್ಬನೇ ಯಾವಾಗಲೂ ಅವರ ರಕ್ಷಕನು. ನನಗೆ ದ್ವೇಷಿಯು. ಅವನ ಮಂತ್ರಾಲೋಚನ ಬಲದಿಂದ ಊರಿನ ಜನರೆಲ್ಲರೂ ನನ್ನನ್ನು ದ್ವೇಷಿಸುವರು. ಪಾಂಡವರಲ್ಲಿ ದೃಢವಾದ ಸ್ನೇಹವುಳ್ಳವಳಾಗಿರುವರು. ಪಾಂಡವರು ದೂರ

1. ಮ.ತಾ.ನಿ. ವ್ಯಾಖ್ಯಾನಗಳಲ್ಲಿ 130, 300, 3000 ಎಂದೂ ಅಭಿಪ್ರಾಯಪಡಲಾಗಿದೆ.

ಹೋಗಲು ಜನರೆಲ್ಲರೂ ದುರ್ಬಲರಾಗುವರು. ಆಶ್ರಯಹೀನರಾಗಿ ನನ್ನನ್ನೇ ಆಶ್ರಯಿಸುವರು. ಭೀಷ್ಮಾದಿಗಳೂ ಅವರು ಹತ್ತಿರವಿದ್ದರೆ ಅವರ ಹತ್ತಿರ ವಿರೋಧವನ್ನು ಮಾಡಲಾರರು. ಅವರು ದೂರಹೋದರೆ ಅವರಲ್ಲಿ ಇರುವ ಸ್ನೇಹವು ನಾಶವನ್ನು ಹೊಂದುವುದು. ನಾವೂ ಪಾಂಡವರೂ ಒಟ್ಟಿಗೆ ವಾಸಮಾಡುತ್ತಿದ್ದರೆ ಕುಲನಾಶಕ್ಕೆ ಕಾರಣವಾದ ವಿರೋಧವು ಏರ್ಪಡುವುದು. ಆದುದರಿಂದ ಉಪಾಯಬಲದಿಂದ ಅವರನ್ನು ಇಲ್ಲಿಂದ ವಾರಣಾವತಕ್ಕೆ ಕಳುಹಿಸಬೇಕು. ಅದಕ್ಕೆ ಉಪಾಯವನ್ನು ಮಾಡಿರುವೆನು. ಅಲ್ಲಿ ಜಯಂತ ಎಂದು ಹೆಸರಿನಿಂದ ವಿಷ್ಣುವಿನ ಗುಡಿಯೂ ಶಿವಗುಡಿಯೂ ಇರುವುದು. ಅಲ್ಲಿ ಇಷ್ಟರಲ್ಲಿಯೇ ದೊಡ್ಡ ಉತ್ಸವವು ನಡೆಯುವುದು. ಪಾಂಡವರು ವಿಷ್ಣುವಿನಲ್ಲಿ ಭಕ್ತಿಯುಳ್ಳವ ರಾಗಿರುವರು. ಆದುದರಿಂದ ನೀನು ಹೇಳಿದರೆ ಆ ಉತ್ಸವವನ್ನು ನೋಡಲಿಕ್ಕೆ ಹೋಗುವರು. ನಾನು ನನಗೆ ಬೇಕಾದ ಪುರುಷರನ್ನೇ ಮಧ್ಯಸ್ಥಪುರುಷರಂತೆ ಅವರ ಬಳಿಗೆ ಹೋಗಲಿಕ್ಕೆ ಹೇಳಿ ಅವರಿಂದ ಅಲ್ಲಿಯ ಬಹುಗುಣಗಳನ್ನು ಹೇಳಿಸಿರುವೆನು. ಅದನ್ನು ಕೇಳಿ ಅವರಿಗೆ ಆ ಊರನ್ನು ನೋಡಲಿಕ್ಕೂ ಅಲ್ಲಿಗೆ ಹೋಗಲಿಕ್ಕೂ ಮನಸ್ಸು ಉಂಟಾಗಿರುವುದು. ಈಪ್ರಕಾರವಾಗಿ ದುರ್ಯೋಧನನು ಹೇಳಿದನು. ತರುವಾಯ ಧೃತರಾಷ್ಟ್ರನು ಪಾಂಡವರು ಬಂದಾಗ ಅವರೊಡನೆ ಹಾಗೆಯೇ ಹೇಳಿ ವಾರಣಾವತಕ್ಕೆ ಹೋಗುವಂತೆ ಮಾಡಿದನು—

ದುರ್ಯೋಧನನು ತರುವಾಯ ಪಾಂಡವರನ್ನು ಕೊಲ್ಲುವುದಕ್ಕಾಗಿಯೇ ವಾರಣಾವತದಲ್ಲಿ ಅರಗಿನ ಮನೆಯನ್ನು ಮಾಡಿಸಿ ಅದಕ್ಕೆ ಬೆಂಕಿ ಹಚ್ಚಲಿಕ್ಕಾಗಿ ಪುರೋಚನ ಎಂಬುವನನ್ನು ಕಳುಹಿಸಿದನು. ಆದರೆ ಕೊನೆಗೆ ಪುರೋಚನನೇ ಭೀಮಸೇನದೇವರಿಂದಾಗಿ ಅರಗಿನ ಮನೆಯಲ್ಲಿ ಸತ್ತನು.

ಪಾಂಡವರು ಅರಗಿನ ಮನೆಯಲ್ಲಿ ಮೃತರಾದರೆಂದು ವೃತ್ತಾಂತವು ತಿಳಿಯಲು ದುರ್ಯೋಧನನು ಮನಸ್ಸಿನಲ್ಲಿ ಸಂತೋಷವುಳ್ಳವನಾಗಿ ಜನರ ದೃಷ್ಟಿಗೆ ಅಳುವಂತೆ ತೋರಿಸಿದನು.

ತರುವಾಯ ಪಾಂಡವರು ದ್ರೌಪದೀಸ್ವಯಂವರಕ್ಕೆ ಹೋಗಿರಲು ಅಲ್ಲಿ ದ್ರೌಪದೀಸ್ವಯಂವರವಾದ ಮೇಲೆ ದುರ್ಯೋಧನನು ಜಗಳಕ್ಕೆ ಹೋಗಿ ಭೀಮಸೇನದೇವರಿಂದ ಸೋತು ಸಹೋದರಾದಿಗಳಿಂದ ಸಹಿತನಾಗಿ ಓಡಿ ಬಂದನು.

ತರುವಾಯ ಧೃತರಾಷ್ಟ್ರನೊಡನೆ ವಿದುರನು ಹೇಳಿದ ಪಾಂಡವರು

ದ್ರೌಪದೀದೇವಿಯರನ್ನು ಮದುವೆಯಾದದ್ದೇ ಮೊದಲಾದ ವಿಷಯವನ್ನು ಕೇಳಿ ದುರ್ಯೋಧನನು ಸಂತಾಪವುಳ್ಳವನಾಗಿ ಕರ್ಣಾದಿಗಳೊಡನೆ ಯೋಚನೆಮಾಡಿ ಯುದ್ಧವನ್ನು ಮಾಡಬೇಕೆಂದು ಪಾಂಚಾಲನಗರಕ್ಕೆ ಹೋಗಬೇಕೆಂದು ಹೋದನು. ಆಗ ವಿದುರನು ಧೃತರಾಷ್ಟ್ರನೊಡನೆ ನಿನ್ನ ಮಕ್ಕಳು ಈಗಲೇ ಹೋಗಿ ಯುದ್ಧದಲ್ಲಿ ಭೀಮಸೇನದೇವರೊಡನೆ ಸಾಯುವರೆಂದು ತಿಳಿಸಲು ಧೃತರಾಷ್ಟ್ರನು ಅವರನ್ನು ನಿಲ್ಲಿಸಿ ವಿದುರನನ್ನೇ ಕೊಟ್ಟು ಕಳುಹಿಸಿ ಪಾಂಡವರನ್ನು ಹಸ್ತಿನಾವತಿಗೆ ತರಿಸಿದನು. (ಕರೆಯಿಸಿದನು) ಆಮೇಲೂ ದುರ್ಯೋಧನನು ದುಃಖಪಡುತ್ತಾ ಇದ್ದನು.

ಪಾಂಡವರು ವನಕ್ಕೆ ಹೋಗಿರುವಾಗ ಕಾಶಿಯಲ್ಲಿ ಸ್ವಯಂವರವು ನಡೆಯಿತು. ಅಲ್ಲಿಗೆ ದುರ್ಯೋಧನನು ಹೋಗಿದ್ದನು. ಅಲ್ಲಿ ಬಹುರಾಜರು ಬಂದು ಸೇರಿದ್ದರು. ಅಲ್ಲಿ ರಾಜರನ್ನು ಎಣಿಸುವಾಗ ಜರಾಸಂಧನನ್ನು ಮೊದಲು ಎಣಿಸಿದರೆಂದು ಕೋಪದಿಂದ ರಾಜ ಕನ್ಯೆಯನ್ನು ಬಲಾತ್ಕಾರದಿಂದ ಸೆಳೆದನು. ಆಗ ಎಲ್ಲಾ ರಾಜರೂ ಯುದ್ಧಕ್ಕೆ ಬರಲು ಕರ್ಣನಿಂದಲೂ ತಮ್ಮಂದಿರಿಂದಲೂ ಸಹಿತನಾಗಿ ದುರ್ಯೋಧನನು ಎಲ್ಲರನ್ನೂ ಜಯಿಸಿದನು. ಆಮೇಲೆ ಪುನಃ ಅವರೆಲ್ಲರೂ ಯುದ್ಧಕ್ಕೆ ಬರಲು ಕರ್ಣನು ತಾನೇ ಯುದ್ಧಮಾಡುವೆನೆಂದು ಹೇಳಿ ದುರ್ಯೋಧನನನ್ನು ಪರಿವಾರ ಸಹಿತವಾಗಿ ಹಸ್ತಿನಾವತಿಗೆ ಕಳುಹಿಸಿಬಿಟ್ಟನು. ನಂತರ ಕರ್ಣನೇ ಜರಾಸಂಧಾದಿಗಳನ್ನು ಜಯಿಸಿ ಹಸ್ತಿನಾವತಿಗೆ ಬಂದನು.

ದುರ್ಯೋಧನನು ಪಾರ್ವತಿದೇವಿಯ ಆವೇಶವುಳ್ಳ ಕಲಿ ಲಕ್ಷ್ಮಿಯ(ಅಲಕ್ಷ್ಮಿ) ರೂಪಳಾದ ಕಾಶಿರಾಜನ ಮಗಳನ್ನು ಮದುವೆಯಾದನು. ಅವಳಲ್ಲಿ ಲಕ್ಷಣ ಎಂದು ಹೆಸರುಳ್ಳ ಗಂಡುಮಗುವನ್ನು ಪಡೆದನು. ಅವನು ಪೂರ್ವದಲ್ಲಿ ಅಕ್ಷಕುಮಾರನೆಂಬ ರಾಕ್ಷಸನು. ಹಾಗೆಯೇ ಸುಬ್ರಹ್ಮಣ್ಯನ ಹೆಂಡತಿಯು ಲಕ್ಷಣಾ ಎಂದು ಹೆಸರುಳ್ಳವಳಾಗಿ ಅವಳಲ್ಲಿ ಮಗಳಾಗಿ ಹುಟ್ಟಿದಳು. ದುರ್ಯೋಧನನು ಇನ್ನೂ ಅನೇಕರನ್ನು ಮದುವೆಯಾದನು.

ಕಳಿಂಗದೇಶದಲ್ಲಿ ಸುವಜ್ರ ಎಂದು ಹೆಸರುಳ್ಳ ರಾಜನ ಮಗಳಿಗೆ ಸ್ವಯಂವರವಾಗಿತ್ತು. ಅವನು ರುದ್ರದೇವರ ವರದಿಂದ ಪರಾಜಯ ಶೂನ್ಯನಾಗಿ ದ್ದನು. ದುರ್ಯೋಧನನು ಆ ಸ್ವಯಂವರಕ್ಕೆ ಹೋದವನಾಗಿ ಅಲ್ಲಿಯೂ ದರ್ಪ ದಿಂದ ಕನ್ಯೆಯನ್ನು ಅಪಹರಿಸಿದನು. ಆಗ ಸುವಜ್ರನು ಜರಾಸಂಧನ ಸಹಾಯದಿಂದ, ತನ್ನ ಸಹೋದರರಿಂದ ಸಹಿತನಾದ ದುರ್ಯೋಧನನನ್ನು ಜಯಿಸಿ ಬಂಧನದಲ್ಲಿ ಇಟ್ಟನು. ತರುವಾಯ ಭೀಷ್ಮಾದಿಗಳ ಮಾತಿನಿಂದ ಭೀಮಸೇನದೇವರು ಸುವಜ್ರನನ್ನು

ಕೊಂದು ಜರಾಸಂಧಾದಿಗಳನ್ನು ಜಯಿಸಿ ದುರ್ಯೋಧನನನ್ನು ಬಿಡಿಸಿದರು.

ತರುವಾಯ ಧೃತರಾಷ್ಟ್ರನು ಪಾಂಡವರಿಗೂ ಕೌರವರಿಗೂ ವಿರೋಧ ವಾಗುವುದೆಂದು ಧರ್ಮರಾಜನಿಗೆ ಅರ್ಧರಾಜ್ಯವನ್ನು ಕೊಟ್ಟು ಇಂದ್ರಪ್ರಸ್ಥಕ್ಕೆ ಕಳುಹಿಸಿದನು. ಹಸ್ತಿನಾವತಿಯಲ್ಲಿ ದುರ್ಯೋಧನನಿಗೆ ಪಟ್ಟಾಭಿಷೇಕ ಮಾಡಿದನು.

ಬಲರಾಮದೇವರ ಸ್ಯಮಂತಕ ರತ್ನದ ನಿಮಿತ್ತವಾಗಿ ಕೃಷ್ಣಪರಮಾತ್ಮನಲ್ಲಿ ವೈಮನಸ್ಸುಳ್ಳವರಾಗಿ ವಿದೇಹದೇಶದಲ್ಲಿ ವಾಸಮಾಡುತ್ತಿರುವಾಗ ದುರ್ಯೋಧನನು ಕೃಷ್ಣಪರಮಾತ್ಮನನ್ನು ಪಾಂಡವರಿಂದ ಬಿಡಿಸಲಿಕ್ಕೆ ಆಗಲಾರದೆಂದು ತಿಳಿದುಕೊಂಡು ಬಲರಾಮದೇವರನ್ನಾದರೂ ವಶಮಾಡಿಕೊಳ್ಳಬೇಕೆಂದು ಅಲ್ಲಿಗೆ ಹೋದನು. ಕೃಷ್ಣಪರಮಾತ್ಮನನ್ನು ಬಿಟ್ಟು ಬಲರಾಮದೇವರು ಯಾವಾಗ ಇರುವರೆಂಬುದನ್ನು ನಿರೀಕ್ಷಿಸುತ್ತಿದ್ದ ದುರ್ಯೋಧನನು ಬಲರಾಮದೇವರಿಗೆ ಗದಾವಿದ್ಯೆಯಲ್ಲಿ ಶಿಷ್ಯನಾದನು. ಆಗ ತನಗೆ ತಂಗಿಯಾದ ಸುಭದ್ರೆಯನ್ನು ಮದುವೆ ಮಾಡಿಕೊಡ ಬೇಕೆಂದು ಕೇಳಿಕೊಂಡನು. ಬಲರಾಮದೇವರು ಕೊಡುವೆನೆಂದು ಪ್ರತಿಜ್ಞಾ ಮಾಡಿದನು. ಕೃಷ್ಣಪರಮಾತ್ಮನು ತನ್ನ ಅಣ್ಣನಾದ ಬಲರಾಮದೇವರ ಮಾತನ್ನು ಮೀರಲಾರನೆಂದು ತಿಳಿದಿದ್ದನು. ಆದರಿಂದ ಅವನು ಸತ್ಯಕ್ಕಾಗಿ ಬಲರಾಮದೇವರ ಹಸ್ತವನ್ನು ಹಿಡಿದನು. ಬಲರಾಮದೇವರು ಹಲದ ಚಿಹ್ನೆಯುಳ್ಳ ತನ್ನ ಹಸ್ತವನ್ನು ಕೊಟ್ಟರು. ದುರ್ಯೋಧನನು ವಿಶೇಷವಾಗಿ ಸುಭದ್ರೆಯ ರೂಪದಿಂದ ಮೋಹಿತನಾಗಿದ್ದನು. ಕೃಷ್ಣಬಲರಾಮದೇವರು ತಂಗಿಯಮೇಲಿನ ಸ್ನೇಹದಿಂದ ತನ್ನ ವಶರಾಗುವರೆಂಬ ಅಭಿಪ್ರಾಯದಿಂದ ಬಲರಾಮದೇವರ ಹಸ್ತವನ್ನು ಹಿಡಿದನು. ಈರೀತಿಯಾಗಿ ಮಾಡಿ ದುರ್ಯೋಧನನು ಹಸ್ತಿನಾವತಿಗೆ ಹೋದನು.

ತರುವಾಯ ಪಾಂಡವರು ರಾಜಸೂಯಯಾಗವನ್ನು ಮಾಡಿದಾಗ ದುರ್ಯೋಧನನು ಅಲ್ಲಿಗೆ ಹೋಗಿದ್ದನು. ರಾಜರು ಕಾಣಿಕೆಯಾಗಿ ತಂದುಕೊಡುವ ದ್ರವ್ಯವನ್ನು ಒಳಗೆ ತೆಗೆದು ಇಡುವ ಕೆಲಸವನ್ನು ದುರ್ಯೋಧನನಿಗೆ ಕೊಟ್ಟಿದ್ದರು. ಆದುದರಿಂದ ದುರ್ಯೋಧನನು ರಾಜರು ತಂದಿರುವ ಹಣವೆಲ್ಲವನ್ನು ನೋಡಿ ಬಹು ಸಂತಾಪವನ್ನು ಹೊಂದಿದನು.

ರಾಜಸೂಯಯಾಗವು ಮುಗಿದ ಮೇಲೆ ಒಂದು ದಿವಸದಲ್ಲಿ ಪಾಂಡವರು ಕೃಷ್ಣಪರಮಾತ್ಮನಿಂದ ಸಹಿತರಾಗಿ ರಾಜಸೂಯ ಸಭಾಮಂಟಪದಲ್ಲಿ ಕೂತಿದ್ದರು. ಎಲ್ಲಾ ಮಿತ್ರರಾದ ರಾಜರೂ ಕೂತಿದ್ದರು. ಆಗ ದುರ್ಯೋಧನನು ಕೈಯಲ್ಲಿ

ಖಡ್ಗವನ್ನು ಹಿಡಿದುಕೊಂಡು ಸಹೋದರರಿಂದ ಸಹಿತನಾಗಿ ಬಂದನು. ಅವನು ಇಂದ್ರನೀಲಮಣಿಯ ರಶ್ಮಿಗಳಿಂದ ಮರೆಯಾಗಿರುವ ಬಾಗಿಲನ್ನು ತಿಳಿಯದೆ ಒಳಗಿರುವ ಪದಾರ್ಥಗಳು ಕಾಣಿಸುತ್ತಿರುವ ಸ್ಫಟಿಕಮಣಿಮಯವಾದ ಗೋಡೆಯನ್ನು ಬಾಗಿಲೆಂದು ತಿಳಿದು ಅವಸರದಿಂದ ಬಂದನು. ಇದರಿಂದ ಅವನ ತಲೆಗೆ ಗೋಡೆಯು ಬಲವಾಗಿ ಬಡೆಯಿತು. ಆಗ ಧರ್ಮರಾಜರಿಂದ ಹೇಳಲ್ಪಟ್ಟವರಾಗಿ ನಕುಲಸಹದೇವರು ಬಂದು ದುರ್ಯೋಧನನ ಕೈಗಳನ್ನು ಹಿಡಿದುಕೊಂಡು ಒಳಗೆ ಕರೆದುಕೊಂಡು ಬಂದರು. ಅಲ್ಲಿ ಒಂದು ಕ್ಷಣ ಕೂತುಕೊಂಡು ಆಮೇಲೆ ದುರ್ಯೋಧನನು ಪಾಂಡವರ ಸಂಪತ್ತನ್ನು ನೋಡಿ ಸಹಿಸಲಾರದೆ ಅಲ್ಲಿಂದ ಎದ್ದು ಬೇರೆ ಸ್ಥಳಕ್ಕೆ ಹೋದನು. ಅಲ್ಲಿ ಇಂದ್ರನೀಲಮಣಿಯಿಂದ ಮಾಡಿರುವ ಪ್ರದೇಶದಲ್ಲಿ ರತ್ನಮಯಗಳಿಂದ ಪದ್ಮಗಳನ್ನು ನೋಡಿ ನೀರೆಂಬ ಬುದ್ಧಿಯಿಂದ ತನ್ನ ವಸ್ತ್ರವನ್ನು ಮೇಲಕ್ಕೆ ಎತ್ತಿಕೊಂಡನು. ರತ್ನಗಳ ಕಾಂತಿಗಳಿಂದ ಮರೆಯಾಗಿದ್ದ ನೀರುಳ್ಳ ಪ್ರದೇಶವನ್ನು ನೆಲವೆಂದೇ ತಿಳಿದುಕೊಂಡು ಹೋಗಿ ಸಹೋದರರಿಂದ ಸಹಿತವಾಗಿ ನೀರಿನಲ್ಲಿ ಬಿದ್ದುಬಿಟ್ಟನು.

ಆಗ ಭೂಭಾರ ಪರಿಹಾರಕ್ಕಾಗಿ ಶ್ರೀಕೃಷ್ಣಪರಮಾತ್ಮನಿಂದ ಸೂಚಿಸಲ್ಪಟ್ಟ ಭೀಮಸೇನದೇವರು ದ್ರೌಪದೀದೇವಿಯರಿಂದಲೂ ಇತರ ಸ್ವಕೀಯರಿಂದಲೂ ಸಹಿತರಾಗಿ ಗಟ್ಟಿಯಾಗಿ ನಗುವವರಾದರು. ಹಾಗೆಯೇ ಭಗವಂತನ ಪತ್ನಿಯರೂ ನಗುವವರಾದರು. ಶ್ರೀಭಗವಂತನು ಮಂದಹಾಸಯುಕ್ತವಾದ ಮುಖದಿಂದ ಭೀಮಸೇನದೇವರ ಮುಖವನ್ನು ನೋಡಿ ಒಂದೂ ಮಾತಾಡದೆ ಇದ್ದನು. ಆಗ ಧರ್ಮರಾಜನು ಮಾತ್ರ ನಗುವವರೆಲ್ಲರನ್ನು ತಡೆದು ದುರ್ಯೋಧನನಿಗೆ ವಸ್ತ್ರಗಂಧಪುಷ್ಪಾದಿಗಳನ್ನು ಕೊಟ್ಟು ಕಳುಹಿಸಿದನು. ಆಗ ದುರ್ಯೋಧನನು ಭೀಮಸೇನದೇವರ ಮೇಲೆಯೂ ದ್ರೌಪದೀದೇವಿಯರ ಮೇಲೆಯೂ ಬಹಳ ಕೋಪವುಳ್ಳವನಾಗಿ ತುಂಬಾ ಲಜ್ಜಾಉಳ್ಳವನಾಗಿ ಧರ್ಮ ರಾಜನು ಕಳುಹಿಸಿದ ವಸ್ತ್ರಾದಿಗಳನ್ನು ತಿರಸ್ಕರಿಸಿ ಶಕುನಿಯಿಂದ ಸಹಿತನಾಗಿ ಹಸ್ತಿನಾವತಿಗೆ ಹೊರಟುಹೋದನು. ದುರ್ಯೋಧನನು ದಾರಿಯಲ್ಲಿ ಶಕುನಿಯೊಡನೆ 'ಯಾವ ಭೀಮದ್ರೌಪದಿಯರು ಕೃಷ್ಣನ ಸನ್ನಿಧಿಯಲ್ಲಿ ನನಗೆ ಅಪಹಾಸ ಮಾಡಿದರೋ ಅವರಿಬ್ಬರಿಗೂ ಸಂತಾಪವನ್ನು ಮಾಡದೆ ನಾನು ಜೀವಿಸಲಿಕ್ಕೆ ಆಸೆಪಡುವುದಿಲ್ಲ. ನನಗೆ ಶಕ್ತಿಯಿರುತ್ತಿದ್ದರೆ ಭೀಮಸೇನನ್ನು ಕೊಲ್ಲುತ್ತಿದ್ದೆನು. ಕೃಷ್ಣನ ಅಗ್ರಪೂಜೆಯನ್ನು ನಿಲ್ಲಿಸುತ್ತಿದ್ದೆನು. ಈಪ್ರಕಾರವಾದ ಪಾಂಡವರ ಐಶ್ವರ್ಯವನ್ನು ನೋಡಿ ಯಾವ

ಮನುಷ್ಯನು ಬದುಕಲಿಕ್ಕೆ ಬಯಸುವನು? ಎಲ್ಲಾ ರಾಜರೂ ಅವರಿಗೆ ವೈಶ್ಯರಂತೆ ಕಪ್ಪವನ್ನು ಕೊಡುತ್ತಿರುವರು' ಎಂದು ಹೇಳಿದನು.

ಅದನ್ನು ಕೇಳಿ ಶಕುನಿಯು ದುರ್ಯೋಧನನಿಗೆ ವೈರವನ್ನು ಇನ್ನು ದೃಢಪಡಿಸಬೇಕೆಂದು ಅಭಿಪ್ರಾಯದಿಂದ 'ರಾಜೇಂದ್ರ! ಬಲಿಷ್ಠರಾದ ಸಹೋದರ ರೊಡನೆ ಯಾಕೆ ವಿರೋಧವನ್ನು ಮಾಡುವಿ? ಗುಣವಂತರಾದ ಜ್ಯೇಷ್ಠರಾದ ಅವರನ್ನು ಅನುಸರಿಸಿಕೊಂಡು ಬದುಕುವವನಾಗು' ಎಂದು ಹೇಳಿದನು.

ಆಗ ದುರ್ಯೋಧನನು ಬಹಳ ಕೋಪವುಳ್ಳವನಾಗಿ 'ಪಾಂಡವರಲ್ಲಿ ಇರುವ ಎಲ್ಲಾ ಐಶ್ವರ್ಯವೂ ನನ್ನಲ್ಲಿ ಬಾರದೆ ಇದ್ದರೆ ನಾನು ಸರ್ವಥಾ ಬದುಕಿರಲಾರೆನು. ಇದು ನಾನು ಸತ್ಯವಾಗಿಯೂ ಹೇಳುವ ಮಾತು. ಆದರೆ ಬಾಹುಬಲದಿಂದ ಅವರ ಸಂಪತ್ತನ್ನು ಅಪಹರಿಸಲಿಕ್ಕೆ ಆಗಲಾರದು. ದೇವೇಂದ್ರನೇ ಬಂದರೂ ಅವರನ್ನು ಯುದ್ಧದಲ್ಲಿ ಜಯಿಸಲು ಸಮರ್ಥನಾಗಲಾರನು. ಮನುಷ್ಯರ ಪಾಡೇನು?' ಎಂದು ಹೇಳಿದನು. ಅದನ್ನು ಕೇಳಿ ಅತ್ಯಂತ ಪಾಪಿಷ್ಠನಾದ ಶಕುನಿಯು ದುರ್ಯೋನನೊಡನೆ 'ನೀನು ಪಾಂಡವರಲ್ಲಿ ಯಾವ ಯಾವ ಪ್ರಕಾಶಿಸುತ್ತಿರುವ ಸಂಪತ್ತನ್ನು ನೋಡುತ್ತಿರುವೆಯೋ ಅದೆಲ್ಲವನ್ನೂ ನಿನ್ನ ಸಮೀಪದಲ್ಲಿಯೇ ಪಗಡೆ ಆಟವನ್ನು ಆಡುತ್ತಾ ಅನಾಯಾಸದಿಂದ ಅಪಹರಿಸುವೆನು' ಎಂದು ಹೇಳಿದನು. ಅದನ್ನು ಕೇಳಿ ದುರ್ಯೋಧನನು ಪ್ರಸನ್ನನಾದನು. ಅವರಿಬ್ಬರೂ ಧೃತರಾಷ್ಟ್ರನ ಬಳಿಗೆ ಹೋದರು. ಶಕುನಿಯು ಧೃತರಾಷ್ಟ್ರನೊಡನೆ ದುರ್ಯೋಧನನು ತುಂಬಾ ಕೃಶನಾಗಿರುವನೆಂದೂ ಬೆಳ್ಳಗಾಗಿ ಹೋಗಿರುವನೆಂದೂ ಹೇಳಿದನು.

ಅದನ್ನು ಕೇಳಿ ಧೃತರಾಷ್ಟ್ರನು ಮನಸ್ಸಿನಲ್ಲಿಯೇ ನೊಂದುಕೊಂಡವನಾಗಿ ಯಾಕೆ ಹಾಗಾಯಿತೆಂದು ಕೇಳಿದನು. ಅದಕ್ಕೆ ದುರ್ಯೋಧನನೂ ಶಕುನಿಯೂ ತಾವು ದಾರಿಯಲ್ಲಿ ಬರುವಾಗ ಯೋಚನೆಮಾಡಿಕೊಂಡು ಬಂದ ವಿಷಯವನ್ನು ಹೇಳಿದರು. ಅದನ್ನು ಕೇಳಿ ಧೃತರಾಷ್ಟ್ರನು ಅದು ಸರಿಯಲ್ಲವೆಂದನು. 'ನೀವು ದುರಾಲೋಚನೆ ಮಾಡಿದ್ದು ಧರ್ಮಕ್ಕೆ ವಿರೋಧಿಯಾದದ್ದು. ನಾಶಕ್ಕೆ ಕಾರಣವಾದದ್ದು. ಇದು ನನಗೆ ಇಷ್ಟವಲ್ಲ. ಪಾಂಡವರು ತಮ್ಮ ಬಾಹು ಸಾಮರ್ಥ್ಯದಿಂದ ಸಂಪತ್ತನ್ನು ಸಂಪಾದಿಸಿರುವರು. ನೀನು ಕೂಡ ಅದೇ ರೀತಿಯಾಗಿ ದಿಗ್ವಿಜಯವನ್ನು ಮಾಡಿ ಶ್ರೇಷ್ಠಯಾಗಗಳನ್ನು ಮಾಡು. ಗುಣವಂತರಾದ ಅವರೊಡನೆ ಸ್ಪರ್ಧೆಯನ್ನು ಮಾಡಬೇಡ. ವಿಶೇಷವಾಗಿ ಅವರು ಸಹೋದರರಾಗಿರುವರು' ಎಂದು ಹೇಳಿದನು. ಅದನ್ನು ಕೇಳಿ ದುರ್ಯೋಧನನು 'ನೀನು ಪಾಂಡವರ ಸಂಪತ್ತನ್ನು ಪಗಡೆ ಆಟದಲ್ಲಿ

ಅಪಹರಿಸಲಿಕ್ಕೆ ಇಚ್ಛಿಸದೆ ಇರುವುದಾದರೆ ನಾನು ಸತ್ತೆನೆಂದೇ ತಿಳಿಯುವವನಾಗು. ನೀನು ಪಾಂಡವರಿಂದ ಸುಖವುಳ್ಳವನಾಗು. ನಾನು ಬದುಕಿರಬೇಕೆಂದು ಬಯಸುವಿಕೆಯಾದರೆ ಸಭೆಯಲ್ಲಿ ಪಗಡೆ ಆಟವನ್ನು ಆಡುವುದಕ್ಕಾಗಿ ಇಲ್ಲಿಗೆ ಪಾಂಡವರನ್ನು ಕರೆಸುವವನಾಗು. ಈ ವಿಷಯದಲ್ಲಿ ಅಧರ್ಮವೊಂದೂ ಇರುವುದಿಲ್ಲ. ಬ್ರಾಹ್ಮಣರು ವೇದದಿಂದ ಜೀವಿಸುವವರು. ಕ್ಷತ್ರಿಯರು ಶಸ್ತ್ರದಿಂದ ಜೀವಿಸುವವರು. ಶತ್ರುವನ್ನು ಜಯಿಸಲಿಕ್ಕೆ ಕಾರಣವಾದದ್ದೇ ಶಸ್ತ್ರವು. ಆದುದರಿಂದ ಪಗಡೆ ಕಾಳೂ ಶಸ್ತ್ರವೇ. ಪಗಡೆ ಆಟವಾಡುವುದೂ ಸ್ವಧರ್ಮವೇ. ನಿನಗೂ ಅದರ ಮಹಾಫಲವು ಉಂಟಾಗುವುದು' ಎಂದು ಹೇಳಿದನು.

ಆಗ ಧೃತರಾಷ್ಟ್ರನು ನನಗೆ ಆ ಫಲವು ಬೇಡ. ನಿನಗೇ ಇರಲಿ ಎಂದು ಹೇಳಿದರನು. ಹಾಗೆ ಹೇಳಿದರೂ ಧೃತರಾಷ್ಟ್ರನು ಕಲಿಯ ಆವೇಶವುಳ್ಳವನಾಗಿಯೂ ಪುತ್ರಸ್ನೇಹವಶನಾಗಿಯೂ ಪಾಂಡವರ ಬಳಿಗೆ ವಿದುರ ನನ್ನು ಕಳುಹಿಸಿ ಪಾಂಡವರನ್ನು ಕರೆಸಿದನು. ಪಗಡೆ ಆಟವು ನಡೆಯಿತು. ಧರ್ಮರಾಜನು ಶಕುನಿಯೊಡನೆ ಪಗಡೆ ಆಟವನ್ನು ಆಡುವವನಾಗಿ ಸಂಕಲಸಂಪತ್ತನ್ನು ಸೋತವನಾಗಿ ನಕುಲನನ್ನು, ಸಹದೇವನನ್ನು, ಅರ್ಜುನನನ್ನೂ, ಭೀಮಸೇನದೇವರನ್ನು, ದ್ರೌಪದೀದೇವಿಯನ್ನೂ ತನ್ನನ್ನೂ ಕ್ರಮದಿಂದ ಸೋತನು. ತರುವಾಯ ದುರ್ಯೋಧನನು ದ್ರೌಪದೀ ದೇವಿಯನ್ನು ಸಭೆಗೆ ಕರೆದುಕೊಂಡು ಬರುವುದಕ್ಕಾಗಿ ತನ್ನು ಸೂತನನ್ನು ಕಳುಹಿಸಿದನು. ಅವನು ದ್ರೌಪದೀದೇವಿಯರ ಬಳಿಗೆ ಹೋಗಿ 'ಧರ್ಮರಾಜರು ಪಗಡೆ ಆಟದಲ್ಲಿ ನಿಮ್ಮನ್ನು ಸೋತಿರುವರು. ಬೇಗನೇ ರಾಜರ ಸಭೆಗೆ ಬರಬೇಕು' ಎಂದು ಹೇಳಿದನು. ಅದಕ್ಕೆ ದ್ರೌಪದೀದೇವಿಯರು ನಾನು ಸಭೆಗೆ ಬರಲಾರೆನು ಎಂದುಬಿಟ್ಟರು. ಅವನು ಹಾಗೆಯೇ ಬಂದು ಹೇಳಲು ಅವನು ಭೀಮಸೇನ ದೇವರಿಂದ ಭಯಪಡು ತ್ತಿರುವನೆಂದು ತಿಳಿದು ದುರ್ಯೋಧನನು ದುಃಶಾಸನನಿಗೆ ಆಜ್ಞಾ ಮಾಡಿದನು. ಪಾಪಿಯಾದ ದುಃಶಾಸನನು ಲೋಕರೀತಿಯಿಂದ ರಜಸ್ವಲೆಯಾಗಿದ್ದ ದ್ರೌಪದೀ ದೇವಿಯರನ್ನು ಸಭೆಗೆ ತಲೆಕೂದಲುಗಳಲ್ಲಿ ಹಿಡಿದು ಸೆಳೆದುಕೊಂಡು ಬಂದನು. ಸಭೆಯಲ್ಲಿ ಕೂತಿದ್ದ ಭೀಷ್ಮಾಚಾರ್ಯರೇ ಮೊದಲಾದ ವರೂ ಕಲ್ಯಾವೇಶದಿಂದ ಸುಮ್ಮನೆ ಇದ್ದುಬಿಟ್ಟರು. ಒಬ್ಬನೂ ದುರ್ಯೋಧನನಿಗೆ ವಿರೋಧವನ್ನು ಮಾಡಲಿಕ್ಕೆ ಸಮರ್ಥನಾಗಲಿಲ್ಲ. ವಿದುರನು ಮಾತ್ರ ಅಧರ್ಮವೆಂದನು. ಅವನ ಮಾತನ್ನು ಒಬ್ಬನೂ ಕೇಳಲಿಲ್ಲ.

ತರುವಾಯ ದುರ್ಯೋಧನನು ಪಾಂಡವರಿಗೆ ಪರಸ್ಪರ ವಿರೋಧವನ್ನು

ಉಂಟುಮಾಡಬೇಕೆಂಬ ಅಭಿಪ್ರಾಯದಿಂದ ದ್ರೌಪದೀದೇವಿಯರೊಡನೆ 'ಧರ್ಮರಾಜನು ನಿನಗೆ ದುಃಖಕ್ಕೆ ಕಾರಣನು. ಅವನನ್ನು ಉಳಿದ ಪಾಂಡವರು ನಮಗೆ ಗುರುವಲ್ಲ ಎಂದು ಹೇಳಲಿ. ಅಥವಾ ಭೀಮಾರ್ಜುನರು ಹೇಳಲಿ. ಕೊನೆಗೆ ಭೀಮನೊಬ್ಬನಾದರೂ ಹೇಳಲಿ. ನಿನ್ನನ್ನು ಬಿಟ್ಟುಬಿಡುವೆನು' ಎಂದು ಹೇಳಿದನು. ಆಗ ಭೀಮಸೇನದೇವರು 'ಧರ್ಮರಾಜನು ನಮಗೆ ಗುರುವೇ. ಅದಕ್ಕೆ ಸಂದೇಹವೇ ಇರುವುದಿಲ್ಲ. ನಿಮಗೆಲ್ಲರಿಗೂ ನಾನು ಗುರುವು. ಏಕೆಂದರೆ ಕ್ಷತ್ರಿಯರಲ್ಲಿ ಬಲಿಷ್ಠರಾದವರೇ ಶ್ರೇಷ್ಠರಾದವರು. ನನಗೆ ಬಲವು ಹೆಚ್ಚಿಗೆ ಇರುವುದೇ ಇಲ್ಲವೇ ಎಂಬ ವಿಷಯದಲ್ಲಿ ಸಂದೇಹವಿದ್ದರೆ ಎದ್ದುನಿಲ್ಲಿರಿ. ನಿಮ್ಮೆಲ್ಲರೂ ಕಾಲಿನಿಂದ ಒದ್ದು (ತಿಕ್ಕಿ, ಹೊಸೆದು) ಬಿಡುತ್ತೇನೆ' ಎಂದು ಹೇಳಿ ಎದ್ದು ನಿಂತರು. ಆಗ ಭೀಷ್ಮಾದಿಗಳು ಸಮಾಧಾನಪಡಿಸಿ ಕೂತುಕೊಳ್ಳಿಸಿದರು.

ತರುವಾಯ ದುರ್ಯೋಧನನು ಭೀಮಸೇನರು ನೋಡುತ್ತಿರುವಂತೆ ದ್ರೌಪದೀದೇವಿಯರಿಗೆ ತೊಡೆಯನ್ನು ತೋರಿಸಿದನು. ಆಗ ಭೀಮಸೇನದೇವರು ನಿನ್ನ ಈ ತೊಡೆಯನ್ನು ನನ್ನ ಗದೆಯಿಂದ ಮುರಿದುಹಾಕುವೆನು ಎಂದು ಪ್ರತಿಜ್ಞಾ ಮಾಡಿದರು. ಆಮೇಲೆ ದುರ್ಯೋಧನನು 'ನಿಮಗಿನ್ನು ಪಗಡೆ ಆಟವಾಡಲಿಕ್ಕೆ ಬೇರೊಂದು ವಸ್ತುವೂ ಇಲ್ಲ. ಆದುದರಿಂದ ಶ್ರೀಕೃಷ್ಣನನ್ನೇ ಪಂದ್ಯವನ್ನಾಗಿ ಇಡಿರಿ' ಎಂದು ಹೇಳಿದನು. ಈರೀತಿಯಾಗಿ ದುರ್ಯೋಧನನು ಕೃಷ್ಣಪರಮಾತ್ಮನ ಅವಮಾನ ಮಾಡಿದ್ದರಿಂದ ಭೀಮಸೇನದೇವರು ಕುಪಿತರಾಗಿ 'ನಿನ್ನನ್ನು ನೆಲದಲ್ಲಿ ಬೀಳಿಸಿ ನಿನ್ನ ತಲೆಯನ್ನು ಚೆನ್ನಾಗಿ ಮೆಟ್ಟುವೆನೆಂದು ಪ್ರತಿಜ್ಞೆಯನ್ನು ಮಾಡಿದರು.

ತರುವಾಯ ದುರ್ಯೋಧನನು ದುಃಶಾಸನನೊಡನೆ 'ದುಃಶಾಸನನೇ! ಈ ನಮ್ಮ ದಾಸರ ವಸ್ತ್ರವನ್ನು ಸೆಳೆದುಕೊ' ಎಂದು ಹೇಳಿದನು. ದುಃಶಾಸನನು ಅವರ ಬಳಿಗೆ ಹೋದನು. ಅವರು ನಾರುವಸ್ತ್ರವನ್ನು ಧರಿಸಿ ತಮ್ಮ ವಸ್ತ್ರವನ್ನು ಕೊಟ್ಟುಬಿಟ್ಟರು. ಆಮೇಲೆ ದುರ್ಯೋಧನನು ದುಃಶಾಸನನೊಡನೆ ದ್ರೌಪದೀ ದೇವಿಯರ ಸೀರೆಯನ್ನು ಅಪಹರಿಸಲಿಕ್ಕೆ ಹೇಳಿದನು. ದುಃಶಾಸನನು ಹಾಗೆ ಸೆಳೆಯುತ್ತಿರಲು ಶ್ರೀಕೃಷ್ಣಪರಮಾತ್ಮನು ದ್ರೌಪದೀದೇವಿಯರಿಗೆ ಅಕ್ಷಯ ವಸ್ತ್ರವಾಗುವಂತೆ ಅನುಗ್ರಹಿಸಿದನು. ವಸ್ತ್ರವು ರಾಶಿರಾಶಿಯಾಗಿ ಬೀಳಲು ದುರ್ಯೋಧನನು ಕೋಪವುಳ್ಳವನಾಗಿ 'ಬೇಗನೇ ಈ ದ್ರೌಪದಿಯನ್ನು ಮನೆಯೊಳಗೆ ಸೆಳೆದುಕೊಂಡು ಹೋಗು' ಎಂದನು. ಅದನ್ನು ಕೇಳಿ ದ್ರೌಪದೀದೇವಿಯರು ನಿನ್ನನ್ನು ಭೀಮಸೇನದೇವರು ಸಂಹರಿಸುವರು' ಎಂದು ಪ್ರತಿಜ್ಞೆಯನ್ನು ಮಾಡಿದರು. ಭೀಮಸೇನದೇವರು ಆ ಪ್ರತಿಜ್ಞೆಯನ್ನು

ಅಂಗೀಕರಿಸಿದರು.

ಕೊನೆಗೆ ದುಃಶಾಸನನು ದ್ರೌಪದೀದೇವಿಯರನ್ನು ಸೆಳೆಯಲು ಭೀಮಸೇನ ದೇವರು ಕೋಪಿಸಿಕೊಂಡು ಏಳಲು ನಾನಾ ಭಯಂಕರ ದುರ್ನಿಮಿತ್ತಗಳು ಆದವು. ತರುವಾಯ ವಿದುರನ ಮಾತಿನಿಂದ ಧೃತರಾಷ್ಟ್ರನು ದ್ರೌಪದೀದೇವಿಯರನ್ನು ಬಿಡಿಸಿ ಬೇಕಾದ ವರವನ್ನು ಕೇಳಿಕೊಳ್ಳುವಂತೆ ಹೇಳಿದನು. ಅವರ ಮಾತಿನಂತೆ ಪಾಂಡವರನ್ನು ಅವರ ರಾಜ್ಯವನ್ನು ಬಿಡಿಸಿದನು. ಅವರು ಇಂದ್ರಪ್ರಸ್ಥಕ್ಕೆ ಹೋದರು.

ಪುನಃ ದುಃಶಾಸನನ ಮಾತಿನಿಂದ ಧೃತರಾಷ್ಟ್ರನು ಪಾಂಡವರನ್ನು ಪಗಡೆ ಆಟಕ್ಕೆ ಕರೆಸಿದನು. ಆಗ ದುರ್ಯೋಧನನು ದುಃಶಾಸನೊಡನೆ ಯೋಚಿಸಿ ಪಗಡೆ ಆಟದಲ್ಲಿ ಸೋತವರು ಹನ್ನೆರಡು ವರ್ಷ ವನವಾಸವನ್ನು ಮಾಡಬೇಕೆಂದೂ ಒಂದು ವರ್ಷ ಹತ್ತಿರವೇ ಪ್ರಸಿದ್ಧವಾದ ರಾಜನ ಊರಿನಲ್ಲಿ ಅಜ್ಞಾತವಾಸವನ್ನು ಮಾಡಬೇಕೆಂದೂ ಅಜ್ಞಾತವಾಸ ಮಾಡುತ್ತಿರುವಾಗ ದ್ರೌಪದೀದೇವಿಯರನ್ನೋ, ಪಾಂಡವರಲ್ಲಿ ಯಾರಾದರೂ ಒಬ್ಬರನ್ನು ಕಂಡುಹಿಡಿದರೂ ಎಲ್ಲರೂ ಪುನಃ ಹನ್ನೆರಡು ವರ್ಷ ವನವಾಸವನ್ನು ಒಂದು ವರ್ಷ ಅಜ್ಞಾತವಾಸವನ್ನು ಮಾಡಬೇಕೆಂದೂ ಪಂಧ್ಯವನ್ನು ಮಾಡಿದನು. ತರುವಾಯ ಪಗಡೆ ಆಟದಲ್ಲಿ ಸೋತು ವನಕ್ಕೆ ಹೋದರು. ಆಗ ದುರ್ಯೋಧನನು ಭೀಮಸೇನದೇವರನ್ನು ಅಪಹಾಸ ಮಾಡುತ್ತಾ ಅವರ ಹಿಂದೆಯೇ ಅವರ ಹಾಗೆಯೇ ನಡೆಯುತ್ತಾ ಹೋದನು. ಆಗ ಭೀಮಸೇನದೇವರು ಸಭೆಯಿಂದ ಅರ್ಧ ಹೊರಗೆ ಹೋಗಿದ್ದರು. ಅವರು ಕಣ್ಣುಕೆಂಪಗೆ ಮಾಡಿಕೊಂಡು ಯುದ್ಧದಲ್ಲಿ ನಿನ್ನ ಇನ್ನೊಂದು ತೊಡೆಯನ್ನು ಮುರಿದು ಹಾಕುವೆನು ಎಂದು ಹೇಳಿ ಹೊರಟು ಹೋದರು.

ಪಾಂಡವರು ವನವಾಸಕ್ಕೆ ಹೋದಮೇಲೆ ಹಸ್ತಿನಾವತಿಗೆ ಮೈತ್ರೇಯರು ಬಂದರು. ಧೃತರಾಷ್ಟ್ರನು ಮಕ್ಕಳಿಂದ ಸಹಿತನಾಗಿ ಅವರನ್ನು ಪೂಜಿಸಿದನು. ಆಗ ಮೈತ್ರೇಯರು ಪಾಂಡವರನ್ನು ಸ್ತುತಿಸಿ ಅವರ ರಾಜ್ಯವನ್ನು ಕೊಡಬೇಕೆಂದು ಹೇಳಿದರು. ಮತ್ತು ವಿಶೇಷವಾಗಿ ಭೀಮಸೇನದೇವರ ಬಲವನ್ನು ಸ್ತುತಿಸಿದರು. ಅವರು ಮಾಡಿದ ಕಿರ್ಮೀರಸಂಹಾರಾದಿಗಳನ್ನು ಹೇಳಿದರು. ಅದನ್ನು ಕೇಳಿ ದುರ್ಯೋಧನನು ನಗುವವನಾಗಿ ತನ್ನ ತೊಡೆಯನ್ನು ಬಡೆದುಕೊಂಡನು. ಅದನ್ನು ನೋಡಿ ಮೈತ್ರೇಯರು ನಿನ್ನ ತೊಡೆಯನ್ನು ಸೀಳುವುದಕ್ಕಾಗಿ ಭಯಂಕರವಾದ ಯುದ್ಧವು ನಡೆಯಲಿ ಎಂದು ಶಪಿಸಿದರು. ಆಗ ಧೃತರಾಷ್ಟ್ರನು ಬಂದು ನಮಸ್ಕಾರ ಮಾಡಿ ಕೇಳಿಕೊಂಡರೂ ನೀನು ರಾಜ್ಯವನ್ನು ಕೊಡದೆ ಇದ್ದರೆ ಹಾಗೆಯೇ

ಆಗುವುದೆಂದು ಹೇಳಿ ಹೊರಟುಹೋದರು. ಧೃತರಾಷ್ಟ್ರನು ವಿದುರನು ಹೇಳಿದ ಭೀಮಸೇನದೇವರು ಮಾಡಿದ ಕಿರ್ಮೀರನ ಸಂಹಾರಾದಿಗಳನ್ನು ಕೇಳಿ ಭಯಪಟ್ಟನು.

ಪಾಂಡವರು ವನವಾಸದಲ್ಲಿದ್ದಾಗ ದುರ್ಯೋಧನನು ಪಾಂಡವರು ಮಾಡಿದ ರಾಜಸೂಯಯಾಗದ ಮೇಲಿನ ಸ್ಪರ್ಧೆಯಿಂದ ಪೌಂಡರೀಕ ಯಾಗವನ್ನು ಮಾಡಿದನು. ಆದರೆ ಆ ಯಾಗವು ರಾಜಸೂಯಯಾಗದ ಹದಿನಾರನೇ ಒಂದು ಭಾಗ ಫಲಕ್ಕೂ ಕಾರಣವಾಗಿರಲಿಲ್ಲ. ದುರ್ಯೋಧನನ ಅಪ್ಪಣೆಯಿಂದ ದುಃಶಾಸನನು ಪಾಂಡವರಿಗೆ ಅವಮಾನ ಮಾಡುವುದಕ್ಕಾಗಿ ಯಾಗಕ್ಕೆ ಬರಬೇಕೆಂದು ದೂತನನ್ನು ಕೊಟ್ಟು ಕಳುಹಿಸಿದನು. ಭೀಮಸೇನದೇವರು ಆ ದೂತನೊಡನೆ 'ನಾವು ಈ ಯಾಗಕ್ಕೆ ಬರುವವರಲ್ಲ, ಯುದ್ಧವೆಂಬ ಯಾಗಕ್ಕೆ ಬರುವವರು' ಎಂದು ಹೇಳಿ ಕಳುಹಿಸಿಬಿಟ್ಟರು.

ಸ್ವಲ್ಪ ದಿವಸವಾದ ಮೇಲೆ ದುರ್ಯೋಧನನು ತಮ್ಮಂದಿರಿಂದಲೂ ಕರ್ಣ ಶಕುನಿಯಿಂದಲೂ ಕೂಡಿಕೊಂಡು ಪತ್ನೀಸಹಿತರಾಗಿ ಪಾಂಡವರಿಗೂ ದ್ರೌಪದೀ ದೇವಿಯರಿಗೂ ತಮ್ಮ ಐಶ್ವರ್ಯವನ್ನು ತೋರಿಸಿ ಅವಮಾನ ಮಾಡುವುದಕ್ಕಾಗಿ, ಬಂಗಾರರತ್ನಗಳಿಂದ ವಿಚಿತ್ರಗಳಾದ ರಥಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ, ಪದಾತಿಗಳಿಂದಲೂ ಸಹಿತರಾಗಿ ವಿಚಿತ್ರ ವಸ್ತ್ರಪುಷ್ಪಗಳಿಂದ ಅಲಂಕೃತರಾಗಿ ಪಾಂಡವರು ವಾಸಮಾಡುತ್ತಿದ್ದ ದ್ವೈತವನಕ್ಕೆ ಬೇಗನೆ ಹೋದನು. ಗೋವುಗಳನ್ನು ಎಣಿಸುವ ನೆಪದಿಂದ ಹೋದನು. ಇದನ್ನು ತಿಳಿದು ಇಂದ್ರದೇವರು ದುರ್ಯೋಧನನ ತೇಜಸ್ಸಿನ ಭಂಗವನ್ನು ಇಚ್ಛಿಸುವವರಾಗಿ ಚಿತ್ರಸೇನ ಎಂಬ ಗಂಧರ್ವನಿಗೆ ಸಾಮರ್ಥ್ಯವನ್ನು ಕೊಟ್ಟು ದುರ್ಯೋಧನನನ್ನು ಕಟ್ಟಿತರಲಿಕ್ಕೆ ಆಜ್ಞಾಪಿಸಿದರು. ಆ ಚಿತ್ರಸೇನನು ಅರುವತ್ತು ಸಾವಿರ ಪ್ರಧಾನನಾಯಕರಿಂದ ಕೂಡಿದ ಗಂಧರ್ವ ಶ್ರೇಷ್ಠರಿಂದ ಕೂಡಿಕೊಂಡು, ದುರ್ಯೋಧನನ ಪುರುಷರು ದುರ್ಯೋಧನನ ಆಜ್ಞೆಯಿಂದ ಅಲ್ಲಿಗೆ ಬಂದು 'ರಾಜೇಶ್ವರನಾದ ದುರ್ಯೋಧನನು ಇಲ್ಲಿಗೆ ಸ್ನಾನ ಮಾಡಲಿಕ್ಕೆ ಬರುವನು. ಆದುದರಿಂದ ಅವನ ಆಜ್ಞೆಯನ್ನು ಶಿರಸಾ ವಹಿಸಿಕೊಂಡು ಇಲ್ಲಿಂದ ಹೊರಟು ಹೋಗಿರಿ' ಎಂದು ಹೇಳಿದನು. ಅವರ ಮಾತನ್ನು ಕೇಳಿ ಗಂಧರ್ವರೆಲ್ಲರೂ ಗಟ್ಟಿಯಾಗಿ ನಗುವವರಾದರು. 'ನಾವು ಮೂರುಲೋಕಗಳಿಗೂ ಅಧಿಪತಿಯಾದ ಇಂದ್ರದೇವರು ಆಜ್ಞೆಯನ್ನು ಮಾತ್ರ ನಾವು ಬಹುಮಾನಿಸುವೆವು. ಚಕ್ರವರ್ತಿಗಳಾದ ಮನುಷ್ಯರ ಆಜ್ಞೆಯನ್ನು ಕೇಳಲಾರೆವು.

ಹೀಗಿರುವಾಗ ಅಲ್ಪಸಾಮರ್ಥ್ಯವುಳ್ಳ ದುರ್ಯೋಧನನ ಆಜ್ಞೆಯನ್ನು ನಾವು ಏಕೆ ಕೇಳುವೆವು' ಎಂದು ಹೇಳಿದರು.

ಅದನ್ನು ಕೇಳಿ ದುರ್ಯೋಧನನಿಗೆ ಕೋಪವು ಬಂದಿತು. ಅವನು ಗಂಧರ್ವ ಶ್ರೇಷ್ಠರನ್ನು ಬಾಣಸಮೂಹಗಳಿಂದ ಬಡೆಯುವವನಾದನು. ಕರ್ಣನಿಂದ ಸಹಿತರಾದ ದುರ್ಯೋಧನನ ತಮ್ಮಂದಿರೂ ಗಂಧರ್ವರನ್ನು ಬಡೆದರು. ಗಂಧರ್ವರು ದುರ್ಯೋಧನನ ಸೇನೆಯನ್ನು ಬಡೆದರು. ಒಂದು ಮುಹೂರ್ತಕಾಲ ಗಂಧರ್ವರಿಗೂ ದುರ್ಯೋಧನನಿಗೂ ಸಮವಾಗಿಯೇ ಯುದ್ಧವು ನಡೆಯಿತು. ತರುವಾಯ ಇಂದ್ರದೇವರ ವರದಿಂದಲೂ ಮಾಯೆಯಿಂದಲೂ ಗಂಧರ್ವರು ಪ್ರಬಲರಾದರು. ಅರ್ಜುನನಿಗಾಗಿ ದುರ್ಯೋಧನನಿಗೆ ತೇಜೋಭಂಗವನ್ನು ಮಾಡಬೇಕೆಂದೇ ಬ್ರಹ್ಮದೇವರೂ ಪರಮಾತ್ಮನೂ ಕೂಡ ಗಂಧರ್ವರಿಗೆ ಬಲವನ್ನು ಕೊಟ್ಟರು. ಅದರಿಂದ ಅವರು ದುರ್ಯೋಧನನನ್ನು ಎದುರಿಸಿದರು. ಆ ಚಿತ್ರಸೇನನು ಮೊದಲು ಕರ್ಣನೊಡನೆಯೇ ಯುದ್ಧಮಾಡಿದನು. ಕರ್ಣನು ಅರ್ಜುನನ ಮೇಲೆ ಸ್ಪರ್ಧೆಯಿಂದ ಯುದ್ಧ ಮಾಡಿದ ಕಾರಣ ಪರಶುರಾಮದೇವರ ಮಾತಿನಂತೆ ಯುದ್ಧಮಾಡಲಿಕ್ಕೆ ಸಮರ್ಥನಾಗಲಿಲ್ಲ. ಅವನ ರಥವು ಮುರಿದುಹೋಗಲು ವಿಕರ್ಣನ ರಥವನ್ನು ಏರಿಕೊಂಡು ಅವನ ಕುದುರೆಗಳನ್ನು ಓಡಿಸಿಕೊಂಡು ಅವನೊಡನೆ ಶೀಘ್ರವಾಗಿ ಓಡಿಹೋದನು. ದುರ್ಯೋಧನನು ಚಿತ್ರಸೇನನೊಡನೆ ಯುದ್ಧಮಾಡಿದನು. ಒಂದು ಮೂಹೂರ್ತಕಾಲ ಚಿತ್ರಸೇನ ನೊಡನೆ ಸಮಸಮವಾಗಿ ಯುದ್ಧ ಮಾಡಿದನು. ಅನಂತರದಲ್ಲಿ ಬಹುಗಂಧರ್ವರು ಮಾಯೆಯಿಂದ ಅವನ ರಥವನ್ನು ಮುರಿದು ಹಾಕಿದರು. ಕೊನೆಗೆ ದುರ್ಯೋಧನನು ನೆಲದಲ್ಲಿ ನಿಂತುಕೊಂಡಿದ್ದನು. ಚಿತ್ರಸೇನನು ಅವನನ್ನು ಹಿಡಿದು ಬಿಟ್ಟನು. ಮಹಾಬಲಿಷ್ಠನಾಗಿದ್ದರೂ ದುರ್ಯೋಧನನು ಇಂದ್ರದೇವರ ಬ್ರಹ್ಮದೇವರ ವರದಿಂದಲೂ ಪರಮಾತ್ಮನ ಆಜ್ಞೆಯಿಂದಲೂ ಅಭಿವೃದ್ಧನಾದ ಚಿತ್ರಸೇನನ ವಶನಾದನು. ಚಿತ್ರಸೇನನು ಇಂದ್ರದೇವರು ಕೊಟ್ಟಿದ್ದ ವೈದ್ಯುತಪಾಶಗಳಿಂದ ಕಟ್ಟಿಹಾಕಿದನು. ದುರ್ಯೋಧನನ ತಮ್ಮಂದಿರನ್ನೂ ರಾಜಪತ್ನಿಯರನ್ನೂ ಎಲ್ಲರನ್ನೂ ಇಂದ್ರದೇವರ ದೂತರಾದ ಗಂಧರ್ವರು ಕಟ್ಟಿಹಾಕಿ ಎಲ್ಲರನ್ನೂ ಕರಕೊಂಡು ಆಕಾಶಮಾರ್ಗದಲ್ಲಿ ಹೊರಟುಹೋದರು.

ಆಗ ದುರ್ಯೋಧನನ ಮಂತ್ರಿಗಳು ಪಾಂಡವರ ಬಳಿಗೆ ಬಂದು ಕೂಗಿ ಕೊಂಡರು. ವಿಷಯವೆಲ್ಲವನ್ನೂ ತಿಳಿಸಿದರು. ಅದನ್ನು ಕೇಳಿ ಭೀಮಸೇನದೇವರು

'ವಿಷಯವೆಲ್ಲವನ್ನೂ ನಾನು ತಿಳಿದಿರುವೆನು. ದುರ್ಯೋಧನನು ನಮಗೆ ತನ್ನ ಐಶ್ವರ್ಯವನ್ನು ತೋರಿಸಿ ಅವಮಾನ ಮಾಡಬೇಕೆಂದು ಬಂದನು. ಅದನ್ನು ತಿಳಿದು ಇಂದ್ರದೇವರು ಈ ಕಾರ್ಯವನ್ನು ಮಾಡಿದರು. ಇದರಿಂದ ನಮ್ಮ ಕಾರ್ಯಕ್ಕೊಂದು ಹಾನಿಯಲ್ಲ' ಎಂದು ಹೇಳಿ ಬಿಟ್ಟರು. ಆದರೂ ಕೊನೆಗೆ ಧರ್ಮರಾಜನಿಂದ ಪ್ರೇರಿತರಾಗಿ ಭೀಮಾರ್ಜುನರು ಹೋಗಿ ಚಿತ್ರಸೇನನನ್ನು ಜಯಿಸಿ ದುರ್ಯೋಧನ ನನ್ನು ಬಿಡಿಸಿದರು. ಚಿತ್ರಸೇನನು ಭೀಮಾರ್ಜುನರೊಡನೆ ದುರ್ಯೋಧನನು ದುರಾಲೋಚನೆ ಮಾಡಿದ ವಿಷಯವನ್ನು ತನ್ನೊಡನೆ ಇಂದ್ರದೇವರು ತಿಳಿಸಿದ್ದನ್ನು ಹೇಳಿದನು. ಅದನ್ನು ಕೇಳಿ ದುರ್ಯೋಧನನಿಗೆ ಬಹಳ ನಾಚಿಕೆಯಾಯಿತು. ತರುವಾಯ ಎಲ್ಲರೂ ಧರ್ಮರಾಜನಿದ್ದಲ್ಲಿಗೆ ಹೋದರು. ಧರ್ಮರಾಜನು ಚಿತ್ರಸೇನನನ್ನು ಸತ್ಕರಿಸಿ ಕಳುಹಿಸಿ ದುರ್ಯೋಧನನೊಡನೆ ಇನ್ನುಮೇಲೆ ಹೀಗೆ ಮಾಡಬೇಡ ಎಂದು ಹೇಳಿ ಕಳುಹಿಸಿದನು.

ಪಾಂಡವರಿಂದ ಬಿಡಿಸಲ್ಪಟ್ಟ ಸಪರಿವಾರನಾದ ಪತ್ನಿಯರಿಂದ ಸಹಿತನಾದ ದುರ್ಯೋಧನನು ಅಲ್ಲಿಂದ ಸ್ವಲ್ಪ ದೂರಹೋದವನಾಗಿ ಎಲ್ಲರೂ ಒಟ್ಟಿಗೆ ಸೇರುವುದಕ್ಕಾಗಿ ಒಂದು ಸ್ಥಳದಲ್ಲಿ ಕೂತುಕೊಂಡನು. ಅಲ್ಲಿ ಕರ್ಣನನ್ನು ನೋಡಿ ದನು. ಬಹಳ ಲಜ್ಜೆಯನ್ನು ಹೊಂದಿದನು. ಕರ್ಣನು ದುರ್ಯೋಧನನ್ನು ನೋಡಿ ದುರ್ಯೋಧನನು ಗಂಧರ್ವರನ್ನು ಜಯಿಸಿ ಬಂದಿರುವನೆಂದು ತಿಳಿದುಕೊಂಡು 'ರಾಜನೇ! ದೈವೇಚ್ಛೆಯಿಂದ ಜಯಿಸಿರುವಿ' ಎಂದನು. ಆಗ ದುರ್ಯೋಧನನು ನಾಚುತ್ತಾ ಇಲ್ಲವೆಂದನು. ನಡೆದ ವಿಷಯವೆಲ್ಲವನ್ನು ಹೇಳಿ ತುಂಬಾ ದುಃಖದಿಂದ ನಾನು ಇಲ್ಲಿಯೇ ಉಪವಾಸದಿಂದ ಸಾಯುವವರೆಗೆ ಇರುವೆನು' ಎಂದು ಹೇಳಿದನು. ಕರ್ಣನೂ ದುಃಶಾಸನನೂ ಶಕುನಿಯೂ ಇತರರೂ ಯಾಚಿಸಿಕೊಂಡರೂ ದುರ್ಯೋಧನನು ಏಳಲೇ ಇಲ್ಲ.

ತರುವಾಯ ರಾತ್ರಿಯಾಗಲು ಪಾತಾಳದಲ್ಲಿ ಇದ್ದ ರಾಕ್ಷಸರು ತಮ್ಮ ಪಕ್ಷಕ್ಕೆ ಪರಾಜಯವು ಬಂದಿತೆಂದು ಯೋಚನೆ ಮಾಡಿ ಶುಕ್ರಾಚಾರ್ಯರಿಂದ ಹೋಮ ಮಾಡಿಸಿ ಒಂದು ಕೃತ್ಯೆಯೆಂದು ಹೆಸರುಳ್ಳ ದುರ್ದೇವತೆಯನ್ನು ನಿರ್ಮಿಸಿದರು. ಆ ಕೃತ್ಯೆಯು ದುರ್ಯೋಧನನಿದ್ದಲ್ಲಿಗೆ ಬಂದು ಮಂತ್ರಿಗಳೆಲ್ಲರೂ ಮಲಗಿರಲು ದುರ್ಯೋಧನನ್ನು ಎತ್ತಿಕೊಂಡು ಪಾತಾಲಕ್ಕೆ ಹೋಯಿತು. ತರುವಾಯ ದೈತ್ಯರು ದುರ್ಯೋಧನನೊಡನೆ 'ವೀರನೇ! ನೀನು ದಿವ್ಯ ಪುರುಷನು. ನಾವು ರುದ್ರದೇವರನ್ನು ತಪಸ್ಸಿನಿಂದ ಸಂತೋಷಪಡಿಸಿ ಅವರ ಅನುಗ್ರಹದಿಂದ

ವಜ್ರಕಾಯನಾಗಿಯೂ ಅವಧ್ಯನಾಗಿಯೂ ನೀನು ಹುಟ್ಟುವಂತೆ ಮಾಡಿರುವೆವು. ನೀನು ನಮ್ಮ ಪಕ್ಷದವನು. ಪಾಂಡವರು ದೇವತಾಪಕ್ಷದವರು. ಈಗ ಸರ್ವದೇವತೆಗಳ ವರದಿಂದ ಯುದ್ಧದಲ್ಲಿ ಸೋತಿರುವಿ. ಇನ್ನು ನೀನು ಪಾಂಡವರನ್ನು ಜಯಿಸುವಂತೆ ನಾವು ಮಾಡುವೆವು. ಕೃಷ್ಣ ಪರಮಾತ್ಮನಿಂದ ಮೃತನಾದ ನರಕಾಸುರನು ಕರ್ಣನಲ್ಲಿ ಆಶ್ರಯಿಸಿರುವನು. ಅವನು ಕೃಷ್ಣಾರ್ಜುನರಿಬ್ಬರನ್ನು ಇಲ್ಲದಂತೆ ಮಾಡುವನು. ನಿನ್ನ ಜಯಕ್ಕಾಗಿ ಭೀಮಾದಿಗಳೆಲ್ಲರನ್ನು ನಾವು ಪ್ರವೇಶಿಸುವೆವು. ತಪಸ್ಸು ಮಾಡಿ ನಿನಗೂ ಕರ್ಣಾದಿಗಳಿಗೂ ಬಲವು ಹೆಚ್ಚಾಗುವಂತೆ ಮಾಡುವೆವು. ರಾಜನೇ! ಆದುದರಿಂದ ನೀನು ಭಯರಹಿತನಾಗಿ ನಿನ್ನ ರಾಜ್ಯಕ್ಕೆ ಹೋಗಿ ರಾಜ್ಯವನ್ನು ಪರಿಪಾಲಿಸುತ್ತಿರು. ಈ ರಹಸ್ಯವನ್ನು ಒಬ್ಬರಿಗೂ ಹೇಳದಿರು' ಎಂದು ಆ ಕೃತ್ಯದಿಂದ ದುರ್ಯೋಧನನನ್ನು ಮೊದಲು ಇಂದ್ರಪ್ರಸ್ಥಕ್ಕೇ ಕಳುಹಿಸಿದರು. ತರುವಾಯ ದುರ್ಯೋಧನನು ತನ್ನ ದೇಹದ ಪೂರ್ವಾರ್ಧವು ಪಾರ್ವತೀ ದೇವಿಯಿಂದ ಮಾಡಲ್ಪಟ್ಟಿದೆಯೆಂದು ಉತ್ತರಾರ್ಧವು ರುದ್ರದೇವರಿಂದ ನಿರ್ಮಿಸಲ್ಪಟ್ಟಿದೆಯೆಂದೂ ತಾನು ಸಾಯುವುದಿಲ್ಲವೆಂದೂ ತಿಳಿದುಕೊಂಡು ರಾಜ್ಯಭಾರವನ್ನು ಮಾಡಲಿಕ್ಕೆ ಮನಸ್ಸುಳ್ಳವನಾದನು. ತಾನು ಅನುಭವಿಸಿದ ವಿಷಯವನ್ನು ಮಾತ್ರ ಒಬ್ಬರೊಡನೆಯೂ ತಿಳಿಸಲಿಲ್ಲ.

ಬೆಳಗಾಗಲು ಕರ್ಣನು ಬಂದು ದುರ್ಯೋಧನನೊಡನೆ 'ರಾಜನೇ! ನೀನು ನಿನ್ನ ಭೃತ್ಯರಾದ ಪಾಂಡವರಿಂದ ಬಿಡಿಸಲ್ಪಟ್ಟ ನಿನಗೆ ಬಹುಮಾನವೇ ಉಂಟಾಗಿರುವುದು. ನಿನ್ನ ಭೃತ್ಯರೇ ಹೀಗಿರಲು ನೀನು ಹೇಗಿರಬೇಕು? ಮತ್ತು ಅರ್ಜುನನ ಮಹಿಮೆಯ ವಿಷಯದಲ್ಲಿ ಸಂದೇಹವನ್ನು ಬಿಡು. ಅರ್ಜುನನನ್ನು ಕೊಲ್ಲುವವರೆಗೆ ಇನ್ನೊಬ್ಬರಿಂದ ಪಾದವನ್ನು ತೊಳಿಸಲಾರೆನು' ಎಂದು ಹೇಳಿದನು. ಮತ್ತು ದುರ್ಯೋಧನನ ತಮ್ಮಂದಿರೂ ಶಕುನಿಯೂ ಪ್ರಾರ್ಥಿಸಲು ದುರ್ಯೋಧನನು ರಥವನ್ನು ಏರಿಬೇಗನೇ ಹಸ್ತಿನಾವತಿಗೆ ಹೋದನು.

ಪಾಂಡವರು ಅಜ್ಞಾತವಾಸವನ್ನು ಮಾಡುತ್ತಿರುವಾಗ ವಿರಾಟನಗರದಲ್ಲಿ ಭೀಮಸೇನದೇವರು ಗಂಧರ್ವರ ಹೆಸರನ್ನು ಹೇಳಿ ಕೀಚಕನನ್ನು ಸಂಹರಿಸಿದರು. ಅದನ್ನು ದೂತರು ದುರ್ಯೋಧನನಿಗೆ ತಿಳಿಸಲು ಬಲಿಷ್ಠನಾದ ಕೀಚಕನನ್ನು ಸಂಹರಿಸಲಿಕ್ಕೆ ಅವನಿಂದ ಬಲಿಷ್ಠರಾದ ಭೀಮಸೇನದೇವರಿಂದಲೇ ಸಾಧ್ಯವೆಂದು ನಿಶ್ಚಯಿಸಿ ವಿರಾಟನಗರದಲ್ಲಿ ಪಾಂಡವರು ಇರುವರೆಂದು ಊಹಿಸಿ ಸೈನ್ಯ ಸಹಿತವಾಗಿ ಅಲ್ಲಿಗೆ ಹೋಗಿ ವಿರಾಟರಾಜನ ಗೋವುಗಳನ್ನು ಅಪಹರಿಸಿದನು. ಆಗ ಅರ್ಜುನನು

ಉತ್ತರನನ್ನು ಸಾರಥಿಯನ್ನಾಗಿ ಮಾಡಿಕೊಂಡು ಬಂದು ಯುದ್ಧ ಮಾಡಿ ಎಲ್ಲರನ್ನು ಜಯಿಸಿ ಗೋವುಗಳನ್ನು ಬಿಡಿಸಿಕೊಂಡು ಹೋದನು. ಅರ್ಜುನನು ಯುದ್ಧಕ್ಕೆ ಬಂದಾಗ ಚಾಂದ್ರಮಾನ ರೀತಿಯಿಂದ ಹದಿಮೂರು ವರ್ಷಗಳೂ ಕಳೆದು ಹೋಗಿದ್ದವು. ಸೌರಮಾನ ರೀತಿಯಿಂದ ಸಂಪೂರ್ಣವಾಗಿರಲಿಲ್ಲ. ಅದನ್ನೇ ನೆಪ ವಾಗಿ ಇಟ್ಟುಕೊಂಡು ದುರ್ಯೋಧನನು ಪಾಂಡವರಿಗೆ ರಾಜ್ಯವನ್ನು ಕೊಡಲಾರೆ ನೆಂದನು. ಭೀಷ್ಮಾಚಾರ್ಯರು ಮೊದಲಾದವರು ಪಾಂಡವರು ಹೇಳಿದ ರೀತಿಯಾಗಿ ಹದಿಮೂರು ವರ್ಷಗಳ ಅವಧಿಯು ಮುಗಿಯಿತೆಂದು ನ್ಯಾಯದಿಂದ ಸಮರ್ಥಿ ಸಿದರು. ಆದರೂ ಪಾಪಿಯಾದ ದುರ್ಯೋಧನನು ಕೇಳದೆ ಪಾಂಡವರಿಗೆ ನಿಮ್ಮ ಅಜ್ಞಾತವಾಸ ಸಮಯದಲ್ಲಿ ಅರ್ಜುನನು ಕಾಣಿಸಿದ ಕಾರಣ ಪುನಃ ಹನ್ನೆರಡುವರ್ಷ ವನವಾಸಕ್ಕೆ ಹೋಗಿರಿ ಎಂದು ಹೇಳಿಕಳುಹಿಸಿದನು. ಆಗ ಧರ್ಮರಾಜನು 'ನಮ್ಮ ಅವಧಿಯು ಮುಗಿಯಿತೋ ಇಲ್ಲವೋ ಎಂಬುದನ್ನು ಬ್ರಾಹ್ಮಣರು ತಿಳಿದಿರುವರು' ಎಂದು ಹೇಳಿಕಳುಹಿಸಿಬಿಟ್ಟನು.

ತರುವಾಯ ದುರ್ಯೋಧನನು ಯುದ್ಧವನ್ನು ಮಾಡುವುದೆಂದೇ ನಿಶ್ಚಯಿಸಿದವನಾಗಿ ಕೃಷ್ಣಪರಮಾತ್ಮನ ಸಹಾಯವನ್ನು ಕೇಳುವುದಕ್ಕಾಗಿ ವೇಗದಿಂದ ದ್ವಾರಕಾಪಟ್ಟಣಕ್ಕೆ ಹೋದನು. ಅವನ ಹಿಂದೆಯೇ ಅರ್ಜುನನೂ ಹೋದನು. ಆಗ ಇವರು ಬರುವುದನ್ನು ತಿಳಿದುಕೊಂಡೇ ಸರ್ವಜ್ಞನಾದ ಶ್ರೀಕೃಷ್ಣಪರಮಾತ್ಮನು ನಿದ್ರೆ ಬಂದವನಂತೆ ನಟಿಸುತ್ತಾ ಮಲಗಿದ್ದನು. ಮೊದಲು ಹೋದ ದುರ್ಯೋಧನನು ತಾನು ರಾಜಾಧಿರಾಜನಾದವನು. ಕೃಷ್ಣನ ಪಾದದ ಬಳಿಯಲ್ಲಿ ನಿಲ್ಲಬಾರದೆಂದು ತಲೆಯ ಬಳಿಯಲ್ಲಿ ಹೋಗಿ ಕೂತುಕೊಂಡ. ಆಮೇಲೆ ಬಂದ ಅರ್ಜುನನು ಭಕ್ತಿಯಿಂದ ಕೃಷ್ಣ ಪರಮಾತ್ಮನ ಪಾದದ ಬುಡದಲ್ಲಿ ಕೈಮುಗಿದುಕೊಂಡು ಭಕ್ತಿಯಿಂದ ನಿಂತು ಕೊಂಡನು. ತರುವಾಯ ಕೃಷ್ಣಪರಮಾತ್ಮನು ಎದ್ದವನಾಗಿ ಮೊದಲು ಅರ್ಜುನನನ್ನು ನೋಡಿ ದುರ್ಯೋಧನನು ಬಂದದ್ದು ತಿಳಿದಿದ್ದರೂ 'ಅರ್ಜುನ! ಸ್ವಾಗತ' ಎಂದನು. ಆಗ ದುರ್ಯೋಧನು ನಾನು ಮೊದಲೇ ಬಂದಿರುವೆನೆಂದನು. ಆಗ ಭಗವಂತನು 'ನಿನಗೂ ಸ್ವಾಗತ' ಎಂದನು. ತರುವಾಯ ಅವರಿಬ್ಬರು ಬಂದಿರುವ ಕಾರಣವನ್ನು ಕೇಳಿ 'ಒಬ್ಬನು ಪೂರ್ವದಲ್ಲಿ ಬಂದವನು. ಒಬ್ಬನು ಮೊದಲು ಕಾಣಿಸಿಕೊಂಡವನು. ಆದುದರಿಂದ ನಾನು ಇಬ್ಬರಿಗೂ ಸಮವಾಗಿ ಮಾಡುವೆನು. ಒಂದು ಪಕ್ಷದಲ್ಲಿ ನಾನು ಆಯುಧರಹಿತನಾಗಿ ಬರುವೆನು. ಮತ್ತೊಂದು ಪಕ್ಷಕ್ಕೆ ಬಲಿಷ್ಠರಾದ ಪದಾತಿಗಳಾದ ಹತ್ತುಲಕ್ಷ ನನ್ನ ಮಕ್ಕಳು ಬರುವರು'

ಎಂದು ಹೇಳಿದನು. ಆಗ ಅರ್ಜುನನು ಪರಮಾತ್ಮನಲ್ಲಿ ಭಕ್ತಿಯುಳ್ಳವನಾದ ಕಾರಣ ಕೃಷ್ಣಪರಮಾತ್ಮನನ್ನೇ ಕೇಳಿಕೊಂಡನು. ದುರ್ಯೋಧನನು ಅವನಲ್ಲಿ ಭಕ್ತಿಯಿಲ್ಲದವ ನಾದ ಕಾರಣ ಹತ್ತುಲಕ್ಷ ಪರಮಾತ್ಮನ ಮಕ್ಕಳು ತನ್ನ ಪಕ್ಷಕ್ಕೆ ಬರಬೇಕೆಂದು ಕೇಳಿಕೊಂಡನು.

ತರುವಾಯ ದುರ್ಯೋಧನನು ಬಲರಾಮದೇವರ ಬಳಿಗೆ ಸಹಾಯವನ್ನು ಮಾಡಬೇಕೆಂದು ಕೇಳಿಕೊಳ್ಳಲಿಕ್ಕೆ ಹೋದನು. ಆದರೆ ಬಲರಾಮದೇವರು ಕೃಷ್ಣಪರಮಾತ್ಮನ ಭಯದಿಂದ ಸಹಾಯವನ್ನು ಮಾಡುವುದಿಲ್ಲವೆಂದು ಹೇಳಿಬಿಟ್ಟರು. ಉಪಪ್ಲಾವ್ಯನಗರದಲ್ಲಿ ಬಲರಾಮದೇವರು ದುರ್ಯೋಧನನ ಪಕ್ಷವಾಗಿ ಮಾತಾಡುತ್ತಿರಲು ಅವರನ್ನು ಕೃಷ್ಣಪರಮಾತ್ಮನ ಎದುರಲ್ಲಿಯೇ ಸಾತ್ಯಕಿಯು ಅವರನ್ನು ತಿರಸ್ಕರಿಸಿದನು. ಆಗ ಕೃಷ್ಣಪರಮಾತ್ಮನು ಒಂದೂ ಮಾತನ್ನು ಆಡದ ಕಾರಣ ದುರ್ಯೋಧನನ ಪಕ್ಷವನ್ನು ವಹಿಸುವುದು ಕೃಷ್ಣಪರಮಾತ್ಮನಿಗೆ ಸಮ್ಮತವಲ್ಲವೆಂದು ತಿಳಿದುಕೊಂಡು ದುರ್ಯೋಧನನ ಸಹಾಯಕ್ಕೆ ಹೋಗಲಿಲ್ಲ. ತರುವಾಯ ದುರ್ಯೋಧನನು ಕೃತವರ್ಮನಿಂದ ಸಹಿತನಾಗಿ ಹಸ್ತಿನಾವತಿಗೆ ಹೋದನು. ಅವನ ಪಕ್ಷದಲ್ಲಿ ಹನ್ನೊಂದು ಅಕ್ಷೌಹಿಣೀ ಸೇನೆಯು ಸೇರಿತು. ಪಾಂಡವರ ಪಕ್ಷದಲ್ಲಿ ಏಳು ಅಕ್ಷೌಹಿಣೀ ಸೇನೆಯು ಸೇರಿತು. ವಿಂದಾನುವಿಂದರು, ಜಾಯತ್ಸೇನನು, ಇತರ ಕೇಕಯರು, ಕ್ಷೇಮಧೂರ್ತಿಯು, ದಂಡಧರನೂ, ಕಲಿಂಗನೂ, ಅಂಬಷ್ಠನೂ, ಶ್ರುತಾಯು, ಅಚ್ಯುತಾಯು, ಬೃಹದ್ಬಲ, ಸುದಕ್ಷಿಣ, ಶ್ರುತಾಯುಧ, ಸೈಂಧವ, ಅಲಂಬುಸ, ಅಲಾಯುಧ, ಅಲಂಬಲ ಎಂಬ ರಾಕ್ಷಸರು ದುರ್ಯೋಧನ ಪಕ್ಷಕ್ಕೆ ಸೇರಿದರು.

ದುರ್ಯೋಧನನು ತಾನೇ ಭಗದತ್ತನ ಬಳಿಗೆ ಹೋಗಿ ಕೂಗಿ ಕರಕೊಂಡು ಬಂದನು. ಮಕ್ಕಳು ಮೊಮ್ಮಕ್ಕಳಿಂದ ಸಹಿತನಾಗಿ ಬಾಹ್ಲೀಕ ರಾಜನು ಭೀಷ್ಮ, ದ್ರೋಣ, ಕೃಪರೂ ಧೃತರಾಷ್ಟ್ರನ ಪ್ರೀತಿಗಾಗಿ ದುರ್ಯೋಧನನ ಪಕ್ಷದಲ್ಲಿ ಸೇರಿಕೊಂಡರು. ಶಲ್ಯನು ಪಾಂಡವರ ಬಳಿಗೆ ಬರುತ್ತಿದ್ದನು. ಅದನ್ನು ತಿಳಿದು ದುರ್ಯೋಧನನು ಅವನು ಬರುವ ದಾರಿಯಲ್ಲಿ ಸಭೆಗಳನ್ನು ಮಾಡಿಸಿದನು. ಅಲ್ಲಿ ಬಹಳ ಭೋಗಗಳನ್ನು ಮಾಡಿಸಿದನು. ಶಲ್ಯನು ಅವುಗಳೆಲ್ಲವನ್ನೂ ಧರ್ಮರಾಜನು ಮಾಡಿಸಿರುವನೆಂದು ತಿಳಿದುಕೊಂಡು ಯಾರು ಈ ಸಭೆಗಳನ್ನು ಮಾಡಿಸಿರುವನೋ ಅವನ ಅಭೀಷ್ಟವನ್ನು ನಾನು ಉಂಟುಮಾಡುವೆನು ಎಂದು ಹೇಳಿದನು. ಅದನ್ನು ಅಡಗಿಕೊಂಡು ಕೇಳುತ್ತಿದ್ದ ದುರ್ಯೋಧನನು ಎದುರಿಗೆ ಬಂದು ನಿನ್ನ ಮಾತನ್ನು ಸತ್ಯವನ್ನಾಗಿ

ಮಾಡಬೇಕೆಂದನು. ನನಗೆ ಯುದ್ಧಕ್ಕೆ ಸಹಾಯವನ್ನು ಮಾಡ ಬೇಕೆಂದನು. ಶಲ್ಯನು ತನ್ನ ಮಾತನ್ನು ಸತ್ಯಮಾಡುವುದಕ್ಕಾಗಿ ಹಾಗೆಯೇ ಆಗಲಿ ಎಂದನು. ತರುವಾಯ ಅವನು ಪಾಂಡವರ ಬಳಿಗೆ ಹೋಗಿ ಅವರಿಂದ ಅನುಜ್ಞೆಯನ್ನು ಪಡೆಯುವವನಾಗಿ ದುರ್ಯೋಧನನ ಪಕ್ಷಕ್ಕೆ ಬಂದನು.

ಕೃಷ್ಣಪರಮಾತ್ಮನು ಸಂಧಿಗಾಗಿ ಬಂದ ಸಮಯದಲ್ಲಿ ದುರ್ಯೋಧನನ ಮನೆಗೆ ಹೋಗಲು ದುರ್ಯೋಧನನು ಸತ್ಕಾರ ಮಾಡಿದರೂ ಅದನ್ನು ಪಾಂಡವರ ದ್ವೇಷಿಯೆಂಬ ಕಾರಣ ಸ್ವೀಕರಿಸಲಿಲ್ಲ. ಮರುದಿವಸದಲ್ಲಿ ಭಗವಂತನು ಸಭೆಯಲ್ಲಿ ಧೃತರಾಷ್ಟ್ರನೊಡನೆ ಪಾಂಡವರಿಗೆ ರಾಜ್ಯವನ್ನು ಕೊಡು ಎಂದು ಹೇಳಲು ಅವನು ನನ್ನ ಮಾತನ್ನು ಮೀರಿರುವ ಮಗನಿಗೆ ನೀನೇ ಬುದ್ಧಿಯನ್ನು ಹೇಳಬೇಕೆಂದನು. ಆಗ ಶ್ರೀಭಗವಂತನು ದುರ್ಯೋಧನನೊಡನೆ ರಾಜ್ಯವನ್ನು ಕೊಡುವಂತೆ ಹೇಳಲು ಪಾಪಿಯಾದ ಅವನು ತಮ್ಮಂದಿರಿಂದ ಸಹಿತನಾಗಿ ಸಭೆಯಿಂದ ಎದ್ದುಹೋಗಿ ಕೃಷ್ಣಪರಮಾತ್ಮನನ್ನೇ ಕಟ್ಟಿಹಾಕಲಿಕ್ಕೆ ಯೋಚಿಸಿದನು. ಪರಶುರಾಮದೇವರೂ ವೇದವ್ಯಾಸದೇವರೂ, ಧೃತರಾಷ್ಟ್ರಗಾಂಧಾರಿಯರೂ, ಭೀಷ್ಮಾದಿಗಳೂ, ಹೇಳಿದರೂ ದುರ್ಬುದ್ಧಿಯುಳ್ಳ ದುರ್ಯೋಧನನು ಕೃಷ್ಣಪರಮಾತ್ಮನನ್ನು ಕಟ್ಟಿಹಾಕಬೇಕೆಂದು ಯೋಚಿಸುತ್ತಿದ್ದನು. ಅದನ್ನು ಸಾತ್ಯಕಿಯೂ ಕೃತವರ್ಮನೂ ಕೇಳಿದರು. ಕೃತವರ್ಮನನ್ನು ಏಕಾಂತದಲ್ಲಿ ನಿಲ್ಲಿಸಿ ಸಾತ್ಯಕಿಯು ಕೃಷ್ಣಪರಮಾತ್ಮನ ಬಳಿಗೆ ಬಂದು ದುರ್ಯೋಧನನ ನಿಶ್ಚಯವನ್ನು ಹೇಳಿದನು. ಭಗವಂತನು ಎಲ್ಲವನ್ನೂ ತಿಳಿದವ ನಾಗಿದ್ದರೂ ಸಾತ್ಯಕಿಯ ಮುಖದಿಂದ ಕೇಳಿ ಧೃತರಾಷ್ಟ್ರನೊಡನೆ ತನ್ನ ವಿಶ್ವರೂಪವನ್ನು ನೋಡೆಂದು ಹೇಳಿದನು. ತರುವಾಯ ಧೃತರಾಷ್ಟ್ರನು ದುರ್ಯೋಧನನನ್ನು ಕೂಗಿದನು. ಅವನೂ ಬಂದನು. ಆಗ ಭಗವಂತನು ವಿಶ್ವರೂಪವನ್ನು ತೋರಿಸಿ ದನು. ಶ್ರೀಭಗವಂತನು ದುರ್ಯೋಧನನ ಮನಸ್ಸನ್ನು ನಿಗ್ರಹಮಾಡಲಿಕ್ಕೆ ಸಮರ್ಥನಾಗಿದ್ದರೂ, ಅವನನ್ನು ಅಂಧಂತಮಸ್ಸಿಗೆ ಕಳುಹಿಸುವುದಕ್ಕಾಗಿ ಅವನು ತನ್ನ ಮಾತಿನಂತೆ ನಡೆಯುವ ಹಾಗೆ ಮಾಡಲಿಲ್ಲ. ತರುವಾಯ ಯುದ್ಧವು ನಡೆಯಿತು. ದುರ್ಯೋಧನನು ಮೊದಲು ಭೀಷ್ಮಾಚಾರ್ಯರನ್ನು ಸೇನಾಪತಿಯನ್ನಾಗಿ ಮಾಡಿದನು. ಒಂದು ದಿವಸದಲ್ಲಿ ದುರ್ಯೋಧನನು ಭೀಷ್ಮಾಚಾರ್ಯರ ಬಾಣಗಳಿಂದ ಮೈಯೆಲ್ಲಾ ಗಾಯವುಳ್ಳವನಾಗಿ ರಾತ್ರಿಯಲ್ಲಿ ಭೀಷ್ಮಾಚಾರ್ಯರಿಗೆ ನಮಸ್ಕರಿಸಿ ನಾವು ಏಕೆ ಯಾವ ಪರಾಜಯವನ್ನು ಹೊಂದುವೆವು? ಪಾಂಡವರು ಜಯವನ್ನು ಹೊಂದಿ ಸಂತೋಷಪಡುವರು' ಎಂದು ಕೇಳಿದನು. ಅದಕ್ಕೆ

ಭೀಷ್ಮಾಚಾರ್ಯರು 'ಪಾಂಡವರು ದೇವತೆಗಳೇ ಭೂಮಿಗೆ ಬಂದಿರುವರು. ಅವರು ಪರಾಜಯಶೂನ್ಯರು. ವಿಶೇಷವಾಗಿ ಯಾವಾಗಲೂ ಕೃಷ್ಣಪರಮಾತ್ಮನಿಂದ ರಕ್ಷಿತರಾದವರು. ಪರಮಾತ್ಮನಿಗೆ ತುಂಬಾ ಪ್ರಿಯರಾದವರು. ಪೂರ್ವದಲ್ಲಿ ಮಾನಸೋತ್ತರ ಪರ್ವತದಲ್ಲಿ ಬ್ರಹ್ಮಾದಿ ದೇವತೆಗಳು ಇದ್ದರು. ಅವರಲ್ಲಿ ಬ್ರಹ್ಮದೇವರು ಒಬ್ಬರೇ ಆಕಾಶದಲ್ಲಿ ಪರಮಾತ್ಮನನ್ನು ನೋಡಿದರು. ಬ್ರಹ್ಮದೇವರು ಪರಮಾತ್ಮನನ್ನು ಸ್ತೋತ್ರಮಾಡಿ ಪೂಜಿಸಿ ಭೂಮಿಯಲ್ಲಿ ಭಾರಪರಿಹಾರಕ್ಕಾಗಿ ಆ ಭಗವಂತನನ್ನು ಪ್ರಾರ್ಥಿಸಿದರು. ಆಮೇಲೆ ಪರಮಾತ್ಮನಿಂದ ಹೇಳಲ್ಪಟ್ಟ ಮಾತನ್ನು ಹೇಳಿದರು. 'ಗುಣಪೂರ್ಣನಾದ ಈ ನಾರಾಯಣನು ನೀವೆಲ್ಲರೂ ಭೂಮಿಯಲ್ಲಿ ಅವತರಿಸುವಂತೆ ಆಜ್ಞಾಪಿಸುವನು. ತಾನೂ ದೇವಕೀದೇವಿಯ ಮಗನಾಗಿ ಅವತರಿಸುವನು' ಎಂದು ಹೇಳಿದರು. ಈರೀತಿಯಾಗಿ ಭಗವಂತನಿಂದ ಆಜ್ಞಪ್ತರಾದ ಧರ್ಮವಾಯ್ವಾದಿ ದೇವತೆಗಳು ಪಾಂಡವಾದಿಗಳಾಗಿ ಹುಟ್ಟಿದರು. ಆ ನಾರಾಯಣನೇ ದೇವಕೀಪುತ್ರನಾಗಿ ಅವತರಿಸಿದನು. ಆ ಕೃಷ್ಣನಿಂದ ಪಾಂಡವರು ಪಾಲಿತರಾಗಿರುವರು. ಅವರನ್ನು ಜಯಿಸಲಾಗದು. ಅವರಿಂದ ರಾಜಿಯನ್ನು ಅಪೇಕ್ಷಿಸುವವನಾಗು' ಎಂದು ಹೇಳಿದರು. ಅದನ್ನು ಕೇಳಿ ದುರ್ಯೋಧನನು ಡಂಭಬುದ್ಧಿಯಿಂದ ಪರಮಾತ್ಮನಿಗೆ ನಮಸ್ಕರಿಸಿ ಹೊರಟುಹೋದನು. ಮರುದಿನ ಯುದ್ಧಕ್ಕೆ ಸೇನೆಯನ್ನು ಕಳುಹಿಸಿದನು.

ಹೀಗೆಯೇ ಹತ್ತುದಿವಸ ಯುದ್ಧವು ನಡೆಯಿತು. ಹತ್ತನೇ ದಿನದಲ್ಲಿ ಭೀಷ್ಮಾ ಚಾರ್ಯರು ಬಿದ್ದರು. ಅವರ ಮೈಯೆಲ್ಲೆಲ್ಲಾ ಬಾಣಗಳು ತಾಗಿದ್ದವು. ಹಾಗೆಯೇ ಬಾಣಗಳ ಮೇಲೆಯೇ ಮಲಗಿದರು. ಆದರೆ ಸ್ವಚ್ಛಂದ ಮರಣ ವುಳ್ಳವರಾದ ಕಾರಣ ಸಾಯಲಿಲ್ಲ. ಭೀಷ್ಮಾಚಾರ್ಯರು ಕೆಳಗೆ ಬಿದ್ದವರು ನೀರಡಿಕೆಯಾಗುವು ದೆಂದು ಹೇಳಿದರು. (ದುರ್ಯೋಧನಾದಿಗಳು) ಅವರ ಅಭಿಪ್ರಾಯವು ತಿಳಿಯದೆ ಹಾಲು ಇತ್ಯಾದಿಗಳನ್ನು ತಂದುಕೊಟ್ಟರು. ಅದನ್ನು ಅವರು ಅಪೇಕ್ಷಿಸಲಿಲ್ಲ. ಆಗ ಭೀಷ್ಮಾಚಾರ್ಯರ ಅಭಿಪ್ರಾಯವನ್ನು ತಿಳಿದು ಅರ್ಜುನನು ಭೂಮಿಗೆ ಬಾಣವನ್ನು ಬಿಟ್ಟು ಭೂಮಿಯ ಕೆಳಗಿನಿಂದ ಮೇಲಕ್ಕೆ ನೀರಿನ ಧಾರೆಯನ್ನು ತರಿಸಿ ಅವರ ಬಾಯಿಯಲ್ಲಿ ಬೀಳುವಂತೆ ಮಾಡಿದರು. ಆದರಿಂದ ಭೀಷ್ಮಾಚಾರ್ಯರು ತೃಪ್ತರಾಗಿ 'ಕೌರವರೇ! ಭೀಮಸೇನನ ಬಾಹುಬಲವು ಹೇಗೆ ಇರುವುದೆಂದು ಒಂದೊಂದು ಯುದ್ಧದಲ್ಲಿಯೂ ನೋಡಿದಿರಲ್ಲಾ? ಭಗವಂತನ ಮಹಿಮೆಯನ್ನು ನೋಡಿದಿರಲ್ಲಾ! ಅರ್ಜುನನಲ್ಲಿ ಇರುವ ಅಸ್ತ್ರಜ್ಞಾನವನ್ನು ನೋಡಿದಿರಲ್ಲಾ! ಆದುದರಿಂದ ಯುದ್ಧವನ್ನು

ನಿಲ್ಲಿಸಿರಿ. ಕ್ಷತ್ರಿಯರು ಸುಖಿಗಳಾಗಿರಲಿ' ಎಂದು ಹೇಳಿದರು. ಅದನ್ನು ಕೇಳಿ ದುರ್ಯೋಧನನು ಸುಮ್ಮನೆ ಹೊರಟುಹೋದನು.

ಮರುದಿನದಲ್ಲಿ ದುರ್ಯೋಧನನು ದ್ರೋಣಾಚಾರ್ಯರನ್ನು ಸೇನಾಧಿಪತಿಯನ್ನಾಗಿ ಮಾಡಿದನು. ಅವರು ಐದುದಿನ ಸೇನಾನಾಯಕರಾಗಿ ಯುದ್ಧವನ್ನು ಮಾಡಿ ಐದನೇ ದಿನದಲ್ಲಿ ಮೃತರಾದರು. ಅವರು ಸೇನಾಧಿಪತಿಯಾರುವಾಗ ಬಹುಜನರು ಮೃತರಾದರು.

ದ್ರೋಣಾಚಾರ್ಯರು ಮೃತರಾದಮೇಲೆ ದುರ್ಯೋಧನನು ಅಶ್ವತ್ಥಾಮಾಚಾರ್ಯರ ಅನುಜ್ಞೆಯನ್ನು ಪಡೆದು ಕರ್ಣನಿಗೆ ಸೇನಾಧಿಪತ್ಯವನ್ನು ಕೊಟ್ಟನು. ಒಂದುದಿನ ಕರ್ಣನು ಧರ್ಮರಾಜನ ಆಯುಧವನ್ನು ಮುರಿದು ಅವನ ಕುತ್ತಿಗೆಗೆ ಧನುಸ್ಸನ್ನು ಹಾಕಿ ಸೆಳೆದು ಕೆಟ್ಟಮಾತುಗಳನ್ನು ಆಡಿದನು. ಆಗ ಭೀಮಸೇನದೇವರು ದುರ್ಯೋಧನನ ರಥವನ್ನು ಮುರಿದು ಧನುಸ್ಸನ್ನು ಮುರಿದು ಚೆನ್ನಾಗಿ ಬಡೆದು ಪ್ರಾಣಹೋಗುವ ರೀತಿಯಾಗಿ ಪೀಡಿಸಿದನು. ಆಗ ಶಲ್ಯನು ಕರ್ಣನಿಗೆ ಭೀಮಸೇನದೇವರಿಂದ ಪೀಡಿಸಲ್ಪಟ್ಟ ದುರ್ಯೋಧನನನ್ನು ತೋರಿಸಿ ಯಾರಿಗಾಗಿ ನೀನೂ ನಾನೂ ಇರುವೆವೋ ಈ ಯುದ್ಧವೂ ನಡೆಯುತ್ತಿರುವುದೋ ಆ ದುರ್ಯೋಧನನು ಭೀಮನಿಂದ ಪೀಡಿಸಲ್ಪಟ್ಟವನಾಗಿ ಸಾಯಲಿಕ್ಕೆ ಹೊರಟಿರುವನು. ಧರ್ಮರಾಜನನ್ನು ಯುದ್ಧದಲ್ಲಿ ಸುಮ್ಮನೆ ಪೀಡಿಸಿ ಏನು ಉಪಯೋಗವಿದೆ? ಯೆಂದನು. ತರುವಾಯ ಕರ್ಣನು ಅವನನ್ನು ಬಿಡಿಸಲಿಕ್ಕೆ ಹೋದನು. ಆಗ ಭೀಮಸೇನದೇವರು ದುರ್ಯೋಧನನ್ನು ಬಿಟ್ಟು ಕರ್ಣನ ಬಳಿಗೆ ಬಂದು ಅವನನ್ನು ಬೀಳಿಸಿದರು.

ಮತ್ತೊಂದು ದಿನದಲ್ಲಿ ಭೀಮಸೇನದೇವರು ದುಃಶಾಸನನನ್ನು ಭಯಂಕರವಾಗಿ ಸಂಹರಿಸಿ ದುರ್ಯೋಧನನು ಮುಂದಿನ ಯಜ್ಞಪಶುವೆಂದೂ ಅವನನ್ನು ಕೊಲ್ಲುವೆನೆಂದು ಹೇಳಿ ಹೋದರು. ಆಗ ಅವನು ಓಡಿಹೋಗಿಬಿಟ್ಟನು.

ಕೊನೆಗೆ ಕರ್ಣಾರ್ಜುನರು ವಿಚಿತ್ರವಾಗಿ ಯುದ್ಧ ಮಾಡಿದರು. ಆಗ ದುರ್ಯೋಧನನ ಕೈಯನ್ನು ಹಿಡಿದುಕೊಂಡು ಅಶ್ವತ್ಥಾಮಾಚಾರ್ಯರು ಅವನೊಡನೆ 'ಈಗ ನೀನು ಭೀಮಸೇನನ ಬಲವನ್ನು ನೋಡಿದಿಯಲ್ಲಾ! ಹಾಗೆಯೇ ಅರ್ಜುನನ ಬಲವನ್ನೂ ನೋಡಿದೆಯಲ್ಲಾ! ನಾವೆಲ್ಲರೂ ಅವನಿಂದ ಸೋತೆವು. ಆದುದರಿಂದ ವಿರೋಧವು ಸಾಕು. ಪಾಂಡವರಿಂದ ಕೂಡಿಕೊಂಡು ನನ್ನಿಂದ ಸಹಿತನಾಗಿ ರಾಜ್ಯವನ್ನು ಆಳು. ಅರ್ಜುನನೊಡನೆ ನಾನು ಯುದ್ಧವು ಬೇಡವೆಂದು

ಹೇಳಿದೆನಾದರೆ ಅವನು ಯುದ್ಧವನ್ನು ನಿಲ್ಲಿಸುವನು. ಕೃಷ್ಣಪರಮಾತ್ಮನೂ ವಿರೋಧವನ್ನು ಇಚ್ಛಿಸುವುದಿಲ್ಲ. ಭೀಮಸೇನನು ಕೃಷ್ಣನ ಅಭಿಪ್ರಾಯದಂತೆ ಸರ್ವಕಾಲದಲ್ಲಿಯೂ ಇರುವವನು. ಧರ್ಮರಾಜನು ಯಾವಾಗಲೂ ಶಾಂತವಾದ ಮನಸ್ಸುಳ್ಳವನು. ಇದು ನಿನ್ನ ಹಿತಕ್ಕಾಗಿ ನಾನು ಹೇಳಿದ ಮಾತೆಂದು ತಿಳಿಯುವನಾಗು. ಬೇರೆ ವಿಧವಾಗಿ ತಿಳಿಯಬೇಡ. ನನಗೊಂದು ಭಯವಿಲ್ಲ. ನಾನೂ ನನ್ನ ಮಾವನಾದ ಕೃಪಾಚಾರ್ಯರೂ ಸಾಯುವವರಲ್ಲ' ಎಂದು ಹೇಳಲು ದುರ್ಯೋಧನನು 'ಭೀಮಸೇನನು ಈಗಾಗಲೇ ದುಃಶಾಸನನ ರಕ್ತಪಾನವನ್ನು ಮಾಡಿದನು. ಹುಲಿ ಯಂತೆ ಕುಣಿದನು. ಅದರಿಂದ ಅವನೊಡನೆ ಎಷ್ಟು ಮಾತ್ರಕ್ಕೆ ಸಂಧಿಯೂ ಬೇಕಾಗಿಲ್ಲ' ಎಂದು ಹೇಳಿಬಿಟ್ಟನು. ಕೊನೆಗೆ ಅಂದರೆ 17ನೇ ದಿವಸದಲ್ಲಿ ಕರ್ಣನು ಸಾಯಲು ದುರ್ಯೋಧನನು ಮುಖವನ್ನು ಚಿಕ್ಕದು ಮಾಡಿಕೊಂಡು ಹೊರಟು ಹೋದನು.

ಹದಿನೆಂಟನೇ ದಿನದಲ್ಲಿ ದುರ್ಯೋಧನನು ಅಶ್ವತ್ಥಾಮಾಚಾರ್ಯರ ಅನುಮತಿಯಿಂದ ಶಲ್ಯನನ್ನು ಸೇನಾಧಿಪತಿಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೋದನು. ಶಲ್ಯನು ಅರ್ಧದಿನ ಯುದ್ಧಮಾಡಿ ಧರ್ಮರಾಜನಿಂದ ಮೃತನಾದನು.

ಕೊನೆಗೆ ದುರ್ಯೋಧನನ ಪಕ್ಷದವರೆಲ್ಲರೂ ಮೃತರಾದರು. ಕೃಪ, ಕೃತವರ್ಮ ಅಶ್ವತ್ಥಾಮಾಚಾರ್ಯರು ಮೂರುಜನರು ಮಾತ್ರ ಉಳಿದಿದ್ದರು. ಭೀಮಾರ್ಜುನರು ಅನೇಕಬಾರಿ ಅವರ ರಥವನ್ನು ಮುರಿದು ಪುನಃ ಪುನಃ ಪೀಡಿಸಿ ಓಡಿಸಿದರು. ಅವರು ಕಾಡಿಗೆ ಓಡಿಹೋದರು. ಆಮೇಲೆ ದುರ್ಯೋಧನನೊಬ್ಬನು ಉಳಿದನು. ಅವನಿಗೂ ಪಾಂಡವರಿಗೂ ಭಯಂಕರವಾದ ಯುದ್ಧವು ನಡೆಯಿತು. ಬಾಣಗಳಿಂದ ಅನೇಕಬಾರಿ ಅರ್ಜುನನನ್ನು ಮೂರ್ಛೆಗೊಳಿಸಿದನು. ಧರ್ಮರಾಜ ನಕುಲಸಹದೇವರ ರಥಗಳನ್ನು ಮುರಿದುಹಾಕಿದನು. ತರುವಾಯ ಭೀಮಸೇನ ದೇವರು ಅವನ ರಥವನ್ನು ಮುರಿದರು. ಆಗ ಅವನು ಆನೆಯ ಮೇಲೆ ಕೂತುಕೊಂಡು ಹೋದನು. ಸಾತ್ಯಕಿ ಧೃಷ್ಟದ್ಯುಮ್ನ ಶಿಖಂಡಿ ನಕುಲ ಸಹದೇವ ಧರ್ಮರಾಜರ ಆಯುಧಗಳನ್ನು ಮುರಿದುಹಾಕಿದನು. ಆಗ ಭೀಮಸೇನದೇವರು ಬಾಣಗಳಿಂದ ಆನೆಯನ್ನು ಬೀಳಿಸಿದನು. ತರುವಾಯ ದುರ್ಯೋಧನನು ಅತ್ಯಂತ ಭಯರಹಿತನಾಗಿ ಕುದುರೆಯ ಮೇಲೆ ಕೂತುಕೊಂಡು ಸಂಚರಿಸುತ್ತಾ ಪ್ರಾಸವನ್ನು ಹಿಡಿದು ಅದರಿಂದ ಸಾತ್ಯಕಿಯನ್ನು ಬಡೆದನು. ಅದರಿಂದ ಸಾತ್ಯಕಿಯು ಮೂರ್ಛಿತ ನಾದನು. ನಕುಲ ಸಹದೋವರೂ ಪ್ರಾಸದ ಪೆಟ್ಟಿನಿಂದ ಕೂತುಕೊಂಡುಬಿಟ್ಟರು.

ಹಾಗೆಯೇ ಧರ್ಮರಾಜನ ಬಳಿಗೆ ದುರ್ಯೋಧನನು ಹೋಗುತ್ತಿರುವುದನ್ನು ಕಂಡು ಕುದುರೆಯನ್ನು ಸಂಹರಿಸಿ ಆ ಪ್ರಾಸವನ್ನು ಮುರಿದುಹಾಕಿದರು. ತರುವಾಯ ದುರ್ಯೋಧನನು ವಾಹನ ಹೀನನಾಗಿ ಭಾರವುಳ್ಳ ಗದೆಯನ್ನು ಹಿಡಿದುಕೊಂಡು ಹೋಗಿ ದ್ವೈಪಾಯನಸರೋವವನ್ನು ಪ್ರವೇಶಿಸಿದನು.

ಅಲ್ಲಿ ಜಲಸ್ತಂಭವನ್ನು ಮಾಡಿ ಮಂತ್ರಗಳನ್ನು ಜಪಿಸುತ್ತಾ ಇದ್ದನು. ಆ ಮಂತ್ರಗಳನ್ನು ದುರ್ವಾಸರು ಉಪದೇಶಿಸಿದ್ದರು. ಅವು ಸತ್ತವರನ್ನು ಬದುಕಿಸುವುವು. ದುರ್ಯೋಧನನು ನೀರಿನಲ್ಲಿ ನಿಂತುಕೊಂಡು ಏಳು ರಾತ್ರಿ ಜಪಿಸಿದರೆ ಸತ್ತವರೆಲ್ಲರೂ ಬದುಕುವರು. ಆಮೇಲೆ ಅವರು ಸಾಯಲಾರರು. ಹೀಗೆ ಅವನ ವಿದ್ಯಾಬಲವನ್ನು ತಿಳಿದುಕೊಂಡಿದ್ದ ಪಾಂಡವರು ಅವನನ್ನು ಹುಡುಕುತ್ತಾ ಬಂದು ಬೇಡರಿಂದ ಅವನು ನೀರಿನ ಒಳಗೆ ಇರುವನೆಂದು ತಿಳಿದು ಕೃಷ್ಣಪರಮಾತ್ಮನನ್ನು ಮುಂದೆ ಮಾಡಿಕೊಂಡು ದ್ವೈಪಾಯನ ಸರೋವರದ ಬಳಿಗೆ ಹೋದರು. ಅಲ್ಲಿ ದುರ್ಯೋಧನನು ನೀರಿನಿಂದ ಮೇಲಕ್ಕೆ ಬಂದು ಕೃಪ, ಕೃತವರ್ಮ, ಅಶ್ವತ್ಥಾಮರೊಡನೆ ಮಾತಾಡುತ್ತಿದ್ದನು. ಪಾಂಡವರು ಬಂದುದನ್ನು ನೋಡಿದ ಕೂಡಲೇ ಆ ಮೂರು ಜನರೂ ಓಡಿಹೋದರು. ದುರ್ಯೋಧನನು ನೀರಿನ ಒಳಗೆ ಪ್ರವೇಶಿಸಿದನು. ಅದನ್ನು ನೋಡಿ ಕೃಷ್ಣ ಪರಮಾತ್ಮನ ಆಜ್ಞೆಯಿಂದ ಧರ್ಮರಾಜನು ಕ್ರೂರವಚನಗಳಿಂದ ದುರ್ಯೋಧನನನ್ನು ಹೊರಗೆ ಬರುವಂತೆ ಕೂಗಿದನು.

ಆಗ ದುರ್ಯೋಧನನು ಕೋಲಿನಿಂದ ಬಡೆದ ಹಾವಿನಂತೆ ಬುಸುಗುಟ್ಟುತ್ತಾ ವಂಚನೆಮಾಡುತ್ತಾ ನೀರಿನ ಒಳಗಿನಿಂದಲೇ ನಾನು ತಪಸ್ಸಿಗಾಗಿ ವನಕ್ಕೆ ಹೋಗುವೆನು. ನೀನೇ ಸಮಸ್ತವಾದ ಭೂಮಿಯನ್ನು ಆಳುವವನಾಗು ಎಂದು ಹೇಳಿದನು. ಅದಕ್ಕೆ ಧರ್ಮರಾಜನು 'ಶ್ರೀಕೃಷ್ಣಪರಮಾತ್ಮನು ರಾಜಿ ಮಾಡಲಿಕ್ಕಾಗಿ ಬಂದಾಗ ಸೂಜಿಯ ಕೊನೆಯನ್ನು ಊರಲಿಕ್ಕೂ ಭೂಮಿಯನ್ನು ಕೊಡಲಿಕ್ಕೆ ಎಷ್ಟು ಮಾತ್ರಕ್ಕೆ ಇಚ್ಛಿಸದ ನೀನು ಈಗ ಮಾತ್ರ ಸಮಸ್ತಭೂಮಿಯನ್ನು ಕೊಡಲಿಕ್ಕೆ ಇಚ್ಛಿಸುವಿಯಾ? ಈಗ ನಾವು ನಿನ್ನನ್ನು ಸಂಹಾರಮಾಡದೆ ಭೂಮಿಯನ್ನು ಸ್ವೀಕರಿಸಲಾರೆವು. ಹೊರಗೆ ಬಾ ಯುದ್ಧ ಮಾಡು. ಅಂಜಿಕೆಯಿಂದ ನೀರಿನ ಒಳಗೆ ಅಡಗಿರುವಿಯಲ್ಲಾ! ನೀನು ಕುರುವಂಶದಲ್ಲಿ ಹುಟ್ಟಿದವನಲ್ಲವೇ' ಇತ್ಯಾದಿ ರೀತಿಯಾಗಿ ಕಠಿಣವಾದ ಮಾತನ್ನು ಆಡಿದನು. ಅದನ್ನು ಕೇಳಿ ದುರ್ಯೋಧನನು ಜಲಸ್ತಂಭವನ್ನು ಬಿಟ್ಟು ರೋಷದಿಂದ ಹಾವಿನಂತೆ ಶ್ವಾಸವನ್ನು ಬಿಡುತ್ತಾ ಹೊರಗೆ ಬಂದನು. 'ನಾನು ಒಬ್ಬನು. ಕಿರೀಟಕವಚಾದಿಗಳಿಂದ ರಹಿತನಾಗಿರುವೆನು. ನೀವು

ಅನೇಕರಿರುವಿರಿ. ಕವಚಾದಿಗಳಿಂದ ಯುಕ್ತರಾಗಿರುವಿರಿ. ಹೀಗಿದ್ದರೂ ಕೂಡ ನಾನು ನಿಮ್ಮೊಡನೆ ಯುದ್ಧ ಮಾಡುವುದು ಸರಿಯೆಂದು ನಿನಗೆ ತೋರಿದರೆ ನಾನು ಅವಶ್ಯವಾಗಿಯೂ ಯುದ್ಧವನ್ನು ಮಾಡುವೆನು. ನನಗೆ ಭಯವಿಲ್ಲ. ನಿಮ್ಮೆಲ್ಲರೊಡನೆಯೋ ಅಥವಾ ಒಬ್ಬನೊಡನೆಯೋ ಯುದ್ಧಮಾಡುವೆನು' ಎಂದು ಹೇಳಿದನು.

ಆದಕ್ಕೆ ಧರ್ಮರಾಜನು 'ನಿನಗೆ ಕವಚಾದಿಗಳನ್ನು ಕೊಡುವೆನು. ನಾವು ಐದು ಜನರ ಮಧ್ಯದಲ್ಲಿ ಯಾರೊಡನೆ ಯುದ್ಧ ಮಾಡಲಿಕ್ಕೆ ಬಯಸುವಿಯೋ ಅವನನ್ನು ಆರಿಸಿಕೊ. ಆ ಒಬ್ಬನನ್ನು ಸಂಹರಿಸಿ ರಾಜ್ಯವನ್ನು ಅನುಭವಿಸು. ಉಳಿದ ನಾವು ವನಕ್ಕೆ ಹೋಗುವೆವು. ನೀನು ಸತ್ತರೆ ಅದರಿಂದಲೇ ನಾವೆಲ್ಲರೂ ಭೂಮಿಯನ್ನು ಅನುಭವಿಸುವೆವು. ಯಾವುದರಿಂದ ಜಯಿಸಲಿಕ್ಕೆ ಇಚ್ಛಿಸುವಿಯೋ ಆ ಆಯುಧವನ್ನು ಸ್ವೀಕರಿಸು' ಎಂದು ಹೇಳಿದನು.

ಆದಕ್ಕೆ ದುರ್ಯೋಧನನು 'ನಾನು ಬಲಹೀನರಾದ ನೀನು, ಅರ್ಜುನ ಮೊದಲಾದ ನಾಲ್ಕುಜನರೊಡನೆ ಯುದ್ಧ ಮಾಡಲಾರೆನು. ಭೀಮನೊಡನೆ ಯುದ್ಧವನ್ನು ಮಾಡುವೆನು. ಗದೆಯಿಂದ ಯುದ್ಧ ಮಾಡುವೆನು. ಗದೆಯೇ ನನಗೆ ಯಾವಾಗಲೂ ಪ್ರಿಯವಾದದ್ದು' ಎಂದು ಹೇಳಿದನು. ಅವನ ಮಾತನ್ನು ಕೇಳಿ ಕೂಡಲೇ ಭೀಮಸೇನದೇವರು ದುರ್ಯೋಧನನ ಗದೆಯಿಂದ ಒಂದೂವರೆ ಪಾಲು ಅಧಿಕಭಾರವುಳ್ಳ ಗದೆಯನ್ನು ಹಿಡಿದುಕೊಂಡು ಗರ್ಜನೆ ಮಾಡುತ್ತಾ ಯುದ್ಧಕ್ಕೆ ಬಂದು ನಿಂತರು. 'ಪ್ರತಿಜ್ಞೆ ಮಾಡಿದಂತೆ ನಿನ್ನ ತೊಡೆಗಳನ್ನು ಮುರಿಯುವೆನು' ಎಂದು ಹೇಳಿದರು. ತರುವಾಯ ಇಬ್ಬರೂ ಗದಾಯುದ್ಧವನ್ನು ಮಾಡಿಕೊಂಡರು. ಆಗ ಬಲರಾಮದೇವರು ಬಂದರು. ಅವರು ಯುದ್ಧವನ್ನು ನಿಲ್ಲಿಸಲಿಕ್ಕೆ ಹೋದರು. ಆದರೆ ಇಬ್ಬರೂ ಯುದ್ಧವನ್ನು ನಿಲ್ಲಿಸಲಿಲ್ಲ. ತರುವಾಯ ಅವರು ಕೃಷ್ಣಪರಮಾತ್ಮನೇ ಮೊದಲಾದವರಿಂದ ಬಹುಮಾನಿತರಾಗಿ ಯುದ್ಧವನ್ನು ನೋಡುತ್ತಾ ಇದ್ದರು. ಭೀಮಸೇನದೇವರು ದೊಡ್ಡವರ ಸ್ವಭಾವವನ್ನು ತೋರಿಸುತ್ತಾ ಮೊದಲು ಮೆಲ್ಲನೆ ಯುದ್ಧವನ್ನು ಮಾಡಿದರು. ಗದಾಯುದ್ಧದ ಕ್ರಮದಿಂದಲೇ ಯುದ್ಧವನ್ನು ಮಾಡಿದರು. ಕೊನೆಗೆ ದುರ್ಯೋಧನನು ಭೀಮಸೇನದೇವರನ್ನು ವಂಚಿಸ ಬೇಕೆಂದು ತಲೆಕೆಳಗೆ ಕಾಲುಮೇಲೆ ಮಾಡಿದನು. ಆಗ ಭೀಮಸೇನದೇವರು ಕೃಷ್ಣಪರಮಾತ್ಮನ ಆಜ್ಞೆಯಿಂದ ನಾಭಿಯಿಂದ ಕೆಳಗೂ ಮೇಲೆಯೂ ಆಗದಂತೆ ನಾಭಿಗೆ ಸರಿಯಾಗಿ ಬಡೆದರು. ಇದರಿಂದ ದುರ್ಯೋಧನನು ತೊಡೆಯನ್ನು

ಮುರಿದು ಕೆಳಗೆ ಬಿದ್ದನು. ಪಗಡೆ ಆಟದಲ್ಲಿ ಕೃಷ್ಣಪರಮಾತ್ಮನನ್ನು ಪಂದ್ಯವನ್ನಾಗಿ ಇಡು' ಎಂದು ಹೇಳಿದ್ದೇ ಮೊದಲಾದ ಅವನು ಮಾಡಿದ ಅಪರಾಧಗಳನ್ನು ಸ್ಮರಣೆ ಮಾಡಿಸಿ ಅವನ ತಲೆಯನ್ನು ಮೆಟ್ಟಿದರು. ಆಗ ಬಲರಾಮದೇವರೂ ಕೂಡ ಕೋಪಿಸಿಕೊಂಡು ಭೀಮಸೇನದೇವರ ಹತ್ತಿರ ಜಗಳಕ್ಕೆ ಬಂದುಬಿಟ್ಟರು. ಆಗ ಕೃಷ್ಣಪರಮಾತ್ಮನು ಅವರಿಗೆ ಸಮಾಧಾನಪಡಿಸಿ ಕಳುಹಿಸಿದನು. ಭೀಮಸೇನದೇವರು ದುರ್ಯೋಧನನನ್ನು ಧರ್ಮದಿಂದಲೇ ಸಂಹರಿಸಿದ್ದು ಎಂದು ಕೃಷ್ಣಪರಮಾತ್ಮನು ಜನರ ಮಧ್ಯದಲ್ಲಿ ಪುನಃಪುನಃ ಸಮರ್ಥನೆ ಮಾಡಿದರು. ಅದನ್ನು ಕೇಳಿ ದುರ್ಯೋಧನನು ಕೋಪದಿಂದ ತುಟಿಯನ್ನು ನಡುಗಿಸಿಕೊಂಡು ಕೃಷ್ಣಪರಮಾತ್ಮ ನೊಡನೆ 'ನಿನ್ನಿಂದಲೇ ಪಾಂಡವರು ಪಾಪದಲ್ಲಿ ಪ್ರವೃತ್ತರಾದರು. ನೀನು ಯಾವಾಗಲೂ ಒಬ್ಬನೇ ಅಧಿಕವಾಗಿ ಪಾಪಿಯಾದವನು' ಎಂದು ಹೇಳಿದನು.

ಅದಕ್ಕೆ ಪರಮಾತ್ಮನು 'ನಿನಗೆ ಸಮಾನನಾದ ಅತ್ಯಂತ ಪಾಪಿಷ್ಠನು ಯಾವಾಗಲೂ ಇರುವುದಿಲ್ಲ. ಭೀಷ್ಮಾದಿಗಳನ್ನು ಸಂಹಾರ ಮಾಡಿದ ಪಾಪವೂ ನಿನ್ನಿಂದಲೇ. ಪಾಪನಿಶ್ಚಯವುಳ್ಳ ನಿನ್ನನ್ನು ಅನುಸರಿಸಿದ ಕಾರಣವೇ ಅವರ ಸಂಹಾರವು ಏರ್ಪಟ್ಟಿತು. ಪಾಪಿಯಾದ ನಿನ್ನನ್ನೂ ಪಾಪಿಯನ್ನು ಅನುಸರಿಸಿದ ಭೀಷ್ಮಾದಿಗಳನ್ನೂ ಸಂಹರಿಸಿ ಪಾಂಡವರಿಗೆ ಸ್ವಲ್ಪವೂ ಪಾಪವು ಬರಲಾರದು. ಆದುದರಿಂದ ಪಾಂಡವರಲ್ಲಿ ಸ್ವಲ್ಪವೂ ಪಾಪವು ಇರುವುದಿಲ್ಲ. ಅವರು ಸ್ವಭಾವದಿಂದಲೇ ಗುಣವಂತರು. ನನ್ನನ್ನು ಆಶ್ರಯಿಸಿದವರು. ಅವರಲ್ಲಿ ಯಾರು ತಾನೇ ಸ್ವಲ್ಪವೂ ಪಾಪವನ್ನು ಹೇಳುವನು? ನೀನು ಸ್ವಭಾವದಿಂದ ಅತ್ಯಂತ ಪಾಪಿಯಾದ ವನು. ಇತರ ಧರ್ಮಿಷ್ಠರನ್ನು ಪಾಪಮಾರ್ಗದಲ್ಲಿ ಸೆಳೆದು ನೀನೂ ಪಾಪದಲ್ಲಿಯೇ ಯಾವಾಗಲೂ ಆಸಕ್ತನಾಗಿ ಅತ್ಯಂತ ಪಾಪಕರವಾದ ಗತಿಯನ್ನು ಹೊಂದುವಿ' ಎಂದು ಹೇಳಿದನು. ಆಗ ದುರ್ಯೋಧನನು 'ನನಗಿಂತ ಶ್ರೇಷ್ಠನಾದ ಒಳ್ಳೇ ಮರಣ ವುಳ್ಳವನು ಯಾರು ಇರುವನು? ನಾನು ಏನು ದೋಷವನ್ನು ಮಾಡಿರುವೆನು? ಬೇಕಾದ ಯಜ್ಞಗಳನ್ನು ಮಾಡಿರುವೆನು. ಅನ್ನದಾನಾದಿಗಳನ್ನು ಮಾಡಿರುವೆನು. ಶತ್ರುಗಳ ತಲೆಯಲ್ಲಿ ಪಾದವನ್ನು ಇಟ್ಟಿರುವೆನು. ಯುದ್ಧರಂಗದಲ್ಲಿ ಯುದ್ಧ ಮಾಡುತ್ತಲೇ ಮರಣವನ್ನು ಹೊಂದಿರುವೆನು. ಇದಕ್ಕಿಂತ ಹೆಚ್ಚಿಗೆ ಏನಾಗಬೇಕಾಗಿದೆ? ಬೇಕಾದ ಭೋಗಗಳನ್ನು ಅನುಭವಿಸಿರುವೆನು. ಉತ್ತಮವಾದ ಗತಿಯನ್ನು ಹೊಂದಿರುವೆನು. ಕಪಟಯುದ್ಧವನ್ನು ಮಾಡಿದ ದುಃಖಿಗಳಾದ ಪಾಂಡವರು ದುಃಖವನ್ನು ಹೊಂದುವರು. ಚಂದ್ರಸೂರ್ಯರಂತೆ ಇದ್ದ ಶೂರರಾದ

ಧರ್ಮಿಷ್ಠ ರಾದ ಸಜ್ಜನರಿಂದ ರಹಿತವಾದ ರತ್ನರಹಿತವಾದ ಬರೇ ಭೂಮಿಯನ್ನು ಪಾಂಡವರು ಅನುಭವಿಸಲಿ' ಎಂದು ಹೇಳಿದನು.

ಈರೀತಿಯಾಗಿ ದುರ್ಯೋಧನನು ಹೇಳಲು ದುರ್ಯೋಧನನಿಗೆ ಅದೇ ಬುದ್ಧಿಯನ್ನು ದೃಢಪಡಿಸಿ ಅಂಧಂತಮಸ್ಸಿನಲ್ಲಿ ಅವನನ್ನು ತಳ್ಳುವುದಕ್ಕಾಗಿ ದೇವತೆಗಳು ಪುಷ್ಪದ ಮಳೆಯನ್ನು ಸುರಿಸಿದರು. ತನ್ನನ್ನು ಬಹುಮಾನ ಮಾಡಿಕೊಳ್ಳುವ, ಪರಮಾತ್ಮನನ್ನು ನಿಂದಿಸುವ ಪರಮಾತ್ಮನ ಭಕ್ತರನ್ನು ನಿಂದಿಸುವ, ಅದರಲ್ಲಿಯೂ ಕೊನೆಯ ಕಾಲದಲ್ಲಿ ನಿಂದಿಸುವ ಪುರುಷನಿಗೆ ಹೇಗೆ ತನಸ್ಸು ಆಗಲಾರದು? ಒಂದೊಂದು ಇದ್ದರೂ ಸಾಕು. ಎಲ್ಲವೂ ಸೇರುವುದರಿಂದ ಸುಖಾಧಿಕ್ಯವುಂಟಾಗುವುದು. ಶ್ರೀಭಗವಂತನು ದುರ್ಯೋಧನನೊಡನೆ ನೀನು ಮಾಡಿದ್ದೆಲ್ಲವೂ ವ್ಯರ್ಥವೇ. ಕ್ರೂರನಾದ, ಕೃತಘ್ನನಾದ, ಗುಣವಂತರಲ್ಲಿ ದ್ವೇಷವುಳ್ಳ, ನಿನಗೂ ಧರ್ಮ ಫಲವುಂಟಾಗುವ ಪಕ್ಷದಲ್ಲಿ ಕತ್ತಲೆಯು ಸೂರ್ಯನಂತೆ ಪ್ರಕಾಶಕವಾಗುವುದು' ಎಂದು ಹೇಳಿ ಪುನಃ ಪುನಃ ಧರ್ಮದಿಂದ ದುರ್ಯೋಧನನು ಮೃತನಾದನು ಎಂದು ಸ್ಥಾಪಿಸಿದನು. ಇದರಿಂದ ಸಜ್ಜನರ ಮನಸ್ಸಿಗೆ ಸಂತೋಷವಾಯಿತು. (ಅವರು) ದುರ್ಯೋಧನನು ಭೀಮಸೇನ ದೇವರು ಮಾಡಿದ ಧರ್ಮಯುದ್ಧದಲ್ಲಿ ಮೃತನಾದನೆಂದೇ ತಿಳಿದುಕೊಂಡರು. ಧರ್ಮರಾಜನಿಗೆ ಮಾತ್ರ ಪುಷ್ಪವೃಷ್ಟಿಯನ್ನು ನೋಡಿ ಸಂದೇಹವೇ ಉಂಟಾಯಿತು. ಅಶ್ವತ್ಥಾಮಾಚಾರ್ಯರೂ ಸಂಜಯನೂ ಬಲರಾಮದೇವರೂ ದುರ್ಯೋಧನನ ಮೇಲಿನ ಸ್ನೇಹದಿಂದ ಭೀಮಸೇನದೇವರು ಅಧರ್ಮಯುದ್ಧದಲ್ಲಿ ದುರ್ಯೋಧನನನ್ನು ಕೊಂದರೆಂದು ಹೇಳಿದರು.

ಕೊನೆಯ ಕಾಲದಲ್ಲಿ ಅಶ್ವತ್ಥಾಮಾಚಾರ್ಯರು ಕೃಪಕೃತವರ್ಮರನ್ನು ಕರೆದುಕೊಂಡು ದುರ್ಯೋಧನನ ಬಳಿಗೆ ಹೋದರು. ದುರ್ಯೋಧನನು ಸೊಂಟವು ಮುರಿದು ಬಿದ್ದುಕೊಂಡಿದ್ದನು. ನಾಯಿಗಳೂ ನರಿಗಳೂ ಅವನನ್ನು ಸೆಳೆಯುತ್ತಿದ್ದವು. ಅವುಗಳನ್ನು ಓಡಿಸಲಿಕ್ಕೂ ಅವನಿಗೆ ಶಕ್ತಿಯಿರಲಿಲ್ಲ. ಅವನಿಗೆ ದೀರ್ಘಶ್ವಾಸವು ಸೆಳೆಯುತ್ತಿದ್ದಿತು. ಅವನನ್ನು ನೋಡಿ ಅಶ್ವತ್ಥಾಮಾಚಾರ್ಯರು ತುಂಬಾ ದುಃಖವುಳ್ಳವರಾಗಿ ಪಾಂಡವರನ್ನು ನಿಂದಿಸಿ 'ರಾಜನೇ! ನಾನೀಗ ನಿನಗಾಗಿ ಏನು ಕಾರ್ಯವನ್ನು ಮಾಡಬೇಕು' ಎಂದು ಕೇಳಿದರು. 'ಪಾಂಡವರ ವಂಶವೇ ಭೂಮಿಯಲ್ಲಿ ಇಲ್ಲದಂತೆ ಮಾಡಿ ಪಾಂಡವರನ್ನೂ ಸಂಹರಿಸಿ ನನ್ನ ಪತ್ನಿಯಲ್ಲಿ ಸಂತಾನವನ್ನು ಉಂಟುಮಾಡಿ ಆ ಸಂತಾನದಿಂದ ರಾಜ್ಯಪರಿಪಾಲನೆ ಮಾಡಿಸಬೇಕು'

ಮುರಿದು ಕೆಳಗೆ ಬಿದ್ದನು. ಪಗಡೆ ಆಟದಲ್ಲಿ ಕೃಷ್ಣಪರಮಾತ್ಮನನ್ನು ಪಂದ್ಯವನ್ನಾಗಿ ಇಡು' ಎಂದು ಹೇಳಿದ್ದೇ ಮೊದಲಾದ ಅವನು ಮಾಡಿದ ಅಪರಾಧಗಳನ್ನು ಸ್ಮರಣೆ ಮಾಡಿಸಿ ಅವನ ತಲೆಯನ್ನು ಮೆಟ್ಟಿದರು. ಆಗ ಬಲರಾಮದೇವರೂ ಕೂಡ ಕೋಪಿಸಿಕೊಂಡು ಭೀಮಸೇನದೇವರ ಹತ್ತಿರ ಜಗಳಕ್ಕೆ ಬಂದುಬಿಟ್ಟರು. ಆಗ ಕೃಷ್ಣಪರಮಾತ್ಮನು ಅವರಿಗೆ ಸಮಾಧಾನಪಡಿಸಿ ಕಳುಹಿಸಿದನು. ಭೀಮಸೇನದೇವರು ದುರ್ಯೋಧನನನ್ನು ಧರ್ಮದಿಂದಲೇ ಸಂಹರಿಸಿದ್ದು ಎಂದು ಕೃಷ್ಣಪರಮಾತ್ಮನು ಜನರ ಮಧ್ಯದಲ್ಲಿ ಪುನಃಪುನಃ ಸಮರ್ಥನೆ ಮಾಡಿದರು. ಅದನ್ನು ಕೇಳಿ ದುರ್ಯೋಧನನು ಕೋಪದಿಂದ ತುಟಿಯನ್ನು ನಡುಗಿಸಿಕೊಂಡು ಕೃಷ್ಣಪರಮಾತ್ಮ ನೊಡನೆ 'ನಿನ್ನಿಂದಲೇ ಪಾಂಡವರು ಪಾಪದಲ್ಲಿ ಪ್ರವೃತ್ತರಾದರು. ನೀನು ಯಾವಾಗಲೂ ಒಬ್ಬನೇ ಅಧಿಕವಾಗಿ ಪಾಪಿಯಾದವನು' ಎಂದು ಹೇಳಿದನು.

ಅದಕ್ಕೆ ಪರಮಾತ್ಮನು 'ನಿನಗೆ ಸಮಾನನಾದ ಅತ್ಯಂತ ಪಾಪಿಷ್ಠನು ಯಾವಾಗಲೂ ಇರುವುದಿಲ್ಲ. ಭೀಷ್ಮಾದಿಗಳನ್ನು ಸಂಹಾರ ಮಾಡಿದ ಪಾಪವೂ ನಿನ್ನಿಂದಲೇ. ಪಾಪನಿಶ್ಚಯವುಳ್ಳ ನಿನ್ನನ್ನು ಅನುಸರಿಸಿದ ಕಾರಣವೇ ಅವರ ಸಂಹಾರವು ಏರ್ಪಟ್ಟಿತು. ಪಾಪಿಯಾದ ನಿನ್ನನ್ನೂ ಪಾಪಿಯನ್ನು ಅನುಸರಿಸಿದ ಭೀಷ್ಮಾದಿಗಳನ್ನೂ ಸಂಹರಿಸಿ ಪಾಂಡವರಿಗೆ ಸ್ವಲ್ಪವೂ ಪಾಪವು ಬರಲಾರದು. ಆದುದರಿಂದ ಪಾಂಡವರಲ್ಲಿ ಸ್ವಲ್ಪವೂ ಪಾಪವು ಇರುವುದಿಲ್ಲ. ಅವರು ಸ್ವಭಾವದಿಂದಲೇ ಗುಣವಂತರು. ನನ್ನನ್ನು ಆಶ್ರಯಿಸಿದವರು. ಅವರಲ್ಲಿ ಯಾರು ತಾನೇ ಸ್ವಲ್ಪವೂ ಪಾಪವನ್ನು ಹೇಳುವನು? ನೀನು ಸ್ವಭಾವದಿಂದ ಅತ್ಯಂತ ಪಾಪಿಯಾದ ವನು. ಇತರ ಧರ್ಮಿಷ್ಠರನ್ನು ಪಾಪಮಾರ್ಗದಲ್ಲಿ ಸೆಳೆದು ನೀನೂ ಪಾಪದಲ್ಲಿಯೇ ಯಾವಾಗಲೂ ಆಸಕ್ತನಾಗಿ ಅತ್ಯಂತ ಪಾಪಕರವಾದ ಗತಿಯನ್ನು ಹೊಂದುವಿ' ಎಂದು ಹೇಳಿದನು. ಆಗ ದುರ್ಯೋಧನನು 'ನನಗಿಂತ ಶ್ರೇಷ್ಠನಾದ ಒಳ್ಳೇ ಮರಣ ವುಳ್ಳವನು ಯಾರು ಇರುವನು? ನಾನು ಏನು ದೋಷವನ್ನು ಮಾಡಿರುವೆನು? ಬೇಕಾದ ಯಜ್ಞಗಳನ್ನು ಮಾಡಿರುವೆನು. ಅನ್ನದಾನಾದಿಗಳನ್ನು ಮಾಡಿರುವೆನು. ಶತ್ರುಗಳ ತಲೆಯಲ್ಲಿ ಪಾದವನ್ನು ಇಟ್ಟಿರುವೆನು. ಯುದ್ಧರಂಗದಲ್ಲಿ ಯುದ್ಧ ಮಾಡುತ್ತಲೇ ಮರಣವನ್ನು ಹೊಂದಿರುವೆನು. ಇದಕ್ಕಿಂತ ಹೆಚ್ಚಿಗೆ ಏನಾಗಬೇಕಾಗಿದೆ? ಬೇಕಾದ ಭೋಗಗಳನ್ನು ಅನುಭವಿಸಿರುವೆನು. ಉತ್ತಮವಾದ ಗತಿಯನ್ನು ಹೊಂದಿರುವೆನು. ಕಪಟಯುದ್ಧವನ್ನು ಮಾಡಿದ ದುಃಖಿಗಳಾದ ಪಾಂಡವರು ದುಃಖವನ್ನು ಹೊಂದುವರು. ಚಂದ್ರಸೂರ್ಯರಂತೆ ಇದ್ದ ಶೂರರಾದ

ಧರ್ಮಿಷ್ಠ ರಾದ ಸಜ್ಜನರಿಂದ ರಹಿತವಾದ ರತ್ನರಹಿತವಾದ ಬರೇ ಭೂಮಿಯನ್ನು ಪಾಂಡವರು ಅನುಭವಿಸಲಿ' ಎಂದು ಹೇಳಿದನು.

ಈರೀತಿಯಾಗಿ ದುರ್ಯೋಧನನು ಹೇಳಲು ದುರ್ಯೋಧನನಿಗೆ ಅದೇ ಬುದ್ಧಿಯನ್ನು ದೃಢಪಡಿಸಿ ಅಂಧಂತಮಸ್ಸಿನಲ್ಲಿ ಅವನನ್ನು ತಳ್ಳುವುದಕ್ಕಾಗಿ ದೇವತೆಗಳು ಪುಷ್ಪದ ಮಳೆಯನ್ನು ಸುರಿಸಿದರು. ತನ್ನನ್ನು ಬಹುಮಾನ ಮಾಡಿಕೊಳ್ಳುವ, ಪರಮಾತ್ಮನನ್ನು ನಿಂದಿಸುವ ಪರಮಾತ್ಮನ ಭಕ್ತರನ್ನು ನಿಂದಿಸುವ, ಅದರಲ್ಲಿಯೂ ಕೊನೆಯ ಕಾಲದಲ್ಲಿ ನಿಂದಿಸುವ ಪುರುಷನಿಗೆ ಹೇಗೆ ತನಸ್ಸು ಆಗಲಾರದು? ಒಂದೊಂದು ಇದ್ದರೂ ಸಾಕು. ಎಲ್ಲವೂ ಸೇರುವುದರಿಂದ ಸುಖಾಧಿಕ್ಯವುಂಟಾಗುವುದು. ಶ್ರೀಭಗವಂತನು ದುರ್ಯೋಧನನೊಡನೆ ನೀನು ಮಾಡಿದ್ದೆಲ್ಲವೂ ವ್ಯರ್ಥವೇ. ಕ್ರೂರನಾದ, ಕೃತಘ್ನನಾದ, ಗುಣವಂತರಲ್ಲಿ ದ್ವೇಷವುಳ್ಳ, ನಿನಗೂ ಧರ್ಮ ಫಲವುಂಟಾಗುವ ಪಕ್ಷದಲ್ಲಿ ಕತ್ತಲೆಯು ಸೂರ್ಯನಂತೆ ಪ್ರಕಾಶಕವಾಗುವುದು' ಎಂದು ಹೇಳಿ ಪುನಃ ಪುನಃ ಧರ್ಮದಿಂದ ದುರ್ಯೋಧನನು ಮೃತನಾದನು ಎಂದು ಸ್ಥಾಪಿಸಿದನು. ಇದರಿಂದ ಸಜ್ಜನರ ಮನಸ್ಸಿಗೆ ಸಂತೋಷವಾಯಿತು. (ಅವರು) ದುರ್ಯೋಧನನು ಭೀಮಸೇನ ದೇವರು ಮಾಡಿದ ಧರ್ಮಯುದ್ಧದಲ್ಲಿ ಮೃತನಾದನೆಂದೇ ತಿಳಿದುಕೊಂಡರು. ಧರ್ಮರಾಜನಿಗೆ ಮಾತ್ರ ಪುಷ್ಪವೃಷ್ಟಿಯನ್ನು ನೋಡಿ ಸಂದೇಹವೇ ಉಂಟಾಯಿತು. ಅಶ್ವತ್ಥಾಮಾಚಾರ್ಯರೂ ಸಂಜಯನೂ ಬಲರಾಮದೇವರೂ ದುರ್ಯೋಧನನ ಮೇಲಿನ ಸ್ನೇಹದಿಂದ ಭೀಮಸೇನದೇವರು ಅಧರ್ಮಯುದ್ಧದಲ್ಲಿ ದುರ್ಯೋಧನನನ್ನು ಕೊಂದರೆಂದು ಹೇಳಿದರು.

ಕೊನೆಯ ಕಾಲದಲ್ಲಿ ಅಶ್ವತ್ಥಾಮಾಚಾರ್ಯರು ಕೃಪಕೃತವರ್ಮರನ್ನು ಕರೆದುಕೊಂಡು ದುರ್ಯೋಧನನ ಬಳಿಗೆ ಹೋದರು. ದುರ್ಯೋಧನನು ಸೊಂಟವು ಮುರಿದು ಬಿದ್ದುಕೊಂಡಿದ್ದನು. ನಾಯಿಗಳೂ ನರಿಗಳೂ ಅವನನ್ನು ಸೆಳೆಯುತ್ತಿದ್ದವು. ಅವುಗಳನ್ನು ಓಡಿಸಲಿಕ್ಕೂ ಅವನಿಗೆ ಶಕ್ತಿಯಿರಲಿಲ್ಲ. ಅವನಿಗೆ ದೀರ್ಘಶ್ವಾಸವು ಸೆಳೆಯುತ್ತಿದ್ದಿತು. ಅವನನ್ನು ನೋಡಿ ಅಶ್ವತ್ಥಾಮಾಚಾರ್ಯರು ತುಂಬಾ ದುಃಖವುಳ್ಳವರಾಗಿ ಪಾಂಡವರನ್ನು ನಿಂದಿಸಿ 'ರಾಜನೇ! ನಾನೀಗ ನಿನಗಾಗಿ ಏನು ಕಾರ್ಯವನ್ನು ಮಾಡಬೇಕು' ಎಂದು ಕೇಳಿದರು. 'ಪಾಂಡವರ ವಂಶವೇ ಭೂಮಿಯಲ್ಲಿ ಇಲ್ಲದಂತೆ ಮಾಡಿ ಪಾಂಡವರನ್ನೂ ಸಂಹರಿಸಿ ನನ್ನ ಪತ್ನಿಯಲ್ಲಿ ಸಂತಾನವನ್ನು ಉಂಟುಮಾಡಿ ಆ ಸಂತಾನದಿಂದ ರಾಜ್ಯಪರಿಪಾಲನೆ ಮಾಡಿಸಬೇಕು'

ಎಂದು ಹೇಳಿ ದುರ್ಯೋಧನನು ಅಶ್ವತ್ಥಾಮಾಚಾರ್ಯರಿಗೆ ಧೂಳಿಯಿಂದ ಅಭಿಷೇಕ ಮಾಡಿದನು. ಅಶ್ವತ್ಥಾಮಾಚಾರ್ಯರು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡು ರಾತ್ರಿಸಮಯದಲ್ಲಿ ಹೋಗಿ ಪಾಂಡವರ ಪಕ್ಷದವರನ್ನು ಮಲಗಿದ್ದವರೆಲ್ಲರನ್ನೂ ಸಂಹರಿಸಿ ಪಾಂಡವರ ಐದು ಜನ ಮಕ್ಕಳನ್ನು ಕೊಂದು ಅವರ ತಲೆಗಳನ್ನು ದುರ್ಯೋಧನನಿಗೆ ತಂದು ತೋರಿಸಿದರು. ಆ ಸಮಯದಲ್ಲಿ ದುರ್ಯೋಧನನು ಮರಣೋನ್ಮುಖನಾಗಿದ್ದನು. ಆ ಪಾಪಿಯು ಪಾಂಡವರ ಮಕ್ಕಳ ತಲೆಗಳನ್ನು ನೋಡಿ ಅಶ್ವತ್ಥಾಮಾಚಾರ್ಯರು ಹೇಳಿದ ಮಾತನ್ನು ಕೇಳಿ ಸಂತೋಷಪಟ್ಟು ಸರಿ, ಸರಿ ಎನ್ನುತ್ತಾ ಪ್ರಾಣಬಿಟ್ಟನು.

ದುರ್ಯೋಧನನು ಮೃತನಾದ ಮೇಲೆ ಅವನು ವಿಷ್ಣುಭಕ್ತರಾದ ಬ್ರಾಹ್ಮಣರಿಗೆ ದಕ್ಷಿಣೆಯಿಂದ ಸಂತೋಷಪಡಿಸಿ ಯಜ್ಞಾದಿಗಳನ್ನು ಮಾಡಿಸಿದ್ದರಿಂದ ಸಂತುಷ್ಟರಾದ ಅವರ ಆಶೀರ್ವಾದ ಬಲದಿಂದ ಸ್ವರ್ಗಪ್ರದೇಶವನ್ನು ಹೊಂದಿ ಅಲ್ಲಿ ಸುಖವನ್ನು ಅನುಭವಿಸಿ ಕೊನೆಗೆ ಅಂಧಂತಮಸ್ಸಿಗೆ ಹೋಗುವನು.



# ದುಶ್ಶಾಸನನು [1]

ದುಃಶಾಸನನು ಧೃತರಾಷ್ಟ್ರನ ಮಗನು. ದುರ್ಯೋಧನನ ತಮ್ಮನು. ಇಂದ್ರಜಿತು ಎಂಬ ದೈತ್ಯನೇ ದುಃಶಾಸನನಾಗಿ ಹುಟ್ಟಿರುವನು. ತುಪ್ಪ ತುಂಬಿರುವ ಗಡಿಗೆಯಿಂದ ದುರ್ಯೋಧನನು ಹುಟ್ಟಿದ ಮರುದಿನವೇ ಹುಟ್ಟಿದನು. ಗಾಂಧಾರಿಯು ಗರ್ಭಿಣಿಯಾಗಿರುವಾಗ ಧರ್ಮರಾಜನು ಹುಟ್ಟಿದ್ದನ್ನು ತಿಳಿದು ಹೊಟ್ಟೆಯನ್ನು ಬಡಿದುಕೊಂಡು ಗರ್ಭಪಾತವಾಯಿತು. ಆಮೇಲೆ ವೇದವ್ಯಾಸದೇವರು ಬಂದು, ಗರ್ಭಪಿಂಡವನ್ನು ವಿಭಾಗಿಸಿ ತುಪ್ಪದ ಪಾತ್ರೆಗಳಲ್ಲಿ ಇಟ್ಟು ಹೋದಮೇಲೆ ಮೊದಲು ದುರ್ಯೋಧನನು ಹುಟ್ಟಿ ಮರುದಿವಸ ದುಃಶಾಸನನು ಹುಟ್ಟಿದನು.

ದುಃಶಾಸನನೂ ದುರ್ಯೋಧನನಂತೆ ಅತ್ಯಂತ ದುಷ್ಟನಾಗಿದ್ದನು. ದುಃಶಾಸನನೂ ಕರ್ಣನೂ ಶಕುನಿಯೂ ಮೂರು ಜನರೂ ದುರ್ಯೋಧನನ ದುರ್ಬುದ್ಧಿಗೆ ಅನುಕೂಲರಾಗಿದ್ದರು. ಈ ಪಾಪಿಯೇ ಪಗಡೆ ಆಟದ ಸಭೆಗೆ ಲೋಕರೀತಿಯಿಂದ ರಜಸ್ವಲೆಯೆನ್ನಿಸುವ ದ್ರೌಪದೀದೇವಿಯನ್ನು ತಲೆಕೂದಲನ್ನು

1. ಮ.ತಾ.ನಿ. ಅ-2

ಹಿಡಿದು ಸೆಳೆದುಕೊಂಡು ಬಂದನು. ಅವನೇ ಪಾಂಡವರ ವಸ್ತ್ರವನ್ನು ಅಪಹರಿಸಿದನು. ಸಭೆಯಲ್ಲಿ ದ್ರೌಪದೀದೇವಿಯರ ಸೀರೆಯನ್ನು ಸೆಳೆಯತೊಡಗಿದನು. ಆದರೆ ಶ್ರೀಕೃಷ್ಣಪರಮಾತ್ಮನ ಅನುಗ್ರಹದಿಂದ ಅವರ ಸೀರೆಯು ಅಕ್ಷಯವಾಯಿತು.

ಕೊನೆಗೆ ಭಾರತ ಯುದ್ಧದಲ್ಲಿ ಅನೇಕ ವೀರರನ್ನು ಸಂಹರಿಸಿದನು. ಕೊನೆಗೆ ಯುದ್ಧದಲ್ಲಿ ಭೀಮಸೇನದೇವರು ಶತ್ರುಗಳನ್ನು ಸಂಹರಿಸುತ್ತಿದ್ದರು. ಸೈನ್ಯವನ್ನು ಓಡಿಸುತ್ತಿದ್ದರು. ಆ ಸಮಯ ಕರ್ಣನು ಸೇನಾಧಿಪತಿಯಾಗಿದ್ದನು. ಆಗ ದುಃಶಾಸನನು ಭೀಮಸೇನದೇವರ ಹತ್ತಿರ ಯುದ್ಧಕ್ಕೆ ಹೋದನು. ಆಗ ಭೀಮಸೇನದೇವರು ಸಿಂಹದಂತೆ ಅವನನ್ನು ಹೋಗಿ ಹಿಡಿದರು. ಕಠಿಣವಾಗಿ ಮಾತಾಡುತ್ತಿದ್ದ ಆ ದುಃಶಾಸನನ ರಥವನ್ನು ಮುರಿದು ಭೀಮಸೇನದೇವರು ಅವನನ್ನು ಹಿಡಿದು ಭೂಮಿಯಲ್ಲಿ ಬೀಳಿಸಿ ಗದೆಯಿಂದ ಬಡಿದು ಅವನ ಎದೆಯನ್ನು ಸೀಳಿದರು. ಕಾಲಿನಿಂದ ಕುತ್ತಿಗೆಯಿಂದ ಒತ್ತಿಹಿಡಿದು ಹೊಟ್ಟೆಯ ಮೇಲೆ ಕೂತುಕೊಂಡು ರೋಷವುಳ್ಳವರಾಗಿ ಆ ದುಃಶಾಸನನ ಮುಖವನ್ನು ನೋಡುತ್ತಾ ಕೋಶದಿಂದ ಖಡ್ಗವನ್ನು ತೆಗೆದು ಅವನ ಎದೆಯಲ್ಲಿ ಚುಕ್ಕಿದರು. ಅವನ ಎದೆಯನ್ನು ಕೊರೆದು ದೊಡ್ಡ ಸರೋವರದಂತೆ ಮಾಡಿದರು. ಅಮೃತವನ್ನು ಕುಡಿಯುವಂತೆ ಅವನ ರಕ್ತವನ್ನು ಕುಡಿಯುವಂತೆ ತೋರಿಸಿದರು. ಮನುಷ್ಯರ ರಕ್ತವನ್ನು ಕುಡಿಯಬಾರದಾದ ಕಾರಣ ಭೀಮಸೇನದೇವರು ದುಃಶಾಸನನ ರಕ್ತವನ್ನು ಕುಡಿಯಲಿಲ್ಲ. ಶತ್ರುಗಳಿಗೆ ಭಯವನ್ನು ಉಂಟುಮಾಡುವುದಕ್ಕಾಗಿ ಕುಡಿಯುವಂತೆ ತೋರಿಸಿದರು. ಅವರ ಹುಲ್ಲಿನ ಸಂದಿನ ಒಳಗೂ ರಕ್ತವು ಹೋಗಲಿಲ್ಲ. ನರಸಿಂಹದೇವರನ್ನು ಸ್ಮರಿಸುತ್ತಾ ಮನ್ಯುಸೂಕ್ತವನ್ನು ಹೇಳಿದರು. ಯುದ್ಧವೆಂಬ ಯಜ್ಞದಲ್ಲಿ ಗದೆಯಿಂದ ಸೀಳಿ ರಕ್ತವೆಂಬ ಸೋಮವನ್ನು ನರಸಿಂಹದೇವರಿಗೆ ಸಮರ್ಪಿಸಿದರು. ವೀರರಾದ ಭೀಮಸೇನದೇವರು ತಾನು ಮಾಡಿದ್ದದ ಪ್ರತಿಜ್ಞೆಯನ್ನು ಲೋಕಮಧ್ಯದಲ್ಲಿ ಸತ್ಯವನ್ನಾಗಿ ಮಾಡಿ ಹೇಳಿದರು. 'ಯಾವ ಕೌರವರ ಪತ್ನಿಯರು ಪತಿಗಳುಳ್ಳವರಾಗಿದ್ದರೋ ಅವರೆಲ್ಲರೂ ಈಗ ಪತಿಹೀನರಾದರು. ಯಾರಿಗೆ ಪತಿಯಿಲ್ಲವೆಂದು ಹೆಸರೂ ಆ ದ್ರೌಪದಿಗೆ ಈಗ ಪತಿಗಳಿರುವರೆಂದಾಯಿತು. ಪರಮಾತ್ಮನ ವಿಚಿತ್ರವಾದ ಶಕ್ತಿಯನ್ನು ನೋಡಿರಿ. ನಿಃಸಾರವಾದ ಎಳ್ಳಿನಂತೆ ಪೂರ್ವದಲ್ಲಿ ಇದ್ದವರು ಈಗ ಸರಿಯಾದ ಎಳ್ಳಿನಂತೆ ಆಗಿರುವರು. ನಾನು ಹಿಡಿದಿರುವ ಈ ದುಃಶಾಸನನನ್ನು ಯಾರಾದರೂ ಪುರುಷನು ವೀರ್ಯದಿಂದ ಬಿಡಿಸಲಿ! ಈ ಪ್ರಕಾರವಾಗಿ ಹೇಳುತ್ತಾ ಸ್ವರ್ಗದಲ್ಲಿ ದೇವತೆಯು ಅಮೃತಪಾನ

ಮಾಡುವಂತೆ ಪುನಃ ದುಃಶಾಸನನ ರಕ್ತವನ್ನು ಪಾನಮಾಡುವಂತೆ ತೋರಿಸಿದರು. ಆಗಲೂ ಕೂಡ ದುಃಶಾಸನನ ಪ್ರಾಣವು ಹೋಗಿರಲಿಲ್ಲ. ಆಮೇಲೆ ಅವನನ್ನು ಬಿಟ್ಟು ಆಯುಧರಹಿತರಾಗಿ ಶತ್ರುಗಳ ಮಧ್ಯದಲ್ಲಿ ನರ್ತನಮಾಡಿದರು. 'ಯಾರು ಪೂರ್ವದಲ್ಲಿ ನಾವು ಪಗಡೆ ಆಟದ ಸಭೆಯಿಂದ ಹೋಗುವಾಗ ಗೋವು, ಗೋವು ಎಂದು ಹೇಳುತ್ತಾ ಪ್ರತಿಯಾಗಿ ನರ್ತನ ಮಾಡುವೆವು' ಎಂದು ಹೇಳುತ್ತಾ ಶತ್ರುಗಳ ಮಧ್ಯದಲ್ಲಿ ಕುಣಿಯುತ್ತಾ ಶತ್ರುಗಳನನು ಕೂಗಿದರು. ಕರ್ಣ, ಅಶ್ವತ್ಥಾಮ, ದುರ್ಯೋಧನಾದಿಗಳಲ್ಲಿ ಒಬ್ಬನೂ ನೋಡಲಿಕ್ಕೂ ಸಮರ್ಥನಾಗಲಿಲ್ಲ. ಕರ್ಣನಿಗೆ ಭಯದಿಂದ ಧನುಸ್ಸು ಕೆಳಗೆ ಬಿದ್ದಿತು. ಕಣ್ಣುಗಳನ್ನು ಅವನು ಮುಚ್ಚಿಕೊಂಡನು. ಆಗ ಶಲ್ಯನು ಎಚ್ಚರಪಡಿಸಲು 'ಅರ್ಜುನನ ಭಾಗಕ್ಕೆ ಸೇರಿದ ಅವನು ಬಹುಕಷ್ಟದಿಂದ ನಿಂತುಕೊಂಡಿದ್ದನು. ಅಶ್ವತ್ಥಾಮಾಚಾರ್ಯರು ಭೀಮಸೇನದೇವರನ್ನು ಬಿಟ್ಟು ಬಹುದೂರ ಹೊರಟುಹೋದರು. ಆಗ ಭೀಮಸೇನದೇವರು 'ಈ ಯುದ್ಧವೆಂಬ ಯಜ್ಞದಲ್ಲಿ ಸೋಮಪಾನವನ್ನು ಮಾಡಿಯಾಯಿತು. ಇನ್ನು ಯಜ್ಞಪಶುವಾದ ದುರ್ಯೋಧನನನ್ನು ಸಂಹರಿಸಬೇಕು' ಎಂದು ಹೇಳುತ್ತಾ ಮೃತನಾದ ದುಃಶಾಸನನನ್ನು ಬಿಟ್ಟು ರೋಷದಿಂದ ದುರ್ಯೋಧನನಿದ್ದಲ್ಲಿಗೆ ಓಡಿದರು. ಬರುತ್ತಿರುವ ಭೀಮಸೇನದೇವರನ್ನು ನೋಡಿ ದುರ್ಯೋಧನನು ಅತ್ಯಂತ ಭಯದಿಂದ ಓಡಿಹೋದನು. ಎರಡೂಪಕ್ಷದ ಸೈನಿಕರೂ ಯುದ್ಧರಂಗವನ್ನು ಬಿಟ್ಟು ಓಡಿಹೋದರು. ಕೃಷ್ಣಾರ್ಜುನರು ಮಾತ್ರ ಇದ್ದರು. ಒಂದು ಮುಹೂರ್ತ ಯುದ್ಧರಂಗವು ಶೂನ್ಯವಾಯಿತು. ಭೀಮಸೇನದೇವರು ಸಂತೋಷದಿಂದ ಹುಲಿಯಂತೆ ನರ್ತನ ಮಾಡಿದರು. ಶತ್ರುಗಳೆಲ್ಲರನ್ನೂ ಗೋವುಗಳೆಂದು ಸಂಕಲ್ಪಿಸಿ ಹುಲಿಯಂತೆ ನರ್ತನ ಮಾಡುತ್ತಿರುವ ಭೀಮಸೇನದೇವರನ್ನು ನೋಡಿ ಕೃಷ್ಣಾರ್ಜುನರು ಸಂತೋಷವನ್ನು ಹೊಂದಿದರು. ಈರೀತಿಯಾಗಿ ಭಯಂಕರವಾಗಿ ದುಃಶಾಸನನು ಭೀಮಸೇನದೇವರಿಂದ ಕೊಲ್ಲಲ್ಪಟ್ಟನು.



1. ಅರ್ಜುನನಿಂದ ವಧೆಗೆ ಯೋಗ್ಯ

# ಭೀಮಸೇನನ ಬಾಲ್ಯ [1]

[ದುರ್ವಾಸರು ಕುಂತಿಗೆ ಎಲ್ಲ ದೇವತೆಗಳನ್ನು ವಶೀಕರಿಸುವ ಮಂತ್ರವೊಂದನ್ನು ಅನುಗ್ರಹಿಸಿದ್ದರು. ಆ ಬಲದಿಂದ ಪತಿ ಪಾಂಡುರಾಜನ ಆದೇಶ, ಅಪೇಕ್ಷೆಯ ಮೇರೆಗೆ ಆ ಮಂತ್ರವನ್ನು ಭಕ್ತಿಯಿಂದ ಪಠಿಸಿದ್ದರಿಂದ ಯಮಧರ್ಮನನ್ನು ಆರಾಧಿಸಿದಾಗ ಆತನೇ ಮಗನಾಗಿ 'ಧರ್ಮರಾಜ'ನೆಂಬ ಹೆಸರಿನಿಂದ ಅವತರಿಸಿದನು.

ಈ ಸುದ್ದಿ ಗಾಂಧಾರಿಗೆ ತಲುಪಿ ತನ್ನಕ್ಕಿಂತ ಮೊದಲು ಕುಂತಿ ಮಗುವನ್ನು ಹೆತ್ತಳೆಂದು ಅಸೂಯೆಯಿಂದ ತನ್ನ ಗರ್ಭವನ್ನೇ ಹೊಡೆದುಕೊಂಡಾಗ ವೇದವ್ಯಾಸರು ಬಂದು ಆ ಗರ್ಭದ ತುಂಡುಗಳನ್ನು ನೂರೊಂದು ಭಾಗಗಳನ್ನಾಗಿ ಮಾಡಿ ನೂರೊಂದು (101) ಗಡಿಗೆಗಳಲ್ಲಿ ಬೇರೆಬೇರೆಯಾಗಿಟ್ಟರು. ಅವುಗಳ ಪೈಕಿ ಮೊದಲು ಘಟದಿಂದ ಹೊರಬಂದ ಮಗುವೇ ದುರ್ಯೋಧನ. ಮೂಲತಃ ಕಲಿ. ವಾಯುದೇವರ ಸನ್ನಿಧಿವುಳ್ಳವನೂ ಆಗಿದ್ದನು.

ಧರ್ಮರಾಜ ಜನಿಸಿದ ತರುವಾಯ ಪಾಂಡುರಾಜ ಕುಂತಿಗೆ ನುಡಿದ.

ಧರ್ಮವನ್ನು ಬಾಹುಬಲ ಹಾಗೂ ಜ್ಞಾನಬಲದಿಂದ ರಕ್ಷಿಸಬೇಕು. ಇಲ್ಲದಿದ್ದರೆ ಧರ್ಮನಾಶ ಖಚಿತ. ಆದ್ದರಿಂದ ಜ್ಞಾನ ಹಾಗೂ ಬಾಹುಬಲದಿಂದ ಕೂಡಿದ ಮತ್ತೊಂದು ಮಗನಿಗೆ ಪ್ರಯತ್ನಿಸು ಎಂದ.

ಅದೇ ಮೇರೆಗೆ ಕುಂತಿಯು ವಾಯುದೇವರನ್ನು ಅದಕ್ಕಾಗಿ ಮಗನನ್ನು ಕೊಡಲು ಕರೆದಳು. ಕಾರಣ ವಾಯುದೇವರೇ ದೇವತೆಗಳಲ್ಲಿ ಭಗವಂತನ ತರುವಾಯ ಶ್ರೇಷ್ಠರಾದ್ದರಿಂದ. ಆಗ ಪ್ರತ್ಯಕ್ಷರಾದ ವಾಯುದೇವರ ಕುಂತಿಯ ಉದರಸ್ಪರ್ಶ ಮಾತ್ರದಿಂದ ವಾಯುದೇವರೇ 'ಭೀಮ'ನೆಂಬ ಹೆಸರಿನಿಂದ ಅವತರಿಸಿದರು.

('ಭೀಮಸೇನ' ಶಬ್ದವು ಬೃತಾಃ ಮಾಃ ಯೇನ ಸಃ ಭೀಮಃ, ಇನೇನ ವಿಷ್ಣುನಾ ಸಹಿತ ಇತಿ ಸೇನಃ । ಭೀಮಶ್ಚಾಸೌ ಸೇನಶ್ಚ ಭೀಮಸೇನ ಇತಿ ॥)

ಮಾ-ವಿದ್ಯೆಗಳಿಂದ ಪೂರ್ಣನಾದ್ದರಿಂದ ಭೀಮ. ಒಡೆಯನಾದ ವಿಷ್ಣುವಿನಿಂದ ಸದಾ ಇರುವುದರಿಂದ ಭೀಮಸೇನ ಎಂಬ ಹೆಸರು ಆತನಿಗೆ ಸಾರ್ಥಕವಾಗಿ ಬಂದಿತು.

---

**1. ಮ.ತಾ.ನಿ. ಅ-12, 14**

ಭೀಮಸೇನ ಹುಟ್ಟುವುದೇ ತಡ. ಭೂಮಿ ಸೀಳಿತು. ಭೀಮ ಜನಿಸಿದ 10ನೇ ದಿನ ಸ್ನಾನಮಾಡಿ ಮಗುವನ್ನು ಹೊತ್ತುಕೊಂಡು ದೇವತಾರಾಧನೆಗೆ ಆಶ್ರಮದಿಂದ ಹೊರಟಾಗ ಶತಶೃಂಗಬೆಟ್ಟದಲ್ಲಿ ಹುಲಿಯೊಂದನ್ನು ನೋಡಿ ಹೆದರಿದಳು. ಕುಂತಿ ಕೈಯಲ್ಲಿದ್ದ ಮಗು ಕೆಳಗೆ ಬಿದ್ದಿತು. ಮಗುವಿಗೆ ಏನೂ ಆಗಲಿಲ್ಲ. ಬೆಟ್ಟ ಪುಡಿಪುಡಿಯಾಯಿತು. ಬೆಟ್ಟದ ಹೆಸರು ಸಾರ್ಥಕವಾಗಿ 'ಶತಶೃಂಗ'ವೆನಿಸಿತು.

ಭೀಮ ಹುಟ್ಟಿದಾಗ ಅಸುರರು ರಕ್ತ ಕಾರಿದರು. ಅಸುರರಾಜರೂ ಹೆದರಿ ನೀರಾದರು. ಪಾಂಡುಕುಂತೀ ಧರ್ಮರೊಡನೆ ಭೀಮನೂ ಬದರೀ ಪ್ರಾಂತ ದಲ್ಲಿಯೇ ಬೆಳೆಯುತ್ತಿದ್ದನು.

ಭೀಮಸೇನನ ನಂತರ ಕುಂತೀದೇವಿಯು ಇಂದ್ರನಿಂದ ಅರ್ಜುನನನ್ನು ಪಡೆದಳು. ಮಾದ್ರಿದೇವಿಯು ಪಾಂಡುರಾಜನಿಂದ ಕುಂತೀದೇವಿಗೆ ಆದೇಶಿಸಿ, ಮಂತ್ರೋಪದೇಶ ಪಡೆದು ಅಶ್ವಿನೀದೇವತೆಗಳಿಂದ ನಕುಲ ಸಹದೇವರೆಂಬ ಎರಡು ಪುತ್ರರನ್ನು ಪಡೆದಳು. ಕುಂತೀದೇವಿಗೆ ಇದರಿಂದ ಸ್ವಲ್ಪ ಅಸಮಾಧಾನವೂ ಆಯಿತು.

ಹೀಗೆ ಪಾಂಡುರಾಜನು ಕುಂತೀಮಾದ್ರಿಯರಿಂದ ಧರ್ಮ, ವಾಯು, ಇಂದ್ರ, ಅಶ್ವಿನೀದೇವತೆಗಳಿಂದ ಧರ್ಮರಾಜ, ಭೀಮ, ಅರ್ಜುನ, ನಕುಲ ಸಹದೇವರೆಂಬ ಐದು ಮಕ್ಕಳನ್ನು ಪಡೆದು ಬದರೀಕಾಶ್ರಮ ವನಗಳಲ್ಲಿ ಧರ್ಮದಿಂದ ತಪೋ ನಿರತರಾಗಿರುತ್ತಿರಲು ಅರ್ಜುನನ 14ನೇ ವಾರ್ಷಿಕ ಜನ್ಮ ನಕ್ಷತ್ರ ದಿನದಂದು ಕುಂತೀದೇವಿಯು ಋಷಿಗಳು ಹಾಗೂ ಅತಿಥಿಗಳಿಗೆ ಅನ್ನದಾನ ಮಾಡುತ್ತಿದ್ದಳು.

ಆದೇವೇಳೆ ಪಾಂಡುರಾಜನು ಮಾದ್ರೀದೇವಿಯೊಡನೆ ವಸಂತಋತುವಿನ ವನದಲ್ಲಿ ಸಂಚರಿಸುತ್ತಾ ಸಂಗಮ ಮಾಡಿ ಋಷಿ ಶಾಪದಿಂದಾಗಿ ಪ್ರಾಣತ್ಯಾಗ ಮಾಡಿದನು. ಅದನ್ನು ತಿಳಿದ ಕುಂತೀ ಹಾಗೂ ಮಕ್ಕಳು ದುಃಖಿತರಾದರು. ಪಾಂಡು ರಾಜನಿಗೆ ಪಿತೃಕಾರ್ಯ ನೆರವೇರಿಸಿದರು. ಮಾದ್ರಿಯು ಪಾಂಡುವಿನ ಚಿತೆಯನ್ನೇರಿ ಸಹಗಮನ ಮಾಡಿದಳು.

ಅಲ್ಲಿದ್ದ ಋಷಿಮುನಿಗಳು ಪಾಂಡುರಾಜನ ಐದು ಮಕ್ಕಳನ್ನೂ, ಕುಂತಿಯನ್ನೂ ಹಸ್ತಿನಾವತಿಗೆ ಹದಿನೆಂಟನೆ ದಿನದಂದು ಕರೆತಂದು ಭೀಷ್ಮ ಧೃತರಾಷ್ಟ್ರಾದಿಗಳಿಗೆ ಎಲ್ಲವನ್ನೂ ವಿವರಿಸಿ ಅಲ್ಲೇ ಅದೃಶ್ಯರಾದರು.

ಆಗ ಧೃತರಾಷ್ಟ್ರ, ಭೀಷ್ಮರು ಸುಮ್ಮನಿದ್ದರು. ದುರ್ಯೋಧನಾದಿಗಳು ಹೇಳಿದರು ''ಪಾಂಡುವಿನ ಮರಣ ಮೊದಲೇ ಆಗಿತ್ತು. ಅವನಿಗೆಲ್ಲಿಯ ಮಕ್ಕಳು''

ಎಂದು. ಆಗ ವಾಯುದೇವರು ಆಕಾಶದಲ್ಲಿ ಅದೃಶ್ಯರಾಗಿ ಹೇಳಿದರು, ''ಧರ್ಮರಾಜಾದಿಗಳು ಹುಟ್ಟಿದ್ದು ಪಾಂಡು ಬದುಕಿದ್ದಾಗಲೇ. ಆತನ ಅನುಮತಿ ಪಡೆದೇ ನಿಯೋಗ ಪದ್ಧತಿಯಿಂದ ದೇವತೆಗಳಿಂದ ಇವರು ಜನಿಸಿದ್ದಾರೆ. ನಾರಾಯಣನಿಂದ ರಕ್ಷಿತರೂ ಆಗಿದ್ದಾರೆ'' ಎಂದು. ವಾಯುದೇವರ ಈ ಮಾತನ್ನೂ ದುರ್ಯೋಧನಾದಿಗಳು ಶಂಕಿಸಿದಾಗ ವ್ಯಾಸರು ಬಂದು ಅವರೆಲ್ಲರನ್ನು ಪಾಂಡು ರಾಜನ ಅರಮನೆಗೆ ಕರೆದುಕೊಂಡು ಹೋದರು. ಆಗ ಭೀಷ್ಮಾದಿಗಳೆಲ್ಲರೂ ಪಾಂಡವರನ್ನು ಸ್ವೀಕರಿಸಿದರು. ದುರ್ಯೋಧನಾದಿಗಳಿಗೆ ಮಾತ್ರ ಆಗ ಬಹಳ ಸಂಕಟವಾಯಿತು.

ಧೃತರಾಷ್ಟ್ರನ ಮಕ್ಕಳು ಪಾಂಡುರಾಜನ ಮಕ್ಕಳೊಂದಿಗೆ ಹಾಗೂ ಇತರ ಎಲ್ಲ ರಾಜಕುಮಾರರೂ ಬೇರೆಬೇರೆ ಬಾಲ ಕ್ರೀಡೆಗಳನ್ನು ಮಾಡುತ್ತಿದ್ದರು. ಎಲ್ಲ ರಾಜಕುಮಾರರು ಭೀಮನ ಸ್ವಾಭಾವಿಕ ಬಲದಿಂದ ಸೋಲನ್ನು ಅನುಭವಿಸುತ್ತಿದ್ದರು. ಭೀಮಸೇನನು ತಾನೆಂದೂ ಕೆಟ್ಟ ಮನಸ್ಸಿನಿಂದ ಆಟವಾಡುತ್ತಿದ್ದಿಲ್ಲ. ಆದರೆ ಭೀಮನು ಸದಾ ಆಟಗಳಲ್ಲಿ ಗೆಲುವನ್ನು ಪಡೆಯುವುದನ್ನು ಕಂಡು ದುರ್ಯೋಧನಾದಿಗಳು ಸಹಿಸಲಿಲ್ಲ. ಮನಸ್ಸು ಕೆಟ್ಟಿತು. ರಾಗ ದ್ವೇಷಗಳು ಅವರ ಪ್ರತಿಕ್ರಿಯೆಗಳಲ್ಲಿ ತಾಂಡವವಾಡುತ್ತಿತ್ತು.

ಯುದ್ಧ, ದ್ವಂದ್ವಯುದ್ಧ, ಕುಸ್ತಿ, ಓಟ, ಹಾರಾಟ, ನೀರಿನಲ್ಲಿ ಆಟ ಹೀಗೆ ಯಾವುದೇ ಕ್ರೀಡೆಯಲ್ಲಿ ಭೀಮನೇ ಎಲ್ಲರನ್ನೂ ವಿಷ್ಣುವಿನ ಅನುಗ್ರಹದಿಂದ ಗೆಲ್ಲುತ್ತಿದ್ದನು. ಮರಗಳಿಂದ ಮಾಗಿದ ಹಣ್ಣುಗಳನ್ನು ತರಲು ರಾಜಕುಮಾರರು ಮರ ಏರುತ್ತಿದ್ದರು. ಭೀಮನು ಮರ ಏರದೆ ಅದನ್ನು ಕಾಲಿನಿಂದ ಹೊಡೆದು ಬಿಡುತ್ತಿದ್ದ. ಆಗ ಹಣ್ಣುಗಳೂ, ಮರ ಏರಿದ ರಾಜಕುಮಾರರೂ ಕೆಳಗೆ ಬೀಳುತ್ತಿದ್ದರು. ಬಿದ್ದ ಹಣ್ಣುಗಳನ್ನು ಭೀಮ ತಿನ್ನುತ್ತಿದ್ದ.

ಎಲ್ಲ ರಾಜಕುಮಾರರನ್ನು ಹಿಡಿದುಕೊಂಡು ಗಂಗೆಯಲ್ಲಿ ಮುಳುಗುತ್ತಿದ್ದ. ಅವರು ಆಯಾಸಗೊಂಡಾಗ ನಗುತ್ತಿದ್ದ. ಹೀಗೆ ನಿತ್ಯವೂ ಭೀಮನಿಂದ ಪರಾಜಿತರಾಗಿ ದುರ್ಯೋಧನಾದಿ ರಾಜಕುಮಾರರು ಅವನ ಸಹಜ ಸಾಮರ್ಥ್ಯವನ್ನು ನೋಡಿ ಸಹಿಸದೆ–ಸಂತೋಷಪಡದೆ ದ್ವೇಷ ಮಾಡಲಾರಂಭಿಸಿದರು. ದೇವತಾವತಾರಿಗಳಾದ ರಾಜಕುಮಾರರು ಮಾತ್ರ ಸಂತೋಷಪಟ್ಟು ಭೀಮನೊಡನೆ ಪ್ರೀತಿಯಿಂದ ಇದ್ದರು. ರಾಜಕುಮಾರರಾಗಿ ಅವತರಿಸಿದ ದೇವತೆಗಳು ಭೀಮನಲ್ಲಿ ಭಕ್ತಿ ಮಾಡಿದರು. ದೈತ್ಯರು ಮಾತ್ರ ದೀನೇದಿನೇ ದ್ವೇಷ ಮಾಡುತ್ತಾ ಭೀಮನನ್ನು

ಕೊಲ್ಲಬೇಕೆಂದು ನಿಶ್ಚಯ ಮಾಡಿದರು. ಭೀಮನು ಸತ್ತುಹೋದರೆ ಉಳಿದವರೆಲ್ಲ ಸತ್ತಂತೆಯೇ. ಇವನನ್ನು ಬಲಾತ್ಕಾರಮಾಡಿ ಕೊಲ್ಲಲು ಸಾಧ್ಯವಿಲ್ಲ. ಭೀಮನನ್ನು ವಂಚನೆ ಮಾಡಿ ಕೊಂದು, ಅರ್ಜುನನನ್ನು ಬಲಪ್ರಯೋಗ ಮಾಡಿ ಕೊಲ್ಲುವ. ಸೌಮ್ಯ ಸ್ವಭಾವದವ]ನಾದ ಧರ್ಮರಾಜನನ್ನು ಬಲಾತ್ಕಾರದಿಂದ ಬಂಧನದಲ್ಲಿ ಇಟ್ಟು ನಾವು ರಾಜ್ಯವನ್ನು ಆಳುವ, ಎಂದು ಯೋಚನೆಯನ್ನು ಮಾಡಿ ಯಾವಾಗ ಅವಕಾಶ ಸಿಗುತ್ತದೆ ಎಂದು ನೋಡುತ್ತಿದ್ದನು. ತರುವಾಯ ನೀರಿನಲ್ಲಿ ಆಟವಾಡಬೇಕೆಂದು ಬೇಕಾದ ಪತಾಕಗಳಿಂದ ಅಲಂಕೃತಗಳಾದ ವಸ್ತ್ರಗೃಹಗಳನ್ನು ಮಾಡಿಸಿದನು. ಪ್ರಮಾಣಕೋಟಿ ಎಂದು ಹೆಸರುಳ್ಳ ದೊಡ್ಡ ಗಂಗೆಯ ಮಡುವಿನ ಹತ್ತಿರ ಹೀಗೆಲ್ಲಾ ಮಾಡಿದರು. ಆಟವಾದ ಮೇಲೆ ಅಲ್ಲೇ ಎಲ್ಲರೂ ಊಟ ಮಾಡಿದರು. ಸಾಯಂಕಾಲವಾಗಲು ಎಲ್ಲ ಹುಡುಗರೂ ಆಟವಾಡಿ ಶ್ರಮವುಳ್ಳವರು ವಸ್ತ್ರಗೃಹಗಳಲ್ಲಿ ಬಂದು ವಾಸಮಾಡಿದರು.

ಭೀಮಸೇನದೇವರು ಎಲ್ಲಾ ಹುಡುಗರೊಡನೆ ಜಲಕ್ರೀಡೆ ಮಾಡಿ ಅವರನ್ನು ಜಲದಲ್ಲಿ ಎತ್ತಿಕೊಂಡು ಹೋಗಿ ತುಂಬಾ ಶ್ರಮವುಳ್ಳವರಂತೆ ದುರ್ಯೋಧನನ ದುಷ್ಟ ಅಭಿಪ್ರಾಯವು ಜನರಿಗೆಲ್ಲಾ ತಿಳಿಯಲಿ ಎಂಬ ಅಭಿಪ್ರಾಯದಿಂದ ಒಂದೂ ತಿಳಿಯದವರಂತೆ ಪ್ರಮಾಣ ಕೋಟಿಯ ಹತ್ತಿರವೇ ತಣ್ಣಗಿರುವ ಸ್ಥಳದಲ್ಲಿ ಸತ್ತವರಂತೆ ಚೇಷ್ಟಾರಹಿತರಾಗಿ ಮಲಗಿದರು. ತರುವಾಯ ದುರ್ಯೋಧನನು ಮೆಲ್ಲನೆ ಲತೆ ಗಳಿಂದ ಭೀಮಸೇನದವರನ್ನು ಕಟ್ಟಿ ಆ ಪ್ರಮಾಣಕೋಟಿ ಎಂಬ ಮಡುವಿನಲ್ಲಿ ಎತ್ತಿ ಹಾಕಿದನು. ಭೀಮಸೇನದೇವರು ಎಚ್ಚತ್ತು ಆ ಲತಾಬಂಧನವನ್ನು ಕಡಿದುಕೊಂಡು ಮೇಲೆ ಬಂದರು. ಮೊದಲು ಮಲಗಿದ್ದ ಸ್ಥಳಕ್ಕೇ ಹೋಗಿ ಮೊದಲಿನಂತೆ ನಿದ್ರೆಯನ್ನು ಮಾಡುತ್ತಿದ್ದರು. ಮಧ್ಯರಾತ್ರಿಕಾಲದಲ್ಲಿ ದುರ್ಯೋಧನನು ಎದ್ದು ಪೂರ್ವದಂತೆಯೇ ಮಲಗಿದ್ದ ಭೀಮಸೇನದೇವರನ್ನು ನೋಡಿ ತುಂಬಾ ವಿಷಾದವನ್ನು ಹೊಂದಿದನು.

ಮತ್ತೂ ಯೋಚನೆ ಮಾಡಿ ಶುಕ್ರಾಚಾರ್ಯರು ಹೇಳಿದ ಮಂತ್ರಬಲದಿಂದ ಎಂಟು ಮಹಾಸರ್ಪಗಳ ಸಮೂಹಗಳನ್ನು ಕರೆದು ಪಂಜರದಲ್ಲಿ ಹಾಕಿ ಸಾರಥಿಯ ಕೈಯಲ್ಲಿ ಕೊಟ್ಟರು. ದುರ್ಯೋಧನನಿಂದ ಮಂತ್ರಬಲದಿಂದ ಕೂಗಲ್ಪಟ್ಟ ಆ ಸರ್ಪಗಳನ್ನು ಅವನ ಸಾರಥಿಯು ಮಲಗಿದ್ದ ಭೀಮಸೇನದೇವರ ವಿಸ್ತಾರವಾದ ಎದೆಯ ಮೇಲೆ ಬಿಟ್ಟನು. ಆ ಮಹಾಸರ್ಪಗಳು ಭೀಮಸೇನದೇವರ ಎದೆಯಲ್ಲಿ ಕಚ್ಚಲು ಅವುಗಳ ಹಲ್ಲುಗಳೇ ಮುರಿದುಹೋದವು. ಭೀಮಸೇನದೇವರು ಆ ದೊಡ್ಡ ಸರ್ಪಗಳನ್ನು ಮಲಗಿದ್ದಲ್ಲಿಯೇ ದೂರಕ್ಕೆ ಬಿಸಾಡಿ ಅವುಗಳ ವಂಶದಲ್ಲಿ ಹುಟ್ಟಿದ ಚಿಕ್ಕ

ಸರ್ಪಗಳನ್ನು ಇರುವೆಗಳನ್ನು ಕೊಲ್ಲುವಂತೆ ಕೊಂದು ಸಾರಥಿಯನ್ನೂ ಕೈಯಿಂದಲೇ ಕೊಂದು ಹಾಗೆಯೇ ಮಲಗಿಯೇ ಇದ್ದರು. ಆ ಭೀಮಸೇನದೇವರ ಸ್ವಾಭಾವಿಕವಾದ ಬಲವನ್ನು ನೋಡಿ ಎಲ್ಲಾ ರಾಜಪುತ್ರರೂ ತುಂಬಾ ವಿಷಾದವನ್ನು ಹೊಂದಿದರು. ಯಾವ ಸರ್ಪಗಳ ಶ್ವಾಸಗಾಳಿಯಿಂದಲೇ ಪ್ರಾಣಿಗಳು ಭಸ್ಮವಾಗುತ್ತಿದ್ದವೋ ಅಂತಹ ಸರ್ಪಗಳು ಕಚ್ಚಿಯೂ ಭೀಮಸೇನದೇವರಿಗೆ ಒಂದೂ ಮಾಡಲಿಕ್ಕೆ ಆಗಲಿಲ್ಲ. ಇಂತಹ ಸಾಮರ್ಥ್ಯವು ಇಷ್ಟರವರೆಗೆ ಯಾರಿಗೂ ಕೇಳಿದ್ದೇ ಇಲ್ಲ. ಪ್ರಹ್ಲಾದನಿಗೂ ಇಂತಹ ಬಲವಿರಲಿಲ್ಲ. ಅವನಾದರೂ ತಂದೆಯಾದ ಹಿರಣ್ಯಕಶಿಪುವು ಹಿಂಸೆಯನ್ನು ಮಾಡುವಾಗ ತನ್ನ ರಕ್ಷಣೆಗಾಗಿ ಪರಮಾತ್ಮನನ್ನು ಸ್ತೋತ್ರಮಾಡಿ ರಕ್ಷಿಸಲ್ಪಡುತ್ತಿದ್ದನು. ಅವನಿಗೆ ಭೀಮಸೇನದೇವರಂತೆ ಸ್ವಾಭಾವಿಕ ಬಲವಿರಲಿಲ್ಲ. ಹಿರಣ್ಯಕಶಿಪುವಿನ ಭೃತ್ಯರು ಅವನನ್ನು ಬಲಾತ್ಕಾರದಿಂದ ಅಲ್ಲಲ್ಲಿ ಎಳೆದುಕೊಂಡು ಹೋಗುತ್ತಿದ್ದರು. ಭೀಮಸೇನದೇವರ ಬಲವು ಸ್ವಾಭಾವಿಕವಾದದ್ದು.

ಮತ್ತೊಂದು ದಿನದಲ್ಲಿ ದುರ್ಯೋಧನನು ವಿಚಾರಮಾಡಿ ಕ್ಷೀರಸಮುದ್ರವನ್ನು ಮಥನಮಾಡುವಾಗ ಉಂಟಾಗಿದ್ದ, ತಪಸ್ಸುಮಾಡಿ ರುದ್ರದೇವರಿಂದ ಶುಕ್ರಾ ಚಾರ್ಯರು ಪಡೆದು ಬಂದ, ಶುಕ್ರಾಚಾರ್ಯರನ್ನು ಸಂತೋಷಪಡಿಸಿ ಶಕುನಿಯಂತೆ ಗೆದ್ದುಕೊಂಡು ಬಂದ ಯಮನಂತೆ ಇರುವ ಕ್ರೂರವಾದ ಕಾಲಕೂಟ ವಿಷವನ್ನು ಅಡಿಗೆಯವರನ್ನು ವಶಮಾಡಿಕೊಂಡು ಭಕ್ಷ್ಯಭೋಜ್ಯದಲ್ಲಿ ಮಿಶ್ರಮಾಡಿ ಭೀಮಸೇನದೇವರಿಗೆ ತಿನ್ನಲಿಕ್ಕೆ ಕೊಟ್ಟರು. ಈ ವಿಷಯವನ್ನು ಮೊದಲೇ ಯುಯುತ್ಸುವು ಭೀಮಸೇನದೇವರೊಡನೆ ಹೇಳಿದ್ದನು. ಆದರೂ ಭೀಮಸೇನ ದೇವರು ಅದನ್ನು ತಿಂದು ಪರಮಾತ್ಮನ ಅನುಗ್ರಹದಿಂದ ಜೀರ್ಣಮಾಡಿಕೊಂಡರು. ಅಂತಹ ಭಯಂಕರವಾದ ವಿಷವೂ ಭೀಮಸೇನದೇವರಿಗೆ ಒಂದು ವಿಕಾರವನ್ನೂ ಉಂಟುಮಾಡಲಿಲ್ಲ. ಇದನ್ನು ನೋಡಿ ದುರ್ಯೋಧನಾದಿಗಳು ತುಂಬಾ ದುಃಖಪಟ್ಟರು.

ಮತ್ತೊಂದು ದಿನದಲ್ಲಿ ದುರ್ಯೋಧನನು ಭೀಮಸೇನದೇವರನ್ನು ಕೊಲ್ಲಬೇಕೆಂದು ಅಭಿಪ್ರಾಯವುಳ್ಳವನಾಗಿ ಶಕುನಿಯೊಡನೆ ಯೋಚನೆ ಮಾಡಿದನು. ರಾತ್ರಿಹಗಲು ಅದನ್ನೇ ಯೋಚನೆ ಮಾಡುತ್ತಾ ಅವನಿಗೆ ನಿದ್ರೆಯೇ ಬರಲಿಲ್ಲ. ಈರೀತಿಯಾಗಿ ದುರ್ಯೋಧನನೂ ಶಕುನಿಯೂ ಅನೇಕ ಪ್ರಕಾರವಾಗಿ ಪಾಂಡವರನ್ನು ಕೊಲ್ಲಲಿಕ್ಕೆ ಇಚ್ಛಿಸುತ್ತಿದ್ದರು. ಇದನ್ನು ಧೃತರಾಷ್ಟ್ರನ ವೈಶ್ಯಪುತ್ರನಾದ ಯುಯುತ್ಸುವು ಪಾಂಡವರಿಗೆ ಹಿತವಾಗಬೇಕೆಂಬ ಆಸೆಯಿಂದ ಅವರೊಡನೆ

ತಿಳಿಸುತ್ತಿದ್ದನು. ಪಾಂಡವರೂ ಅದನ್ನೆಲ್ಲಾ ತಿಳಿದವರಾದರೂ ವಿದುರನ ಅಭಿಪ್ರಾಯದಂತೆ ತಮಗೆ ತಿಳಿದಿದೆಯೆಂಬುದನ್ನು ತಿಳಿಸದೆಯೇ ಸುಮ್ಮನೆ ಇರುತ್ತಿದ್ದರು.

ಮತ್ತೊಂದು ದಿವಸದಲ್ಲಿಯೂ ದುರ್ಯೋಧನನು ಪಾಂಡವರನ್ನು ಜಲಕ್ರೀಡೆ ಗಾಗಿ ಪ್ರಮಾಣಕೋಟಿಯೆಂಬ ಗಂಗೆಯ ಮಡುವಿನ ಸಮೀಪಕ್ಕೆ ಕರೆದುಕೊಂಡು ಹೋದನು. ಅಲ್ಲಿ ಭೀಮಸೇನದೇವರಿಗೆ ವಿಷಭಕ್ಷ್ಯಗಳನ್ನು ತಿನ್ನಿಸಿದನು. ದುರ್ಯೋಧನನು ನಗುತ್ತಾ ತಾನು ಕೃತಾರ್ಥನಾದೆನೆಂದು ಮನಸ್ಸಿನಲ್ಲಿಯೇ ತಿಳಿದುಕೊಂಡನು. ತರುವಾಯ ಎಲ್ಲಾ ಹುಡುಗರೂ ಸಂತೋಷದಿಂದ ನೀರಿನಲ್ಲಿ ಆಟವಾಡಿದರು. ಆಟವು ಮುಗಿದ ಮೇಲೆ ತೀರಕ್ಕೆ ಬಂದು ಅಲ್ಲಿ ಮಾಡಿಸಿದ್ದ ವಸ್ತ್ರಗೃಹಗಳಲ್ಲಿ ವಾಸಮಾಡಿದರು. ಭೀಮಸೇನದೇವರು ಚೆನ್ನಾಗಿ ಭೋಜನ ಮಾಡಿ ನೀರಿನಲ್ಲಿ ಚೆನ್ನಾಗಿ ಆಟವಾಡಿದ ಕಾರಣ ತುಂಬಾ ಶ್ರಮವುಳ್ಳವರಂತೆ ತೋರಿಸಿದರು ವಿಷವನ್ನು ಭಕ್ಷಣೆ ಮಾಡಿದ್ದರಿಂದಲೂ ಶ್ರಮವುಳ್ಳಂತೆ ತೋರಿಸುತ್ತಾ ಮಲಗಿದರು. ವಸ್ತುತಃ ವಿಷವು ಅವರಿಗೆ ಒಂದೂ ಮಾಡಲಾರದು. ಆದರೂ ದುರ್ಯೋಧನಾದಿ ಗಳ ದುಷ್ಟವ್ಯಾಪಾರಗಳೆಲ್ಲವೂ ಜನರಿಗೆ ತಿಳಿಯಲಿ ಎಂಬ ಅಭಿಪ್ರಾಯದಿಂದ ತುಂಬಾ ಶ್ರಮವುಳ್ಳವರಂತೆ ತೋರಿಸುತ್ತಾ ಸತ್ತವರಂತೆ ಚೇಷ್ಟಾರಹಿತರಾಗಿ ಮಲಗಿಕೊಂಡರು. ತರುವಾಯ ದುರ್ಯೋಧನನು ತಾನೇ ಬಂದು ಲತಾಪಾಶಗಳಿಂದ ಚೆನ್ನಾಗಿ ಕಟ್ಟಿ ಪ್ರಮಾಣಕೋಟಿಯಲ್ಲಿ ತೂಕಿಹಾಕಿದನು. ಭೀಮಸೇನದೇವರು ಅಲ್ಲಿ ಕೆಳಗೆ ಹೋಗುತ್ತಾ ನಾಗಲೋಕಕ್ಕೆ ಹೋಗಿ ಸೇರಿದರು. ಅಲ್ಲಿ ಮಹಾವಿಷವುಳ್ಳ ಸರ್ಪಗಳೆಲ್ಲ ಬಂದು ಭೀಮಸೇನದೇವರನ್ನು ಕಚ್ಚಿದವು. ಈರೀತಿಯಾಗಿ ಸರ್ಪಗಳೆಲ್ಲವೂ ಕಚ್ಚಲು ದೇಹದಲ್ಲಿ ಇದ್ದ ಕಾಲಕೂಟವಿಷವು ಹೊರಟು ಹೋಯಿತು. ಆ ಸರ್ಪಗಳು ಭೀಮಸೇನದೇವರ ಮರ್ಮಗಳಲ್ಲಿ ಕಚ್ಚಿದರೂ ಒಂದು ಗಾಯವನ್ನು ಮಾಡಲಿಕ್ಕೆ ಆಗಲಲ್ಲ. ತರುವಾಯ ಭೀಮಸೇನದೇವರು ಎದ್ದು ಬಂಧನವನ್ನು ಕಡಿದುಕೊಂಡು ಸರ್ಪಗಳನ್ನು ಹಿಡಿದು ನೆಲಕ್ಕೆ ಅಪ್ಪಳಿಸಿದರು. ಕೆಲವು ಸರ್ಪಗಳು ಭಯದಿಂದ ಓಡಿದವು. ಭೀಮಸೇನದೇವರಿಂದ ಸತ್ತು ಉಳಿದ ಸರ್ಪಗಳು ವಾಸುಕಿಯ ಬಳಿಗೆಹೋಗಿ 'ಯಾರೋ ಒಬ್ಬ ಮನುಷ್ಯನು ನೀರಿನಲ್ಲಿ ಬಂಧಿಸಲ್ಪಟ್ಟವನಾಗಿ ಹಾಕಲ್ಪಟ್ಟನು. ಅವನನ್ನು ನೋಡುವಾಗ ವಿಷಪಾನ ಮಾಡಿರುವನೆಂದು ನಮಗೆ ತೋರುತ್ತಿದೆ. ಚೇಷ್ಟಾರಹಿತನಾಗಿ ನಮ್ಮ ಲೋಕಕ್ಕೆ ಬಂದನು. ನಾವೆಲ್ಲರೂ ಕಚ್ಚಲು ಎಚ್ಚೆತ್ತನು. ಎದ್ದ ಕೂಡಲೇ ಬಂಧನವನ್ನು ಬಿಡಿಸಿಕೊಂಡು ನಮ್ಮನ್ನೆಲ್ಲಾ

ಬಡಿಯುತ್ತಿರುವನು. ಅವನು ಯಾರು ಎಂದು ನೀವೇ ವಿಚಾರಿಸಬೇಕು' ಎಂದು ಹೇಳಿದವು. ಆಗ ವಾಸುಕಿಯು ಆ ಸರ್ಪಗಳನ್ನು ಕರೆದುಕೊಂಡು ಬಂದು ಭೀಮಸೇನದೇವರನ್ನು ನೋಡಿದನು. ಮತ್ತು ಕುಂತೀದೇವಿಯ ಮಾತಾಮಹ(ತಾತ)ನಾದ ಆರ್ಯಕ ಎಂಬ ನಾಗರಾಜನೂ ಭೀಮಸೇನದೇವರನ್ನು ನೋಡಿದನು. ಆರ್ಯಕನು ಸಂತೋಷದಿಂದ ತನ್ನ ಮಗಳ ಮಗನಾದ ಶೂರರಾಜನ ಮಗಳಾದ ಕುಂತೀದೇವಿಯ ಮಗನಾದ ಕಾರಣ ತನ್ನ ದೌಹಿತ್ರನ ದೌಹಿತ್ರನಾದ ಭೀಮಸೇನ ದೇವರನ್ನು ಆಲಿಂಗನ ಮಾಡಿದನು. ವಾಸುಕಿಯೂ ಬಹಳ ಸಂತೋಷವನ್ನು ಹೊಂದಿದನು. ವಾಸುಕಿಯು ಆರ್ಯಕನೊಡನೆ 'ಇವನಿಗೆ ಏನು ಪ್ರಿಯವನ್ನು ಮಾಡಲಿ? ಬೇಕಾದ ಹಣವನ್ನು ರತ್ನಸಮೂಹಗಳನ್ನು ಕೊಡುವ' ಎಂದು ಹೇಳಿದನು. ಆಗ ಆರ್ಯಕನು 'ನಾಗೇಂದ್ರ! ನೀನು ಸಂತುಷ್ಟನಾಗಿದ್ದರೆ ಇವನಿಗೆ ಹಣವು ಏನು ಬೇಕಾಗಿದೆ? ಸಹಸ್ರ ಆನೆಯ ಬಲವುಂಟಾಗಲಿಕ್ಕೆ ಕಾರಣವಾದ ಪಾತ್ರೆಯಲ್ಲಿರುವ ರಸವನ್ನು ಇವನು ಎಷ್ಟು ಬೇಕೋ ಕುಡಿಯಲಿ' ಎಂದನು. ವಾಸುಕಿಯು ಹಾಗೆಯೇ ಆಗಲಿ ಎಂದು ಹೇಳಿದನು. ತರುವಾಯ ಭೀಮಸೇನ ದೇವರು ಪೂರ್ವಮುಖವಾಗಿ ಕೂತುಕೊಂಡು ಮಂಗಳವನ್ನು ಮಾಡಿಕೊಂಡು ಒಂದೇ ಶ್ವಾಸಕ್ಕೆ ಒಂದು ಪಾತ್ರೆಯ ರಸವನ್ನೆಲ್ಲಾ ಕುಡಿದರು. ಹೀಗೆಯೇ ಎಂಟು ಪಾತ್ರೆಗಳಲ್ಲಿ ಇದ್ದ ರಸವನ್ನು ಕುಡಿದರು. ಆಮೇಲೆ ಸರ್ಪಗಳು ಕೊಟ್ಟ ಹಾಸಿಗೆಯಲ್ಲಿ ಭೀಮಸೇನದೇವರು ಸುಖವಾಗಿ ಮಲಗಿದರು.

ಇಲ್ಲಿ ದುರ್ಯೋಧನನು ಭೀಮಸೇನದೇವರನ್ನು ಪ್ರಮಾಣಕೋಟಿಯೆಂಬ ಮಡುವಿನಲ್ಲಿ ಹಾಕಿ ತಾನು ಕೃತಾರ್ಥನಾದೆನೆಂದು ತಿಳಿದುಕೊಂಡನು. ಬೆಳಗಾಗಲು ಭೀಮಸೇನನು ನಮ್ಮೆಲ್ಲರಿಗಿಂತಲೂ ಮುಂದೆಯೇ ಹೋಗಿರುವನು ಎಂದು ಹೇಳುತ್ತಾ ಊರಿಗೆ ಹೋದನು. ಧರ್ಮರಾಜನಿಗೆ ಮನಸ್ಸಿನಲ್ಲೇ ಏನೋ ಸಂದೇಹವುಂಟಾಯಿತು. ಅವನು ತಾಯಿಯ ಬಳಿಗೆ ಬಂದು ನಮಸ್ಕರಿಸಿ 'ಅಮ್ಮ! ಭೀಮನು ಇಲ್ಲಿಗೆ ಬಂದನೋ? ತೋಟದಲ್ಲಿ ಎಲ್ಲಾ ಹುಡುಕಿದೆನು. ಎಲ್ಲಿಯೂ ಸಿಗಲಿಲ್ಲ. ನಮ್ಮಿಂದ ಮೊದಲೇ ಇಲ್ಲಿಗೆ ಬಂದಿರಬಹುದೆಂದು ಯೋಚಿಸಿ ಇಲ್ಲಿಗೆ ಬಂದೆವು. ಇಲ್ಲಿಯೂ ಕಾಣೆಯಲ್ಲಾ? ನೀನು ಎಲ್ಲಿಯಾದರೂ ಕಳುಹಿಸಿದಿಯಾ? ನನ್ನ ಮನಸ್ಸಿಗೇನೋ ಅವನು ಬದುಕಿರುವನೋ ಇಲ್ಲವೋ ಎಂದು ಸಂದೇಹ ವುಂಟಾಗುತ್ತದೆ. ಅವನು ಎಲ್ಲಿ ಮಲಗಿದ್ದನೋ ಅಲ್ಲಿ ನೋಡಿದರೆ ಇಲ್ಲ. ಅವನು ಮೃತನಾದನೋ ಏನೋ ಸಂದೇಹಬರುತ್ತದೆ' ಎಂದು ಹೇಳಿದನು. ಅದನ್ನು ಕೇಳಿ

ಕುಂತೀದೇವಿಯು ಹಾಹಾಕಾರವನ್ನು ಮಾಡಿ 'ಮಗ! ಭೀಮನು ಇಲ್ಲಿಗೆ ಬರಲಿಲ್ಲ. ಬೇಗನೇ ಎಲ್ಲರೂ ಹೋಗಿ ಹುಡುಕಿರಿ' ಎಂದಳು. ಆದರಂತೆಯೇ ಪಾಂಡವರು ಹೋಗಿ ಉದ್ಯಾನಕ್ಕೆ ಹೋಗಿ ಭೀಮ ಭೀಮ ಎಂದು ಕೂಗುತ್ತಾ ಹುಡುಕಿ ಕಾಣದೆ ಹಿಂದೆ ಬಂದು ತಾಯಿಯ ಹತ್ತಿರ ವರ್ತಮಾನವನ್ನು ತಿಳಿಸಿದರು. ತರುವಾಯ ಕುಂತೀದೇವಿಯು ವಿದುರನನ್ನು ಮನೆಗೆ ಬರಿಸಿ 'ಭೀಮಸೇನನು ಕಾಣಿಸುವುದಿಲ್ಲ. ಉದ್ಯಾನಕ್ಕೆ ಹೋದವರು ಎಲ್ಲರೂ ಬಂದರು. ಭೀಮನೊಬ್ಬನೇ ಕಾಣೆ. ದುರ್ಯೋಧನನಿಗೆ ಅವನನ್ನು ಕಂಡರೆ ಆಗುವುದಿಲ್ಲ. ದುರ್ಯೋಧನನು ದುರ್ಬುದ್ಧಿಯುಳ್ಳವನು. ರಾಜ್ಯದಲ್ಲಿ ಆಸೆಯುಳ್ಳವನು. ಲಜ್ಜಾಹೀನನು. ಅವನು ಕೋಪಿಸಿಕೊಂಡು ಭೀಮನನ್ನು ಕೊಂದಿದ್ದರೂ ಇರಬಹುದು. ನನ್ನ ಮನಸ್ಸಿನಲ್ಲಿ ತುಂಬಾ ವ್ಯಥೆಯಾಗುತ್ತದೆ' ಎಂದಳು.

ವಿದುರನು 'ಅಮ್ಮ! ಇದನ್ನು ಗಟ್ಟಿಯಾಗಿ ಹೇಳಬೇಡ. ಉಳಿದ ಮಕ್ಕಳನ್ನಾದರೂ ರಕ್ಷಿಸುತ್ತಾ ಇರು. ದುರ್ಯೋಧನನೊಡನೆ ನೀನು ನನ್ನ ಮಗನನ್ನು ಕೊಂದಿರುವಿ ಯೆಂದು ಹೇಳಿದರೆ ಇನ್ನೂ ಉಳಿದ ಮಕ್ಕಳನ್ನು ಆ ದುಷ್ಟನು ಕೊಲ್ಲಬಹುದು. ಮಾತ್ರವಲ್ಲದೆ ನಿನ್ನ ಮಕ್ಕಳು ದೀರ್ಘಾಯುಷ್ಯವುಳ್ಳವರೆಂದು ಮಹರ್ಷಿಗಳು ಹೇಳಿರುವರು. ಆದುದರಿಂದ ನಿನ್ನ ಮಗನು ಬಂದು ಸೇರುವನು. ನಿನಗೆ ಅತ್ಯಂತ ಪ್ರೀತಿಯನ್ನು ಉಂಟುಮಾಡುವನು' ಎಂದು ಹೇಳಿದನು. ಹೀಗೆ ಹೇಳಿ ತನ್ನ ಮನೆಗೆ ಹೋದನು. ಕುಂತೀದೇವಿಯು ದುಃಖಪಡುತ್ತಾ ಮನೆಯಲ್ಲಿಯೇ ಇದ್ದಳು.

ನಾಗಲೋಕದಲ್ಲಿ ಭೀಮಸೇನದೇವರು ಆ ರಸವೆಲ್ಲವೂ ಜೀರ್ಣವಾಗಲು ಎಂಟನೇ ದಿವಸದಲ್ಲಿ ಎದ್ದರು. ಆಗ ಸರ್ಪಗಳೆಲ್ಲವೂ ಬಂದು 'ನೀನು ರಸವನ್ನು ಪಾನಮಾಡಿದ ಕಾರಣ ಹತ್ತು ಸಾವಿರ ಆನೆಯ ಬಲವುಳ್ಳವನಾಗಿರುವಿ. ಈ ದಿವ್ಯವಾದ ನೀರಿನಲ್ಲಿ ಸ್ನಾನಮಾಡಿ ಮನೆಗೆ ಹೋಗು. ನಿನ್ನ ಸಹೋದರರು ನಿನ್ನನ್ನು ಕಾಣದೆ ದುಃಖಪಡುತ್ತಿರುವರು' ಎಂದು ಹೇಳಿದವು. (ಇದರಿಂದ ಭೀಮಸೇನದೇವರಿಗೆ ಆ ರಸವನ್ನು ಪಾನಮಾಡಿದ ಕಾರಣ ಹತ್ತೂ ಸಾವರ ಆನೆಯ ಬಲವು ಬಂದಿತು. ಅದಕ್ಕಿಂತ ಪೂರ್ವದಲ್ಲಿ ಇರಲಿಲ್ಲ ಎಂದು ತಿಳಿಯಬಾರದು. ಅವರಿಗೆ ಸ್ವಾಭಾವಿಕವಾದ ಬಲವು ಯಾವಾಗಲೂ ಇದ್ದೇ ಇರುವುದು. ಸರ್ಪಗಳು ಅವರ ಮಹಿಮೆಯನ್ನು ತಿಳಿಯದೆ ಲೋಕದ ಜನರಂತೆ ಎಂದು ತಿಳಿದುಕೊಂಡು ಹೇಳಿದವು ಎಂದು ತಿಳಿಯಬೇಕು)

ತರುವಾಯ ಭೀಮಸೇನದೇವರು ನಾಗರಾಜನ ಮನೆಯಲ್ಲಿ ವಿಶೇಷವಾಗಿ ವಾಸನೆಯುಳ್ಳ ವಿಷಪರಿಹಾರಕ ಔಷಧಿಗಳಿಂದ ಮಂಗಲಕಾರ್ಯವನ್ನು ಮಾಡಿಕೊಂಡವರಾಗಿ ನಾಗಗಳನ್ನು ಕೊಟ್ಟ ಪರಮಾನ್ನವನ್ನು ಭೋಜನ ಮಾಡಿದರು. ಸರ್ಪಗಳಿಂದ ಪೂಜಿತರಾಗಿ ಆಶೀರ್ವಾದವನ್ನು ಪಡೆಯುವವರಾಗಿ ದಿವ್ಯಾಭರಣ ಗಳಿಂದ ಅಲಂಕೃತರಾಗಿ ನಾಗಗಳ ಹತ್ತಿರ ಹೋಗಿ ಬರುತ್ತೇನೆ ಎಂದು ಹೇಳಿಕೊಂಡು ನಾಗಲೋಕದಿಂದ ಮೇಲೆ ಬಂದರು. ನಾಗಗಳು ಭೀಮಸೇನದೇವರು ಪೂರ್ವದಲ್ಲಿ ಇದ್ದ ಸ್ಥಳದಲ್ಲಿಯೇ ಬಿಟ್ಟು ಮರೆಯಾಗಿ ಹೋದವು. ಭೀಮಸೇನದೇವರು ತಾಯಿಯ ಸಮೀಪಕ್ಕೆ ಬಂದರು. ಬಂದು ತಾಯಿಗೂ ಅಣ್ಣನಿಗೂ ನಮಸ್ಕರಿಸಿ ತಮ್ಮಂದಿರನ್ನು ಶಿರಸ್ಸಿನಲ್ಲಿ ಮೂಸಿನೋಡಿ ಅವರಿಂದ ಆಲಿಂಗಿಸಲ್ಪಟ್ಟರು. ತರುವಾಯ ಸಹೋದರ ರೊಡನೆ ದುರ್ಯೋಧನನ ವ್ಯಾಪಾರವನ್ನು ನಾಗಲೋಕದಲ್ಲಿ ನಡೆದ ವಿಷಯವನ್ನೂ ಎಲ್ಲವನ್ನೂ ಹೇಳಿದರು. ಅದನ್ನು ಕೇಳಿ ಧರ್ಮರಾಜನು ಭೀಮಸೇನದೇವರೊಡನೆ 'ನೀನು ಸಮ್ಮನಿರು. ಇದನ್ನು ಯಾರಿಗೂ ಹೇಳುವುದು ಬೇಡ. ಇನ್ನು ಮುಂದೆ ನಾವು ಒಬ್ಬರನ್ನೊಬ್ಬರು ಆದರದಿಂದ ರಕ್ಷಿಸಿಕೊಂಡು ಇರಬೇಕು' ಎಂದು ಹೇಳಿದರು. ಈರೀತಿಯಾಗಿ ಹೇಳಿ ಧರ್ಮರಾಜನು ಸಹೋದರರಿಂದ ಕೂಡಿಕೊಂಡು ಜಾಗ್ರತೆಯಿಂದ ಇದ್ದನು. ದುರ್ಯೋಧನನು ಮಾಡಿದ ವ್ಯಾಪರವೆಂದು ತಿಳಿದಮೇಲೆ ಪಾಂಡವರು ಅದನ್ನು ಪ್ರಸಿದ್ಧಿಪಡಿಸಲಿಲ್ಲ. ವಿದುರನು ಹಾಗೆ ಇರಲಿಕ್ಕೆ ಹೇಳಿದನು. ದುರ್ಯೋಧನನು ಪುನಃ ಭೀಮಸೇನದೇವರು ಬಂದು ಸೇರಿದ್ದನ್ನು ನೋಡಿ ದುಃಖವನ್ನು ಹೊಂದಿದನು.



# ಭೀಮಸೇನದೇವರ ವಿದ್ಯಾಭ್ಯಾಸ [1]

ಭೀಮಸೇನದೇವರು ತಾನಾಗಿಯೇ ಎಲ್ಲವನ್ನು ತಿಳಿದವರು. ಆದರೂ ದೇವತೆಗಳು ಭೂಮಿಯಲ್ಲಿ ಅವತರಿಸಿದಾಗ ತಮ್ಮ ಜ್ಞಾನವನ್ನು ಬಲವನ್ನು ಮರೆ ಮಾಡಿಕೊಂಡು ಮನುಷ್ಯರಂತೇ ಇರಬೇಕೆಂದು ಭಗವಂತನ ಆಜ್ಞೆಯು. ಅದೇ ಕಾರಣದಿಂದ ಭೀಮಸೇನದೇವರೂ ಇತರರಂತೆ ವಿದ್ಯಾಭ್ಯಾಸ ಮಾಡಿದರು. ಮೊದಲು ಕಾಡಿನಲ್ಲಿ ಇರುವಾಗ ಶುಕ್ರ ಎಂಬವರು ಗದಾವಿದ್ಯೆಯನ್ನು ಅಭ್ಯಾಸ ಮಾಡಿಸಿದರು ಎಂದು

1. ಮ.ತಾ.ನಿ. ಅ-15

ಹೇಳಿದೆ. ಆಮೇಲೆ ಕೃಪಾಚಾರ್ಯರೊಡನೆ ಅಸ್ತ್ರಾಭ್ಯಾಸವನ್ನು ಮಾಡಿದರು. ತರುವಾಯ ಭೀಮಸೇನದೇವರು ದಿಗ್ವಿಜಯವನ್ನು ಮಾಡಲಿಕ್ಕೆ ಹೋದರು. ಮೊದಲು ಪೂರ್ವದಿಕ್ಕನ್ನು ಜಯಿಸಿದರು. ಆಮೇಲೆ ದಕ್ಷಿಣದಿಕ್ಕನ್ನೂ ಪಶ್ಚಿಮದಿಕ್ಕನ್ನೂ ಉತ್ತರದಿಕ್ಕನ್ನೂ ಜಯಿಸಿದರು.

ಪೂರ್ವದ ರಾವಣ ಕುಂಭಕರ್ಣರೇ ಭೀಮಸೇನ ದೇವರಿಗೆ ಚಿಕ್ಕತಾಯಿಯ ಮಕ್ಕಳಾಗಿ ಹುಟ್ಟಿದ್ದರು. ರಾವಣನು ದಮಘೋಷ ರಾಜನಿಗೆ ಮಗನಾಗಿ ಶಿಶುಪಾಲ ಎಂಬ ಹೆಸರಿನಿಂದ ಹುಟ್ಟಿದ್ದನು. ಕುಂಭಕರ್ಣನು ಕರೂಶರಾಜನ ಮಗನಾಗಿ ದಂತವಕ್ರ ಎಂಬ ಹೆಸರಿನಿಂದ ಹುಟ್ಟಿದ್ದನು. ಭೀಮಸೇನ ದೇವರು ದಿಗ್ವಿಜಯ ಕಾಲದಲ್ಲಿ ಅವರಿಬ್ಬರನ್ನು ಜಯಿಸಿದರು. ಹಾಗೆಯೇ ವಸುದೇವನ ಮಗನಾದ ಪೌಂಡ್ರಕವಾಸುದೇವನನ್ನೂ ಜಯಿಸಿದರು. ಅವನು ಪೂರ್ವದಲ್ಲಿ ವೇನ ಎಂಬ ಹೆಸರುಳ್ಳ ಪಾಪಿಯು. ಕಾಶಿರಾಜನ ಮಗಳಲ್ಲಿ ವಸುದೇವನಿಂದ ಹುಟ್ಟಿದ್ದನು. ಮತ್ತು ಇಲ್ವಲ ಎಂಬ ಅಸುರನು ಶುಚಿ ಎಂದು ಹೆಸರುಳ್ಳ ಅಗ್ನಿಪುತ್ರನ ಆವೇಶವುಳ್ಳವನಾಗಿ ರುಕ್ಮಿ ಎಂಬ ಹೆಸರಿನಿಂದ ಕುಂಡಿನನಗರಿಗೆ ರಾಜನಾದ ಭೀಷ್ಮಕನಿಗೆ ಹುಟ್ಟಿದ್ದನು. ಭೀಷ್ಮಕರಾಜನು ರಾಹುವಿನ ಆವೇಶವುಳ್ಳ ಮಿತ್ರನೆಂಬ ಆದಿತ್ಯನು, ಅವರನ್ನೆಲ್ಲಾ ಭೀಮಸೇನದೇವರು ಜಯಿಸಿದರು. ಹಾಗೆಯೇ ಪವಮಾನ, ಶುಂಧಿ ಎಂದು ಹೆಸರುಳ್ಳ ಅಗ್ನಿಪುತ್ರರ ಅವತಾರಭೂತರಾದ ಕ್ರಥ ಕೈಶಿಕರನ್ನು ಜಯಿಸಿದರು. ಪ್ರಹ್ಲಾದನ ತಮ್ಮನಾದ ಸಹ್ಲಾದನು ವಾಯುದೇವರ ಆವೇಶವುಳ್ಳವನಾಗಿ ಶಲ್ಯನೆಂಬ ಹೆಸರಿನಿಂದ ಋತಾಯನನೆಂಬ ಮದ್ರರಾಜನಿಗೆ ಮಗನಾಗಿ ಹುಟ್ಟಿದ್ದನು. ಆ ಶಲ್ಯನು ಮಾದ್ರಿಯ ಅಣ್ಣನು ಆದುದರಿಂದ ತನಗೆ ಬಂಧುವಾದ ಭೀಮಸೇನದೇವರ ಬಲವನ್ನು ಪರೀಕ್ಷಿಸುವುದಕ್ಕಾಗಿ ಯುದ್ಧಮಾಡಿ ಸೋತು ಹೋದನು. ಹಾಗೆಯೇ ಮಣಿವಂತನ ಅವತಾರಭೂತನಾದ ಏಕಲವ್ಯನನ್ನು ಯುದ್ಧದಲ್ಲಿ ಜಯಿಸಿದರು. ಹೀಗೆಯೇ ಎಲ್ಲಾ ರಾಜರೂ ಸೋತುಹೋದರು.

ಅದೇರೀತಿಯಾಗಿ ಬಲಿಯಲ್ಲಿ ಆವಿಷ್ಟನಾದ ಬಲಿಯೆಂಬ ದುಷ್ಟ ಅಸುರನ ಅವತಾರನಾದ ಸಾಲ್ವನನ್ನು ಮಧುಕೈಟಭರ ಅವತಾರರಾದ ಹಂಸಡಿಭಕರನ್ನು ಜಯಿಸಿದರು. ಭೀಮಸೇನ ದೇವರಿಂದ ರಕ್ಷಿತನಾಗಿ ಅರ್ಜುನನು ಉಳಿದ ರಾಜರನ್ನು ಜಯಿಸಿದನು. ಈರೀತಿಯಾಗಿ ದಿಗ್ವಿಜಯವನ್ನು ಮುಗಿಸಿಕೊಂಡು ಭೀಮಸೇನ ದೇವರು ಅರ್ಜುನನೊಡನೆ ಹಸ್ತಿನಾವತಿಗೆ ಬಂದರು. ಅವರ ಬಾಹುಸಾಮರ್ಥ್ಯ ವನ್ನು ನೋಡಿ ಧರ್ಮರಾಜನು ನಕುಲಸಹದೇವರೂ ಕುಂತೀದೇವಿಯೂ ವಿದುರನು

ಭೀಷ್ಮಾಚಾರ್ಯರೂ ಇತರ ಸಜ್ಜನರೂ ಊರಿನ ಜನರು ಸಂತೋಷಪಟ್ಟರು. ಈ ವರ್ತಮಾನವನ್ನು ಕೇಳಿ ಯಾದವರೂ ಸಂತೋಷಪಟ್ಟರು.

ಆ ಸಮಯದಲ್ಲಿ ಕೃಷ್ಣಪರಮಾತ್ಮನು ಧೃತರಾಷ್ಟ್ರನು ತನ್ನ ಮಕ್ಕಳ ವಶನಾಗಿ ಪಾಂಡವರಿಗೆ ಅನ್ಯಾಯಮಾಡುವನೆಂದು ತಿಳಿದು ಧೃತರಾಷ್ಟ್ರನಿಗೆ ಬುದ್ಧಿಯನ್ನು ಹೇಳಲಿಕ್ಕೆ ಅಕ್ರೂರನನ್ನು ಹಸ್ತಿನಾವತಿಗೆ ಕಳುಹಿಸಿದನು. ಅಕ್ರೂರನು ಹಸ್ತಿನಾವತಿಗೆ ಹೋಗಿ ಧೃತರಾಷ್ಟ್ರ ಭೀಷ್ಮಾಚಾರ್ಯರೇ ಮೊದಲಾದ ಸಮಸ್ತಕೌರವರಿಂದ ಪೂಜಿತನಾಗಿ ಕೌರವರು ಪಾಂಡವರ ವಿಷಯದಲ್ಲಿ ಹೇಗೆ ಇರುವರು? ಎಂಬುದನ್ನು ತಿಳಿಯುವುದಕ್ಕಾಗಿ ಕೆಲವು ದಿವಸಗಳವರೆಗೆ ಅಲ್ಲಿಯೇ ಇದ್ದನು. ತರುವಾಯ ಕುಂತೀ ವಿದುರರ ಮಾತಿನಿಂದಲೂ, ತನ್ನ ಅನುಭವದಿಂದಲೂ ಧೃತರಾಷ್ಟ್ರನು ತನ್ನ ಮಕ್ಕಳ ವಶನಾಗಿರುವನೆಂದು ತಿಳಿದು ಧೃತರಾಷ್ಟ್ರನೊಡನೆ 'ನೀನು ಪಾಂಡವರಲ್ಲಿಯೂ ನಿನ್ನ ಮಕ್ಕಳಲ್ಲಿಯೂ ಸಮಬುದ್ಧಿಯುಳ್ಳವನಾಗಿದ್ದರೆ ಕೀರ್ತಿಯನ್ನೂ ಧರ್ಮವನ್ನೂ ಅರ್ಥಕಾಮಗಳನ್ನು ಹೊಂದುವಿ. ಕೃಷ್ಣಪರಮಾತ್ಮನೂ ಸಮಸ್ತ ಯಾದವರಿಂದ ಕೂಡಿಕೊಂಡು ಪರಮಪ್ರೀತಿಯನ್ನು ಮಾಡುವನು. ಆ ಭಗವಂತನ ಪ್ರೀತಿಯಿಂದ ಧರ್ಮ ಅರ್ಥ ಕಾಮ ಮೋಕ್ಷಗಳನ್ನು ಹೊಂದುವಿ. ಇಲ್ಲದಿದ್ದರೆ ವಿಪರೀತವಾದ ಫಲವನ್ನು ಹೊಂದುವಿ. ಈರೀತಿಯಾಗಿ ಕೃಷ್ಣಪರಮಾತ್ಮನು ಹೇಳಿ ಕಳುಹಿಸಿರುವ ಮಾತನ್ನು ನಾನು ಹೇಳಿರುವೆನು' ಎಂದು ಸಮಸ್ತ ಕೌರವರ ಮಧ್ಯದಲ್ಲಿ ಹೇಳಿದನು.

ಅದನ್ನು ಕೇಳಿ ಮಕ್ಕಳವಶನಾದ ಧೃತರಾಷ್ಟ್ರನು 'ಎಲ್ಲವೂ ಭಗವದಿಚ್ಛೆಯಿದ್ದಂತೆ ಆಗುವುದು. ನಮಗೊಂದೂ ಸ್ವಾತಂತ್ರ್ಯವಿಲ್ಲ. ಆ ಭಗವಂತನು ಭೂಮಿಯ ಭಾರವನ್ನು ಪರಿಹರಿಸುವುದಕ್ಕಾಗಿ ಭೂಮಿಯಲ್ಲಿ ಅವತರಿಸಿರುವನು' ಎಂದಿಷ್ಟೇ ಹೇಳಿದನು. ಅಕ್ರೂರನು ಧೃತರಾಷ್ಟ್ರನು ಮನಸ್ಸು ಕೆಟ್ಟಿದೆ ಎಂದು ತಿಳಿದಕೊಂಡು 'ಹಾಗಾದರೆ ನಿಮಗೆ ಮಕ್ಕಳೇ ಉಳಿಯಲಿಕ್ಕೆ ಹೋಗುವುದಿಲ್ಲ' ಎಂದು ಹೇಳಿ ಭೀಮಾರ್ಜುನರನ್ನು ಸಹದೇವನನ್ನು ಕರೆದುಕೊಂಡು ಮಧುರಾಪಟ್ಟಣಕ್ಕೆ ಹೋದನು. ಅಲ್ಲಿ ಭೀಮಾರ್ಜುನರು ತಮಗೆ ಯೋಗ್ಯವಾದ ಭಗವದ್ವಿಷಯಕವಾದ ಉತ್ತಮವಾದ ಜ್ಞಾನವನ್ನು ಪರಮಾತ್ಮನಿಂದ ಪಡೆಯುತ್ತಾ ಯಾದವರಿಂದ ಸತ್ಕೃತರಾಗಿ ಇದ್ದರು.

ಆಗ ಭೀಮಸೇನದೇವರು ಕೃಷ್ಣಪರಮಾತ್ಮನೊಡನೆ ಗದಾಯುದ್ಧವನ್ನು ಅಭ್ಯಾಸಮಾಡಿದರೆ ಪರಮಾತ್ಮನೊಡನೆ ಎದುರಾಗಿ ಯುದ್ಧ ಮಾಡಿದಂತೆ ಆಗುವುದೆಂದು ಪರಮಾತ್ಮನ ಅಪ್ಪಣೆಯಿಂದಲೇ ಪರಮಾತ್ಮನ ಮುಂಭಾಗದಲ್ಲಿ

ಬಲರಾಮದೇವರಿಂದ ಅಭ್ಯಾಸ ಮಾಡಿದರು. ಬಲರಾಮ ದೇವರಾದರೋ ಸಾಂದೀಪನಿ ಆಚಾರ್ಯರ ಮುಂಭಾಗದಲ್ಲಿ ಕೃಷ್ಣಪರಮಾತ್ಮನಿಂದ ನೂತನವಾಗಿ ಅಭ್ಯಾಸ ಮಾಡಿದ ಗದಾಯುದ್ಧವನ್ನು ಭೀಮಸೇನದೇವರಿಗೆ ಹೇಳಿಕೊಟ್ಟರು. ಸರ್ವಜ್ಞರಾದ ಭೀಮಸೇನದೇವರು ಲೋಕರೀತಿಯಿಂದ ಅಭ್ಯಾಸ ಮಾಡಿದರು. ಉತ್ತಮ ವಿದ್ಯೆಗಳನ್ನು ಅರ್ಜುನನು ಕೃಷ್ಣಪರಮಾತ್ಮನಿಂದ ಅಭ್ಯಾಸ ಮಾಡಿದನು. ಸಹದೇವನು ಉದ್ಧವನ ಮುಖದಿಂದ ಉತ್ತಮವಾದ ನೀತಿಯನ್ನು ಅಭ್ಯಾಸ ಮಾಡಿದನು. ಹೀಗೆಯೇ ಅವರು ಕೆಲವು ಸಮಯ ಅಲ್ಲಿ ಇದ್ದರು. ಅವರು ಮೂರು ವರ್ಷಕಾಲ ಅಲ್ಲಿ ಇದ್ದು ದೇವರ ಮಗನಾದ ವಿಶೋಕನನ್ನು ಕರೆದುಕೊಂಡು ಬಂದರು. ಆ ವಿಶೋಕನು ಕೃಷ್ಣಪರಮಾತ್ಮನಿಂದ ಸೈರಂಧ್ರಿಕೆಯಲ್ಲಿ (ಪೂರ್ವದಲ್ಲಿ ಕುಬ್ಜೆಯೆಂದು ಹೆಸರುಳ್ಳವಳಲ್ಲಿ) ಹುಟ್ಟಿದವನು. ನಾರದರ ಶಿಷ್ಯನು. ಪಂಚರಾತ್ರಾಗಮವನ್ನು ತಿಳಿದವನಾಗಿದ್ದನು. ಭೀಮಸೇನದೇವರು ಅವನನ್ನು ಸಾರಥಿ ಯನ್ನಾಗಿ ಪಡೆದು ಸಂತೋಷವನ್ನು ಹೊಂದಿದರು. ಮತ್ತೂ ಭೀಮಸೇನದೇವರು ವೇದವ್ಯಾಸದೇವರಿಂದ ಪರವಿದ್ಯೆಯನ್ನು ಹೊಂದಿ ಅದನ್ನು ಅರ್ಜುನಾದಿಗಳಿಗೆ ಉಪದೇಶಮಾಡಿದರು. ಪರವಿದ್ಯೆಯಿಂದ ಸರ್ವತ್ರ ಜಯಶೀಲರಾಗಿದ್ದರು. ಸಮಸ್ತ ಭಗವದ್ವಿರುದ್ಧ ಶಾಸ್ತ್ರಮಾರ್ಗಗಳನ್ನೂ ತಿರಸ್ಕಾರ ಮಾಡಿ ಶುದ್ಧವಾದ ವೈಷ್ಣವ ಮಾರ್ಗವನ್ನೇ ರಚಿಸಿದರು. ಕ್ರೀಡೆಗಾಗಿ ಬಾಹುಯುದ್ಧದಲ್ಲಿಯೂ ವಾಗ್ಯುದ್ಧ ದಲ್ಲಿಯೂ ಬಲರಾಮದೇವರನ್ನು ಜಯಿಸಿದರು. ಅವರು ನಿತ್ಯವೂ ಉತ್ತಮ ಜ್ಞಾನಿ ಗಳಾಗಿದ್ದರೂ ಪರಮಾತ್ಮನಿಂದ ಪಾಠಕೇಳಿ ಮತ್ತು ಹೆಚ್ಚಾದ ಜ್ಞಾನವನ್ನು ಹೊಂದಿದರು.

ಪರಮಾತ್ಮನನ್ನು ಆಶ್ರಯಿಸದೆ ಇರುವವರು ಒಬ್ಬರೂ ಇಲ್ಲ. ಆ ಪರಮಾತ್ಮನನ್ನು ನಿತ್ಯವೂ ಆಶ್ರಯಿಸುವ ಕಾರಣವೆ ರಮಾದೇವಿಯರಿಗೆ ಶ್ರೀ ಎಂಬ ಹೆಸರಿದೆ. ಧರ್ಮರಾಜನೂ ವೇದವ್ಯಾಸದೇವರಿಂದ ತತ್ವವಿದ್ಯೆಯನ್ನು ಪಡೆದನು. ಐದುಜನ ಪಾಂಡವರೂ ಸದ್ಧರ್ಮವನ್ನು ಮಾಡುತ್ತಾ ಪರಮಾತ್ಮನಿಂದ ಶಿಕ್ಷಿತರಾಗಿ ಸುಖವಾಗಿ ಇದ್ದರು.

ಒಂದು ದಿವಸದಲ್ಲಿ ಭೀಮಸೇನದೇವರು ರಾಜಪುತ್ರರೊಡನೆ ಊರಹೊರಗೆ ಆಡುತ್ತಿದ್ದರು. ಆಗ ಧರ್ಮರಾಜನ ಉಂಗುರವೂ ಚೆಂಡೂ ಬಾವಿಗೆ ಬಿದ್ದಿತು. ಎಲ್ಲ ಹುಡುಗರೂ ಬಾವಿಯನ್ನು ನೋಡುತ್ತಿದ್ದರು. ಆ ಬಾವಿಯು ತುಂಬಾ ಆಳವಾಗಿದ್ದಿತು. ಆಗ ಭೀಮಸೇನದೇವರು ಈ ಆಳವಾದ ಬಾವಿಯಲ್ಲಿ ಹಾರಿ ನಾನು ಉಂಗುರವನ್ನು

ಚೆಂಡನ್ನು ತರುವೆನೆಂದರು. ಆಗ ಅಲ್ಲಿಗೆ ದ್ರೋಣಾಚಾರ್ಯರು ಬಂದಿದ್ದರು. ಅವರು ಅಸ್ತ್ರಮಂತ್ರ ಸಾಮರ್ಥ್ಯದಿಂದ ಚೆಂಡನ್ನು ಉಂಗುರವನ್ನು ಬಾವಿಯಿಂದ ತೆಗೆದು ಕೊಟ್ಟರು. ತರುವಾಯ ರಾಜಪುತ್ರರು ಭೀಷ್ಮಾಚಾರ್ಯರ ಹತ್ತಿರ ತಿಳಿಸಲು ಭೀಷ್ಮಾಚಾರ್ಯರೇ ಬಂದು ದ್ರೋಣಾಚಾರ್ಯರನ್ನು ಸತ್ಕರಿಸಿ ಕರೆದುಕೊಂಡು ಕೌರವಪಾಂಡವರಿಗೆ ಇತರ ರಾಜಪುತ್ರರಿಗೂ ಅಸ್ತ್ರವಿದ್ಯಾಭ್ಯಾಸ ಮಾಡಿಸಲಿಕ್ಕೆ ಹೇಳಿದರು.

ಆಗ ದ್ರೋಣಾಚಾರ್ಯರು ರಹಸ್ಯದಲ್ಲಿ ಯಾರು ನನ್ನ ಇಷ್ಟವನ್ನು ಮಾಡಿಕೊಡುವೆನೆಂದು ಮೊದಲು ಪ್ರತಿಜ್ಞೆಯನ್ನು ಮಾಡುವನೋ ಅವನನ್ನು ನಾನು ಧನುರ್ಧಾರಿಗಳಲ್ಲಿ ಶ್ರೇಷ್ಠನನ್ನಾಗಿ ಮಾಡುವೆನು ಎಂದು ಹೇಳಿದರು. ಆಗ ಅರ್ಜುನನು ಪ್ರತಿಜ್ಞೆಯನ್ನು ಮಾಡಿದನು. ಭೀಮಸೇನದೇವರು ಪ್ರತಿಜ್ಞೆಯನ್ನು ಮಾಡಲಿಲ್ಲ, ಯಾಕೆಂದರೆ—'ಇನ್ನು ಮುಂದೆ ನಮಗೆ ಭೀಷ್ಮಾದಿಗಳಿಂದ ಯುದ್ಧವು ನಡೆಯಲಿಕ್ಕೆ ಹೋಗುವುದು. ನಾನು ದೊಡ್ಡವರ್‍ನ್ನು ಮುಂದೆ ನಿಂತು ಯುದ್ಧ ಮಾಡಲಾರೆನು. ಅರ್ಜುನನು ಅಸ್ತ್ರಜ್ಞಾನಿಯಾಗಿ ಪ್ರಸಿದ್ಧನಾದರೆ ಅವನೇ ಯುದ್ಧಕ್ಕೆ ನಿಂತರೆ ನನಗೆ ಧರ್ಮವು ಉಳಿಯುವುದು. ಇಲ್ಲದಿದ್ದರೆ ನಾನು ಯುದ್ಧಕ್ಕೆ ಮುಂದೆ ನಿಲ್ಲಬೇಕಾಗುವುದು' ಎಂಬ ಅಭಿಪ್ರಾಯದಿಂದಲೂ ಪರಮಾತ್ಮನ ಹೊರತು ಇನ್ನೊಬ್ಬರಿಂದ ವರವನ್ನು ಕೇಳುವುದು ಧರ್ಮವಾಗದ ಕಾರಣವೂ ಅರ್ಜುನನೇ ಗುರುಗಳ ಕಾರ್ಯವನ್ನು ಮಾಡಲಿ ಎಂದು ತಾನು ಪ್ರತಿಜ್ಞೆಯನ್ನು ಮಾಡಲಿಲ್ಲ. ಭೀಮಸೇನದೇವರಿಂದ ಪ್ರೇರಿತನಾದ ಅರ್ಜುನನು ಪ್ರತಿಜ್ಞೆಯನ್ನು ಮಾಡಿದನು.

ತರುವಾಯ ದ್ರೋಣಾಚಾರ್ಯರು ಅರ್ಜುನನಲ್ಲಿ ವಿಶೇಷವಾಗಿ ಸ್ನೇಹವನ್ನು ಮಾಡಿ ಮಹಾಸ್ತ್ರಗಳನ್ನು ಉಪದೇಶಿಸಿದರು. ಅರ್ಜುನನಲ್ಲಿ ಪಕ್ಷಪಾತವನ್ನು ಮಾಡಿದರು. ಅರ್ಜುನನನ್ನು ವಿಶೇಷವಾಗಿ ಹೊಗಳುತ್ತಿದ್ದರು. ರಹಸ್ಯವಿದ್ಯೆಗಳನ್ನೆಲ್ಲಾ ಅವನಿಗೆ ಹೇಳಿಕೊಡುತ್ತಿದ್ದರು. ಇನ್ನೊಬ್ಬರಿಗೆ ಹಾಗೆ ಹೇಳಿಕೊಡುತ್ತಿದ್ದಿಲ್ಲ. **ಆದರೆ ಭೀಮಸೇನ ದೇವರು ತನ್ನ ಪ್ರತಿಭಾಸಾಮರ್ಥ್ಯದಿಂದಲೇ ತಿಳಿಯುವವರಾಗಿ ಅರ್ಜುನನಲ್ಲಿ ದ್ರೋಣಾಚಾರ್ಯರು ವಿಶೇಷ ಸ್ನೇಹವನ್ನು ಮಾಡುವಂತೆ ಮಾಡಿಸಿ ಅರ್ಜುನನ್ನು ಸಕಲಾಸ್ತ್ರಜ್ಞಾನಿಯನ್ನಾಗಿ ಮಾಡಿಸುವುದಕ್ಕಾಗಿ ಅರ್ಜುನನಂತೆ ತಾನು ದ್ರೋಣಾಚಾರ್ಯರ ಸೇವೆಯನ್ನು ಮಾಡಲಿಲ್ಲ.** ಅತಿಪ್ರಯತ್ನಪೂರ್ವಕವಾಗಿ ಗುರಿಯನ್ನು ನೋಡಲಿಲ್ಲ. ಸೇವಾಮಾಡುವುದರಲ್ಲಿ ಅರ್ಜುನನನ್ನೇ ಮುಂದೆ ಮಾಡುತ್ತಿದ್ದರು. **''ನನ್ನ ಬಾಹುಬಲದಿಂದಲೂ ಭಗವದನುಗ್ರಹದಿಂದಲೂ ಶತ್ರುಗಳನ್ನು**

**ಸಂಹರಿಸುವೆನು. ಈ ಅಸ್ತ್ರಜ್ಞಾನದಿಂದ ಏನು ಆಗಬೇಕಾಗಿದೆ'' ಎಂದು ಅವರ ಅಭಿಪ್ರಾಯವಿದ್ದಿತು**. ತರುವಾಯ ಎಲ್ಲಾ ರಾಜಪುತ್ರರೂ ಬಂದು ದ್ರೋಣಾಚಾರ್ಯ ರಲ್ಲಿ ವಿದ್ಯಾಭ್ಯಾಸವನ್ನು ಮಾಡಿದರು. ವಿದ್ಯಾಭ್ಯಾಸವು ಮುಗಿದ ಮೇಲೆ ದ್ರೋಣಾಚಾರ್ಯರು ಭೀಷ್ಮಾಚಾರ್ಯರೇ ಮೊದಲಾದವರೆಲ್ಲರನ್ನೂ ಸೇರಿಸಿ ಎಲ್ಲರೂ ನೋಡುವಂತೆ ರಂಗಸ್ಥಳದಲ್ಲಿ ಎಲ್ಲರೂ ತಾವು ಅಭ್ಯಾಸವನ್ನು ಮಾಡಿದ್ದನ್ನು ತೋರಿಸಿದರು. ಆಗ ಅರ್ಜುನನಿಗೆ ಕರ್ಣನು ಹೆಚ್ಚಿಗೆ ವಿದ್ಯೆಯನ್ನು ತೋರಿಸಲು ಅರ್ಜುನನು ಕರ್ಣನನ್ನು ಯುದ್ಧಕ್ಕೆ ಕರೆದನು. ಆಗ ಭೀಮಸೇನ ದೇವರು ಯುದ್ಧಕ್ಕೆ ಕ್ಷತ್ರಿಯನು ಕ್ಷತ್ರಿಯನಾಗದಿದ್ದವನನ್ನು ಕರೆಯುವುದು ಧರ್ಮವಲ್ಲವೆಂದು ಅರ್ಜುನನನ್ನು ತಡೆದು ಕರ್ಣನ ಕೈಯಲ್ಲಿ ಚಾಟುವಾರಿಯನ್ನು ಕೊಟ್ಟರು. ಯದ್ಯಪಿ ಕರ್ಣನು ಕುಂತೀದೇವಿಯ ಮಗನಾದ ಕಾರಣ ಕ್ಷತ್ರಿಯ ನಾಗಬೇಕು. ಸರ್ವಜ್ಞರಾದ ಭೀಮಸೇನದೇವರಿಗೆ ಇದು ತಿಳಿಯದ ವಿಷಯವಲ್ಲ. ಆದರೂ ಹೇಗೆ ಬ್ರಾಹ್ಮಣಸ್ತ್ರೀಯಲ್ಲಿ ಹುಟ್ಟಿದರೂ ಅವನಿಗೆ ಬ್ರಾಹ್ಮಣ ವಿಹಿತವಾದ ಉಪನಯನಾದಿ ಸಂಸ್ಕಾರವಾಗದೆ ಹೋದರೆ ಅವನು ಭ್ರಷ್ಟನಾಗಿ ಬ್ರಾಹ್ಮಣನಲ್ಲವೆಂದಾಗುವನು. ಹಾಗೆಯೇ ಕರ್ಣನು ಕ್ಷತ್ರಿಯಳಾದ ಕುಂತೀದೇವಿಯಲ್ಲಿ ಹುಟ್ಟಿದವನಾದರೂ ಅವನಿಗೆ ಕ್ಷತ್ರಿಯ ಯೋಗ್ಯ ಸಂಸ್ಕಾರಗಳಾಗದೆ ಸೂತಜಾತಿಗೆ ಯೋಗ್ಯವಾದ ಸಂಸ್ಕಾರವಾದ ಕಾರಣ ಅವನು ಕ್ಷತ್ರಿಯನಲ್ಲವೆಂದು ಭೀಮಸೇನದೇವರ ಅಭಿಪ್ರಾಯವು. ಕೊನೆಗೆ ಭೀಮಸೇನದೇವರೂ ದುರ್ಯೋಧನನೂ ಭಾರವುಳ್ಳ ಗದೆಗಳನ್ನು ಹಿಡಿದು ಕೊಂಡು ಕೋಪದಿಂದ ಯುದ್ಧಮಾಡಲಿಕ್ಕೆ ಬಂದರು. ತರುವಾಯ ದ್ರೋಣಾ ಚಾರ್ಯರ ಆಜ್ಞೆಯಿಂದ ಅಶ್ವತ್ಥಾಮಾಚಾರ್ಯರು ಸಮಾಧಾನಪಡಿಸಿದರು. ವಿದ್ಯಾಪರೀಕ್ಷೆಯು ಮುಗಿದಮೇಲೆ ದ್ರೋಣಾಚಾರ್ಯರ ಅಭಿಪ್ರಾಯದಂತೆ ಭೀಮಸೇನದೇವರನ್ನು ಕರೆದುಕೊಂಡು ಹೋಗಿ ಅರ್ಜುನನು ಯುದ್ಧದಲ್ಲಿ ದ್ರುಪದರಾಜನನ್ನು ಸೆರೆಹಿಡಿದುಕೊಂಡು ಬಂದು ದ್ರೋಣಾಚಾರ್ಯರಿಗೆ ಒಪ್ಪಿಸಿ ಗುರುದಕ್ಷಿಣೆಯನ್ನು ಸಲ್ಲಿಸಿದರು. ತರುವಾಯ ಭೀಮಾರ್ಜುನರು ದಿಗ್ವಿಜಯವನ್ನು ಮಾಡಿ ಎಲ್ಲಾ ರಾಜರೂ ಕಪ್ಪವನ್ನು ಕೊಡುವಂತೆ ಮಾಡಿದರು. ಧೃತರಾಷ್ಟನು ಧರ್ಮರಾಜನಿಗೆ ಯುವರಾಜ್ಯ ಅಭಿಷೇಕ ಮಾಡಿದನು.



# ಅರಗಿನಮನೆಯ ದಹನ [1]

ಪಾಂಡವರು ಭಗವದನುಗ್ರಹದಿಂದ ಶುಭಕರ್ಮಗಳನ್ನೇ ಅಧಿಕವಾಗಿ ಮಾಡುತ್ತಿರಲು ದುರ್ಯೋಧನಾದಿಗಳು, ಗುರುಗಳೂ ದೇವತೆಗಳೂ ಇವರ ವಿಷಯದಲ್ಲಿ ನಾಸ್ತಿಕ್ಯನೀತಿಯನ್ನು ಚೆನ್ನಾಗಿ ಅಭ್ಯಾಸ ಮಾಡಿದರು. ಆ ಕಾಲದಲ್ಲಿ ಕಲಿಂಗ ಎಂಬ ಬ್ರಾಹ್ಮಣನಿದ್ದನು. ಅವನು ಒಬ್ಬ ದೈತ್ಯನು. ಅವನು ಶುಕ್ರಾಚಾರ್ಯರ ಶಿಷ್ಯನು. ಶಕುನಿಗೆ ಗುರುವಾಗಿದ್ದನು. ಅವನು ಶಕುನಿಯ ಮಾತಿನಿಂದ ರಹಸ್ಯದಲ್ಲಿ ದುರ್ಯೋಧನಾದಿಗಳಿಗೆ ಕುತ್ಸಿತವಾದ ನೀತಿಯನ್ನು ಹೇಳಿಕೊಟ್ಟನು. ಆ ನೀತಿಯಲ್ಲಿ **'ಕಪಟಮಾಡುವುದೇ ಶ್ರೇಷ್ಠವು. ದೇವತೆಗಳನ್ನು ಕೂಡ ತನ್ನ ಪ್ರಯೋಜನಕ್ಕಾಗಿ ಪೂಜಿಸಬಾರದು. ಸಂಧ್ಯಾವಂದನೆ ಯಜ್ಞದಾನ ದೇವರಪೂಜೆ ಇತ್ಯಾದಿಗಳನ್ನು ಜಗತ್ತಿನ ವಂಚನೆಗಾಗಿ ಮಾಡಬೇಕು. ಯಾರಿಗೆ ಅಧಿಕವಾಗಿ ಮೋಸಮಾಡಲಿಕ್ಕೆ ತಿಳಿಯುವುದೋ ಅವನು ಎಲ್ಲರಿಂದಲೂ ಶ್ರೇಷ್ಠನಾದವನು' ಎಂದೆಲ್ಲಾ ಪ್ರತಿಪಾದಿಸಲ್ಪಟ್ಟಿತು.** ಇತ್ಯಾದಿ ಕುತ್ಸಿತವಾದ ನೀತಿಯನ್ನು ಧೃತರಾಷ್ಟ್ರನೇ ಮೊದಲಾದವರಿಗೆ ತಿಳಿಯದಂತೆ ಓದಿಕೊಂಡರು. ಅವರಿಗೆ ಸ್ವಭಾವ ಬಲದಿಂದ ಆ ಶಾಸ್ತ್ರವೇ ಮನಸ್ಸಿಗೆ ಪ್ರಿಯವಾಯಿತು. ಆ ದುರ್ಯೋಧನಾದಿಗಳು ತಮ್ಮ ಬುದ್ಧಿಬಲದಿಂದ ಮತ್ತೂ ಅಧಿಕವಾಗಿ ಅದನ್ನು ವಿಸ್ತರಿಸಿದರು.

ತರುವಾಯ ಸಂಪೂರ್ಣ ದುರ್ಬುದ್ಧಿಯುಳ್ಳ ದುರ್ಯೋಧನನು ಪಾಂಡವರ ಸಂಪತ್ತನ್ನು ಜಯವನ್ನು ನೋಡಿ ರಾತ್ರಿ ಹಗಲೂ ದುಃಖಪಡುತ್ತಿದ್ದನು. ಒಂದು ದಿನದಲ್ಲಿ ಶಕುನಿಯಿಂದ ಸಹಿತನಾಗಿ ತಂದೆಯಾದ ಧೃತರಾಷ್ಟ್ರನ ಬಳಿಗೆ ಬಂದು 'ಜ್ಯೇಷ್ಠನಾದ ನಿನ್ನ ಹೊಟ್ಟೆಯಿಂದ ಹುಟ್ಟಿದ ಮಕ್ಕಳಾದ ನಮಗೆ ರಾಜ್ಯದಲ್ಲಿ ಯೋಗ್ಯತೆಯಿಲ್ಲದಂತೆ ಮಾಡಿದಿ. ನಿನ್ನ ತಮ್ಮನ ಹೆಂಡತಿಯಲ್ಲಿ ಇನ್ನೊಬ್ಬರಿಂದ ಹುಟ್ಟಿದ ಮಕ್ಕಳಿಗೆ ನೀನೇ ರಾಜ್ಯವನ್ನು ಕೊಟ್ಟಿರುವಿ. ಧರ್ಮರಾಜನು ತಮ್ಮಂದಿರ ಬಲದಿಂದ ನಿನ್ನಿಂದ ಮಹತ್ತಾದ ರಾಜ್ಯವನ್ನು ಹೊಂದುವನು. ನಾವೂ ನನ್ನ ಸಂತಾನದವರೂ ಆ ಕುಂತೀಮಗನಿಗೆ ಆಮೇಲೆ ಅವನ ಸಂತಾನಕ್ಕೆ ದಾಸರಾಗುವೆವು. ನನಗೋಸ್ಕರವಾಗಿ ದುಃಖಪಡುವುದಿಲ್ಲ. ನಮ್ಮ ನಿಮಿತ್ತವಾಗಿ ಲೋಕಪ್ರಸಿದ್ಧ ಕೀರ್ತಿಯುಳ್ಳ ನಿನ್ನ ಕೀರ್ತಿಯು ನಾಶವನ್ನು ಹೊಂದುವುದಲ್ಲಾ ಎಂದು ದುಃಖಪಡುವೆನು.

---

1. ಮ.ತಾ.ನಿ. ಅ-19

ಆದುದರಿಂದ ನಾವೆಲ್ಲರೂ ಸಾಯಬೇಕೆಂದು ನಿಶ್ಚಯಿಸಿರುವೆವು. ನಮಗೆಲ್ಲಾ ನೀನು ಅನುಜ್ಞೆಯನ್ನು ಕೊಡು' ಎಂದು ಹೇಳಿದನು.

ಮಗನ ಮಾತನ್ನು ಕೇಳಿ ಧೃತರಾಷ್ಟ್ರನು 'ಮಗ! ನಿನ್ನ ಮನಸ್ಸು ಚೆನ್ನಾಗಿಲ್ಲವಲ್ಲಾ! ಉತ್ತಮಗುಣವಂತರಾದ ಪರಾಕ್ರಮಶಾಲಿಗಳಾದ ಆ ಪಾಂಡವರು ಯಾರು [1]ಪ್ರೀತಿಯನ್ನು ಹೊಂದಲಾರರು? ಅವರು ತಮ್ಮ ಬಾಹುಬಲದಿಂದ ಸಮಸ್ತರಾಜರ ಸಂಪತ್ತನ್ನು ನನ್ನಲ್ಲಿ ತಂದುಕೊಡುತ್ತಾರೆ. ನಿಮಗೊಂದೂ ನಿಷೇಧ ಮಾಡುವುದಿಲ್ಲ, ನಮ್ಮ ಕುಲದ ಕ್ಷೇಮಕ್ಕಾಗಿ ಶಾಂತನಾಗಿ ಇರು. ಬಲಿಷ್ಠರಾದ ಅವರೊಡನೆ ವಿರೋಧಮಾಡಿದರೆ ನಮ್ಮ ವಂಶವು ಉಳಿಯಲಾರದು' ಎಂದು ಹೇಳಿದನು.

ಈರೀತಿಯಾಗಿ ಧೃತರಾಷ್ಟ್ರನು ಹೇಳಲು ಶಕುನಿಯ ಅಭಿಪ್ರಾಯದಂತೆ ದುರ್ಯೋಧನನು 'ಪಾಂಡವರನ್ನು ಹಸ್ತಿನಾವತಿಯಿಂದ ಬೇರೆ ಸ್ಥಳಕ್ಕೆ ಕಳುಹಿಸದೆ ಇರುವುದಾದರೆ ನಾವೆಲ್ಲರೂ ಸತ್ತದ್ದನ್ನು ನೋಡಿ ಪಾಂಡವರೊಡನೆ ಸಂತೋಷದಿಂದ ಇರು' ಎಂದು ಹೇಳಿದನು.

ಈ ರೀತಿಯಾದ ದುರ್ಯೋಧನನ ಮಾತನ್ನು ಕೇಳಿ ಭಗವದಿಚ್ಛೆಯಿಂದಲೇ ಧೃತರಾಷ್ಟ್ರನ ಮನಸ್ಸು ಮಕ್ಕಳಮೇಲಿನ ಪ್ರೇಮದಿಂದ ಅವರ ವಶವಾಯಿತು. 'ಮಗ! ಪಾಂಡವರು ಬಲಿಷ್ಠರು, ಅವರನ್ನು ನಾವು ಇಲ್ಲಿಂದ ಹೊರಡಿಸಲಿಕ್ಕೆ ಆಗದಲ್ಲಾ!' ಎಂದು ಹೇಳಿದನು. ಅದಕ್ಕೆ ದುರ್ಯೋಧನನು ಶಕುನಿಯನ್ನು ನೋಡಿಕೊಂಡು ಧೃತರಾಷ್ಟ್ರನೊಡನೆ 'ಅದಕ್ಕೆ ನಾನು ಸರಿಯಾದ ಉಪಾಯವನ್ನು ಕಂಡುಹಿಡಿದಿರುವೆನು. ಕೇಳು. ಪಾಂಡವರು ಇಲ್ಲಿಗೆ ಬಂದು ಹದಿಮೂರು ವರ್ಷಕಾಲವಾಯಿತು. ಇಷ್ಟರವರೆಗೂ ಇದನ್ನೇ ಯೋಚಿಸುತ್ತಿದ್ದೇನೆ. ಅಶ್ವತ್ಥಾಮಾಚಾರ್ಯರಿಗೆ ಸಮಾನರಾದ ಬಲಿಷ್ಠರೂ ಪ್ರತಾಪಶಾಲಿಗಳೂ ಇನ್ನೊಬ್ಬರಿಲ್ಲ. ಅವರನ್ನು ನಾನು ಅನೇಕ ಉಪಾಯಗಳಿಂದ ನನ್ನ ವಶಮಾಡಿಕೊಂಡಿರುವೆನು. ಅವರು ವಶರಾದಮೇಲೆ ಅವರ ತಂದೆ ದ್ರೋಣಾಚಾರ್ಯರು ಸೋದರಮಾವ ಕೃಪಾಚಾರ್ಯರೂ ವಶರಾಗಿರುವರು. ಇವರನ್ನು ಅನುಸರಿಸಿ ಭೀಷ್ಮಾಚಾರ್ಯರೂ ಇರುವರು. ಹೀಗೆಯೇ ಸೈನಿಕರಿಗೆ ಕೆಲವರಿಗೆ ಹಣವನ್ನು ಕೊಟ್ಟು ಕೆಲವರಿಗೆ ಮರ್ಯಾದೆಯನ್ನು ಮಾಡಿ ಎಲ್ಲರನ್ನು ವಶಮಾಡಿಕೊಂಡಿರುವೆನು. ನಮ್ಮ ಕರ್ಣನು ಅಸ್ತ್ರದಲ್ಲಿಯೂ ಬಲದಲ್ಲಿಯೂ ಅರ್ಜುನನನ್ನು ಮೀರಿ ಇರುವೆನು. ನಾನೇ ಮಂತ್ರಬಲದಿಂದ ಭೀಮ

1. ಪಾಂಡವರ ಬಗ್ಗೆ ಯಾರು ತಾನೇ ಪ್ರೀತಿಯನ್ನು ಹೊಂದುವುದಿಲ್ಲ ?

ನನ್ನು ಜಯಿಸುವೆನು. ನಾನು ದುರ್ವಾಸರಿಂದ ದೇವತೆಗಳಿಗೂ ದುರ್ಲಭಗಳಾದ [1]ಸಾವಿರದ ಮುನ್ನೂರು ಮಂತ್ರಗಳನ್ನು ಉಪದೇಶ ಪಡೆದಿರುವೆನು. ಅವುಗಳನ್ನು ಇನ್ನೊಬ್ಬರಲ್ಲಿ ಉಪಯೋಗಿಸಿದರೆ ಭೀಮನಲ್ಲಿ ವೀರ್ಯವುಳ್ಳದ್ದಾಗಲಾರವು ಎಂದು ಯಾರಲ್ಲಿಯೂ ಉಪಯೋಗಿಸದೆ ಇದ್ದೇನೆ. ಆ ಮಂತ್ರಗಳು ವೀರ್ಯವನ್ನು ಕೊಡುವುವು. ಜಯವನ್ನು ಕೊಡುವುವು. ಜಲಸ್ತಂಭ ಅಗ್ನಿಸ್ತಂಬ ಇತ್ಯಾದಿಗಳನ್ನು ಉಂಟುಮಾಡುವುವು. ಸಮಸ್ತ ದೇವತೆಗಳನ್ನು ತಡೆಯುವುವು. ಮಳೆಯೇ ಮೊದಲಾದ ಸಮಸ್ತ ಅಭೀಷ್ಟಗಳನ್ನು ಕೊಡುವುವು. ಆ ಮಂತ್ರಗಳಿಂದ ನಾನು ಭೀಮನನ್ನು ಜಯಿಸುವೆನು.

ಅಥವಾ ನೀನು ಪಾಂಡವರಲ್ಲಿ ಅತ್ಯಂತ ಸ್ನೇಹವನ್ನು ಮಾಡುವಿಯಾ? ಅದಕ್ಕೂ ನಾನು ವಿರೋಧ ಮಾಡುವುದಿಲ್ಲ. ಅವರು ವಾರಣಾವತಕ್ಕೆ ಹೋಗಿ ಅಲ್ಲಿ ವಾಸಮಾಡಲಿ. ಅದೇ ಅವರಿಗೆ ರಾಜ್ಯವಾಗಲಿ. ನನಗೆ ನಿನಗೋಸ್ಕರವಾಗಿ ಹಸ್ತಿನಾವತಿಯಿರಲಿ. ಹೀಗೆ ಮಾಡಿದರೆ ನಿನಗೆ ನಿನ್ನ ಮಕ್ಕಳನ್ನು ರಕ್ಷಿಸಿದ್ದರಿಂದ ಕೀರ್ತಿಯು ಉಂಟಾಗುವುದು. ಇನ್ನೊಬ್ಬರ ಮಕ್ಕಳನ್ನು ರಕ್ಷಿಸಿಯಾದರೆ ಕೀರ್ತಿಯು ನಷ್ಟವಾಗುವುದು. ಮತ್ತು ಅವರು ತಮಗೆ ಬಲವು ಬಂದಮೇಲೆ ನಿನ್ನೊಡನೆಯೇ ವಿರೋಧ[2] ಮಾಡುವರು. ತಮ್ಮ ಕಾರ್ಯಕ್ಕಾಗಿ ತಮಗೆ ಬಲವಿರುವವರೆಗೆ ನಿನ್ನನ್ನು ಅನುಸರಿಸಿಕೊಂಡು ಇರುವರು. ವಿದುರನು ಒಬ್ಬನು ಯಾವಾಗಲೂ ಆ ಪಾಂಡವ ರನ್ನು ರಕ್ಷಿಸುವವನು. ನನಗೆ ಶತ್ರುವಾಗಿರುವನು. ಅವನ ದುರುಪದೇಶದಿಂದ ಊರಿನ ಜನರೆಲ್ಲರೂ ನನ್ನನ್ನು ದ್ವೇಷಿಸುತ್ತಾರೆ. ಪಾಂಡವರಲ್ಲಿ ಸ್ನೇಹವನ್ನು ಮಾಡುತ್ತಾರೆ. ಪಾಂಡವರೆಲ್ಲರೂ ದೂರಕ್ಕೆ(ಹೋದರೆ) ಬೇರೆ ಆಶ್ರಯರು ಇಲ್ಲದಂತಾಗಿ ಊರಿನ ಜನರು ನಮ್ಮನ್ನೇ ಆಶ್ರಯಿಸುವರು. ಭೀಷ್ಮಾಚಾರ್ಯರೇ ಮೊದಲಾದವರೂ ಪಾಂಡವರು ಇಲ್ಲಿಯೇ ಇದ್ದರೆ ಹತ್ತಿರವಿರುವಾಗ ಅವರೊಡನೆ ವಿರೋಧವನ್ನು ಮಾಡಲಾರರು. ಸ್ನೇಹವನ್ನೇ ಮಾಡುವರು. ಪಾಂಡವರು ದೂರಕ್ಕೆ ಹೋದರೆ ಭೀಷ್ಮಾದಿಗಳಿಗೆ ಅವರಲ್ಲಿ ಇರುವ ಸ್ನೇಹವು ನಷ್ಟವಾಗುವುದು. ನಾವು ಪಾಂಡವರೂ ಇಲ್ಲಿಯೇ ಇರುವುದಾದರೆ ನಮ್ಮ ವಂಶನಾಶಕ್ಕೆ ಕಾರಣವಾದ ಕಲಹವು ಆಗಲಿಕ್ಕೆ ಹೋಗುವುದು. ಆದುದರಿಂದ ಅವರನ್ನು ಉಪಾಯದಿಂದ ಇಲ್ಲಿಂದ

1. 130, 3000 ಎಂದು ವರದರಾಜೀಯ ಹಾಗೂ ತಾಮ್ರಪರ್ಣೀಯ ವ್ಯಾಖ್ಯಾನವಿದೆ.

2. ಪಾಂಡವರು ಹಾಗೆ ಮಾಡಲಿಲ್ಲವೆಂದು, ಕುರುಕ್ಷೇತ್ರ ಯುದ್ಧ ಮುಗಿದಮೇಲೆ ಧೃತರಾಷ್ಟ್ರನನ್ನು 'ಪಿತೃದೇವೋ ಭವ' ಎಂಬ ಮಾತನ್ನು ಅನುಸರಿಸಿದರೆಂದು ತಿಳಿಯುತ್ತದೆ.

ಪರಮಾತ್ಮನು ಧರ್ಮರಾಜನನ್ನು ಅಣ್ಣನನ್ನಾಗಿ ಮಾಡಿರುವನು. ಭೀಮಸೇನದೇವರೇ ಅಣ್ಣನಾಗದ್ದರೆ ಈ ಸಂದರ್ಭದಲ್ಲಿ ಕ್ಷತ್ರಿಯಧರ್ಮವನ್ನು ಉಳಿಸುವುದಕ್ಕಾಗಿ ಅಲ್ಲಿಯೇ ಇರಬೇಕಾಗುವುದು. ಅಲ್ಲಿಯೇ ಇದ್ದರೆ ದೊಡ್ಡಪ್ಪನ ಮಾತು ಮೀರಿದಂತಾಗಿ ಲೋಕದಲ್ಲಿ ಕೀರ್ತಿಯು ನಷ್ಟವಾಗುವುದು. ಕೀರ್ತಿಯನ್ನು ಉಳಿಸಲಿಕ್ಕಾಗಿ ಅಲ್ಲಿಂದ ಹೋದರೆ ಕ್ಷತ್ರಿಯಧರ್ಮವನ್ನು ಬಿಟ್ಟು ದೋಷಬರುವುದು. ಧರ್ಮರಾಜನು ಅಣ್ಣನಾಗಿರುವ ಪ್ರಯುಕ್ತ ಅಣ್ಣನ ಮಾತನ್ನು ಅನುಸರಿಸಿ ಅಲ್ಲಿಂದ ಹೋಗುವುದರಿಂದ ಕ್ಷತ್ರಿಯ ಧರ್ಮ ಬಿಟ್ಟು ದೋಷವೂ ಇಲ್ಲ. ಅಲ್ಲಿ ನಿಲ್ಲದೆ ಹೊರಟು ಹೋದ ಕಾರಣ ದೊಡ್ಡಪ್ಪನ ಮಾತನ್ನು ಮೀರಿದರೆ ದೋಷವೂ ಇಲ್ಲವೆಂದಾಯಿತು. ಕೀರ್ತಿಯೂ ಉಳಿಯಿತು. ಈರೀತಿಯಾಗಿ ಭೀಮಸೇನದೇವರು ಅಣ್ಣನಾಗಿದ್ದರೆ ಒಂದೋ ಧರ್ಮವನ್ನು ಅತಿಕ್ರಮಿಸಿದ ದೋಷವು ಬರುವುದು. ಒಂದೋ ದೊಡ್ಡವರ ಮಾತನ್ನು ಮೀರಿ ಕೀರ್ತಿನಾಶವಾಗುವುದು ಎಂದು ಈ ಎರಡು ದೋಷಪರಿಹಾರ ಕ್ಕಾಗಿಯೇ ಧರ್ಮರಾಜನನ್ನು ಅಣ್ಣನನ್ನಾಗಿ ಶ್ರೀಭಗವಂತನು ಮಾಡಿದನು. ಮತ್ತೂ ಭೀಮಸೇನದೇವರು ಅಣ್ಣನಾಗಿದ್ದರೆ ಅಪರಾಧಿಗಳಾದ ದುರ್ಯೋಧನಾದಿಗಳನ್ನು ಆಗಲೇ ಸಂಹರಿಸುವುದು ಧರ್ಮವು. ಸಂಹರಿಸದೇ ಇದ್ದರೆ ಧರ್ಮವನ್ನು ಬಿಟ್ಟಂತೆ ಆಗುವುದು. ಆಗಲೇ ಸಂಹಾರ ಮಾಡಿದರೆ ಅವರು ಆಮೇಲೆ ಮಾಡುವ ಮಹಾಅಪರಾಧಗಳೊಂದೂ ಲೋಕದಲ್ಲಿ ಪ್ರಸಿದ್ಧಿಯನ್ನು ಹೊಂದದಂತೆ ಆಗು ವುದು. ಅದಕ್ಕಾಗಿ ಅಂದರೆ ಅವರ ಅಪರಾಧಗಳೆಲ್ಲವೂ ಲೋಕಪ್ರಸಿದ್ಧವಾಗಿ ಆಗುವುದಕ್ಕಾಗಿ ಅಕಾಲದಲ್ಲಿ ಅಣ್ಣನ ಮಾತಿನಿಂದ ದುರ್ಯೋಧನಾದಿಗಳನ್ನು ಭೀಮಸೇನದೇವರು ಸಂಹರಿಸದೆ ಇರಲಿ ಎಂಬ ಅಭಿಪ್ರಾಯದಿಂದಲೂ ಪರಮಾತ್ಮನು ಅವರನ್ನು ತಮ್ಮನನ್ನಾಗಿ ಮಾಡಿ ಧರ್ಮರಾಜನನ್ನು ಅಣ್ಣನನ್ನಾಗಿ ಮಾಡಿದನು.

ತರುವಾಯ ಪಾಂಡವರು ಅಲ್ಲಿಂದ ಹೊರಟುಹೋದರು. ಹೋಗುವಾಗ ವಿದುರನು ಮ್ಲೇಚ್ಛಭಾಷೆಯಿಂದ ಎಂದರೆ ಎಲ್ಲರಿಗೂ ಅರ್ಥವಾಗದಿರುವ ಭಾಷೆ ಯಿಂದ ಧರ್ಮರಾಜನೊಡನೆ ವಿಷ ಮತ್ತು ಅಗ್ನಿಯಭಯದಿಂದ ಜಾಗ್ರತೆಯಿಂದ ಇರುವರಾಗಿರಿ ಎಂದನು. ವಿದುರನು ಹೇಳಿದ ಮಾತು—

ಅಲೋಹಂ ನಿಹಿತಂ ಶಸ್ತ್ರಂ ಶರೀರಪರಿಕರ್ತನಮ್ ।
ಯೋ ವೇತ್ತಿ ನ ತು ತಂ ಘ್ನಂತಿ ಪ್ರತಿಘಾತವಿದಂ ದ್ವಿಷಃ ॥
ಕಕ್ಷಘ್ನಃ ಶಿಶಿರಘ್ನಶ್ಚ ಮಹಾರಕ್ಷೇ ಬಿಲೌಕಸಃ ।
ನ ದಹೇದಿತಿ ಚಾತ್ಮಾನಂ ಯೋ ರಕ್ಷತಿ ಸ ಜೀವತಿ ॥

ಆಗ ದುರ್ಯೋಧನನು ಅವರನ್ನು ಸಂಹರಿಸುವುದಕ್ಕಾಗಿಯೇ ವಾರಣಾವತದಲ್ಲಿ ಅರಗಿನ ಮನೆಯನ್ನು ಕಟ್ಟಿಸಲಿಕ್ಕೆ ಬೇಕಾದ ಪದಾರ್ಥಗಳನ್ನು ಗಂಗೆಯ ಮಾರ್ಗದಿಂದ ದೋಣಿಯಿಂದ ಕಳುಹಿಸಿದನು. ಹಾಗೆಯೇ ಪುರೋಚನ ಎಂದು ಹೆಸರುಳ್ಳ ತನ್ನ ಮಂತ್ರಿಯನ್ನು ಕಳುಹಿಸಿದನು. ಪೂರ್ವದಲ್ಲಿ ಪ್ರಹಸ್ತನೆಂದು ಹೆಸರುಳ್ಳ ರಾಕ್ಷಸನೇ ಪುರೋಚನ ಎಂಬ ಹೆಸರಿನಿಂದ ಹುಟ್ಟಿದನು. ಅವನು ಪಾಂಡವರ ಬಳಿಗೆ ವಾರಣಾವತದಲ್ಲಿ ಹೋಗಿ 'ನಾನು ನಿಮ್ಮ ಮೇಲಿನ ಪ್ರೀತಿಯಿಂದ ಈ ದಿವ್ಯ ಮನೆಯನ್ನು ಮಾಡಿಸಿರುವೆನು. ನಾನು ಆ ಪಾಪಿಯಾದ ದುರ್ಯೋಧನನನ್ನು ಅನುಸರಿಸಿ ಇರಲಿಕ್ಕೆ ಆಗಲಾರದು. ಧರ್ಮಿಷ್ಠರಾದ ಧೈರ್ಯವಂತರಾದ ನಿಮ್ಮ ಬಳಿಯಲ್ಲಿಯೇ ಯಾವಾಗಲೂ ಇರುವೆನು' ಎಂದು ಕಪಟದಿಂದ ಹೇಳಿದನು. ಅದನ್ನು ಕೇಳಿ ಪಾಂಡವರು 'ಸಂತೋಷ' ಎಂದರು. ಧರ್ಮರಾಜನು ಮನೆಯನ್ನು ನೋಡಿ ಅದರ ವಾಸನೆಯಿಂದ ಅದು ಅರಗು ಕೊಬ್ಬು ಇತ್ಯಾದಿ ಬೇಗನೆ ಬೆಂಕಿ ಹಿಡಿಯುವ ದ್ರವ್ಯದಿಂದ ಮಾಡಿದ್ದು ಎಂದು ತಿಳಿದವನಾಗಿ ಭೀಮಸೇನದೇವರೊಡನೆ 'ಈ ಪಾಪಿಯು ನಮ್ಮನ್ನು ಕೊಲ್ಲಲಿಕ್ಕೆ ಬಂದಿರುವನು. ನೀನು ಯಾವಾಗಲೂ ಜಾಗ್ರತೆಯಾಗಿರು' ಎಂದು ಹೇಳಿದನು. ವಿದುರನು ನೀತಿಬಲದಿಂದ ಎಲ್ಲವನ್ನು ಚಾರರ ಮುಖದಿಂದ ತಿಳಿಯುವವನಾಗಿ ವಡ್ಡನೊಡನೆ 'ನೀನು ಹೋಗಿ ಧರ್ಮರಾಜನೊಡನೆ ವಿಷ ಅಗ್ನಿಗಳಿಂದ ಜಾಗ್ರತೆಯಿಂದ ಇರು ಎಂದು ಮೊದಲು ಹೇಳಿದ ಮಾತನ್ನೇ ಹೇಳಿ ಅಲ್ಲಿ ಬಹು ದೂರ ಹೋಗುವ ಒಂದು ಬಿಲವನ್ನು ಮಾಡು' ಎಂದು ಹೇಳಲು ಆ ಒಡ್ಡನು ಹಾಗೆಯೇ ವಾರಣಾವತಕ್ಕೆ ಹೋಗಿ ಧರ್ಮರಾಜನಿಗೆ ವಿದುರನ ಮಾತನ್ನು ಹೇಳಿ ಮನೆಯ ಸುತ್ತಲೂ ಪ್ರಾಕಾರ ಮಾಡುವ ನೆಪದಿಂದ ಬಿಲವನ್ನು ಮಾಡಿ ಅದರ ಬಾಗಿಲನ್ನು ಮುಚ್ಚಿ ಹೊರಟುಹೋದನು.

ತರುವಾಯ ಭೀಮಸೇನದೇವರೂ ಪುರೋಚನನೂ ಒಬ್ಬರ ಒಬ್ಬರ ಅವಕಾಶವನ್ನು ನೋಡುತ್ತಾ ಅಂದರೆ ಪುರೋಹಿತನು ನಿದ್ದೆ ಮಾಡಿದರೆ ಅವನ ಸಹಿತವಾಗಿಯೇ ಮನೆಯನ್ನು ಸುಡುವ ಎಂಬ ಭೀಮಸೇನದೇವರೂ ಭೀಮಸೇನದೇವರು ನಿದ್ರೆಯನ್ನು ಮಾಡಿದರೆ ಎಲ್ಲರನ್ನು ಸುಡುವ ಎಂದು ಪುರೋಚನನೂ ಹಾಗೆ. ಆರು ತಿಂಗಳು ವಾಸಮಾಡಿದರು. ಪುರೋಚನನೂ ನಿದ್ರೆಯನ್ನು ಮಾಡಲಿಲ್ಲ. ಭೀಮಸೇನದೇವರೂ ನಿದ್ರೆಯನ್ನು ಮಾಡಲಿಲ್ಲ. ಆಮೇಲೆ ಒಂದುದಿನ ಪುರೋಚನನ ಸಹೋದರಿಯು ತನ್ನ ಐದು ಮಕ್ಕಳನ್ನು ಕರೆದುಕೊಂಡು ಅಲ್ಲಿಗೆ ಬಂದಳು. ಅವಳು ಪಾಂಡವರನ್ನು ವಿಷವನ್ನು ತಿನ್ನಿಸಿ ಕೊಲ್ಲಬೇಕೆಂದು

ಬಂದಳು. ವಿಷಮಿಶ್ರಿತಭಕ್ಷ್ಯಗಳನ್ನು ಕೊಟ್ಟಳು. ಭೀಮಸೇನದೇವರೇ ಎಲ್ಲವನ್ನು ಮೊದಲೇ ಭೋಜನ ಮಾಡಿದ ಕಾರಣ ಅವಳ ಮನೋಭೀಷ್ಟವು ಸಿದ್ಧಿಸಲಿಲ್ಲ. ಅವಳು ತಾನು ಅದಿತಿಯಾಗಬೇಕೆಂದೂ ತನ್ನ ಮಕ್ಕಳು ದೇವತೆಗಳಾಗಬೇಕೆಂದೂ ರುದ್ರದೇವರನ್ನು ತಪಸ್ಸು ಮಾಡಿದ್ದಳು. ಅದಕ್ಕೆ ರುದ್ರದೇವರು 'ನೀನೂ ಮಕ್ಕಳೂ ಒಟ್ಟಿಗೆ ಸಾಯದೆ ಇದ್ದರೆ ನೀನು ಹೇಳಿದಂತೆ ಆಗಲಿ' ಎಂದು ವರವನ್ನು ಕೊಟ್ಟರು. ಆ ಪ್ರಕಾರವಾಗಿ ಆದಿನದಲ್ಲಿ ಅವಳು ಮಕ್ಕಳಿಂದ ಸಹಿತಳಾಗಿ ಮನೆಗೆ ಬರಲು ಪುರೋಚನನು ಈ ದಿವಸ ಬೇಡ. ಇವರೆಲ್ಲರೂ ಇರುವವರಾದುದರಿಂದ ಇನ್ನೊಂದು ದಿನ ಮನೆಗೆ ಬೆಂಕಿಯನ್ನು ಕೊಡುವ ಎಂಬ ಅಭಿಪ್ರಾಯದಿಂದ ರಾತ್ರಿಯಲ್ಲಿ ಚೆನ್ನಾಗಿ ನಿದ್ದೆಯನ್ನು ಮಾಡಿದನು. ಅದನ್ನು ನೋಡಿ ಭೀಮಸೇನದೇವರು ಇದೇ ಸರಿಯಾದ ದಿನವೆಂದು ತಿಳಿದುಕೊಂಡು ಮಲಗಿರುವ ಸಹೋದರರನ್ನು ಕುಂತೀದೇವಿಯನ್ನು ಆ ಒಡ್ಡನು ಮಾಡಿರುವ ಗುಹೆಯೊಳಗೆ ಬೇಗನೆ ಇಟ್ಟರು. ಪುರೋಚನನನ್ನು ಅವನ ಸಹೋದರಿಯನ್ನು ಸಹೋದರಿಯ ಮಕ್ಕಳನ್ನು ಆ ಮನೆಯಿಂದ ಸಹಿತವಾಗಿ ಸುಟ್ಟುಹಾಕಿದರು. ಭಯದಿಂದ ದುರ್ಬಲರಾದ ಸಹೋದರರನ್ನು ಕುಂತೀದೇವಿಯನ್ನು ಹೊತ್ತುಕೊಂಡು ಬಿಲದ್ವಾರದಿಂದ ಹೊರಟುಹೋದರು.



## ಹಿಡಿಂಬನ ವಧೆ [1]

ಭೀಮಸೇನದೇವರು ಒಬ್ಬರನ್ನು ಹೊರತು ಉಳಿದ ಪಾಂಡವರಿಗೂ ಕುಂತೀದೇವಿಗೂ, ಪುರೋಚನನ ಸಂಹಾರವನ್ನು ತಿಳಿದು ದುರ್ಯೋಧನಾದಿಗಳನ್ನು ಭೀಷ್ಮಾದಿಗಳಿಂದ ಕೂಡಿಕೊಂಡು ತಮ್ಮ ಹತ್ತಿರ ಯುದ್ಧಕ್ಕೆ ಬಂದರೆ ಏನಾಗುವುದೋ ಎಂದು ಮಹತ್ತಾದ ಭಯವು ಉಂಟಾಯಿತು. ಭೀಮಸೇನದೇವರು ಭಯರಹಿತ ರಾಗಿದ್ದರೂ ತಾನು ಮುಂದೆ ನಿಂತು ವಯಸ್ಸಿನಿಂದ ದೊಡ್ಡವರಾದ ಭೀಷ್ಮಾದಿ ಗಳೊಡನೆ ಯುದ್ಧ ಮಾಡಲಿಕ್ಕೆ ಅಭಿಪ್ರಾಯವಿಲ್ಲದೆಯೂ ಧರ್ಮರಾಜನ ಮಾತಿನಿಂದಲೂ ಅವರೆಲ್ಲರನ್ನು ಹೊತ್ತುಕೊಂಡು ರಾತ್ರಿಯಲ್ಲಿಯೇ ಹೋದರು. ಹೋಗುವಾಗ ದಾರಿಯಲ್ಲಿ ಗಂಗಾನದಿಯು ಸಿಕ್ಕಿತು. ಅಲ್ಲಿ ಆದಿನ ಪಾಂಡವರು

1. ಮ.ತಾ.ನಿ. ಅ-18, 19

ಬರಬಹುದೆಂದು ವಿದುರನು ನಾವಿಕರನ್ನು ಅಲ್ಲಿ ಇಡಿಸಿದ್ದನು. ಅವರು ವಿದುರನು ಹೇಳಿದ್ದ ಆ ಮ್ಲೇಚ್ಛಭಾಷೆಯ ಮಾತನ್ನು ಹೇಳಿದ ವಿದುರನ ಮಾತಿನಿಂದ ಸಮಾಧಾನಪಡಿಸಿ ಗಂಗಾನದಿಯನ್ನು ದಾಟಿಸಿದರು. ಅಲ್ಲಿಂದ ಮುಂದೆ ಭೀಮಸೇನ ದೇವರು ಎಲ್ಲರನ್ನೂ ಹೊತ್ತುಕೊಂಡೇ ಹೋದರು. ಕುಂತೀದೇವಿಯರನ್ನು ಹೆಗಲಲ್ಲಿ ಇಟ್ಟುಕೊಂಡು ನಕುಲ ಸಹದೇವರನ್ನು ಸೊಂಟದಲ್ಲಿ ಇಟ್ಟುಕೊಂಡು ಧರ್ಮರಾಜ ಅರ್ಜುನರನ್ನು ಕೈಯಲ್ಲಿ ಹಿಡಿದುಕೊಂಡು ಎದೆಯಿಂದ ದಾರಿಯಲ್ಲಿ ಸಿಗುವ ಮರಗಳನ್ನು ಮುರಿಯುತ್ತಾ ಪಾದಗಳಿಂದ ಭೂಮಿಯನ್ನು ಸೀಳುತ್ತಾ ಬಲಿಷ್ಠರಾದ ಭೀಮಸೇನದೇವರು ವಾಯುವೇಗದಿಂದ ಹೊರಟುಹೋದರು.

ಇಲ್ಲಿ ರಾತ್ರಿಯು ಕಳೆದು ಬೆಳಗಾಗಲು ಉರಿಯುತ್ತಿದ್ದ ಮನೆಯನ್ನು ನೋಡಿ ಊರಜನರೆಲ್ಲರೂ ಬೆಂಕಿಯನ್ನು ಆರಿಸಲಿಕ್ಕೆ ಓಡಿಬಂದರು. ಬೆಂಕಿಯನ್ನು ಆರಿಸುತ್ತಾ ಅಲ್ಲಿ ಸತ್ತು ಬಿದ್ದಿದ್ದ ಪುರೋಚನನ್ನು ನೋಡಿದರು. ಜನರು ಅದು ಅರಗಿನ ಮನೆಯೆಂದೂ ತಿಳಿಯುವವರಾಗಿ 'ಪಾಪಿಯಾದ ದುರ್ಯೋಧನನು ಮಾಡಿದ ಕೆಲಸವಿದು. ಪಾಂಡವರನ್ನು ಕೊಲ್ಲುವುದಕ್ಕಾಗಿಯೇ ಹೀಗೆ ಮಾಡಿದನು. ದುರ್ಯೋಧನನು ಧೃತರಾಷ್ಟ್ರನಿಗೆ ತಿಳಿಯುವಂತೆಯೇ ಪಾಂಡವರನ್ನು ಸುಟ್ಟು ಹಾಕಿದನು. ಈಗ ಭೀಷ್ಮದ್ರೋಣ ವಿದುರ ಕೃಪ ಎಲ್ಲರೂ ಧರ್ಮದಲ್ಲಿ ದೃಷ್ಟಿಯಿಲ್ಲದವರಾಗಿರುವಂತೆ ಕಾಣಿಸುತ್ತದೆ. ಎಷ್ಟು ಓದಿಕೊಂಡವರಾದರೂ ಹಣವಂತರ ವಶರಾಗುವರು. ಅನಾಥರಾದ ಧರ್ಮಿಷ್ಠರಾದ ಉತ್ತಮವ್ರತದಲ್ಲಿ ಆಸಕ್ತರಾಗಿರುವ ಸಜ್ಜನರನ್ನು ಕೇಳುವವರಿಲ್ಲ, ಅವರಿಗೆ ದೇವರೇ ಗತಿಯು. ನಾವು ಧೃತರಾಷ್ಟ್ರನಿಗೆ ನಿನ್ನ ಅಭೀಷ್ಟಸಿದ್ಧವಾಯಿತು. ಪಾಂಡವರನ್ನು ಸುಟ್ಟುಹಾಕಿದಿ ಎಂದು ಹೇಳಿಕಳುಹಿಸುವ' ಎಂದು ಹೇಳುತ್ತಾ ಪಾಂಡವರ ದೇಹವು ಎಲ್ಲಿರುವುದು ಎಂದು ಹುಡುಕುತ್ತಾ ಇರುವ ಸಮಯದಲ್ಲಿ ಸುಟ್ಟುಭಸ್ಮವಾಗಿರುವ ಪುರೋಚನನ ಸೋಹೋದರಿಯಾದ ಬೇಡ ಸ್ತ್ರೀಯನ್ನೂ ಅವಳ ಐದು ಜನ ಮಕ್ಕಳನ್ನೂ ನೋಡಿದರು. 'ಇಲ್ಲಿ ನೋಡಿರಿ! ಕುಂತೀದೇವಿಯು ಮಕ್ಕಳಿಂದ ಕೂಡಿಕೊಂಡು ಸತ್ತು ಮಲಗಿರುವಳು. ಕಷ್ಟ' ಎಂದು ಹೇಳಿದರು. ಆ ಸಮಯದಲ್ಲಿ ಆ ಮನೆಯಲ್ಲಿ ಸುರಂಗವನ್ನು ಮಾಡಿದ್ದ ಒಡ್ಡನೂ ಬಂದಿದ್ದನು. ಅವನು ಮೆಲ್ಲನೆ ಒಬ್ಬರೂ ನೋಡದೆ ಇರುವಾಗ ಸುರಂಗದ್ವಾರವನ್ನು ಉಸುಬಿನಿಂದ ಮುಚ್ಚಿಬಿಟ್ಟಿದ್ದನು. ಇದರಿಂದ ಅಲ್ಲಿ ಸುರಂಗವಿರುವುದು ಒಬ್ಬರಿಗೂ ತಿಳಿಯಲೇ ಇಲ್ಲ. ತರುವಾಯ ಊರಿನ ಜನರು ಧೃತರಾಷ್ಟ್ರನಿಗೆ ಪಾಂಡವರೂ ಮಂತ್ರಿಯಾದ ಪುರೋಚನನೂ ಬೆಂಕಿಯಲ್ಲಿ ಸುಟ್ಟುಹೋಗಿ ಮೃತರಾಗಿರುವರೆಂದು

ಹೇಳಿಕಳುಹಿಸಿದರು. ಧೃತರಾಷ್ಟ್ರನು ಅತ್ಯಂತ ಅಪ್ರಿಯವಾದ ಆ ವೃತ್ತಾಂತವನ್ನು ಕೇಳಿ ಅತ್ಯಂತ ದುಃಖವುಳ್ಳವರಾಗಿ ಗಟ್ಟಿಯಾಗಿ ವಿಲಾಪವನ್ನು ಮಾಡಿದನು. ಆದರೆ ಮನಸ್ಸಿನೊಳಗೇ ಸಂತೋಷಪಟ್ಟನು. ಹೊರಗೆ ದುಃಖವನ್ನು ತೋರಿಸಿದನು. ಬೇಸಿಗೆ ಕಾಲದಲ್ಲಿ ಆಳವಾದ ಸರೋವರವು ಒಳಗಿನ ಭಾಗದಲ್ಲಿ ತಣ್ಣಗಾಗಿಯೂ ಮೇಲಿನ ಭಾಗದಲ್ಲಿ ಬಿಸಿಯಾಗಿಯೂ ಇರುವಂತೆ ಅವನಿದ್ದನು. ಪಾಂಡವರಿಗೂ ಕುಂತಿಗೂ ದೇಹಕ್ಕೆ ಸಂಸ್ಕಾರ ಮಾಡಲಿಕ್ಕೆ ಜನರನ್ನು ಕಳುಹಿಸಿದನು.

ತರುವಾಯ ಭೀಷ್ಮಾಚಾರ್ಯರೂ ಧೃತರಾಷ್ಟ್ರನೂ ಅವನ ಮಕ್ಕಳೂ ಪಾಂಡವರಿಗೆ ಜಲವನ್ನು ಬಿಡುವುದಕ್ಕೆ ಗಂಗೆಗೆ ಹೋದರು. ಧೃತರಾಷ್ಟ್ರನು ಜಾತಿಗಳಿಂದ ಕೂಡಿಕೊಂಡು ಪಾಂಡವರಿಗೆ ಗಂಗೆಯಲ್ಲಿ ಜಲವನ್ನು ಕೊಟ್ಟರು. ಎಲ್ಲರೂ ಪಾಂಡವರನ್ನೆಲ್ಲಾ ಸ್ಮರಿಸುತ್ತಾ ಬಹಳವಾಗಿ ಅಳುವವರಾದರು. ಊರಜನರೆಲ್ಲರೂ ಅಳುವವರಾದರು. ವಿದುರನು ಪಾಂಡವರು ಮೃತರಾಗಿಲ್ಲವೆಂದು ತಿಳಿದವನಾದ ಕಾರಣ ಸ್ವಲ್ಪವೇ ದುಃಖವನ್ನು ತೋರಿಸಿದನು. ವಿದುರನು ಧೃತರಾಷ್ಟ್ರನ ಮನಸ್ಸಿನ ಅಭಿಪ್ರಾಯವನ್ನು ತಿಳಿದವನಾಗಿ ಅವನು ಕಪಟದಿಂದ ಅಳುತ್ತಿರುವುದೆಂದು ಯೋಚನೆ ಮಾಡುತ್ತಾ ಅಳುತ್ತಿರುವ ಬಂಧುಗಳೊಡನೆ ತಾನೂ ದುಃಖವನ್ನು ತೋರಿಸುತ್ತಾ ಪಾಂಡವರು ಈಗ ಎಷ್ಟು ದೂರದವರೆಗೆ ಹೋಗಿರಬಹುದು ಎಂದು ಯೋಚಿಸುತ್ತಿದ್ದನು. ಭೀಷ್ಮಾಚಾರ್ಯರು ಮಾತ್ರ ಪಾಂಡವರು ಮೃತರಾದರೆಂದು ತಿಳಿದುಕೊಂಡು ತುಂಬಾ ದುಃಖಪಟ್ಟರು. ಒಬ್ಬೊಬ್ಬರ ಹೆಸರನ್ನೂ ಹೇಳಿಕೊಂಡು ಅತ್ಯಂತ ವಿಲಾಪವನ್ನು ಮಾಡಿದರು. ತಿಲೋದಕವನ್ನು ಬಿಡುತ್ತಾ ಅತ್ಯಂತವಾಗಿ ಅಳುತ್ತಿದ್ದ ಅವರನ್ನು ನೋಡಿ ವಿದುರನು ಮೆಲ್ಲನೆ ಅವರ ಸಮೀಪಕ್ಕೆ ಹೋಗಿ ಕೌರವರೆಲ್ಲರೂ ಕೇಳದಂತೆ ನಡೆದು ವಿಷಯವನ್ನೆಲ್ಲಾ ಮೆಲ್ಲನೆ ಹೇಳಿದನು. ಆಗ ಭೀಷ್ಮಾಚಾರ್ಯರು ಸಂತೋಷಪಟ್ಟು ದೈವೇಚ್ಛೆಯೆಂದರು. ವಿದುರನನ್ನು ಮೆಲ್ಲನೆ ಹೊಗಳಿದರು. ತರುವಾಯ ಭೀಷ್ಮಾಚಾರ್ಯರು ಎಲ್ಲಾ ಕೌರವರಿಂದಲೂ ಊರಿನ ಜನರಿಂದಲೂ ಕೂಡಿಕೊಂಡು ನಗರವನ್ನು ಪ್ರವೇಶಿಸಿದರು. ಕರ್ಣನಿಂದಲೂ ಶಕುನಿಯಿಂದಲೂ ಮಕ್ಕಳಿಂದಲೂ ಸಹಿತನಾದ ಧೃತರಾಷ್ಟ್ರನು ನಿಜವಾಗಿಯೂ ಪಾಂಡವರು ಮೃತರಾದರು ಎಂದು ತಿಳಿದುಕೊಂಡು ಸಂತೋಷವನ್ನು ಹೊಂದಿದನು. ಭೀಷ್ಮಾಚಾರ್ಯರೂ ವಿದುರನೂ ಪಾಂಡವರು ಬದುಕಿದ್ದಾರೆಂದು ತಿಳಿದವರಾದ ಕಾರಣ ಸಂತೋಷವನ್ನು ಹೊಂದಿದರು. ದ್ರೋಣಾಚಾರ್ಯರೇ ಮೊದಲಾದವರು ಸತ್ಯಶೀಲಗುಣ ಸದಾಚಾರಗಳಿಂದ ಪಾಂಡವರು ಬದುಕಿದ್ದರೂ

ಇರಬಹುದು ಎಂದು ಯೋಚಿಸುತ್ತಿದ್ದರು. ಊರಿನ ಜನರು ಪಾಂಡವರು ಶೌರ್ಯಬಲ ಇತ್ಯಾದಿ ಗುಣಗಳಿಂದ ಪಾಂಡವರು ಸೌಖ್ಯದಿಂದ ಇರಬಹುದೆಂದು ಯೋಚಿಸುತ್ತಿದ್ದರು. ಇತರ ಸಾಮಾನ್ಯ ಜನರೂ ಹೆಂಗಸರೂ ಪಾಂಡವರು ಸುಟ್ಟುಹೋದರೋ ಅಥವಾ ಬದುಕಿದ್ದಾರೋ ಎಂದು ಹೇಳುತ್ತಿದ್ದರು.

ಇಲ್ಲಿ ಭೀಮಸೇನದೇವರು ಗಂಗೆಯನ್ನು ದಾಟಿದ ಮೇಲೆ ವೇಗದಿಂದ ಹೋಗುತ್ತಿದ್ದರು. ಅವರ ವೇಗದಿಂದ ಪಾಂಡವರಿಗೆ ಮೂರ್ಛೆಯು ಬಂದಂತೆ ಆಗುತ್ತಿತ್ತು. ಭೀಮಸೇನದೇವರು ಎಲ್ಲರನ್ನು ಹೊತ್ತುಕೊಂಡೇ ಹೋಗುತ್ತಿದ್ದರು. ಕ್ರೂರಮೃಗಪಕ್ಷಿಗಳಿಂದ (ಕೂಡಿದ) ಅರಣ್ಯವನ್ನು ಸಾಯಂಕಾಲದಲ್ಲಿ ಹೋಗಿ ಸೇರಿದರು. ಆಮೇಲೆ ಸಂಧ್ಯಾಕಾಲವಾಯಿತು. ಅವರು ಶ್ರಮದಿಂದಲೂ ನೀರಡಿಕೆ ಯಿಂದಲೂ ಪೀಡಿತರಾಗಿ ನಿದ್ರೆಯು ಹೆಚ್ಚಾಗಿ ಬರಲು ಮುಂದೆ ಹೋಗಲಿಕ್ಕೆ ಸಾಧ್ಯವಾಗಲಿಲ್ಲ. ಅವರೆಲ್ಲರೂ ಆ ಮಹಾವನದಲ್ಲಿ ಪ್ರವೇಶಿಸಿದ್ದರು. ತರುವಾಯ ಕುಂತೀದೇವಿಯು ನೀರಡಿಕೆಯಿಂದ ಪೀಡಿತಳಾಗಿ 'ನಾನು ಪಂಚಪಾಂಡವರ ತಾಯಿಯಾಗಿ ಇದ್ದುಕೊಂಡು ಮಹಾವನದಲ್ಲಿ ಅನಾಥಳಂತೆ ನೀರಡಿಕೆಯಿಂದ ಶ್ರಮಪಡುತ್ತಿರುವೆನು. ನನಗೆ ಇನ್ನು ಮುಂದೆ ಹೋಗಲಿಕ್ಕೆ ಆಗಲಾರರು. ನಾನು ಮರದ ಬುಡದಲ್ಲಿಯೇ ಮಲಗುವೆನು. ನನ್ನನ್ನು ಕೌರವರು ಅಪಹರಿಸಲಿ. ಭೀಮ! ದುರ್ಯೋಧನಾದಿಗಳೆಲ್ಲರೂ ನಿನ್ನ ಮುಂದೆ ನಿಲ್ಲಲಿಕ್ಕೆ ಸಮರ್ಥರೇ ಅಲ್ಲ. ನೀನೇಕೆ ಹೀಗೆ ಭಯಪಡುತ್ತಿರುವಿ? ಸುಮ್ಮನೆ ಅಂಜಿಕೆಯುಳ್ಳವನಾಗಿ ನನ್ನನ್ನು ಮಲಗಲಿಕ್ಕೆ ಬಿಡುವುದಿಲ್ಲವಲ್ಲಾ' ಎಂದು ಹೇಳುತ್ತಾ ಅಳುತ್ತಾ ಹಾಗೆಯೇ ನಿದ್ರಾಪರವಶಳಾದಳು. ಭೀಮಸೇನದೇವರಿಗೆ ತಾಯಿಯ ಮಾತನ್ನು ಕೇಳಿ ಕರುಣೆಯಿಂದ ಮನಸ್ಸು ತುಂಬಾ ನೊಂದಿಕೊಂಡಿತು. ಮತ್ತೆ ಇನ್ನೊಂದು ಘೋರವಾದ ಮಹತ್ತಾದ ವನವನ್ನು ಪ್ರವೇಶಿಸಿ ಬಹುನೆರಳುಳ್ಳ ಸುಂದರವಾದ ಆಲದಮರವನ್ನು ನೋಡಿದರು. ಆ ಮರದ ಬುಡದಲ್ಲಿ ಎಲ್ಲರನ್ನು ಇಟ್ಟು 'ನೀವಿಲ್ಲಿ ವಿಶ್ರಾಂತಿಯನ್ನು ಹೊಂದಿರಿ. ನಾನಿಲ್ಲಿ ನೀರನ್ನು ಹುಡುಕುವೆನು. ನೀರಿನ ಸಂಚರಿಸುವ ಪಕ್ಷಿಗಳು ಕೂಗುವ ಶಬ್ದವು ಕೇಳಿಸುತ್ತಿದೆ. ಇಲ್ಲಿ ಜಲಾಶಯವಿರಬಹುದೆಂದು ತೋರುತ್ತದೆ' ಎಂದು ಹೇಳಿ ಧರ್ಮರಾಜನಿಂದ ಅನುಜ್ಞೆಯನ್ನು ಪಡೆದು ಜಲಾಶಯವಿದ್ದಲ್ಲಿಗೆ ಹೋದರು. ಅಲ್ಲಿ ಸ್ನಾನ ಮಾಡಿ ನೀರನ್ನು ಕುಡಿದು ಕಮಲದ ಎಲೆಗಳಿಂದ ದೊಣ್ಣೆ ಮಾಡಿಕೊಂಡು ಹೊದ್ದುಕೊಳ್ಳುವ ವಸ್ತ್ರದಲ್ಲಿ ಇಟ್ಟುಕೊಂಡು ನೀರನ್ನು ತೆಗೆದುಕೊಂಡು ಬಂದರು. ಆ ಸಮಯದಲ್ಲಿ ಎಲ್ಲರೂ ನಿದ್ರೆಯನ್ನು ಮಾಡುತ್ತಿದ್ದರು. ಅವರನ್ನು ನೋಡಿ ನಿದ್ರೆಯಿಂದ

ಎದ್ದ ಮೇಲೆ ನೀರನ್ನು ಕುಡಿಯಲಿ ಎಂದು ಹೇಳಿ ನೀರನ್ನು ಇಟ್ಟು, ಇವರೆಲ್ಲರೂ ವನದಲ್ಲಿ ಈರೀತಿಯಾಗಿ ಮಲಗಿರುವರೆಂದು ಲೋಕರೀತಿಯಿಂದ ಸ್ವಲ್ಪ ದುಃಖವನ್ನು ನಟನೆ ಮಾಡುತ್ತಾ ಅವರನ್ನು ರಕ್ಷಿಸುತ್ತಾ ಜಾಗ್ರತೆಯಿಂದ ಕುಳಿತಿದ್ದರು.

ಆ ವನದ ಹತ್ತಿರವೇ ವನದಲ್ಲಿ ಹಿಡಿಂಬ ಎಂಬ ರಾಕ್ಷಸನು ವಾಸಿಸುತ್ತಿದ್ದನು. ಅವನು ಅತ್ಯಂತ ಕ್ರೂರನು. ಮನುಷ್ಯರ ಮಾಂಸವನ್ನು ತಿನ್ನುವವನು. ಮಹಾಪರಾಕ್ರಮಿಯು. ಮಳೆಗಾಲದ ಮೇಘದಂತೆ ಕಪ್ಪಾಗಿದ್ದನು. ಕೆಂಪಾದ ಕಣ್ಣುಳ್ಳವನು. ಭಯಂಕರವಾಗಿ ಕಾಣಿಸುವವನು. ದೊಡ್ಡ ಹೊಟ್ಟೆಯಿದ್ದಿತು. ಅದು ಜೋಲುತ್ತಿತ್ತು. ಕೆಂಪಾದ ಮೀಸೆ ತಲೆಕೂದಲು ಉಳ್ಳವನು. ದೊಡ್ಡಮರದಂತೆ ದೊಡ್ಡದಾದ ದೇಹವುಳ್ಳವನು. ಗೂಟದಂತೆ ಕಿವಿಗಳುಳ್ಳವನು. ಅವನು ದೈವೇಚ್ಛೆಯಿಂದ ಅಲ್ಲೇ ಹತ್ತಿರ ಇರುವ ಒಂದು ಸಾಲ ಎಂಬ ಮರದ ಮೇಲೆ ಹತ್ತಿದವನು ಮಲಗಿದ್ದ ಪಾಂಡವರನ್ನೂ ಕೂತುಕೊಂಡ ಭೀಮಸೇನದೇವರನ್ನು ನೋಡಿದನು. ಮಾಂಸದ ಆಸೆಯುಳ್ಳವನಾಗಿ ಮನುಷ್ಯರ ವಾಸನೆಯು ಮೂಸುತ್ತಾ ತನ್ನ ತಂಗಿಯನ್ನು ಕೂಗಿ 'ಆ ಮನುಷ್ಯರನ್ನೆಲ್ಲಾ ಸಂಹರಿಸಿ ತೆಗೆದುಕೊಂಡು ಬಾ. ನಮ್ಮ ಪ್ರದೇಶದಲ್ಲಿ ಮಲಗಿರುವ ಅವರಿಂದ ನಿನಗೆ ಭಯವು ಬೇಡ. ಆ ಮನುಷ್ಯರ ಮಾಂಸವನ್ನು ಕೆತ್ತಿ ಇಬ್ಬರೂ ಸೇರಿ ತಿನ್ನುವ ಆಮೇಲೆ ತಾಳ ಬಡೆಯುತ್ತಾ ಕುಣಿಯುವ' ಎಂದು ಹೇಳಿದನು.

(ಇದೇ ಹಿಡಂಬನು ಪೂರ್ವದಲ್ಲಿ ಹಂಸಡಿಭಿಕರಿಗೆ ಸಹಾಯಕನಾಗಿ ಒಂದು ಅಕ್ಷೌಹಿಣೀ ರಾಕ್ಷಸ ಸೈನ್ಯದಿಂದ ಸಹಿತನಾಗಿ ಕೃಷ್ಣಪರಮಾತ್ಮನ ಹತ್ತಿರ ಯುದ್ಧಕ್ಕೆ ಬಂದಿದ್ದನು. ಅವನು ಯಾದವ ಸೈನ್ಯವನ್ನು ಭಕ್ಷಿಸುತ್ತಾ ಬರಲು ಉಗ್ರಸೇನನೂ ವಸುದೇವನೂ ಅವನಿಗೆ ಬಾಣಗಳನ್ನು ಬಿಡುತ್ತಾ ಬಂದರು. ರುದ್ರದೇವರಿಂದ ಒಬ್ಬರಿಂದಲೂ ಪರಾಜಯವು ಬರದಿರುವಂತೆ ವರವನ್ನು ಪಡೆದಿದ್ದ ಹಿಡಿಂಬನು ಅವರಿಬ್ಬರ ರಥಗಳನ್ನೂ ಆಯುಧಗಳನ್ನೂ ನುಂಗಿದವನಾಗಿ ಅವರಿಬ್ಬರನ್ನೂ ಹಿಡಿದು 'ನೀವಿಬ್ಬರೂ ಬೇಗನೆ ನನ್ನ ಬಾಯಿಯೊಳಗೆ ಹೋಗಿರಿ' ಎಂದು ಹೇಳಿದನು. ಆ ಸಮಯದಲ್ಲಿ ಬಲರಾಮದೇವರು ಗದೆಯಿಂದ ಹಂಸನೊಡನೆ ಯುದ್ಧ ಮಾಡುತ್ತಿದ್ದರು. ಅವರು ಹಂಸನನ್ನು ಬಿಟ್ಟು ಹಿಡಿಂಬನಿದ್ದಲ್ಲಿಗೆ ಓಡಿಬಂದರು. ಹಿಡಿಂಬನು ಬಲರಾಮದೇವರು ಬಂದದ್ದನ್ನು ನೋಡಿ ಅವರಿಬ್ಬರನ್ನು ಬಿಟ್ಟು ಬಲರಾಮದೇವರಿದ್ದಲ್ಲಿಗೆ ಬಂದು ಕೋಪದಿಂದ ಬಲರಾಮದೇವರ ಎದೆಗೆ ಗುದ್ದಿದನು. ಅವರಿಬ್ಬರೂ ಬಲಿಷ್ಠರು. ಬಹುಹೊತ್ತು ಮುಷ್ಟಿಯಿಂದ ಯುದ್ಧಮಾಡಿಕೊಂಡರು. ತರುವಾಯ ಬಲರಾಮದೇವರು ಅವನ ಮೊಳಕಾಲಿನಲ್ಲಿ ಹಿಡಿದರು.

ಆಮೇಲೆ ಅವನನ್ನು ತೂಕಿಬಿಸಾಡಿದರು. ಅವನು ಅಲ್ಲಿಂದ ಎರಡೂವರೆ ಮೈಲು ದೂರದಲ್ಲಿ ಹೋಗಿ ಬಿದ್ದನು. ಅವನು ಆಮೇಲೆ ಅಲ್ಲಿಂದ ಯುದ್ಧಕ್ಕೆ ಹೋಗಲೇ ಇಲ್ಲ. ಸೈನಿಕರನ್ನು ಹಂಸಡಿಭಿಕರನ್ನು ಬಿಟ್ಟು ವನಕ್ಕೇ ಹೋದನು. ಅವನು ಈಗ ಈ ವನದಲ್ಲಿ ವಾಸಮಾಡುತ್ತಿದ್ದನು. ಅವನು ಪೂರ್ವದಲ್ಲಿ ಹೇಳಿದ ರೀತಿಯಾಗಿ ತನ್ನ ತಂಗಿಯಾದ ಹಿಡಿಂಬಿಯೊಡನೆ ಹೇಳಿದನು.)

ಆ ಹಿಡಿಂಬಿಯು ಪೂರ್ವದಲ್ಲಿ ಇಂದ್ರದೇವರ ಪಟ್ಟಣವಾದ ಅಮರಾವತಿಯ ಸಂಪತ್ತಿಗೆ ಅಭಿಮಾನಿನಿಯಾದ ಶ್ರೀಯೆಂದು ಹೆಸರುಳ್ಳ ಒಬ್ಬ ಅಪ್ಸರಸ್ತ್ರೀಯು ಇಂದ್ರದೇವರ ಪ್ರೀತಿಪಾತ್ರಳು. ಅವಳು ಸ್ಪರ್ಧೆಯಿಂದ ಶಚೀದೇವಿಯ ಶಾಪದಿಂದ ರಾಕ್ಷಸದೇಹವನ್ನು ಹೊಂದಿದಳು. ಅವಳು ಭಾರತೀದೇವಿಯನ್ನು ತಪಸ್ಸು ಮಾಡಿದಳು. ಅವಳ ಕಠಿನವಾದ ತಪಸ್ಸಿನಿಂದ ಸಂತುಷ್ಟರಾದ ಭಾರತೀದೇವಿಯರು ಅವಳಲ್ಲಿ ತನ್ನ ಆವೇಶವನ್ನು ಕೊಟ್ಟು ತನ್ನ ಪತಿಯಾದ ವಾಯುದೇವರ ಸಂಗಮದಿಂದ ಶಾಪ ಬಿಡುಗಡೆಯಾಗುವಂತೆ ವರವನ್ನು ಕೊಟ್ಟಿದ್ದರು.

ಆ ಹಿಡಿಂಬಿಯು ಈ ಪ್ರಕಾರವಾದ ಅಣ್ಣನ ಮಾತನ್ನು ಕೇಳಿ ಅವಸರದಿಂದ ಒಂದು ಮರದಿಂದ ಮತ್ತೊಂದು ಮರದಮೇಲೆ ಹಾರುತ್ತಾ ಪಾಂಡವರು ಮಲಗಿರುವಲ್ಲಿಗೆ ಬಂದಳು. ಅಲ್ಲಿ ಕುಂತೀದೇವಿಯೊಡನೆ ಮಲಗಿರುವ ಪಾಂಡವ ರನ್ನು ಜಾಗ್ರತೆಯಿಂದ ಕಾಯುತ್ತಿರುವ ಭೀಮಸೇನದೇವರನ್ನು ನೋಡಿದಳು. ಪರಮರೂಪವಂತರಾದ ಭೀಮಸೇನದೇವರನ್ನು ನೋಡುವ ಮಾತ್ರದಿಂದಲೇ ಆ ರಾಕ್ಷಸಿಯು ಕಾಮಪರವಶಳಾದಳು. ಅವಳಾದರೂ 'ನಾನು ಅಣ್ಣನು ಹೇಳಿದಂತೆ ಮಾಡಲಾರೆನು. ನನಗೆ ಪತಿಸ್ನೇಹವು ಬಲವಾಗಿದೆ. ಅಷ್ಟು ಸಹೋದರ ಸ್ನೇಹವಿಲ್ಲ. ಇವರನ್ನು ಕೊಂದು ನಾನೂ ಅಣ್ಣನೂ ಒಂದು ಮುಹೂರ್ತಕಾಲಮಾತ್ರ ಸಂತೋಷಪಡಬಹುದು. ಸಂಹರಿಸದೆ ನಾನು ಬಹುಕಾಲ ಸಂತೋಷದಿಂದ ಇರುವೆನು' ಎಂದು ಮನಸ್ಸಿನಲ್ಲಿ ಹೇಳಿಕೊಂಡು ಭಯಂಕರವಾದ ರಾಕ್ಷಸರೂಪವನ್ನು ಬಿಟ್ಟು ಸುಂದರವಾದ ಮನುಷ್ಯಸ್ತ್ರೀಯ ರೂಪವನ್ನು ಧರಿಸುವವಳಾಗಿ ಮೆಲ್ಲಮೆಲ್ಲನೆ ಭೀಮಸೇನದೇವರ ಸಮೀಪಕ್ಕೆ ಬಂದಳು. ಪರಮರೂಪವತಿಯಾದ ಅವಳನ್ನು ನೋಡಿ ಭೀಮಸೇನದೇವರು ಆಶ್ಚರ್ಯಪಟ್ಟಂತೆ ನಟನೆ ಮಾಡಿದರು. ಅವಳು ಸರ್ವಾಭರಣಗಳಿಂದ ಅಲಂಕೃತಳಾಗಿ ಲಜ್ಜೆಯಿಂದ ಬಗ್ಗಿಕೊಂಡು ಬಂದವಳಾಗಿ ಮುಗುಳು ನಗೆಯುಳ್ಳವಳಾಗಿ ಭೀಮಸೇನದೇವರೊಡನೆ 'ಪುರುಷ ಶ್ರೇಷ್ಠನೇ! ನೀನು ಎಲ್ಲಿಂದ ಬಂದಿರುವೆ? ನೀನು ಯಾರು? ಈ ಮಲಗಿರುವ ದೇವತೆಗಳಂತೆ ರೂಪ

ವುಳ್ಳವರು ಇವರು ಯಾರು? ಈ ಮಲಗಿರುವ ಸುಕುಮಾರಿಯಾದ ಯುವತಿಯು ಯಾರು? ಇದು ರಾಕ್ಷಸರು ವಾಸಿಸುವ ವನವೆಂದು ನಿಮಗೆ ತಿಳಿಯಲಾರದು. ಇಲ್ಲಿ ಪಾಪಿಯಾದ ಹಿಡಿಂಬ ಎಂಬ ರಾಕ್ಷಸನು ವಾಸಮಾಡುತ್ತಿರುವನು. ಅವನ ತಂಗಿಯು ನಾನು. ಅವನು ನಿಮ್ಮ ಮಾಂಸವನ್ನು ತಿನ್ನಬೇಕೆಂಬ ಆಸೆಯಿಂದ ನನ್ನನ್ನು ಇಲ್ಲಿಗೆ ಕಳುಹಿಸಿರುವನು. ನಾನಾದರೋ ದೇವತೆಯಂತೆ ಇರುವ ನಿನ್ನನ್ನು ನೋಡಿ ನಿನ್ನನ್ನೇ ಪತಿಯನ್ನಾಗಿ ಅಪೇಕ್ಷಿಸುವೆನು. ಇನ್ನೊಬ್ಬ ಗಂಡನನ್ನು ಇಚ್ಛಿಸುವುದಿಲ್ಲ. ಇದನ್ನು ತಿಳಿದು ನಿನ್ನಲ್ಲಿ ಕಾಮುಕಳಾದ ನನ್ನನ್ನು ಅಂಗೀಕರಿಸು. ನಾನು ನಿನ್ನನ್ನು ಈ ಮನುಷ್ಯ ಭಕ್ಷಕ ರಾಕ್ಷಸನಿಂದ ಕಾಪಾಡುತ್ತೇನೆ. ನಾವು ಪರ್ವತ ದುರ್ಗಗಳಲ್ಲಿ ಹೋಗಿ ವಾಸಮಾಡುವ. ನನಗೆ ಗಂಡನಾಗು ನೀನು ನನ್ನನ್ನು ಕೈಬಿಡುವೆಯಾದರೆ ಪ್ರಾಣದಿಂದ ಉಳಿಯಲಾರೆನು. ನಾನು ಇಚ್ಛಾನುಸಾರವಾಗಿ ಅಂತರಿಕ್ಷದಲ್ಲಿಯೂ ಸಂಚರಿಸುವೆನು. ಅಲ್ಲಲ್ಲಿ ನನ್ನೊಡನೆ ಪರಮಪ್ರೀತಿಯನ್ನು ಹೊಂದು' ಎಂದಳು.

ಆಗ ಭೀಮಸೇನದೇವರು 'ಇವರು ಮಲಗಿರುವವರು ನನ್ನ ಅಣ್ಣನು. ಅಣ್ಣನಿಗೆ ಮದುವೆಯಾಗುವ ಮೊದಲು ನಾನು ಮದುವೆಯಾಗಲಾರೆನು. ಈ ಮಲಗಿರುವ ತಾಯಿಯನ್ನು ಸಹೋದರರನ್ನು ಮಲಗಿರುವವರನ್ನು ರಾಕ್ಷಸನ ಭೋಜನಕ್ಕೆ ಕೊಟ್ಟು ನನ್ನಂತೆ ಇರುವ ಯಾವ ಪುರುಷನು ಕಾಮಪೀಡಿತನಾಗಿ ಹೋಗುವನು?' ಎಂದರು.

ಹಿಡಿಂಬಿಯು 'ಒಬ್ಬರಾದ ನಿಮ್ಮನ್ನೂ ನಿಮ್ಮ ತಾಯಿಯನ್ನು ನಾನು ರಕ್ಷಿಸುವೆನು. ಈ ಸಹೋದರರನ್ನು ಮಾತ್ರ ಬಿಟ್ಟುಬಿಡಿರಿ. ನನ್ನ ಬೆನ್ನಿನ ಮೇಲೆ ಹತ್ತಿಕೂತುಕೊಳ್ಳಿರಿ' ಎಂದಳು.

ಭೀಮಸೇನದೇವರು 'ರಾಕ್ಷಸಿ! ನಾನು ಸಹೋದರರನ್ನು ಬಿಟ್ಟು ಬದುಕಲಿಕ್ಕೆ ಇಚ್ಛಿಸುವುದಿಲ್ಲ. ನೀನು ಬಂದಂತೆ ಹೊರಟುಹೋಗು. ನನಗೆ ಅಪ್ರಿಯವಾಗಿ ಮಾತಾಡುತ್ತಿರುವಿ' ಎಂದರು.

ಹಿಡಿಂಬಿಯು 'ನಿನಗೆ ಪ್ರಿಯವು ಯಾವುದೋ ಅದನ್ನು ನಾನು ಮಾಡುವೆನು. ಇವರೆಲ್ಲರನ್ನೂ ಎಬ್ಬಿಸು, ಎಲ್ಲರನ್ನೂ ರಾಕ್ಷಸನಿಂದ ರಕ್ಷಿಸುತ್ತೇನೆ' ಎಂದಳು.

ಭೀಮಸೇನದೇವರು 'ರಾಕ್ಷಸಿ! ವನದಲ್ಲಿ ಸುಖವಾಗಿ ಮಲಗಿರುವ ಸಹೋದರ ರನ್ನು ತಾಯಿಯನ್ನು ದುರಾತ್ಮನಾದ ನಿನ್ನ ಅಣ್ಣನ ಭಯದಿಂದ ಎಬ್ಬಿಸಲಾರೆನು. ರಾಕ್ಷಸರು ಯಾರೂ ನನ್ನ ಪರಾಕ್ರಮವನ್ನು ಸಹಿಸಲು ಸಮರ್ಥರಲ್ಲ. ಮನುಷ್ಯರೋ ಗಂಧರ್ವರೋ ಯಕ್ಷರೋ ಯಾರೂ ನನ್ನ ಪರಾಕ್ರಮವನ್ನು ಸಹಿಸಲಾರರು. ನೀನು ಹೊರಟುಹೋಗು. ಬೇಕಾದರೆ ನಿಲ್ಲು. ಏನು ಬೇಕಾದರೂ ಮಾಡು ಅಥವಾ

ನರಭಕ್ಷಕನಾದ ನಿನ್ನ ಅಣ್ಣನನ್ನು ಕಳುಹಿಸು' ಎಂದರು.

ಹಿಡಿಂಬಿಯು ಮೊದಲು ಕಾಮವಶಳಾಗಿ ಭೀಮಸೇನದೇವರೊಡನೆ ತನ್ನನ್ನು ಮದುವೆಯಾಗುವಂತೆ ಹೇಳಿಕೊಂಡಳು. ಆಮೇಲೆ ಭೀಮಸೇನದೇವರನ್ನು ಹೊಂದಿ ಶಚೀದೇವಿಯ ಶಾಪವನ್ನು ಬಿಡಿಸಿಕೊಳ್ಳಬೇಕೆಂಬ ಅಭಿಪ್ರಾಯದಿಂದಲೂ ಭೀಮ ಸೇನದೇವರೊಡನೆ ತನ್ನನ್ನು ಮದುವೆಯಾಗುವಂತೆ ಪ್ರಾರ್ಥಿಸಿಕೊಂಡಳು. ಮತ್ತು ತನಗೆ ಭವಿಷ್ಯತ್‌ಜ್ಞಾನವಿದೆಯೆಂದು ತಿಳಿಸುವುದಕ್ಕಾಗಿ 'ಈಗ ನೀನು ನನ್ನ ಮಾತನ್ನು ಕೇಳುವುದಿಲ್ಲ. ನಾಡಿದ್ದು ಶ್ರೀವೇದವ್ಯಾಸದೇವರೇ ಬಂದು ನನ್ನನ್ನು ನಿನಗೆ ಮದುವೆ ಮಾಡಿಸುವರು. ಆಗ ನನ್ನ ಅಭೀಷ್ಟದಂತೆ ನೀನು ಮಾಡುವಿ' ಎಂದು ಹೇಳಿದಳು.

ಈರೀತಿಯಾಗಿ ಹಿಡಿಂಬಿಯು ಮಾತಾಡುತ್ತಾ ಬಹುಹೊತ್ತಾಗಲು ಹಿಡಿಂಬನು ಆ ಮರದಿಂದ ಕೆಳಗೆ ಇಳಿದು ''ಭೋಜನ ಮಾಡುವ ಆಸೆಯುಳ್ಳ ನನಗೆ ಯಾವ ದುರ್ಬುದ್ಧಿಯುಳ್ಳವನು ವಿಘ್ನ ಮಾಡುತ್ತಿರುವನು? ಯಾರು ನನ್ನ ಭಯರಹಿತ ನಾಗಿರುವನು? ನಾನು ಕಳುಹಿಸಿದ ಹಿಡಿಂಬಿಯು ಯಾಕೆ ಬರಲಿಲ್ಲ?'' ಎಂದು ಹೇಳುತ್ತಾ ಬಂದನು. ಬರುತ್ತಿರುವ ಭಯಂಕರನಾದ ಅವನನ್ನು ನೋಡಿ ಹಿಡಿಂಬಿಯು ಭಯವುಳ್ಳವಳಾಗಿ ಭೀಮಸೇನದೇವರೊಡನೆ 'ಈ ನರಭಕ್ಷಕನು ಕೋಪಿಸಿಕೊಂಡು ಬರುತ್ತಿರುವನು. ನಾನು ಹೇಳಿದಂತೆ ಮಾಡು. ನಾನು ಇಚ್ಛಾನು ಸಾರವಾಗಿ ಹಾರಿಹೋಗುವೆನು. ರಾಕ್ಷಸಬಲವುಳ್ಳವನಾಗಿರುವೆನು. ಇವರನ್ನು ನಿನ್ನ ತಾಯಿಯನ್ನೂ ಎಬ್ಬಿಸು. ನನ್ನ ಬೆನ್ನ ಮೇಲೆ ಕೂತುಕೊಳ್ಳಿರಿ. ನಿಮ್ಮನ್ನೆಲ್ಲಾ ಎತ್ತಿಕೊಂಡು ನಾನು ಆಕಾಶಮಾರ್ಗದಲ್ಲಿ ಹಾರಿಹೋಗುವೆನು' ಎಂದು ಹೇಳಿದಳು.

ಭೀಮಸೇನದೇವರು 'ಸುಂದರಿ! ಭಯಪಡಬೇಡ. ನಾನು ಇರುವಾಗ ಇವನು ಒಂದಕ್ಕೂ ಉಪಯೋಗವಿಲ್ಲ. ನೀನು ನೋಡುತ್ತಿರುವಂತೆಯೇ ನಾನು ಇವನನ್ನು ಕೊಲ್ಲುವೆನು. ಈ ರಾಕ್ಷಸಾಧಮನು ನನಗೆ ಪ್ರತಿಭಟನಲ್ಲ. ನನ್ನ ಕೈಗಳನ್ನು ತೊಡೆ ಗಳನ್ನೂ ವಿಶಾಲವಾದ ಎದೆಯನ್ನು ನೋಡು. ಇಂದ್ರದೇವರ ಪರಾಕ್ರಮದಂತೆ ಇರುವ ನನ್ನ ಪರಾಕ್ರಮವನ್ನು ನೋಡುವಿ. ನಾನು ಮನುಷ್ಯನೆಂದು ತಿಳಿದುಕೊಂಡು ಅವಮಾನ ಮಾಡಬೇಡ' ಎಂದರು.

ಹಿಡಿಂಬಿಯು 'ಪುರುಷಶ್ರೇಷ್ಠನೇ! ದೇವತೆಯಂತೆ ಇರುವ ನಿನ್ನನ್ನು ನಾನು ಅವಮಾನ ಮಾಡಲಾರೆನು. ಅನೇಕ ಮನುಷ್ಯರಲ್ಲಿಯೇ ಇವನ ಪ್ರಭಾವವನ್ನು ನೋಡಿರುವೆನು. ಆದುದರಿಂದ ಹೀಗೆ ಹೇಳುವೆನು' ಎಂದಳು.

ಈರೀತಿಯಾಗಿ ಭೀಮಸೇನದೇವರು ಹೇಳುತ್ತಿರುವ ಮಾತುಗಳನ್ನೆಲ್ಲಾ ಹಿಡಿಂಬನು ಕೇಳಿದನು. ಸರ್ವಾಭರಣಗಳನ್ನು ಧರಿಸಿರುವ ತೆಳ್ಳಗಿರುವ ಸೀರೆಯನ್ನು ಧರಿಸಿರುವ ಸುಂದರವಾದ ಮಾನುಷರೂಪವನ್ನು ಧರಿಸಿರುವ ಹಿಡಿಂಬಿಯನ್ನು ನೋಡಿ ಕಾಮುಕಳಾಗಿರುವಳು ಎಂದು ತಿಳಿದುಕೊಂಡು ತಂಗಿಯ ಮೇಲೆ ಬಹು ಕೋಪವುಳ್ಳವನಾಗಿ ಕಣ್ಣನ್ನು ಅರಳಿಸಿಕೊಂಡು 'ಭೋಜನ ಮಾಡುವ ಆಸೆಯುಳ್ಳ ನನಗೆ ಯಾವ ದುರ್ಬುದ್ಧಿಯುಳ್ಳವನು ವಿಘ್ನ ಮಾಡುವನು? ಹಿಡಿಂಬಿ'. ನನ್ನ ಕೋಪದಿಂದ ಭಯಪಡುವುದಿಲ್ಲವೇ? ಅಯೋಗ್ಯಳೇ! ಕಾಮುಕಳೇ! ನಿನಗೆ ಧಿಕ್ಕಾರ ವಿರಲಿ. ನನಗೆ ಅಪ್ರಿಯವನ್ನು ಮಾಡುವಿಯಾ? ನಮ್ಮ ಪೂರ್ವಿಕರಾದ ರಾಕ್ಷಸರಿಗೆಲ್ಲಾ ಅಪಕೀರ್ತಿಯನ್ನು ತಂದು ಹಾಕಿದಿ. ಯಾವ ಇವರನ್ನು ಆಶ್ರಯಿಸಿ ನನಗೆ ಅಪ್ರಿಯ ವನ್ನು ಮಾಡಿದಿಯೋ ಆ ಇವರೆಲ್ಲರನ್ನೂ ನಿನ್ನನ್ನು ಕೊಂದು ಹಾಕುವೆನು' ಎಂದನು.

ಹಿಡಿಂಬನು ಈರೀತಿಯಾಗಿ ಹೇಳಿ ಕಣ್ಣು ಕೆಂಪಗೆ ಮಾಡಿಕೊಂಡು ಹಲ್ಲನ್ನು ಕಡಿಯುತ್ತಾ ಕೊಲ್ಲಲಿಕ್ಕೆ ಎಂದು ಬಂದನು. ಜನರಹಿತವಾದ ಆ ವನದಲ್ಲಿ ಗರ್ಜನೆ ಮಾಡುತ್ತಿದ್ದ ಅವನನ್ನು ನೋಡಿ ಭೀಮಸೇನದೇವರು ಸಹೋದರರ ಮತ್ತು ತಾಯಿಯ ನಿದ್ದೆಯನ್ನು ಕೆಡಿಸಬಾರದೆಂದು ಅವನನ್ನು ಬೆದರಿಸಿದರು. ನಿಲ್ಲು ನಿಲ್ಲು ಎಂದು ಹೇಳಿದರು. ಭೀಮಸೇನದೇವರು ರಾಕ್ಷಸನೊಡನೆ ನಗುತ್ತಾ 'ಹಿಡಿಂಬ! ಸುಖವಾಗಿ ಮಲಗಿರುವ ಇವರನ್ನು ಏಕೆ ಎಬ್ಬಿಸುವಿ? ಬೇಗನೇ ನನ್ನ ಬಳಿಗೆ ಬಾ. ನನಗೆ ಬಡಿಯುವವನಾಗು. ತಂಗಿಯು ನಿನಗೇನು ಅಪಕಾರ ಮಾಡಿರುವಳು! ಅವಳ ಮೇಲೆ ಕೋಪಿಸಿಕೊಂಡು ಕೊಲ್ಲಲಿಕ್ಕೆ ಹೋಗುವಿ? ನಾನು ಅಪರಾಧ ಮಾಡಿರುವವ ನಿರುವಾಗ ಅವಳನ್ನೇಕೆ ಕೊಲ್ಲುವೆ? ನಿನ್ನ ತಂಗಿಯು ತನ್ನ ವಶಳಾಗಿ ನನ್ನನ್ನು ಕಾಮಿಸಿದವಳಲ್ಲ. ತನ್ನ ಶರೀರದಲ್ಲಿ ಇರುವ ಕಾಮನಿಂದ ಪ್ರೇರಿತಳಾಗಿ ಇರುವಳು. ದುರಾಚಾರಿಯೇ! ನಿನ್ನ ತಂಗಿಯು ನಿನ್ನ ಆಜ್ಞೆಯಿಂದಲೇ ಇಲ್ಲಿಗೆ ಬಂದು ನನ್ನ ರೂಪವನ್ನು ನೋಡಿ ನನ್ನಲ್ಲಿ ಕಾಮುಕಳಾಗಿರುವಳು. ನಿನಗೊಂದು ಅಪರಾಧ ವನ್ನು ಮಾಡಿಲ್ಲ. ಕಾಮನಿಂದ ಪ್ರೇರಿತಳಾಗಿರುವ ಇವಳನ್ನು ನಿಂದಿಸಬಾರದು. ದುಷ್ಟನೇ! ನಾನು ಇರುತ್ತಿರಲು ಈ ಹೆಂಗಸನ್ನು ಕೊಲ್ಲಬೇಡ. ನೀನೊಬ್ಬನು ನನ್ನೊಬ್ಬನೊಡನೆ ಯುದ್ಧಕ್ಕೆ ಬಾ. ಈಗ ನನ್ನ ಬಲದಿಂದ ನಿನ್ನ ತಲೆಯು ಒಡೆದುಹೋಗಲಿ. ಯುದ್ಧದಲ್ಲಿ ನನ್ನಿಂದ ಸತ್ತ ನಿನ್ನ ದೇಹವನ್ನು ನರಿನಾಯಿಗಳು ಸೆಳೆಯಲಿ. ಸಿಂಹವು ಗಜವನ್ನು ಕೊಂದು ಸೆಳೆಯುವಂತೆ ನಾನು ನಿನ್ನನ್ನು ಸೆಳೆಯುತ್ತಿರುವುದನ್ನು ನಿನ್ನ ತಂಗಿಯು ನೋಡುವಳು. ನೀನು ಸತ್ತಮೇಲೆ ಉಪದ್ರವವಿಲ್ಲದೆ ಈ ವನದಲ್ಲಿ ಜನರು ಸಂಚರಿಸುವರು' ಎಂದು ಹೇಳಿದರು.

ಹಿಡಿಂಬನು 'ಎಲೋ ಮನುಷ್ಯನೇ! ಸುಮ್ಮನೆ ಗರ್ಜನೆ ಮಾಡಿ ಏನು ಪ್ರಯೋಜನವು? ಬಾಯಿಯಲ್ಲಿ ಹೇಳಿಕೊಳ್ಳಬೇಡ. ಕಾರ್ಯದಿಂದ ಮಾಡಿ ತೋರಿಸು. ನಿನ್ನನ್ನು ಬಲಿಷ್ಠನೆಂದು ತಿಳಿದುಕೊಂಡಿರುವಿ. ನನ್ನೊಡನೆ ಯುದ್ಧಮಾಡಿ ನಿನ್ನ ಬಲವನ್ನು ತಿಳಿಯುವಿ. ಮೊದಲು ಇವರನ್ನೆಲ್ಲಾ ಕೊಲ್ಲಲಾರೆನು. ಇವರು ಸುಖವಾಗಿ ಮಲಗಲಿ. ಅಪ್ರಿಯವನ್ನು ಮಾತಾಡುವ ನಿನ್ನನ್ನೇ ಮೊದಲು ಕೊಲ್ಲುವೆನು. ನಿನ್ನ ದೇಹದ ರಕ್ತವನ್ನು ಪಾನಮಾಡಿ ಆಮೇಲೆ ಈ ಮಲಗಿದವರನ್ನು ಕೊಂದು ಕೊನೆಗೆ ನನಗೆ ಅಪ್ರಿಯಮಾಡಿರುವ ಇವಳನ್ನು ಕೊಲ್ಲುವೆನು' ಎಂದು ಹೇಳಿ ಕೋಪಿಸಿಕೊಂಡು ಭೀಮಸೇನದೇವರ ಕೈಹಿಡಿದುಕೊಂಡು ಓಡಿದನು. ಭಯಂಕರ ಪರಾಕ್ರಮವುಳ್ಳ ಭೀಮಸೇನದೇವರು ನಗುತ್ತಾ ಅವನ ಕೈಯನ್ನು ಹಿಡಿದರು. ಅವನನ್ನು ಹಿಡಿದು ಸೆಳೆದರು. ಸಿಂಹವು ಕ್ಷುದ್ರಮೃಗವನ್ನು ಸೆಳೆಯುವಂತೆ ಅವನನ್ನು ಸೆಳೆದರು. ತರುವಾಯ ರಾಕ್ಷಸನು ಕೋಪಿಸಿಕೊಂಡು ಭೀಮಸೇನದೇವರನ್ನು ಕಟ್ಟಿಕೊಂಡು ಭಯಂಕರವಾಗಿ ಗರ್ಜನೆ ಮಾಡಿದನು. ಮತ್ತು ಸಹೋದರರಿಗೆ ಎಚ್ಚರವಾಗದೆ ಇರಲಿ ಎಂದು ದೂರಕ್ಕೆ ಎಳೆದುಹೋದರು. ಇಬ್ಬರೂ ಒಬ್ಬರನ್ನೊಬ್ಬರು ಎಳೆದುಕೊಂಡರು. ಅಲ್ಲಿದ್ದ ಮರಲತೆಗಳನ್ನೆಲ್ಲಾ ಮುರಿದರು. ಮರಗಳನ್ನೆಲ್ಲಾ ಮುರಿದು ಮುರಿದು ಬಡಿದುಕೊಂಡರು. ಮರಗಳನ್ನೆಲ್ಲಾ ಮುಗಿಯಲು ಕಲ್ಲುಗಳನ್ನೂ ಪರ್ವತಶಿಖರಗಳನ್ನೂ ಪರ್ವತಗಳನ್ನೂ ಕಿತ್ತಿಕಿತ್ತಿ ಹಾಕಿಕೊಂಡರು. ಅವರ ಯುದ್ಧದಿಂದ ಆ ವನವು ಆಮೆಯ ಬೆನ್ನಿನಂತೆ ನುಣ್ಣಗೆ ಆಯಿತು. ಅವರ ಭಯಂಕರ ಶಬ್ದದಿಂದ ಮಲಗಿದ್ದವರೆಲ್ಲರೂ ಎಚ್ಚೆತ್ತರು.

ಎದ್ದವರು ತಮ್ಮ ಸಮೀಪದಲ್ಲೇ ನಿಂತಿದ್ದ ಹಿಡಿಂಬಿಯ ಅತಿಸೌಂದರ್ಯವನ್ನು ನೋಡಿ ಆಶ್ಚರ್ಯವುಳ್ಳವರಾದರು. ಕುಂತಿಯು ಅವಳನ್ನು ನೋಡಿ ಅವಳ ರೂಪ ದಿಂದ ಆಶ್ಚರ್ಯವುಳ್ಳವಳಾಗಿ ಮಧುರವಾಣಿಯಿಂದ 'ದೇವತಾಪುತ್ರಿಯಂತೆ ಇರುವ ಸುಂದರಿ! ನೀನು ಯಾರು? ಯಾರಿಗೆ ಸೇರಿದವಳು? ಯಾವ ಕಾರ್ಯದಿಂದ ಇಲ್ಲಿಗೆ ಬಂದಿರುವಿ? ಎಲ್ಲಿಂದ ಬಂದಿರುವಿ? ನೀನು ಈ ವನದ ದೇವತೆಯೇ? ಅಥವಾ ಅಪ್ಸರ ಸ್ತ್ರೀಯೋ? ಇಲ್ಲಿ ಏಕೆ ನಿಂತಿರುವಿ? ಎಲ್ಲವನ್ನೂ ಹೇಳು' ಎಂದು ಕೇಳಿದಳು.

ಅದಕ್ಕೆ ಹಿಡಿಂಬಿಯು 'ನೀಲಮೇಘದಂತೆ ಇರುವ ಯಾವ ಈ ದೊಡ್ಡ ಕಾಡನ್ನು ನೋಡುತ್ತಿರುವಿರೋ ಇದು ಹಿಡಿಂಬ ಎಂಬ ರಾಕ್ಷಸನ ಮತ್ತು ನನ್ನ ವಾಸಸ್ಥಳವು. ನಾನು ಆ ರಾಕ್ಷಸಶ್ರೇಷ್ಠನ ತಂಗಿಯು. ನನ್ನ ಅಣ್ಣನು 'ನನ್ನನ್ನು, ಮಕ್ಕಳಿಂದ ಸಹಿತಳಾದ ನಿನ್ನನ್ನು' ಕೊಲ್ಲಬೇಕೆಂದು ಹೇಳಿ ಕಳುಹಿಸಿರುವನು. ಕ್ರೂರಬುದ್ಧಿಯುಳ್ಳ ಅವನ

ಮಾತಿನಿಂದ ನಾನು ಇಲ್ಲಿಗೆ ಬಂದು ಬಂಗಾರದಂತೆ ಇರುವ ಮಹಾಬಲಿಷ್ಠನಾದ ನಿನ್ನ ಮಗನನ್ನು ನೋಡಿದೆನು. ನೋಡುವ ಮಾತ್ರದಿಂದಲೇ ನನ್ನ ಮನಸ್ಸು ಮನ್ಮಥವಿಕಾರ ಕ್ಕೊಳಗಾದೆನು. ಆಮೇಲೆ ನಾನು ನಿನ್ನ ಮಗನನ್ನು ಗಂಡನನ್ನಾಗಿ ಸ್ವೀಕರಿಸಿಕೊಂಡೆನು. ಅವನನ್ನು ಇಲ್ಲಿಂದ ಕರೆದುಕೊಂಡು ಹೋಗಬೇಕೆಂದು ಬಹಳ ಪ್ರಯತ್ನ ಮಾಡಿದೆನು. ಸಾಧ್ಯವಾಗಲಿಲ್ಲ. ನಾನು ತಡಮಾಡುತ್ತಿರುವುದನ್ನು ತಿಳಿದು ನನ್ನ ಅಣ್ಣನೇ ನಿನ್ನ ಮಕ್ಕಳನ್ನೆಲ್ಲಾ ಕೊಲ್ಲುವುದಕ್ಕಾಗಿ ತಾನೇ ಇಲ್ಲಿಗೆ ಬಂದನು. ಆಗ ನಿನ್ನ ಮಗನು ಇಲ್ಲಿಂದ ಬಲಾತ್ಕಾರದಿಂದ ದೂರಕ್ಕೆ ಎಳೆದುಕೊಂಡು ಹೋದನು. ಈಗ ಅವರಿಬ್ಬರು ಗರ್ಜನೆ ಮಾಡುತ್ತಾ ಯುದ್ಧಮಾಡುತ್ತಾ ಇದ್ದಾರೆ. ನೋಡು' ಎಂದು ಹೇಳಿದಳು. ಅವಳ ಮಾತನ್ನು ಕೇಳಿ ಧರ್ಮರಾಜನೂ ಅರ್ಜುನನೂ ನಕುಲ ಸಹದೇವರೂ ಎದ್ದರು. ಭಯಂಕರವಾಗಿ ಯುದ್ಧಮಾಡಿಕೊಳ್ಳುತ್ತಿದ್ದ ಹಿಡಿಂಬನನ್ನು ಭೀಮಸೇನದೇವರನ್ನು ನೋಡಿದರು. ಆಗ ಅರ್ಜುನನು ತಾನು ಯುದ್ಧಕ್ಕೆ ಸಹಾಯಕ್ಕೆ ಬರುವೆನೆಂದನು. ಭೀಮಸೇನದೇವರು 'ಅವಸರಪಡಬೇಡ. ಸುಮ್ಮನೆ ನೋಡುತ್ತಾ ಇರು. ನನ್ನ ಬಾಹುಮಧ್ಯಕ್ಕೆ ಸಿಕ್ಕಿದ ಈ ದೈತ್ಯನು ಬದುಕಿಹೋಗ ಲಾರನು. ಇವನನ್ನು ಬದುಕಿರಲಿಕ್ಕೆ ಬಿಡಲಾರೆನು. ನೀನು ಭಯಪಡಬೇಡ' ಎಂದರು. ಅರ್ಜುನನು 'ಈ ರಾಕ್ಷಸನೊಡನೆ ಯಾಕೆ ಸಾವಕಾಶಮಾಡುವುದು? ಸಂಧ್ಯಾಕಾಲವು ಬರುತ್ತಿರುವುದು. ಸಂಧ್ಯಾಕಾಲದಲ್ಲಿ ರಾಕ್ಷಸರಿಗೆ ಬಲವು ಹೆಚ್ಚುವುದು. ಇವನು ಮಾಯೆಯನ್ನು ತೋರಿಸುವ ಮೊದಲೇ ಕೊಂದು ಹಾಕಬೇಕು' ಇತ್ಯಾದಿ ರೀತಿಯಾಗಿ ಹೇಳಿದನು.

ಈರೀತಿಯಾಗಿ ಅರ್ಜುನನು ಹೇಳಲು ಭೀಮಸೇನದೇವರು ರೋಷವುಳ್ಳವ ರಾಗಿ ತನ್ನ ಮಹಾಸಾಮರ್ಥ್ಯವನ್ನು ತೋರಿಸಿದರು. ಅವನ ದೇಹವನ್ನು ಎತ್ತಿ ನೂರು ಸುತ್ತು ತಿರುಗಿಸಿದರು. 'ಮನುಷ್ಯ ಮಾಂಸದಿಂದ ವ್ಯರ್ಥವಾಗಿ ಪುಷ್ಟನಾಗಿರುವಿ. ಮನುಷ್ಯ ಮಾಂಸದಿಂದ ವ್ಯರ್ಥವಾಗಿ ಬೆಳೆದಿರುವಿ. ಈಗ ವ್ಯರ್ಥವಾಗಿ ಸಾಯಲಿಕ್ಕೆ ಅರ್ಹನಾಗಿರುವಿ. ಈಗ ವ್ಯರ್ಥವಾಗಿ ಸಾಯುವಿ. ಈ ವನಕ್ಕೆ ಕ್ಷೇಮವನ್ನು ಉಂಟುಮಾಡುವೆನು. ಪುನಃ ನೀನು ಮನುಷ್ಯರನ್ನು ತಿನ್ನದಂತೆ ಮಾಡುವೆನು' ಎಂದು ಹೇಳಿ ಭೂಮಿಯಲ್ಲಿ ಎತ್ತಿಹಾಕಿ ಬಾಹುಗಳಿಂದ ಪೀಡಿಸಿ ಪಶುವನ್ನು ಕೊಲ್ಲುವಂತೆ ಕೊಂದರು. ಭೀಮಸೇನದೇವರಿಂದ ಸಂಹರಿಸಲ್ಪಟ್ಟ ಆ ರಾಕ್ಷಸನು ಆ ವನದಲ್ಲೆಲ್ಲಾ ವ್ಯಾಪಿಸುವಂತೆ ಗಟ್ಟಿಯಾಗಿ ಗರ್ಜನೆ ಮಾಡಿದನು. ಈ ರೀತಿಯಾಗಿ ಭೀಮಸೇನ ದೇವರು ರುದ್ರದೇವರ ವರದಿಂದ ರಕ್ಷಿತನಾದ ಆ ದೈತ್ಯನನ್ನು ಸಂಹರಿಸಿದರು.

ಅದನ್ನು ನೋಡಿ ಎಲ್ಲರೂ ಸಂತೋಷಪಟ್ಟರು. ಧರ್ಮರಾಜಾದಿಗಳು ಸಂತೋಷದಿಂದ ಭೀಮಸೇನದೇವರನ್ನು ಸತ್ಕರಿಸಿದರು. ತರುವಾಯ ಅರ್ಜುನನು ಭಯಂಕರ ಪರಾಕ್ರಮವುಳ್ಳ ಭೀಮಸೇನದೇವರನ್ನು ಪುನಃ ಸತ್ಕಾರಮಾಡಿ 'ಈ ವನಕ್ಕೆ ಹತ್ತಿರವೇ ನಗರವು ಇರುವಂತೆ ತಿಳಿಯುತ್ತದೆ. ಆದುದರಿಂದ ನಾವು ಬೇಗನೇ ಹೋಗುವ. ದುರ್ಯೋಧನನಿಗೆ ನಮ್ಮ ವಿಷಯವು ತಿಳಿಯಬಾರದು' ಎಂದನು. ಅದನ್ನು ಕೇಳಿ ಎಲ್ಲರೂ ಸರಿಯೆಂದು ಹೇಳಿ ತಾಯಿಯಿಂದ ಸಹಿತರಾಗಿ ಅಲ್ಲಿಂದ ಹೊರಟುಹೋದರು. ಅವರ ಹಿಂದೆಯೇ ಹಿಡಿಂಬಿಯೂ ಹೋದಳು.



## ಹಿಡಿಂಬಿಯ ಮದುವೆ [1]

ಪಾಂಡವರೂ ಕುಂತೀದೇವಿಯೂ ಮುಂದೆ ಹೋಗುತ್ತಿರಲು ಅವರ ಹಿಂದೆಯೇ ಮೌನದಿಂದ ಹಿಡಿಂಬಿಯೂ ಹೋದಳು. ಹಿಡಿಂಬಿಯು ಕುಂತಿಗೂ ಧರ್ಮರಾಜನಿಗೂ ನಮಸ್ಕರಿಸಿ ತರುವಾಯ ಭೀಮಸೇನದೇವರನ್ನು ಸತ್ಕರಿಸಿ 'ನಾನು ನಿನ್ನನ್ನು ನೋಡುವ ಮಾತ್ರದಿಂದಲೇ ಮನ್ಮಥವಶಳಾಗಿದ್ದೇನೆ. ಅಣ್ಣನು ಹೇಳಿದ ಕ್ರೂರವಾದ ಮಾತನ್ನು ಬಿಟ್ಟು ನಿನ್ನನ್ನೇ ಅನುಸರಿಸುವವಳಾದೆನು. ನೀನು ರಾಕ್ಷಸನಾದ ನನ್ನ ಅಣ್ಣನಲ್ಲಿ ತೋರಿಸಿದ ಪರಾಕ್ರಮವನ್ನು ನೋಡಿ ನಿನ್ನನ್ನೇ ಸೇವಿಸಬೇಕೆಂದು ಆಸೆಯುಳ್ಳವ ನಾಗಿರುವೆನು' ಎಂದಳು. ಆಗ ಭೀಮಸೇನದೇವರು 'ರಾಕ್ಷಸರು ಕಪಟಿಗಳು. ವೈರವನ್ನು ಜ್ಞಾಪಿಸಿಕೊಂಡೇ ಇರುವರು. ಹಿಡಿಂಬಿಯೇ! ನೀನೂ ನಿನ್ನ ಅಣ್ಣನು ಹೋದ ಮಾರ್ಗಕ್ಕೇ ಹೋಗು' ಎಂದರು.

ಆಗ ಧರ್ಮರಾಜನು 'ಭೀಮ! ಕೋಪವುಳ್ಳವನಾದರೂ ಹೆಂಗಸನ್ನು ಕೊಲ್ಲದಿರು. ನಮ್ಮ ದೇಹವನ್ನು ರಕ್ಷಿಸಿಕೊಳ್ಳುವುದಕ್ಕಿಂತ ಹೆಚ್ಚಾಗಿ ಧರ್ಮವನ್ನು ರಕ್ಷಿಸಬೇಕು. ಕೊಲ್ಲಬೇಕೆಂಬ ಅಭಿಪ್ರಾಯದಿಂದ ಬಂದ ಮಹಾಬಲಿಷ್ಠನಾದ ರಾಕ್ಷಸನನ್ನು ಸಂಹರಿಸಿದಿ. ಅವನ ತಂಗಿಯಾದ ಇವಳು ಕೋಪಿಸಿಕೊಂಡರೂ ನಮಗೆ ಏನು ಮಾಡುವಳು?' ಎಂದನು.

ತರುವಾಯ ಹಿಡಿಂಬಿಯು ಕುಂತಿಗೂ ಧರ್ಮರಾಜನಿಗೂ ನಮಸ್ಕರಿಸಿ 'ಅಮ್ಮ! ಹೆಂಗಸರಿಗೆ ಮನ್ಮಥವಿಕಾರದಿಂದ ಆಗುವ ಶ್ರಮವನ್ನು ನೀನು ತಿಳಿದವಳಾಗಿರುವಿ. ಆ

1. ಮ.ತಾ.ನಿ. ಅ-18, 19

ಶ್ರಮವು ನನಗೀಗ ನಿನ್ನ ಮಗನ ನಿಮಿತ್ತವಾಗಿ ನನಗೆ ಬಂದಿರುವುದು. ಅದನ್ನು ನಾನಿಷ್ಟು ಹೊತ್ತು ತಡೆದುಕೊಂಡು ಇದ್ದೆನು. ನನಗೆ ಸುಖವಾಗುವ ಕಾಲವು ಬಂದಿರುವುದು. ನಾನು ಮಿತ್ರರನ್ನು ನನ್ನ ಧರ್ಮವನ್ನೂ ಸ್ವಜನರನ್ನೂ ಬಿಟ್ಟು ನಿನ್ನ ಮಗನನ್ನೇ ಗಂಡನನ್ನಾಗಿ ಸ್ವೀಕರಿಸುವೆನು. ನೀನೂ ನಿನ್ನ ಮಗನೂ ನನ್ನನ್ನು ನಿರಾಕರಿಸುವಿರಾದರೆ ನಾನು ಬದುಕಲಾರೆನು. ಹೇಗಾದರೂ ಮಾಡಿ ನನ್ನನ್ನು ನಿನ್ನ ಮಗನೊಡನೆ ಸೇರಿಸು. ನಾನು ಕೇವಲ ರಾಕ್ಷಸಿಯಲ್ಲ. ಸಾಲ ಕಟಂಕಟೀ ಎಂಬ ಅಪ್ಸರ ಸ್ತ್ರೀಯು ರಾಕ್ಷಸನಿಗೆ ತಂಗಿಯಾಗಿರುವೆನು. ನಾನು ನಿಮ್ಮೆಲ್ಲರ ಸೇವೆಯನ್ನು ಮಾಡುವೆನು. ನಿಮ್ಮನ್ನು ಬೆನ್ನಿನಲ್ಲಿ ಹೊತ್ತುಕೊಂಡು ಹೋಗುವೆನು. ಭೀಮಸೇನ ದೇವರು ನನ್ನನ್ನು ಮದುವೆಯಾಗುವಂತೆ ಮಾಡಿರಿ. ನೀವೆಲ್ಲರೂ ನನ್ನಲ್ಲಿ ಅನುಗ್ರಹ ಮಾಡಿರಿ. ನಾನು ದಿವ್ಯಜ್ಞಾನದಿಂದ ಇಷ್ಟರವರೆಗೆ ನಡೆದ ವಿಷಯವನ್ನು ಇನ್ನು ಮುಂದೆ ನಡೆಯುವ ವಿಷಯವನ್ನು ತಿಳಿದಿರುವೆನು. ನಿಮಗೆ ಶ್ರೇಷ್ಠವಾದ ಸರೋವರವು ಸಮೀಪದಲ್ಲಿಯೇ ಇದೆ. ನಾಳೆ ಬೆಳಿಗ್ಗೆ ನೀವು ಶ್ರೀವೇದವ್ಯಾಸದೇವರನ್ನು ನೋಡಿ ದುಃಖರಹಿತರಾಗುವಿರಿ. ನೀವು ದುರ್ಯೋಧನನಿಂದಾಗಿ ರಾಜ್ಯವನ್ನು ಬಿಟ್ಟು ವಾರಣಾವತಕ್ಕೆ ಹೋದದ್ದನ್ನು ಅಲ್ಲಿ ಅರಗಿನಮನೆಯನ್ನು ಸುಟ್ಟದ್ದನ್ನೂ ವಿದುರನು ನಿಮ್ಮನ್ನು ರಕ್ಷಿಸಿದ್ದನ್ನೂ ನಾನು ಜ್ಞಾನದೃಷ್ಟಿಯಿಂದ ತಿಳಿದಿರುವೆನು. ನಾಳೆ ವೇದವ್ಯಾಸದೇವರು ಬಂದು ಶಾಲಿಹೋತ್ರನ ಸ್ಥಾನದಲ್ಲಿ ನಿಮ್ಮನ್ನು ವಾಸಮಾಡಲಿಕ್ಕೆ ಹೇಳುವರು. ಅಲ್ಲಿ ಛಳಿಮಳೆ ಬಿಸಿಲುಗಳನ್ನು ತಡೆಯುವ ದೊಡ್ಡ ಮರವಿರುವುದು. ಅಲ್ಲಿಯ ಸರೋವರದ ನೀರನ್ನು ಕುಡಿಯುವ ಮಾತ್ರದಿಂದಲೇ ಹಸಿವೆದಾಹಗಳು ನಾಶವನ್ನು ಹೊಂದುವುವು. ಶಾಲಿಹೋತ್ರ ಎಂಬ ಋಷಿಯು ತಪಸ್ಸುಮಾಡಿ ಆ ಸರೋವರವನ್ನು ಮರವನ್ನು ಉಂಟುಮಾಡಿರುವನು. ಅಲ್ಲಿ ಹಂಸ ಮೊದಲಾದ ಪಕ್ಷಿಗಳ ಧ್ವನಿಯನ್ನು ಹಾಡಿನ ಧ್ವನಿಯನ್ನು ಕೇಳಬಹುದು' ಎಂದು ಹೇಳಿದಳು.

ಅವಳ ಮಾತನ್ನು ಕೇಳಿ ಕುಂತಿಯು ಧರ್ಮರಾಜನೊಡನೆ 'ನೀನು ಧರ್ಮಿಷ್ಠರಲ್ಲಿ ಶ್ರೇಷ್ಠನು. ನನ್ನ ಮಾತನ್ನು ಕೇಳು. ಈ ರಾಕ್ಷಸಿಯು ಧರ್ಮವನ್ನೇ ಹೇಳುತ್ತಿರುವಳು. ಆದುದರಿಂದ ಇವಳು ಭೀಮನಿಗೆ ಹೆಂಡತಿಯಾಗಲಿ' ಎಂದಳು.

ಆಗ ಧರ್ಮರಾಜನು 'ಹಿಡಿಂಬಿ! ನೀನು ಹೇಳಿದ ಮಾತುಗಳೆಲ್ಲ ಸತ್ಯವು. ನೀನು ನಾನು ಹೇಳಿದಂತೆ ಧರ್ಮದಿಂದ ಇರಬೇಕು. ನೀನು ನಿತ್ಯವೂ ಸ್ನಾನಮಾಡಿ ಶುದ್ಧಳಾಗಿ ಸ್ನಾನಮಾಡಿದ ಶುದ್ಧನಾದ ಭೀಮಸೇನನನ್ನು ಸೂರ್ಯೋದಯವಾದ ಮೇಲೆ ಕರೆದುಕೊಂಡು ಹೋಗು. ಹಗಲೆಲ್ಲಾ ಇಚ್ಛಾನುಸಾರವಾಗಿ ಅವನೊಡನೆ

ವಿಹಾರ ಮಾಡುತ್ತಾ ಇರು. ರಾತ್ರಿಯಾಗಲು ನಮ್ಮ ಹತ್ತಿರ ಕರೆದುಕೊಂಡು ಬರಬೇಕು. ಸಂಧ್ಯಾಕಾಲಕ್ಕಿಂತ ಮೊದಲೇ ತಂದು ಬಿಡಬೇಕು. ಈರೀತಿಯಾಗಿ ಗರ್ಭವುಂಟಾಗು ವವರೆಗೆ ವಿಹಾರವನ್ನು ಮಾಡುತ್ತಿರು. ನೀನು ನಿತ್ಯವೂ ಸೇವಾ ಮಾಡುತ್ತಾ ಇರಬೇಕು. ನಿತ್ಯವೂ ಅನುಕೂಲಳಾಗಿ ಇರಬೇಕು' ಎಂದನು.

ಈರೀತಿಯಾಗಿ ಧರ್ಮರಾಜನ ಮಾತನ್ನು ಕೇಳಿ ಹಿಡಿಂಬಿಯು ಕುಂತಿಯನ್ನು ಹೆಗಲಮೇಲೆ ಕೂತುಕೊಳ್ಳಿಸಿಕೊಂಡು ನಕುಲಸಹದೇವರಿಂದ ಮುಂದೆ ಮಾಡಲ್ಪಟ್ಟವಳಾಗಿ ಹೋದಳು. ಹೀಗೆ ಎಲ್ಲರೂ ಮನೋಹರವಾದ ಶಾಲಿಹೋತ್ರ ಸರೋವರಕ್ಕೆ ಹೋದರು. ಅಲ್ಲಿದ್ದ ಮರದ ಬುಡಕ್ಕೆ ಹೋಗಿ ಹಿಡಿಂಬಿಯು ಮನೆಯನ್ನು ಗುಡಿಸುವಂತೆ ಗುಡಿಸಿ ಪಾಂಡವರಿಗೊಂದು ಪರ್ಣಶಾಲೆಯನ್ನು ಮಾಡಿದಳು. ಹಾಗೆಯೇ ತನಗೂ ಕುಂತಿಗೂ ಒಂದು ಪಾರ್ಶ್ವದಲ್ಲಿ ಮತ್ತೊಂದು ಪರ್ಣಶಾಲೆಯನ್ನು ಮಾಡಿದಳು. ತರುವಾಯ ಪಾಂಡವರು ಸ್ನಾನಮಾಡಿ ಸಂಧ್ಯಾವಂದನೆಯನ್ನು ಮಾಡಿ ನೀರನ್ನು ಕುಡಿದರು. ಶಾಲಿಹೋತ್ರನು ಪಾಂಡವರು ಹಸಿವೆಯಿಂದ ಬಂದಿರುವರೆಂದು ತಿಳಿದು ಅವಳಿಗೆ ಭೋಜನವೂ ಪಾನೀಯವೂ ಸಿಗುವಂತೆ ಮಾಡಿದರು. ತರುವಾಯ ಪಾಂಡವರೆಲ್ಲರೂ ಕುಂತೀದೇವಿಯೊಡನೆ ಶ್ರಮಪರಿಹಾರ ಮಾಡಿಕೊಳ್ಳುತ್ತಾ ಅರಗಿನಮನೆಯ ವಿಷಯವಾಗಿಯೂ ಹಿಡಿಂಬನ ವಿಷಯವಾಗಿ ಮಾತಾಡಿಕೊಂಡರು. ಬಹುಮಾತುಗಳು ಮುಗಿದಮೇಲೆ ಕುಂತಿಯು 'ಭೀಮ! ನಿನ್ನ ತಂದೆಯಾದ ಪಾಂಡು ಮಹಾರಾಜರಂತೆ ಅಣ್ಣನಾದ ಧರ್ಮರಾಜನು ನಿನಗೆ ಬಹುಮಾನಕ್ಕೆ ಅರ್ಹನು. ತಾಯಿಯಾದ ನಾನೂ ನಿನಗೆ ಬಹುಮಾನಕ್ಕೆ ಅರ್ಹಳು. ಆದುದರಿಂದ ಪಾಂಡುಮಹಾರಾಜರ ಹಿತಕ್ಕಾಗಿಯೂ ನನಗೆ ಹಿತ ಕಾರ್ಯವನ್ನು ಮಾಡು. ಪಾಪಿಯಾದ ದುರ್ಯೋಧನನು ಮಾಡಿದ ದುಷ್ಕರ್ಮಕ್ಕೆ ಪ್ರತೀಕಾರವೇನು ಮಾಡುವುದೆಂದು ತಿಳಿಯುವುದಿಲ್ಲ. ಕೆಲವು ದಿವಸಗಳು ಹೋದಮೇಲೆ ನಮಗೆ ಯೋಗಕ್ಷೇಮವುಂಟಾಗುವುದು. ಆದುದರಿಂದ ನಾವು ಕೆಲವು ಸಮಯದವರೆಗೆ ಈ ದುರ್ಗಪ್ರದೇಶದಲ್ಲಿಯೇ ವಾಸಮಾಡುವ. ಭೀಮಸೇನ! ಇದೊಂದು ಮಹತ್ತಾದ ಧರ್ಮಸಂಕಟವು. ಏರ್ಪಟ್ಟಿದೆ. ಈ ರಾಕ್ಷಸಿಯು ನಿನ್ನನ್ನು ನೋಡುವ ಮಾತ್ರದಿಂದ ಮನ್ಮಥವಿಕಾರವುಳ್ಳವಳಾಗಿ ನಿನ್ನನ್ನು ಮದುವೆ ಮಾಡಿಸಬೇಕೆಂದು ನನ್ನೊಡನೆಯೂ ಧರ್ಮರಾಜನೊಡನೆಯೂ ಪ್ರಾರ್ಥಿಸುತ್ತಿದ್ದಾಳೆ. ಆದುದರಿಂದ ಅವಳಿಗೆ ಸತ್ಪುತ್ರನಾಗುವಂತೆ ಅನುಗ್ರಹಿಸು. ನಿನ್ನ ಮಗನು ನಮಗೆ ಶ್ರೇಯಸ್ಸನ್ನು ಉಂಟುಮಾಡುವನು. ನಮಗೆ ಮಾತಿಗೆ ಪ್ರತಿಮಾತನ್ನು ಆಡಬೇಡ' ಎಂದು ಹೇಳಿದಳು.

ಈರೀತಿಯಾಗಿ ಹೇಳಿದರೂ ಭೀಮಸೇನದೇವರು ಅಣ್ಣನಿಗಿಂತ ಮೊದಲು ತಮ್ಮನು ಮದುವೆಯಾಗುವುದು ಧರ್ಮವಲ್ಲವೆಂಬ ಅಭಿಪ್ರಾಯದಿಂದ ಆ ಮಾತನ್ನು ಅಂಗೀಕರಿಸಲಿಲ್ಲ. ಆಗ ಅಲ್ಲಿಗೆ ಶ್ರೀವೇದವ್ಯಾಸ ದೇವರು ಬಂದರು. ಅವರನ್ನು ನೋಡಿದ ಕೂಡಲೇ ಕುಂತೀದೇವಿಯರಿಂದ ಸಹಿತರಾದ ಪಾಂಡವರು ಎದ್ದು ನಿಂತು ಪರಮಸಂತೋಷವುಳ್ಳವರಾಗಿ ಅವರ ಪೂಜೆಯನ್ನು ಮಾಡಿ ಅವರ ಅಪ್ಪಣೆಯಿಂದ ಕೂತುಕೊಂಡರು. ಆಗ ಹಿಡಿಂಬಿಯೂ ಬಂದು ವೇದವ್ಯಾಸದೇವರಿಗೆ ನಮಸ್ಕರಿಸಿದಳು. ಆಗ ವೇದವ್ಯಾಸದೇವರು ಭಕ್ತಿಯಿಂದ ತಲೆಯನ್ನು ಬಗ್ಗಿಸಿಕೊಂಡು ಕೂತಿರುವ ಪಾಂಡವರನ್ನು ನೋಡಿ ಭೀಮಸೇನದೇವರೊಡನೆ 'ದೇವಲೋಕದ ಕಾಂತಿಗೆ ಕಾರಣಳಾದ ಅಪ್ಸರಸ್ತ್ರೀಯಾದ ಇವಳನ್ನು ನೀನು ಈಗ ಮದುವೆಯಾಗು. ಒಂದು ಮಗುವು ಹುಟ್ಟಿದ ಮೇಲೆ ಇವಳು ಮಗುವನ್ನು ಕರೆದುಕೊಂಡು ಹೋಗಲಿ' ಎಂದು ಆಜ್ಞಾಪಿಸಿದರು. ಅಣ್ಣನಿಗಿಂತ ಮೊದಲು ತಮ್ಮ ಮದುವೆಯಾಗಬಾರದೆಂದು ಧರ್ಮಶಾಸ್ತ್ರವಿದ್ದರೂ ಶ್ರೀಭಗವಂತನ ಆಜ್ಞೆಯು ಸರ್ವಧರ್ಮಶಾಸ್ತ್ರಕ್ಕೂ ಅಪವಾದವಾದ ಕಾರಣ ಭೀಮಸೇನದೇವರು 'ಹಾಗೆಯೇ ಆಗಲಿ' ಎಂದು ಹೇಳಿ ಹಿಡಿಂಬಿಯನ್ನು ಮದುವೆಯಾದರು. ವೇದವ್ಯಾಸದೇವರು ಪಾಂಡವರಿಗೆಲ್ಲ ಸಮಾಧಾನವನ್ನು ಹೇಳಿ ಕುಂತೀದೇವಿಗೂ 'ನಿನ್ನ ಮಕ್ಕಳು ಶತ್ರುಗಳನ್ನು ಜಯಿಸಿ ಧರ್ಮದಿಂದ ರಾಜ್ಯವನ್ನು ಪರಿಪಾಲಿಸುವರು' ಎಂದು ಸಮಾಧಾನಪಡಿಸಿ 'ನಾನು ಪುನಃ ಇಲ್ಲಿಗೆ ಬರುವುದನ್ನು ಎದುರುನೋಡುತ್ತಾ ಇಲ್ಲಿಯೇ ಒಂದು ಕಾರ್ಯಕ್ಕಾಗಿ ಆರು ತಿಂಗಳು ವಾಸಮಾಡಿರಿ. ಇಲ್ಲಿ ಹಸಿವೆದಾಹವೊಂದೂ ಆಗಲಾರದು. ಈ ಸರೋವರವು ಶಾಲಿಹೋತ್ರನ ತಪಸ್ಸಿನಿಂದ ನಿರ್ಮಿತವಾದದ್ದು' ಎಂದು ಹೇಳಿ ಕುಂತಿಯೊಡನೆ 'ಇವಳು ನಿನ್ನ ಸೊಸೆ. ಇವಳಿಗೆ ಕಮಲಪಾಲಿಕಾ ಎಂದು ಹೆಸರು. ಇವಳು ಭೀಮನ ವಶಳಾಗಿ ಇದ್ದುಕೊಂಡು ಗಂಡುಕೂಸನ್ನು ಹಡೆಯುತ್ತಾಳೆ. ಇವಳಿಂದ ಹುಟ್ಟಿದ ಮಗನಿಂದ ನೀವು ಎಷ್ಟೋ ಆಪತ್ತುಗಳಲ್ಲಿ ಉದ್ಧೃತರಾಗುವಿರಿ. ನೀವು ಇಲ್ಲಿಯೇ ಇರುವವರಾಗಿರಿ' ಎಂದು ಹೇಳಿ ಬಂದಂತೆಯೇ ಹೊರಟು ಹೋದರು.

ವೇದವ್ಯಾಸದೇವರು ಹೊರಟುಹೋದಮೇಲೆ ಪಾಂಡವರು ದುಃಖರಹಿತ ರಾಗಿ ಆ ಆಲದ ಮರದ ಬುಡದಲ್ಲಿಯೇ ಸುಖದಿಂದ ವಾಸಮಾಡುತ್ತಿದ್ದರು. ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಾ ತಪಸ್ಸು ಮಾಡುತ್ತಿದ್ದರು. ಕಮಲಪಾಲಿಕಾ ಎಂದು ಹೆಸರುಳ್ಳ ಹಿಡಿಂಬಿಯು ಅವರ ಅನುಜ್ಞೆಯನ್ನು ಪಡೆದು ಭೀಮಸೇನದೇವರನ್ನು ಹೊತ್ತು

ಕೊಂಡು ಹೋಗಿ ನಂದನ ಮೊದಲಾದ ದೇವತೆಗಳ ವನಗಳಲ್ಲಿ ಹಗಲೆಲ್ಲಾ ವಿಹಾರವನ್ನು ಮಾಡಿ ರಾತ್ರಿಯಾಗಲು ಪಾಂಡವರ ಸಮೀಪಕ್ಕೇ ಬರುತ್ತಿದ್ದಳು. ರಾತ್ರಿಯಲ್ಲಿ ಭೀಮಸೇನದೇವರು ನಿತ್ಯವೂ ಸಹೋದರರೊಡನೆ ಮಲಗುವರು. ಹಿಡಿಂಬಿಯು ರಾತ್ರಿಯಲ್ಲಿ ಕುಂತೀದೇವಿಯ ಸೇವೆಯನ್ನು ಮಾಡುತ್ತಾ ಅವಳ ಸಮೀಪದಲ್ಲೇ ಇರುತ್ತಿದ್ದಳು. ಅವಳಿಗೆ ಬೇಕಾದದ್ದನ್ನು ತಂದುಕೊಡುತ್ತಿದ್ದಳು. ಹಾಗೆಯೇ ಆರುತಿಂಗಳಾಯಿತು. ಹಿಡಿಂಬಿಯು ಭೀಮಸೇನದೇವರಿಂದ ಗರ್ಭವನ್ನು ಧರಿಸಿದಳು. ಆಗಲೇ ಹಡೆದಳು. ರಾಕ್ಷಸಿಯರು ಆಗಲೇ ಗರ್ಭವನ್ನು ಧರಿಸುವರು. ಆಗಲೇ ಹಡೆಯುವರು. ಇಚ್ಛಾನುಸಾರ ರೂಪ ಧರಿಸುವರು. ಬಹುರೂಪವುಳ್ಳವ ರಾಗುವರು. ಹಾಗೆಯೇ ಹಿಡಿಂಬಿಯು ಆಗಲೇ ಕೂಸನ್ನು ಹಡೆದಳು. ಹುಟ್ಟುವಾಗ ಕೂಸಿನ ತಲೆಯಲ್ಲಿ ಕೂದಲೇ ಇಲ್ಲ. ಗಡಿಗೆಯಂತೆ ನುಣ್ಣಗಾಗಿತ್ತು. ಒಂದೇ ನಿಮಿಷದಲ್ಲೇ ಕೂದಲುಗಳು ಬೆಳೆದವು. ಆದರಿಂದ ಅವನಿಗೆ ಘಟೋತ್ಕಚ ಎಂದು ಹೆಸರು. ಅವನು ಭಯಂಕರನಾಗಿದ್ದನು. ದೊಡ್ಡಬಾಯಿ ಗೂಟದಂತೆ ಇರುವ ಕಿವಿಗಳು, ಕೆಂಪಾದ ಕಣ್ಣುಗಳು, ತೀಕ್ಷ್ಣಗಳಾದ ಕೋರೆಹಲ್ಲುಗಳು, ಮಹಾಸಾಮರ್ಥ್ಯ ಮಹಾಪರಾಕ್ರಮ, ದೊಡ್ಡ ದೇಹ, ಕಪ್ಪುಬಣ್ಣ, ದೊಡ್ಡ ಕುತ್ತಿಗೆ, ದೊಡ್ಡ ಕೈಗಳು, ಇವುಗಳೆಲ್ಲ ಉಳ್ಳವನಾಗಿದ್ದನು. ಎಲ್ಲಾ ಪಿಶಾಚಿಗಳನ್ನೂ ಮೀರಿದ್ದನು. ಮನುಷ್ಯರನ್ನು ಮೀರಿದ್ದನು. ಬಾಲಕನಾಗಿದ್ದರೂ ಮಹಾಕ್ರಮಶಾಲಿಯಾಗಿ ಇದ್ದನು. ಸರ್ವಾಸ್ತ್ರಜ್ಞಾನಿ ಯಾಗಿದ್ದನು. ಅವನು ತಂದೆಯ ಕಾಲುಮುಟ್ಟಿ ನಮಸ್ಕರಿಸಿದನು. ತಾಯಿಗೂ ನಮಸ್ಕರಿಸಿದನು. ತಾಯಿಯು ಮೊದಲು ಗಡಿಗೆಯಂತೆ ನುಣ್ಣಗೆ ಇದ್ದ ತಲೆಯಲ್ಲಿ ಕೂದಲು ಬೆಳೆದವನು ಎಂದು ಹೇಳಿದಳು. ಆದುದರಿಂದಲೇ ಅವನಿಗೆ ಘಟೋತ್ಕಚ ಎಂದು ಹೆಸರಾಯಿತು. ಅವನು ಪಾಂಡವರಲ್ಲಿ ಅತ್ಯಂತ ಸ್ನೇಹವುಳ್ಳವನಾಗಿದ್ದನು. ರಾಕ್ಷಸರಂತೆ ದೇಹವುಳ್ಳ ನಿಋತಿ ಎಂಬ ದೇವತೆಯೇ ರುದ್ರದೇವರ ಆವೇಶವುಳ್ಳವನಾಗಿ ಘಟೋತ್ಕಚನಾಗಿ ಹುಟ್ಟಿದನು. ಅವನು ಎಲ್ಲಾ ಪಾಂಡವರಿಗೂ ಕುಂತೀದೇವಿಗೂ ನಮಸ್ಕರಿಸಿ 'ನಾನು ದೊಡ್ಡವರಾದ ನಿಮಗೆ ಏನು ಸೇವೆಮಾಡ ಬೇಕು? ಸಂದೇಹವಿಲ್ಲದೆ ಹೇಳಿರಿ' ಎಂದು ಹೇಳಿದನು. ಆಗ ಕುಂತೀದೇವಿಯು 'ಮಗು! ನೀನು ಕುರುವಂಶದಲ್ಲಿ ಹುಟ್ಟಿರುವಿ. ಸಾಕ್ಷಾತ್ ಭೀಮಸೇನನಿಗೆ ಸಮಾನ ನಾಗಿರುವಿ. ಜ್ಯೇಷ್ಠಪುತ್ರನಾಗಿರುವಿ. ಐದು ಜನರಿಗೂ ಸಹಾಯವನ್ನು ಮಾಡು' ಎಂದಳು. ಘಟೋತ್ಕಚನು 'ಪೂರ್ವದಲ್ಲಿ ಇದ್ದ ರಾವಣ ಇಂದ್ರಜಿತು ಇತ್ಯಾದಿಗಳಂತೆ ನಾನು ಅತ್ಯಂತ ಬಲಿಷ್ಠನಾಗಿರುವೆನು. ಯಾವಾಗ ಸ್ಮರಿಸುತ್ತೀರೋ ಆಗ ನಾನು ತಮ್ಮ

ಸೇವೆಗಾಗಿ ಬಂದು ಸೇರುವೆನು' ಎಂದು ಹೇಳಿ ಉತ್ತರದಿಕ್ಕಿಗೆ ಹೊರಟುಹೋದನು.

ತರುವಾಯ ಭೀಮಸೇನದೇವರು ಹಿಡಿಂಬಿಯೊಡನೆ 'ಕಮಲಪಾಲಿಕೆ! ನೀನು ನನ್ನೊಡನೆ ವಾಸಮಾಡುವ ಕಾಲವು ಮುಗಿಯಿತು. ಇನ್ನು ನಾವು ರಾಜ್ಯದಲ್ಲಿ ಇರುವಾಗ ಬಂದು ನೋಡುವಿ' ಎಂದರು. ಹಿಡಿಂಬಿಯು 'ಕಾಂತ! ಯಾವಾಗ ನೀವು ಏಕಾಂತದಲ್ಲಿ ನನ್ನೊಡನೆ ವಿಹರಿಸಬೇಕೆಂದು ನನ್ನನ್ನು ಸ್ಮರಿಸುವಿರೋ ಆಗ ನಾನು ನಿಮ್ಮ ವಶಳಾಗಿ ಬಂದು ಸೇರುತ್ತೇನೆ' ಎಂದು ಹೇಳಿ ಭೀಮಸೇನದೇವರಲ್ಲಿಯೇ ಮನಸ್ಸು ಉಳ್ಳವಳಾಗಿ ದೇವಲೋಕಕ್ಕೆ ಹೋದಳು.



## ಏಕಚಕ್ರಾನಗರವು [1]

ಏಕಚಕ್ರಾನಗರವೆಂಬುದು ಬಹುಬ್ರಾಹ್ಮಣರಿಂದ ಕೂಡಿದ ಒಂದು ನಗರವು. ಅದಕ್ಕೆ ದುರ್ಬಲನಾದ ಒಬ್ಬ ರಾಜನಿದ್ದನು. ಆ ನಗರಕ್ಕಿಂತ ಸ್ವಲ್ಪ ದೂರದಲ್ಲಿ ಯಮುನಾ ನದಿಯ ತೀರದಲ್ಲಿರುವ ವನದಲ್ಲಿ ಬಕನೆಂಬ ಅಸುರನು ವಾಸಮಾಡುತ್ತಿದ್ದನು. ಅವನು ಅತಿಕ್ರೂರನಾದವನು. ಮನುಷ್ಯರನ್ನೆಲ್ಲಾ ಕೊಂದು ತಿನ್ನುತ್ತಿದ್ದನು. ಅವನ ರಾವಣನ ಸೋದರ ಮಾವನು. ರಾಮದೇವರ ಕಾಲದಲ್ಲಿ ರಾಮದೇವರ ಬಾಣಗಳಿಂದ ಅತ್ಯಂತ ಭಯವುಳ್ಳವನಾಗಿ ಓಡಿಬಂದು ಗುಹೆಗಳಲ್ಲಿ ಅಡಗಿ ಕೊಂಡಿದ್ದನು. ರಾಮದೇವರು ವೈಕುಂಠಕ್ಕೆ ಹೊರಟು ಹೋದಮೇಲೆ ಮೆಲ್ಲನೆ ಹೊರಗೆ ಬಂದು ರಾಜರನ್ನು ಜಯಿಸಿ ಭಯಪಡಿಸಿ ಅವರಿಂದ ಕಪ್ಪವನ್ನು ಪಡೆದು ಸಂತೋಷಪಡುತ್ತಿದ್ದನು. ಅವನು ರುದ್ರದೇವರ ವರದಿಂದ ಮರಣರಹಿತ ನಾಗಿದ್ದನು. ಮಹಾಬಲಿಷ್ಠನಾಗಿದ್ದನು. ಅವನು ಪೂರ್ವದಲ್ಲಿ ಮಹಾಬಲಿಷ್ಠನಾದ ಜರಾಸಂಧನಿಗೂ ನರಕಾಸುರನಿಗೂ ಭರತರಾಜನಿಗೂ ವಶನಾಗಿರಲಿಲ್ಲ. ಅವನು ಮನುಷ್ಯಮಾಂಸದಿಂದಲೇ ಪುಷ್ಟನಾಗಿದ್ದನು. ಇಚ್ಛಾನುಸಾರವಾಗಿ ರೂಪವನ್ನು ಧರಿಸುವನು. ಅವನು ಬೇರೆ ಶತ್ರುಗಳು ಆ ನಗರಕ್ಕೆ ಬಾರದಂತೆ ನೋಡಿ ಕೊಳ್ಳುತ್ತಿದ್ದನು. ಆದರೆ ಅವನೇ ಆ ನಗರಕ್ಕೆ ಆಗಾಗ್ಗೆ ಬಂದು ಮನುಷ್ಯರನ್ನು ಹಿಡಿದು ತಿಂದುಬಿಡುತ್ತಿದ್ದನು. ಜನರಿಗೆ ರಕ್ಷಕರೊಬ್ಬರೂ ಇರಲಿಲ್ಲ. ಅವನು ತನ್ನ ಸ್ಥಳದಲ್ಲಿ ಒಂದು ಗುಹೆಯೊಳಗೆ ವಾಸಮಾಡುತ್ತಿದ್ದನು. ಆಗಾಗ್ಗೆ ಬಂದು ಜನರನ್ನು ಪೀಡಿಸು

1. ಮ.ತಾ.ನಿ. ಅ-18, 19

ತ್ತಿದ್ದನು. ಬ್ರಾಹ್ಮಣರು ಮಂತ್ರಗಳಿಂದ ಹೋಮಗಳಿಂದ ಭೋಜನಗಳಿಂದ ಆ ರಾಕ್ಷಸನನ್ನು ಸಂತೋಷಪಡಿಸಲಿಕ್ಕೆ ಪ್ರಯತ್ನಪಡುತ್ತಿದ್ದರು. ಆದರೂ ಅವನು ಆಗಾಗ್ಗೆ ಬಂದು ಪೀಡಿಸುತ್ತಿದ್ದನು.

ಒಂದುದಿನ ಬ್ರಾಹ್ಮಣರೆಲ್ಲರೂ ಸೇರಿ ಆ ರಾಕ್ಷಸನೊಡನೆ 'ನಮ್ಮನ್ನು ಆಗಾಗ್ಗೆ ಬಂದು ಹಿಂಸಿಸಬೇಡ. ನಿನಗೆ ನಾವು ಕ್ರಮದಿಂದ ಕಪ್ಪವನ್ನು ಕೊಡುವೆವು. ಮಾಂಸಯುಕ್ತವಾದ ಅನ್ನವನ್ನು, ಎಳ್ಳುಪುಡಿಯನ್ನವನ್ನು, ತುಪ್ಪವನ್ನು, ಸಾರುಹುಳಿ ಇತ್ಯಾದಿ ವ್ಯಂಜನಗಳನ್ನು ತೊವ್ವೆ, ಅರಳು, ಅಪ್ಪ, ಮದ್ಯ ಇತ್ಯಾದಿಗಳನ್ನೂ ಬಿಸಿಮಾಡಿರುವ ಬಿಸಿಮಾಡದೆ ಇರುವ ಪಾನೀಯಗಳನ್ನು ಬೇಯಿಸಿದ, ಬೇಯಿಸದೆ ಇದ್ದ, ಮಾಂಸವನ್ನು ಕಾಡಿನಕೋಣ ಹಂದಿ ಕರಡಿ ಇತ್ಯಾದಿಗಳನ್ನು ಬೇಯಿಸಿಯೂ, ಹಸಿದಾಗಿಯೂ, ಇರುವವನ್ನು ತುಪ್ಪದ ಕೊಡಗಳನ್ನು, ಮೊಸರಿನ ಕೊಡಗಳನ್ನು, ಒಂದೊಂದು ಮನೆಯಿಂದ ಒಬ್ಬೊಬ್ಬ ಮನುಷ್ಯನನ್ನು, ಎರಡು ಎತ್ತುಗಳನ್ನೂ, ದಿವಸಕ್ಕೊಂದು ಮನೆಯವರು ನಿನಗೆ ಕಳುಹಿಸುವೆವು. ನಾವು ಹೇಳಿದಂತೆ ನೀನು ಮಾಡಬೇಕು' ಎಂದು ಪ್ರಾರ್ಥನೆ ಮಾಡಿದರು. ಬಕಾಸುರನು ಹಾಗೆಯೇ ಆಗಲಿ ಎಂದು ಒಪ್ಪಿಕೊಂಡನು. ಅವನು ಇತರ ರಾಜರಿಂದಲೂ ಕಾಡಿನ ದುಷ್ಟಮೃಗ ಗಳಿಂದಲೂ ರಕ್ಷಣೆಯನ್ನು ಮಾಡುತ್ತಿದ್ದನು. ಒಂದು ಮನೆಯವರು ಒಂದುದಿನ ಆ ರಾಕ್ಷಸನಿಗೆ ಆರೀತಿಯಾಗಿ ಕಪ್ಪವನ್ನು ಕೊಟ್ಟರೆ ಆಮೇಲೆ ಹದಿಮೂರು ವರ್ಷವಾದ ಮೇಲೆ ಅವರು ಪುನಃ ಕಪ್ಪವನ್ನು ಕೊಡಬೇಕಾಗುತ್ತಿತ್ತು. ಅಂದರೆ ಆ ನಗರದಲ್ಲಿ ಅಷ್ಟು (4745) ಮನೆಗಳು ಇದ್ದವು. ಮಧ್ಯೇ ಕೆಲವರು ಕಪ್ಪವನ್ನು ಕೊಡಲಿಕ್ಕೆ ಮೋಸ ಮಾಡುವರು. ಆಗ ರಾಕ್ಷಸನು ಅವರ ಮನೆಗೆ ಹೋಗಿ ಹೆಂಡತಿ ಮಕ್ಕಳನ್ನು ಅವರನ್ನು ಎಲ್ಲರನ್ನೂ ಕೊಂದು ತಿಂದುಬಿಡುತ್ತಿದ್ದನು.

ಇತ್ತ ಪಾಂಡವರು ಶಾಲಿಹೋತ್ರಾಶ್ರಮದಲ್ಲಿ ಶಾಲಿಹೋತ್ರಮುನಿಯಿಂದ ವನದಲ್ಲಿ ಸಿಗುವ ಫಲಾದಿಗಳಿಂದ ಸತ್ಕೃತರಾಗಿ ಆ ಮುನಿಗಳೊಡನೆ ತಾವು ಹೋಗಿ ಬರುತ್ತೇವೆಂದು ಕೇಳಿಕೊಂಡರು. ಆಮೇಲೆ ಅವರೆಲ್ಲರೂ ಜಟೆಯನ್ನು ಮಾಡಿಕೊಂಡರು. ಮರದತೊಗಲನ್ನೂ ಕೃಷ್ಣಾಜಿನವನ್ನು ಧರಿಸಿದರು. ಕುಂತಿಯಿಂದ ಸಹಿತರಾಗಿ ತಪಸ್ವಿಗಳ ರೂಪವನ್ನು ಧರಿಸಿದರು. ವೇದಾದಿಗಳನ್ನು ಅಧ್ಯಯನ ಮಾಡಿದವರಾಗಿ ಅಲ್ಲಿಂದ ಹೊರಟು ಒಂದು ವನದಿಂದ ಮತ್ತೊಂದು ವನಕ್ಕೆ ಬರುತ್ತಾ ಅನೇಕ ಮೃಗಗಳನ್ನು ಸಂಹರಿಸುತ್ತಾ ವೇಗದಿಂದ ನಡೆದರು. ಮಾತ್ಸ್ಯದೇಶ, ತ್ರಿಗರ್ತದೇಶ, ಪಂಚಾಲದೇಶ ಇತ್ಯಾದಿ ದೇಶಗಳನ್ನು ದಾಟುತ್ತಾ ಅನೇಕ

ರಮಣೀಯ ವನಪ್ರದೇಶಗಳನ್ನು, ಸರೋವರಗಳನ್ನು ನೋಡುತ್ತಾ ಕೆಲವು ಸ್ಥಳಗಳಲ್ಲಿ ತಾಯಿಯನ್ನು ಹೊತ್ತುಕೊಂಡು ಹೋಗುತ್ತಾ ಶ್ರಮವುಂಟಾದಾಗ ಮಧ್ಯೇ ನಿಲ್ಲುತ್ತಾ ಇಚ್ಛಾನುಸಾರವಾಗಿ ನಡೆಯುತ್ತಾ ಇದ್ದರು. ದಾರಿಯಲ್ಲಿ ತಮಗೆ ತಾತನಾದ ವೇದವ್ಯಾಸದೇವರನ್ನು ನೋಡಿದರು. ತಾಯಿಯಿಂದ ಸಹಿತರಾಗಿ ಎಲ್ಲರೂ ಅವರಿಗೆ ಕೈಮುಗಿದರು.

ಆಗ ವೇದವ್ಯಾಸದೇವರು 'ನೀವು ಶಾಲಿಹೋತ್ರಾಶ್ರಮದಿಂದ ಹೊರಟು ಬಂದಿದ್ದು ನನಗೆ ತಿಳಿಯಿತು. ನಿಮಗೆ ಘಟೋತ್ಕಚನು ಹುಟ್ಟಿದ್ದನ್ನು ತಿಳಿದು ಬಹುಪ್ರೀತಿಯುಂಟಾ ಯಿತು. ಇಲ್ಲಿಯೇ ಹತ್ತಿರದಲ್ಲೇ ಒಂದು ಮನೋಹರವಾದ ನಗರವಿರುವುದು. ಅಲ್ಲಿ ನೀವು ನಾನು ಬರುವವರೆಗೆ ವಾಸಮಾಡುತ್ತಾ ಇರಿ' ಎಂದು ಹೇಳಿ ಬ್ರಾಹ್ಮಣ ಕುಮಾರರ ರೂಪವುಳ್ಳ ಅವರನ್ನು ಹತ್ತಿರದಲ್ಲಿ ಇದ್ದ ಏಕಚಕ್ರಾನಗರಕ್ಕೆ ಕರೆದುಕೊಂಡು ಒಬ್ಬ ಬ್ರಾಹ್ಮಣನ ಮನೆಯಲ್ಲಿ 'ಇವರು ನನ್ನ ಶಿಷ್ಯರು. ಕೆಲವು ಸಮಯದಲ್ಲೇ ನಾನಿಲ್ಲಿಗೆ ಬರುವೆನು. ನಾನು ಬರುವವರೆಗೆ ಇವರಿಲ್ಲೇ ಇರಲಿ' ಎಂದು ಹೇಳಿ ಹೊರಟುಹೋದರು. ಹೋಗುವಾಗ ಕುಂತೀದೇವಿಗೂ ಸಮಾಧಾನ ವನ್ನು ಹೇಳಿಹೋದರು.

ಪಾಂಡವರು ಅಲ್ಲಿ ವೇದಾಧ್ಯಯನ ಮಾಡುತ್ತಾ ಇದ್ದರು. ಊರಿನ ಜನರೆಲ್ಲರೂ ಅವರನ್ನು ನೋಡಿ 'ಈ ಬಾಲಕರು ಎಷ್ಟು ಸುಂದರ ರಾಗಿದ್ದಾರೆ? ಇವರು ಭಿಕ್ಷೆಗೆ ಅರ್ಹರಲ್ಲ. ರಾಜ್ಯಕ್ಕೆ ಅರ್ಹರಾಗಿ ಕಾಣುತ್ತಾರೆ. ಇವರು ವಸ್ತುತಃ ಬ್ರಾಹ್ಮಣರಲ್ಲವೆಂದು ಕಾಣುತ್ತದೆ. ಏನೋ ಕಾರಣದಿಂದ ಭೂಮಿಯಲ್ಲಿ ಮರೆಯಾಗಿ ಇದ್ದಾರೋ ಏನೋ! ಸರ್ವಲಕ್ಷಣಯುಕ್ತರಾಗಿದ್ದಾರೆ. ಏನೋ ಕಾರ್ಯಕ್ಕಾಗಿ ಭಿಕ್ಷೆಯನ್ನು ಬೇಡುತ್ತಿದ್ದಾರೆ' ಈ ಪ್ರಕಾರವಾಗಿ ಹೇಳುತ್ತಾ ಅವರ ಪಾತ್ರೆಗಳನ್ನು ಭಕ್ಷ್ಯಭೋಜ್ಯಗಳಿಂದ ತುಂಬಿಸುತ್ತಿದ್ದರು. ದುಃಖದಿಂದ ಕಣ್ಣಲ್ಲಿ ನೀರನ್ನು ತುಂಬಿಸಿಕೊಂಡು ಭೂಮಿಯನ್ನೇ ನೋಡುತ್ತಾ ಬ್ರಾಹ್ಮಣರ ಮನೆಯಲ್ಲಿ ಮಾತ್ರ ಭಿಕ್ಷೆಯನ್ನು ಸ್ವೀಕರಿಸಲು ತಾಯಿಯನ್ನು ಯೋಚಿಸುತ್ತಾ ಬೇಗನೇ ಮನೆಗೆ ಬಂದು ಸೇರುವರು. ಅವರು ತಂದ ಸಂಪೂರ್ಣ ವಾದ ಭಿಕ್ಷಾನ್ನವನ್ನು ಕುಂತೀ ದೇವಿಯು ವಿಭಾಗಮಾಡಿ ಕೊಡುವಳು. ಅದನ್ನು ಅವರೆಲ್ಲರೂ ಉಣ್ಣುತ್ತಿದ್ದರು. ತಂದ ಎಲ್ಲಾ ಅನ್ನದಲ್ಲಿಯೂ ಸರೀ ಅರ್ಧಭಾಗವನ್ನು ಭೀಮಸೇನದೇವರು ಉಣ್ಣುತ್ತಿದ್ದರು. ಉಳಿದ ಅರ್ಧಭಾಗವನ್ನು ನಾಲ್ಕುಜನರೂ ಕುಂತೀದೇವಿಯೂ ಭೋಜನ ಮಾಡುತ್ತಿದ್ದರು. ಆದರೆ ಭೀಮಸೇನದೇವರು ಹೊಟ್ಟೆ ತುಂಬಿದಂತೆ ತೋರಿಸುತ್ತಿದ್ದಿಲ್ಲ. ಹಸಿವೆಯುಳ್ಳವರಂತೆಯೂ ತುಂಬಾ ಕೃಶ

ರಾದಂತೆಯೂ ತೋರಿಸಿ ದರು. ದೊಡ್ಡ ಉರಿಯುವ ಅಗ್ನಿಯಲ್ಲಿ ಒಂದು ಜೊಟ್ಟು ತುಪ್ಪದಂತೆ ಆ ಅರ್ಧಭಾಗ ಭಿಕ್ಷಾನ್ನವಾಗುತ್ತಿತ್ತು. ವಸ್ತುತಃ ಅವರ ಜಠರಾಗ್ನಿಯು ಎಷ್ಟು ಹಾಕಿದರೂ ಜೀರ್ಣ ಮಾಡುತ್ತಿರುವುದು. ಏನು ಹಾಕದೆ ಇದ್ದರೂ ಅವರಿಗೆ ಹಿತಕರವಾಗಿಯೇ ಇರುವುದು. ಅವರಿಗೆ ಹಸಿವೆಯು ಉಪದ್ರವವಿಲ್ಲ, ಆದರೆ ಭೂಲೋಕದ ಜನರಂತೆ ಹಸಿವೆಯುಳ್ಳವರಂತೆ ನಟನೆ ಮಾಡುತ್ತಿದ್ದರು.

ಇತರರೆಲ್ಲರೂ ಮೌನದಿಂದ ಭಿಕ್ಷೆಯನ್ನು ಬೇಡುತ್ತಿದ್ದರು. ಭೀಮಸೇನದೇವರು ಮಾತ್ರ ದೊಡ್ಡ ಮನೆಯಂತೆ ಇರುವ ಗಡಿಗೆಯನ್ನು ಕೈಯಲ್ಲಿ ಹಿಡಿದುಕೊಂಡು ವೈಶ್ಯರ ಮನೆಗೆ ಮಾತ್ರ ಹೋಗಿ ಹುಂಕಾರವನ್ನು ಮಾಡುವರು. ಆಗ ವೈಶ್ಯರೆಲ್ಲರೂ ಅದಕ್ಕೆ ಅಕ್ಕಿಬೇಳೆಗಳನ್ನು ಹಾಕುತ್ತಿದ್ದರು. ಈರೀತಿಯಾಗಿ ಸ್ವಧರ್ಮತತ್ಪರರಾದ ಭೀಮಸೇನ ದೇವರು ರಾಜರು ವೈಶ್ಯರಿಂದ ಕಪ್ಪವನ್ನು ವಸೂಲು ಮಾಡುವಂತೆ ವೈಶ್ಯರಿಂದ ಅಕ್ಕಿಬೇಳೆಗಳನ್ನು ವಸೂಲು ಮಾಡುತ್ತಿದ್ದರು. ಒಂದು ದಿನದಲ್ಲಿ ಒಬ್ಬ ಕುಂಬಾರನ ದೊಡ್ಡ ಮನೆಯ ಸುತ್ತಲೂ ಬೆಂಕಿ ಹಿಡಿಯಿತು. ಅದನ್ನು ನೋಡಿ ಭೀಮಸೇನ ದೇವರು ಆ ದೊಡ್ಡ ಮನೆಯನ್ನು ಮಾತ್ರ ಮೇಲೆ ಎತ್ತಿ ಹಿಡಿಯುವವರಾಗಿ ಸುತ್ತಲಿನ ಬೆಂಕಿಯು ಆರಿದ ಮೇಲೆ ಮನೆಯನ್ನು ಪೂರ್ವದಲ್ಲಿ ಇದ್ದಂತೆಯೇ ಇಟ್ಟರು. ಮತ್ತು ಆ ಕುಂಬಾರನಿಗೆ ಪರ್ವತವಾಗಿ ಗಡಿಗೆ ಮಾಡಲಿಕ್ಕೆ ಬೇಕಾದ ಮಣ್ಣನ್ನು ತಂದು ಹಾಕಿದರು. ಇದರಿಂದ ಆ ಕುಂಬಾರನು ಆಶ್ಚರ್ಯಸಂತೋಷವುಳ್ಳವನಾಗಿ ಆ ಮನೆಯಷ್ಟೇ ದೊಡ್ಡದಾದ ಗಡಿಗೆಯನ್ನು ಮಾಡಿಕೊಟ್ಟನು. ಅದನ್ನು ತೆಗೆದುಕೊಂಡು ಭಿಕ್ಷೆಗೆ ಹೋಗಿ ಹುಂಕಾರ ಮಾಡಲು ಜನರೆಲ್ಲರೂ ನಗುತ್ತಾ ಆ ಗಡಿಗೆ ಎಲ್ಲವನ್ನು ತಂದುಹಾಕುವರು. ಇದನ್ನು ನೋಡಿ ಒಂದು ದಿನದಲ್ಲಿ ಧರ್ಮರಾಜನು ''ನಿನ್ನ ಈ ವಿಚಿತ್ರಪ್ರವೃತ್ತಿಯಿಂದ ದುರ್ಯೋಧನಾದಿಗಳಿಗೆ ನೀನು ಇಲ್ಲಿರುವುದು ತಿಳಿಯ ಬಹುದು. ಆದುದರಿಂದ ತಾಯಿಯೊಡನೆ ನೀನು ಮನೆಯಲ್ಲಿಯೇ ಇರು. ನಾನೂ ಅರ್ಜುನಾದಿಗಳೂ ತಂದ ಭಿಕ್ಷಾನ್ನವನ್ನೇ ಭೋಜನ ಮಾಡು'' ಎಂದು ಹೇಳಿದನು. ಭೀಮಸೇನದೇವರು ಹಾಗೆಯೇ ಆಗಲಿ ಎಂದು ಹೇಳಿ ಮನೆಯಲ್ಲಿಯೇ ತಾಯಿಯೊಡನೆ ಇರುತ್ತಿದ್ದರು.



# ಬಕಾಸುರನ ವಧ [1]

ಒಂದು ದಿನದಲ್ಲಿ ಧರ್ಮರಾಜ ಅರ್ಜುನಾದಿಗಳು ಭಿಕ್ಷೆಯನ್ನು ಬೇಡಲಿಕ್ಕೆ ಹೋಗಿದ್ದರು. ಭೀಮಸೇನದೇವರೂ ಕುಂತೀದೇವಿಯೂ ಮನೆಯಲ್ಲಿಯೇ ಇದ್ದರು. ಆಗ ವಾಸಮಾಡಲಿಕ್ಕೆ ಸ್ಥಳವನ್ನು ಕೊಟ್ಟ ಬ್ರಾಹ್ಮಣನ ಮನೆಯೊಳಗೆ ಗಟ್ಟಿಯಾಗಿ ಅಳುವ ಶಬ್ದವು ಕುಂತಿಗೆ ಕೇಳಿಸಿತು. ಅಳುವ ಶಬ್ದವನ್ನು ಕೇಳಿ ಕೋಮಲ ಹೃದಯವುಳ್ಳ ಕುಂತಿಗೆ ಸಹಿಸಲಿಕ್ಕೆ ಆಗಲಿಲ್ಲ. ತಾನೂ ದುಃಖದಿಂದ ಕೂಡಿದವಳಾಗಿ ಭೀಮಸೇನದೇವರೊಡನೆ 'ಮಗ! ನಾನು ಈ ಬ್ರಾಹ್ಮಣನ ಮನೆಯಲ್ಲಿ ದುರ್ಯೋಧನಾದಿಗಳಿಗೆ ತಿಳಿಯದಂತೆ ಸುಖವಾಗಿ ವಾಸಮಾಡುತ್ತಿದ್ದೇವೆ. ಇದರಿಂದ ಈರೀತಿಯಾಗಿ ನಮಗೆ ಮಾಡಿದ ಈ ಬ್ರಾಹ್ಮಣನ ಉಪಕಾರಕ್ಕಾಗಿ ಯಾವಾಗ ಪ್ರತ್ಯುಪಕಾರವನ್ನು ಮಾಡಲಿ ಎಂದು ಯೋಚಿಸುತ್ತಿದ್ದೆನು. ಯಾರಾದರೂ ನಮಗೆ ಉಪಕಾರಮಾಡಿದರೆ ನಾವು ಅವರಿಗೆ ಅಧಿಕವಾಗಿ ಉಪಕಾರವನ್ನು ಮಾಡಬೇಕು. ಈಗ ಈ ಬ್ರಾಹ್ಮಣನಿಗೆ ಏನೋ ದೊಡ್ಡ ವಿಪತ್ತು ಸಂಭವಿಸಿರಬೇಕು. ಈ ಸಮಯದಲ್ಲಿ ನಾವು ಇವನಿಗೆ ಸಹಾಯಮಾಡದೆ ಇರುವುದು ಸರಿಯಲ್ಲ' ಎಂದು ಹೇಳಿದಳು. ಭೀಮಸೇನದೇವರು 'ಬ್ರಾಹ್ಮಣನಿಗೆ ಏನು ವಿಪತ್ತು ಬಂದಿರುವುದು? ಯಾರಿಂದ ಬಂದಿರುವುದು ಎಂದು ತಿಳಿದುಕೊಂಡು ಬಾ. ಅದಕ್ಕೆ ಸರಿಯಾದ ಪ್ರತೀಕಾರವನ್ನು ಮಾಡುವೆನು' ಎಂದರು.

ಈರೀತಿಯಾಗಿ ಅವರು ಮಾತಾಡುತ್ತಿರುವಾಗ ಪುನಃ ಆ ಬ್ರಾಹ್ಮಣನ ಮನೆಯಲ್ಲಿ ಬ್ರಾಹ್ಮಣನೂ ಅವನ ಹೆಂಡತಿಯೂ ಗಟ್ಟಿಯಾಗಿ ಅಳುವ ಶಬ್ದವು ಕೇಳಿಸಿತು. ಕರುವನ್ನು ನೋಡಿ ಅದರ ಬಳಿಗೆ ದನವು ಓಡುವಂತೆ ಕುಂತೀದೇವಿಯು ಬೇಗನೇ ಅಂತಃಪುರಕ್ಕೆ ಓಡಿದಳು. ಅಲ್ಲಿ ಮರೆಯಾಗಿ ನಿಂತುಕೊಂಡು ಒಳಗಿನ ದೃಶ್ಯವನ್ನು ನೋಡಿದಳು.

ಒಳಗೆ ಬ್ರಾಹ್ಮಣನು ಅಳುತ್ತಾ ಕೂತಿದ್ದನು. ಅವನ ಹತ್ತಿರದಲ್ಲಿಯೇ ಅವನ ಹೆಂಡತಿಯೂ, ಮಗಳೂ, ಚಿಕ್ಕಮಗನೂ ಇದ್ದರು. ಅಲ್ಲಿ ಬ್ರಾಹ್ಮಣನು ''ನಿರರ್ಥಕವಾದ ಪರಾಧೀನವಾದ ದುಃಖಕ್ಕೆ ಕಾರಣವಾದ ಈ ಜೀವನಕ್ಕೆ ಧಿಕ್ಕಾರವಿರಲಿ. ನನಗೀಗ ಬಹು ಆಪತ್ತು ಬಂದಿರುವುದು. ಇದರಿಂದ ಹೇಗೆ ಬಿಡುಗಡೆಯಾಗುವುದೆಂದೇ ತಿಳಿಯಲಿಲ್ಲ. ಹೆಂಡತಿ ಮಕ್ಕಳಿಂದ ಸಹಿತನಾಗಿ ಹೇಗೆ ಕ್ಷೇಮವನ್ನು

---

1. ಮ.ತಾ.ನಿ. ಅ-18, 19

ಹೊಂದುವೆನೆಂಬುದೇ ಅರಿಯಲಿಲ್ಲ. ಹೀಗಾಗುವುದೆಂದು ತಿಳಿದುಕೊಂಡೇ ನಿನ್ನೊಡನೆ ನಾನು ಮೊದಲೇ ಈ ಊರನ್ನು ಬಿಟ್ಟು ಬೇರೆ ಎಲ್ಲಿಗಾದರೂ ಹೋಗುವ ಎಂದು ಹೇಳಿದೆನು. ನೀನು ನನ್ನ ಮಾತನ್ನು ಕೇಳಲಿಲ್ಲ''. 'ಈ ಊರಲ್ಲೇ ನಾನು ಹುಟ್ಟಿದವಳು. ಇಲ್ಲಿಯೇ ಬೆಳೆದವಳು. ಇಲ್ಲಿಯೇ ನನ್ನ ತಾಯಿಯು ಇದ್ದಾಳೆ. ತಂದೆಯು ಇದ್ದಾರೆ. ಆದುದರಿಂದ ಈ ಊರನ್ನು ಬಿಟ್ಟು ಬರಲಾರೆ' ಎಂದು ಹೇಳಿದಿ. ನಾನು ಅನೇಕ ಬಾರಿ ತುಂಬಾ ಹೇಳಿದೆನು. ಆದರೆ ನೀನು ಈ ಊರನ್ನು ಬಿಡಲಿಕ್ಕೆ ಕೇಳಲಿಲ್ಲ. ಈಗ ನಿನ್ನ ತಂದೆಯೂ ಸ್ವರ್ಗಸ್ಥರಾದರು. ತಾಯಿಯೂ ಇಲ್ಲ. ಬಂಧುಗಳೊಬ್ಬರೂ ಇಲ್ಲ. ಇಲ್ಲಿ ವಾಸಮಾಡುವುದರಲ್ಲಿ ಏನು ಸುಖವಿದೆ? ಈ ರೀತಿಯಾಗಿ ಬಂಧುಗಳನ್ನು ಬಿಟ್ಟು ಹೋಗಬಾರದೆಂದು ಆಸೆಯುಳ್ಳ ನಿನ್ನ ಮಾತನ್ನು ಕೇಳಿ ನನಗೀಗ ಬಹುದುಃಖಕರವಾದ ಬಂಧುನಾಶವು ಪ್ರಾಪ್ತವಾಗಿದೆ.

ಅಥವಾ ನಾನು ಸಾಯಬೇಕಾಗಿದೆ. ಅದೂ ದುಃಖಕರವಾಗಿದೆ. ನಾನು ಬದುಕಿಕೊಂಡು ಇತರ ಬಂಧುಗಳನ್ನು ಪರಿತ್ಯಾಗ ಮಾಡಲಾರೆನು. ನಿನ್ನನ್ನು ಸರ್ವಥಾ ನಾನು ಕಳುಹಿಸಲಾರೆನು. ನೀನು ನನ್ನ ಸಹಧರ್ಮವನ್ನು ಮಾಡುವವಳು. ಇಂದ್ರಿಯನಿಗ್ರಹವುಳ್ಳವಳು. ನನಗೆ ತಾಯಿಯಂತೆ ಇರುವವಳು. ದೇವತೆಗಳು ಕೊಟ್ಟ ಸಖಿಯಾಗಿರುವಿ. ಉತ್ತಮ ಆಶ್ರಯಳಾಗಿರುವಿ. ನಿನ್ನ ತಂದೆತಾಯಿಗಳಿಂದ ಕೊಡಲ್ಪಟ್ಟವಳು. ಒಳ್ಳೇ ವಂಶದಲ್ಲಿ ಹುಟ್ಟಿದ ಒಳ್ಳೇ ಸ್ವಭಾವವುಳ್ಳ ನನ್ನಿಂದಲೇ ಮಕ್ಕಳನ್ನು ಹಡೆದಿರುವ ಒಂದೂ ಅಪಕಾರವನ್ನು ಮಾಡದೆ ಇರುವ ಪತಿವ್ರತೆಯಾದ ನಿತ್ಯವೂ ನನ್ನನ್ನೇ ಅನುಸರಿಸುತ್ತಿರುವ ಹೆಂಡತಿಯಾದ ನಿನ್ನನ್ನು ಮೊದಲು ಮಂತ್ರೋಕ್ತಪ್ರಕಾರದಿಂದ ಮದುವೆಯಾಗಿ ಈಗ ಮಾತ್ರ ನಾನು ಬದುಕಿರಬೇಕೆಂಬ ಆಸೆಯಿಂದ ಎಷ್ಟು ಮಾತ್ರಕ್ಕೂ ರಾಕ್ಷಸನ ಬಾಯಿಗೆ ಕಳುಹಿಸಲಾರೆನು. ಇನ್ನು ಮಗಳನ್ನಾದರೂ ಹೇಗೆ ಕಳುಹಿಸಲಿ? ಚಿಕ್ಕ ಹುಡುಗಿಯಾಗಿದ್ದಾಳೆ. ಇನ್ನೂ ದೊಡ್ಡವಳಾಗಿಲ್ಲ. ಒಬ್ಬನಿಗೆ ಮದುವೆ ಮಾಡಿಕೊಡಲಿಕ್ಕಾಗಿಯೇ ದೇವರಿಂದ ಕೊಡಲ್ಪಟ್ಟಿದ್ದಾಳೆ. ಇವಳಿಂದಾಗಿಯೇ ನಾನು ಪಿತೃಗಳಿಂದ ಸಹ ದೌಹಿತ್ರರಿಂದ ಉಂಟಾಗುವ ಲೋಕಗಳನ್ನು ಅಪೇಕ್ಷಿಸುತ್ತೇನೆ. ನಾನೇ ಮಗಳನ್ನು ಪಡೆದು ಈಗ ನಾನೇ ಅವಳನ್ನು ಹೇಗೆ ಪರಿತ್ಯಾಗಮಾಡಲಿ?

ಕೆಲವು ತಂದೆಯವರಿಗೆ ಗಂಡು ಮಕ್ಕಳಲ್ಲಿ ಹೆಚ್ಚಿಗೆ ಪ್ರೇಮವಂತೆ. ಇನ್ನು ಕೆಲವರಿಗೆ ಹೆಣ್ಣುಮಕ್ಕಳಲ್ಲಿ ಹೆಚ್ಚಿಗೆ ಪ್ರೇಮವಂತೆ. ನನಗೆ ಇಬ್ಬರಲ್ಲಿಯೂ ಸರಿಯಾದ ಪ್ರೇಮವೇ ಇರುವುದು. ಯಾವ ಮಗಳಿಂದ ಉತ್ತಮಲೋಕವುಂಟಾಗು

ವುದು?ಗಂಡನ ಕುಲವೂ ತಂದೆಯ ಕುಲವೂ ಈ ರೀತಿ ಎರಡು ಕುಲಗಳೂ ಉದ್ಧೃತಗಳಾಗುವುವು. ವಂಶವು ಬೆಳೆಯುವುದು. ಒಂದು ಅಪರಾಧವನ್ನು ಮಾಡದಿರುವ ಅಂತಹ ಮಗಳನ್ನು ನಾನು ಹೇಗೆ ಪರಿತ್ಯಾಗ ಮಾಡಲಿ? ಇನ್ನು ಮಗನನ್ನಾದರೋ ಹೇಗೆ ಬಿಡಲಿ? 'ಆತ್ಮೈವ ಪುತ್ರ ನಾಮಾಸಿ' ಎಂಬ ಶ್ರುತಿಯು ಆತ್ಮನೇ ಮಗನೆಂದು ಹೇಳುವುದು. (ಎಂದರೆ ತನ್ನಿಂದ ಹುಟ್ಟಿದವನು ಎಂದು ಅರ್ಥವು) ಯಾವ ಮಗನಿಂದ ಪರಮಪ್ರೀತಿಯುಂಟಾಗುವುದು. ಸ್ವರ್ಗಲೋಕ ವುಂಟಾಗುವುದು. ಹುಟ್ಟಿದ ಯಾವಾತನ ಮುಖವನ್ನು ನೋಡಿ ಪಿತೃಗಳು ಸ್ವರ್ಗವನ್ನು ಹೊಂದಿರುವರು. ನಾನೂ ಪಿತೃಋಣದಿಂದ ಬಿಡುಗಡೆ ಹೊಂದಿರುವೆನು. ಅಂತಹ ನನ್ನ ಕುಲವೃದ್ಧಿಯನ್ನು ಉಂಟುಮಾಡುವ ನನ್ನ ಪ್ರಿಯನಾದ ಇನ್ನು ಮೇಲೆ ನನಗೆ ಪಿಂಡ ಪ್ರದಾನಮಾಡುವ ತಿಲೋಕದವನ್ನು ಕೊಡುವ ನನ್ನ ಮಗನನ್ನು ನಾನು ಹೇಗೆ ಪರಿತ್ಯಾಗಮಾಡಲಿ? ಒಂದೋ ನಾನು ಅಥವಾ ನನ್ನ ಮಗನು ಸಾಯಬೇಕು. ಒಂದೋ ನೀನು ಅಥವಾ ನಿನ್ನ ಮಗಳು ಸಾಯಬೇಕು. ಈ ಊರಿನಲ್ಲಿ ವಾಸಮಾಡಿದ್ದಕ್ಕೆ ಬಂದ ಫಲವು ಇದೇ. ಆಗ ನಾನು ಹೇಳಿದ ಮಾತನ್ನು ನೀನು ಕೇಳಲಿಲ್ಲ. ಈಗ ಅದರ ಫಲವನ್ನು ನೀನು ಅನುಭವಿಸು.

ನನಗೆ ನಾನು ಸಾಯುವುದೂ ಇಷ್ಟವಲ್ಲ. ಮಕ್ಕಳನ್ನು ಬಿಡಲೂಲಾರೆ. ನಿನ್ನನ್ನು ಪರಿತ್ಯಜಿಸಲಾರೆ. ನನ್ನನ್ನು ರಕ್ಷಿಸಿಕೊಳ್ಳಲಿಕ್ಕೂ ಉಪಾಯವಿಲ್ಲ. ನಿಮ್ಮನ್ನು ಬಿಡಲಿಕ್ಕೂ ಇಷ್ಟವಿಲ್ಲ. ನಾನು ಬಿಟ್ಟುಹೋದರೆ ನೀವು ಜೀವಿಸಿಕೊಂಡಿರಲು ಸಾಧ್ಯವಿಲ್ಲ. ನಿಮ್ಮನ್ನು ಪರಿತ್ಯಾಗ ಮಾಡುವುದು ಅತ್ಯಂತ ನಿಂದ್ಯವಾಗಿದೆ. ಇಂತಹ ಮಹಾ ಆಪತ್ತನ್ನು ಹೊಂದಿರುವೆನಲ್ಲಾ! ಏನು ಮಾಡಬೇಕೆಂದು ತಿಳಿಯಲಿಲ್ಲವಲ್ಲಾ! ಎಲ್ಲರೂ ಒಟ್ಟಿಗೆ ಸಾಯಬೇಕು. ಬದುಕಲಿಕ್ಕೆ ಆಗಲಾರದು ಎಂದು ಕಾಣುತ್ತದೆ'' ಎಂದು ಹೇಳಿದನು.

ಆಗ ಅವನ ಹೆಂಡತಿಯು 'ಸಾಮಾನ್ಯ ಜನರಂತೆ ಓದಿಕೊಂಡಿರುವ ನೀವು ಹೀಗೆ ದುಃಖವನ್ನು ಹೊಂದಬಾರದು. ನೀವು ಸಂತಾಪವನ್ನು ಹೊಂದುವ ಕಾಲವು ಇದಲ್ಲ. ಮನುಷ್ಯರೆಲ್ಲರೂ ಒಂದು ದಿನ ಅವಶ್ಯವಾಗಿ ಮರಣವನ್ನು ಹೊಂದಿಯೇ ಆಗಬೇಕು. ಅವಶ್ಯವಾಗಿ ಬರುವ ಅಂದರೆ ನಮ್ಮಿಂದ ತಪ್ಪಿಸಲಿಕ್ಕೆ ಆಗಲಾರದ ವಿಷಯದಲ್ಲಿ ಸಂತಾಪವನ್ನು ಹೊಂದಬಾರದು. ಹೆಂಡತಿ ಮಗ ಮಗಳು ಎಲ್ಲರೂ ತನಗಾಗಿ ಇರುವುದು. ನೀವು ಮನಸ್ಸಿನಲ್ಲೇ ಯೋಚನೆಮಾಡಿ ದುಃಖವನ್ನು ಬಿಡಿ. ನಾನು ರಾಕ್ಷಸನ ಬಾಯಿಗೆ ಹೋಗುತ್ತೇನೆ. ಸ್ತ್ರೀಯಾದವಳು ತನ್ನ ಪ್ರಾಣಗಳನ್ನಾದರೂ ಕೊಟ್ಟು ಗಂಡನಿಗೆ ಹಿತವನ್ನು ಮಾಡುವುದು ಅವಳಿಗೆ ಧರ್ಮವು ಅದರಿಂದ

ನಿಮಗೂ ಸುಖವಾಗುವುದು. ಪರಲೋಕದಲ್ಲಿ ಮಹಾಸುಖವಾಗುವುದು. ಈ ಲೋಕದಲ್ಲಿಯೂ 'ಇಂತಹ ಪರಿವ್ರತೆಯಾದ ಹೆಂಡತಿಯನ್ನು ಪಡೆದವನು' ಎಂದು ಕೀರ್ತಿಯೂ ಉಂಟಾಗುವುದು. ಹೀಗೆ ಮಾಡುವುದೇ ನಿಮಗೆ ಧರ್ಮವು. ಪ್ರಯೋಜನಕ್ಕೂ ಕಾರಣವಾದದ್ದು. ಯಾವುದಕ್ಕಾಗಿ ಹೆಂಡತಿಯನ್ನು ಮದುವೆ ಯಾಗುವುದೋ ಆ ಕಾರ್ಯವು ತಮಗೆ ನನ್ನಿಂದ ಆಗಿದೆ. ಒಂದು ಹೆಣ್ಣುಮಗಳೂ ಇದ್ದಾಳೆ. ಒಂದು ಗಂಡು ಕೂಸೂ ಇದೆ. ನಾನು ನಿಮ್ಮ ಋಣವನ್ನು ಪರಿಹರಿಸಿ ಕೊಂಡಿದ್ದೇನೆ. ನಾನು ಹೋದರೂ ನೀವು ಮಕ್ಕಳನ್ನು ಸಲಹಲಿಕ್ಕೆ ಸಮರ್ಥರು. ನೀವು ಹೋಗಿಬಿಟ್ಟರೆ ನಾನು ಮಕ್ಕಳನ್ನು ಸಂರಕ್ಷಣೆ ಮಾಡಲಿಕ್ಕೆ ಸಮರ್ಥಳಲ್ಲ. ಪ್ರಾಣಪ್ರಿಯ! ತಾವು ನನ್ನನ್ನು ಕೈಬಿಟ್ಟು ಹೋದರೆ ಈ ಮಕ್ಕಳ ಗತಿಯೇನು? ಈ ಮಕ್ಕಳನ್ನು ನಾನು ಹೇಗೆ ಪೋಷಿಸಲಿ? ನಾನು ವಿಧವೆಯಾಗಿ ಅನಾಥಳಾಗಿ ಚಿಕ್ಕಮಕ್ಕಳುಳ್ಳವಳು ಧರ್ಮಮಾರ್ಗದಲ್ಲಿ ಇದ್ದುಕೊಂಡು ಎರಡು ಮಕ್ಕಳನ್ನು ಹೇಗೆ ಬದುಕಿಸಲಿ? ಅನೇಕ ಅಹಂಕಾರಿಗಳು ತಮ್ಮ ಸಂಬಂಧಕ್ಕೆ ಅನರ್ಹರಾದ ಅಯೋಗ್ಯರಾದ ನನ್ನೊಡನೆ ನಿಮ್ಮ ಮಗಳನ್ನು ಮದುವೆ ಮಾಡಿಕೊಡಬೇಕೆಂದು ಬಲಾತ್ಕಾರ ಮಾಡಲಿಕ್ಕೆ ಬಂದಾಗ ನಾನು ಹೇಗೆ ಸಂರಕ್ಷಿಸುವೆನು? ಭೂಮಿಯಲ್ಲಿ ಬಿದ್ದಿರುವ ಮಾಂಸವನ್ನು ಎಲ್ಲಾ ಪಕ್ಷಿಗಳೂ ಅಪೇಕ್ಷಿಸುವಂತೆ ಗಂಡನಿಲ್ಲದ ಹೆಂಗಸನ್ನು ಎಲ್ಲಾ ದುಷ್ಟರೂ ಅಪೇಕ್ಷಿಸುವರು.

ಈರೀತಿಯಾಗಿ ಎಲ್ಲಾ ದುರಾತ್ಮರೂ ಬಂದು ಬಲಾತ್ಕಾರವಾಗಿ ಯಾಚಿಸುವಾಗ ನಾನು ಧರ್ಮಮಾರ್ಗದಲ್ಲಿ ಇರಲಿಕ್ಕೆ ಹೇಗೆ ಶಕ್ಯವಾಗುವುದು? ಹೆಂಗಸಾಗಿ ಹುಟ್ಟುವುದಕ್ಕೇ ಧಿಕ್ಕಾರವಿರಲಿ. ಚಿಕ್ಕತನದಲ್ಲಿ ತಂದೆತಾಯಿಗಳ ವಶಳಾಗಿ ಇರಬೇಕು. ಯೌವನದಲ್ಲಿ ಗಂಡನ ವಶಳಾಗಿರಬೇಕು. ಕೊನೆಗೆ ಮಗನ ವಶಳಾಗಿರಬೇಕು. ಸ್ವತಂತ್ರಳಾಗಿರುವ ಸ್ತ್ರೀಯು ನಿಂದ್ಯಳು. ಸ್ತ್ರೀಯರು ಅನಾಥರಾಗಿರುವುದು ದುಷ್ಟರಿಗೆ ಅವರನ್ನು ಕೆಡಿಸಲಿಕ್ಕೆ ಕಾರಣವಾಗಿರುವುದು. ತುಪ್ಪದಿಂದ ಅದ್ದಿದ ವಸ್ತ್ರವನ್ನು ನಾಯಿಗಳು ಎಳೆದುಕೊಂಡು ಹೋಗುವಂತೆ ಅನಾಥರಾದ ಸ್ತ್ರೀಯರನ್ನು ದುಷ್ಟರು ಸೆಳಕೊಂಡು ಹೋಗುವರು. ಮತ್ತು ಒಬ್ಬನಾದ ನಿಮ್ಮ ಮಗನನ್ನು ದೊಡ್ಡವರಿಗೆ ಸಮ್ಮತವಾದ ಮಾರ್ಗದಲ್ಲಿ ಹೋಗುವಂತೆ ನಾನು ಹೇಗೆ ಶಿಕ್ಷಿಸಲಿಕ್ಕೆ ಸಮರ್ಥ ಳಾಗುವೆನು? ನೀವು ಹೇಗೆ ಮಗನಿಗೆ ಉಪದೇಶಮಾಡಿ ಗುಣವಂತನನ್ನಾಗಿ ಮಾಡುವಿರೋ ಹಾಗೆ ನಾನು ಅನಾಥನಾದ ಅವನಿಗೆ ಮಾಡಲಿಕ್ಕೆ ಸಾಧ್ಯವೋ? ನಿಮ್ಮ ಮಗಳನ್ನೂ ಕೂಡ ನನ್ನನ್ನು ತಿರಸ್ಕರಿಸಿ ಅನೇಕ ದುಷ್ಟರು ಅಪೇಕ್ಷಿಸುವರು. ನಾನು

ಸಮ್ಮತಿಸದದ್ದರೆ ಅವರು ಗುಣವತಿಯಾದ ನಿಮ್ಮ ಮಗಳನ್ನು ಬಲಾತ್ಕಾರದಿಂದ ಎಳೆದುಕೊಂಡು ಹೋಗುವರು. ಇದನ್ನು ನಾನು ನೋಡುತ್ತಾ ಇರಬೇಕು. ಮಗಳ ಈ ಆಪತ್ತನ್ನು ನೋಡಬೇಕು. ಲೋಕದ ಜನರೂ ನನ್ನನ್ನು ನಿಂದಿಸುವರು. ನಾನೂ ದುಷ್ಟರಿಂದಾಗಿ ಸಾಯಬೇಕಾಗುವುದು. ನೀರು ಆರಿಹೋದರೆ ಮೀನು ಸಾಯುವಂತೆ ನಾವು ಸತ್ತರೆ ಇಬ್ಬರು ಮಕ್ಕಳೂ ಸಾಯುವರು. ನೀವು ಹೋದರೆ ನಿಶ್ಚಯವಾಗಿಯೂ ನಾವು ಮೂರು ಜನರೂ ಸಾಯುವೆವು. ಆದುದರಿಂದ ನೀವು ನನ್ನನ್ನು ಒಬ್ಬಳನ್ನು ಬಿಡಬೇಕು. ಮಕ್ಕಳನ್ನು ಹಡೆದ ಹೆಂಗಸಾದವಳು ಗಂಡನು ಬದುಕಿರುವಾಗಲೇ ಸಾಯುವುದು ಪರಮಧರ್ಮವೆಂದು ಧರ್ಮವನ್ನು ತಿಳಿದವರು ಹೇಳುವರು.

ಗಂಡನು ಹೋಗಿ ಮಕ್ಕಳ ಹತ್ತಿರ ಇರುವುದು ಬಹು ಕಷ್ಟಕರವಾದದ್ದು. ಅರಸಿನ ಕುಂಕುಮ ಪುಷ್ಪ ಮೊದಲಾದ ಸೌಮಂಗಲ್ಯ ವುಳ್ಳವಳಾಗಿ ಯಾವಾಗ ಸಾಯುತ್ತಾಳೋ ಅವಳು ಗಂಡನು ಕೊಟ್ಟ ನೀರನ್ನು ಸ್ವೀಕರಿಸಿ ಗಂಡನ ಪಾದದಲ್ಲಿಯೂ ಮನಸ್ಸುಳ್ಳವಳಾಗಿ ಪಾರ್ವತೀದೇವಿಯರ ಲೋಕಕ್ಕೆ ಹೋಗಿ ಅವರ ಸಖಿಯಾಗಿ ಸಂತೋಷದಿಂದ ಇರುವಳು. ಹೆಂಗಸಿಗೆ ತಂದೆಯು ಕೊಡುವುದೂ ಸ್ವಲ್ಪವೇ. ತಾಯಿಯು ಕೊಡುವದು ಸ್ವಲ್ಪವೇ. ಮಗನು ಕೊಡುವುದೂ ಸ್ವಲ್ಪವೇ. ಅಪರಿಮಿತವಾಗಿ ಕೊಡುವವನು ಗಂಡನೇ. ಅವನಿಂದ ಯಾವ ಹೆಂಗಸು ಸಂತೋಷಪಡಲಾರಳು? ನಾನು ತಮಗಾಗಿ ಈ ಮಗನನ್ನು ಈ ಮಗಳನ್ನು ಬಂಧುಗಳನ್ನು ಈ ಜೀವನವನ್ನು ಪರಿತ್ಯಾಗ ಮಾಡಿಯಾಯಿತು. ಹೆಂಗಸಾದವಳಿಗೆ ಯಜ್ಞ, ತಪಸ್ಸು, ದಾನ, ನಾನಾ ವಿಧ ವ್ರತಗಳು, ಇವುಗಳಿಂದ ಗಂಡನಿಗೆ ನಿತ್ಯವೂ ಪ್ರಿಯವನ್ನು ಹಿತವನ್ನು ಮಾಡುವುದೇ ಶ್ರೇಷ್ಠವಾದ ಧರ್ಮವು. ತಮಗೂ ತಮ್ಮ ವಂಶಕ್ಕೂ ಇಷ್ಟವಾಗಿಯೂ ಹಿತವಾಗಿಯೂ ಇರುವ ಜ್ಞಾನಿಗಳಿಗೆ ಸಮ್ಮತವಾದ ಈ ಧರ್ಮವನ್ನು ನಾನು ಮಾಡುವೆನು. ಮಕ್ಕಳೂ, ಹಣವೂ, ಮಿತ್ರರೂ, ಹೆಂಡತಿಯೂ ಆಪತ್ತಿನಿಂದ ರಕ್ಷಿಸಲಿಕ್ಕೆ ಎಂದು ಸಜ್ಜನರಿಗೆ ಸಮ್ಮತವಾದದ್ದು. ಆಪತ್ತಿಗಾಗಿ ಅಂದರೆ ಆಪತ್ತನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಹಣವನ್ನು ರಕ್ಷಿಸಬೇಕು. ಹಣವನ್ನು ಬಿಟ್ಟಾದರೂ ಹೆಂಡತಿಯನ್ನು ರಕ್ಷಿಸಬೇಕು. ಹೆಂಡತಿಯನ್ನು ಹಣವನ್ನು ಪರಿತ್ಯಾಗ ಮಾಡಿಯಾದರೂ ತನ್ನನ್ನು ರಕ್ಷಿಸಿಕೊಳ್ಳಬೇಕು. ಈಲೋಕದ ಪರಲೋಕದ ಎರಡು ಫಲಕ್ಕೋಸ್ಕರವೂ ಹೆಂಡತಿ, ಮಗ, ಹಣ, ಮನೆ ಎಲ್ಲಾ ಇರುವುದು. ಎಲ್ಲದಕ್ಕಿಂತಲೂ ತನ್ನನ್ನೇ ರಕ್ಷಿಸಿಕೊಳ್ಳಬೇಕು. ತಾನಿದ್ದರೆ ಎಲ್ಲವೂ ಇರುವುದು. ತಾನೇ ಹೋದರೆ ಮತ್ತೇನಿದ್ದರೆ ತನಗೇನು ಫಲವಿದೆ? ಆದುದರಿಂದ ನನ್ನಿಂದ ತಮ್ಮ ಕಾರ್ಯವನ್ನು

ಮಾಡಿರಿ. ಉದ್ಧಾರವನ್ನು ಹೊಂದಿರಿ. ನನಗೆ ಅನುಜ್ಞೆಯನ್ನು ಕೊಡಿರಿ. ನನ್ನ ಮಕ್ಕಳನ್ನು ರಕ್ಷಿಸಿಕೊಂಡು ಇರಿ. ಹೆಂಗಸರನ್ನು ಕೊಲ್ಲಬಾರದು ಎಂದು ಧರ್ಮವನ್ನು ತಿಳಿದವರು ಹೇಳುವರು. ರಾಕ್ಷಸರು ಧರ್ಮವನ್ನು ತಿಳಿದವರು ಎನ್ನುವರು. ಆದುದರಿಂದ ನಾನು ಹೋದರೆ ರಾಕ್ಷಸನು ಕೊಲ್ಲದೆ ಬಿಟ್ಟರೂ ಬಿಡಬಹುದು. ಗಂಡಸಾದ ನೀವು ಹೋದರೆ ನಿಶ್ಚಯವಾಗಿಯೂ ಕೊಲ್ಲುವನು. ನನಗೇನು ಕಡಿಮೆಯಾಯಿತು? ತಮ್ಮಿಂದ ಬೇಕಾದ ಪ್ರಿಯಗಳನ್ನು ಅನುಭವಿಸಿದೆನು. ಧರ್ಮವನ್ನು ಅನುಷ್ಠಾನ ಮಾಡಿದ್ದೇನೆ. ತಮ್ಮ ಸೇವೆಯನ್ನು ಮಾಡಿ ಬಹಳ ಕೀರ್ತಿಯನ್ನೂ ಪಡೆದಿರುವೆನು. ತಮಗೆ ನನ್ನಿಂದ ಸಂತಾನವೂ ಆಯಿತು. ಆದುದರಿಂದ ನನಗೆ ಸಾಯುತ್ತೇನೆ ಎಂದು ಸ್ವಲ್ಪವೂ ದುಃಖವಿಲ್ಲ. ನಾನು ತಮ್ಮಿಂದ ಮಕ್ಕಳನ್ನು ಹಡೆದಿದ್ದೇನೆ. ನನಗೆ ವಯಸ್ಸೂ ಆಯಿತು. ಯಾವಾಗಲೂ ತಮಗೆ ಪ್ರೀಯವಾಗಬೇಕೆಂದೇ ಅಪೇಕ್ಷಿಸುತ್ತಿದ್ದೇನೆ. ಇದನ್ನೆಲ್ಲಾ ನೋಡಿ ನಾನು ಹೀಗೆ ನಿಶ್ಚಯಮಾಡಿಕೊಂಡಿರುವೆನು. ಮತ್ತು ನಾನು ಹೋದಮೇಲೆ ತಾವು ಬೇರೊಂದು ಮದುವೆಯನ್ನು ಮಾಡಿಕೊಂಡು ತಮಗೆ ಗೃಹಸ್ಥಧರ್ಮವು ನಡೆಯುವುದು. ಗಂಡಸರು ಅನೇಕ ಮದುವೆಯಾಗುವುದು ಅಧರ್ಮವಲ್ಲ. ಹೆಂಗಸರಿಗಾದರೆ ಬಹುಪತಿಗಳನ್ನು ಸ್ವೀಕರಿಸುವುದು ಅಧರ್ಮವು. ಇದನ್ನೆಲ್ಲಾ ತಾವು ಯೋಚಿಸಿ ಆತ್ಮಹತ್ಯವೂ ನಿಂದ್ಯವೆಂದು ತಿಳಿದುಕೊಂಡು ನನ್ನಿಂದ ತಮ್ಮನ್ನೂ ಕುಲವನ್ನೂ ಈ ಮಕ್ಕಳನ್ನೂ ಉದ್ಧಾರಮಾಡಿಕೊಳ್ಳಿರಿ'' ಎಂದು ಹೇಳಿದಳು.

ಈರೀತಿಯಾಗಿ ಹೆಂಡತಿಯ ಮಾತನ್ನು ಕೇಳಿ ಬ್ರಾಹ್ಮಣನಿಗೆ ಅಳು ಬಂದಿತು. ಅವನು ಅವಳನ್ನು ಗಟ್ಟಿಯಾಗಿ ಆಲಿಂಗಿಸಿಕೊಂಡು ಕಣ್ಣನಲ್ಲಿ ತುಂಬಾ ದುಃಖದಿಂದ ಧಾರೆಧಾರೆಯಾಗಿ ನೀರು ಸುರಿಸಿದನು. ಹೆಂಡತಿಯೂ ಕಣ್ಣೀರು ಸುರಿಸಿದಳು. ಬ್ರಾಹ್ಮಣನು ಹೆಂಡತಿಯೊಡನೆ 'ಕಲ್ಯಾಣಿ! ಹೀಗೆ ಹೇಳಬೇಡವೇ. ನೀನು ಬದುಕಿರು. ಜ್ಞಾನಿಯಾದವನು ಹೆಂಡತಿಯನ್ನೋ ಮಕ್ಕಳನ್ನೋ ಪರಿತ್ಯಜಿಸಬಾರದು. ಗಂಡ ನಾದವನು ವಿಶೇಷವಾಗಿ ಹೆಂಡತಿಯನ್ನು ರಕ್ಷಿಸಬೇಕು. ಅವಳನ್ನು ಬಿಟ್ಟು ಬದುಕಲಿಕ್ಕೆ ಆಗಲಾರದು' ಎಂದು ಹೇಳಿದನು.

ಕುಂತೀದೇವಿಯು ನೋಡುತ್ತಲೇ ಇದ್ದಳು. ತರುವಾಯ ತಂದೆತಾಯಿಯು ತುಂಬಾ ದುಃಖದಿಂದ ಅಳುತ್ತಾ ಮಾತಾಡುತ್ತಿರುವುದನ್ನು ಕಂಡು ಅವರ ಹೆಣ್ಣು ಮಗಳು ನೀವಿಬ್ಬರೂ ಅನಾಥರಂತೆ ಈರೀತಿಯಾಗಿ ಬಹುದುಃಖದಿಂದ ಯಾಕೆ ಅಳುತ್ತಿರುವಿರಿ? ನನ್ನ ಮಾತನ್ನು ಸ್ವಲ್ಪ ಕೇಳಿರಿ. ಕೇಳಿ ಹಾಗೆ ಮಾಡಿರಿ. ಧರ್ಮದಿಂದ ನೀವು ಯಾವಾಗಲಾದರೂ ಒಂದುದಿನ ನನ್ನನ್ನು ಪರಿತ್ಯಾಗಮಾಡಿ ಇನ್ನೊಬ್ಬರಿಗೆ

ಕೊಡಬೇಕು. ಹೇಗಾದರೂ ಪರಿತ್ಯಾಗಕ್ಕೆ ಅರ್ಹಳಾದ ನನ್ನನ್ನು ಈಗಲೇ ಪರಿತ್ಯಾಗ ಮಾಡಿರಿ. ನನ್ನಿಂದ ಎಲ್ಲವನ್ನು ರಕ್ಷಿಸಿಕೊಳ್ಳಿರಿ. ನಮ್ಮನ್ನು ಉದ್ಧಾರ ಮಾಡುವರೆಂದಷ್ಟೇ ಮಕ್ಕಳನ್ನು ಅಪೇಕ್ಷಿಸುವುದು? ಇಂತಹ ಆಪತ್ತಿನ ಸಮಯದಲ್ಲಿ ನನ್ನಿಂದ ಉದ್ಧಾರವನ್ನು ಹೊಂದಿರಿ. ಪಿತಾಮಹರು ತಮ್ಮನ್ನು ರಕ್ಷಿಸುವುದಕ್ಕಾಗಿ ನನ್ನಿಂದ ದೌಹಿತ್ರರನ್ನು ಅಪೇಕ್ಷಿಸುತ್ತಾರೆ. ನಾನೇ ತಂದೆಯ ಜೀವನವನ್ನು ರಕ್ಷಿಸಿ ಅವರನ್ನು ಸಂತೋಷಪಡಿಸುವೆನು. ನೀವು ಪರಲೋಕಕ್ಕೆ ಹೋದರೆ ಈ ತಮ್ಮನೂ ಉಳಿಯಲಾರನು. ತಂದೆಯಾದ ನೀವೂ ನನ್ನ ತಮ್ಮನೂ ಸ್ವರ್ಗಸ್ಥರಾದರೆ ಪಿತೃಗಳಿಗೆ ಪಿಂಡವೇ ಇಲ್ಲವೆಂದಾಗುವುದು. ಅದು ಅವರಿಗೆ ಅನಿಷ್ಟವಾದದ್ದು. ತಂದೆಯೂ ತಾಯಿಯೂ ತಮ್ಮನೂ ಮೂರು ಜನರೂ ಇಲ್ಲವಾದರೆ ನಾನು ಬಹುದುಃಖದಿಂದ ಸಾಯುವೆನು. ನೀವು ಸುಖವಾಗಿ ಇದ್ದರೆ ತಾಯಿಯೂ ಕೂಸಾದ ಈ ನನ್ನ ತಮ್ಮನೂ ನಿಮ್ಮ ಸಂತಾನವೂ ಪಿಂಡವೂ ಪ್ರತಿಷ್ಠಿತವಾಗಿರುವುದು. ಮಗನು ತನಗೆ ಸಮಾನನು. ಹೆಂಡತಿಯು ಸಖಿಯು. ಮಗಳು ಕಷ್ಟಕೊಡಲಿಕ್ಕೆ ಇದ್ದವಳು. ಆದುದರಿಂದ ನೀವು ಕಷ್ಟದಿಂದ ಬಿಡಿಸಿಕೊಳ್ಳಿರಿ. ಧರ್ಮಕಾರ್ಯದಲ್ಲಿ ನನ್ನನ್ನು ಉಪಯೋಗಿಸಿರಿ. ನೀನು ಸ್ವರ್ಗಸ್ಥರಾದರೆ ನಾನು ಚಿಕ್ಕಹುಡುಗಿಯಾದವಳು ಅನಾಥಳಾಗಿ ಎಲ್ಲೆಲ್ಲಿ ಅಲೆಯಬೇಕಾಗುವುದು. ನಾನು ರಾಕ್ಷಸನ ಬಾಯಿಗೆ ಹೋದರೆ ನಿಮ್ಮ ಕುಲವನ್ನು ಉದ್ಧಾರಮಾಡಿ ಉತ್ತಮ ಫಲವನ್ನು ಹೊಂದುವೆನು. ನನ್ನನ್ನು ಬಿಟ್ಟು ನೀವು ಸ್ವರ್ಗಸ್ಥರಾದರೆ ಬಹುಪೀಡೆಯನ್ನು ಹೊಂದುವೆನು. ಅದನ್ನು ಸ್ವಲ್ಪ ನೀವು ಯೋಚನೆ ಮಾಡಬೇಕು. ಆದುದರಿಂದ ನಮಗೋಸ್ಕರವಾಗಿಯೂ ಧರ್ಮಕ್ಕೋಸ್ಕರ ವಾಗಿಯೂ ವಂಶವು ಬೆಳೆಯುವುದಕ್ಕಾಗಿಯೂ ನಿಮ್ಮನ್ನು ರಕ್ಷಿಸಿಕೊಳ್ಳಿರಿ. ಯಾವಾಗಲಾದರೂ ಪರಿತ್ಯಜಿಸಲಿಕ್ಕೆ ಇದ್ದ ನನ್ನನ್ನು ಈಗಲೇ ಪರಿತ್ಯಜಿಸಿರಿ. ಅವಶ್ಯಕರ್ತವ್ಯವಾದ ಈ ವಿಷಯದಲ್ಲಿ ಕಾಲವನ್ನು ಕಳೆಯಬೇಡಿರಿ. ತಾವು ಸ್ವರ್ಗಸ್ಥರಾದರೆ ನಾವು ಅನಾಥರಾಗಿ ಅನ್ನವನ್ನು ಬೇಡುತ್ತಾ ನಾಯಿಗಳಂತೆ ಮನೆಮನೆಗಳಲ್ಲಿ ಅಲೆಯಬೇಕಾಗುವುದು. ಇದಕ್ಕಿಂತ ಹೆಚ್ಚಿನ ದುಃಖವಿದೆಯಾ? ನೀವು ಸುಖವಾಗಿದ್ದುಕೊಂಡು ನಾನು ಮೃತಳಾದರೆ ಈ ಲೋಕದಲ್ಲಿ ಕೀರ್ತಿ ಯಿರುವುದಂತೆ ಬದುಕಿರುವಂತೆಯೇ ಇರುವೆನು. ನೀವು ಸತ್ತ ನನಗೆ ಒಂದಿಷ್ಟು ನೀರು ಕೊಟ್ಟರೆ ಅದೇ ನನಗೆ ಹಿತಕರವಾಗುವುದು. ತಂದೆಯೇ! ಇದನ್ನೆಲ್ಲಾ ಯೋಚಿಸಿ ನಿಮಗೂ ತಾಯಿಗೂ ತಮ್ಮನಿಗೂ ವಂಶಕ್ಕೂ ಹಿತಕರವಾದ ಈ ಕಾರ್ಯವನ್ನು ಮಾಡಿರಿ. ಮತ್ತು ಮಕ್ಕಳು ಸತ್ತರೆ ತಂದೆತಾಯಿಯರಿಗೆ ಗುಣವಂತ

ರಾದ ಬೇರೆ ಮಕ್ಕಳು ಹುಟ್ಟಬಹುದು. ಮಕ್ಕಳಿಗೆ ಗುಣವಂತರಾದ ಬೇರೆ ತಂದೆತಾಯಿಗಳು ಬರುವರೇ?'' ಇತ್ಯಾದಿ ರೀತಿಯಾಗಿ ಹೇಳಿದಳು.

ಈರೀತಿಯಾಗಿ ಮಗಳ ಮಾತನ್ನು ಕೇಳಿ ತಂದೆತಾಯಿಗಳಿಬ್ಬರೂ ಅಳಲಿಕ್ಕೆ ಆರಂಭಿಸಿದರು. ಅದನ್ನು ನೋಡಿ ಮಗಳೂ ಅಳುವವಳಾದಳು. ಈರೀತಿಯಾಗಿ ಎಲ್ಲರೂ ಅಳುವುದನ್ನು ನೋಡಿ ಆ ಚಿಕ್ಕಬಾಲಕನು ತೊದಲು ನುಡಿಯಿಂದ 'ಅಪ್ಪ! ನೀನು ಅಳಬೇಡ. ಅಮ್ಮ! ನೀನು ಅಳಬೇಡ. ಅಕ್ಕ! ನೀನು ಅಳಬೇಡ' ಎಂದು ಹೇಳುತ್ತಾ ಒಬ್ಬೊಬ್ಬರ ಸಮೀಪಕ್ಕೂ ಹೋದನು. ಆಮೇಲೆ ನಗುತ್ತಾ ಒಂದು ಚಿಕ್ಕ ಹುಲ್ಲಿನ ಕಡ್ಡಿಯನ್ನು ಹಿಡಿದುಕೊಂಡು 'ಈ ಕೋಲಿನಿಂದ ಮನುಷ್ಯಭಕ್ಷಕನಾದ ಆ ರಾಕ್ಷಸನನ್ನು ಕೊಂದು ಹಾಕಿಬಿಡುವೆನು' ಎಂದು ಹೇಳಿದನು.

ಪೂರ್ವದಲ್ಲಿ ಹೇಳಿದಂತೆ ಅಳುತ್ತಿದ್ದವರಿಗೂ ಈ ಮಗುವಿನ ತೊದಲು ಮಾತುಗಳನ್ನು ಕೇಳಿ ಮಹಾಸಂತೋಷವಾಯಿತು. ಇದೇ ಸರಿಯಾದ ಶುಭಸಮಯ ವೆಂದು ತಿಳಿದುಕೊಂಡು ಕುಂತೀದೇವಿಯು ಒಳಗೆ ಹೋಗಿ 'ನಿಮಗೆ ಈ ದುಃಖಕ್ಕೆ ಮೂಲಕಾರಣವೇನೆಂದು ತಿಳಿಯಲು ಬಯಸುವೆನು. ಶಕ್ಯವಾದರೆ ನಿಮ್ಮ ದುಃಖವನ್ನು ಪರಿಹರಿಸುವೆನು' ಎಂದು ಹೇಳಿದಳು.

ಆಗ ಬ್ರಾಹ್ಮಣನು 'ಅಮ್ಮಾ! ತಪೋಧನಳೇ! ಸಜ್ಜನರಿಗೆ ಯೋಗ್ಯವಾದ ಮಾತನ್ನು ಆಡುತ್ತಿರುವೆ. ಆದರೆ ನಮಗೆ ಬಂದಿರುವ ದುಃಖವನ್ನು ಪರಿಹರಿಸಲಿಕ್ಕೆ ಮನುಷ್ಯನಾದವನಿಂದ ಸಾಧ್ಯವಿಲ್ಲ. ಆದರೂ ನಾನು ಹೇಳುತ್ತೇನೆ. ಈ ನಗರದ ಸಮೀಪದಲ್ಲೇ ಬಕಾಸುರನೆಂಬ ದೈತ್ಯನು ವಾಸಮಾಡುತ್ತಿರುವನು' ಎಂದು ಹೇಳಿ ಅವನ ಚರಿತ್ರೆಯನ್ನೆಲ್ಲಾ ತಿಳಿಸಿ ''ಆ ಅಸುರನಿಗೆ ಒಂದೊಂದು ದಿನ ಒಂದೊಂದು ಮನೆಯವರು ಕಪ್ಪವನ್ನು ಕೊಡಬೇಕು. ಇಲ್ಲದಿದ್ದರೆ ಬಂದು ಆ ಮನೆಯ ಎಲ್ಲರನ್ನೂ ಕೊಂದು ತಿಂದುಬಿಡುವನು. ಯದ್ಯಪಿ ಈ ಊರಿಗೆ ಒಬ್ಬ ರಾಜನು. ಇಲ್ಲಿಂದ ಸ್ವಲ್ಪ ದೂರದಲ್ಲಿ ವೇತ್ರಕೀಯಗೃಹವೆಂಬ ಸ್ಥಳದಲ್ಲಿ ಅವನು ವಾಸಮಾಡುತ್ತಿರುವನು. ಅವನು ಈ ನಗರವನ್ನು ನೋಡುವುದೇ ಇಲ್ಲ. ಏಕೆಂದರೆ ಅವನಿಗೂ ಈ ರಾಕ್ಷಸನನ್ನು ಕೊಲ್ಲುವ ಸಾಮರ್ಥ್ಯವಿಲ್ಲ. ಅವನೂ ಕೂಡ ಊರಜನರೊಡನೆ ನೀವೆಲ್ಲರೂ ರಾಕ್ಷಸನು ಹೇಳುವಂತೆ ಕಪ್ಪವನ್ನು ಕೊಡಿರಿ ಎಂದು ಹೇಳುವನು. ಬೇರೆ ಉಪಾಯದಿಂದ ಅಂದರೆ ರಾಕ್ಷಸನಿಗೆ ಅವನು ಹೇಳುವಂತೆ ಕಪ್ಪವನ್ನು ಕೊಡದೆ ಅವನಿಂದ ಜನರನ್ನು ರಕ್ಷಿಸುವ ಉಪಾಯವು ಇರುವುದಿಲ್ಲ. ಏಕೆಂದರೆ ಆ ರಾಕ್ಷಸನನ್ನು ಜಯಿಸುವ ಸಾಮರ್ಥ್ಯವು ಆ ರಾಜನಿಗಿಲ್ಲ. ಅವನು ರಾಕ್ಷಸನನ್ನು ಜಯಿಸಲಿಕ್ಕೆ

ಪ್ರಯತ್ನವನ್ನು ಮಾಡುವುದಿಲ್ಲ. ಅಷ್ಟು ಮಂದಬುದ್ಧಿಯುಳ್ಳವನಾಗಿರುವನು. ಆದುದರಿಂದ ಊರಜನರಿಗೆ ಹೇಗೆ ಕ್ಷೇಮವಾಗಬೇಕು? ಇಂತಹ ದುರ್ಬಲರಾಜನನ್ನು ಆಶ್ರಯಿಸಿದವರಾಗಿ ಅವನ ದೇಶದಲ್ಲಿ ವಾಸಮಾಡುತ್ತಿದ್ದೇವೆ. ಬ್ರಾಹ್ಮಣರಾದ ನಾವು ಯಾರ ಹತ್ತಿರ ಹೇಳಿಕೊಳ್ಳಬೇಕು? ಮೊದಲು ಸರಿಯಾದ ರಾಜನಿರಬೇಕು. ಹಾಗಿದ್ದರೇನೇ ಹೆಂಡತಿ ಹಣವನ್ನೆಲ್ಲಾ ಇಟ್ಟುಕೊಂಡಿರಬಹುದು. ರಾಜನೇ ಸರಿಯಾಗಿ ಇಲ್ಲದಿದ್ದರೆ ಹೆಂಡತಿಯೆಲ್ಲಿ? ಹಣವೆಲ್ಲಿ? ಈಗ ಇಂತಹ ಆಪತ್ತನ್ನು ಹೊಂದಿ ತುಂಬಾ ದುಃಖಪಡುತ್ತಿರುವೆವು.

ನಾಳೆದಿವಸ ನಾವು ಕಪ್ಪಕೊಡುವ ಸಮಯವಾಗಿರುವುದು. ರಾಕ್ಷಸನಿಗೆ ಬೇಕಾದ ಭೋಜನವನ್ನೂ ಪುರುಷನನ್ನೂ ನಾನು ಕಳುಹಿಸಬೇಕು. ಒಬ್ಬ ಪುರುಷನನ್ನು ಕ್ರಯಕ್ಕೆ ಪಡೆದು ಕಳುಹಿಸಲಿಕ್ಕೆ ಬೇಕಾದಷ್ಟು ಹಣವು ನನ್ನಲ್ಲಿ ಇಲ್ಲ. ಬಂಧುಗಳನ್ನು ಕೊಟ್ಟು ಕಳುಹಿಸಲಿಕ್ಕೆ ಅಸಮರ್ಥನಾಗಿದ್ದೇನೆ. ಆ ರಾಕ್ಷಸನಿಂದ ಬಿಡಿಸಿಕೊಳ್ಳಲಿಕ್ಕೆ ಬೇರೆ ಗತಿಯು ಕಾಣಿಸುವುದಿಲ್ಲ. ಈರೀತಿಯಾಗಿ ನಾನು ಮಹಾ ದುಃಖಸಮುದ್ರದಲ್ಲಿ ಮುಳುಗಿದ್ದೇನೆ. ಆದುದರಿಂದ ಎಲ್ಲಾ ಬಂಧುಗಳಿಂದಲೂ ಸಹಿತನಾಗಿಯೇ ರಾಕ್ಷಸನ ಬಳಿಗೆ ಹೋಗುವೆನು. ಅವನು ನಮ್ಮನ್ನೆಲ್ಲರನ್ನೂ ತಿಂದು ಹಾಕುವನು. ಈರೀತಿಯಾಗಿ ನನ್ನ ದುಃಖದ ಮೂಲಕಾರಣವನ್ನು ಹೇಳಿರುವೆನು' ಎಂದು ಹೇಳಿದನು.

ಆಗ ಕುಂತಿದೇವಿಯು 'ನೀವು ಈ ಭಯದಿಂದ ಸ್ವಲ್ಪವೂ ದುಃಖಪಡಬೇಕಾಗಿಲ್ಲ. ಆ ರಾಕ್ಷಸನಿಂದ ಬಿಡಿಸಲಿಕ್ಕೆ ನಾನು ಉಪಾಯವನ್ನು ತಿಳಿದಿರುವೆನು. ನೀವೋ ನಿಮ್ಮ ಮಗನೋ ಆ ರಾಕ್ಷಸನ ಬಾಯಿಗೆ ಹೋಗುವುದು ಬೇಡ. ನಿಮಗೆ ಇರುವುದು ಒಬ್ಬ ಮಗನು. ಒಬ್ಬಳು ಮಗಳು. ಅವರಿಬ್ಬರನ್ನೂ ಕಳುಹಿಸುವುದು ಸರಿಯಲ್ಲ. ನಿಮ್ಮ ಹೆಂತಿಯು ಹೋಗುವುದು ಸರಿಯಲ್ಲ. ನನಗೆ ಐದು ಮಕ್ಕಳಿರುವರು. ಅವರಲ್ಲಿ ಒಬ್ಬನು ನಿಮಗೋಸ್ಕರ ಅನ್ನವನ್ನು ಹಿಡಿದುಕೊಂಡು ಆ ರಾಕ್ಷಸನ ಬಳಿಗೆ ಹೋಗುವನು' ಎಂದಳು.

ಆಗ ಬ್ರಾಹ್ಮಣನು 'ಅಮ್ಮ! ನಾನು ಬದುಕಿರಬೇಕೆಂದು ಈ ಕಾರ್ಯವನ್ನು ಮಾತ್ರ ಮಾಡಲಾರೆನು. ನನಗೋಸ್ಕರವಾಗಿ ಅತಿಥಿಯಾದ ಬ್ರಾಹ್ಮಣನಾದವನ ಪ್ರಾಣವನ್ನು ತೆಗೆಯಿಸಲಾರೆನು. ಬ್ರಾಹ್ಮಣರಿಗಾಗಿ ತನ್ನನ್ನೋ ತನ್ನ ಮಗನನ್ನೋ ಪರಿತ್ಯಾಗ ಮಾಡುವುದು ಸಜ್ಜನರ ಧರ್ಮವು. ಬ್ರಹ್ಮಹತ್ಯೆ ಆತ್ಮಹತ್ಯೆಗಳಲ್ಲಿ ಆತ್ಮಹತ್ಯೆಯೇ ಅಂಗೀಕಾರಾರ್ಹವಾದದ್ದು. ಬ್ರಹ್ಮಹತ್ಯೆಯು ಮಹಾಪಾಪವು. ಅದಕ್ಕೆ ಪ್ರಾಯಶ್ಚಿತ್ತವೇ

ಇರುವುದಿಲ್ಲ. ತಿಳಿಯದೆ ಬ್ರಹ್ಮಹತ್ಯೆಯನ್ನು ಮಾಡಿದರೂ ಪ್ರತ್ಯವಾಯವಿದೆ. ಮತ್ತು ನನಗೆ ಆತ್ಮಹತ್ಯಾದೋಷವಿಲ್ಲ. ಏಕೆಂದರೆ ನಾನಾಗಿ ಸಾಯಲು ಬಯಸುವುದಿಲ್ಲ. ನನ್ನನ್ನು ಇನ್ನೊಬ್ಬರು ಕೊಂದರೆ ಅದರಿಂದ ನನಗೆ ಪಾಪವಿಲ್ಲ. ಬುದ್ಧಿಪೂರ್ವಕವಾಗಿ ಬ್ರಾಹ್ಮಣನನ್ನು ಕೊಲ್ಲಿಸಿದರೆ ಪ್ರಾಯಶ್ಚಿತ್ತವೇ ಇರುವುದಿಲ್ಲ. ಪತ್ನೀಸಹಿತನಾಗಿ ನಾನು ಸಾಯುವುದೇ ಲೇಸು. ಬ್ರಾಹ್ಮಣಸಂಹಾರವನ್ನು ನಾನು ಎಷ್ಟು ಮಾತ್ರಕ್ಕೂ ಅಂಗೀಕರಿಸ ಲಾರೆನು'' ಎಂದನು.

ಕುಂತೀದೇವಿಯು ನನಗೂ ಬ್ರಾಹ್ಮಣರನ್ನು ರಕ್ಷಿಸಬೇಕೆಂದು ಸ್ಥಿರವಾದ ಬುದ್ಧಿಯಿದೆ. ನೂರು ಜನ ಮಕ್ಕಳಿದ್ದರೂ ತಾಯಿಗೆ ಮಗನು ಹೆಚ್ಚಾಗುವನೇ? ಆ ರಾಕ್ಷಸನು ನನ್ನ ಮಗನನ್ನು ಸಂಹರಿಸಲಿಕ್ಕೆ ಸಮರ್ಥನಾಗಲಾರನು. ನನ್ನ ಮಗನಲ್ಲಿ ಯಾರಿಂದಲೂ ಸಹಿಸಲಿಕ್ಕೆ ಅಸಾಧ್ಯವಾದ ವಿದ್ಯೆಯಿದೆ. ಅವನು ರಾಕ್ಷಸನಿಗೆ ಅನ್ನವನ್ನು ತೆಗೆದುಕೊಂಡು ಹೋಗುವನು. ತನ್ನನ್ನು ಬಿಡಿಸಿಕೊಳ್ಳುವನು. ಅನೇಕ ಬಲಿಷ್ಠರಾದ ದೊಡ್ಡ ಶರೀರವುಳ್ಳ ರಾಕ್ಷಸರು ಅವನೊಡನೆ ಜಗಳಕ್ಕೆ ಬಂದು ಸತ್ತದ್ದನ್ನು ನಾನು ನೋಡಿರುತ್ತೇನೆ. ಈ ವಿಷಯವನ್ನು ಮಾತ್ರ ಯಾರಲ್ಲಿಯೂ ಹೇಳಬಾರದು. ಹೇಳಿದರೆ ಎಲ್ಲರೂ ಬಂದು ಅವನೊಡನೆ ಆ ವಿದ್ಯೆಯನ್ನು ಹೇಳಿಕೊಡಬೇಕೆಂದು ಉಪದ್ರವಕೊಡುವರು. ಅದನ್ನು ನಾವು ಹೇಳಿದರೂ ಗುರುಗಳ ಆಜ್ಞೆಯಿಲ್ಲದೆ ಒಬ್ಬರಿಗೂ ಹೇಳಿಕೊಡಲಾರನು' ಎಂದು ಹೇಳಿದಳು. ಈರೀತಿಯಾಗಿ ಕುಂತೀ ದೇವಿಯು ಹೇಳಲು ಪತ್ನೀಸಹಿತನಾದ ಆ ಬ್ರಾಹ್ಮಣನು ಸಂತೋಷವುಳ್ಳವನಾಗಿ ಅಮೃತದಂತೆ ಇದ್ದ ಆ ಮಾತನ್ನು ಸತ್ಕರಿಸಿದನು. ತರುವಾಯ ಕುಂತೀದೇವಿಯೂ ಆ ಬ್ರಾಹ್ಮಣನೂ ಇಬ್ಬರೂ ಭೀಮಸೇನದೇವರ ಬಳಿಗೆ ಬಂದು ಈ ವಿಷಯವನ್ನೆಲ್ಲಾ ಹೇಳಿ ಈ ಉಪಕಾರವನ್ನು ಮಾಡಬೇಕೆಂದರು. ಭೀಮಸೇನದೇವರು ಹಾಗೆಯೇ ಆಗಲಿ ಎಂದು ಹೇಳಿದರು. ಬ್ರಾಹ್ಮಣರನ್ನು ಆ ರಾಕ್ಷಸನಿಂದ ತಪ್ಪಿಸುವ ಪ್ರಯುಕ್ತ ಮಹಾಸ್ವಧರ್ಮವು ಪ್ರಾಪ್ತವಾಯಿತೆಂದು ಸಂತೋಷಪಡುತ್ತಾ ಕಣ್ಣು ತಿರುಗಿಸುತ್ತಾ ಕೂತಿದ್ದರು.

ಅದೇ ಸಮಯದಲ್ಲಿ ಎಲ್ಲಾ ಪಾಂಡವರೂ ಭಿಕ್ಷೆಯನ್ನು ಹಿಡಿದುಕೊಂಡು ಬಂದರು. ಧರ್ಮರಾಜನು ಭೀಮಸೇನದೇವರನ್ನು ನೋಡಿ ಅವರು ಸಂತೋಷ ದಿಂದ ಇರುವ ವಿಷಯವನ್ನು ತಿಳಿದುಕೊಂಡು ಸಂತೋಷಕ್ಕೆ ಏನು ಕಾರಣವೆಂದು ಯೋಚಿಸಿದನು. ಅದರ ಆಕಾರವನ್ನು ನೋಡುವಾಗ ಯುದ್ಧಮಾಡಲಿಕ್ಕೆ ಅಭಿಪ್ರಾಯ ವಿರುವಂತೆಯೂ ತಿಳಿದುಕೊಂಡನು. ತರುವಾಯ ಏಕಾಂತದಲ್ಲಿ ಕೂತುಕೊಂಡು

'ಅಮ್ಮ! ಭೀಮನು ಏನು ಮಾಡಲಿಕ್ಕೆ ಯೋಚಿಸುತ್ತಿರುವನು? ನಿನ್ನ ಅನುಮತಿ ಯಿಂದಲೋ? ಅಥವಾ ತಾನಾಗಿಯೇ ಏನಾದರೂ ಮಾಡುವನೋ?' ಎಂದು ಕೇಳಿದನು.

ಕುಂತೀದೇವಿಯು 'ನನ್ನ ಮಾತಿನಿಂದಲೇ ಇವನು ಬ್ರಾಹ್ಮಣರಿಗೋಸ್ಕರ ಈ ಊರನ್ನೇ ರಕ್ಷಿಸುವುದಕ್ಕಾಗಿ ಒಂದು ಮಹಾಕಾರ್ಯವನ್ನು ಮಾಡಲಿರುವನು. ಬಕಾಸುರನಿಗಾಗಿ ಮಾಡಿರುವ ಬಹಳವಾದ ಅನ್ನವನ್ನು ಒಂದು ದಿವಸವಾದರೂ ಅವನು ಭೋಜನ ಮಾಡಲಿ' ಎಂದಳು.

ಧರ್ಮರಾಜನು 'ಏನಮ್ಮ ಇಂತಹ ಸಾಹಸಕಾರ್ಯವನ್ನು ಮಾಡಿದಿ? ಮಗನನ್ನು ಪರಿತ್ಯಾಗ ಮಾಡುವುದನ್ನು ಸಜ್ಜನರು ಪ್ರಶಂಸಾ ಮಾಡಲಾರರು. ಇನ್ನೊಬ್ಬರ ಮಗನಿಗೋಸ್ಕರ ನಿನ್ನ ಮಗನನ್ನೇಕೆ ಪರಿತ್ಯಾಗ ಮಾಡಲಿಕ್ಕೆ ಇಚ್ಛಿಸುವಿ? ಈರೀತಿಯಾಗಿ ಮಗನನ್ನು ಪರಿತ್ಯಾಗ ಮಾಡಿದ್ದರಿಂದ ನೀನು ಲೋಕವೇದ ವಿರುದ್ಧವಾದ ಕಾರ್ಯವನ್ನು ಮಾಡಿದಂತೆ ಆಯಿತಲ್ಲಾ! ಯಾರ ಬಾಹುಗಳನ್ನು ಆಶ್ರಯಿಸಿಕೊಂಡು ನಾವೆಲ್ಲರೂ ಸುಖವಾಗಿ ಮಲಗುವೆವು. ಅಲ್ಪರು ಅಪಹರಿಸಿದ ರಾಜ್ಯವನ್ನು ಪುನಃ ಹೊಂದಬೇಕೆಂದು ಇಚ್ಛಿಸಿರುವೆವು. ಯಾವಾತನ ಪರಾಕ್ರಮವನ್ನು ಯೋಚಿಸುತ್ತಾ ದುರ್ಯೋಧನನು ಶಕುನಿಯಿಂದ ಸಹಿತನಾಗಿ ರಾತ್ರಿಯೆಲ್ಲಾ ನಿದ್ರೆ ಮಾಡುವುದಿಲ್ಲ, ಯಾರ ಬಲದಿಂದ ನಾವು ಅರಗಿನ ಮನೆಯಿಂದ ಬದುಕಿ ಬಂದೆವು. ಪುರೋಚನನು ಸತ್ತನು. ಯಾವಾತನ ಪರಾಕ್ರಮವನ್ನು ಆಶ್ರಯಿಸಿ ದುರ್ಯೋಧನಾದಿಗಳನ್ನು ಸಂಹರಿಸಿ ರಾಜ್ಯವನ್ನು ಹೊಂದಬೇಕೆಂದು ಯೋಚಿಸಿರುವೆವು. ಅಂತಹ ಭೀಮಸೇನನನ್ನು ಯಾವ ಬುದ್ಧಿಯಿಂದ ರಾಕ್ಷಸನ ಬಾಯಿಗೆ ಕಳುಹಿಸುವಿ? ದುಃಖಗಳಿಂದ ನಿನ್ನ ಬುದ್ಧಿಯೇನಾದರೂ ಕೆಟ್ಟು ಹೋಯಿತೇ?' ಎಂದು ಕೇಳಿದನು.

ಕುಂತೀದೇವಿಯು 'ಯುಧಿಷ್ಠಿರ! ನೀನು ಭೀಮಸೇನ ವಿಷಯವಾಗಿ ಸಂತಾಪವನ್ನು ಹೊಂದಬೇಡ. ನಾನು ಬುದ್ಧಿಕೆಟ್ಟು ಹೋಗಿ ಈ ಕಾರ್ಯವನ್ನು ಮಾಡಿದವಳಲ್ಲ, ಮಗ! ನಾವು ಇಲ್ಲಿ ಬ್ರಾಹ್ಮಣನ ಮನೆಯಲ್ಲಿ ಸತ್ಕೃತರಾಗಿ ದುರ್ಯೋಧನಾದಿಗಳಿಗೆ ತಿಳಿಯದಂತೆ ಸುಖವಾಗಿ ವಾಸಮಾಡುತ್ತಿರುವೆವು. ಈರೀತಿಯಾಗಿ ನಮಗೆ ಉಪಕಾರಮಾಡಿದ ಈ ಬ್ರಾಹ್ಮಣನಿಗೆ ನಾವು ಅವಶ್ಯವಾಗಿ ಪ್ರತ್ಯುಪಕಾರವನ್ನು ಮಾಡಬೇಕು. ನಮಗೊಬ್ಬರು ಉಪಕಾರಮಾಡಿದರೆ ಅದು ವ್ಯರ್ಥವಾಗಬಾರದು. ಅದಕ್ಕಿಂತ ಹೆಚ್ಚಾಗಿ ನಾವು ಅವನಿಗೆ ಉಪಕಾರ ಮಾಡುವುದು ಧರ್ಮವು. ಆ ಅರಗಿನ ಮನೆಯಲ್ಲಿ ಭೀಮನ ಪರಾಕ್ರಮವನ್ನು ನೋಡಿಯೂ ಹಿಡಿಂಬನ

ಸಂಹಾರವನ್ನು ನೋಡಿಯೂ ನನಗೆ ಭೀಮನಲ್ಲಿ ವಿಶ್ವಾಸವಿದೆ. ಸಾಕ್ಷಾತ್ ವಾಯುದೇವರೇ ಭೀಮನಾಗಿ ಹುಟ್ಟಿರುವರು. ಭೀಮಸೇನನಿಗೆ ಹತ್ತುಸಾವಿರ ಆನೆಗಳ ಬಲವಿರುವುದು. ನಿಮ್ಮನ್ನೆಲ್ಲಾ ವಾರಣಾವತದಿಂದ ಹೊತ್ತುಕೊಂಡು ಬರಲಿಲ್ಲವೇ? ಅವನಿಗೆ ಸಮಾನ ಬಲಿಷ್ಠನು ಇನ್ನೊಬ್ಬನಿರುವುದಿಲ್ಲ, ಅವನು ಇಂದ್ರನ ಹತ್ತಿರವೂ ಯುದ್ಧಮಾಡುವನು. ಹುಟ್ಟಿದ ಕೂಸಾಗಿರುವಾಗ ನನ್ನ ತೊಡೆಯಿಂದ ಕೆಳಗೆ ಕಲ್ಲಿನ ಮೇಲೆ [1]ಬೀಳಕಲ್ಲೇ ಪುಡಿಯಾಯಿತು. ಅವನಿಗೆ ಒಂದು ಗಾಯವೂ ಆಗಲಿಲ್ಲ. ಆದುದರಿಂದ ಬುದ್ಧಿಯಿಂದ ಭೀಮನ ಬಲವನ್ನು ತಿಳಿದುಕೊಂಡೇ ಬ್ರಾಹ್ಮಣನಿಗೆ ಪ್ರತ್ಯುಪಕಾರವನ್ನು ಮಾಡಬೇಕೆಂದೇ ಈ ಕಾರ್ಯವನ್ನು ಮಾಡಿರುವೆನು. ಇದರಿಂದ ಎರಡು ಕಾರ್ಯಗಳೂ ಆಗುವುವು. ಒಂದು ಬ್ರಾಹ್ಮಣನಿಗೆ ಪ್ರತ್ಯುಪಕಾರ ಮಾಡಿದಂತಾಗುವುದು. ಇನ್ನೊಂದು ಮಹಾಧರ್ಮವನ್ನು ಮಾಡಿದಂತೆ ಆಗುವುದು. ಯಾವ ಕ್ಷತ್ರಿಯನು ಯಾವ ಸಂದರ್ಭದಲ್ಲಿಯಾದರೂ ಬ್ರಾಹ್ಮಣನಿಗೆ ಸಹಾಯವನ್ನು ಮಾಡುವನೋ ಅವನು ಉತ್ತಮಲೋಕವನ್ನು ಹೊಂದುವನೆಂದು ನನ್ನ ಅಭಿಪ್ರಾಯವಿದೆ. ವೈಶ್ಯರಿಗೆ ಸಹಾಯಮಾಡಿದರೆ ಎಲ್ಲಾ ಲೋಕಗಳಲ್ಲಿಯೂ ಪ್ರಜೆಗಳನ್ನು ಸಂತೋಷಪಡಿಸುವನು. ಶೂದ್ರನನ್ನು ಶರಣಾಗತನನ್ನು ಆಪತ್ತಿನಿಂದ ಬಿಡಿಸಿದರೂ ಒಳ್ಳೇ ವಂಶದಲ್ಲಿ ಹುಟ್ಟುವನು. ಈರೀತಿಯಾಗಿ ಪೂರ್ವದಲ್ಲಿ ನನ್ನೊಡನೆ ಸರ್ವಜ್ಞರಾದ ಶ್ರೀವೇದವ್ಯಾಸದೇವರು ಹೇಳಿರುವರು' ಎಂದು ಹೇಳಿದಳು.

ಆಗ ಧರ್ಮರಾಜನು 'ಅಮ್ಮ! ಆಪತ್ತನ್ನು ಹೊಂದಿದ ಬ್ರಾಹ್ಮಣನ ಮೇಲೆ ದಯೆಯಿಂದ ಬುದ್ಧಿಪೂರ್ವಕವಾಗಿ ಮಾಡಿದ ಈ ಕಾರ್ಯವು ಯುಕ್ತವಾಗಿರುವುದು. ಭೀಮನು ನಿಶ್ಚಯವಾಗಿಯೂ ಆ ದೈತ್ಯನನ್ನು ಕೊಂದು ಬರುವನು. ಬ್ರಾಹ್ಮಣನ ಮೇಲೆ ನೀನು ದಯೆಯುಳ್ಳವಳಾಗಿರುವಿ. ಆದರೆ ಈ ವಿಷಯವು ಊರ ಜನರಿಗೆಲ್ಲಾ ತಿಳಿಯದಂತೆ ಮಾಡಬೇಕು. ಆ ವಿಷಯವನ್ನು ಬ್ರಾಹ್ಮಣ ಹತ್ತಿರ ತಿಳಿಸಿಬಿಡು' ಎಂದನು. ಕುಂತೀದೇವಿಯು ಹಾಗೆಯೇ ಆಗಲಿ ಎಂದು ಹೇಳಿ ಆಮೇಲೆ ಈ ವಿಷಯವನ್ನು ಅರ್ಜುನಾದಿಗಳೊಡನೆಯೂ ಹೇಳಿದಳು.

ಮರುದಿನ ಬೆಳಿಗ್ಗೆ ಅನ್ನ ತುಂಬಿದ ಬಂಡಿಯಲ್ಲಿ ಕೂತುಕೊಂಡು ಭೀಮಸೇನ ದೇವರು ಹೋದರು. ಬಂಡಿಯ ಸುತ್ತಲೂ ವಾದ್ಯಘೋಷದಿಂದ ಊರಿನ ಜನರೆಲ್ಲರೂ ಹೋಗುತ್ತಿದ್ದರು. 'ಈ ತರುಣನು ತನ್ನನ್ನು ರಾಕ್ಷಸನಿಗೆ ಅನ್ನವನ್ನಾಗಿ

1. ಬೀಳಲು ಕಲ್ಲೇ

ದಾನಮಾಡಿಕೊಳ್ಳುವನು' ಇತ್ಯಾದಿ ರೀತಿಯಾಗಿ ಊರಿನ ಜನರು ಹೊಗಳುತ್ತಿದ್ದರು. ಭೀಮಸೇನದೇವರು ಎತ್ತುಗಳನ್ನು ಓಡಿಸುತ್ತಿದ್ದರು. ಎಲ್ಲ ಜನರಿಂದ ಕೂಡಿಕೊಂಡು ವಾದ್ಯಘೋಷದಿಂದ ಸಂತುಷ್ಟರಾಗಿ ರಾಕ್ಷಸನ ಬಳಿಗೆ ಹೋಗುತ್ತಿದ್ದರು. ಸ್ವಲ್ಪದೂರ ಹೋದ ಮೇಲೆ ಭೀಮಸೇನದೇವರೊಬ್ಬರೇ ಎತ್ತುಗಳನ್ನು ಮುಂದೆ ಓಡಿಸುತ್ತಾ ಹೋದರು. ರಾಕ್ಷಸನ ಭಯದಿಂದ ಜನರೆಲ್ಲರೂ ಅಲ್ಲಿಯೇ ನಿಂತುಬಿಟ್ಟರು.

ಭೀಮಸೇನದೇವರು ಬಹುದೂರ ಹೋದವರಾಗಿ ಜನರು ಹೇಳಿದ ಸ್ಥಳದಲ್ಲಿ ಒಂದು ದೊಡ್ಡ ಮರವನ್ನು ನೋಡಿದರು. ಅಲ್ಲಿ ಕೂದಲುಗಳೂ ಮನುಷ್ಯರ ಮತ್ತು ಎತ್ತುಗಳ ಎಲುಬುಗಳೂ ಕೈಕಾಲುಗಳೂ ಬಿದ್ದಿದ್ದವು. ಸ್ಮಶಾನದಂತೆ ಭಯಂಕರ ವಾಗಿತ್ತು. ಭೀಮಸೇನದೇವರು ಆ ರಾಕ್ಷಸನನ್ನು ಮುಟ್ಟದ ಮೊದಲೇ ಆ ಅನ್ನವನ್ನೆಲ್ಲಾ ಭೋಜನ ಮಾಡಬೇಕೆಂದು ಇಚ್ಛಿಸಿದರು. ಆಮೇಲೆ ಕೂತುಕೊಂಡು ಭೀಮಸೇನ ದೇವರು ಸುಖವಾಗಿ ಭೋಜನ ಮಾಡಲಿಕ್ಕೆ ಆರಂಭಿಸಿದರು. ಭೀಮಸೇನದೇವರು ಭಕ್ಷ್ಯಭೋಜ್ಯಗಳನ್ನೂ ಅನ್ನವನ್ನೂ ಭೋಜನ ಮಾಡುತ್ತಿರುವಾಗ ಬಕಾಸುರನು ಕೋಪಿಸಿಕೊಂಡು ಅಲ್ಲಿಗೆ ಬಂದನು. ಆ ಭಯಂಕರನಾದ ರಾಕ್ಷಸನು ಭೋಜನ ಮಾಡುತ್ತಿದ್ದ ಭೀಮಸೇನದೇವರನ್ನು ನೋಡಿ ಕಣ್ಣು ಕೆಂಪಗೆ ಮಾಡಿಕೊಂಡು ನನಗಾಗಿ ಕಲ್ಪಿತವಾಗಿರುವ ಈ ಅನ್ನವನ್ನು ಯಾವ ದುರ್ಬುದ್ಧಿಯುಳ್ಳವನು ನಾನು ನೋಡುತ್ತಿರುವಂತೆ ಭೋಜನ ಮಾಡುತ್ತಿರುವನು' ಎಂದು ಗರ್ಜನೆ ಮಾಡಿದನು.

ಅದನ್ನು ಕೇಳಿಯೂ ಭೀಮಸೇನದೇವರು ನಗುತ್ತಾ ಅವನನ್ನು ಲಕ್ಷ್ಯಮಾಡದೆ ಅವನಿಗೆ ಬೆನ್ನು ಹಾಕಿಕೊಂಡೇ ಊಟ ಮಾಡುತ್ತಿದ್ದರು. ರಾಕ್ಷಸನು ಕೋಪವನ್ನು ತಡೆಯಲಾರದೆ ಕೊಂದು ಹಾಕುವೆನೆಂದು ಗರ್ಜನೆ ಮಾಡುತ್ತಾ ಎರಡು ಕೈಗಳನ್ನೂ ಎತ್ತಿಕೊಂಡು ಓಡಿಬಂದನು. ಆದರೂ ಭೀಮಸೇನದೇವರು ಲಕ್ಷ್ಯವೇ ಮಾಡಲಿಲ್ಲ. ಹಾಗೆಯೇ ಊಟ ಮಾಡುತ್ತಲೇ ಇದ್ದರು.

(ರಾಕ್ಷಸನು ಬಹುಕೋಪವುಳ್ಳವನಾಗಿ ಭೀಮಸೇನದೇವರ ಬಳಿಗೆ ಬಂದು ಎರಡೂ ಕೈಗಳಿಂದ ಭೀಮಸೇನದೇವರಿಗೆ ಬಲವಾಗಿ ಗುದ್ದಿದನು. ಆದರೂ ಭೀಮಸೇನದೇವರು ಹಿಂದೆಯೂ ತಿರುಗಿ ನೋಡದೆ ಭೋಜನ ಮಾಡುತ್ತಲೇ ಇದ್ದರು) ರಾಕ್ಷಸನು ಬಹುಕೋಪವುಳ್ಳವನಾಗಿ ಭೀಮಸೇನದೇವರ ಮೇಲೆ ಮರವನ್ನು ಮುರಿದುಹಾಕಿದನು. ಭೀಮಸೇನದೇವರು ಎಡಕೈಯಿಂದ ಮರವನ್ನು ಹಿಡಿಯುತ್ತಾ ಬಲಕೈಯಿಂದ ಊಟಮಾಡುತ್ತಲೇ ಇದ್ದರು. ರಾಕ್ಷಸನು ಮರಗಳನ್ನು ಬಿಸಾಡುತ್ತಲೇ ಇದ್ದನು. ಭೀಮಸೇನದೇವರು ಎಡಕೈಯಿಂದ ತಡೆಯುತ್ತಾ

ಸಾವಕಾಶವಾಗಿ ಭಕ್ಷ್ಯಭೋಜ್ಯಾದಿಗಳನ್ನೆಲ್ಲಾ ತಿನ್ನುವವರಾಗಿ ನೂರಾರು ಕೊಡಗಳಲ್ಲಿ ತುಂಬಿರುವ ಮೊಸರನ್ನೂ ತುಪ್ಪವನ್ನೂ ಕುಡಿದರು. ಆಮೇಲೆ ಕೈತೊಳೆದುಕೊಂಡು ಆಚಮನ ಮಾಡಿ ಸಂತೋಷದಿಂದ ಬೆಟ್ಟದಂತೆ ನಿಂತರು. ದೊಡ್ಡ ಮರವನ್ನು ತಿರುಗಿಸುತ್ತಾ ಬರುತ್ತಿದ್ದ ಭಯಂಕರವಾದ ಆ ರಾಕ್ಷಸನನ್ನು ನೋಡಿ ಸಿಂಹದಂತೆ ಗರ್ಜನೆಮಾಡಿದರು. ಅವನನ್ನು ಯುದ್ಧಕ್ಕೆ ಕೂಗಿದರು. ''ರಾಕ್ಷಸಾಧಮ! ಬಹುಕಾಲ ಮನುಷ್ಯರ ಮತ್ತು ಮೃಗಗಳ ಮಾಂಸದಿಂದ ನಿನ್ನ ಶರೀರವನ್ನು ಬೆಳೆಸಿಕೊಂಡಿರುವಿ. ನನ್ನ ಬಾಹುಬಲವನ್ನು ಆಶ್ರಯಿಸಿ ನೀನು ಬದುಕಲಾರೆ. ಈಗ ನನ್ನ ಬಾಹುವಿನಿಂದ ಪುಡಿಯಾಗಿ ಯಮಲೋಕಕ್ಕೆ ಹೋಗುವಿ. ಈ ದಿವಸವನ್ನು ಆರಂಭಿಸಿ ಊರಿನ ಜನರೆಲ್ಲರೂ ಸುಖವಾಗಿ ಮಲಗುವರು' ಇತ್ಯಾದಿ ರೀತಿಯಾಗಿ ಹೇಳಿದರು. ಈರೀತಿಯಾಗಿ ಹೇಳಿ ಭೀಮಸೇನದೇವರು ಬಕನನ್ನು ಕೊಲ್ಲಲಿಕ್ಕೆ ಓಡಿದರು. ಅವನೂ ಓಡಿಬಂದನು. ಇಬ್ಬರೂ ಭಯಂಕರವಾಗಿ ಯುದ್ಧವನ್ನು ಮಾಡಿಕೊಂಡರು. ಮರವನ್ನು ಮುರಿದು ಯುದ್ಧವನ್ನು ಮಾಡಿಕೊಂಡರು. ಅವರ ವೇಗದಿಂದ ಭೂಮಿಯು ನಡುಗಿತು. ಒಂದೇ ಕ್ಷಣದಲ್ಲಿ ದೊಡ್ಡ ದೊಡ್ಡ ಮರಗಳನ್ನೆಲ್ಲಾ ಪುಡಿಮಾಡಿದರು. ಆಮೇಲೆ ಕೈಯಿಂದ ಭಯಂಕರವಾಗಿ ಯುದ್ಧ ಮಾಡಿಕೊಂಡರು. ಒಂದು ಮುಹೂರ್ತಕಾಲ ಸಮಸಮವಾಗಿ ·ಯುದ್ಧಮಾಡಿಕೊಂಡರು. ಕೊನೆಗೆ ರಾಕ್ಷಸನ ಬಲವು ಕಡಿಮೆಯಾಯಿತು. ಭೀಮಸೇನದೇವರು ಅವನನ್ನು ಭೂಮಿಯಲ್ಲಿ ಹಾಕಿ ಮೊಳಕಾಲಿನಿಂದ ಬಡೆದರು. ತರುವಾಯ ಅವನ ಬೆನ್ನನ್ನು ಮೊಳಕಾಲಿನಿಂದ ಪೀಡಿಸಿ ಬಲಕೈಯಿಂದ ತಲೆಯ್ನು ಹಿಡಿದರು. ಎಡಕೈಯಿಂದ ಕಟೀದೇಶದಲ್ಲಿ ವಸ್ತ್ರದಲ್ಲಿ ಹಿಡಿದು ಮೊಳಕಾಲಿನಿಂದ ಬೆನ್ನನ್ನು ಒತ್ತಿಹಿಡಿದು ಬೆನ್ನನ್ನು ದೊಡ್ಡ ಶಬ್ದವಾಗುವಂತೆ ಮುರಿದರು. ತರುವಾಯ ಆ ರಾಕ್ಷಸನ ಬಾಯಿಯಿಂದ ರಕ್ತವು ಬಂದಿತು.

ತರುವಾಯ ಮುರಿದುಹೋದ ಪಾರ್ಶ್ವ ಅಂಗಗಳುಳ್ಳವನಾಗಿ ಭಯಂಕರವಾಗಿ ಗರ್ಜನೆ ಮಾಡಿ ಪ್ರಾಣರಹಿತನಾಗಿ ದೊಡ್ಡಬೆಟ್ಟದಂತೆ ಬಿದ್ದನು. ಆ ಶಬ್ದದಿಂದ ಭಯವುಳ್ಳವರಾಗಿ ಬಕಾಸುರನ ರಾಕ್ಷಸರು ಪರಿಚಾರಕರಿಂದ ಸಹಿತರಾಗಿ ಮನೆ ಯಿಂದ ಹೊರಗೆ ಬಂದರು. ಆಗ ಬಕನ ತಮ್ಮನು ತನ್ನ ಅಣ್ಣನು ಮೃತನಾದದ್ದನ್ನು ನೋಡಿ ಭೀಮಸೇನದೇವರನ್ನು ಮರೆಹೊಂದಿದನು. ರಾಕ್ಷಸರೆಲ್ಲರೂ ಭಯವುಳ್ಳವ ರಾಗಿ ಭೀಮಸೇನದೇವರನ್ನು ಮರೆಹೊಂದಿದರು. ಭೀಮಸೇನದೇವರು ಭಯ ಪಟ್ಟಿರುವ ಅವರನ್ನೆಲ್ಲಾ ಸಮಾಧಾನಪಡಿಸಿದರು. 'ನೀವು ಇನ್ನು ಮುಂದೆ

ಮನುಷ್ಯರನ್ನು ಒಬ್ಬರೂ ಹಿಂಸೆಯನ್ನು ಮಾಡಬಾರದು. ಯಾರಾದರೂ ಹಿಂಸೆಯನ್ನು ಮಾಡಿದರೆ ಅವರಿಗೂ ಹೀಗೆಯೇ ವಧವು ಉಂಟಾಗುವುದು' ಎಂದು ಹೇಳಿದರು. ಬಕನ ತಮ್ಮನು ಪರಿಚಾರಕರಿಂದ ಸಹಿತನಾಗಿ ಭೀಮಸೇನದೇವರಿಗೆ ನಮಸ್ಕರಿಸಿದನು. ಆಮೇಲೆ ಏಕಚಕ್ರಾನಗರದಲ್ಲಿ ಜನರು ಶಾಂತರೂಪದಿಂದ ಇರುವ ರಾಕ್ಷಸರನ್ನು ನೋಡುತ್ತಿದ್ದರು. ತರುವಾಯ ಭೀಮಸೇನದೇವರು ಬಂಡಿಯಿಂದ ಬಕಾಸುರನದೇಹವನ್ನು ತೆಗೆದುಕೊಂಡು ಬಂದು ನಗರದ ಬಾಗಿಲಲ್ಲಿ ಇಟ್ಟು ತಾನು ಒಳಗೆ ಬಂದರು.

ಬಾಲಕರೂ ವೃದ್ಧರೂ ಇತರರೂ ಆ ರಾಕ್ಷಸನೇ ಪುನಃ ಬರುತ್ತಿರುವನೆಂದು ತಿಳಿದುಕೊಂಡು ಅಂಜಿಕೆಯಿಂದ ಓಡಿದರು. ಭೀಮಸೇನ ದೇವರು ಹೀಗೆ ಬಕಾಸುರನನ್ನು ಸಂಹರಿಸಿ ಆ ಬ್ರಾಹ್ಮಣನ ಮನೆಗೆ ಹೋಗಿ ಎತ್ತುಗಳನ್ನು ಬಂಡಿಯನ್ನೂ ಆ ಬ್ರಾಹ್ಮಣನಿಗೆ ಒಪ್ಪಿಸಿದರು. ಬ್ರಾಹ್ಮಣನೊಡನೆ ಒಂದೂ ಮಾತಾಡದೆ ಮನೆಯ ಒಳಗೆ ಹೋಗೆಂದು ಹೇಳಿ ತಾನು ತಾಯಿ ಸಹೋದರರ ಬಳಿಗೆಹೋಗಿ ಮಲಗಿಕೊಂಡರು. ರಾತ್ರಿಯಲ್ಲಿ ಯುದ್ಧವು ಹೇಗೆ ನಡೆಯಿತೆಂಬುದನ್ನು ತಿಳಿಸಿದರು. ತರುವಾಯ ಬೆಳಗಾಗಲು ಜನರು ನಗರದ್ವಾರದಲ್ಲಿ ಇದ್ದ ರಾಕ್ಷಸದೇಹ ವನ್ನು ನೋಡಿ ರಾಕ್ಷಸನೇ ಬಂದನೆಂದು ಭಯವನ್ನು ಹೊಂದಿದರು. ಆಮೇಲೆ ಅವನು ಮೃತನಾಗಿರುವುದನ್ನು ಕ್ರಮದಿಂದ ತಿಳಿಯುವವರಾಗಿ ಸಂತೋಷ ಪಟ್ಟರು. ತರುವಾಯ ಊರಲ್ಲಿರುವ ಎಲ್ಲ ಜನರೊಡನೆಯೂ ತಿಳಿಸಿದರು. ಹೆಂಗಸರೂ ಹುಡುಗರೂ ಮುದುಕರೂ ನೋಡಲಿಕ್ಕಾಗಿ ಬಂದು ಸೇರಿದರು. ಆಶ್ಚರ್ಯಪಟ್ಟರು. ತಾವು ಮೊದಲು ಹರಕೆ ಹೇಳಿಕೊಂಡಂತೆ ದೇವತೆಗಳಿಗೆಲ್ಲಾ ಅರ್ಚನೆ ಮಾಡಿದರು. ಆದಿನ ಯಾರ ದಿನವೆಂದು ಎಣಿಸುವವರಾಗಿ ಆ ಬ್ರಾಹ್ಮಣನೊಡನೆ ಎಲ್ಲಾ ವಿಚಾರಿಸಿ ತಿಳಿದುಕೊಂಡು ಸಂತೋಷಪಟ್ಟರು. ಆಮೇಲೆ ಕೊಡುತ್ತಿದ್ದ ಅನ್ನರೂಪವಾದ ಕಪ್ಪವನ್ನು ಭೀಮಸೇನದೇವರಿಗೆ ಕೊಟ್ಟರು. ಭೀಮಸೇನದೇವರು ಅದನ್ನು ನರಸಿಂಹ ದೇವರಿಗೆ ಕೊಡುವಂತೆ ನಿಯಮಿಸಿದರು. ಆಮೇಲೆಯೂ ಕೆಲವು ಸಮಯ ಪಾಂಡವರು ಏಕಚಕ್ರಾನಗರದಲ್ಲಿಯೇ ವಾಸಮಾಡುತ್ತಿದ್ದರು.



# ದ್ರೌಪದೀಸ್ವಯಂವರ [1]

ಪಾಂಡವರು ವೇದವ್ಯಾಸದೇವರ ಮಾತಿನಿಂದ ಏಕಚಕ್ರಾನಗರದಿಂದ ಹೊರಟುಹೋದರು. ವೇದವ್ಯಾಸದೇವರು ಬಂದು ದ್ರೌಪದೀದೇವಿಯರ ಉತ್ಪತ್ತಿ ಕಥೆಯನ್ನು ಹೇಳಿ ನೀವು ಸ್ವಯಂವರಕ್ಕಾಗಿ ಪಾಂಚಾಲನಗರಿಗೆ ಹೋಗಿ ಎಂದರು. ಬ್ರಾಹ್ಮಣರೂ ಇವರನ್ನು ನೋಡಿ ಇವರೂ ಬ್ರಾಹ್ಮಣರೆಂದು ತಿಳಿದುಕೊಂಡು 'ಪಾಂಚಾಲನಗರದಲ್ಲಿ ಒಳ್ಳೇ ಊಟವು ಸಿಗುವುದು. ಬನ್ನಿರಿ' ಎಂದು ಹೇಳಿದರು.

ಪೂರ್ವದಲ್ಲಿ ದ್ರುಪದರಾಜನು ಪಾಂಡವರ ಅರಗಿನ ಮನೆಯಲ್ಲಿ ಸುಟ್ಟುಹೋದರು ಎಂಬ ವರ್ತಮಾನವನ್ನು ಕೇಳಿ ಬಹಳ ದುಃಖವನ್ನು ಹೊಂದಿದನು. ಆಮೇಲೆ ಯಾಜೋಪಯಾಜರು ಅರ್ಜುನನಿಗೆ ವಿವಾಹ ಮಾಡಿಕೊಡಲಿಕ್ಕೆ ಯೋಗ್ಯವಾದ ಹೆಣ್ಣು ಹುಟ್ಟಬೇಕೆಂದು ಯಜ್ಞಮಾಡಿ ದ್ರೌಪದೀದೇವಿಯರು ಹುಟ್ಟಿದ ಕಾರಣ ಯಾಜೋಪಯಾಜರ ಮಂತ್ರವು ಅವರು ಮಾಡಿದ ಯಜ್ಞವು ವ್ಯರ್ಥವಾಗಲಾರದೆಂದು ಪಾಂಡವರು ಎಲ್ಲಿಯೋ ಮರೆಯಾಗಿ ಜೀವಿಸಿಕೊಂಡಿರುವರೆಂದು ಭಾವಿಸಿದನು. ಅವರು ಎಲ್ಲಿ ಇದ್ದರೂ ಬಂದು ಸೇರಲಿ ಎಂಬ ಅಭಿಪ್ರಾಯದಿಂದ ಅರ್ಜುನನಿಗೇ ಕನ್ಯೆಯನ್ನು ಕೊಡಬೇಕೆಂದು ಅಭಿಪ್ರಾಯದಿಂದ ದ್ರೌಪದೀದೇವಿಯರಿಗೆ ಸ್ವಯಂವರವೆಂದು ಪ್ರಸಿದ್ಧಿಪಡಿಸಿದನು. ರುದ್ರವರದಿಂದ ಅರ್ಜುನನು ಹೊರತು ಇನ್ನೊಬ್ಬರಿಂದ ಧರಿಸಲಿಕ್ಕೆ ಆಗದ ಧನುಸ್ಸನ್ನೂ ಸ್ವಯಂವರ ಮಂಟಪದಲ್ಲಿ ಇಟ್ಟನು.

ಭೀಮಸೇನದೇವರು ರುದ್ರದೇವರ ವರದಿಂದ ರಕ್ಷಿತನಾದ ಬಕಾಸುರನನ್ನು ಕೊಂದು ಆಮೇಲೆಯೂ ಕೆಲವು ದಿನ ಏಕಚಕ್ರಾನಗರದಲ್ಲಿಯೇ ವಾಸ ಮಾಡಿ ವೇದವ್ಯಾಸದೇವರ ಮಾತಿನಿಂದ ಸಹೋದರರಿಂದಲೂ ತಾಯಿಯಿಂದಲೂ ಕೂಡಿಕೊಂಡು ಅಲ್ಲಿಂದ ಹೊರಟುಹೋದರು. 'ಪಾಂಚಾಲನಗರದಲ್ಲಿ ದೊಡ್ಡ ಮದುವೆಯಾಗುವುದು. ಅಲ್ಲಿ ದೊಡ್ಡ ಭೋಜನವು ಸಿಗುವುದು. ಹೋಗಿರಿ' ಎಂದು ಬ್ರಾಹ್ಮಣರು ಅಲ್ಲಲ್ಲಿ ಹೇಳುವ ಮಾತನ್ನು ಕೇಳುತ್ತಾ ಹೋದರು. ಪಾಂಡವರ ಮಧ್ಯದಲ್ಲಿ ಹೋಗುತ್ತಿರುವ ವಿಶಾಲವಾದ ಎದೆಯುಳ್ಳ ಉದ್ದವಾದ ಕೈಗಳುಳ್ಳ ಭೀಮಸೇನದವರನ್ನು ನೋಡಿ ಬ್ರಾಹ್ಮಣರು ಇವನನ್ನೇ ದ್ರೌಪದಿಯು ಮದುವೆಯಾಗುವಳು ಎನ್ನುತ್ತಿದ್ದರು. ಆಮೇಲೆ ರಾತ್ರಿಹಗಲು ದಾರಿಯಲ್ಲಿ ನಡೆಯುತ್ತಾ

---

1. ಮ.ತಾ.ನಿ. ಅ-18, 19

ಒಂದುದಿನ ರಾತ್ರಿ ಕಾಲದಲ್ಲಿ ಗಂಗಾತೀರಕ್ಕೆ ಬಂದು ಸೇರಿದರು. ಎಲ್ಲರನ್ನೂ ರಕ್ಷಿಸುವುದಕ್ಕಾಗಿ ಭೀಮಸೇನದೇವರು ಹಿಂದಿನಿಂದ ಹೋಗುತ್ತಿದ್ದರು. ಅರ್ಜುನನು ಮುಂದೆ ಹೋಗುತ್ತಿದ್ದನು. ಮಧ್ಯದಲ್ಲಿ ಇತರರೆಲ್ಲರೂ ಹೋಗುತ್ತಿದ್ದರು. ಅರ್ಜುನನು ಬೆಂಕಿಯ ಕೊಳ್ಳಿಯನ್ನು ಕೈಯಲ್ಲಿ ಹಿಡಿದುಕೊಂಡು ಹೋಗುತ್ತಿದ್ದನು. ಆಗ ಅರ್ಧರಾತ್ರಿಯಾಗಿತ್ತು. ಗಂಧರ್ವರಾಜನಾದ ಚಿತ್ರರಥನು ಗಂಗೆಗೆ ಜಲಕ್ರೀಡೆಗೆ ಬಂದಿದ್ದನು. ಅವನಿಗೆ ಕತ್ತಲಲ್ಲಿ ಸ್ವಲ್ಪ ದೂರದಲ್ಲಿ ಬರುತ್ತಿದ್ದ ಬ್ರಾಹ್ಮಣರು ಕಾಣಿಸಲಿಲ್ಲ. ಪಾಂಡವರನ್ನು ಇವರು ಕ್ಷತ್ರಿಯರು ಎಂದು ತಿಳಿದುಕೊಂಡು ತಾನು ಜಗಳಕ್ಕೆ ಬಂದನು. ಮನುಷ್ಯರ ಸಂಚಾರಕ್ಕೆ ನಿಷಿದ್ಧವಾದ ಈ ಸಮಯದಲ್ಲಿ ಗಂಗೆಯ ಸಮೀಪಕ್ಕೆ ಬಂದಿರುವ ನಿಮ್ಮೆಲ್ಲರನ್ನೂ ಕೊಂದು ಹಾಕುವೆನೆಂದನು.

ಆಗ ಅರ್ಜುನನು 'ಗಂಧರ್ವನೇ! ಅಸ್ತ್ರಜ್ಞಾನಿಗಳಾದ ನಮಗೆ ನಿನ್ನಿಂದ ಭಯವಿಲ್ಲ. ಅಸ್ತ್ರಜ್ಞಾನಿಗಳಲ್ಲಿ ಉಪಯೋಗಿಸಿದ ನಿನ್ನ ಬಲವೆಲ್ಲ ನೀರಿನ ನೊರೆಯಂತೆ ವ್ಯರ್ಥವಾಗುವುದು' ಎಂದನು. ಆಗ ಗಂಧರ್ವನು ರಥದಲ್ಲಿ ಕೂತುಕೊಂಡು ಬಾಣಬಿಡುತ್ತಾ ಬಂದನು. ಆಗ ಅರ್ಜುನನು ಕೈಯಲ್ಲಿದ್ದ ಬೆಂಕಿಯ ಕೊಳ್ಳಿಗೇ ಆಗ್ನೇಯಾಸ್ತ್ರವನ್ನು ಅಭಿಮಂತ್ರಿಸಿಬಿಟ್ಟನು. ಅದರಿಂದ ಗಂಧರ್ವನ ರಥವು ಸುಟ್ಟುಹೋಯಿತು. ಅವನ ಸುತ್ತಲೂ ಬೆಂಕಿಯು ಬಂದಿತು. ಅರ್ಜುನನು ಅವನ ಬಳಿಗೆ ಹೋಗಿ ಅವನ ತಲೆಕೂದಲು ಹಿಡಿದು ಸೆಳೆದನು. ಆಗ ಅವನು ಧರ್ಮರಾಜ ನನ್ನು ಮರೆಹೊಂದಿದನು. ಆಮೇಲೆ ಅರ್ಜುನನು ತನ್ನ ಆಗ್ನೇಯಾಸ್ತ್ರವನ್ನು ಉಪಸಂಹಾರ ಮಾಡಿಕೊಂಡನು. ಆ ಗಂಧರ್ವನು ಮೊದಲು ಬಂಗಾರದಂತೆ ಬಣ್ಣವಿದ್ದವನು. ಈಗ ಆಗ್ನೇಯಾಸ್ತ್ರದ ಪ್ರಭಾವದಿಂದ ಅತಿಕೆಂಪಾದ ಬಣ್ಣವನಾದ ಕಾರಣ ಅಂಗಾರವರ್ಣ ಎಂಬ ಹೆಸರನ್ನು ಪಡೆದನು.

ದುರ್ಲಭವಾದ ಆ ಆಗ್ನೇಯಾಸ್ತ್ರವನ್ನು ತನಗೆ ಉಪದೇಶಿಸಬೇಕೆಂದು ಅರ್ಜುನನೊಡನೆ ಯಾಚನೆ ಮಾಡಿದನು. ಅವನು ಅಗ್ನ್ಯಸ್ತ್ರವನ್ನು ತಿಳಿದವನಾಗಿ ದ್ದರೂ ಅರ್ಜುನನು ತಿಳಿದಂತೆ ಇರುವ ಅಗ್ನ್ಯಸ್ತ್ರವನ್ನೂ ತಿಳಿದಿಲ್ಲ. ಅರ್ಜುನನ ವಿದ್ಯೆಯು ಅತ್ಯಂತ ಶಿಕ್ಷಿತವಾದದ್ದು. ಅದನ್ನು ಗಂಧರ್ವನಿಗೆ ಉಪದೇಶಿಸಿದನು. ಕಾಲಾಂತರದಲ್ಲಿ ಗಂಧರ್ವನಿಂದ ಅಂತರ್ಧಾನ ಹೊಂದುವ ವಿದ್ಯೆಯನ್ನು ಹೊಂದಿದನು. ಗಂಧರ್ವನು ಅರ್ಜುನ ನೊಡನೆ ತನಗೆ ಅಗ್ನ್ಯಸ್ತ್ರವನ್ನು ಹೇಳಿಕೊಟ್ಟರೆ ಅದಕ್ಕೆ ಪ್ರತಿಯಾಗಿ ಅಂತರ್ಧಾನ ವಿದ್ಯೆಯನ್ನು ಹೇಳಿಕೊಡುವೆನು ಎಂದು ಹೇಳಿದ್ದನು. ಅರ್ಜುನನು ತನ್ನ ವಿದ್ಯೆಯು ಅತಿಶ್ರೇಷ್ಠವಾದ ಕಾರಣ ಅದಕ್ಕೂ

ಗಂಧರ್ವವಿದ್ಯೆಗೂ ಪರಸ್ಪರ ಮಾರಿಸಿ ಕೊಳ್ಳುವುದು ಸರಿಯಲ್ಲವೆಂದು ತಿಳಿದು ಧರ್ಮಾರ್ಥವಾಗಿಯೇ ತನ್ನ ವಿದ್ಯೆಯನ್ನು ಅವನಿಗೆ ಹೇಳಿಕೊಟ್ಟನು. ಬೇರೆ ಸಮಯದಲ್ಲಿ ಧರ್ಮಾರ್ಥವಾಗಿಯೇ ಅವನಿಂದ ಅವನ ವಿದ್ಯೆಯನ್ನು ಪಡೆದನು. ಗಂಧರ್ವನು ಅರ್ಜುನನೊಡನೆ ಅನೇಕ ಕಥೆಗಳನ್ನು ಹೇಳಿದನು. ಸೂರ್ಯಕನ್ಯೆಯಾದ ತಪತಿಯನ್ನು ಋಕ್ಷನ ಮಗನಾದ ಸಂವರಣನು ಮದುವೆಯಾದ ಕಥೆಯನ್ನೂ ವಸಿಷ್ಠರ ಮಹಿಮೆಯನ್ನೂ ಹೇಳಿ ನೀವು ಒಬ್ಬ ಪುರೋಹಿತರನ್ನು ಸ್ವೀಕರಿಸಬೇಕೆಂದು ಹೇಳಿದರು.

[1]ವಸಿಷ್ಠರ ಮಹಿಮೆಯನ್ನು ಹೇಳುತ್ತಾ ವಿಶ್ವಾಮಿತ್ರರು, ವಸಿಷ್ಠರ ಆಶ್ರಮಕ್ಕೆ ಹೋದದ್ದು, ವಸಿಷ್ಠರು ಅವರಿಗೆ ಆತಿಥ್ಯವನ್ನು ಮಾಡಿದ್ದು, ವಿಶ್ವಾಮಿತ್ರರು ವಸಿಷ್ಠರ ಗೋವನ್ನು ಯಾಚನೆ ಮಾಡಿದ್ದು, ವಸಿಷ್ಠರು ಗೋವನ್ನು ಕೊಡದೆ ಇರಲು ವಿಶ್ವಾಮಿತ್ರರು ಬಲಾತ್ಕಾರದಿಂದ ಅಪಹಾರ ಮಾಡಿದ್ದು, ಕೋಪವುಳ್ಳ ಆ ನಂದಿನೀ ಎಂಬ ಗೋವಿನಿಂದ ಸೃಷ್ಟರಾದ ಮ್ಲೇಚ್ಛಾದಿಗಳಿಂದ ವಿಶ್ವಾಮಿತ್ರರು ಪರಾಜಯವನ್ನು ಹೊಂದಿದ್ದು ವಿಶ್ವಾಮಿತ್ರರು ತಪಸ್ಸು ಮಾಡಿ ಬ್ರಾಹ್ಮಣ್ಯವನ್ನು ಹೊಂದಿದ್ದು, ಕಲ್ಮಾಷಪಾದರಾಜನ ಕಥೆಯನ್ನು ಹೇಳುತ್ತಾ ವಸಿಷ್ಠಪುತ್ರರಾದ ಶಕ್ತಿಋಷಿಗಳು ಕಲ್ಮಾಷಪಾದರಾಜನಿಗೆ ರಾಕ್ಷಸನಾಗುವಂತೆ ಶಾಪ ಕೊಟ್ಟದ್ದು, ಮತ್ತು ಮತ್ತೊಬ್ಬ ಬ್ರಾಹ್ಮಣನೂ ಆ ರಾಜನಿಗೆ ಶಾಪವನ್ನು ಕೊಟ್ಟಿದ್ದು, ರಾಕ್ಷಸಾವೇಶವುಳ್ಳ ಆ ರಾಜನು ವಸಿಷ್ಠರ ಮಕ್ಕಳನ್ನು ಭಕ್ಷಣೆ ಮಾಡಿದ್ದು, ಪುತ್ರ ಶೋಕದಿಂದ ಸಂತಪ್ತರಾದ ವಸಿಷ್ಠರು ಪ್ರಾಣತ್ಯಾಗ ಮಾಡಲಿಕ್ಕೆ ಅನೇಕವಿಧವಾಗಿ ಪ್ರಯತ್ನ ಮಾಡಿದ್ದು, ಆಮೇಲೆ ಗಂಗೆಗೆ ಹಾರಿಯೂ ಪ್ರಾಣಪರಿತ್ಯಾಗ ಮಾಡಲಿಕ್ಕೆ ಆಗದಿರಲು ಅವರು ಪುನಃ ಆಶ್ರಮಕ್ಕೆ ಬಂದದ್ದು, ಆಶ್ರಮದಲ್ಲಿ ತನ್ನ ಸೊಸೆಯಾದ ಶಕ್ತಿಯಾದ ಪತ್ನಿಯಾದ ಅದೃಶ್ಯಂತಿಯು ಗರ್ಭವತಿಯಾಗಿರುವುದನ್ನು ತಿಳಿದು ವಸಿಷ್ಠರು ಆತ್ಮಹತ್ಯೆಯ ಪ್ರಯತ್ನವನ್ನು ಬಿಟ್ಟದ್ದು ಅದೃಶ್ಯಂತಿಯರಿಂದ ಸಹಿತರಾಗಿ ಹೋಗುತ್ತಿರುವ ವಸಿಷ್ಠರನ್ನು ಸಂಹರಿಸಬೇಕೆಂದು ಕಲ್ಮಾಷಪಾದರಾಜನು ಬರಲು, ವಸಿಷ್ಠರು ಶಾಪದಿಂದ ಅವನನ್ನು ಬಿಡಿಸಿದ್ದು, ಸೌದಾಸರಾಜನ ಪತ್ನಿಯಲ್ಲಿ ವಸಿಷ್ಠರಿಂದ ಗರ್ಭವುಂಟಾದದ್ದು, ಅಶ್ಮಕ ಎಂಬ ಮಗನು ಹುಟ್ಟಿದ್ದು, ಅದೃಶ್ಯಂತಿಯಲ್ಲಿ ಪರಾಶರು ಹುಟ್ಟಿದ್ದು, ಪರಾಶರರು ತನ್ನ

---

1. ಸುಮಾರು ಒಂದುವರೆ ಪುಟದಷ್ಟು ಉದ್ದವಾದ ಒಂದೇ ಸಂಯುಕ್ತವಾಕ್ಯ ರಚಿಸಿದ ಲೇಖಕರು ಅಭಿನಂದನಾರ್ಹರು. ಅಲ್ಲದೆ ಒಂದೇ ಸಾಲಿನಲ್ಲಿ ಎರಡು ವಾಕ್ಯಗಳನ್ನೂ ನೋಡಬಹುದು. ಅಲ್ಲಲ್ಲಿ ಕನ್ನಡದ ಬಾಣಭಟ್ಟನನ್ನು ಹೋಲುತ್ತಾರೆ ಲೇಖಕರು ಎಂದರೆ ತಪ್ಪಾಗದು.

ತಂದೆಯನ್ನು ಕಲ್ಮಾಷಪಾದರಾಜನು ತಿಂದುಹಾಕಿದನು ಎಂಬುದನ್ನು ತಿಳಿದು ಕೋಪಿಸಿಕೊಂಡು ಸರ್ವಲೋಕನಾಶಕ್ಕಾಗಿ ಪ್ರಯತ್ನಮಾಡಿದ್ದು, ಕಾರ್ತವೀರ್ಯಾರ್ಜುನನ ವಂಶದ ಕ್ಷತ್ರಿಯರು ಹಣಕ್ಕೋಸ್ಕರ ಭೃಗುವಂಶದ ಬ್ರಾಹ್ಮಣರನ್ನು ಕೊಂದಿದ್ದು, ಕ್ಷತ್ರಿಯರ ಭಯದಿಂದ ಒಬ್ಬಳು ಬ್ರಾಹ್ಮಣಸ್ತ್ರೀಯು ತೊಡೆಯಲ್ಲಿ ಗರ್ಭವನ್ನು ಧರಿಸಿರಲು ಆ ಗರ್ಭವನ್ನು ಕೊಲ್ಲಲು ಕ್ಷತ್ರಿಯರು ಬಂದದ್ದು, ತೊಡೆಯನ್ನು ಭೇದಿಸಿಕೊಂಡು ಬಂದ ಬಾಲಕನ ತೇಜಸ್ಸಿನಿಂದ ಕುರುಡರಾದ ಕ್ಷತ್ರಿಯರು ಆ ಬ್ರಾಹ್ಮಣಸ್ತ್ರೀಯನ್ನು ಮರೆಹೊಂದಿದ್ದು, ಆ ಬ್ರಾಹ್ಮಣ ಸ್ತ್ರೀಯ ಮಾತಿನಿಂದ ಔರ್ವ ಎಂಬ ಆ ಬಾಲಕನನ್ನು ಮರೆಹೊಂದಿದ ಕ್ಷತ್ರಿಯರಿಗೆ ಕಣ್ಣುಬಂದದ್ದು, ಲೋಕನಾಶಕ್ಕಾಗಿ ತಪಸ್ಸುಮಾಡುತ್ತಿದ್ದ ಔರ್ವರಸಮೀಪಕ್ಕೆ ಬಂದು ಪಿತೃಗಳು ಅವರ ತಪಸ್ಸನ್ನು ನಿಲ್ಲಿಸಿದ್ದು, ಪಿತೃಗಳ ಆಜ್ಞೆಯಿಂದ ಔರ್ವರು ತನ್ನ ಕೋಪವನ್ನು ಸಮುದ್ರದಲ್ಲಿ ಪರಿತ್ಯಾಗ ಮಾಡಿದ್ದು, ವಸಿಷ್ಠರ ಮಾತಿನಿಂದ ಲೋಕನಾಶವನ್ನು ಮಾಡುವ ಯೋಚನೆಯನ್ನು ಬಿಟ್ಟ ಪರಾಶರರು ರಾಕ್ಷಸರು ನಾಶಮಾಡುವುದಕ್ಕಾಗಿ ಯಜ್ಞವನ್ನು ಆರಂಭಿಸಿದ್ದು, ಪುಲಸ್ತ್ಯರ ಪ್ರಾರ್ಥನೆಯಿಂದ ಆ ಯಜ್ಞವನ್ನು ಮುಗಿಸಿದ್ದು, ಕಲ್ಮಾಷಪಾದ ರಾಜನು ರಾಕ್ಷಸಾವೇಶವುಳ್ಳವನಾಗಿರುವಾಗ ಬ್ರಾಹ್ಮಣನೊಬ್ಬನು ಬ್ರಾಹ್ಮಣಸ್ತ್ರೀಯ ಸಂಬಂಧವನ್ನು ಮಾಡುತ್ತಿರುವಾಗ ಬ್ರಾಹ್ಮಣನನ್ನು ಕೊಂದು ತಿಂದ ಪ್ರಯುಕ್ತ ಆ ಬ್ರಾಹ್ಮಣಸ್ತ್ರೀಯು 'ನೀನೂ ಪತ್ನಿಯ ಸಂಬಂಧವನ್ನು ಮಾಡುವಾಗ ಮೃತನಾಗು' ಎಂದು ಶಾಪಕೊಟ್ಟ ಕಾರಣ ವಸಿಷ್ಠರಿಂದ ಕಲ್ಮಾಷಪಾದರಾಜನ ಪತ್ನಿಯು ಗರ್ಭವನ್ನು ಧರಿಸಿದಳು ಇತ್ಯಾದಿ ಕಥೆಗಳನ್ನು ಚಿತ್ರರಥಗಂಧರ್ವನು ಅರ್ಜುನನೊಡನೆ ಹೇಳಿದನು.

ಮತ್ತು ಧೌಮ್ಯಾಚಾರ್ಯರನ್ನು ಪುರೋಹಿತರನ್ನಾಗಿ ಸ್ವೀಕರಿಸುವಂತೆ ಹೇಳಿ ನಿನಗೆ ದಿವ್ಯ ಕುದುರೆಗಳನ್ನು ಕೊಡುವೆನು ಎಂದು ಹೇಳಿ ಸ್ವರ್ಗಕ್ಕೆ ಹೋದನು. ಪಾಂಡವರೂ ಮುಂದೆ ಹೋದರು. ಉತ್ಕೋಚಕ ಎಂಬ ತೀರ್ಥದ ಬಳಿಗೆ ಹೋಗಿ ಅಲ್ಲಿ ತಪಸ್ಸು ಮಾಡುತ್ತಿದ್ದ ದೇವಲಋಷಿಗಳ ತಮ್ಮನಾದ ಧೌಮ್ಯಾಚಾರ್ಯರನ್ನು ಪೌರೋಹಿತ್ಯಕ್ಕೆ ಸ್ವೀಕರಿಸಿ ಬ್ರಾಹ್ಮಣಕುಮಾರರ ರೂಪದಿಂದಲೇ ಪಾಂಚಾಲನಗರವನ್ನು ಪ್ರವೇಶಿಸಿದರು. ಅಲ್ಲಿ ಅಲಂಕೃತವಾದ ರಾಜರ ಸಭೆಯನ್ನು ನೋಡಿದರು.

ಅಲ್ಲಿ ಬಂದಿರುವ ರಾಜಸಮೂಹವನ್ನು ನೋಡಿ ಧೃಷ್ಟದ್ಯುಮ್ನನು ಮಾಲೆಯನ್ನು ಕೈಯಲ್ಲಿ ಹಿಡಿದಿರುವ ದ್ರೌಪದೀದೇವಿಯರನ್ನು ಕರೆದುಕೊಂಡು ರಾಜರ ಮಧ್ಯಕ್ಕೆ ಬಂದನು. ಅಲ್ಲಿ ಬಂದಿರುವ ಸಮಸ್ತರಾಜರ ಪರಾಕ್ರಮವನ್ನು ಸಂಪತ್ತನ್ನು ಹೇಳಿ

ಎಲ್ಲರನ್ನೂ ತೋರಿಸಿದನು. ಆಮೇಲೆ ರುದ್ರದೇವರ ವರವುಳ್ಳ ಧನುಸ್ಸನ್ನು ಐದು ಬಾಣಗಳನ್ನು ಇಟ್ಟು ಎಲ್ಲಾ ರಾಜರನ್ನೂ ಕೂಗಿ ಯಾವಾತನು ಮರದಮೇಲೆ ಇರುವ ಮತ್ಸ್ಯಯಂತ್ರದ ನೀರಿನಲ್ಲಿರುವ ಪ್ರತಿಬಿಂಬವನ್ನು ನೋಡಿ ಈ ಶ್ರೇಷ್ಠ ಧನುಸ್ಸಿನಿಂದ ಈ ಬಾಣಗಳಿಂದ ಆ ಮತ್ಸ್ಯಯಂತ್ರವನ್ನು ಬಡಿದು ಬೀಳಿಸುವನೋ ಅವನನ್ನು ದ್ರೌಪದಿಯು ಮದುವೆಯಾಗುವಳು' ಎಂದು ಗಟ್ಟಿಯಾಗಿ ಹೇಳಿದನು. ಈರೀತಿ ಯಾಗಿ ಧೃಷ್ಟದ್ಯುಮ್ನನು ಹೇಳಿದ ಕೂಡಲೇ ಮದಭರಿತವಾದ ರಾಜಪುತ್ರರೆಲ್ಲರೂ ಎದ್ದುನಿಂತರು. ಎಲ್ಲರೂ ಸ್ಪರ್ಧೆಯಿಂದ ಬಂದರು. ಕೆಲವರು ಧನುಸ್ಸನ್ನು ನೋಡಿಯೇ ನನ್ನಿಂದ ಸಾಧ್ಯವಿಲ್ಲವೆಂದು ಹೇಳಿ ಹೊರಟುಹೋದರು. ಇನ್ನು ಕೆಲವರು ಧನುಸ್ಸನ್ನು ಹಂದಾಡಿಸಿ ನನ್ನಿಂದ ಆಗಲಾರದಪ್ಪ ಎಂದು ಹೇಳುತ್ತಾ ಹೊರಟುಹೋದರು. ತರುವಾಯ ಪ್ರತಾಪಶಾಲಿಯಾದ ಶಿಶುಪಾಲನು ಬಂದು ಧನುಸ್ಸನ್ನು ಎತ್ತಿ ಅದನ್ನು ಸೆಳೆದು ಅದಕ್ಕೆ ಹಗ್ಗವನ್ನು ಬಿಗಿಯಲು ಪ್ರಯತ್ನ ಮಾಡಿದನು. ಅವನು ಬಲಹಾಕಿ ಧನುಸ್ಸನ್ನು ಬಗ್ಗಿಸಲು ಅರ್ಜುನನ ಹೊರತು ಇನ್ನೊಬ್ಬರಿಂದ ಬಗ್ಗಿಸಲಿಕ್ಕೆ ಆಗಬಾರದು ಎಂಬ ರುದ್ರದೇವರ ವರದಿಂದ ಆ ಧನುಸ್ಸಿಗೆ ಹಗ್ಗವನ್ನು ಕಟ್ಟಲು ಒಂದು ಉದ್ದಿನಕಾಳಿನಷ್ಟು ಇದೆಯೆನ್ನುವಾಗ ಶಿಶುಪಾಲನಿಗೆ ಕೈತಪ್ಪಿ ಹೋಯಿತು. ಧನುಸ್ಸಿನ ಕೊನೆಯನ್ನು ಅವನನ್ನೇ ಬಡೆಯಿತು. ಆಮೇಲೆ ಶಲ್ಯನು ಮುದುಕನಾಗಿದ್ದರೂ ಬಂದು ಶಿಶುಪಾಲನಿಗಿಂತ ಹೆಚ್ಚಾಗಿಯೇ ಬಗ್ಗಿಸಿದನು. ಅವನಿಗೂ ಹೆಸರಿನ ಕಾಳಿನಷ್ಟು ಇರುವಾಗ ಕೈತಪ್ಪಿ ಹೋಗಿ ಧನುಸ್ಸಿನ ಕೊನೆಯು ಬಡೆಯಿತು. ತನಗೆ ಆಗಲಾರದೆಂದು ಹೊರಟುಹೋದನು. ಆಮೇಲೆ ಎಲ್ಲಾ ರಾಜರೂ ಕೂತುಕೊಂಡುಬಿಟ್ಟರು.

ಹೀಗೆ ಎಲ್ಲಾ ರಾಜರು ಕೂತಿರಲು ಜರಾಸಂಧನು ಧನುಸ್ಸಿನ ಸಮೀಪಕ್ಕೆ ಬಂದನು. ಬಲವೀರ್ಯದಿಂದ ಮತ್ತನಾದ ಜರಾಸಂಧನು ಧನುಸ್ಸಿನ ಬಳಿಗೆ ಬಂದನು. ಧನುಸ್ಸನ್ನು ಬಗ್ಗಿಸಿದನು. ಅದು ಅವನಿಗೂ ಸಾಸಿವೆಕಾಳಿನಷ್ಟು ಇರುವಾಗ ಬಡಿಯಿತು. ಆಗ ಅವನು ನಿಲ್ಲಲ್ಲಿಕ್ಕೆ ಸಾಧ್ಯವಾಗದೆ ಮೊಳಕಾಲಿನಲ್ಲಿ ಕೂತುಬಿಟ್ಟನು. ಈರೀತಿಯಾಗಿ ರುದ್ರದೇವರಿಂದ ಅವನೂ ಅಶಕ್ತನಾಗಿ ಒಬ್ಬರ ಮುಖವನ್ನೂ ನೋಡದೆ ತನ್ನ ರಾಜ್ಯಕ್ಕೆ ಹೊರಟುಹೋದನು. ಅನೇಕವಾಗಿ ಬಂದ ರಾಜರೆಲ್ಲರೂ ಜರಾಸಂಧನ ಹಿಂದೆಯೇ ಹೊರಟುಹೋದರು. ತರುವಾಯ ಕರ್ಣನು ದುರ್ಯೋಧನನಿಗಾಗಿ ಧನುಸ್ಸಿನ ಬಳಿಗೆ ಬಂದು ಅದನ್ನು ಬಗ್ಗಿಸಿದನು. ರೋಮ ದಷ್ಟು ಇರುವಾಗ ಅದು ಅವನನ್ನು ಬಡಿಯಿತು. ಅವನೂ ಹಿಂದೆ ಹೋದನು.

ತರುವಾಯ ಬ್ರಾಹ್ಮಣರ ಸಭೆಯಲ್ಲಿ ಕೂತಿದ್ದ ಭೀಮಸೇನದೇವರೂ ಅರ್ಜುನನೂ ಎದ್ದು ನಿಂತರು. ಆಗ ಕೆಲವು ಬ್ರಾಹ್ಮಣರು 'ಬೇಡ, ಬೇಡ, ಕೂತುಕೊಳ್ಳಿರಿ' ಎಂದು ಹೇಳುತ್ತಿದ್ದರು. ಇನ್ನು ಕೆಲವರು 'ಇವರು ದೇವತೆಗಳಂತೆ ಪರಾಕ್ರಮಶಾಲಿಗಳಾಗಿರುವುದರಿಂದ ಧನುಸ್ಸಿನ ಬಳಿಗೆ ಹೋಗುವುದು ಯುಕ್ತವೇ' ಎಂದು ಹೇಳುತ್ತಿದ್ದರು. ಭೀಮಾರ್ಜುನರಿಬ್ಬರೂ ಅಲ್ಲಿಗೆ ಬಂದಿದ್ದ ಶ್ರೀಕೃಷ್ಣ ಪರಮಾತ್ಮನ ಮುಖವನ್ನು ನೋಡಿ ಧನುಸ್ಸಿನ ಬಳಿಗೆ ಹೋದರು. ಅಲ್ಲಿ ಅರ್ಜುನನು ಭೀಮಸೇನದೇವರಿಂದ ಅನುಜ್ಞೆಯನ್ನು ಹೊಂದಿ ಮನಸ್ಸಿನಿಂದಲೇ ಶ್ರೀಕೃಷ್ಣ ಪರಮಾತ್ಮನನ್ನು ನಮಸ್ಕರಿಸಿ ಅನಾಯಾಸದಿಂದ ಧನುಸ್ಸನ್ನು ಬಗ್ಗಿಸಿ ಹಗ್ಗವನ್ನು ಬಿಗಿದು ನೀರಿನಲ್ಲಿ ಪ್ರತಿಬಿಂಬವನ್ನು ನೋಡುತ್ತಾ ಮೇಲೆ ಇದ್ದ ಮತ್ಸ್ಯವನ್ನು ಅದರ ಕೆಳಗೆ ಇದ್ದ ಮರದ ಯಂತ್ರದ ಛಿದ್ರದ ದ್ವಾರದಿಂದ ಬಡಿದನು. ಆಗ ದ್ರೌಪದೀದೇವಿಯರು ಬಂದು ಹೊಸದಾದ ತಾವರೆಹೂವಿನ ಮಾಲೆಯನ್ನು ಅರ್ಜುನನ ಕೊರಳಲ್ಲಿ ಹಾಕಿದರು. ತರುವಾಯ ಭೀಮಾರ್ಜುನರು ದ್ರೌಪದೀದೇವಿಯರನ್ನು ಮಧ್ಯದಲ್ಲಿ ಮಾಡಿಕೊಂಡು ಕೃಷ್ಣಪರಮಾತ್ಮನಿಗೆ ನಮಸ್ಕರಿಸಿ ಹೊರಟುಹೋದರು.

ಆಗ ರಾಜರೆಲ್ಲರೂ ಕೋಪಿಸಿಕೊಂಡು ಇವರ ಬಳಿಗೆ ಬಂದರು. ಆದರೆ ಕೃಷ್ಣಪರಮಾತ್ಮನು ಸ್ವಯಂವರಕ್ಕೆ ಬರುವಾಗಲೇ 'ನಾವು ಸ್ವಯಂವರಕ್ಕೆ ನೋಡಲಿಕ್ಕೆ ಮಾತ್ರ ಹೋಗುವುದು. ಒಬ್ಬರೂ ಧನುಸ್ಸನ್ನು ಬಗ್ಗಿಸಲಿಕ್ಕೆ ಹೋಗಬೇಡಿರಿ' ಎಂದು ಹೇಳಿದ್ದರಾದ ಕಾರಣ ಯಾದವರೊಬ್ಬರೂ ಆ ಧನುಸ್ಸಿನ ಬಳಿಗೇ ಬಂದಿರಲಿಲ್ಲ, ಜಗಳಕ್ಕೂ ಬರಲಿಲ್ಲ. ಭೀಮಸೇನದೇವರು ರಾಜರು ತಮ್ಮ ಹತ್ತಿರ ಯುದ್ಧಕ್ಕೆ ಬರುವುದನ್ನು ನೋಡಿ ನೂರುಯೋಜನ ಎತ್ತರವುಳ್ಳ ಒಂದು ಮರವನ್ನು ಕೀಳುವವರಾಗಿ ಎಲೆಗಳನ್ನೆಲ್ಲಾ ಉದುರಿಸಿ ರಾಜರಿಗೆಲ್ಲಾ ಎದುರಾಗಿ ನಿಂತರು. ಅವರನ್ನು ನೋಡಿ ರಾಜರು ಓಡಲಿಕ್ಕೆ ಆರಂಭಿಸಿದರು.

'ಇವನು ಭೀಮಸೇನನು, ಇವನು ಅರ್ಜುನನು, ಇವರು ಇತರ ಪಾಂಡವರು' ಎಂದು ಕೃಷ್ಣಪರಮಾತ್ಮನು ಬಲರಾಮದೇವರಿಗೆ ತೋರಿಸಿದನು. ಬಲರಾಮದೇವರು ಅವರನ್ನು ನೋಡಿ ಸಂತೋಷಪಟ್ಟರು. ಸಾತ್ಯಕಿಯಂತೂ ಹರ್ಷದಿಂದ ಖಡ್ಗವನ್ನು ಹಿಡಿದುಕೊಂಡು ಕುಣಿದನು. ಯಾದವರೆಲ್ಲರೂ ಸಂತೋಷಪಡುತ್ತಿರಲು, ಇತರ ರಾಜರೆಲ್ಲರೂ ಓಡುತ್ತಿರಲು ಕರ್ಣನು ಅರ್ಜುನನೊಡನೆ ಯುದ್ಧಕ್ಕೆ ಬಂದನು. ವೀರನಾದ ಶಲ್ಯನು ಭೀಮಸೇನದೇವರ ಬಳಿಗೆ ಯುದ್ಧಕ್ಕೆ ಬಂದನು. ಆಗ ಬ್ರಾಹ್ಮಣರೆಲ್ಲರೂ ಕೋಪದಿಂದ ದಂಡವನ್ನೂ ವಸ್ತ್ರವನ್ನೂ ಕೃಷ್ಣಾಜೀವನವನ್ನೂ

ದರ್ಭೆಗಳನ್ನೂ ಬಿಸಾಡುತ್ತಿದ್ದರು. ಬ್ರಾಹ್ಮಣರ ವಿರೋಧದಿಂದ ಕ್ಷತ್ರಿಯರಿಗೆ ನಾಶವುಂಟಾಗ ಬಾರದೆಂದು ದ್ರುಪದರಾಜನು ಬ್ರಾಹ್ಮಣರನ್ನೂ ಕೃಷ್ಣಪರಮಾತ್ಮನನ್ನೂ ಪ್ರಾರ್ಥಿಸು ತ್ತಿದ್ದನು. ಆಗ ಭೀಮಸೇನದೇವರು ಶಲ್ಯನ ಬಳಿಗೆ ಯುದ್ಧಕ್ಕೆ ಹೋದರು. ಭೀಮಸೇನದೇವರು ಮರವನ್ನು ಕೆಳಗೆ ಇಟ್ಟು ಎರಡು ಕೈಗಳಿಂದ ಶಲ್ಯನನ್ನು ಹಿಡಿದು ಮೇಲೆ ಆಕಾಶಕ್ಕೆ ಬಿಸಾಡಿದರು. ಆಮೇಲೆ ಕೆಳಗೆ ಬೀಳುವಾಗ ಬಂಧುವಾದ ಕಾರಣ ಮೆಲ್ಲಗೆ ಹಿಡಿದು ಕೆಳಗೆ ಇಟ್ಟರು. ಶಲ್ಯನು ಅವರ ಬಲವನ್ನು ತಿಳಿದವನಾಗಿ ತನ್ನ ರಾಜ್ಯಕ್ಕೆ ಹೊರಟುಹೋದನು.

ಅರ್ಜುನನು ಅದೇ ಧನುಸ್ಸಿನಿಂದ ಕರ್ಣನೊಡನೆ ಯುದ್ಧವನ್ನು ಮಾಡಿದನು. ಕರ್ಣನೂ ತನ್ನ ಅಸ್ತ್ರವನ್ನೂ ಬಾಹುಬಲವನ್ನೂ ತೋರಿಸಿದನು. ಧನುರ್ಧಾರಿಗಳಲ್ಲಿ ಶ್ರೇಷ್ಠರಾದ ಅವರಿಬ್ಬರೂ ಬಹುಸಮಯ ಯುದ್ಧ ಮಾಡಿಕೊಂಡರು. ಕೊನೆಗೆ ಕರ್ಣನು ತುಂಬಾ ಶ್ರಮವುಳ್ಳವನಾಗಿ 'ನೀನು ಅರ್ಜುನನೋ? ಇಂದ್ರನೋ? ಮೂರ್ತಿಮತ್ತಾಗಿ ಬಂದ ಬ್ರಾಹ್ಮಣನ ತಪಸ್ಸೋ? ಬೇರೆ ಯಾರಾದರೂ ನನ್ನ ಮುಂದೆ ಯುದ್ಧದಲ್ಲಿ ನಿಲ್ಲಲಿಕ್ಕೆ ಸಮರ್ಥರಾಗಲಾರರು' ಎಂದು ಹೇಳಿದನು. ಅದಕ್ಕೆ ಅರ್ಜುನನು 'ನಾನು ಯಾರು ಆಗಿದ್ದರೆ ನಿನಗೇನು? ನಿನಗೆ ಸಾಧ್ಯವಿದ್ದರೆ ಬಾಣಗಳನ್ನು ಬಿಡು, ಇಲ್ಲದಿದ್ದರೆ ಹೊರಟುಹೋಗು' ಎಂದು ಹೇಳಿದನು. ಅದಕ್ಕೆ ಕರ್ಣನು 'ನನಗೆ ಬ್ರಾಹ್ಮಣಶ್ರೇಷ್ಠರಿಂದ ಯುದ್ಧವನ್ನು ಮಾಡಿ ಒಂದೂ ಆಗಬೇಕಾಗಿಲ್ಲ' ಎಂದು ಹೇಳಿ ದುರ್ಯೋಧನಾದಿಗಳೊಡನೆ ಸೇರಿಕೊಂಡು ಹಸ್ತಿನಾವತಿಗೆ ಹೋದನು.

ಭೀಮಸೇನದೇವರು ದ್ರೌಪದೀದೇವಿಯರನ್ನು ಅರ್ಜುನನ್ನೂ ಕರೆದು ಕೊಂಡು ಹೋದರು. ಮುಂದೆ ನಕುಲಸಹದೇವರಿಂದ ಸಹಿತನಾಗಿ ಧರ್ಮರಾಜನು ಹೋದನು. ಹಿಂದೆ ಭೀಮಾರ್ಜುನರು ಹೋದರು. ಅವರು ಇಳಿದುಕೊಂಡಿದ್ದ ಕುಂಬಾರನ ಗಡಿಗೆ ಮಾಡುವ ಮನೆಗೆ ಹೋಗಿ ಭಿಕ್ಷೆಯನ್ನು ನಾವು ತಂದೆವು ಎಂದು ಪಾಂಡವರು ಹೇಳಲು ಕುಂತಿಯು ಒಳಗಿನಿಂದ 'ಐದು ಜನರೂ ಅನುಭವಿಸಿರಿ' ಎಂದು ಹೇಳಿ ಹೊರಗೆ ಬಂದು ದ್ರೌಪದೀದೇವಿಯರನ್ನು ನೋಡಿದಳು. ಕುಂತೀದೇವಿಯರು ಅಷ್ಟರವರೆಗೆ ತಿಳಿಯದೆಯೂ ಕೂಡ ಒಂದು ಸುಳ್ಳುಮಾತನ್ನು ಆಡಿದ್ದಿಲ್ಲ. ಈ ಮಾತು ಹೇಗೆ ಸತ್ಯವಾಗುವುದು?' ಎಂದು ಎಲ್ಲರಿಗೂ ಯೋಚನೆ ಯುಂಟಾಯಿತು. ಅಷ್ಟರಲ್ಲಿ ಶ್ರೀಕೃಷ್ಣಪರಮಾತ್ಮನು ಅವರಲ್ಲಿರುವ ಪ್ರೇಮದಿಂದ ಅಲ್ಲಿಗೆ ಬಂದು ಮಾತನ್ನಾಡಿ ಸಮಸ್ತ ಯಾದವರಿಂದ ಸಹಿತರಾಗಿ ದ್ವಾರಕಾಪಟ್ಟಣಕ್ಕೆ

ಹೋದರು. ದ್ರುಪದರಾಜನು ರಾತ್ರಿಯಲ್ಲಿ ತನ್ನ ಮಗನಾದ ಧೃಷ್ಟದ್ಯುಮ್ನನನ್ನು ದ್ರೌಪದೀದೇವಿಯರು ಎಲ್ಲಿಗೆ ಹೋದದ್ದೆಂದು ತಿಳಿದುಕೊಂಡು ಬರಲಿಕ್ಕೆ ಕಳುಹಿಸಿದನು. ಅವನು ಮರೆಯಾಗಿ ಬಂದು ನಿಂತುಕೊಂಡು ಭಿಕ್ಷಾನ್ನವನ್ನು ಭೋಜನ ಮಾಡಿರುವ ಪಾಂಡವರನ್ನು ಅತಿತೃಪ್ತವಾದ ಮನಸ್ಸಿನಿಂದ ಇದ್ದ ತಂಗಿಯನ್ನು ನೋಡಿ ಅವರು ಯುದ್ಧದ ವೃತ್ತಾಂತವನ್ನು ಹೇಳುವುದನ್ನೂ ಅವರ ಗಂಭೀರವಾದ ಗರ್ಜನೆಯನ್ನು ಕೇಳಿ ಇವರು ಯಾರೋ ಕ್ಷತ್ರಿಯಶ್ರೇಷ್ಠರು ಎಂದು ಊಹಿಸಿದನು.

ಮರುದಿನ ಬೆಳಿಗ್ಗೆ ದ್ರುಪದರಾಜನ ಮಾತಿನಿಂದ ಅವನ ಪುರೋಹಿತರು ಕುಂಬಾರನ ಮನೆಗೆ ಬಂದರು. ಜ್ಞಾನಿಗಳಾದ ಭೀಮಸೇನದೇವರು ಅವರನ್ನು ಶಾಸ್ತ್ರದಲ್ಲಿ ಹೇಳಿದ ರೀತಿಯಿಂದ ಪೂಜಿಸಿದರು. ಪುರೋಹಿತರು ಪಾಂಡವರನ್ನು ಕುಂತೀದೇವಿಯನ್ನು ಕರೆದುಕೊಂಡು ರಾಜನ ಮನೆಗೆ ಹೋದರು. ದ್ರುಪದರಾಜನು ಬಂದಿರುವ ಅವರನ್ನು ತನ್ನ ಮಗಳನ್ನು ಸತ್ಕರಿಸಿ ಬ್ರಾಹ್ಮಣ ಕ್ಷತ್ರಿಯ ವೈಶ್ಯಶೂದ್ರರಿಗೆ ಬೇಕಾದ ಪದಾರ್ಥಗಳಿಂದ ತುಂಬಿಸಿರುವ ಪ್ರತ್ಯೇಕವಾಗಿ ನಾಲ್ಕು ಮನೆಗಳಲ್ಲಿ ಯಾವ ಮನೆಗೆ ಬೇಕಾದರೂ ಪ್ರವೇಶಿಬಹುದು ಎಂದನು. ಆಗ ಪಾಂಡವರು ಕ್ಷತ್ರಿಯರಿಗೆ ಯೋಗ್ಯವಾದ ಆಯುಧಗಳಿಂದ ತುಂಬಿದ ಮನೆಗೆ ಪ್ರವೇಶಿಸಿದರು. ವ್ಯಾಪಾರ ಶೌರ್ಯ ಸ್ವರ ಆಕಾರ ಇತ್ಯಾದಿ ಗುಣಗಳಿಂದ ಇವರು ಕ್ಷತ್ರಿಯರೆಂದು ತಿಳಿದುಕೊಂಡು ದ್ರುಪದರಾಜನು ಧರ್ಮರಾಜನ ಬಳಿಗೆ ಬಂದು 'ಪುರುಷಶ್ರೇಷ್ಠನೇ! ನೀನು ಯಾವ ಜಾತಿಯವನು? ಸತ್ಯವನ್ನು ಹೇಳಬೇಕು' ಎಂದು ಕೇಳಿದನು.

ಅದಕ್ಕೆ ಧರ್ಮರಾಜನು ಮುಗುಳು ನಗೆಯುಳ್ಳವನಾಗಿ ''ರಾಜನೇ! ಪೂರ್ವದಲ್ಲಿ ಸಭೆಯಲ್ಲಿ ನಿನ್ನ ಮಗನು ನಿನ್ನ ಮಗಳನ್ನು ಹೊಂದುವ ವಿಷಯದಲ್ಲಿ ಇಂತಹ ಜಾತಿಯವನಾಗಬೇಕೆಂದು ಹೇಳಲಿಲ್ಲವೇ! ಈಗ ಏಕೆ ಜಾತಿಯನ್ನು ಕೇಳುವಿ? ಮತ್ಸ್ಯಯಂತ್ರವನ್ನು ಭೇದಿಸಬೇಕೆಂದು ಮಾತ್ರ ನಿನ್ನ ಮಗನು ಹೇಳಿದ್ದನು. ಅದನ್ನು ಇವನು ಮಾಡಿರುವನು'' ಎಂದು ಹೇಳಿದನು. ಆಗ ದ್ರುಪದರಾಜನು ಧರ್ಮರಾಜನೊಡನೆಯೂ ಕುಂತೀದೇವಿಯೊಡನೆಯೂ ನೀವು ಯಾರೆಂದು ತಿಳಿಸಬೇಕೆಂದು ತುಂಬಾ ಕೇಳಿಕೊಂಡನು. ಆಗ ಧರ್ಮರಾಜನೂ ಕುಂತಿಯೂ ಎಲ್ಲಾ ವಿಷಯವನ್ನು ತಿಳಿಸಿದರು. ಅದನ್ನು ಕೇಳಿ ದ್ರುಪದರಾಜನು ಸಂತೋಷವುಳ್ಳವನಾಗಿ 'ನಾನೀಗ ಕೃತಾರ್ಥನಾದೆನು. ನಾನು ಅರ್ಜುನನಿಗಾಗಿಯೇ ಇಷ್ಟು ಪ್ರಯತ್ನವನ್ನು ಮಾಡಿದ್ದು. ನೀನೋ ಅರ್ಜುನನೋ ಅಥವಾ ನಿಮ್ಮಲ್ಲಿ ಇನ್ನು ಯಾರಾದರೂ ನನ್ನ ಮಗಳನ್ನು ಮದುವೆಯಾಗಿರಿ' ಎಂದು ಹೇಳಿದನು. ಧರ್ಮರಾಜನು 'ನಾವು ಐದು ಜನರೂ

ಮದುವೆಯಾಗುವೆವು ಎಂದು ನನ್ನ ಅಭಿಪ್ರಾಯವಿದೆ. ಇದಕ್ಕೆ ಒಂದೂ ಪ್ರಮಾಣವು ತೋರುವುದಿಲ್ಲ. ಆದರೆ ನನ್ನ ಮನಸ್ಸಿಗೆ ಆಗಬಹುದು ಎಂದು ತೋರುತ್ತದೆ. ನನ್ನ ಮನಸ್ಸು ಅಧರ್ಮವಿಷಯಕ್ಕೆ ಹೋಗತಕ್ಕದ್ದಲ್ಲ. ಆದುದರಿಂದ ನನ್ನ ಮನಸ್ಸೇ ನನಗೆ ಪ್ರಮಾಣವಾಗಿದೆ' ಎಂದು ಹೇಳಲು ದ್ರುಪದರಾಜನೂ ಧೃಷ್ಟದ್ಯುಮ್ನನೂ ಅದನ್ನು ಅಂಗೀಕರಿಸಲಿಲ್ಲ.

ಆಗ ಅಲ್ಲಿಗೆ ವೇದವ್ಯಾಸದೇವರು ಬಂದರು. ಎಲ್ಲರೂ ಎದ್ದು ನಿಂತು ಅವರನ್ನು ಪೂಜಿಸಿ ಆಸನದಲ್ಲಿ ಕೂತುಕೊಳ್ಳಿಸಿ ಅವರ ಆಜ್ಞೆಯಿಂದ ಕೂತುಕೊಂಡರು. ವೇದವ್ಯಾಸದೇವರು ದ್ರುಪದರಾಜನೊಡನೆ 'ರಾಜನೇ! ನಿನ್ನ ಮಗಳನ್ನು ಇವರು ಐದು ಜನರಿಗೂ ಮದುವೆ ಮಾಡಿಕೊಡು. ಇವರು ಯಮ ವಾಯು ಇಂದ್ರ ಅಶ್ವಿನೀದೇವತೆಗಳು. ಪೂರ್ವದಲ್ಲಿ ಇದ್ದ ಈಗ ಇರುವ ಇಂದ್ರರು. ಇವರ ಪತ್ನಿಯರೆಲ್ಲರೂ ಒಂದೇ ದೇಹದಿಂದ ನಿನ್ನ ಮಗಳಾಗಿ ಹುಟ್ಟಿರುವರು. ಆದುದರಿಂದ ನಿನ್ನ ಮಗಳನ್ನು ಈ ಐದು ಜನರಿಗೂ ಮದುವೆ ಮಾಡಿಕೊಡುವುದರಿಂದ ಯಾವ ವಿರೋಧವೂ ಇರುವುದಿಲ್ಲ' ಎಂದು ಹೇಳಿದರು. ಇಷ್ಟು ಹೇಳಿದರೂ ದ್ರುಪದ ರಾಜನು ತನ್ನ ಸಮ್ಮತಿಯನ್ನು ತೋರಿಸಲಿಲ್ಲ. ಆಗ ವೇದವ್ಯಾಸದೇವರು 'ರಾಜನೇ! ನಿನಗೀಗ ದಿವ್ಯದೃಷ್ಟಿಯನ್ನು ಕೊಟ್ಟಿರುವೆನು. ಸ್ವರ್ಗದಲ್ಲಿರುವ ಪಾಂಡವರನ್ನು ನೋಡು. ನಿನ್ನ ಮಗಳು ಬೇರೆ ಬೇರೆ ರೂಪದಿಂದ ಅವರ ಸಮೀಪದಲ್ಲಿ ಪ್ರತ್ಯೇಕ ಪ್ರತ್ಯೇಕವಾಗಿ ಇರುವುದನ್ನು ನೋಡು. ಆಮೇಲೆ ನಿನಗೆ ತೋರಿದಂತೆ ಮಾಡು' ಎಂದು ಹೇಳಿದರು.

ತರುವಾಯ ದ್ರುಪದರಾಜನು ವೇದವ್ಯಾಸದೇವರ ಅನುಗ್ರಹದಿಂದ ಹಾಗೆಯೇ ನೋಡಿದನು. ತರುವಾಯ ತಾನು ವೇದವ್ಯಾಸದೇವರ ಮಾತಿನಲ್ಲಿ ಅನಾದಾರ ತೋರಿಸಿದೆನೆಂದು ಭಯದಿಂದ ಅವರ ಕಾಲಿಗೆ ಬಿದ್ದನು. ವೇದವ್ಯಾಸ ದೇವರು ದ್ರುಪದರಾಜನಿಗೆ ಅಭಯಪ್ರದಾನ ಮಾಡಿದರು. ಅವನು ಮದುವೆ ಮಾಡಿಕೊಡಲು ಸಮ್ಮತಿಸಲು ಧೌಮ್ಯಾಚಾರ್ಯ ರಿಂದ ಕೂಡಿಕೊಂಡು ಎಲ್ಲಾ ಮದುವೆ ಕಾರ್ಯವನ್ನೂ ಮಾಡಿಸಿದರು. ಐದು ಜನರೂ ಕ್ರಮದಿಂದ ದ್ರೌಪದೀ ದೇವಿಯರ ಪಾಣಿಗ್ರಹಣವನ್ನು ಮಾಡಿದರು. ಪಾಂಚಾಲದೇಶದಲ್ಲಿ ದೊಡ್ಡ ಉತ್ಸವವು ನಡೆಯಿತು.

ಪಾಂಡವರು ಮದುವೆ ಮಾಡಿಕೊಂಡು ಅಲ್ಲಿಯೇ ಇರುತ್ತಿರಲು ಅದನ್ನು ಕೇಳಿ ಶ್ರೀಕೃಷ್ಣಪರಮಾತ್ಮನು ಬಲರಾಮದೇವರಿಂದಲೂ ಯಾದವರಿಂದಲೂ ಸಹಿತರಾಗಿ ಬೇಕಾದ ಉಡುಗರೆ ಯನ್ನು ಹಿಡಿದುಕೊಂಡು ಅಲ್ಲಿಗೆ ಬಂದರು. ಅವರನ್ನು ನೋಡಿ

ಪಾಂಡವರು ಸಂತೋಷಪಟ್ಟರು. ಕೃಷ್ಣಪರಮಾತ್ಮನಿಗೆ ನಮಸ್ಕರಿಸಿದರು. ಶ್ರೀಭಗವಂತನು ದ್ರೌಪದೀದೇವಿಯರನ್ನು ನೋಡಿ ಮನೆಗೆ ಬೇಕಾದ ಪಾತ್ರೆಗಳನ್ನೆಲ್ಲಾ ಕೊಟ್ಟನು. ದ್ರೌಪದೀದೇವಿಯರಿಗೂ ಐದು ಜನ ಪಾಂಡವರಿಗೂ ಪ್ರತ್ಯೇಕವಾಗಿ ದೇವತೆಗಳಿಗೆ ಯೋಗ್ಯಗಳಾದ ವಸ್ತ್ರಗಳನ್ನೂ ನಾನಾವಿಧ ಆಭರಣಗಳನ್ನೂ ಕೊಟ್ಟು ಸೋದರ ಅತ್ತೆಯಾದ ಕುಂತಿಗೂ ಉಚಿತವಾದ ಆಭರಣಗಳನ್ನು ಕೊಟ್ಟರು. ರತ್ನಗಳನ್ನೂ ಆನೆಗಳನ್ನೂ, ಕುದುರೆಗಳನ್ನೂ, ರಥಗಳನ್ನೂ, ಬಂಗಾರದ ಗಟ್ಟಿಗಳನ್ನೂ ಬಹಳವಾಗಿ ಕೊಟ್ಟರು. ವೇದವ್ಯಾಸದೇವರು ಬೇಕಾದ ಆಶೀರ್ವಾದಗಳನ್ನು ಮಾಡಿದರು. ದ್ರುಪದರಾಜನು ಆಭರಣಗಳನ್ನು, ಆನೆ, ಕುದುರೆ, ರಥ, ಆಭರಣ, ರತ್ನಬಂಗಾರಗಳನ್ನು ಸಾವಿರಾರು ದಾಸೀದಾಸರನ್ನು ಕೊಟ್ಟನು. ಆ ದಾಸಿಯರಿಗೂ ಪ್ರತ್ಯೇಕ ವಸ್ತ್ರಾಭರಣಾದಿಗಳನ್ನು ಕೊಟ್ಟನು. ಅನೇಕ ಮಾಸಗಳವರೆಗೆ ಶ್ರೀಕೃಷ್ಣ ಪರಮಾತ್ಮನು ಪಾಂಡವರೊಡನೆ ಸಂತೋಷದಿಂದ ಇದ್ದು ಆಮೇಲೆ ಯಾದವರಿಂದ ಕೂಡಿಕೊಂಡು ದ್ವಾರಕಾಪಟ್ಟಣಕ್ಕೆ ಹೋದರು. ಶ್ರೀವೇದವ್ಯಾಸದೇವರೂ ಹೊರಟು ಹೋದರು. ಆಮೇಲೆಯೂ ಪಾಂಡವರು ಪಾಂಚಾಲನಗರದಲ್ಲಿಯೇ ಒಂದು ವರ್ಷವಿದ್ದರು.



## ಭೀಮಸೇನದೇವರ ಯೌವರಾಜ್ಯ ಪಟ್ಟಾಭಿಷೇಕ [1]

ಸ್ವಲ್ಪದಿವಸವಾದ ಮೇಲೆ ದುರ್ಯೋಧನಾದಿಗಳು ಶಕುನಿಯಿಂದಲೂ ಕರ್ಣ ನಿಂದಲೂ, ಜಯದ್ರಥನಿಂದಲೂ, ಭೂರಿಶ್ರವನೇ ಮೊದಲಾದ ವೀರರಿಂದಲೂ ಆನೆ ಕುದುರೆ ರಥಗಳಿಂದಲೂ, ಸಹಿತರಾಗಿ ದ್ರುಪದರಾಜನನ್ನು ಕೊಲ್ಲಬೇಕೆಂದು ಪಂಚಾಲನಗರಕ್ಕೆ ಹೋದರು. ಅವರು ಪಟ್ಟಣಕ್ಕೆ ಮುತ್ತಿಗೆ ಹಾಕಲು ದ್ರುಪದರಾಜನು ಮಕ್ಕಳಿಂದಲೂ ಸೈನ್ಯದಿಂದಲೂ ಸಹಿತನಾಗಿ ಯುದ್ಧಕ್ಕೆ ಬಂದನು. ಭಯಂಕರವಾದ ಯುದ್ಧವು ನಡೆಯಿತು. ಯುದ್ಧದಲ್ಲಿ ಚಿತ್ರ, ಚಿತ್ರಕೇತು ಎಂಬ ಇಬ್ಬರು ದ್ರುಪದರಾಜನ ಮಕ್ಕಳು ಮೃತರಾದರು. ಸೈನ್ಯವು ಓಡಿಹೋಯಿತು. ಆಗ ಪಾಂಡವರು ಧನುರ್ಧಾರಿ ಗಳಾಗಿ ಯುದ್ಧಕ್ಕೆ ಬಂದರು. ಐದು ಜನ ಪಾಂಡವರೂ ಯುದ್ಧಮಾಡುತ್ತಿರಲು ಭೂರಿಶ್ರವನು ಕರ್ಣನಿಂದ ಸಹಿತನಾಗಿ ಅರ್ಜುನನ ರಥವನ್ನು ಪುಡಿ ಮಾಡಿದನು.

1. ಮ.ತಾ.ನಿ. ಅ-20, 21

ಕೂಡಲೇ ಭೀಮಸೇನದೇವರು ಎರಡು ಕೈಗಳಿಂದ ಒಂದು ದೊಡ್ಡಮರವನ್ನು ಕಿತ್ತಿ ಹಿಡಿದುಕೊಂಡು ಬಂದರು. ದೊಡ್ಡ ಮರವನ್ನು ಹಿಡಿದುಕೊಂಡು ಬರುತ್ತಿರುವ ಭೀಮಸೇನದೇವರನ್ನು ನೋಡಿ ದುರ್ಯೋಧನಾದಿಗಳು ಕರ್ಣನೂ ಭೂರಿಶ್ರವನೂ ಶಕುನಿ ಭೂರಿ ಜಯದ್ರಥನೇ ಮೊದಲಾದವರೂ ಎಲ್ಲರೂ ಓಡಿಹೋಗಿ ಹಸ್ತಿನಾವತಿಯೊಳಗೆ ಪ್ರವೇಶಿಸಿದರು.

ಎಲ್ಲಾ ವೃತ್ತಾಂತವನ್ನು ತಿಳಿದ ವಿದುರನು ಧೃತರಾಷ್ಟ್ರನೊಡನೆ 'ನಿನ್ನ ಮಕ್ಕಳು ಅಭಿವೃದ್ಧಿಯನ್ನು ಹೊಂದಿದರು' ಎಂದು ಹೇಳಿದನು. ಧೃತರಾಷ್ಟ್ರನು ತನ್ನ ಮಕ್ಕಳಿಗೆ ಸ್ವಯಂವರದಲ್ಲಿ ದ್ರೌಪದೀದೇವಿಯ ಲಾಭವಾಯಿತೆಂದು ಭ್ರಮಿಸಿಕೊಂಡು ಸಂತೋಷದಿಂದ ಆಭರಣಗಳನ್ನೆಲ್ಲಾ ಕಳುಹಿಸಿದನು. ಕೂಡಲೇ ವಿದುರನು 'ನಿನ್ನ ಮಕ್ಕಳು ಯಾರು ಎಂದು ತಿಳಿದುಕೊಂಡೆ. ಪಾಂಡವರನ್ನು ಹೇಳುತ್ತಿದ್ದೇನೆ' ಎಂದನು. ಆಗ ಧೃತರಾಷ್ಟ್ರನು ತನ್ನ ಮನಸ್ಸಿನ ಅತೃಪ್ತಿಯನ್ನು ತೋರಿಸದೆ, 'ಹಾಗಾದರೆ ಬಹಳ ಸಂತೋಷ. ಕುಂತಿಯಿಂದ ಸಹಿತರಾಗಿ ಅವರು ಮೃತರಾಗಿಲ್ಲವೋ? ಅವರ ವೃತ್ತಾಂತ ವನ್ನೆಲ್ಲಾ ತಿಳಿಸು' ಎಂದನು. ವಿದುರನು ಹಿಡಿಂಬನ ಸಂಹಾರವೇ ಮೊದಲಾದ ಸಮಸ್ತ ವೃತ್ತಾಂತವನ್ನು ತಿಳಿಸಿದನು. ದ್ರೌಪದೀದೇವಿಯರ ವಿವಾಹವನ್ನು ಹೇಳಿದನು. ಅದನ್ನು ಕೇಳಿ ಭೀಷ್ಮಾಚಾರ್ಯರೇ ಮೊದಲಾದವರು ಬಹಳ ಸಂತೋಷಪಟ್ಟರು. ಹಾಗೆಯೇ ಒಂದು ವರ್ಷ ಕಳೆದುಹೋಯಿತು.

ಅಲ್ಲಿ ಪಾಂಡವರ ಬಳಿಗೆ ಕೃಷ್ಣಪರಮಾತ್ಮನು ಬಂದು ಪಾಂಡವರಿಗೆ ಬೇಕಾದ ರತ್ನಗಳನ್ನು ಕೊಟ್ಟು ಹೊರಟುಹೋದ ವಿಷಯವನ್ನು ಕೇಳಿ ಕರ್ಣನಿಂದ ಸಹಿತರಾದ ದುರ್ಯೋಧನಾದಿಗಳು ತುಂಬಾ ಯೋಚನೆ ಮಾಡಿದರು. ಅವರು ಪುನಃ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಹೋಗಬೇಕೆಂದು ಹೊರಟರು. ಆಗ ವಿದುರನು ಭೀಷ್ಮಾಚಾರ್ಯನೇ ಮೊದಲಾದವರೊಡನೆ 'ಈ ಪಾಪಕರವಾದ ಮನಸ್ಸುಳ್ಳವರು ಯುದ್ಧಕ್ಕಾಗಿ ಪಾಂಡವರ ಬಳಿಗೆ ಹೋಗಿ ಪ್ರಾಣಬಿಡುತ್ತಾರೆ. ಈ ವಿಷಯದಲ್ಲಿ ಸಂದೇಹವೇ ಇಲ್ಲ. ಭೀಮಾರ್ಜುನರನ್ನು ತಡೆಯಲಿಕ್ಕೆ ಸಾಮರ್ಥ್ಯವುಳ್ಳವನು ಯಾರೂ ಇಲ್ಲ. ದೇವತೆಗಳಲ್ಲಿಯೂ ಅವರು ಶ್ರೇಷ್ಠರಾಗಿದ್ದಾರೆ. ಅವರು ಅಲ್ಲಿ ಇದ್ದಾರೆ ಎಂದು ತಿಳಿದೂ ಕೂಡ ಒಂದು ವರ್ಷ ಕಳೆದದ್ದು ತಪ್ಪಾಗುವುದು. ಆದುದರಿಂದ ಪಾಂಡವರನ್ನು ಕರೆದುಕೊಂಡು ಬರಲಿಕ್ಕೆ ಜನರನ್ನು ಕಳುಹಿಸಬೇಕು. ಸಮಾಧಾನದಿಂದ ಅವರನ್ನು ಇಲ್ಲಿಗೆ ತರಿಸಿ ಅರ್ಧರಾಜ್ಯವನ್ನು ಕೊಡು. ಹಾಗೆ ಮಾಡುವುದು ನಿನ್ನ ಕಲಾಭಿವೃದ್ಧಿಗೂ ಧರ್ಮಕ್ಕೂ ಕಾರಣವಾಗುವುದು. ಹಾಗೆ

ಮಾಡದೆ ಇದ್ದರೆ ಎರಡನ್ನು ಕಳೆದುಕೊಳ್ಳುವಿ' ಎಂದು ಹೇಳಿದನು. ಹಾಗೆಯೇ ಭೀಷ್ಮಾಚಾರ್ಯರು ದ್ರೋಣಾಚಾರ್ಯರೂ ಕೃಪಾಚಾರ್ಯರೂ ಹೇಳಿದರು.

ತರುವಾಯ ಧೃತರಾಷ್ಟ್ರನು ವಿದುರನೊಡನೆ 'ನೀನೇ ಹೋಗಿ ಅವರನ್ನು ಕರೆದುಕೊಂಡು ಬಾ' ಎಂದು ಹೇಳಿದನು. ವಿದುರನು ವೇಗವುಳ್ಳ ರಥದಲ್ಲಿ ಕೂತುಕೊಂಡು ಪಂಚಾಲನಗರಕ್ಕೆ ಹೋದನು. ಅಲ್ಲಿರುವವರಿಂದ ಸತ್ಕಾರವನ್ನು ಹೊಂದಿದನು. ಅದೇ ಸಮಯದಲ್ಲಿ ಅಲ್ಲಿಗೆ ಶ್ರೀಕೃಷ್ಣಪರಮಾತ್ಮನೂ ವೇದವ್ಯಾಸ ದೇವರೂ ಬಂದಿದ್ದರು. ಅವರು ವಿದುರನಿಂದ ಸಹಿತರಾಗಿ ಕುಂತೀದೇವಿಯಿಂದ ಕೂಡಿದ ದ್ರೌಪದೀದೇವಿಯರಿಂದ ಸಹಿತರಾದ ಪಾಂಡವರನ್ನು ಕರೆದುಕೊಂಡು ಹಸ್ತಿನಾವತಿಗೆ ಬಂದರು. ಅವರೆಲ್ಲರೂ ಬರಲು ಊರಿನ ಜನರಿಗೆಲ್ಲಾ ಬಹಳ ಸಂತೋಷವಾಯಿತು. ಭೀಷ್ಮಾಚಾರ್ಯರೇ ಮೊದಲಾದವರು ಸಂತೋಷವುಳ್ಳವ ರಾಗಿ ಧೃತರಾಷ್ಟ್ರನಿಂದ ಸಹಿತರಾಗಿ ಮಹಾಉತ್ಸವದಿಂದ ಸತ್ಕರಿಸಿ ಮನೆಗೆ ಕರೆದುಕೊಂಡು ಬಂದರು. ಗಾಂಧಾರಿಯು ದುರ್ಯೋಧನನ ಪತ್ನಿಯಿಂದ ಸಹಿತಳಾಗಿ ದ್ರೌಪದೀದೇವಿಯನ್ನು ಅತ್ಯಂತ ಪೂಜಿಸಿದಳು. ಸ್ವಲ್ಪ ದಿವಸ ಒಂದೇ ಮನೆಯಲ್ಲಿಯೇ ಎಲ್ಲರೂ ಒಟ್ಟಿಗೇ ವಾಸಮಾಡಿದರು. ತರುವಾಯ ಗಾಂಧಾರಿಯು ತನ್ನ ಮಕ್ಕಳು ದುರ್ಬುದ್ಧಿಯುಳ್ಳವರಾದ ಕಾರಣ ದ್ರೌಪದೀದೇವಿಯ ನಿಮಿತ್ತವಾಗಿ ಭೀಮಸೇನದೇವರಿಂದ ಭಯವುಳ್ಳವರಾಗಿ ಕುಂತೀದೇವಿಯೊಡನೆ 'ಕುಂತಿ! ನೀನು ಸೊಸೆಯನ್ನು ಕರೆದುಕೊಂಡು ನಿನ್ನ ಮನೆಗೇ ಹೋಗು. ನನ್ನ ಮಕ್ಕಳ ದುರ್ಬುದ್ಧಿಯಿಂದ ನಿನ್ನ ಭೀಮಸೇನನಿಂದ ಭಯಪಡುತ್ತೇನೆ. ಏಕೆಂದರೆ ನಿನ್ನ ಸೊಸೆಯು ಅತ್ಯಂತ ರೂಪವತಿಯಾಗಿರುವಳು' ಎಂದು ಹೇಳಿದಳು. ಕುಂತಿಯು ಹಾಗೆಯೇ ಆಗಲಿ ಎಂದು ಹೇಳಿ ತನ್ನ ಮಕ್ಕಳನ್ನೂ ಸೊಸೆಯನ್ನು ಕರೆದುಕೊಂಡು ಪಾಂಡುರಾಜನು ವಾಸಮಾಡುತ್ತಿದ್ದ ಮನೆಗೆ ಹೋದಳು. ಅದೇ ಮನೆಯಲ್ಲಿ ಸಂತೋಷದಿಂದ ಐದು ವರ್ಷಕಾಲ ವಾಸಮಾಡಿದರು. ಪಾಂಡವರು ದ್ರೌಪದೀ ದೇವಿಯರಿಂದ ಕೂಡಿಕೊಂಡು ಸಂತೋಷಪಡುತ್ತಿದ್ದರು. ಪಾಂಡವರ ಮೇಲಿನ ಸ್ನೇಹದಿಂದ ಕೃಷ್ಣಪರಮಾತ್ಮನೂ ವೇದವ್ಯಾಸದೇವರೂ ಅಲ್ಲಿ ವಾಸಮಾಡುತ್ತಿದ್ದರು. ಅವರಿಂದ ಕೂಡಿಕೊಂಡು ಅವರು ಹೇಳುವ ಅನೇಕ ಉತ್ತಮ ಕಥೆಗಳನ್ನು ಕೇಳುತ್ತಾ ಪಾಂಡವರು ಸಂತೋಷದಿಂದ ಇದ್ದರು.

ಒಂದು ಸಮಯದಲ್ಲಿ ಕಳಿಂಗದೇಶದಲ್ಲಿ ರಾಜಪುತ್ರಿಗೆ ಸ್ವಯಂವರವು[1]

---

1. ಮ.ತಾ.ನಿ. ಅ-19

ನಡೆಯಿತು. ಅಲ್ಲಿಗೆ ಕೌರವರೂ ಪಾಂಡವರೂ ಹೋಗಿದ್ದರು. ಕಳಿಂಗದೇಶಕ್ಕೆ ಸುವಜ್ರನೆಂಬವನು ರಾಜನಾಗಿದ್ದನು. ಅವನಿಗ ರುದ್ರದೇವರ ವರದಿಂದ ಒಬ್ಬರಿಂದಲೂ ಪರಾಜಯವಿರಲಿಲ್ಲ. ಸ್ವಯಂವರಮಂಟಪದಲ್ಲಿ ದುರ್ಯೋಧನನು ಬಲಾತ್ಕಾರದಿಂದ ಕನ್ಯೆಯನ್ನು ಹಿಡಿದನು. ಆಗ ಸುವಜ್ರನು ಜರಾಸಂಧನಿಂದ ಸಹಿತನಾಗಿ ದುರ್ಯೋಧನನೊಡನೆ ಯುದ್ಧಮಾಡಿ ರುದ್ರದೇವರ ವರಬಲದಿಂದ ಬೇಗನೇ ಯುದ್ಧಮಾಡಿ ಕಟ್ಟಿಹಾಕಿದನು. ಕರ್ಣನು ಬರುವಾಗ ಪಾಂಡವರ ಮೇಲೆ ಸರ್ಧೆಯಿಂದ ಬಂದಿದ್ದನಾದ ಕಾರಣ ಪರಶುರಾಮದೇವರ ಮಾತಿನಂತೆ ಸೋತು ಓಡಿಹೋದನು. (ಕರ್ಣನಿಗೆ ಯಾರೊಡನೆ ಸ್ಪರ್ಧೆಯಿಲ್ಲದೆ ಯುದ್ಧ ಮಾಡುವಿಯೋ ಅವನನ್ನು ಜಯಿಸುವಿ. ಸ್ಪರ್ಧೆಯಿಂದ ಯುದ್ಧಕ್ಕೆ ಹೋದಿಯಾದರೆ ಸೋತು ಹೋಗುವಿ ಎಂದು ಪರಶುರಾಮದೇವರು ಹೇಳಿದ್ದರು.) ಸುವಜ್ರನು ದುರ್ಯೋಧನನನ್ನು ಅವನ ಎಲ್ಲಾ ತಮ್ಮಂದಿರನ್ನು ಕಟ್ಟಿಹಾಕಿದನು. ಭೀಷ್ಮ ಧೃತರಾಷ್ಟ್ರ ವಿದುರ ಧರ್ಮರಾಜರ ಮಾತಿನಿಂದ ಪ್ರೇರಿತರಾಗಿ ಭೀಮಸೇನದೇವರು ಸುವಜ್ರನನ್ನು ಸಂಹರಿಸಿ ದುರ್ಯೋಧನಾದಿಗಳನ್ನು ಬಿಡಿಸಿದರು. ಕರ್ಣನು ಸಹಿತರಾದ ದುರ್ಯೋಧನಾದಿಗಳು ಸತ್ತವರಂತೆ ಆಗಿ ಊರಿಗೆ ಬಂದು ಸೇರಿದರು.

ಧೃತರಾಷ್ಟ್ರನು ಕೌರವರಿಗೂ ಪಾಂಡವರಿಗೂ ಆಗುವ ವಿರೋಧವನ್ನು ನೋಡಿ ಧರ್ಮರಾಜನೊಡನೆ 'ಧರ್ಮರಾಜ! ನೀನು ಬೇಗನೆ ಇಂದ್ರಪ್ರಸ್ಥಕ್ಕೆ ಹೋಗು. ತಮ್ಮಂದಿರಿಂದ ಕೂಡಿಕೊಂಡು ಅಲ್ಲಿ ಅರ್ಧರಾಜ್ಯವನ್ನು ಅನುಭವಿಸು. ಕೋಶದ ಅರ್ಧವನ್ನು ತೆಗೆದುಕೊಂಡು ಹೋಗು. ಅಲ್ಲಿ ಇಂದ್ರದೇವರು ಬ್ರಹ್ಮಾದಿದೇವತೆಗಳಿಂದ ಪಟ್ಟಾಭಿಷಿಕ್ತರಾಗಿ ಅಲ್ಲಿಯೇ ಬಹುಕಾಲ ರಾಜ್ಯಭಾರ ಮಾಡಿದರು. ನೀನು ಇಂದ್ರದೇವರಿಗೆ ಸಮಾನನು. ಅದು ನಿನಗೇ ಉಚಿತವಾದ ಸ್ಥಳವು. ಆದುದರಿಂದ ಬೇಗನೇ ಪಟ್ಟಾಭಿಷೇಕವನ್ನು ಮಾಡುತ್ತೇನೆ' ಎಂದು ಹೇಳಲು ಧರ್ಮರಾಜನು ಹಾಗೆಯೇ ಆಗಲಿ ಎಂದನು. ಧೃತರಾಷ್ಟ್ರನು ಪಟ್ಟಾಭಿಷೇಕವನ್ನು ಮಾಡಿದನು. ಮೊದಲು ವೇದವ್ಯಾಸದೇವರು ದ್ರೌಪದೀದೇವಿಯರಿಂದ ಸಹಿತನಾದ ಧರ್ಮರಾಜನಿಗೆ 'ನೀನು ಚಕ್ರವರ್ತಿಯಾಗು. ರಾಜಸೂಯ ಅಶ್ವಮೇಧ ಇತ್ಯಾದಿ ಯಾಗಗಳನ್ನು ಮಾಡು' ಇತ್ಯಾದಿ ರೀತಿಯಾಗಿ ಆಶೀರ್ವದಿಸಿ ಪಟ್ಟಾಭಿಷೇಕ ಮಾಡಿದರು. ಆಮೇಲೆ ಹಾಗೆಯೇ ಕೃಷ್ಣಪರಮಾತ್ಮನೂ ಪಟ್ಟಾಭಿಷೇಕವನ್ನು ಮಾಡಿದನು. ತರುವಾಯ ಅವರಿಬ್ಬರೂ ದ್ರೌಪದೀದೇವಿಯರಿಂದ ಸಹಿತರಾದ ಭೀಮಸೇನದೇವರಿಗೆ ಯೌವ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದರು. ಆಮೇಲೆ

ಮಾಡದೆ ಇದ್ದರೆ ಎರಡನ್ನು ಕಳೆದುಕೊಳ್ಳುವಿ' ಎಂದು ಹೇಳಿದನು. ಹಾಗೆಯೇ ಭೀಷ್ಮಾಚಾರ್ಯರು ದ್ರೋಣಾಚಾರ್ಯರೂ ಕೃಪಾಚಾರ್ಯರೂ ಹೇಳಿದರು.

ತರುವಾಯ ಧೃತರಾಷ್ಟ್ರನು ವಿದುರನೊಡನೆ 'ನೀನೇ ಹೋಗಿ ಅವರನ್ನು ಕರೆದುಕೊಂಡು ಬಾ' ಎಂದು ಹೇಳಿದನು. ವಿದುರನು ವೇಗವುಳ್ಳ ರಥದಲ್ಲಿ ಕೂತುಕೊಂಡು ಪಂಚಾಲನಗರಕ್ಕೆ ಹೋದನು. ಅಲ್ಲಿರುವವರಿಂದ ಸತ್ಕಾರವನ್ನು ಹೊಂದಿದನು. ಅದೇ ಸಮಯದಲ್ಲಿ ಅಲ್ಲಿಗೆ ಶ್ರೀಕೃಷ್ಣಪರಮಾತ್ಮನೂ ವೇದವ್ಯಾಸ ದೇವರೂ ಬಂದಿದ್ದರು. ಅವರು ವಿದುರನಿಂದ ಸಹಿತರಾಗಿ ಕುಂತೀದೇವಿಯಿಂದ ಕೂಡಿದ ದ್ರೌಪದೀದೇವಿಯರಿಂದ ಸಹಿತರಾದ ಪಾಂಡವರನ್ನು ಕರೆದುಕೊಂಡು ಹಸ್ತಿನಾವತಿಗೆ ಬಂದರು. ಅವರೆಲ್ಲರೂ ಬರಲು ಊರಿನ ಜನರಿಗೆಲ್ಲಾ ಬಹಳ ಸಂತೋಷವಾಯಿತು. ಭೀಷ್ಮಾಚಾರ್ಯರೇ ಮೊದಲಾದವರು ಸಂತೋಷವುಳ್ಳವ ರಾಗಿ ಧೃತರಾಷ್ಟ್ರನಿಂದ ಸಹಿತರಾಗಿ ಮಹಾಉತ್ಸವದಿಂದ ಸತ್ಕರಿಸಿ ಮನೆಗೆ ಕರೆದುಕೊಂಡು ಬಂದರು. ಗಾಂಧಾರಿಯು ದುರ್ಯೋಧನನ ಪತ್ನಿಯಿಂದ ಸಹಿತಳಾಗಿ ದ್ರೌಪದೀದೇವಿಯನ್ನು ಅತ್ಯಂತ ಪೂಜಿಸಿದಳು. ಸ್ವಲ್ಪ ದಿವಸ ಒಂದೇ ಮನೆಯಲ್ಲಿಯೇ ಎಲ್ಲರೂ ಒಟ್ಟಿಗೇ ವಾಸಮಾಡಿದರು. ತರುವಾಯ ಗಾಂಧಾರಿಯು ತನ್ನ ಮಕ್ಕಳು ದುರ್ಬುದ್ಧಿಯುಳ್ಳವರಾದ ಕಾರಣ ದ್ರೌಪದೀದೇವಿಯ ನಿಮಿತ್ತವಾಗಿ ಭೀಮಸೇನದೇವರಿಂದ ಭಯವುಳ್ಳವರಾಗಿ ಕುಂತೀದೇವಿಯೊಡನೆ 'ಕುಂತಿ! ನೀನು ಸೊಸೆಯನ್ನು ಕರೆದುಕೊಂಡು ನಿನ್ನ ಮನೆಗೇ ಹೋಗು. ನನ್ನ ಮಕ್ಕಳ ದುರ್ಬುದ್ಧಿಯಿಂದ ನಿನ್ನ ಭೀಮಸೇನನಿಂದ ಭಯಪಡುತ್ತೇನೆ. ಏಕೆಂದರೆ ನಿನ್ನ ಸೊಸೆಯು ಅತ್ಯಂತ ರೂಪವತಿಯಾಗಿರುವಳು' ಎಂದು ಹೇಳಿದಳು. ಕುಂತಿಯು ಹಾಗೆಯೇ ಆಗಲಿ ಎಂದು ಹೇಳಿ ತನ್ನ ಮಕ್ಕಳನ್ನೂ ಸೊಸೆಯನ್ನು ಕರೆದುಕೊಂಡು ಪಾಂಡುರಾಜನು ವಾಸಮಾಡುತ್ತಿದ್ದ ಮನೆಗೆ ಹೋದಳು. ಅದೇ ಮನೆಯಲ್ಲಿ ಸಂತೋಷದಿಂದ ಐದು ವರ್ಷಕಾಲ ವಾಸಮಾಡಿದರು. ಪಾಂಡವರು ದ್ರೌಪದೀ ದೇವಿಯರಿಂದ ಕೂಡಿಕೊಂಡು ಸಂತೋಷಪಡುತ್ತಿದ್ದರು. ಪಾಂಡವರ ಮೇಲಿನ ಸ್ನೇಹದಿಂದ ಕೃಷ್ಣಪರಮಾತ್ಮನೂ ವೇದವ್ಯಾಸದೇವರೂ ಅಲ್ಲಿ ವಾಸಮಾಡುತ್ತಿದ್ದರು. ಅವರಿಂದ ಕೂಡಿಕೊಂಡು ಅವರು ಹೇಳುವ ಅನೇಕ ಉತ್ತಮ ಕಥೆಗಳನ್ನು ಕೇಳುತ್ತಾ ಪಾಂಡವರು ಸಂತೋಷದಿಂದ ಇದ್ದರು.

ಒಂದು ಸಮಯದಲ್ಲಿ ಕಳಿಂಗದೇಶದಲ್ಲಿ ರಾಜಪುತ್ರಿಗೆ ಸ್ವಯಂವರವು[1]

1. ಮ.ತಾ.ನಿ. ಅ-19

ನಡೆಯಿತು. ಅಲ್ಲಿಗೆ ಕೌರವರೂ ಪಾಂಡವರೂ ಹೋಗಿದ್ದರು. ಕಳಿಂಗದೇಶಕ್ಕೆ ಸುವಜ್ರನೆಂಬವನು ರಾಜನಾಗಿದ್ದನು. ಅವನಿಗ ರುದ್ರದೇವರ ವರದಿಂದ ಒಬ್ಬರಿಂದಲೂ ಪರಾಜಯವಿರಲಿಲ್ಲ. ಸ್ವಯಂವರಮಂಟಪದಲ್ಲಿ ದುರ್ಯೋಧನನು ಬಲಾತ್ಕಾರದಿಂದ ಕನ್ಯೆಯನ್ನು ಹಿಡಿದನು. ಆಗ ಸುವಜ್ರನು ಜರಾಸಂಧನಿಂದ ಸಹಿತನಾಗಿ ದುರ್ಯೋಧನನೊಡನೆ ಯುದ್ಧಮಾಡಿ ರುದ್ರದೇವರ ವರಬಲದಿಂದ ಬೇಗನೇ ಯುದ್ಧಮಾಡಿ ಕಟ್ಟಿಹಾಕಿದನು. ಕರ್ಣನು ಬರುವಾಗ ಪಾಂಡವರ ಮೇಲೆ ಸರ್ಧೆಯಿಂದ ಬಂದಿದ್ದನಾದ ಕಾರಣ ಪರಶುರಾಮದೇವರ ಮಾತಿನಂತೆ ಸೋತು ಓಡಿಹೋದನು. (ಕರ್ಣನಿಗೆ ಯಾರೊಡನೆ ಸ್ಪರ್ಧೆಯಿಲ್ಲದೆ ಯುದ್ಧ ಮಾಡುವಿಯೋ ಅವನನ್ನು ಜಯಿಸುವಿ. ಸ್ಪರ್ಧೆಯಿಂದ ಯುದ್ಧಕ್ಕೆ ಹೋದಿಯಾದರೆ ಸೋತು ಹೋಗುವಿ ಎಂದು ಪರಶುರಾಮದೇವರು ಹೇಳಿದ್ದರು.) ಸುವಜ್ರನು ದುರ್ಯೋಧನನನ್ನು ಅವನ ಎಲ್ಲಾ ತಮ್ಮಂದಿರನ್ನು ಕಟ್ಟಿಹಾಕಿದನು. ಭೀಷ್ಮ ಧೃತರಾಷ್ಟ್ರ ವಿದುರ ಧರ್ಮರಾಜರ ಮಾತಿನಿಂದ ಪ್ರೇರಿತರಾಗಿ ಭೀಮಸೇನದೇವರು ಸುವಜ್ರನನ್ನು ಸಂಹರಿಸಿ ದುರ್ಯೋಧನಾದಿಗಳನ್ನು ಬಿಡಿಸಿದರು. ಕರ್ಣನು ಸಹಿತರಾದ ದುರ್ಯೋಧನಾದಿಗಳು ಸತ್ತವರಂತೆ ಆಗಿ ಊರಿಗೆ ಬಂದು ಸೇರಿದರು.

ಧೃತರಾಷ್ಟ್ರನು ಕೌರವರಿಗೂ ಪಾಂಡವರಿಗೂ ಆಗುವ ವಿರೋಧವನ್ನು ನೋಡಿ ಧರ್ಮರಾಜನೊಡನೆ 'ಧರ್ಮರಾಜ! ನೀನು ಬೇಗನೆ ಇಂದ್ರಪ್ರಸ್ಥಕ್ಕೆ ಹೋಗು. ತಮ್ಮಂದಿರಿಂದ ಕೂಡಿಕೊಂಡು ಅಲ್ಲಿ ಅರ್ಧರಾಜ್ಯವನ್ನು ಅನುಭವಿಸು. ಕೋಶದ ಅರ್ಧವನ್ನು ತೆಗೆದುಕೊಂಡು ಹೋಗು. ಅಲ್ಲಿ ಇಂದ್ರದೇವರು ಬ್ರಹ್ಮಾದಿದೇವತೆ ಗಳಿಂದ ಪಟ್ಟಾಭಿಷಿಕ್ತರಾಗಿ ಅಲ್ಲಿಯೇ ಬಹುಕಾಲ ರಾಜ್ಯಭಾರ ಮಾಡಿದರು. ನೀನು ಇಂದ್ರದೇವರಿಗೆ ಸಮಾನನು. ಅದು ನಿನಗೇ ಉಚಿತವಾದ ಸ್ಥಳವು. ಆದುದರಿಂದ ಬೇಗನೇ ಪಟ್ಟಾಭಿಷೇಕವನ್ನು ಮಾಡುತ್ತೇನೆ' ಎಂದು ಹೇಳಲು ಧರ್ಮರಾಜನು ಹಾಗೆಯೇ ಆಗಲಿ ಎಂದನು. ಧೃತರಾಷ್ಟ್ರನು ಪಟ್ಟಾಭಿಷೇಕವನ್ನು ಮಾಡಿದನು. ಮೊದಲು ವೇದವ್ಯಾಸದೇವರು ದ್ರೌಪದೀದೇವಿಯರಿಂದ ಸಹಿತನಾದ ಧರ್ಮರಾಜನಿಗೆ 'ನೀನು ಚಕ್ರವರ್ತಿಯಾಗು. ರಾಜಸೂಯ ಅಶ್ವಮೇಧ ಇತ್ಯಾದಿ ಯಾಗಗಳನ್ನು ಮಾಡು' ಇತ್ಯಾದಿ ರೀತಿಯಾಗಿ ಆಶೀರ್ವದಿಸಿ ಪಟ್ಟಾಭಿಷೇಕ ಮಾಡಿದರು. ಆಮೇಲೆ ಹಾಗೆಯೇ ಕೃಷ್ಣಪರಮಾತ್ಮನೂ ಪಟ್ಟಾಭಿಷೇಕವನ್ನು ಮಾಡಿದನು. ತರುವಾಯ ಅವರಿಬ್ಬರೂ ದ್ರೌಪದೀದೇವಿಯರಿಂದ ಸಹಿತರಾದ ಭೀಮಸೇನದೇವರಿಗೆ ಯೌವ ರಾಜ್ಯದಲ್ಲಿ ಅಭಿಷೇಕವನ್ನು ಮಾಡಿದರು. ಆಮೇಲೆ

ಇತರರೂ ಬ್ರಾಹ್ಮಣಶ್ರೇಷ್ಠರೂ ಧರ್ಮರಾಜನಿಗೆ ಪಟ್ಟಾಭಿಷೇಕಮಾಡಿ ಭೀಮಸೇನ ದೇವರಿಗೆ ಯೌವರಾಜ್ಯದಲ್ಲಿ ಅಭಿಷೇಕ ಮಾಡಿದರು. ಆ ಮಹೋತ್ಸವವು ಏಳು ದಿನಗಳವರೆಗೆ ನಡೆಯಿತು.

ತರುವಾಯ ಪಾಂಡವರು ಶ್ರೀವೇದವ್ಯಾಸರಿಂದಲೂ ಕೃಷ್ಣಪರಮಾತ್ಮನಿಂದಲೂ ಕುಂತೀದೇವಿಯರಿಂದಲೂ ದ್ರೌಪದೀದೇವಿಯರಿಂದಲೂ ಸಹಿತರಾಗಿ ಅರ್ಧ ಕೋಶದಿಂದಲೂ ಸಹಿತರಾಗಿ ಇಂದ್ರಪ್ರಸ್ಥಕ್ಕೆ ಹೋಗುತ್ತಿರಲು ಎಲ್ಲಾ ಊರಿನ ಜನರೂ ಅವರ ಹಿಂದೆಯೇ ಹೋದರು. "ಹಾ! ಕಷ್ಟ! ಪಾಪಿಯಾದ ಈ ದುರ್ಯೋಧನನು ಗುಣವಂತರಾದ ಪಾಂಡವರನ್ನು ದೂರಮಾಡಿದನು. ಭೀಮಸೇನದೇವರ ಪ್ರತಾಪದಿಂದಲೇ ಕಳಿಂಗರಾಜನ ಬಂಧನದಿಂದ ಬಿಡುಗಡೆ ಯನ್ನು ಹೊಂದಿದನು. ಕಳಿಂಗರಾಜನ ಮಗಳನ್ನು ಮದುವೆಯಾದನು. ಆದರೂ ಬಲಿಷ್ಠರಾದ ಪಾಂಡವರನ್ನೇ ದ್ವೇಷಿಸುತ್ತಾನೆ. ನಾವು ಗುಣವಂತರಾದ ಪಾಂಡವ ರೊಡನೆಯೇ ಹೊರಟುಹೋಗೋಣ. ಅವನು 'ಪಾಂಡವರ ಒಟ್ಟಿಗೆ ಒಬ್ಬರೂ ಹೋಗಬಾರದು. ಹೋದರೆ ಅವರ ಸೊತ್ತನ್ನೆಲ್ಲಾ ಅಪಹರಿಸುತ್ತೇನೆ' ಎಂದು ಭೇರೀಶಬ್ದ ಸಹಿತವಾಗಿ ಹೇಳಿದರೂ ನಾವು ಹೋಗುವ. ನಮ್ಮ ಸೊತ್ತನ್ನು ಅವನು ಅಪಹರಿಸಲಿ. ಸಜ್ಜನರ ಸಹವಾಸವು ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖಕ್ಕೆ ಕಾರಣವು" ಇತ್ಯಾದಿರೀತಿಯಾಗಿ ಹೇಳುತ್ತಾ ಊರಜನರೆಲ್ಲರೂ ಪಾಂಡವರ ಹಿಂದೆಯೇ ಹೊರಟರು. ಆಗ ಧರ್ಮರಾಜನು 'ನಿಮಗೆಲ್ಲಾ ನನ್ನಲ್ಲಿ ಪ್ರೀತಿಯಿರುವು ದಾದರೆ ಇಲ್ಲಿಯೇ ನಮ್ಮ ದೊಡ್ಡ ತಂದೆಯ ಆಜ್ಞೆಯಂತೆ ಇರಬೇಕು. ನೀವೆಲ್ಲರೂ ನನ್ನೊಡನೆ ಬಂದುಬಿಟ್ಟರೆ ನಾನು ದೊಡ್ಡ ತಂದೆಯನ್ನು ಅತಿಕ್ರಮಿಸಿದೆನೆಂದು ಅಪಕೀರ್ತಿಯು ಬರುವುದು. ಆದುದರಿಂದ ನನ್ನ ಕೀರ್ತಿಯು ಉಳಿಯುವುದಕ್ಕಾಗಿ ಇಲ್ಲಿಯೇ ಇದ್ದುಕೊಂಡು ಧೃತರಾಷ್ಟ್ರರಾಜನನ್ನು ಅನುಸರಿಸಿಕೊಂಡು ಇರಬೇಕು' ಎಂದು ಹೇಳಿದನು. ಹೀಗೆ ಧರ್ಮರಾಜನು ಹೇಳಲು ಧರ್ಮರಾಜನು ಜನರೆಲ್ಲರೂ ಬಹು ಕಷ್ಟದಿಂದ ಅಲ್ಲಿಯೇ ನಿಂತರು ಆದರೆ ಮನಸ್ಸಿನಿಂದ ಮಾತ್ರ ಪಾಂಡವರನ್ನೇ ಅನುಸರಿಸಿ ಹೋದರು. ಕೃಷ್ಣಪರಮಾತ್ಮನೂ ವೇದವ್ಯಾಸದೇವರೂ ಇಂದ್ರಪ್ರಸ್ಥಕ್ಕೆ ಹೋಗಿ ವಿಶ್ವಕರ್ಮನನ್ನು ಸ್ಮರಿಸಿದನು. ಅವನಿಂದ ಇಂದ್ರದೇವರ ಪಟ್ಟಣದಂತೆ ಪಟ್ಟಣವನ್ನು ಕಟ್ಟಿಸಿದರು. ಬೇರೆಬೇರೆ ದೇಶಗಳಿಂದ ಜನರು ಬಂದು ಅಲ್ಲಿ ವಾಸಮಾಡಿದರು.

ಇಲ್ಲಿ ಧೃತರಾಷ್ಟ್ರನು ತಮ್ಮನ ಮಕ್ಕಳಾದ ಪಾಂಡವರನ್ನು ದೂರಕ್ಕೆ ಕಳುಹಿಸಿ

ಹಸ್ತಿನಾವತಿಯಲ್ಲಿ ದುರ್ಯೋಧನನಿಗೆ ಪಟ್ಟಾಭಿಷೇಕವನ್ನು ಮಾಡಿದನು ದುಃಶಾಸನನಿಗೆ ಯೌವರಾಜ್ಯದಲ್ಲಿ ಪಟ್ಟಾಭಿಷೇಕ ಮಾಡಿದನು. ತಾನು ಕೃತಾರ್ಥನಾದೆನೆಂದು ಸಂತೋಷದಿಂದ ಇದ್ದನು.

ಪಾಂಡವರೂ ಕೃಷ್ಣ ವೇದವ್ಯಾಸರೂ ಹೇಳುವ ಉತ್ತಮ ತತ್ವಗಳನ್ನು ಕೇಳುತ್ತಾ ಪೃಥಿವಿಯನ್ನು ಧರ್ಮದಿಂದ ಪರಿಪಾಲಿಸುತ್ತಾ ಪರಮಾತ್ಮನ ಪಾದಗಳನ್ನು ಆಶ್ರಯಿಸಿದವರಾಗಿ ಸಂತೋಷದಿಂದ ಇದ್ದರು.



# ಸಭಾಪರ್ವ

## ಭೀಮಸೇನದೇವರ ರಾಜ್ಯಭಾರ [1]

ಪಾಂಡವರ ರಾಜ್ಯದಲ್ಲಿ ಧರ್ಮರಾಜನು ಯಜ್ಞಗಳನ್ನು ಮಾಡುವುದು, ದಾನಮಾಡುವುದು, ರಾಜರಿಂದ ನಮಸ್ಕಾರ ಮಾಡಿಸಿಕೊಳ್ಳುವುದು, ಬಂದವರ ಹತ್ತಿರ ಕುಶಲ ಪ್ರಶ್ನೆ ಮಾಡುವುದು, ಬಂದ ಋಷಿಗಳಿಗೆ ಪೂಜಾ ಮಾಡುವುದು ಇತ್ಯಾದಿ ಕಾರ್ಯಗಳಲ್ಲಿ ಆಸಕ್ತನಾಗಿದ್ದನು. ಭೀಮಸೇನದೇವರು ಧರ್ಮವನ್ನು ಉಪದೇಶಿಸುವುದು, ತತ್ತ್ವೋಪದೇಶವನ್ನು ಮಾಡುವುದು, ರಾಜ್ಯರಕ್ಷಣೆ ಮಾಡುವುದು ಇತ್ಯಾದಿ ಕಾರ್ಯಗಳಲ್ಲಿ ಆಸಕ್ತರಾಗಿದ್ದರು. ಅರ್ಜುನನು ಹೋಗಿ ಪರದೇಶದ ರಾಜರನ್ನೆಲ್ಲಾ ಜಯಿಸಿಕೊಂಡು ಬರುತ್ತಿದ್ದನು. ಅವನಿಂದ ಸಾಧ್ಯವಾಗದೆ ಇರುವ ಜರಾಸಂಧನ ಕೀಚಕ ಮೊದಲಾದವರನ್ನು ಭೀಮಸೇನದೇವರೇ ಹೋಗಿ ಜಯಿಸುತ್ತಿದ್ದರು. ಅವರೆಲ್ಲರೂ ಭೀಮಸೇನದೇವರ ಬಲದಿಂದ ಯಾವಾಗಲೂ ಭಯಪಡುತ್ತಿದ್ದರು. ಭೀಮಸೇನದೇವರು ಶತ್ರುಗಳನ್ನೆಲ್ಲಾ ಮರ್ದನ ಮಾಡಿರಲು ಯುದ್ಧದಲ್ಲಿ ಸೋತು ಹೋದವರು ಯುದ್ಧದ ಯೋಚನೆಯನ್ನೇ ಬಿಟ್ಟರು.

ಭೀಮಸೇನದೇವರ ಆಜ್ಞೆಯಿಂದ ಲೋಕವೆಲ್ಲವೂ ಪರಮಾತ್ಮನಭಕ್ತಿಯಲ್ಲಿಯೇ ಆಸಕ್ತವಾಗಿತ್ತು. ದ್ರೌಪದೀ ದೇವಿಯರು ಅಂತಃಪುರದಲ್ಲಿರುವ ಜನರಿಗೆಲ್ಲಾ ಧರ್ಮವನ್ನು ಉಪದೇಶಿಸುತ್ತಿದ್ದರು. ಪರಮಾತ್ಮನ ಸ್ವರೂಪವನ್ನು ಹೇಳುತ್ತಿದ್ದರು. ಮತ್ತು ಸ್ತ್ರೀಧರ್ಮವನ್ನು ಉಪದೇಶಿಸುವುದೂ ಭೃತ್ಯರನ್ನು ನೋಡಿಕೊಳ್ಳುವುದೂ

1. ಮ.ತಾ.ನಿ. ಅ-20, 21

ಕೋಶದ ರಕ್ಷೆ ವ್ಯಯ ಇತ್ಯಾದಿಗಳಲ್ಲಿ ಗುಣದೋಷವಿಚಾರ ಮಾಡುವುದರಲ್ಲಿಯೂ ಆಸಕ್ತರಾಗಿದ್ದರು. ನಕುಲನು ಭೃತ್ಯರಿಗೆಲ್ಲಾ ಸಂಬಳ ಕೊಡುತ್ತಿದ್ದನು. ಸಹದೇವನು ಯಾರ ಹತ್ತಿರ ರಾಜಿ ಮಾಡಬೇಕು. ಯಾರ ಹತ್ತಿರ ಯುದ್ಧಮಾಡಬೇಕು ಇತ್ಯಾದಿ ವಿಚಾರ ಮಾಡುತ್ತಾ ಯಾವಾಗಲೂ ಖಡ್ಗಧಾರಿಯಾಗಿ ಧರ್ಮರಾಜನ ಹಿಂದೆಯೇ ಇರುತ್ತಿದ್ದನು. ಧೃಷ್ಟದ್ಯುಮ್ನನು ಸೇನಾಧಿಪತಿಯಾಗಿ ಸ್ನೇಹದಿಂದ ಯಾವಾಗಲೂ ಇಂದ್ರಪ್ರಸ್ಥದಲ್ಲಿಯೇ ಇರುತ್ತಿದ್ದನು. ವಿಶೇಷವಾಗಿ ಭೀಮಸೇನದೇವರಲ್ಲಿ ಪ್ರೇಮ ವುಳ್ಳವನಾಗಿದ್ದನು.

ಪಾಂಡವರ ರಾಜ್ಯವು ಸರ್ವಅಭೀಷ್ಟದಿಂದ ಪೂರ್ಣವಾಗಿತ್ತು. ಭೀಮಸೇನ ದೇವರು ರಾಜ್ಯಭಾರ ಮಾಡುತ್ತಿರಲು ಒಬ್ಬ ಅವೈಷ್ಣವನೂ ಇರಲಿಲ್ಲ. ದರಿದ್ರನೂ ಇರಲಿಲ್ಲ. ಯಾರಿಗೂ ಧರ್ಮಕ್ಕೆ ಹಾನಿಯು ಬಂದಿಲ್ಲ. ಒಬ್ಬರೂ ರೋಗ ಬಂದು ಅಕಾಲದಲ್ಲಿ ಸತ್ತವರಿಲ್ಲ. ಲೌಕಿಕ ಕಾರ್ಯಗಳಿಗಾಗಿ ಯಾರೊಬ್ಬರೂ ಧರ್ಮರಾಜನ ಬಳಿಗೆ ಹೋಗುತ್ತಿದ್ದಿಲ್ಲ. ಎಲ್ಲಾ ಕಾರ್ಯಗಳೂ ಭೀಮಸೇನ ದೇವರಿಂದಲೇ ಆಗುತ್ತಿದ್ದವು. ರಾಜನನ್ನು ನೋಡುವುದಕ್ಕಾಗಿಯೋ ದಾನವನ್ನು ತೆಗೆದುಕೊಳ್ಳಲಿಕ್ಕೋ ಯಜ್ಞವನ್ನು ಮಾಡಿಸಲಿಕ್ಕೋ ಮಾತ್ರ ಹೋಗುತ್ತಿದ್ದರು. ಗಂಧರ್ವರು ವಿದ್ಯಾಧರರು ಚಾರಣರೂ ಇಂದ್ರದೇವರನ್ನು ಸೇವಿಸುವಂತೆ ಪಾಂಡವರನ್ನು ಸೇವಿಸುತ್ತಿದ್ದರು. ಮುನಿಗಳೂ ದೇವತೆಗಳೂ ಕೂಡ ಅಲ್ಲಿರುವ ಕೃಷ್ಣಪರಮಾತ್ಮನನ್ನು ಪೂಜಿಸುವುದ ಕ್ಕಾಗಿ ಬರುತ್ತಿದ್ದರು. **ಪಾಂಡವರ ರಾಜ್ಯದಲ್ಲಿ ಕೃತಯುಗದ ಧರ್ಮಗಳೇ ನಡಿಯುತ್ತಿದ್ದವು. ಕೃತಯುಗಕ್ಕಿಂತಲೂ ಹೆಚ್ಚಾಗಿಯೇ ನಡಿಯುತ್ತಾ ಇದ್ದವು.** ವಸ್ತ್ರ ಬಂಗಾರ ಬೆಳ್ಳಿ ಎಲ್ಲವೂ ಬೇಕಾದಷ್ಟು ಇರುತ್ತಿತ್ತು.

ಭಾರತೀದೇವಿಯರು ಕಾಶೀರಾಜನ ಮಗಳಾಗಿ ಅವತರಿಸಿದ್ದರು. ಅವರ ಹೆಸರು ಕಾಳಿಯೆಂದು. ಅವರಲ್ಲಿ ದ್ರೌಪದೀದೇವಿಯರಲ್ಲಿ ಇದ್ದಂತೆ ಇತರ ದೇವಿಯರು ಇರಲಿಲ್ಲ. ಕಾಶೀರಾಜನು ಕಾಳೀದೇವಿಗೆ ಸ್ವಯಂವರವೆಂದು ರಾಜರನ್ನೆಲ್ಲಾ ತರಿಸಿದನು. ಎಲ್ಲಾ ರಾಜರೂ ಸಂತೋಷದಿಂದ ಬಂದಿದ್ದರು. ಅವರ ಮಧ್ಯದಲ್ಲಿ ಭೀಮಸೇನದೇವರ ಕೊರಳಿನಲ್ಲಿ ಕಾಳೀದೇವಿಯು ಮಾಲೆಯನ್ನು ಹಾಕಿದರು. ಆಗ ಜರಾಸಂಧಾದಿಗಳು ಶ್ರೀಪರಮಾತ್ಮನ ಪಕ್ಷದವರನ್ನು ನಿಂದಿಸುತ್ತಾ ರುದ್ರದೇವರನ್ನು ಸ್ತೋತ್ರಮಾಡುತ್ತಾ ಕೋಪಿಸಿಕೊಂಡು ಯುದ್ಧಕ್ಕೆ ಬಂದರು. ಭೀಮಸೇನದೇವರು ಮೊದಲು ಮಾತಿನಿಂದ ಯುದ್ಧವನ್ನು ಮಾಡಿದರು. ಮೊದಲು ವೇದಗಳಲ್ಲಿ ಯಾವ ದೋಷವಿಲ್ಲ. ಅವು ಉತ್ತಮ ಪ್ರಮಾಣ ಎಂದು ಸಾಧನೆ ಮಾಡಿ

ವೇದವಾಕ್ಯಗಳಿಂದಲೂ ಉತ್ತಮಯುಕ್ತಿಗಳಿಂದಲೂ ಮೊದಲು ಜರಾಸಂಧಾದಿ ಗಳನ್ನು ಜಯಿಸಿದರು. ಶೈವಶಾಸ್ತ್ರಗಳೂ ಕೆಲವು ಸ್ಥಳಗಳಲ್ಲಿ ವೇದಗಳಿಗೆ ಆಧಿಕ್ಯವನ್ನು ಹೇಳುವುವು. ವೇದಗಳನ್ನು ಬಿಟ್ಟಿರುವವರನ್ನು ನಿಂದಿಸಿರುವುವು. ಅದೇ ರೀತಿಯಾಗಿ ಶಾಕ್ತೇಯ ಸ್ಕಾಂದ ಸೌರ ಇತ್ಯಾದಿ ಶಾಸ್ತ್ರಗಳನ್ನೆಲ್ಲಾ ನಿಂದಿಸುವುವು. ವೇದಗಳು ವಿಷ್ಣುವನ್ನೇ ಹೇಳುವುವು ಎಂದು ಪ್ರತಿಪಾದನೆ ಮಾಡುತ್ತವೆ. ಆ ಶಾಸ್ತ್ರಗಳೇ ಕೆಲವು ಸ್ಥಳಗಳಲ್ಲಿ ರುದ್ರಾದಿಗಳಿಂದಲೂ ವಿಷ್ಣುವಿಗೇ ಉತ್ತಮತ್ವವನ್ನು ಹೇಳುವುವು. ವೇದಗಳಲ್ಲಿ ಎಲ್ಲಿಯೂ ವಿಷ್ಣುವಿನಿಗಿಂತ ಒಬ್ಬನು ಉತ್ತಮನಿರುವನೆಂದು ಹೇಳಲೇ ಇಲ್ಲ. ಬೌದ್ಧರೇ ಮೊದಲಾದವರೂ ವಿಷ್ಣುವನ್ನು ಸರ್ವರಿಂದ ಉತ್ತಮನೆಂದು ಹೇಳುತ್ತಾರೆ. ಚಾರ್ವಾಕರೂ ಕೆಲವು ಸಮಯದಲ್ಲಿ ವಿಷ್ಣುವೇ ಎಲ್ಲರಿಂದಲೂ ಉತ್ತಮನು. ಬೃಹಸ್ಪತ್ಯಾಚಾರ್ಯರಿಗೂ ಗುರುವು ಎಂದು ಹೇಳುವರು. ಆದುದರಿಂದ ಸರ್ವಶಾಸ್ತ್ರಗಳಲ್ಲಿಯೂ ವಿಷ್ಣುವೇ ಪ್ರಸಿದ್ಧನಾಗಿರುವನು. ಆದುದರಿಂದ ಅವನೇ ಸರ್ವೋತ್ತಮನು. ಅವನೇ ಮೋಕ್ಷವನ್ನು ಕೊಡುವವನು. ಶೈವಾದ್ಯಾಗಮ ಗಳಿಗೆ ಪರಸ್ಪರ ವಿರೋಧವಿರುವುದು. ಪ್ರತ್ಯಕ್ಷದಿಂದಲೂ ವಿರೋಧವಿರುವುದು.

ವಿಷ್ಣುವಿನ ಪಾದವನ್ನು ಆಶ್ರಯಿಸಿರುವ ನನ್ನ ಬಾಹುಗಳ ಬಲವನ್ನು ನೋಡಿರಿ. ಪೂರ್ವದಲ್ಲಿ ನಾನು ವಿಷ್ಣುಪೂಜೆಯನ್ನು ಮಾಡುತ್ತಿರಲು ಗಂಗೆಯು ನನ್ನ ಪೂಜೆಗೆ ವಿಘ್ನ ಮಾಡಲಿಕ್ಕೆ ಎಂದು ಬಂದಳು. ಆಗ ನಾನು ಎಡಕೈಯಿಂದ ದೂಡಲು ಅವಳು ಬಹುಯೋಜನ ಹಿಂದೆ ಹೋದಳು. ಆಮೇಲೆ ಕುರುದೇಶದಲ್ಲಿ ರುದ್ರದೇವರು ಬಂದರು. ರುದ್ರದೇವರು ನನ್ನ ಬಲವನ್ನು ಪರೀಕ್ಷಿಸುವುದಕ್ಕಾಗಿ ತಾನು ಹುಲಿಯ ರೂಪವನ್ನು ಧರಿಸಿಕೊಂಡು ಕಪಿಲಾ ಗೋವಿನ ರೂಪವನ್ನು ಧರಿಸಿರುವ ಪಾರ್ವತೀದೇವಿಯನ್ನು ಕೊಲ್ಲುವುದಕ್ಕೆ ಬರುವಂತೆ ಬಂದರು. ಅವರು ನನ್ನ ಹತ್ತಿರ ಯುದ್ಧಮಾಡಿ ನನ್ನ ಗದಾಪ್ರಹಾರದಿಂದ ಬಿದ್ದು ಸೋತು ಹೋಗಿ ಮೂರ್ಛಿತ ರಾದರು. ಒಂದು ಲಿಂಗದೊಳಗೆ ಪ್ರವೇಶಿಸಿದರು. ಆಲಿಂಗವು ವ್ಯಾಘ್ರೇಶ್ವರ ಎಂದು ಪ್ರಸಿದ್ಧಿಯನ್ನು ಹೊಂದಿತು. ಹಾಗೆಯೇ ಗೋಮತೀ ನದಿಯ ತೀರದಲ್ಲಿ ಹಿಮವತ್ಪರ್ವತದಲ್ಲಿ ರುದ್ರದೇವರು ಸೋತುಹೋದರು. ಅಲ್ಲಿಯೂ ಶಾರ್ದೂಲಲಿಂಗವೆಂಬ ಲಿಂಗದಲ್ಲಿ ಪ್ರವೇಶಿಸಿದರು. ಅದೇ ರೀತಿಯಾಗಿ ನಾನು ಕೇದಾರಕ್ಷೇತ್ರದಲ್ಲಿ ಬ್ರಾಹ್ಮಣರೂಪದಿಂದ ಬಂದ ರುದ್ರದೇವರನ್ನು ಜಯಿಸಿದೆನು. ಅಲ್ಲಿಯೂ ಭಯದಿಂದ ಒಂದು ಲಿಂಗವನ್ನೇ ಪ್ರವೇಶಿಸಿದರು. ಆಮೇಲೆ ರುದ್ರದೇವರು ನಾಚಿಕೆಯುಳ್ಳವರಾಗಿ ವೇದಜ್ಞಾನಿಗಳು ಅಲ್ಲಿಗೆ ಬಾರದಂತೆ

ಶಾಪವನ್ನು ಕೊಟ್ಟರು.

ಈರೀತಿಯಾಗಿ ವಿಷ್ಣುವಿನ ಪಾದವನ್ನು ಆಶ್ರಯಿಸಿರುವ ನನ್ನ ಬಲವೇ ಅಧಿಕವಾಗಿರುವಾಗ ವಿಷ್ಣುವಿನ ಬಲವು ಅಧಿಕವಾಗಿದೆಯೆಂದು ಏನು ಹೇಳಬೇಕು? ಈರೀತಿಯಾಗಿ ವಿಷ್ಣುವಿನ ಬಲವು ಪ್ರತ್ಯಕ್ಷಸಿದ್ಧದಂತೆ ಇರುವಾಗ ಇದಕ್ಕೆ ಯಾರ ಮನಸ್ಸು ವಿರುದ್ಧವಾಗಿರುವುದೋ ಅವರು ಉತ್ತರವನ್ನು ಹೇಳಲಿ. ಹೆಚ್ಚಾದ ಕೋಪವಿದ್ದರೆ ಯುದ್ಧಕ್ಕೆ ಬರಲಿ' ಎಂದು ಹೇಳಲು ಜರಾಸಂಧಾದಿಗಳೆಲ್ಲರೂ ಆಯುಧಧಾರಿಗಳಾಗಿ ಕೋಪದಿಂದ ಯುದ್ಧಕ್ಕೆ ಬಂದರು. ಭೀಮಸೇನದೇವರು ಬಾಣಸಮೂಹಗಳಿಂದ ಆ ರಾಜರನ್ನೆಲ್ಲರನ್ನು ಓಡಿಸಿ ಜರಾಸಂಧನನ್ನು ಗದೆಯಿಂದ ಬಡೆದು ಎರಡು ಕೈಯಿಂದ ಹಿಡಿದು ಅವನನ್ನು ಗಂಗೆಯಲ್ಲಿ ಹಾಕಿದರು. ಅವನು ಲಜ್ಜೆಯುಳ್ಳವನಾಗಿ ರಾಜರಿಂದ ಕೂಡಿಕೊಂಡು ಮಗಧದೇಶಕ್ಕೇ ಹೋದನು. ಭೀಮಸೇನದೇವರು ಕಾಶೀರಾಜನಿಂದ ಸತ್ಕೃತರಾಗಿ ರಥವನ್ನು ಏರಿ ಕಾಳೀದೇವಿಯರಿಂದ ಸಹಿತರಾಗಿ ಇಂದ್ರಪ್ರಸ್ಥಕ್ಕೆ ಬಂದರು. ಮೂರುಲೋಕದಲ್ಲಿಯೂ ಅಧಿಕಗಳಾದ ಸದ್ಗುಣಗಳಿಂದ ತುಂಬಿದ ಆ ಕಾಳೀದೇವಿಯಲ್ಲಿ ಶರ್ವತ್ರಾತ ಎಂಬ ಮಗನನ್ನು ಪಡೆದರು. ಶರ್ವತ್ರಾತನು ಸಮಾನವಾಯುವಿನ ಅವತಾರವು.

ಭೀಮಸೇನದೇವರಿಗೆ ದ್ರೌಪದೀದೇವಿಯರಲ್ಲಿ ಶ್ರುತಸೋಮ ಎಂಬ ಮಗನು ಹುಟ್ಟಿದನು. ಅವನು ವಿಶ್ವೇದೇವತೆಗಳಲ್ಲಿ ಒಬ್ಬನು. ಅಭಿತಾಮ್ರ ಎಂಬ ಗಂಧರ್ವನ ಆವೇಶವುಳ್ಳವನು.

ಮತ್ತು ಭೀಮಸೇನದೇವರಿಗೆ ರೋಹಿಣೀದೇವಿಯ ಮಗಳಾದ ಬಲರಾಮದೇವರ ಸಹೋದರಿಯಾದಿ ದೇವಿಯೆಂದು ಹೆಸರುಳ್ಳ ಪತ್ನಿಯಿದ್ದಳು. ಅವಳಲ್ಲಿ ಸರ್ವೋತ್ತುಂಗ ಎಂಬ ಮಗನಿದ್ದನು. ಆದೇವಿಯು ಪೂರ್ವದಲ್ಲಿ ರಾಕಾ ಎಂದು ಹೆಸರುಳ್ಳ ಪೂರ್ಣಿಮೆಯ ಅಭಿಮಾನಿದೇವತೆಯು ಸರ್ವೋತ್ತುಂಗನು ಮುಖ್ಯಪ್ರಾಣದೇವರ ಮಗನಾದ ಅಹಂಕಾರಿಕ ಪ್ರಾಣನ ಅವತಾರವು.

ಮತ್ತು ದಿಕ್ಕುಗಳ ಅಭಿಮಾನಿಗಳಾದ ದೇವತೆಗಳೂ ಜಲಕ್ಕೆ ಅಭಿಮಾನಿಗಳಾದ ದೇವತಾಸ್ತ್ರೀಯರೂ ಒಟ್ಟಿಗೆ ಇಪ್ಪತ್ತು ಜನದೇವತಾಸ್ತ್ರೀಯರು ವಸುದೇವಗೆ ಹೆಣ್ಣು ಮಕ್ಕಳಾಗಿ ಹುಟ್ಟಿದರು. ಅವರೆಲ್ಲರೂ ಭೀಮಸೇನದೇವರ ಪತ್ನಿಯರಾಗಿದ್ದರು.



# ರಾಜಸೂಯಯಾಗ ಜರಾಸಂಧವಧ [1]

ಖಾಂಡವನ ದಹನ ಮಾಡುವಾಗ ಕೃಷ್ಣಾರ್ಜುನರ ಅನುಗ್ರಹದಿಂದ ಬದುಕಿ ಉಳಿದ ಮಯಾಸುರನು ಶ್ರೀಕೃಷ್ಣಪರಮಾತ್ಮನ ಆಜ್ಞೆಯಿಂದ ಅತ್ಯಂತ ಆಶ್ಚರ್ಯಕರವಾದ ಸಭೆಯೊಂದನ್ನು ಮಾಡಿಕೊಟ್ಟನು. ಅತಿವಿಚಿತ್ರವಾದ ಆ ಸಭಾಸ್ಥಾನದಲ್ಲಿ ಒಂದುದಿವಸದಲ್ಲಿ ಕೂತಿರಲು ಧರ್ಮರಾಜನಿದ್ದಲ್ಲಿಗೆ ನಾರದರು ಬಂದು ಸೇರಿದರು. ಧರ್ಮರಾಜನು ನಾರದರಿಗೆ ವಿಧಿಪ್ರಕಾರವಾಗಿ ಸತ್ಕರಿಸಿ ತನ್ನ ಸಭೆಗಿಂತಲೂ ಶ್ರೇಷ್ಠವಾದ ಸಭೆಗಳು ಇವೆಯೇ ಎಂದು ಕೇಳಿದನು. ಅದಕ್ಕೆ ನಾರದರು ಭೂಲೋಕದಲ್ಲಿರುವ ಸಭೆಗಳಲ್ಲಿ ಇದೇ ಶ್ರೇಷ್ಠವಾದ ಸಭೆಯೆಂದು ಹೇಳಿ ದೇವಲೋಕದ ಸಭೆಗಳು ಇದಕ್ಕಿಂತ ಶ್ರೇಷ್ಠವಾಗಿರುವುವು ಎಂಬ ಅಭಿಪ್ರಾಯದಿಂದ ದೇವಲೋಕದ ಸಭೆಗಳನ್ನೆಲ್ಲಾ ವರ್ಣನೆ ಮಾಡಿದರು. ತರುವಾಯ ಧರ್ಮರಾಜನು ಅದನ್ನೆಲ್ಲಾ ಕೇಳಿ ನಾರದರೊಡನೆ ಪ್ರಶ್ನೆ ಮಾಡಿದನು. ''ತಮ್ಮ ಮುಖದಿಂದ ಅಂತರಿಕ್ಷಾದಿ ಲೋಕಗಳ ವಿಸ್ತಾರವನ್ನು ಅಲ್ಲಿರುವ ಜನರನ್ನು ಅವರು ಸುಖ ಪಡುವುದನ್ನು ತಿಳಿಸಿ ಎಲ್ಲಾ ಲೋಕಗಳಿಗೂ ಶ್ರೀಭಗವಂತನೇ ಆಧಾರನು ಇತ್ಯಾದಿ ವಿಷಯಗಳನ್ನು ಕೇಳಿದೆನು. ಬ್ರಹ್ಮಲೋಕದಲ್ಲಿ ಎಲ್ಲಾ ದೇವತೆಗಳೂ ವೇದಾಭಿ ಮಾನಿಗಳೂ ಇರುವರು. ಇಂದ್ರದೇವರ ಸಭೆಯಲ್ಲಿ ಎಲ್ಲಾ ಮುನಿಗಳೂ ಹರಿಶ್ಚಂದ್ರರಾಜನೂ ಇರುವನೆಂದು ಹೇಳಿದಿರಿ. ಇತರ ಎಲ್ಲಾ ರಾಜರೂ ನಮ್ಮ ತಂದೆಯಾದ ಪಾಂಡುಮಹಾರಾಜರೂ ಯಮದೇವರ ಸಭೆಯಲ್ಲಿ ಇದ್ದಾರೆ ಎಂದು ಹೇಳಿದಿರಿ. ಅದನ್ನು ಕೇಳಿ ನನಗೆ ಸಂದೇಹವುಂಟಾಯಿತು. ಹರಿಶ್ಚಂದ್ರರಾಜನು ಹೇಗೆ ಇಂದ್ರದೇವರ ಸಭೆಯನ್ನು ಹೊಂದಿದನು? ನಮ್ಮ ತಂದೆಯು ಯಾಕೆ ಇಂದ್ರಸಭೆ ಯನ್ನು ಹೊಂದಲಿಲ್ಲ. ಈ ವಿಷಯವು ನನಗೆ ತಿಳಿಯುವಂತೆ ಹೇಳಬೇಕು''.

ಈರೀತಿಯಾಗಿ ಧರ್ಮರಾಜನ ಮಾತನ್ನು ಕೇಳಿ ನಾರದರು ''ಹರಿಶ್ಚಂದ್ರ ರಾಜನು ರಾಜಸೂಯಯಾಗವನ್ನು ಮಾಡಿದ ಕಾರಣ ಇಂದ್ರಸಭೆಯನ್ನು ಹೊಂದಿರುವನು. ಯಮಲೋಕಕ್ಕೆ ನಾನು ಹೋಗಿರುವಾಗ ನಿನ್ನ ತಂದೆಯಾದ ಪಾಂಡುರಾಜನು ನನ್ನೊಡನೆ 'ನನ್ನ ಮಗನು ರಾಜಸೂಯಯಾಗವನ್ನು ಮಾಡಲಿ. ಸಹೋದರರಿಂದ ಸಹಿತನಾದ ಪರಮಾತ್ಮನಿಂದ ರಕ್ಷಿತನಾದ ಧರ್ಮರಾಜನಿಗೆ ಅಶಕ್ಯವಾದ ಕಾರ್ಯವೊಂದು ಇಲ್ಲ. ಈ ವಿಷಯವನ್ನು ತಾವು ತಿಳಿಸಬೇಕು' ಎಂದು

---

1. ಮ.ತಾ.ನಿ. ಅ-20, 21

ಹೇಳಿರುವನು'' ಎಂದು ಹೇಳಿ ಹೊರಟುಹೋದರು. ನಾರದರ ಮಾತನ್ನು ಕೇಳಿ ಧರ್ಮರಾಜನು ಸಹೋದರರಿಂದ ಸಹಿತನಾಗಿ ರಾಜಸೂಯಯಾಗದ ವಿಷಯದಲ್ಲಿ ಯೋಚಿಸಿದನು. ನಾವು ಅವಶ್ಯವಾಗಿ ಮಾಡಬಹುದು ಎಂದು ಸಹೋದರರು ಹೇಳಿದ ಮಾತನ್ನು ಕೇಳಿ ಧರ್ಮರಾಜನು ತನ್ನ ಸಾರಥಿಯನ್ನು ಕೃಷ್ಣಪರಮಾತ್ಮನ ಬಳಿಗೆ ಕಳುಹಿಸಿದನು. ಅದೇ ಸಮಯದಲ್ಲಿ ಕೃಷ್ಣಪರಮಾತ್ಮನ ಹದಿನಾರುಸಾವಿರದ ನೂರು ಪತ್ನಿಯರ ತಂದೆ ಸಹೋದರ ಮೊದಲಾದ ಬಂಧುಗಳಿಂದ ಕಳುಹಿಸಲ್ಪಟ್ಟ ದೂತನೂ ಕೃಷ್ಣಪರಮಾತ್ಮನ ಬಳಿಗೆ ಬಂದು ನಮಸ್ಕರಿಸಿ 'ಭಗವಂತನೇ! ಜರಾಸಂಧನು ನಿಮ್ಮ ಪತ್ನಿಯರ ಬಂಧುಗಳನ್ನೆಲ್ಲಾ ಜಯಿಸಿ ಬಂಧನದಲ್ಲಿ ಇಟ್ಟಿರು ವನು. ಅವನಾದರೂ ಇಪ್ಪತ್ತೆರಡು ಸಾವಿರದ ಎಂಟುನೂರು ರಾಜರನ್ನು ಕೊಂದು ರುದ್ರದೇವರನ್ನು ಕುರಿತು ಯಾಗವನ್ನು ಮಾಡಬೇಕೆಂದು ಉದ್ದೇಶಿಸಿರುವನು. ಜರಾಸಂಧನನ್ನು ಸಂಹರಿಸಿ ಅವರನ್ನೆಲ್ಲಾ ಬಿಡಿಸಬೇಕು. ಅವೈದಿಕವಾದ ಆ ಮನುಷ್ಯರನ್ನು ಕೊಂದು ಮಾಡುವ ಯಾಗವನ್ನು ನಿಲ್ಲಿಸಬೇಕು' ಈರೀತಿಯಾಗಿ ಹೇಳಿದನು. ಶ್ರೀಭಗವಂತನು ಆ ದೂತನ ಮಾತನ್ನು ಕೇಳಿ ಅವನಿಗೆ ಸಮಾಧಾನವನ್ನು ಹೇಳಿ ಅವರನ್ನು ಬಿಡಿಸುತ್ತೇನೆ ಎಂದು ಹೇಳಿ ಕಳುಹಿಸಿ, ಧರ್ಮರಾಜನ ಸಾರಥಿಯು ಹೇಳಿದ ಮಾತನ್ನು ಕೇಳಿ ಪಾಂಡವರಿದ್ದಲ್ಲಿಗೆ ಹೋದನು. ಪಾಂಡವರು ಭಗವಂತನನ್ನು ಸತ್ಕರಿಸಿದನು.

ಧರ್ಮರಾಜನು ಶ್ರೀಕೃಷ್ಣಪರಮಾತ್ಮನೊಡನೆ ರಾಜಸೂಯಯಾಗದ ವಿಷಯ ವಾಗಿ ಕೇಳಿದನು. ಆಗ ಕೃಷ್ಣಪರಮಾತ್ಮನು 'ಧರ್ಮರಾಜ! ರಾಜಸೂಯಯಾಗವನ್ನು ವಿಧಿಪ್ರಕಾರವಾಗಿ ಮಾಡಿದುದಾದರೆ ಅದು ಬ್ರಹ್ಮಪದವಿಯೋಗ್ಯರಿಗೆ ಬ್ರಹ್ಮಪದವಿಗೇ ಕಾರಣವಾಗುವುದು. ಬ್ರಹ್ಮಪದವಿಗೆ ಯೋಗ್ಯತಾರಹಿತರನ್ನು ಯಜಮಾನರನ್ನಾಗಿ ಮಾಡಿ ಈ ಯಾಗವನ್ನು ಮಾಡಿದುದಾದರೆ ಆ ಯಜಮಾನರನ್ನು ರಾಜಸೂಯ ಯಾಗವನ್ನು ಮಾಡದೆ ಇರುವ ಜ್ಞಾನಭಕ್ತ್ಯಾದಿಗಳಿಂದ ಅವರಿಗೆ ಸದೃಶರಾಗಿರು ವವರಿಗಿಂತ ಮೋಕ್ಷದಲ್ಲಿ ಎದ್ದುನಿಂತ ಪ್ರಿಯ ಮಾತಾಡೋಣ ಮೊದಲಾದ ಸತ್ಕಾರಕ್ಕೆ ಯೋಗ್ಯರನ್ನಾಗಿ ಮಾಡಲಿಕ್ಕೆ ಈ ಯಾಗವು ಕಾರಣವಾಗುವುದು. ಮೋಕ್ಷಕ್ಕಿಂತ ಪೂರ್ವದಲ್ಲಿ ತಮ್ಮ ಸಮಾನರು ಇರುವ ಸ್ಥಳಕ್ಕಿಂತ ಶ್ರೇಷ್ಠವಾದ ಇಂದ್ರ ಲೋಕಾದಿಗಳಲ್ಲಿ ಇರಲಿಕ್ಕೆ ಕಾರಣವಾಗುವುದು. ಆದುದರಿಂದಲೇ ರಾಜಸೂಯ ಯಾಗವನ್ನು ಮಾಡಿದ ಹರಿಶ್ಚಂದ್ರರಾಜನು ಎಲ್ಲ ರಾಜರಿಗಿಂತಲೂ ಅಧಿಕವಾಗಿ ಇಂದ್ರಲೋಕದಲ್ಲಿ ಇರುವವನು.

ನಿನ್ನ ತಂದೆಯಾದ ಪಾಂಡುರಾಜನು ದೇವತಾಂಶದವನಾಗಿದ್ದರೂ

ರಾಜಸೂಯಯಾಗವನ್ನು ಮಾಡದೆ ಹರಿಶ್ಚಂದ್ರನಿಗಿಂತ ಉತ್ತಮತ್ವವನ್ನು ಹೊಂದಲಿಕ್ಕೆ ಆಗಬಾರದು. ಮರುತ್ತುಗಳ ಗಣದಲ್ಲಿ ಉತ್ತಮನಾದ ನಿನ್ನ ತಂದೆಯು ಪೂರ್ವದಲ್ಲಿ ತಪಸ್ಸು ಮಾಡುತ್ತಿರುವ ಸಮಯದಲ್ಲಿ ಇಂದ್ರದೇವರು ಬಂದಾಗ ಎದ್ದು ನಿಲ್ಲಲ್ಲಿಲ್ಲ. ಆಗ ಇಂದ್ರದೇವರು ಅವನಿಗೆ 'ನೀನು ಮನುಷ್ಯನಾಗಿ ಹುಟ್ಟು, ಆಮೇಲೆ ಮೃತನಾದವನು ಸ್ವರ್ಗಕ್ಕೆ ಹೋದರೂ ಮೂಲರೂಪವನ್ನು ಹೊಂದಲು ಸಮರ್ಥನಾಗುವುದಿಲ್ಲ. ಆಗ ಹರಿಶ್ಚಂದ್ರರಾಜನು ನಿನಗಿಂತ ಅಧಿಕನಾಗುವನು' ಎಂದು ಶಾಪವನ್ನು ಕೊಟ್ಟರು. ತರುವಾಯ ನಿನ್ನ ತಂದೆಯು ಕ್ಷಮೆಯನ್ನು ಕೇಳಿಕೊಳ್ಳಲು ಇಂದ್ರದೇವರು 'ನೀನು ರಾಜಸೂಯಯಾಗದಿಂದ ಹರಿಶ್ಚಂದ್ರನಿಗಿಂತ ಶ್ರೇಷ್ಠನಾಗಿ ಮೂಲರೂಪವನ್ನು ಹೊಂದುವೆ' ಎಂದು ಹೇಳಿದರು. ಆದುದರಿಂದ ಅವಶ್ಯವಾಗಿ ಆ ಯಾಗವನ್ನು ಮಾಡಬೇಕು. ಅದರಿಂದ ನಿಮಗೂ ನಿಮ್ಮ ನಿಮ್ಮ ಪದವಿಗೆ ಸಂಪೂರ್ಣಯೋಗ್ಯತಾ ಲಭಿಸುವುದು' ಎಂದು ಹೇಳಿದರು.

ಆಮೇಲೆ ಕೃಷ್ಣಪರಮಾತ್ಮನು ಭೀಮಸೇನದೇವರಿಗೆ ಬ್ರಹ್ಮಪದವಿಯ ಯೋಗ್ಯತೆಯಿರುವುದರಿಂದ ಅವರಿಗೇ ಈ ಯಾಗದ ಸಂಪೂರ್ಣ ಫಲದ ಯೋಗ್ಯತೆಯಿರುವುದರಿಂದ ಅವರಿಗೆ ಸಂಪೂರ್ಣ ಫಲವನ್ನು ಕೊಡಿಸುವುದಕ್ಕಾಗಿ ಧರ್ಮರಾಜನೊಡನೆ 'ಧರ್ಮರಾಜ! ಆದರೆ ಈಗ ಜರಾಸಂಧನು ಬದುಕಿರುವಾಗ ಎಲ್ಲಿ ರಾಜಸೂಯ ಯಾಗವನ್ನು ಮಾಡಲಿಕ್ಕೆ ಸಾಧ್ಯವಾಗುವುದು? ಅವನೊಡನೆ ಯಾರು ಯುದ್ಧವನ್ನು ಮಾಡಲಿಕ್ಕೆ ಸಮರ್ಥರಿರುವರು? ಅವನು ಬಲರಾಮ ದೇವರಿಂದಲೂ ಸಾಯಲಿಲ್ಲ. ಬ್ರಹ್ಮದೇವರ ಮತ್ತು ರುದ್ರದೇವರ ವರದಿಂದ ಸಮಸ್ತಲೋಕವನ್ನು ಜಯಿಸಿರುವ ಜರಾಸಂಧನು ಬದುಕಿರುವಾಗ ರಾಜಸೂಯ ಯಾಗವು ನಡೆಯಲಾರದು' ಎಂದು ಹೇಳಿದನು.

ಆಗ ಧರ್ಮರಾಜನು 'ನಾನು ರಾಜಸೂಯಯಾಗದಿಂದ ಮನಸ್ಸನ್ನು ಹಿಂದೆ ತಿರುಗಿಸಿದೆನು. ಪೂರ್ವದಲ್ಲಿ ಎಷ್ಟೋ ರಾಜರಿದ್ದರು. ಅವರೆಲ್ಲರೂ ರಾಜಸೂಯ ಯಾಗವನ್ನು ಮಾಡಿ ಚಕ್ರವರ್ತಿಗಳಾಗಿರಲಿಲ್ಲ. ಹರಿಶ್ಚಂದ್ರಾದಿ ಚಕ್ರವರ್ತಿಗಳು ಇರುವಾಗ ಜರಾಸಂಧನಂತೆ ಇದ್ದ ಶತ್ರುಗಳು ಇರಲಿಲ್ಲ. ಆದುದರಿಂದ ಅವರಿಗೆ ರಾಜಸೂಯಯಾಗವನ್ನು ಮಾಡಲಿಕ್ಕೆ ಸಾಧ್ಯವಾಯಿತು' ಎಂದು ಹೇಳಿದನು.

ಅದಕ್ಕೆ ಭೀಮಸೇನದೇವರು 'ಯೋಗ್ಯತೆಯುಳ್ಳವರು ಪ್ರಯತ್ನದಿಂದ ಬ್ರಹ್ಮ ದೇವರ ಪದವಿಯನ್ನು ಹೊಂದುವರು. ಸಾಮರ್ಥ್ಯಹೀನರಾದವರೂ, ಪರಮಾತ್ಮನ

ಅನುಗ್ರಹದಿಂದ ರಹಿತರಾದವರೂ, ಮಹಾಪ್ರಯತ್ನದಿಂದ ರಹಿತರಾದವರು ಆದ ಜನರು ಅಭ್ಯುದಯವನ್ನು ಹೊಂದಲಾರರು. ನನಗೆ ಸ್ಥಿರವಾದ ಸಾಮರ್ಥ್ಯವಿದೆ. ಶ್ರೀಭಗವಂತನ ಪರಮಾನುಗ್ರಹವೂ ಇರುತ್ತದೆ. ಪ್ರಯತ್ನ ವೊಂದನ್ನು ಮುಂದೆ ಮಾಡಿಕೊಂಡು ಐಶ್ವರ್ಯವನ್ನು ಹೊಂದುವ' ಎಂದು ಹೇಳಿದರು.

ಈರೀತಿಯಾಗಿ ಭೀಮಸೇನದೇವರು ಹೇಳಲು ಕೃಷ್ಣಪರಮಾತ್ಮನು ಭೀಮಸೇನ ದೇವರೇ ಆ ಯಾಗದ ಮುಖ್ಯಫಲಭಾಗಿಗಳಾದ ಕಾರಣ ಅವರೇ ಯಾಗಕ್ಕೆ ಮುಖ್ಯಕಾರಣರೆಂದು ಮಾಡುವುದಕ್ಕಾಗಿ ಧರ್ಮರಾಜನೊಡನೆ 'ಈಗ ಆ ಜರಾಸಂಧನೊಬ್ಬನೇ ಇರುತ್ತಾನೆ. ಅವನು ಎಲ್ಲಾ ಅಸಜ್ಜನರಿಗೂ ಆಶ್ರಯನಾದವನು. ಕಲಿಯ ಅನಂತರದಲ್ಲಿ ಅವನೇ ಬಲಿಷ್ಠನು. ಹಾಗೆಯೇ ಯಾರು ಸಜ್ಜನರಿಗೆ ಆಶ್ರಯನೋ ಯಾರಿಂದ ಸಜ್ಜನರಿಗೆ ಗುಣಗಳು ಉಂಟಾಗುವುವೋ ಆ ಪುರುಷನನ್ನೇ ನೀನು ಯೋಚಿಸಿ ಕಳುಹಿಸು. ನೀನು ಕಳುಹಿಸಿದ ಪುರುಷನಿಂದ ಜರಾಸಂಧನು ಸಂಹರಿಸಲ್ಪಟ್ಟರೆ ಸಜ್ಜನರಿಗೆ ಜಯವು ಏರ್ಪಡುವುದು. ಇಲ್ಲದಿದ್ದರೆ ಅಸಜ್ಜನರಿಗೇ ಜಯವಾಗುವುದು. ಯಾರು ಜರಾಸಂಧನನ್ನು ಜಯಿಸುವನೋ ಕೊಲ್ಲುವನೋ ಅವನು ಬ್ರಹ್ಮದೇವರ ಪದವಿಯನ್ನು ಹೊಂದುವನು. ಅವನೇ ವೇದದಲ್ಲಿ ಹೇಳಿದ ಧರ್ಮಗಳನ್ನು ಪರಿಪಾಲಿಸುವವನು. ಅವನು ಜಗತ್ತನ್ನು ವಿಷ್ಣುಸಂಬಂಧಿಯನ್ನಾಗಿ ಮಾಡುವನು. ಜರಾಸಂಧನು ರುದ್ರದೇವರ ಭಕ್ತರಲ್ಲಿ ಶ್ರೇಷ್ಠನು. ಯಾರು ಶಿವಭಕ್ತಾಗ್ರೇಸರನನ್ನು ಸಂಹರಿಸುವನೋ ಅವನೇ ವೈಷ್ಣವರಲ್ಲಿ ಶ್ರೇಷ್ಠನಾದವನು' ಎಂದು ಅಭಿಪ್ರಾಯಗರ್ಭಿತವಾಗಿ ಮಾತಾಡಿದರು. ಅದನ್ನು ಕೇಳಿ ಧರ್ಮರಾಜನು ಭಯವುಳ್ಳವನಾದನು. ರಾಜಸೂಯಯಾಗವು ಬೇಡವೇ ಬೇಡವೆಂದು ಹೇಳಿದನು. ಆಗ ಭೀಮಸೇನದೇವರು ನಾನು ಜರಾಸಂಧನನ್ನು ಸಂಹರಿಸಿರುವೆನೆಂದರು. ತರುವಾಯ ಕೃಷ್ಣಪರಮಾತ್ಮನು 'ನಾನೂ ಭೀಮಾರ್ಜುನರೂ ಮೂರು ಜನರು ಜರಾಸಂಧನನ್ನು ಕೊಲ್ಲುವುದಕ್ಕಾಗಿಯೇ ಹೋಗುವೆವು. ಭೀಮಸೇನನು ಜರಾಸಂಧನನ್ನು ಕೊಲ್ಲುವುದಾದರೆ ರಾಜಸೂಯಯಾಗವು ನಿಶ್ಚಯವಾಗಿಯೂ ನಡೆಯುವುದು. ಜಗತ್ತೆಲ್ಲವೂ ನಿನ್ನ ವಶವಾಗುವುದು' ಎಂದು ಹೇಳಿದನು.

ಆಗ ಧರ್ಮರಾಜನು ಕೃಷ್ಣಪರಮಾತ್ಮನು ಜರಾಸಂಧನ ಭಯದಿಂದ ಮಧುರಾಪಟ್ಟಣವನ್ನು ಬಿಟ್ಟುಹೋಗಿರುವನೆಂಬ ಭ್ರಾಂತಿಯಿಂದ ಭಯಪಡುತ್ತಾ 'ನೀವೇ ಯಾವ ಜರಾಸಂಧನ ಭಯದಿಂದ ಮಧುರಾಪಟ್ಟಣವನ್ನೇ ಬಿಟ್ಟು

ಓಡಿಹೋಗಿ ಸಮುದ್ರ ಮಧ್ಯದಲ್ಲಿ ವಾಸಮಾಡುತ್ತಿರುವಿರೋ ಆ ಶತ್ರುವಿನಿಂದ ನಾನು ತುಂಬಾ ಭಯಪಡುವೆನು. ಭೀಮಾರ್ಜುನರು ಇಬ್ಬರೂ ನನಗೆ ಎರಡು ಕಣ್ಣುಗಳಂತೆ ಇರುವವರು. ನೀವು ಮನಸ್ಸಿನಂತೆ ಇರುವವರು. ನೀವು ಮೂರು ಜನರು ಇಲ್ಲದಿದ್ದರೆ ನಾನು ಮನುಷ್ಯನೇ ಆಗಲಾರೆನು. ಆದುದರಿಂದ ನನ್ನ ಜೀವಿತಕ್ಕಿಂತಲೂ ಪ್ರಿಯರಾದ ನಿಮ್ಮನ್ನು ನನಗೋಸ್ಕರವಾಗಿ ಪ್ರಬಲವಾದ ಶತ್ರುವಿನ ಬಳಿಗೆ ಕಳುಹಿಸಲಾರೆನು'' ಎಂದು ಹೇಳಿದನು. ಆಗ ಭೀಮಸೇನದೇವರು 'ರಮಾಬ್ರಹ್ಮಾದಿದೇವತೆಗಳೂ ಯಾವ ಭಗವಂತನ ಅಧೀನರಾಗಿರುವರೋ, ಸುರಾಸುರಾದಿ ಸಮಸ್ತರ ಬಲವು ಯಾರ ಅಧೀನವಾಗಿರುವುದೋ ಅಂತಹ ಈ ಶ್ರೀಕೃಷ್ಣಪರಮಾತ್ಮನು ಎಲ್ಲಿ? ಜರಾಸಂಧನು ಎಲ್ಲಿ? ಸಮಸ್ತ ಲೋಕಗಳಿಗೂ ನಿಯಾಮಕನಾದ ಪರಮಾತ್ಮನಿಗೆ ಸಂಪೂರ್ಣಶಕ್ತಿಯಿರುವುದು. ಭಗವಂತನ ಅನುಗ್ರಹದಿಂದ ನನಗೆ ಮಹಾ ಸಾಮರ್ಥ್ಯವಿದೆ. ಅರ್ಜುನನಿಗೂ ಪರಮಾತ್ಮನ ವರದಿಂದ ಅಜೇಯತ್ವವು ಇದೆ. ಆದುದರಿಂದ ನಾವು ಮೂರುಜನರು ಈಗ ಶತ್ರುವಾದ ಜರಾಸಂಧನ ಬಳಿಗೆ ಹೋಗುವೆವು. ಪರಮಾತ್ಮನ ಮುಂದೆ ನಾನು ನಿಶ್ಚಯವಾಗಿಯೂ ಜರಾಸಂಧನನ್ನು ಸಂಹರಿಸುವೆನು'' ಎಂದು ಹೇಳಿದರು.

ಆಗ ಶ್ರೀಕೃಷ್ಣಪರಮಾತ್ಮನು ಧರ್ಮರಾಜನೊಡನೆ 'ನಾವು ಮೂರು ಜನರು ಹೋಗಿ ಆ ಜರಾಸಂಧನನ್ನು ಮೃತ್ಯುವಶವನ್ನಾಗಿ ಮಾಡುವೆವು. ಭೀಮಸೇನನು ನಿಶ್ಚಯವಾಗಿಯೂ ಯುದ್ಧದಲ್ಲಿ ಜರಾಸಂಧನನ್ನು ಸಂಹರಿಸುವನು. ಧರ್ಮರಾಜ! ಜರಾಸಂಧನು ನನ್ನಿಂದ ಸಂಹೃತನಲ್ಲವೆಂದು ಅವನಿಂದ ಭಯವನ್ನು ಹೊಂದಬೇಡ. ನಾನು ಶಕ್ತಿಯಿಲ್ಲದೆ ಅವನನ್ನು ಸಂಹಾರಮಾಡದೆ ಬಿಟ್ಟದ್ದಲ್ಲ. ನಾನು ನೀತಿಗಾಗಿ ಅವನಲ್ಲಿ ಕೊಲ್ಲಲಿಲ್ಲ. ಅಂದರೆ ಅವನು ಶಿವಭಕ್ತಾಗ್ರೇಸನಾಗಿರುವನು. ಅವನನ್ನು ನಾನು ಸಂಹರಿಸುವುದು ಉಚಿತವಲ್ಲ. ಅವನನ್ನು ನನ್ನ ಭಕ್ತರಲ್ಲಿ ಶ್ರೇಷ್ಠನಾದವನು ಸಂಹರಿಸಿದರೆ ನನ್ನ ಬಲವು ಪ್ರಕಾಶಿತವಾಗುವುದು. ಆದುದರಿಂದ ನೀನು ಸ್ವಲ್ಪವೂ ಸಂದೇಹಪಡಬೇಡ. ಜರಾಸಂಧನನ್ನು ಸಂಹರಿಸಿ ನಿನ್ನ ತಮ್ಮಂದಿರನ್ನು ಕರೆದು ಕೊಂಡು ಬಂದು ನಿನಗೆ ತೋರಿಸುವೆನು' ಎಂದು ಹೇಳಿದನು. ತರುವಾಯ ಧರ್ಮರಾಜನು ಭಗವಂತನ ಗುಣಗಳನ್ನೆಲ್ಲಾ ಯೋಜನೆ ಮಾಡಿ 'ಆಗಲಿ' ಎಂದು ಹೇಳಿದನು.

ತರುವಾಯ ಆ ಮೂರು ಜನರೂ ಬೇಗನೇ ಮಗಧದೇಶದಕ್ಕೆ ಹೊರಟರು. ಅವರು ಮಗಧ ದೇಶಕ್ಕೆ ಹೋಗಿ ಸೇರಿದರು. ಅಲ್ಲಿ ಜರಾಸಂಧನು ಲಿಂಗಾಕಾರವುಳ್ಳ

ಒಂದು ಪರ್ವತವನ್ನು ರುದ್ರದೇವರ ಲಿಂಗವನ್ನು ಪೂಜಿಸುತ್ತಿದ್ದನು. ಅದಕ್ಕೆ ವಸ್ತ್ರ ಪುಷ್ಪ ಗಂಧ ಇತ್ಯಾದಿಗಳಿಂದ ಅಲಂಕಾರ ಮಾಡಿಸಿದ್ದನು. ತನ್ನ ಶಿರಸ್ಸಿಗಿಂತಲೂ ಹೆಚ್ಚಾಗಿ ಅದನ್ನು ಆದರಿಸುತ್ತಿದ್ದನು. ಮೂರು ಜನರೂ ಆ ಪರ್ವತವನ್ನು ಕೈಗಳಿಂದ ಹಿಡಿದು ಉರುಳಿಸಿ ಬೀಳಿಸಿದರು. ಜರಾಸಂಧನಿಗೆ ಅದರಿಂದ ತನ್ನ ತಲೆಯನ್ನು ಕಡಿದು ಕೆಳಗೆ ಉರುಳಿಸಿದಷ್ಟು ದುಃಖವಾಯಿತು. ರಾಜದ್ವಾರದಲ್ಲಿ ಮಾಷ ಎಂಬ ರಾಕ್ಷಸನ ಕರುಳಿನಿಂದ ಮಾಡಿದ ಮೂರು ನಗಾರಿಗಳು ಇದ್ದವು. ಯಾರಾದರೂ ಶತ್ರುಗಳು ಬಂದರೆ ಅವು ತಾವಾಗಿಯೇ ಶಬ್ದಮಾಡುತ್ತಿದ್ದವು. ಇದರಿಂದ ಜರಾಸಂಧನು ತನಗೆ ಶತ್ರುಗಳು ಬಂದರು ಎಂದು ತಿಳಿಯುತ್ತಿದ್ದರು ಆ ಮೂರು ಸರಿಯಾದ ಮಾರ್ಗದಿಂದ ಹೋಗದೆ ಬೇರೆ ಮಾರ್ಗದಿಂದ ಹಿಂದಿನಿಂದ ಹೋಗಿ ಆ ನಗಾರಿಗಳಿಗೆ ಮುಷ್ಟಿಯಿಂದ ಒಡೆದು ಸೀಳಿಹಾಕಿದರು. ಅಂಗಡಿಬೀದಿಗೆ ಹೋಗಿ ಬಲಾತ್ಕಾರದಿಂದ ಅಂಗಡಿಗಳಿಂದ ಅನೇಕ ಗಂಧಪುಷ್ಪಗಳನ್ನು ಅಪಹರಿಸಿ ಧರಿಸಿದರು. ಸರಿಯಾದ ಬಾಗಿಲಲ್ಲಿ ಹೋಗದೆ ಬೇರೊಂದು ಬಾಗಿಲನಿಂದ ಹೋದರು. 'ಎಲಾ' ಎಂದು ಕರೆದರು.

ಜರಾಸಂಧನು ಬ್ರಾಹ್ಮಣವೇಷವನ್ನು ಧರಿಸಿರುವ ಮಹಾಭುಜವುಳ್ಳ ಸ್ನಾತಕರ ವೇಷವುಳ್ಳ ಭೀಮಸೇನದೇವರೇ ಮೊದಲಾದವರನ್ನು ನೋಡಿ ಧನುಸ್ಸಿನ ಹಗ್ಗವು ತಾಗಿ ಕಠಿನವಾಗಿರುವ ಅವರ ಭುಜಗಳನ್ನು ನೋಡಿ ಕ್ಷತ್ರಿಯರಾಗಿರಬಹುದೆಂದು ಯೋಚಿಸಿ 'ನೀವು ಯಾರು? ಯಾವುದಕ್ಕೋಸ್ಕರ ಬಂದಿರುವಿರಿ? ನನ್ನ ಲಿಂಗಾಕಾರ ಪರ್ವತವನ್ನು ಯಾಕೆ ಭೇದಿಸಿದಿರಿ. ಬ್ರಾಹ್ಮಣವೇಷಹಾಕಿಕೊಂಡು ಅಂಗಡೀಬೀದಿಗೆ ಹೋಗಿ ಏಕೆ ಅನ್ಯಾಯಗಳನ್ನು ಮಾಡಿದಿರಿ?' ಎಂದು ಕೇಳಿದನು. ಅದಕ್ಕೆ ಕೃಷ್ಣಪರಮಾತ್ಮನು 'ಶತ್ರುವಿಗೆ ಎಲ್ಲಾ ವಿರುದ್ಧಕಾರ್ಯಗಳನ್ನೇ ಮಾಡಬೇಕು' ಎಂದನು. ಅದಕ್ಕೆ 'ನಾನು ಬ್ರಾಹ್ಮಣರಿಗೆ ಶತ್ರುವಲ್ಲ. ಆದುದರಿಂದ ನಿಮಗೆ ನಾನು ಹೇಗೆ ಶತ್ರುವಾಗುವೆನು?' ಎಂದು ಕೇಳಿದನು. ಶ್ರೀಕೃಷ್ಣಪರಮಾತ್ಮನು 'ನಾವು ಅಂತಹ ಬ್ರಾಹ್ಮಣರೆಂದು ತಿಳಿಯಬೇಡ. ನಾನು ನಿನ್ನ ಶತ್ರುವಾದ ಕೃಷ್ಣನು. ಇವರು ಭೀಮ ಅರ್ಜುನ ಎಂದು ಪ್ರಸಿದ್ಧರಾದವರು. ಯಾವ ನಮ್ಮ ಬಂಧುಗಳನ್ನು ಬಂಧನದಲ್ಲಿ ಇಟ್ಟು ವೇದಮಾರ್ಗವನ್ನು ಬಿಟ್ಟು ರುದ್ರದೇವತಾಕಯಾಗದಲ್ಲಿ ಪಶುಗಳನ್ನಾಗಿ ಮಾಡಲಿಕ್ಕೆ ಇಚ್ಛಿಸುವೆಯಾ? ಅಂತಹ ನಿನ್ನನ್ನು ಬಲಾತ್ಕಾರದಿಂದ ನಿಗ್ರಹ ಮಾಡಲಿಕ್ಕೆ ಬಂದಿರುವೆವು. ನೀನಾಗಿ ಬಂಧನದಲ್ಲಿ ಇಟ್ಟಿರುವ ನಮ್ಮ ಜನರನ್ನು ಬಿಡದೆ ಇದ್ದರೆ ನಿನ್ನನ್ನು ನಿಗ್ರಹ ಮಾಡಿ ಅವರನ್ನು ಬಿಡಿಸುವೆನು. ಆದುದರಿಂದ ಆ ರಾಜರನ್ನೆಲ್ಲಾ

ಬಿಡು ಅಥವಾ ಸಾಯುವ ನಿಶ್ಚಯಮಾಡಿಕೊಂಡು ನಮ್ಮ ಸಮೀಪಕ್ಕೆ ಯುದ್ಧಕ್ಕೆ ಬರುವವನಾಗು' ಎಂದು ಹೇಳಿದನು.

ಜರಾಸಂಧನು ರೋಷದಿಂದ 'ರುದ್ರದೇವರ ಯಾಗಕ್ಕೆಂದು ಇಟ್ಟಿರುವ ರಾಜರನ್ನು ನಾನು ಬಿಡಲಾರೆನು. ನಿಮ್ಮ ಹತ್ತಿರ ಒಂದೇ ಸಲವೋ ಅಥವಾ ಪ್ರತ್ಯೇಕಪ್ರತ್ಯೇಕವಾಗಿಯೋ ಯುದ್ಧ ಮಾಡುತ್ತೇನೆ. ಆಯುಧವಿಲ್ಲದೆಯೂ ಯುದ್ಧ ಮಾಡುವೆನು. ಆಯುಧವನ್ನು ಹಿಡಿದುಕೊಂಡು ಬೇಕಾದರೂ ಯುದ್ಧ ಮಾಡುವೆನು. ನಿಮಗೆ ಇಷ್ಟವಾದ ಆಯುಧದಿಂದ ಯುದ್ಧ ಮಾಡುವೆನು. ಒಬ್ಬನೇ ನಿಮ್ಮೆಲ್ಲರ ಹತ್ತಿರವೂ ಯುದ್ಧ ಮಾಡುವೆನು. ಅಥವಾ ಸೈನ್ಯ ಸಹಿತರಾಗಿ ಬನ್ನಿರಿ. ನಾನು ಸೈನ್ಯಸಹಿತವಾಗಿ ಯುದ್ಧ ಮಾಡುವೆನು' ಎಂದು ಹೇಳಿದನು.

ಅದಕ್ಕೆ ಕೃಷ್ಣಪರಮಾತ್ಮನೂ ಹಾಗೆಯೇ 'ರಾಜನೇ! ನೀನೊಬ್ಬನು ನಮ್ಮಲ್ಲಿ ಯಾರಾದರೂ ಒಬ್ಬನನ್ನು ಕರೆದು ಯುದ್ಧಮಾಡು. ಅಥವಾ ಸೈನ್ಯಸಹಿತನಾಗಿ ಯುದ್ಧಮಾಡು. ಯಾರೊಡನೆ ಯುದ್ಧವನ್ನು ಮಾಡಲು ಬಯಸುವಿಯೋ ಅವರ ಹತ್ತಿರ ಯುದ್ಧವನ್ನು ಮಾಡು. ಆಯುಧ ರಹಿತನಾಗಿಯೋ, ಆಯುಧ ಸಹಿತ ನಾಗಿಯೋ ನಿನಗೆ ಬೇಕಾದ ಆಯುಧಗಳನ್ನು ಧರಿಸಿಯೋ ಯುದ್ಧಮಾಡು' ಎಂದು ಭೀಮಸೇನದೇವರಿಗೆ ಕೀರ್ತಿಯನ್ನು ಹೆಚ್ಚಿಸುವುದಕ್ಕಾಗಿ ಹೇಳಿದನು. ಶ್ರೀಭಗವಂತನು ಭೀಮಸೇನದೇವರಿಂದ ಶತ್ರುವಾದ ಜರಾಸಂಧನನ್ನು ಕೊಲ್ಲಿಸಿ ಅವರಿಗೆ ಪರಮಾನುಗ್ರಹ ಮಾಡವುದಕ್ಕಾಗಿಯೂ ಅದರಿಂದ ಭೀಮಸೇನದೇವರಿಗೆ ಭಕ್ತಿಜ್ಞಾನಾದಿಗಳು ಹೆಚ್ಚಾಗುವಂತೆ ಮಾಡಬೇಕೆಂದು ಜರಾಸಂಧನನ್ನು ತೃಣಪ್ರಾಯ ನೆಂದು ಅಲಕ್ಷ್ಯ ಮಾಡುವುದಕ್ಕಾಗಿ ಆಯುಧವನ್ನು ಬಿಟ್ಟು ಹೋದನು. ಕೃಷ್ಣ ಪರಮಾತ್ಮನೂ ಭೀಮಸೇನದೇವರೂ ಅರ್ಜುನನೂ ಮೂವರೂ ಕೂಡ ಆಯುಧವಿಲ್ಲದೆ ಹೋಗುವುದಕ್ಕಾಗಿಯೇ ಬ್ರಾಹ್ಮಣವೇಷವನ್ನು ಧರಿಸಿದರು. ಕೈಯಿಲ್ಲದೆ ಆಯುಧವಿಲ್ಲದೆ ಕ್ಷತ್ರಿಯವೇಷವು ಉಚಿತವಲ್ಲ. ಆದುದರಿಂದ ಆಯುಧ ವನ್ನು ಧರಿಸದೆ ಹೋಗಿ ಜರಾಸಂಧನನ್ನು ತೃಣಪ್ರಾಯನನ್ನಾಗಿ ಮಾಡಬೇಕೆಂದೇ ಬ್ರಾಹ್ಮಣವೇಷಧಾರಿಗಳಾದರು. ತನ್ನ ಮನೆಯಲ್ಲಿ ಕೂತಿರುವ ಸೈನ್ಯದಿಂದ ಸಹಿತನಾದ ಜರಾಸಂಧನ ಬಳಿಗೆ ಆಯುಧವಿಲ್ಲದೆ ಹೋಗಿ ಯುದ್ಧಕ್ಕೆ ಕೂಗಿದ್ದರಿಂದ ಭಗವಂತನು ಭೀಮಸೇನದೇವರಿಗೆ ಅಧಿಕವಾದ ಧರ್ಮವನ್ನು ಕೀರ್ತಿಯನ್ನು ಹೆಚ್ಚಿಸಿದನು. ಶ್ರೀಭಗವಂತನು ಜರಾಸಂಧನೊಡನೆ ನಮ್ಮ ಮಧ್ಯದಲ್ಲಿ ಯಾರಾದರೂ ಒಬ್ಬನನ್ನು ಯುದ್ಧಕ್ಕೆ ಕೂಗು ಎಂದು ಹೇಳಿ ಅವನ ಬಾಯಿಯಿಂದ ಭೀಮಸೇನದೇವರಿಗೆ

ಅರ್ಜುನನಿಗಿಂತ ಅಧಿಕ್ಯವನ್ನು ಪ್ರಕಾಶಗೊಳಿಸುವುದಕ್ಕಾಗಿಯೇ ಮೂರನೆಯದಾಗಿ ಅರ್ಜುನನನ್ನು ಕರೆದುಕೊಂಡು ಹೋದರು.

ಶ್ರೀಭಗವಂತನು ನಮ್ಮ ಮಧ್ಯದಲ್ಲಿ ಯಾರನ್ನು ಬೇಕಾದರೂ ಯುದ್ಧಕ್ಕೆ ಕೂಗು ಎಂದು ಹೇಳಲು ಜರಾಸಂಧನು 'ನಾನು ಬಲಹೀನನಾದ ಅರ್ಜುನನ ಹತ್ತಿರ ಯುದ್ಧವನ್ನು ಮಾಡಲಾರೆನು. ಅವನೀಗ ಐವತ್ತೈದು ವರ್ಷ ವಯಸ್ಸಾದವ ನಾಗಿದ್ದರೂ ಆದುದರಿಂದಲೇ ಯುವಕನಾಗಿದ್ದರೂ ಬಲಹೀನನಾದ ಕಾರಣ ಚಿಕ್ಕ ಹುಡುಗನೆಂದೇ ನನ್ನ ಅಭಿಪ್ರಾಯವು' ಎಂದು ಹೇಳಿದನು. ಅವನು ಅರ್ಜುನನ ಎದುರಲ್ಲೇ ಹೀಗೆ ಹೇಳಿದರೂ ಅರ್ಜುನನು ಅವನನ್ನು ನೋಡಿ ಅವನೊಡನೆ ಬಾಹುಯುದ್ಧದಲ್ಲಿಯೂ ಧನುರ್ವಿದ್ಯೆಯಲ್ಲಿಯೂ ಪರಾಜಯವು ಉಂಟಾಗಬಹು ದೆಂದು ಸಂದೇಹವುಳ್ಳವನಾಗಿ 'ನನ್ನಲ್ಲಿ ಬಲವಿದೆಯೋ ಇಲ್ಲವೋ ಎಂದು ಪರೀಕ್ಷಾ ಮಾಡಿನೋಡು' ಎಂದು ಹೇಳಲು ಧೈರ್ಯವುಳ್ಳವನಾಗಲಿಲ್ಲ. ಇದರಿಂದ ಭೀಮಸೇನದೇವರ ಬಲವು ಲೋಕದಲ್ಲಿ ಅತಿಪ್ರಸಿದ್ಧವಾಯಿತು. ಇದಕ್ಕಾಗಿಯೇ ಕೃಷ್ಣಪರಮಾತ್ಮನು ಅರ್ಜುನನನ್ನು ಕರೆದುಬಂದದ್ದು. ಜರಾಸಂಧನು ಶ್ರೀಕೃಷ್ಣನ ಬಲವು ಘೋರವಾದದ್ದು. ತನ್ನಿಂದ ಸಹಿಸಲಿಕ್ಕೆ ಆಗಲಾರದು ಎಂದು ತಿಳಿದುಕೊಂಡು ಭಯದಿಂದಲೇ 'ನೀನು ಗೋಪಾಲನು, ಭಯದಿಂದ ಓಡಿಹೋದವನು ನಿನ್ನೊಡನೆ ಯುದ್ಧಮಾಡಲಾರೆನು' ಎಂದು ಹೇಳಿ ಯುದ್ಧಕ್ಕೆ ಕೂಗಲಿಲ್ಲ. ಭೀಮಸೇನದೇವರನ್ನು ಯುದ್ಧಕ್ಕೆ ಕೂಗಿದರೆ ಒಂದು ಪಕ್ಷದಲ್ಲಿ ತಾನು ಬದುಕಿದರೂ ಬದುಕಬಹುದು. ಕೃಷ್ಣಪರಮಾತ್ಮನನ್ನು ಯುದ್ಧಕ್ಕೆ ಕೂಗಿದರೆ ಅವನು ತನ್ನನ್ನು ಕೊಂದೇ ಹಾಕುವನು. ಆದುದರಿಂದಲೇ ಭಯದಿಂದಲೇ ಕೃಷ್ಣಪರಮಾತ್ಮನನ್ನು ಯುದ್ಧಕ್ಕೆ ಕೂಗಲಿಲ್ಲ. ಅರ್ಜುನನನ್ನು ತಾನು ಜಯಿಸಿದರೂ ಭೀಮಕೃಷ್ಣರು ಸೇರಿ ತನ್ನನ್ನು ಕೊಂದು ಹಾಕುವರು. ಮೂವರಲ್ಲಿ ದುರ್ಬಲನನ್ನು ಯುದ್ಧಕ್ಕೆ ಕೂಗಿದ ಕಾರಣ ತನಗೆ ಕೀರ್ತಿಯು ನಷ್ಟವಾಗುವುದು ಎಂದು ತಿಳಿದುಕೊಂಡು ಅರ್ಜುನನನ್ನು ಯುದ್ಧಕ್ಕೆ ಕೂಗಲಿಲ್ಲ. ಭೀಮಸೇನದೇವರನ್ನು ಕೂಗಿದರೆ ತಾನು ಒಂದು ಪಕ್ಷದಲ್ಲಿ ಬದುಕಿದರು ಬದುಕಬಹುದು. ಸತ್ತರೂ ಕೀರ್ತಿಯು ನಷ್ಟವಾಗಲಾರದು ಎಂದು ತಿಳಿದುಕೊಂಡು ಭೀಮಸೇನದೇವರನ್ನು ಯುದ್ಧಕ್ಕೆ ಜರಾಸಂಧನು ಕೂಗಿದನು.

ಜರಾಸಂಧನಿಗೆ ಏಕಾದಶರುದ್ರರಲ್ಲಿ ಒಬ್ಬನಾದ ಪತ್ರತಾಪ ಎಂಬವನು ಸಹದೇವ ಎಂಬ ಹೆಸರಿನಿಂದ ಮಗನಾಗಿ ಹುಟ್ಟಿದ್ದನು. ಭೀಮಸೇನದೇವರನ್ನು ಯುದ್ಧಕ್ಕೆ ಕೂಗಿದ ಜರಾಸಂಧನು ತಾನು ಇನ್ನು ಮುಂದೆ ಬದುಕಿರುವುದರಲ್ಲಿ

ಸಂದೇಹವುಳ್ಳವನಾಗಿ ಮೊದಲೇ ಅವನಿಗೆ ರಾಜ್ಯದಲ್ಲಿ ಪಟ್ಟಾಭಿಷೇಕವನ್ನು ಮಾಡಿದನು.

ಜರಾಸಂಧನು ಭೀಮಸೇನದೇವರಿಗೆ ದೇಹಬಲವು ಅಧಿಕವಾಗಿರುವುದೆಂದು ತಿಳಿದುಕೊಂಡು ಅವರೊಡನೆ ದ್ವಂದ್ವ ಯುದ್ಧ ಮಾಡಲಿಕ್ಕೆ ಭಯವುಳ್ಳವನಾಗಿ ತನಗೆ ಗದೆಯಲ್ಲಿ ಅಧಿಕವಾದ ಶಿಕ್ಷೆಯಿರುವುದೆಂದು ತಾನು ಒಂದು ಗದೆಯನ್ನು ಹಿಡಿದುಕೊಂಡು ಭೀಮಸೇನ ದೇವರಿಗೂ ಒಂದು ಗದೆಯನ್ನು ಕೊಟ್ಟನು. ಭೀಮಸೇನದೇವರು ಅವನಿಗಾಗಿ ಅವನು ಕೊಟ್ಟ ಗದೆಯನ್ನು ಹಿಡಿದುಕೊಂಡು ಜರಾಸಂಧನಿಂದ ಸಹಿತರಾಗಿ ಕೃಷ್ಣಾರ್ಜುನರಿಂದಲೂ ಸಹಿತರಾಗಿ ಯುದ್ಧ ಮಾಡುವುದಕ್ಕಾಗಿ ಊರಿನ ಹೊರಗೆ ಹೋದರು. ಅಲ್ಲಿ ಕೃಷ್ಣಾರ್ಜುನರ ಮುಂಭಾಗದಲ್ಲಿ ಯುದ್ಧಮಾಡಿದರು. ಮೊದಲು ಭೀಮಸೇನದೇವರು ಶಿವಭಕ್ತನಾದ ಜರಾಸಂಧನನ್ನು ವಿಷ್ಣುಗುಣಗಳನ್ನು ಸಮರ್ಥಿಸಿ ವಾಗ್ಯುದ್ಧದಲ್ಲಿ ಜಯಿಸಿದರು. ಆಮೇಲೆ ಇಬ್ಬರೂ ವಿಚಿತ್ರ ಪ್ರಕಾರಗಳನ್ನು ತೋರಿಸುತ್ತಾ ಗದೆಗಳಿಂದ ಯುದ್ಧವನ್ನು ಮಾಡಿಕೊಂಡರು. ಇಬ್ಬರ ದೇಹಬಲದಿಂದ ಎರಡು ಗಡೆಗಳೂ ಪುಡಿಯಾದವು. ಆಮೇಲೆ ಮುಷ್ಟಿಗಳಿಂದ ಗುದ್ದಿಕೊಂಡರು.

ಆಗ ಭೂಮಿಯು ನಡುಗಿತು. ಪರ್ವತಗಳು ಪುಡಿಯಾದವು. ಕುಲಪರ್ವತ ಗಳೂ ನಡುಗಿದವು. ಸಮಸ್ತ ಸಮುದ್ರಗಳೂ ಉಕ್ಕಿಬಂದವು. ಬ್ರಹ್ಮರುದ್ರಾದಿ ದೇವತೆಗಳೂ ಅಸುರರೂ ಆಕಾಶಮಾರ್ಗದಲ್ಲಿ ಬಂದರು. ದೇವತೆಗಳೆಲ್ಲರೂ ಭೀಮಸೇನದೇವರಿಗೆ ಜಯವಾಗಲಿ ಎಂದು ಅಪೇಕ್ಷಿಸುತ್ತಿದ್ದರು. ಅಸುರಾದಿಗಳು ಜರಾಸಂಧನಿಗೆ ಜಯವನ್ನು ಕೋರುತ್ತಿದ್ದರು. ಎಲ್ಲರೂ ನೋಡುತ್ತಿದ್ದರು. ಭೀಮಸೇನದೇವರು ಕ್ರಮದಿಂದ ತನ್ನ ಬಲವನ್ನು ವ್ಯಕ್ತಪಡಿಸುತ್ತಿದ್ದರು. ಬ್ರಹ್ಮದೇವರ ವರಕ್ಕೆ ಹದಿನೈದುದಿವಸ ಗೌರವವನ್ನು ಕೊಟ್ಟು ಯುದ್ಧಮಾಡಿ ಕೃಷ್ಣಪರಮಾತ್ಮನ ಆಜ್ಞೆಯಿಂದ ಭೀಮಸೇನದೇವರು ಶತ್ರುವನ್ನು ಸಂಹರಿಸಲಿಕ್ಕೆ ಅಭಿಪ್ರಾಯಪಟ್ಟರು. ಭೀಮಸೇನ ದೇವರು ಕೃಷ್ಣಪರಮಾತ್ಮನಿಗೆ ನಮಸ್ಕರಿಸಿ ಸಂತೋಷದಿಂದ ಅರ್ಜುನನನ್ನು ಆಲಿಂಗಿಸಿ, ಸಿಂಹವು ಆನೆಯನ್ನು ಹಿಡಿಯುವಂತೆ ಶತ್ರುವನ್ನು ಹಿಡಿದರು. ಅವರು ಜರಾಸಂಧನ ಬೆನ್ನಿನಲ್ಲಿ ತನ್ನ ಮೊಳಕಾಲನ್ನು ಇಟ್ಟು ಅವನ ಬೆನ್ನಿನ ಬುಡವನ್ನು ಮುರಿದರು. ಭೀಮಸೇನದೇವರು ತನ್ನ ಪರಾಕ್ರಮವನ್ನು ತೋರಿಸುವುದಕ್ಕಾಗಿ ಮರ್ಮಸ್ಥಳದಲ್ಲಿ ಬಡಿಯದೆ ಮರ್ಮವಲ್ಲದ ಸ್ಥಳದಲ್ಲಿಯೇ ಬಡಿದರು. ಕೊನೆಯ ಕಾಲದಲ್ಲಿ ಭೀಮಸೇನದೇವರು ಅವನ ದೇಹವನ್ನು ಹುಟ್ಟುವ

ಸಮಯದಲ್ಲಿ ಇದ್ದಂತೆ ಸೀಳಿದರು. ಜರಾಸಂಧನ ಶರೀರವನ್ನು ಸೀಳುವಾಗ ಬ್ರಹ್ಮಾಂಡವು ಒಡೆದು ಹೋದರೆ ಏನು ಶಬ್ದವುಂಟಾಗಬಹುದೋ ಅಂತಹ ಶಬ್ದವು ಉಂಟಾಯಿತು. ಆ ಶಬ್ದದಿಂದ ಮೂರುಲೋಕವೂ ಭಯವನ್ನು ಹೊಂದಿತು. ಭೀಮಸೇನದೇವರು ಶತ್ರುವಾದ ಜರಾಸಂಧನನ್ನು ಸಂಹರಿಸಿ ಆ ಶತ್ರುಸಂಹಾರರೂಪವಾದ ಪೂಜೆಯನ್ನು ಕೃಷ್ಣ ಪರಮಾತ್ಮನಿಗೆ ಸಮರ್ಪಿಸಿದರು. ಭೀಮಸೇನದೇವರು ಮಾಡುವ ಜರಾಸಂಹಾರ ರೂಪವಾದ ಪೂಜೆಯನ್ನು ಪ್ರತ್ಯಕ್ಷವಾಗಿ ಸ್ವೀಕರಿಸುವುದಕ್ಕಾಗಿಯೇ ಕೃಷ್ಣಪರಮಾತ್ಮನು ಅಲ್ಲಿಗೆ ಬಂದನು.

ಶ್ರೀಕೃಷ್ಣಪರಮಾತ್ಮನು ಭೀಮಸೇನದೇವರು ಮಾಡಿದ ಪೂಜೆಯನ್ನು ಸ್ವೀಕರಿಸಿ ಭೀಮಸೇನದೇವರನ್ನು ಗಟ್ಟಿಯಾಗಿ ಆಲಿಂಗಿಸಿದನು. ಭೀಮಸೇನದೇವರು ಅರ್ಜುನ ನಿಂದ ನಮಸ್ಕೃತರಾಗಿ ಕೃಷ್ಣಪರಮಾತ್ಮನನ್ನು ನಮಸ್ಕರಿಸಿದರು. ಈರೀತಿಯಾಗಿ ಶಿವಭಕ್ತಾಗ್ರೇಸರನಾದ ಜರಾಸಂಧನು ವೈಷ್ಣವಾಗ್ರೇಸರರಾದ ಭೀಮಸೇನದೇವರಿಂದ ಮೃತರಾದದ್ದನ್ನು ನೋಡಿ ಬ್ರಹ್ಮಾದಿದೇವತೆಗಳು ಸಂತೋಷವುಳ್ಳವರಾಗಿಯೂ ಅಸುರರು ದುಃಖವುಳ್ಳವರಾಗಿಯೂ ಹೊರಟುಹೋದರು. ಜರಾಸಂಧನ ಮಗನಾದ ಬುದ್ಧಿವಂತನಾದ ಸಹದೇವನು ಕೃಷ್ಣಭೀಮಾರ್ಜುನರನ್ನು ಮರೆಹೊಂದಿ ದನು. ಭೀಮಸೇನದೇವರಿಗೆ ರಥವನ್ನು ತನ್ನ ತಂಗಿಯನ್ನು ಕೊಟ್ಟನು. ಕೃಷ್ಣ ಪರಮಾತ್ಮನಿಗೆ ನಮಸ್ಕರಿಸಿದನು. ಆ ರಥವು ಪರಮಾತ್ಮನದ್ದು. ಅದನ್ನು ವಸುರಾಜನು ಇಂದ್ರದೇವರ ದ್ವಾರದಿಂದ ಪಡೆದಿದ್ದನು. ವಸುರಾಜನ ವಂಶದಲ್ಲಿ ಹುಟ್ಟಿದವನಾದ ಪ್ರಯುಕ್ತ ರಥವು ಜರಾಸಂಧನಿಗೆ ಲಭಿಸಿತ್ತು. ಅದನ್ನು ಜರಾಸಂಧನ ಮಗನಾದ ಸಹದೇವನು ಭೀಮಸೇನದೇವರಿಗೆ ಸಮರ್ಪಿಸಲು ಭೀಮಸೇನದೇವರು ಶ್ರೀಪರಮಾತ್ಮನ ಸಂಬಂಧಿಯಾದ ಆ ರಥವನ್ನು ಕೃಷ್ಣಪರಮಾತ್ಮನಿಗೇ ಸಮರ್ಪಿಸಿ ದರು.

ಕೃಷ್ಣಪರಮಾತ್ಮನು ಗರುಡದೇವರನ್ನು ಸ್ಮರಿಸಿದರು. ಆ ಗರುಡದೇವರು ಬಂದು ಧ್ವಜದಲ್ಲಿ ಕೂತುಕೊಂಡರು. ತರುವಾಯ ಕೃಷ್ಣಪರಮಾತ್ಮನು ಭೀಮಾರ್ಜುನರಿಂದ ಕೂಡಿಕೊಂಡು ರಥವನ್ನು ಏರಿದರು. ಭೀಮಸೇನದೇವರು ಜರಾಸಂಧನ ಮಗಳನ್ನು ತನ್ನ ತಮ್ಮನಾದ ಸಹದೇವನಿಗಾಗಿ ಅಂಗೀಕರಿಸಿದರು. ನಕುಲನಿಗೆ ಪೂರ್ವದಲ್ಲಿ ಶಲ್ಯನು ತನ್ನ ಮಗಳನ್ನು ಮದುವೆ ಮಾಡಿಕೊಟ್ಟಿದ್ದನು. ಅವಳೂ ಜರಾಸಂಧನ ಮಗಳೂ ಅಶ್ವಿನಿದೇವತೆಗಳ ಪತ್ನಿಯಾದ ಉಷಾಃ ಎನ್ನುವವಳೇ ಎರಡುರೂಪದಿಂದ ಹುಟ್ಟಿದ್ದು. ನಕುಲ ಸಹದೇವರು ಬೇರೆ ಮದುವೆಯಾದ ಮೇಲೆ ದ್ರೌಪದೀ

ದೇವಿಯರು ಅಣ್ಣಂದಿರ ಪತ್ನಿಯೆಂದೇ ಭಾವನಾ ಮಾಡಿದರು. ಜರಾಸಂಧನ ಮಗನು ಕೃಷ್ಣಾದಿಗಳಿಗೆ ರತ್ನಾದಿಗಳಿಂದ ಪೂಜಿಸಿ ಅವರ ಅನುಜ್ಞೆಯಿಂದ ತಂದೆಗೆ ಉತ್ತರಕ್ರಿಯೆಯನ್ನು ಮಾಡಿ ಅವರ ಆಜ್ಞೆಯಿಂದಲೇ, ಜರಾಸಂಧನು ಬಂಧನದಲ್ಲಿ ಇಟ್ಟಿದ್ದ ರಾಜರನ್ನೆಲ್ಲಾ ಬಿಡಿಸಿದನು. ಅವರೆಲ್ಲರೂ ಕೃಷ್ಣಪರಮಾತ್ಮನನ್ನು ಸ್ತೋತ್ರ ಮಾಡಿದರು. ಭೀಮಾರ್ಜುನರನ್ನು ಸ್ತೋತ್ರ ಮಾಡಿ ದರು. ಅವರೆಲ್ಲರೂ ಜರಾಸಂಧನ ಮಗನಿಂದ ಸತ್ಕೃತರಾಗಿ ಕೃಷ್ಣಪರಮಾತ್ಮನನ್ನು ಭೀಮಸೇನದೇವರನ್ನೂ ಚೆನ್ನಾಗಿ ಪ್ರಶಂಸಾಮಾಡಿ ತಮ್ಮ ಮನೆಗೆ ಹೋದರು.

ಭಗವದ್ವೇಷಿಯಾದ ಜರಾಸಂಧನು ಅಂಧಂತಮಸ್ಸಿಗೆ ಹೋದನು. ಕೃಷ್ಣ ಪರಮತ್ಮನೂ ಭೀಮಾರ್ಜುನರೂ ಒಂದೇ ರಥದಲ್ಲಿ ಕೂತುಕೊಂಡು ಧರ್ಮರಾಜ ನಿದ್ದಲ್ಲಿಗೆ ಬಂದರು. ಅವರ ಶಂಖಧ್ವನಿಯನ್ನು ಕೇಳಿಯೇ ಧರ್ಮರಾಜನು ಸಂತೋಷವನ್ನು ಹೊಂದಿದನು.



## ರಾಜಸೂಯಯಾಗ ದಿಗ್ವಿಜಯ [1]

ತರುವಾಯ ವೇದವ್ಯಾಸದೇವರು ಪಾಂಡವರಿದ್ದಲ್ಲಿಗೆ ಬಂದು ರಾಜಸೂಯ ಸಹಿತವಾದ ಅಶ್ವಮೇಧಯಾಗವನ್ನು ಮಾಡುವಂತೆ ಆಜ್ಞಾಪಿಸಿದರು. ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಿಸುವಂತೆ ಹೇಳಿದರು. ಅಂತಹ ಯಾಗವನ್ನು ಬ್ರಹ್ಮದೇವರು ಹೊರತು ಮತ್ತೆ ಯಾರೂ ಮಾಡಿರಲಿಲ್ಲ. ಆಗ ಯಾಗವನ್ನು ಮಾಡುವವರು ಬೇರೆ ಗುಣಗಳಿಂದ ಬ್ರಹ್ಮದೇವರಿಗೆ ಸಮಾನರಾಗಿದ್ದರೆ ಬ್ರಹ್ಮಪದವಿಯನ್ನೇ ಹೊಂದುವರು. ಭೀಮಸೇನದೇವರಿಗೆ ಆ ಯಾಗದ ಅಧಿಕವಾದ ಫಲವನ್ನು ಕೊಡುವುದಕ್ಕಾಗಿ ಆ ಯಾಗವನ್ನು ಮಾಡಲಿಕ್ಕೆ ಆಜ್ಞಾಪಿಸಿದರು. ಒಂದು ಕರ್ಮಕ್ಕೆ ಮುಖ್ಯವಾಗಿ ಯಾರು ಕಾರಣರೋ ಅವರೇ ಆ ಕರ್ಮದ ಪೂರ್ಣವಾದ ಫಲವನ್ನು ಹೊಂದುವರು. ಇತರರು ಅಲ್ಪವಾದ ಫಲವನ್ನು ಹೊಂದುವರು. ಇದು ಶ್ರೀಭಗವಂತನನ್ನು ಹೊರತು ಇತರರ ವಿಷಯವಾಗಿ ನಿರ್ಣಯವು. ಭಗವಂತನಿಗೆ ಈ ನಿಯಮವಿಲ್ಲ, ಅವನಿಗೆ ಕರ್ಮದ ಫಲವಿಲ್ಲ. ದೇವತೆಗಳು ಇನ್ನೊಬ್ಬರು ಮಾಡುವ ಪಾಪಕರ್ಮಕ್ಕೆ ಕಾರಣರಾದರೂ ಪ್ರಾಯಃ ಅವರಿಗೆ ಅದರ ಫಲವಿಲ್ಲ.

1. ಮ.ತಾ.ನಿ. ಅ-21

ದೈತ್ಯರು ಇನ್ನೊಬ್ಬರು ಮಾಡುವ ಪುಣ್ಯದ ಭಾಗವುಳ್ಳವರಲ್ಲ. ಮನುಷ್ಯರು ಎರಡರ ಭಾಗವನ್ನು ಹೊಂದುವರು. ರಾಜಸೂಯಯಾಗಕ್ಕೆ ಭೀಮಸೇನದೇವರೇ ಜರಾಸಂಧನನ್ನು ಕೊಂದುದ್ದರಿಂದಲೂ ಕರ್ಣನನ್ನೂ ಕೀಚಕಾದಿಗಳನ್ನು ಇನ್ನೊಬ್ಬರಿಂದ ಜಯಿಸಲಿಕ್ಕೆ ಅಶಕ್ಯರಾದವರನ್ನು ಜಯಿಸಿದ ಕಾರಣ ಮುಖ್ಯಕಾರಣರು. ಅರ್ಜುನನು ಎರಡನೇ ಕಾರಣನು. ಮೂರನೆಯದಾಗಿ ಧರ್ಮರಾಜನು ಕಾರಣನು. ಆದುದರಿಂದ ಭೀಮಸೇನದೇವರಿಗೆ ಬ್ರಹ್ಮಪದವಿಯು ಬರುವುದಕ್ಕಾಗಿ ಆ ಯಾಗವನ್ನು ಮಾಡುವಂತೆ ಆಜ್ಞಾಪಿಸಿ ಆಮೇಲೆ ದಿಗ್ವಿಜಯವನ್ನು ಮಾಡಿಕೊಂಡು ಬರುವಂತೆ ಆಜ್ಞಾಪಿಸಿದರು.

ಆಗ ಅರ್ಜುನನು ತನಗೆ ಉತ್ತಮವಾದ ಧ್ವಜವೂ ರಥವೂ ಧನುಸ್ಸೂ ಇರುವ ಕಾರಣ ತಾನೊಬ್ಬನೇ ದಿಗ್ವಿಜಯವನ್ನು ಮಾಡಿಕೊಂಡು ಬರುವೆನೆಂದನು. ಅದಕ್ಕೆ ವೇದವ್ಯಾಸದೇವರು 'ಸತ್ಯವು ನಿನಗೆ ಬೇಕಾದ ಯುದ್ಧದ ಸಾಮಗ್ರಿಗಳು ಇವೆ. ಪರಾಕ್ರಮವಿದೆ. ಆದರೂ ಕೀಚಕಾದಿಗಳು ಭೀಮನನ್ನು ಹೊರತು ನಿನ್ನ ಅಧೀನರಾಗಲಾರರು. ಕರ್ಣನೂ ನಿನ್ನ ವಶನಾಗಲಾರನು. ನಿನಗೆ ಕರ್ಣನಿಗಿಂತ ಹೆಚ್ಚಿಗೆ ಬಲವಿದೆ. ಆದರೂ ಅವನು ಈಗ ಸ್ಪರ್ಧೆಯಿಂದ ಕಪ್ಪವನ್ನು ಕೊಡಲಾರನು. ಈಗ ಕವಚ ಕುಂಡಲವಿರುವುದರಿಂದ ಅವನನ್ನು ಕೊಲ್ಲಲಿಕ್ಕೂ ನಿನ್ನಿಂದ ಆಗಲಾರದು. ಆದುದರಿಂದ ಅವರೆಲ್ಲರೂ ಇರುವ ಪೂರ್ವದಿಕ್ಕಿಗೆ ಭೀಮನು ದ್ವಿಗಿಜಯಕ್ಕೆ ಹೋಗಲಿ. ಕರ್ಣನೂ ಎಷ್ಟೋ ಬಾರಿ ಭೀಮನಿಂದ ಸೋತುಹೋಗಿದ್ದಾನೆ. ಈಗಲೂ ತನ್ನನ್ನು ಬದುಕಿರುವಂತೆ ಬಂಧನದಲ್ಲಿ ಇಡಬಹುದೆಂದು ಭಯದಿಂದ ಕರ್ಣನು ಭೀಮನಿಗೆ ನಿಶ್ಚಯವಾಗಿಯೂ ಕಪ್ಪವನ್ನು ಕೊಡುವನು. ರುದ್ರದೇವರ ವರದಿಂದ ಪರಾಜಯ ಶೂನ್ಯರಾದ ಕೀಚಕಪೌಂಡ್ರಕವಾಸುದೇವರೂ ಭೀಮನ ವಶರಾಗುವರು. ಹಾಗೆಯೇ ಶಿಶುಪಾಲನೂ ವಶನಾಗುವನು. ಜರಾಸಂಧನನ್ನು ಸಂಹರಿಸಿದ ಕಾರಣ ಎಲ್ಲರಿಗೂ ತಮ್ಮನ್ನು ಬದುಕಿರುವಂತೆ ಬಲಾತ್ಕಾರದಿಂದ ಬಂಧನದಲ್ಲಿ ಇಡಬಹುದೆಂದು ಭಯವುಂಟಾಗಿದೆ. ಆದುದರಿಂದ ಅವರೆಲ್ಲರೂ ಯುದ್ಧ ಮಾಡಿ ಸೋತು ಹೋಗಿಯೋ ಅಥವಾ ಯುದ್ಧ ಮಾಡದೆಯೋ ಕಪ್ಪವನ್ನು ಕೊಡುವರು. ನೀನು ಉತ್ತರದಿಕ್ಕಿಗೆ ಹೋಗು. ಸಪ್ತದ್ವೀಪಗಳಲ್ಲಿಯೂ ಇನ್ನು ಎಲ್ಲಾ ದಿಕ್ಕುಗಳಲ್ಲಿಯೂ ಇರುವ ದೈತ್ಯರನ್ನು ನಾಗರನ್ನು ಪಾತಾಳಾದಿಲೋಕಗಳಲ್ಲಿ ಇರುವವರನ್ನೂ ಜಯಿಸಿ ಇಲ್ಲಿಗೆ ಬಂದು ಸೇರು. ನಿನಗೆ ದಿವ್ಯವಾದ ರಥವಿದೆ. ದಿವ್ಯ ಅಸ್ತ್ರಗಳೂ ಧನುಸ್ಸೂ ಇದೆ. ನಿನ್ನಿಂದ ಜಯಿಸಲಿಕ್ಕೆ ಆಗಲಾರದ ಬಾಣಾಸುರನೇ

ಮೊದಲಾದ ಶಿವಭಕ್ತರ ಬಳಿಗೂ ಭೀಮನೇ ಹೋಗಲಿ. ನನ್ನ ಆಜ್ಞೆಯಿಂದ ದೇವತೆಗಳೂ ಕೂಡ ಕಪ್ಪವನ್ನು ಕೊಡುವರು. ಇನ್ನು ನಕುಲಸಹದೇವರು ಪಶ್ಚಿಮದಿಕ್ಕಿಗೂ ದಕ್ಷಿಣದಿಕ್ಕಿಗೂ ದಿಗ್ವಿಜಯಕ್ಕೆ ಹೋಗಲಿ. ಅವರಿಗೂ ಧರ್ಮವೂ ಕೀರ್ತಿಯೂ ಉಂಟಾಗಲಿ'' ಎಂದು ಹೇಳಿದರು. ಅದೇ ರೀತಿಯಾಗಿ ವೇದವ್ಯಾಸದೇವರ ಆಜ್ಞೆಯಂತೆ ಎಲ್ಲರೂ ದಿಗ್ವಿಜಯಕ್ಕೆ ಹೋದರು.

ಭೀಮಸೇನದೇವರು ರಾಜರನ್ನು ಜಯಿಸುತ್ತಾ ವಿರಾಟನಗರಕ್ಕೆ ಹೋದರು. ಅಲ್ಲಿ ಕೀಚಕನನ್ನು ಜಯಿಸಿ ಕಪ್ಪವನ್ನು ಪಡೆದರು. ಅಲ್ಲಿಂದ ಕ್ರಮದಿಂದ ರಾಜರನ್ನು ಜಯಿಸುತ್ತಾ ಚೇದಿದೇಶಕ್ಕೆ ಹೋದರು. ತಾಯಿಯ ಮಾತಿನಿಂದ ಭಯದಿಂದಲೂ ಶಿಶುಪಾಲನು ಅವರನ್ನು ಸತ್ಕರಿಸಿದನು. ಆ ಚಿಕ್ಕತಾಯಿಯ ಮನೆಯಲ್ಲಿ ಕೆಲವುದಿನ ಸುಖವಾಗಿ ಇದ್ದರು. ಆಮೇಲೆ ಅಲ್ಲಿಂದ ಬಹಳ ಕಪ್ಪವನ್ನು ತೆಗೆದುಕೊಂಡು ಪೂರ್ವದಿಕ್ಕಿಗೆ ಹೋದರು. ಕ್ರಮದಿಂದ ಎಲ್ಲಾ ರಾಜರನ್ನೂ ಜಯಿಸಿ ಮಹಾ ಬಲಿಷ್ಠನಾದ ಪೌಂಡ್ರಕವಾಸುದೇವನನ್ನು ಜಯಿಸಿ, ಕರ್ಣನನ್ನೂ ರಥರಹಿತನನ್ನಾಗಿ ಮಾಡಿ ಅವನಿಂದಲೂ ಕಪ್ಪವನ್ನು ಹೊಂದಿದರು. ಹಿಮವತ್ಪರ್ವತದ ಶಿಖರದಲ್ಲಿ ಕ್ರೀಡೆಗಾಗಿ ಯುದ್ಧಮಾಡಿದ ಇಂದ್ರಾದಿದೇವತೆಗಳನ್ನು ಜಯಿಸಿ ಸಂತುಷ್ಟರಾದ ಅವರಿಂದ ರತ್ನಸಮೂಹಗಳನ್ನು ಪಡೆದರು. ಬಾಹುಯುದ್ಧದಿಂದ ಶೇಷದೇವರನ್ನು, ಗರುಡದೇವರನ್ನು ಕ್ರೀಡೆಯಿಂದ ಜಯಿಸಿ ಅವರು ಸಂತೋಷದಿಂದ ಕೊಟ್ಟ ಆಭರಣಗಳನ್ನು ತೆಗೆದುಕೊಂಡರು. ಅವರಿಂದ ಪ್ರೇಮದಿಂದ ಆಲಿಂಗಿಸಲ್ಪಟ್ಟರು. ಸಮುದ್ರದಲ್ಲಿ ಈಜುತ್ತಾ ಬಾಣಾಸುರನ ಪಟ್ಟಣಕ್ಕೆ ಹೋದರು. ಅಲ್ಲಿ ಆನೆಯ ರೂಪದಿಂದ ಇದ್ದ ರುದ್ರದೇವರೊಡನೆ ಕ್ರೀಡೆಯಿಂದ ಯುದ್ಧಮಾಡಿ ಜಯಿಸಿದರು. ರುದ್ರದೇವರು ಸಂತೋಷಹೊಂದಿದರು. ತರುವಾಯ ರುದ್ರದೇವರು ದಿಗ್ವಿಜಯದ ವಿಸ್ತಾರವನ್ನು ಕೇಳಲು ಸಿಂಹ ಹುಲಿ ಇತ್ಯಾದಿಗಳ ರೂಪದಿಂದ ಬಂದ ಗರುಡಶೇಷ ಇಂದ್ರ ಇತ್ಯಾದಿ ದೇವತೆಗಳನ್ನು ತಾನು ಜಯಿಸಿದ ಪ್ರಕಾರವನ್ನು ಹೇಳಿದರು. ರುದ್ರದೇವರು ಎಲ್ಲವನ್ನು ಕೇಳಿ ಶ್ರೀಕೃಷ್ಣಪರಮಾತ್ಮನೇ ಯಾಗವನ್ನು ಮಾಡಿಸುವನು ಎಂದು ತಿಳಿದು, ಬಲಿಯ ಮಗನಾದ ಬಾಣಾಸುರನಿಂದ ರತ್ನಸಮೂಹಗಳನ್ನು ಕೊಡಿಸಿದರು. ಭೀಮಸೇನದೇವರು ಬಾಣಾಸುರನಿಂದ ರುದ್ರದೇವರು ಕೊಡಿಸಿದ ರತ್ನಸಮೂಹವನ್ನು ತೆಗೆದುಕೊಂಡು ತನ್ನ ಪಟ್ಟಣಕ್ಕೆ ಬಂದರು.

ಭೀಮಸೇನದೇವರು ತಾನು ತಂದ ಬಹಳವಾದ ಹಣವನ್ನು ವೇದವ್ಯಾಸ ದೇವರ ಮತ್ತು ಕೃಷ್ಣಪರಮಾತ್ಮನ ಮುಂದೆ ಇಟ್ಟು ನಮಸ್ಕಾರ ಮಾಡಿದರು.

ಭೀಮಸೇನದೇವರು ಅಣ್ಣನಾದ ಧರ್ಮರಾಜನಿಗೂ ನಮಸ್ಕರಿಸಿ ಧರ್ಮರಾಜನ ಮುಂಭಾಗದಲ್ಲಿ ಶ್ರೀಕೃಷ್ಣವೇದವ್ಯಾಸರೊಡನೆ ಸಂತೋಷದಿಂದ ದಿಗ್ವಿಜಯದ ವೃತ್ತಾಂತವನ್ನೆಲ್ಲಾ ತಿಳಿಸಿದರು. ಧರ್ಮರಾಜನೂ ಕೃಷ್ಣವೇದವ್ಯಾಸರೂ ವಿಜಯ ವಾರ್ತೆಯನ್ನು ಕೇಳಿ ಸಂತೋಷಪಟ್ಟು ಬಹುಮಾನಿಸಿದರು. ಭೀಮಸೇನದೇವರು ಶ್ರೀವೇದವ್ಯಾಸರ ಆಜ್ಞೆಯಿಂದ ಯಜ್ಞದ ಸಾಮಗ್ರಿಯನ್ನು ಸಿದ್ಧಪಡಿಸತೊಡಗಿದರು. ಶ್ರೀವೇದವ್ಯಾಸರು 'ಭೀಮ! ನೀನು ಎಲ್ಲರನ್ನೂ ಜಯಿಸಿದೆ. ಎಲ್ಲರನ್ನೂ ಜಯಿಸಿದರೆ ಮಾತ್ರ ಈ ಯಾಗವು ಪೂರ್ಣವಾಗುವುದು. ಇಲ್ಲದಿದ್ದರೆ ಪೂರ್ಣವಾಗಲಾರದು. ಪೂರ್ವದಲ್ಲಿ ಬ್ರಹ್ಮದೇವರು ಸರ್ವರನ್ನೂ ಜಯಿಸಿದರು. ಈಗ ನೀನು ಎಲ್ಲರನ್ನೂ ಜಯಿಸಿರುವಿ' ಎಂದು ಹೇಳಿ ಆಲಿಂಗನಮಾಡಿ ಯಜ್ಞಕ್ಕೆ ಬೇಕಾದ ಸಾಮಗ್ರಿಗಳನ್ನೆಲ್ಲಾ ಸಂಗ್ರಹಿಸಲಿಕ್ಕೆ ಹೇಳಿದರು.

ಆಗಲೇ ಅರ್ಜುನಾದಿಗಳೂ ಇತರ ದಿಕ್ಕುಗಳನ್ನೂ ಜಯಿಸಿ ಕಪ್ಪವನ್ನು ಹಿಡಿದುಕೊಂಡು ಬಂದರು. ಎಲ್ಲರೂ ರತ್ನಗಳ ರಾಶಿಗಳನ್ನೇ ಕಪ್ಪವಾಗಿ ತಂದರು. ಭೀಮಸೇನದೇವರು ತಂದ ರತ್ನಗಳ ರಾಶಿಯು ನೂರುಯೋಜನ ಎತ್ತರವಾಗಿತ್ತು. ಭೀಮಸೇನದೇವರು ಅರ್ಜುನನಿಂದ ಆಗದೆ ಇದ್ದವರ ಬಳಿಗೆ ಮಾತ್ರ ಹೋಗಿ ಕಪ್ಪವನ್ನು ತಂದ ಪ್ರಯುಕ್ತ ಅಷ್ಟೇ ಆಯಿತು. ಅರ್ಜುನನು ಉಳಿದ ಎಲ್ಲರ ಹತ್ತಿರಹೋಗಿ ಬೇರೆಬೇರೆ ದ್ವೀಪಗಳಿಗೂ ಹೋಗಿ ಜಯಿಸಿಕೊಂಡು ಬಂದ ಕಾರಣ ಅವನು ತಂದ ರತ್ನಗಳ ರಾಶಿಯು ನಾಲ್ಕು ನೂರು ಯೋಜನ ಎತ್ತರವಾಗಿತ್ತು. ನಕುಲನು ತಂದ ರತ್ನರಾಶಿಯು ಹತ್ತು ಯೋಜನ ಎತ್ತರ. ಸಹದೇವನು ತಂದ ರತ್ನ ರಾಶಿಯು ಮೂವತ್ತು ಯೋಜನ ಎತ್ತರವಾಗಿತ್ತು. ಇಂದ್ರಪ್ರಸ್ಥನಗರವು ವಿಶ್ವಕರ್ಮ ರಚಿತವಾದ ಕಾರಣ ಅಲ್ಲಿ ಸ್ವಲ್ಪ ಸ್ಥಳದಲ್ಲಿಯೂ ಅಷ್ಟು ರತ್ನರಾಶಿಗಳೂ ಅಡಗಿದವು. ತರುವಾಯ ಶ್ರೀವೇದವ್ಯಾಸದೇವರಿಂದ ಪ್ರೇರಿತವಾಗಿ ಆ ಯಜ್ಞವು ನಡೆಯಿತು.



# ರಾಜಸೂಯ ಅಗ್ರಪೂಜೆ [1]

ಸರ್ವವಿದ್ಯೆಗಳಲ್ಲಿ ಪಂಡಿತರಾದ ಮುನಿಗಳು ಋತ್ವಿಕ್ಕುಗಳು ಆಗಿ ವೇದವ್ಯಾಸದೇವರು ಹೇಳಿದ ವಿಧಾನದಿಂದ ಧರ್ಮರಾಜನನ್ನು ದೀಕ್ಷಿತನನ್ನಾಗಿ ಮಾಡಿದರು. ಜ್ಯೇಷ್ಠನಾದ ಕಾರಣ ಧರ್ಮರಾಜನಿಗೆ ಯಾಜಮಾನ್ಯವನ್ನು ಕೊಟ್ಟು ಭೀಮಸೇನದೇವರೇ ಮೊದಲಾದವರು ಧರ್ಮರಾಜನೊಟ್ಟಿಗೆ ಕೂತುಕೊಂಡರು. ಬ್ರಹ್ಮಾಣೀ ಪದವಿಗೆ ಯೋಗ್ಯರಾದ ಕಾರಣ ದ್ರೌಪದೀದೇವಿಯರೊಬ್ಬರೇ ಯಜ್ಞಪತ್ನಿಯಾದರು. ಆ ಪದವಿಯನ್ನು ಹೊಂದಲಿಕ್ಕೆ ಯೋಗ್ಯರಾಗದ ಕಾರಣ ಇತರ ಪಾಂಡವರ ಪತ್ನಿಯರು ವೇದವ್ಯಾಸದೇವರ ಆಜ್ಞೆಯಿಂದಲೇ ಒಟ್ಟಿಗೆ ಕೂತುಕೊಳ್ಳಲಿಲ್ಲ. ರಾಜಸೂಯಯಾಗ ನಡೆಯುವ ಸ್ಥಳದಲ್ಲಿ ಸ್ಥಳವೂ ಕೂಡ ಬಂಗಾರ ರತ್ನಮಯವಾಗಿತ್ತು. ಪಾತ್ರೆ ಮೊದಲಾದವನ್ನು ಏನು ಹೇಳಬೇಕು? ಪಾಂಡವರು ದಿಗ್ವಿಜಯ ಸಮಯದಲ್ಲಿ ಕೂಗಿರುವ (ಕರೆದಿರುವ) ಹದಿನಾಲ್ಕು ಲೋಕದ ಜನರೂ ಆ ಯಾಗಕ್ಕೆ ಬಂದಿದ್ದರು. ಬ್ರಹ್ಮ ರುದ್ರ ಇಂದ್ರ ಇತ್ಯಾದಿ ದೇವತೆಗಳೂ ಬಂದಿದ್ದರು. ಭೀಷ್ಮಾಚಾರ್ಯರು ದ್ರೋಣಾಚಾರ್ಯರು ವಿದುರನೂ ಧೃತರಾಷ್ಟ್ರನೂ ಅವನ ಮಕ್ಕಳೂ ಹೆಂಗಸರೂ ಎಲ್ಲರೂ ಬಂದಿದ್ದರು. ಬಾಹ್ಲೀಕ ರಾಜನೂ ಅವನ ಮಕ್ಕಳೂ ಬಲರಾಮದೇವರೇ ಮೊದಲಾದ ಸಮಸ್ತ ಯಾದವರೂ ರುಕ್ಮಿಣೀ ಸತ್ಯಭಾಮಾದೇವಿಯರೇ ಮೊದಲಾದ ದೇವರ ಪತ್ನಿಯರೂ ಬಂದಿದ್ದರು.

ಈರೀತಿಯಾಗಿ ಎಲ್ಲಾ ಜನರೂ ಸೇರಿರುವ ಆ ರಾಜಸೂಯಯಾಗದ ಸಭೆಯಲ್ಲಿ ತತ್ವನಿರ್ಣಯ ಕಥೆಗಳೂ ನಡೆಯುತ್ತಿದ್ದವು. ಶ್ರೀವೇದವ್ಯಾಸದೇವರೇ ಪ್ರಶ್ನೆಗಳನ್ನು ಕೇಳುತ್ತಿದ್ದರು. 'ಶ್ರೀಭಗವಂತನೇ ಸರ್ವೋತ್ತಮನು. ಅವನಿಂದ ಉತ್ತಮರೂ ಅವನಿಗೆ ಸಮಾನರೂ ಇರುವುದಿಲ್ಲ' ಎಂದು ತತ್ವನಿರ್ಣಯವು ಪರಶುರಾಮದೇವರು ವೇದವ್ಯಾಸದೇವರೂ ಕೇಳುವಂತೆ ನಡೆಯುತ್ತಿತ್ತು. ಬಂದ ಜನರೆಲ್ಲರೂ ಅದನ್ನು ಕೇಳಿ ಸಂತೋಷಪಡುತ್ತಿದ್ದರು. ಆಗ ಧರ್ಮರಾಜನು ಭೀಷ್ಮಾಚಾರ್ಯರೊಡನೆ 'ಪಿತಾಮಹರೇ! ಈ ಸಭೆಯಲ್ಲಿ ಬ್ರಹ್ಮರುದ್ರಾದಿ ದೇವತೆಗಳೂ ಎಲ್ಲಾ ರಾಜರೂ ಇದ್ದಾರೆ. ಇವರಲ್ಲಿ ಯಾರು ಅಗ್ರಪೂಜೆಗೆ ಅರ್ಹರೆಂಬುದನ್ನು ತಿಳಿಸಬೇಕು' ಎಂದು ಕೇಳಿದನು. ಆಗ ಭೀಷ್ಮಾಚಾರ್ಯರು ಕೃಷ್ಣಪರಮಾತ್ಮನೇ ಅಗ್ರಪೂಜೆಗೆ ಅರ್ಹನೆಂದು ತಿಳಿಸಿದರು. ಧರ್ಮರಾಜನಿಗೆ 'ಕೃಷ್ಣಪರಮಾತ್ಮನು ಸರ್ವೋತ್ತಮನು. ಅಗ್ರಪೂಜೆಗೆ ಅರ್ಹನು' ಎಂದು ಚೆನ್ನಾಗಿ ತಿಳಿಯುವುದು.

---

1. ಮ.ತಾ.ನಿ. ಅ-21

ಆದರೂ ಎಲ್ಲಾ ರಾಜರ ಸಂಶಯವನ್ನು ಪರಿಹರಿಸುವುದಕ್ಕಾಗಿ ಭೀಷ್ಮಾಚಾರ್ಯರ ಹತ್ತಿರ ಕೇಳಿದನು. ಬ್ರಹ್ಮಾದಿದೇವತೆಗಳೂ ಸೇರಿ ನಾರಾಯಣನೇ ಸರ್ವೋತ್ತಮನು ಎಂದು ವಿಚಾರ ಮಾಡಿ ನಿರ್ಣಯಮಾಡಿದರೂ ರಾಜರು ಕೃಷ್ಣಪರಮಾತ್ಮನನ್ನು ನಾರಾಯಣನೆಂದು ತಿಳಿದುಕೊಳ್ಳದೆ ಒಬ್ಬ ಮನುಷ್ಯನೆಂದು ತಿಳಿದುಕೊಂಡಿದ್ದರು. ಆದುದರಿಂದ ಶ್ರೀಕೃಷ್ಣನು ನಾರಾಯಣನೇ ಎಂದು ಅವರಿಗೆ ತಿಳಿಸುವುದಕ್ಕಾಗಿ ಧರ್ಮರಾಜನು ಭೀಷ್ಮಾಚಾರ್ಯರಲ್ಲಿ ಪ್ರಶ್ನೆ ಮಾಡಿದನು. ಭೀಷ್ಮಾಚಾರ್ಯರ ಹತ್ತಿರ ಯಾಕೆ ಕೇಳಿದನೆಂದರೆ ಅಲ್ಲಿ ಬ್ರಹ್ಮಾದಿದೇವತೆಗಳು ಬಂದಿದ್ದರೂ ಅವರು ರಾಜರಿಗೆಲ್ಲಾ ಮನುಷ್ಯರಂತೆಯೇ ಕಾಣಿಸುತ್ತಿದ್ದರು. ಮುನಿಗಳಲ್ಲಿಯೂ ರಾಜರಿಗೆ ಹೆಚ್ಚು ಪರಿಚಯವಿಲ್ಲ. ಆದುದರಿಂದ ಅವರೆಲ್ಲರೂ ಹೇಳಿದ ಮಾತಿನಲ್ಲಿ ರಾಜರಿಗೆಲ್ಲರಿಗೂ ವಿಶ್ವಾಸವುಂಟಾಗಲಾರದು. ಭೀಷ್ಮಾಚಾರ್ಯರನ್ನು ಮಾತ್ರ ಎಲ್ಲಾ ರಾಜರೂ ಸರ್ವಶಾಸ್ತ್ರಗಳಲ್ಲಿಯೂ ಪಂಡಿತರೆಂದು ತಿಳಿದುಕೊಂಡಿದ್ದರು. ಅವರ ಮಾತಿನಲ್ಲಿ ಎಲ್ಲಾ ರಾಜರಿಗೂ ನಂಬಿಕೆಯಿರುವುದು. ಆ ಕಾರಣದಿಂದಲೂ ವಂಶದಲ್ಲಿ ದೊಡ್ಡವರಾದ ಕಾರಣದಿಂದಲೂ ಭೀಷ್ಮಾಚಾರ್ಯರೊಡನೆ ಕೇಳಿದನು. ಯದ್ಯಪಿ ಭೀಷ್ಮಾಚಾರ್ಯರು ವೇದವ್ಯಾಸದೇವರಿಗೆ ಅಥವಾ ಪರಶುರಾಮದೇವರಿಗೆ ಅಗ್ರಪೂಜೆಯನ್ನು ಕೊಡಲಿಕ್ಕೆ ಹೇಳಬಹುದಿತ್ತು. ಕೃಷ್ಣಪರಮಾತ್ಮನಿಗೇ ಹೇಳಬೇಕಾಗಿದ್ದಿಲ್ಲ. ಏಕೆಂದರೆ ಪರಮಾತ್ಮನ ರೂಪಗಳಿಗೆ ಪರಸ್ಪರ ಭೇದವಿರುವುದಿಲ್ಲ. ಆದರೂ ಪರಶುರಾಮದೇವರಿಗೋ ವೇದವ್ಯಾಸ ದೇವರಿಗೂ ಅಗ್ರಪೂಜೆಯನ್ನು ಮಾಡಿದ್ದಾದರೆ ಅವರ್‍ಯಾರೂ ಬ್ರಾಹ್ಮಣರೆಂಬ ಭಾವನೆಯಿಂದ ಯಾವ ರಾಜರೂ ವಿರೋಧ ಮಾಡಲಾರರು. ಬ್ರಾಹ್ಮಣ ಜಾತಿಯವರಾದ ಕಾರಣವೇ ಮೊದಲು ಪೂಜೆಯನ್ನು ಮಾಡುವುದು ಉಚಿತ ಎಂದು ತಿಳಿದುಕೊಳ್ಳುವರು. ಮಾತ್ರವಲ್ಲದೆ ಅವರಿಬ್ಬರಲ್ಲಿಯೂ ರಾಜರಿಗೆ ಅಷ್ಟು ವಿರೋಧವೂ ಇರುವುದಿಲ್ಲ. ಕೃಷ್ಣಪರಮಾತ್ಮನಿಗೆ ಅಗ್ರಪೂಜೆಯನ್ನು ಕೊಟ್ಟು ಅದನ್ನು ನೋಡಿ ರಾಜರೆಲ್ಲರೂ ವಿವಾದ ಮಾಡಿದರೇ ಶ್ರೀಕೃಷ್ಣಪರಮಾತ್ಮನ ಪ್ರಸಿದ್ಧಿಯು ಅಧಿಕವಾಗುವುದು. ಅದಕ್ಕಾಗಿ ಕೃಷ್ಣಪರಮಾತ್ಮನಿಗೇನೇ ಅಗ್ರಪೂಜೆಯನ್ನು ಮಾಡ ಬೇಕೆಂದು ಭೀಷ್ಮಾಚಾರ್ಯರು ಯೋಚನೆ ಮಾಡಿ ಹೇಳಿದರು.

ತರುವಾಯ ಎಲ್ಲರ ಮುಂಭಾಗದಲ್ಲಿ ಪಾಂಡವರು ಕೃಷ್ಣಪರಮಾತ್ಮನಿಗೆ ಅಗ್ರಪೂಜೆಯನ್ನು ಮಾಡಿದರು. ಕೃಷ್ಣಪರಮಾತ್ಮನಿಂದ ಅಭಿನ್ನರಾದ ವ್ಯಾಸ ಪರಶುರಾಮರಿಗೆ ಆಮೇಲೆ ಪೂಜೆಯನ್ನು ಮಾಡಿದನು. ಆಮೇಲೆ ಇತರರನ್ನು ಅವರವರ ಯೋಗ್ಯತೆಯನ್ನು ಅನುಸರಿಸಿ ಪೂಜಿಸಿದರು.

# ಶಿಶುಪಾಲವಧ [1]

ಶ್ರೀಕೃಷ್ಣಪರಮಾತ್ಮನಿಗೆ ಅಗ್ರಪೂಜೆಯನ್ನು ಮಾಡಲು ಶಿಶುಪಾಲನು ಕೃಷ್ಣಪರಮಾತ್ಮನಿಗೆ ನಾನಾವಿಧವಾಗಿ ನಿಂದಾಮಾಡಿದನು. 'ಕಾಲವನ್ನು ಮೀರಲಿಕ್ಕೆ ಆಗುವುದಿಲ್ಲ ಎಂದು ಜನರು ಹೇಳುವ ಮಾತು ಸತ್ಯವಾದದ್ದೇ ಇಲ್ಲದಿದ್ದರೆ ವಯಸ್ಸಾದ ನಿಮ್ಮೆಲ್ಲರ ಬುದ್ಧಿಯು ಹೀಗೆ ಕೆಟ್ಟುಹೋಗಬೇಕೇ? ನೀವೆಲ್ಲರೂ ಸತ್ಪಾತ್ರರನ್ನು ತಿಳಿದವರಲ್ಲಿ ಶ್ರೇಷ್ಠರು. ಅಜ್ಞಾನಿಗಳ ಮಾತನ್ನು ಕೇಳಬಾರದು. ಕೃಷ್ಣನು ಯಾವ ವಿಷಯದಲ್ಲಿ ಅಗ್ರಪೂಜೆಗೆ ಅರ್ಹನಾಗಿರುವನು? ತಪಸ್ವಿಗಳಾದ ವಿದ್ಯಾವಂತರಾದ ವ್ರತಗಳನ್ನು ಮಾಡಿದವರಾದ ಜ್ಞಾನದಿಂದ ದೋಷರಹಿತರಾದ ಉತ್ತಮ ಋಷಿಗಳನ್ನೂ ಪೂಜ್ಯರಾದ ಲೋಕಪಾಲಕರನ್ನೂ ಬಿಟ್ಟು ಕುಲಗೆಡುಕನಾದ ಈ ಗೋಪಾಲನು ಹೇಗೆ ಪೂಜೆಗೆ ಅರ್ಹನಾಗುವನು? ವರ್ಣಾಶ್ರಮ ಧರ್ಮರಹಿತನಾದ ಒಳ್ಳೇ ವಂಶದಲ್ಲಿ ಹುಟ್ಟದಿರುವ ಸರ್ವಧರ್ಮರಹಿತನಾದ ಇಚ್ಛಾನುಸಾರವಾಗಿ ಇರುವವನಾದ ಗುಣಹೀನನಾದ ಇವನು ಹೇಗೆ ಅಗ್ರಪೂಜೆಗೆ ಅರ್ಹನಾಗುವನು. ಇವರ ವಂಶವು ಯಯಾತಿರಾಜನಿಂದ ಶಪಿಸಲ್ಪಟ್ಟಿದೆ. ಸಜ್ಜನರಿಂದ ನಿಂದಿತವಾಗಿರುವುದು. ವ್ಯರ್ಥವಾಗಿ ಮದ್ಯಪಾನ ಮಾಡುವ ವಂಶವಿದು. ಹೇಗೆ ಅಗ್ರಪೂಜೆಗೆ ಅರ್ಹವಾಗುವುದು? ಬ್ರಹ್ಮತೇಜಸ್ಸಿನಿಂದ ಹೀನರಾದ ಇವರು ಬ್ರಹ್ಮರ್ಷಿಗಳಿಂದ ಸೇವಿತಗಳಾದ ದೇಶಗಳನ್ನು ಬಿಟ್ಟು ಸಮುದ್ರದ ಮಧ್ಯದಲ್ಲಿ ಇದ್ದುಕೊಂಡು ಕಳ್ಳರಂತೆ ಬಂದು ಜನರನ್ನು ಪೀಡಿಸುತ್ತಿರುವರು' ಇತ್ಯಾದಿ ರೀತಿಯಿಂದ ಅನೇಕವಾಗಿ ಭಗವಂತನ್ನು ನಿಂದಿಸಿದನು.

ಆ ಭಗವಂತನ ನಿಂದೆಯನ್ನು ಕೇಳಿ ಸಭೆಯಲ್ಲಿ ಕೂತಿದ್ದವರೆಲ್ಲರೂ ಕಿವಿಯನ್ನು ಮುಚ್ಚಿಕೊಂಡು ಶಿಶುಪಾಲನನ್ನು ಶಪಿಸುತ್ತಾ ಎದ್ದು ಹೊರಟುಹೋದರು. ಆ ನಿಂದಾವಚನವನ್ನು ಕೇಳಿ ಭೀಮಸೇನದೇವರು ಅತ್ಯಂತ ಕೋಪವುಳ್ಳವರಾಗಿ ಶಿಶುಪಾಲನನ್ನು ಕೊಂದು ಹಾಕುವೆನೆಂದು ಹೊರಟುಹೋದರು. ದೂರದಲ್ಲಿ ಯಾದರೂ ಯಾರು ಭಗವಂತನ ನಿಂದೆಯನ್ನು ಮಾಡುವರೋ ಅವರ ನಾಲಿಗೆಯನ್ನು ಕತ್ತರಿಸುವೆನೆಂದು ಭೀಮಸೇನದೇವರ ಪ್ರತಿಜ್ಞೆಯು. ಆದುದರಿಂದ ಎದ್ದು ಹೋದರು. ಆಗ ಭೀಷ್ಮಾಚಾರ್ಯರು ಪೂರ್ವರು ಜಯವಿಜಯರೊಡನೆ ನಿಮ್ಮನ್ನು ಮೂರು ಜನ್ಮಗಳಲ್ಲಿಯೂ ನಾನೇ ಕೊಲ್ಲುವೆನೆಂದು ಹೇಳಿರುವ ಮಾತನ್ನು

---

1. ಮ.ತಾ.ನಿ. ಅ-21

ತಿಳಿಸಿ ಹಿಡಿದು ನಿಲ್ಲಿಸಿದರು ಭೀಮಸೇನದೇವರು ಪರಮಾತ್ಮನ ಇಷ್ಟವನ್ನು ತಿಳಿದವರಾದರೂ ಭಗವಂತನನ್ನು ಒಬ್ಬನು ನಿಂದಿಸುತ್ತಿರುವಾಗ ಸುಮ್ಮನೆ ಇರುವುದು ಧರ್ಮವಲ್ಲವೆಂದು ಹೀಗೆ ಎದ್ದು ಹೋದರು. ಆಮೇಲೆ ಇಷ್ಟೇ ಸಾಕೆಂದು ನಿಂತುಬಿಟ್ಟರು. ದೇವತಾಪಕ್ಷದವರಿಗೆಲ್ಲಾ ಭಗವಂತನಿಗೆ ಆದ ಅಗ್ರಪೂಜೆಯನ್ನು ನೋಡಿ ಸಂತೋಷವುಂಟಾಯಿತು. ಮನುಷ್ಯರಾದವರು ಉದಾಸೀನರಾಗಿ ಇದ್ದುಬಿಟ್ಟರು. ಅಸುರರಾದ ದುರ್ಯೋಧನಾದಿಗಳು ಮನಸ್ಸಿನಲ್ಲೇ ದುಃಖವನ್ನು ಹೊಂದಿದರು.

ಭೀಷ್ಮಾಚಾರ್ಯರು ಭೀಮಸೇನದೇವರೊಡನೆ ಕೃಷ್ಣಪರಮಾತ್ಮನ ಅನೇಕ ಮಹಿಮೆಗಳನ್ನು ಹೇಳಿ ಸ್ತೋತ್ರ ಮಾಡಿ 'ಈ ಶಿಶುಪಾಲನು ಚೇದಿರಾಜನಿಗೆ ಮಗನಾಗಿ ಹುಟ್ಟಿದನು. ಇವನಿಗೆ ಹುಟ್ಟುವಾಗ ಮೂರು ಕಣ್ಣುಗಳೂ ನಾಲ್ಕು ಕೈಗಳೂ ಇದ್ದವು. ಇವನು ಹುಟ್ಟಿದ ಕೂಡಲೇ ಕತ್ತೆಯು ಕೂಗಿದಂತೆ ಕೂಗಿದನು. ಇದರಿಂದ ಇವನ ತಂದೆತಾಯಿಗಳೂ ಬಂಧುಗಳೂ ತುಂಬಾ ಭಯವನ್ನು ದುಃಖವನ್ನೂ ಹೊಂದಿದರು. ಈ ಮಗುವಿನ ವಿಕಾರವನ್ನು ನೋಡಿ ಮಗುವನ್ನು ಬಿಟ್ಟುಬಿಡುವುದೆಂದು ಯೋಚನೆ ಮಾಡಿದರು. ಇವನ ತಂದೆತಾಯಿಗಳೂ ಪುರೋಹಿತರೂ ಮಂತ್ರಿಗಳೂ ಯೋಚನೆ ಮಾಡುತ್ತಿರಲು 'ರಾಜನೇ! ನಿನ್ನ ಈ ಮಗನು ಬಲಾಧಿಕನಾಗಿರುವನು. ಆದುದರಿಂದ ನೀನು ಭಯಪಡದೆ ರಕ್ಷಣೆ ಮಾಡು. ನೀನು ಈ ಮಗುವನ್ನು ಕೊಲ್ಲಲಿಕ್ಕೆ ಆಗಲಾರದು. ಈಗ ಮಗುವಿಗೆ ಮೃತ್ಯುಕಾಲವೂ ಬಂದಿಲ್ಲ. ಇವನನ್ನು ಶಸ್ತ್ರದಿಂದ ಕೊಲ್ಲುವವನು ಹುಟ್ಟಿರುವನು' ಎಂದು ಅಶರೀರವಾಣಿಯು ಕೇಳಿಸಿತು. ಈ ಮಾತನ್ನು ಕೇಳಿ ಇವನ ತಾಯಿಯು ಪುತ್ರಸ್ನೇಹವುಳ್ಳವರಾಗಿ 'ನನ್ನ ಮಗುವಿನ ವಿಷಯವಾಗಿ ಈ ಮಾತನ್ನು ಆಡಿದವರು ಯಾರೋ ಅವರಿಗೆ ನಾನು ಕೈಮುಗಿಯುವೆನು. ಅವರು ದೇವತೆಯೋ ಅಥವಾ ಇನ್ನು ಇತರರೋ ಯಾರೇ ಆಗಲಿ ನನ್ನ ಮಗುವಿಗೆ ಯಾರು ಸಂಹಾರಕರೆಂದು ಹೇಳಬೇಕು' ಎಂದು ಕೇಳಿಕೊಂಡಳು. ಆಗ 'ಯಾರು ಈ ಮಗುವನ್ನು ತೊಡೆಯಲ್ಲಿ ಇಟ್ಟುಕೊಳ್ಳುವಾಗ ಇದರ ಹೆಚ್ಚಾದ ಎರಡು ಕೈಗಳು ಬಿದ್ದು ಹೋಗುವುವೋ ಹಣೆಯಲ್ಲಿರುವ ಮೂರನೇ ಕಣ್ಣು ಯಾರನ್ನು ನೋಡಿ ಮರೆಯಾಗಿ ಹೋಗುತ್ತದೋ ಅವನೇ ಈ ಮಗುವಿಗೆ ಸಂಹಾಕರನು' ಎಂದು ಪುನಃ ಅಶರೀರವಾಣಿಯಾಯಿತು.

ತರುವಾಯ ಮಗುವಿಗೆ ನಾಲ್ಕು ಕೈಗಳೆಂದು ಮೂರು ಕಣ್ಣುಗಳೆಂದೂ ಕೇಳಿ ಭೂಮಿಯಲ್ಲಿರುವ ರಾಜರೆಲ್ಲರೂ ಮಗುವನ್ನು ನೋಡಲಿಕ್ಕೆ ಬಂದರು. ಶಿಶುಪಾಲನ

ತಂದೆಯು ಬಂದವರನ್ನೆಲ್ಲಾ ಸತ್ಕರಿಸಿ ಒಬ್ಬೊಬ್ಬರ ತೊಡೆಯಲ್ಲಿಯೇ ಮಗುವನ್ನು ಇಡುವವನಾದನು. ಈರೀತಿಯಾಗಿ ಸಾವಿರಾರು ರಾಜರ ತೊಡೆಯಲ್ಲಿ ಮಲಗಿಸಿದರು. ಮಗುವಿನ ನಾಲ್ಕು ಕೈಗಳೂ ಮೂರು ಕಣ್ಣುಗಳೂ ಹೋಗಲಿಲ್ಲ. ಈ ವರ್ತಮಾನವನ್ನು ಕೇಳಿ ದ್ವಾರಕಾಪಟ್ಟಣದಲ್ಲಿ ಇದ್ದ ಕೃಷ್ಣ ಬಲರಾಮದೇವರೂ ಬಂದರು. ಅವರು ತಮ್ಮ ಸೋದರ ಅತ್ತೆಯಾದ ಶಿಶುಪಾಲನ ತಾಯಿಯನ್ನು ನಮಸ್ಕರಿಸಿ ಶಿಶುಪಾಲನ ತಾಯಿಯು ಅತ್ಯಂತ ಪ್ರೀತಿಯಿಂದ ಸೋದರ ಅಳಿಯಂದಿರಾದ ಕೃಷ್ಣಬಲರಾಮರನನು ಉಪಚರಿಸಿ ಮಗುವನ್ನು ತಂದ ಕೃಷ್ಣಪರಮಾತ್ಮನ ತೊಡೆಯಲ್ಲಿ ಮಲಗಿಸಿದಳು. ಕೂಡಲೇ ಶಿಶುಪಾಲನ ಹೆಚ್ಚಾದ ಎರಡು ಕೈಗಳು ಬಿದ್ದುಹೋದವು. ಹಣೆಯಲ್ಲಿ ಇದ್ದ ಕಣ್ಣೂ ಮರೆಯಾಯಿತು. ಆಗ ಸೋದರ ಅತ್ತೆಯು ತುಂಬಾ ದುಃಖವುಳ್ಳವಳಾಗಿ ಭಯವುಳ್ಳವಳಾಗಿ 'ಕೃಷ್ಣ! ಭಯಗ್ರಸ್ತಳಾದ ನನಗೆ ನೀನು ವರವನ್ನು ಕೊಡಬೇಕು. ನೀನು ಭಯವುಳ್ಳವರನ್ನು ರಕ್ಷಿಸುವವನಷ್ಟೆ' ಎಂದು ಹೇಳಿದಳು.

ಆದಕ್ಕೆ ಶ್ರೀಕೃಷ್ಣನು—'ಅಮ್ಮಾ! ನೀನು ಭಯಪಡಬೇಡ. ನಿನ್ನ ಮಗನ ನೂರು ಅಪರಾಧಗಳನ್ನು ಕ್ಷಮಿಸುವೆನು' ಎಂದು ಹೇಳಿದನು. ಆದುದರಿಂದ ಶ್ರೀಭಗವಂತನು ಶಿಶುಪಾಲನ ನೂರು ಅಪರಾಧಗಳನ್ನು ಕ್ಷಮಿಸುತ್ತಿರುವನು. ಅವನೇ ಇವನನ್ನು ಸಂಹರಿಸುವನು' ಎಂದು ಹೇಳಿದರು.

ತರುವಾಯ ಶಿಶುಪಾಲನು ಭೀಷ್ಮಾಚಾರ್ಯರನ್ನು ನಿಂದಿಸಿ ಕೃಷ್ಣಪರಮಾತ್ಮನನ್ನು ಯುದ್ಧಕ್ಕೆ ಕರೆದನು. ಅತಿಭಯಂಕರವಾದ ಯುದ್ಧವನ್ನು ಮಾಡಿದನು. ಶ್ರೀಭಗವಂತನು ಅವನ ಬಾಣಗಳನ್ನು ತಡೆದು ಚಕ್ರದಿಂದ ಅವನ ತಲೆಯನ್ನು ಕಡಿದುಹಾಕಿದನು. ಶಿಶುಪಾಲನ ದೇಹದಲ್ಲಿ ಇದ್ದ ಅಸುರನು ಅಂಧಂತಮಸ್ಸನ್ನು ಪ್ರವೇಶಿಸಿದನು. ಸಜ್ಜೀವನಾದ ಜಯನು ಪರಮಾತ್ಮನ ದೇಹವನ್ನು ಪ್ರವೇಶಿಸಿದನು.



ತಿಳಿಸಿ ಹಿಡಿದು ನಿಲ್ಲಿಸಿದರು ಭೀಮಸೇನದೇವರು ಪರಮಾತ್ಮನ ಇಷ್ಟವನ್ನು ತಿಳಿದವರಾದರೂ ಭಗವಂತನನ್ನು ಒಬ್ಬನು ನಿಂದಿಸುತ್ತಿರುವಾಗ ಸುಮ್ಮನೆ ಇರುವುದು ಧರ್ಮವಲ್ಲವೆಂದು ಹೀಗೆ ಎದ್ದು ಹೋದರು. ಆಮೇಲೆ ಇಷ್ಟೇ ಸಾಕೆಂದು ನಿಂತುಬಿಟ್ಟರು. ದೇವತಾಪಕ್ಷದವರಿಗೆಲ್ಲಾ ಭಗವಂತನಿಗೆ ಆದ ಅಗ್ರಪೂಜೆಯನ್ನು ನೋಡಿ ಸಂತೋಷವುಂಟಾಯಿತು. ಮನುಷ್ಯರಾದವರು ಉದಾಸೀನರಾಗಿ ಇದ್ದುಬಿಟ್ಟರು. ಅಸುರರಾದ ದುರ್ಯೋಧನಾದಿಗಳು ಮನಸ್ಸಿನಲ್ಲೇ ದುಃಖವನ್ನು ಹೊಂದಿದರು.

ಭೀಷ್ಮಾಚಾರ್ಯರು ಭೀಮಸೇನದೇವರೊಡನೆ ಕೃಷ್ಣಪರಮಾತ್ಮನ ಅನೇಕ ಮಹಿಮೆಗಳನ್ನು ಹೇಳಿ ಸ್ತೋತ್ರ ಮಾಡಿ 'ಈ ಶಿಶುಪಾಲನು ಚೇದಿರಾಜನಿಗೆ ಮಗನಾಗಿ ಹುಟ್ಟಿದನು. ಇವನಿಗೆ ಹುಟ್ಟುವಾಗ ಮೂರು ಕಣ್ಣುಗಳೂ ನಾಲ್ಕು ಕೈಗಳೂ ಇದ್ದವು. ಇವನು ಹುಟ್ಟಿದ ಕೂಡಲೇ ಕತ್ತೆಯು ಕೂಗಿದಂತೆ ಕೂಗಿದನು. ಇದರಿಂದ ಇವನ ತಂದೆತಾಯಿಗಳೂ ಬಂಧುಗಳೂ ತುಂಬಾ ಭಯವನ್ನು ದುಃಖವನ್ನೂ ಹೊಂದಿದರು. ಈ ಮಗುವಿನ ವಿಕಾರವನ್ನು ನೋಡಿ ಮಗುವನ್ನು ಬಿಟ್ಟುಬಿಡುವುದೆಂದು ಯೋಚನೆ ಮಾಡಿದರು. ಇವನ ತಂದೆತಾಯಿಗಳೂ ಪುರೋಹಿತರೂ ಮಂತ್ರಿಗಳೂ ಯೋಚನೆ ಮಾಡುತ್ತಿರಲು 'ರಾಜನೇ! ನಿನ್ನ ಈ ಮಗನು ಬಲಾಧಿಕನಾಗಿರುವನು. ಆದುದರಿಂದ ನೀನು ಭಯಪಡದೆ ರಕ್ಷಣೆ ಮಾಡು. ನೀನು ಈ ಮಗುವನ್ನು ಕೊಲ್ಲಲಿಕ್ಕೆ ಆಗಲಾರದು. ಈಗ ಮಗುವಿಗೆ ಮೃತ್ಯುಕಾಲವೂ ಬಂದಿಲ್ಲ, ಇವನನ್ನು ಶಸ್ತ್ರದಿಂದ ಕೊಲ್ಲುವವನು ಹುಟ್ಟಿರುವನು' ಎಂದು ಅಶರೀರವಾಣಿಯು ಕೇಳಿಸಿತು. ಈ ಮಾತನ್ನು ಕೇಳಿ ಇವನ ತಾಯಿಯು ಪುತ್ರಸ್ನೇಹವುಳ್ಳವರಾಗಿ 'ನನ್ನ ಮಗುವಿನ ವಿಷಯವಾಗಿ ಈ ಮಾತನ್ನು ಆಡಿದವರು ಯಾರೋ ಅವರಿಗೆ ನಾನು ಕೈಮುಗಿಯುವೆನು. ಅವರು ದೇವತೆಯೋ ಅಥವಾ ಇನ್ನು ಇತರರೋ ಯಾರೇ ಆಗಲಿ ನನ್ನ ಮಗುವಿಗೆ ಯಾರು ಸಂಹಾರಕರೆಂದು ಹೇಳಬೇಕು' ಎಂದು ಕೇಳಿಕೊಂಡಳು. ಆಗ 'ಯಾರು ಈ ಮಗುವನ್ನು ತೊಡೆಯಲ್ಲಿ ಇಟ್ಟುಕೊಳ್ಳುವಾಗ ಇದರ ಹೆಚ್ಚಾದ ಎರಡು ಕೈಗಳು ಬಿದ್ದು ಹೋಗುವುವೋ ಹಣೆಯಲ್ಲಿರುವ ಮೂರನೇ ಕಣ್ಣು ಯಾರನ್ನು ನೋಡಿ ಮರೆಯಾಗಿ ಹೋಗುತ್ತದೋ ಅವನೇ ಈ ಮಗುವಿಗೆ ಸಂಹಾಕರನು' ಎಂದು ಪುನಃ ಅಶರೀರವಾಣಿಯಾಯಿತು.

ತರುವಾಯ ಮಗುವಿಗೆ ನಾಲ್ಕು ಕೈಗಳೆಂದು ಮೂರು ಕಣ್ಣುಗಳೆಂದೂ ಕೇಳಿ ಭೂಮಿಯಲ್ಲಿರುವ ರಾಜರೆಲ್ಲರೂ ಮಗುವನ್ನು ನೋಡಲಿಕ್ಕೆ ಬಂದರು. ಶಿಶುಪಾಲನ

ತಂದೆಯು ಬಂದವರನ್ನೆಲ್ಲಾ ಸತ್ಕರಿಸಿ ಒಬ್ಬೊಬ್ಬರ ತೊಡೆಯಲ್ಲಿಯೇ ಮಗುವನ್ನು ಇಡುವವನಾದನು. ಈರೀತಿಯಾಗಿ ಸಾವಿರಾರು ರಾಜರ ತೊಡೆಯಲ್ಲಿ ಮಲಗಿಸಿದರು. ಮಗುವಿನ ನಾಲ್ಕು ಕೈಗಳೂ ಮೂರು ಕಣ್ಣುಗಳೂ ಹೋಗಲಿಲ್ಲ. ಈ ವರ್ತಮಾನವನ್ನು ಕೇಳಿ ದ್ವಾರಕಾಪಟ್ಟಣದಲ್ಲಿ ಇದ್ದ ಕೃಷ್ಣ ಬಲರಾಮದೇವರೂ ಬಂದರು. ಅವರು ತಮ್ಮ ಸೋದರ ಅತ್ತೆಯಾದ ಶಿಶುಪಾಲನ ತಾಯಿಯನ್ನು ನಮಸ್ಕರಿಸಿ ಶಿಶುಪಾಲನ ತಾಯಿಯು ಅತ್ಯಂತ ಪ್ರೀತಿಯಿಂದ ಸೋದರ ಅಳಿಯಂದಿರಾದ ಕೃಷ್ಣಬಲರಾಮರನನು ಉಪಚರಿಸಿ ಮಗುವನ್ನು ತಂದ ಕೃಷ್ಣಪರಮಾತ್ಮನ ತೊಡೆಯಲ್ಲಿ ಮಲಗಿಸಿದಳು. ಕೂಡಲೇ ಶಿಶುಪಾಲನ ಹೆಚ್ಚಾದ ಎರಡು ಕೈಗಳು ಬಿದ್ದುಹೋದವು. ಹಣೆಯಲ್ಲಿ ಇದ್ದ ಕಣ್ಣೂ ಮರೆಯಾಯಿತು. ಆಗ ಸೋದರ ಅತ್ತೆಯು ತುಂಬಾ ದುಃಖವುಳ್ಳವಳಾಗಿ ಭಯವುಳ್ಳವಳಾಗಿ 'ಕೃಷ್ಣ! ಭಯಗ್ರಸ್ತಳಾದ ನನಗೆ ನೀನು ವರವನ್ನು ಕೊಡಬೇಕು. ನೀನು ಭಯವುಳ್ಳವರನ್ನು ರಕ್ಷಿಸುವವನಷ್ಟೆ' ಎಂದು ಹೇಳಿದಳು.

ಅದಕ್ಕೆ ಶ್ರೀಕೃಷ್ಣನು—'ಅಮ್ಮಾ! ನೀನು ಭಯಪಡಬೇಡ. ನಿನ್ನ ಮಗನ ನೂರು ಅಪರಾಧಗಳನ್ನು ಕ್ಷಮಿಸುವೆನು' ಎಂದು ಹೇಳಿದನು. ಆದುದರಿಂದ ಶ್ರೀಭಗವಂತನು ಶಿಶುಪಾಲನ ನೂರು ಅಪರಾಧಗಳನ್ನು ಕ್ಷಮಿಸುತ್ತಿರುವನು. ಅವನೇ ಇವನನ್ನು ಸಂಹರಿಸುವನು' ಎಂದು ಹೇಳಿದರು.

ತರುವಾಯ ಶಿಶುಪಾಲನು ಭೀಷ್ಮಾಚಾರ್ಯರನ್ನು ನಿಂದಿಸಿ ಕೃಷ್ಣಪರಮಾತ್ಮನನ್ನು ಯುದ್ಧಕ್ಕೆ ಕರೆದನು. ಅತಿಭಯಂಕರವಾದ ಯುದ್ಧವನ್ನು ಮಾಡಿದನು. ಶ್ರೀಭಗವಂತನು ಅವನ ಬಾಣಗಳನ್ನು ತಡೆದು ಚಕ್ರದಿಂದ ಅವನ ತಲೆಯನ್ನು ಕಡಿದುಹಾಕಿದನು. ಶಿಶುಪಾಲನ ದೇಹದಲ್ಲಿ ಇದ್ದ ಅಸುರನು ಅಂಧಂತಮಸ್ಸನ್ನು ಪ್ರವೇಶಿಸಿದನು. ಸಜ್ಜೀವನಾದ ಜಯನು ಪರಮಾತ್ಮನ ದೇಹವನ್ನು ಪ್ರವೇಶಿಸಿದನು.



# ದುರ್ಯೋಧನನ ಮಾನಭಂಗ [1]

ಶಿಶುಪಾಲನ ಮರಣಾನಂತರದಲ್ಲಿ ಶಾಸ್ತ್ರದಲ್ಲಿ ಹೇಳಿದ ರೀತಿಯಾಗಿಯೇ ಪಾಂಡವರ ರಾಜಸೂಯಯಾಗವು ನಡೆಯಿತು. ರಾಜರು ಅನೇಕ ಬಂಗಾರ ರತ್ನಗಳ ಸಮೂಹಗಳನ್ನು ಕಾಣಿಕೆಯನ್ನಾಗಿ ತಂದಿದ್ದರು. ಅದನ್ನೆಲ್ಲಾ ತೆಗೆದುಕೊಳ್ಳುವ ಕೆಲಸಕ್ಕೆ ದುರ್ಯೋಧನನನ್ನು ನಿಯಮಿಸಿದ್ದರು. ಅಲ್ಲಿ ಬ್ರಾಹ್ಮಣರನ್ನು ಯಥೇಷ್ಟ ಭಕ್ಷ್ಯಭೋಜ್ಯಗಳಿಂದ ಭೋಜನಮಾಡಿಸಿದರು. ಬೇಕಾದ ಬಂಗಾರ ರತ್ನಗಳನ್ನೇ ದಕ್ಷಿಣೆಕೊಟ್ಟರು. ಯಾರು ಏನನ್ನು ಅಪೇಕ್ಷಿಸಿದರೋ ಅದೆಲ್ಲವನ್ನು ಪಾಂಡವರು ಅವರಿಗೆ ಕೊಟ್ಟಿದ್ದರು. ಆಮೇಲೆ ಎಲ್ಲರೂ ಅವಭೃಥಸ್ನಾನ ಮಾಡಿದರು. ಆ ಸಮಯದಲ್ಲಿ ದೇವತೆಗಳ ದುಂದುಭಿ ವಾದ್ಯಗಳನ್ನು ಬಾರಿಸುತ್ತಿದ್ದರು. ಗಂಧರ್ವರು ಗಾಯನ ಮಾಡುತ್ತಿದ್ದರು. ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ಹೀಗೆ ಸಂಭ್ರಮದಿಂದ ಸಮಸ್ತರಾಜರಿಂದ ಸಹಿತರಾಗಿ ಗಂಗೆಯಲ್ಲಿ ಅವಭೃತಸ್ನಾನ ಮಾಡಿದರು. ದೇವತೆಗಳೆಲ್ಲರೂ ತಮ್ಮ ತಮ್ಮ ಸ್ಥಾನಕ್ಕೆ ಹೋದರು. ರಾಜರೆಲ್ಲರೂ ತಮ್ಮ ರಾಜ್ಯಕ್ಕೆ ಹೋದರು. ಭೀಷ್ಮಾಚಾರ್ಯರೂ ಧೃತರಾಷ್ಟ್ರನೂ ತಮ್ಮ ಊರಿಗೆ ಹೊರಟುಹೋದರು.

ಒಂದು ದಿನದಲ್ಲಿ ವಿಚಿತ್ರರತ್ನಗಳಿಂದ ನಿರ್ಮಿತವಾದ ಸೂರ್ಯನಂತೆ ಪ್ರಕಾಶಿಸುವ ಸಭಾಸ್ಥಾನದಲ್ಲಿ ಕೃಷ್ಣಪರಮಾತ್ಮನಿಂದ ಸಹಿತನಾಗಿ ಧರ್ಮರಾಜನು ಆಸನದಲ್ಲಿ ಕೂತುಕೊಂಡಿದ್ದನು. ಹಾಗೆಯೇ ಶ್ರೀಭಗವಂತನ ಪತ್ನಿಯರಾದ ರುಕ್ಮಿಣೀದೇವಿಯರೇ ಮೊದಲಾದವರೂ ಭೀಮಾರ್ಜುನರೂ ಭಗವಂತನ ಸಮೀಪದಲ್ಲಿಯೇ ಕೂತುಕೊಂಡಿದ್ದರು. ಭೀಮಸೇನದೇವರಿಗೂ ರುಕ್ಮಿಣೀ ಸತ್ಯಭಾಮಾ ದೇವಿಯರಿಗೂ ಸಮೀಪದಲ್ಲಿ ದ್ರೌಪದೀದೇವಿಯರು ಕೂತಿದ್ದರು. ಧೃಷ್ಟದ್ಯುಮ್ನನೇ ಮೊದಲಾದವರು ಅರ್ಜುನನ ಸಮೀಪದಲ್ಲಿ ಕೂತಿದ್ದರು. ಬಲರಾಮದೇವರೂ ಸಾತ್ಯಕಿಯೂ ಧರ್ಮರಾಜನ ಸಮೀಪದಲ್ಲಿ ಕುಳಿತಿದ್ದರು. ಭಗವಂತನಿಂದ ಸಹಿತವಾದ ಬ್ರಹ್ಮದೇವರ ಸಭೆಯಂತೆ ಆ ಸಭೆಯು ಅತ್ಯಂತ ಪ್ರಕಾಶಮಾನವಾಗಿತ್ತು. ಆ ಸಭೆಯಲ್ಲಿದ್ದ ರಾಜರು ವಿಚಿತ್ರ ಬಂಗಾರದ ಸರಗಳನ್ನು ಧರಿಸಿದವರಾಗಿ ಕಿರೀಟ ಕುಂಡಲಧಾರಿಗಳಾಗಿ ಶೋಭಿಸಿದರು. ವಿಶೇಷವಾಗಿ ಪತ್ನಿಯರಿಂದ ಸಹಿತನಾದ ಶ್ರೀಭಗವಂತನು ಶೋಭಿಸಿದನು.

---

1. ಮ.ತಾ.ನಿ. ೨-21

ಆಗ ದುರ್ಯೋಧನನು ತಮ್ಮಂದಿರಿಂದ ಸಹಿತನಾಗಿ ಖಡ್ಗಧಾರಿಯಾಗಿ ಬಂದನು. ಅಲ್ಲಿ ಬಾಗಿಲು ಇಂದ್ರನೀಲಮಣಿಗಳ ರಶ್ಮಿಗಳಿಂದ ಮರೆಯಾಗಿತ್ತು. ಅದರಿಂದ ಅಲ್ಲಿ ಬಾಗಿಲು ಇರುವುದು ಅವನಿಗೆ ತಿಳಿಯಲಿಲ್ಲ. ಬಾಗಿಲು ಬಿಟ್ಟು ಮುಂದೆ ಹೋದನು. ಸ್ವಲ್ಪದೂರ ಹೋಗಲು ಸ್ಫಟಿಕಮಣಿಯಿಂದ ರಚಿತವಾದ ಗೋಡೆಯಿತ್ತು. ಸ್ಫಟಿಕಮಣಿಯಿಂದ ರಚಿತವಾದ ಕಾರಣ ಒಳಗೆ ಇದ್ದ ಪದಾರ್ಥಗಳೆಲ್ಲಾ ಹೊರಗೆ ಕಾಣಿಸುತ್ತಿದ್ದವು. ಇದರಿಂದ ಇಲ್ಲಿ ಬಾಗಿಲು ಇದೆಯೆಂದು ಭ್ರಮಿಸಿಕೊಂಡು ಅವಸರದಿಂದ ಹೋದನು. ಆಗ ತಲೆಗೆ ಗಟ್ಟಿಯಾಗಿ ಗೋಡೆಯು ತಾಗಿತು. ಅದನ್ನು ನೋಡಿ 'ಪಾಪ ಬಾಗಿಲು ತಿಳಿಯಲಿಲ್ಲ. ಒಳಗೆ ಕರೆದುಕೊಂಡು ಬನ್ನಿ' ಎಂದು ಧರ್ಮರಾಜನ ಆಜ್ಞೆಯಿಂದ ನಕುಲ ಸಹದೇವರು ಹೋಗಿ ಕೈಹಿಡಿದುಕೊಂಡು ಒಳಗೆ ಕರೆದುಕೊಂಡು ಬಂದರು. ದುರ್ಯೋಧನನು ಒಳಗೆ ಬಂದು ಸ್ವಲ್ಪ ಹೊತ್ತು ಕೂತುಕೊಂಡಿದ್ದನು. ದುರ್ಯೋಧನನಿಗೆ ಪಾಂಡವರ ಆ ಸಂಪತ್ತನ್ನು ನೋಡಿ ಸಹಿಸಲಿಕ್ಕೆ ಆಗದೆ ಹೋಯಿತು. ಒಂದುಕ್ಷಣದಲ್ಲಿಯೇ ಅಲ್ಲಿಂದ ಎದ್ದು ಬೇರೆ ಸ್ಥಳಕ್ಕೆ ಹೊರಟುಹೋದನು. ಅಲ್ಲಿ ಇಂದ್ರನೀಲಮಣಿಯಿಂದ ಮಾಡಿದ ಭೂಮಿಯಲ್ಲಿ ರತ್ನಗಳಿಂದ ಮಾಡಿದ್ದ ಕಮಲಗಳನ್ನು ನೋಡಿ ಅಲ್ಲಿ ನೀರಿರುವುದು ಎಂದು ಭ್ರಮಿಸಿಕೊಂಡು ವಸ್ತ್ರವನ್ನು ಎತ್ತಿಕೊಂಡು ಮೆಲ್ಲಮೆಲ್ಲನೆ ಹೋದನು. ಮತ್ತೆ ಸ್ವಲ್ಪದೂರ ಹೋಗಲು ಸಹಜವಾಗಿಯೂ ನೀರು ಇತ್ತು. ಸುತ್ತಲೂ ಇರುವ ರತ್ನಗಳ ಕಾಂತಿಯಿಂದ ನೀರೆಂದು ತಿಳಿಯುತ್ತಿದ್ದಿಲ್ಲ. ಅದರಿಂದ ಅಲ್ಲಿ ಹೋಗಿ ತಮ್ಮಂದಿರಿಂದ ಸಹಿತನಾಗಿ ಬಿದ್ದುಬಿಟ್ಟನು. ಆಗ ಭೂಭಾರಪರಿಹಾರಕ್ಕಾಗಿ ಶ್ರೀಕೃಷ್ಣಪರಮಾತ್ಮನಿಂದ ಸೂಚಿಸಲ್ಪಟ್ಟವರಾಗಿ ಭೀಮಸೇನದೇವರು ದ್ರೌಪದೀದೇವಿಯರಿಂದಲೂ ಇತರ ಸ್ವಕೀಯರಿಂದಲೂ ಸಹಿತರಾಗಿ ಗಟ್ಟಿಯಾಗಿ ನಗಾಡಿದರು. ಭಗವಂತನ ಪತ್ನಿಯರು ನಕ್ಕರು. ಶ್ರೀಭಗವಂತನು ಮಂದಹಾಸವುಳ್ಳವನಾಗಿ ಭೀಮಸೇನದೇವರ ಮುಖವನ್ನು ನೋಡಿ ಸುಮ್ಮನೆ ಇದ್ದನು. ಧರ್ಮರಾಜನು ನಗುವುದನ್ನು ತಡೆದು ದುರ್ಯೋಧನನಿಗೆ ವಸ್ತ್ರಗಂಧಪುಷ್ಪಗಳನ್ನು ಕಳುಹಿಸಿದನು. ದುರ್ಯೋಧನನು ಭೀಮಸೇನದೇವರ ಮೇಲೆಯೂ ದ್ರೌಪದೀದೇವಿಯರ ಮೇಲೆಯೂ ತುಂಬಾ ಕೋಪವುಳ್ಳವನಾಗಿ ತುಂಬಾ ನಾಚಿಕೆಯುಳ್ಳವನಾಗಿ ಧರ್ಮರಾಜನು ಕಳುಹಿಸಿದ. ವಸ್ತ್ರಾದಿಗಳನ್ನು ತಿರಸ್ಕರಿಸಿ ಶಕುನಿಯನ್ನು ಕರೆದುಕೊಂಡು ಹೋದನು.



# ದ್ಯೂತಕ್ಕೆ ಉಪಕ್ರಮ [1]

ದುರ್ಯೋಧನನು ದಾರಿಯಲ್ಲಿ ಹೋಗುವಾಗ ಶಕುನಿಯೊಡನೆ 'ಕೃಷ್ಣನ ಸಮೀಪದಲ್ಲಿ ಯಾವ ದ್ರೌಪದೀಭೀಮರು ನನಗೆ ಅಪಹಾಸವನ್ನು ಮಾಡಿದರೋ ಅವರಿಗೆ ಸಂತಾಪವನ್ನು ಉಂಟುಮಾಡದೆ ನಾನು ಬದುಕಲಿಕ್ಕೇ ಇಚ್ಛಿಸುವುದಿಲ್ಲ. ನಾನು ಶಕ್ತಿಯುಳ್ಳವನಾಗಿದ್ದರೆ ಆಗಲೇ ಭೀಮಸೇನನನ್ನು ಕೊಂದು ಹಾಕುತ್ತಿದ್ದೆನು. ಕೃಷ್ಣನ ಅಗ್ರಪೂಜೆಯನ್ನು ನಿಲ್ಲಿಸುತ್ತಿದ್ದೆನು. ಈರೀತಿಯಾದ ಪಾಂಡವರ ಐಶ್ವರ್ಯವನ್ನು ನೋಡಿ ಯಾರಿಗೆ ಸಹಿಸಲಿಕ್ಕೆ ಆಗುವುದು. ಯಾರಿಗೆ ಬದುಕಲಿಕ್ಕೆ ತೋರುವುದು? ಎಲ್ಲಾ ರಾಜರೂ ಅವರಿಗೆ ವೈಶ್ಯರಂತೆ ಕಪ್ಪ ಕೊಡುವರು' ಎಂದು ಹೇಳಿದನು.

ಆಗ ಶಕುನಿಯು ವೈರವನ್ನು ಮತ್ತಷ್ಟು ದೃಢಪಡಿಸುವುದಕ್ಕಾಗಿ 'ರಾಜ! ಬಲಿಷ್ಠರಾದ ಸಹೋದರರೊಡನೆ ಯಾಕೆ ವಿರೋಧವನ್ನು ಮಾಡುವಿ? ವೀರರಾದ ಗುಣ ಜ್ಯೇಷ್ಠರಾದ ಅವರನ್ನು ಆಶ್ರಯಿಸಿ ಬದುಕಿರು' ಎಂದು ಹೇಳಿದನು. ಆಗ ದುರ್ಯೋಧನನು ಅತ್ಯಂತ ಕೋಪವುಳ್ಳವನಾಗಿ 'ಆ ಪಾಂಡವರಲ್ಲಿರುವ ಎಲ್ಲಾ ಐಶ್ವರ್ಯವೂ ನನಗೆ ಬಂದು ಸೇರದೆ ಇದ್ದರೆ ನಾನು ಬದುಕಲಾರೆನು. ಇದು ಸತ್ಯವಾದ ಮಾತು. ಆದರೆ ಬಲದಿಂದ ಅವರ ಸಂಪತ್ತನ್ನು ಅಪಹರಿಸಲಿಕ್ಕೆ ಆಗಲಾರದು. ಯುದ್ಧದಲ್ಲಿ ಇಂದ್ರದೇವರೂ ಕೂಡ ಅವರನ್ನು ಜಯಿಸಲು ಸಮರ್ಥರಾಗಲಾರರು. ಮನುಷ್ಯರನ್ನು ಏನು ಹೇಳಬೇಕು?' ಎಂದು ಹೇಳಿದನು. ಅದಕ್ಕೆ ಅತ್ಯಂತ ಪಾಪಿಯಾದ ಶಕುನಿಯು 'ಪಾಂಡವರಲ್ಲಿ ಯಾವ ಯಾವ ಸಂಪತ್ತನ್ನು ನೋಡುವಿಯೋ ಅದೆಲ್ಲವನ್ನೂ ಅನಾಯಾಸದಿಂದ ಪಗಡೆ ಆಟವನ್ನು ಆಡಿ ನಿನ್ನ ವಶವನ್ನಾಗಿ ಮಾಡುವೆನು' ಎಂದು ಹೇಳಲು ದುರ್ಯೋಧನನು ಸಂತೋಷವನ್ನು ಹೊಂದಿದನು.

ಆಮೇಲೆ ಅವರಿಬ್ಬರೂ ಧೃತರಾಷ್ಟ್ರನ ಬಳಿಗೆ ಹೋದರು. ಅತಿಪಾಪಿಯಾದ ಶಕುನಿಯು ಕುರುಡನಾದ ಧೃತರಾಷ್ಟ್ರನೊಡನೆ ದುರ್ಯೋಧನನು ತುಂಬಾ ಕೃಶನಾಗಿ ಬೆಳ್ಳಗಾಗಿ ಹೋಗಿರುವನೆಂದು ತಿಳಿಸಿದನು. ಅದನ್ನು ಕೇಳಿ ಧೃತರಾಷ್ಟ್ರನು ಕಾರಣವೇನೆಂದು ಕೇಳಲು ಅವರಿಬ್ಬರೂ ತಾವಿಬ್ಬರೂ ದಾರಿಯಲ್ಲಿ ಬರುವಾಗ ಯೋಚನೆ ಮಾಡಿಕೊಂಡು ಬಂದದ್ದನ್ನೆಲ್ಲಾ ತಿಳಿಸಿದರು. ಅದನ್ನೆಲ್ಲಾ ಕೇಳಿ

---

1. ಮ.ತಾ.ನಿ. ಅ-21

ಧೃತರಾಷ್ಟನು ಇದು ಸರಿಯಲ್ಲವೆಂದನು. 'ನೀವು ದುರಾಲೋಚನೆಯನ್ನು ಮಾಡಿದ್ದು ಧರ್ಮಕ್ಕೆ ವಿರೋಧಿಯದದ್ದು. ವಂಶನಾಶಕ್ಕೆ ಕಾರಣವಾದದ್ದು ನನಗೆ ಇಷ್ಟವಲ್ಲ' ಎಂದನು. ಪಾಂಡವರು ತಮ್ಮ ಪರಾಕ್ರಮದಿಂದ ಸಂಪತ್ತನ್ನು ಪಡೆದಿದ್ದಾರೆ. ದುರ್ಯೋಧನ! ನೀನೂ ಕೂಡ ದಿಕ್ಕುಗಳನ್ನು ಜಯಿಸಿ ಯಜ್ಞಗಳನ್ನು ಮಾಡು. ಆ ಗುಣವಂತರೊಡನೆ ಮಾತ್ಸರ್ಯವನ್ನು ಹೊಂದಬೇಡ. ಅದರಲ್ಲೂ ಅವರು ವಿಶೇಷವಾಗಿ ನಿನ್ನ ಸಹೋದರರಾಗಿರುವರು' ಎಂದನು.

ಆಗ ದುರ್ಯೋಧನನು 'ನೀನು ಪಾಂಡವರ ಐಶ್ವರ್ಯವನ್ನು ಪಗಡೆಯಾಟ ದಿಂದ ಅಪಹರಿಸಲಿಕ್ಕೆ ಸಮ್ಮತಿಸದೆ ಇದ್ದರೆ ನಾನು ಸತ್ತೆನೆಂದು ತಿಳಿಯು. ಪಾಂಡವರಿಂದ ಸುಖವನ್ನು ಹೊಂದು. ನಾನು ಬದುಕಿರಬೇಕೆಂಬ ಆಸೆಯಿದ್ದರೆ ಬೇಗನೆ ಇಲ್ಲಿಗೆ ಪಾಂಡವರನ್ನು ತರಿಸು. ಪತ್ನೀಸಹಿತರಾದ ಅವರನ್ನು ಪಗಡೆ ಆಟವನ್ನು ಆಡುವುದಕ್ಕಾಗಿ ಇಲ್ಲಿಗೆ ತರಿಸು. ಪಗಡೆ ಆಟದಿಂದ ಯಾವ ದೋಷವೂ ಇರುವುದಿಲ್ಲ. ಬ್ರಾಹ್ಮಣರು ವೇದಗಳಿಂದ ಜೀವಿಸುವವರು ಕ್ಷತ್ರಿಯರು ಶಸ್ತ್ರದಿಂದ ಜೀವಿಸುವರು. ಶತ್ರುಗಳನ್ನು ಯಾವುದನ್ನು[1] ಜಯಿಸುವೆವೋ ಅದೇ ಶಸ್ತ್ರವು. ಆದುದರಿಂದ ಪಗಡೆ ಕಾಳುಗಳೂ ಶಸ್ತ್ರಗಳೇ. ಆದುದರಿಂದ ಪಗಡೆ ಆಟವಾಡುವುದೂ ನಮ್ಮ ಧರ್ಮವೇ. ಇದರಿಂದ ನಿನಗೂ ಫಲವುಂಟಾಗುವುದು' ಎಂದನು. ಧೃತರಾಷ್ಟನು ನನಗೆ ಆ ಫಲವು ಬೇಡ. ನಿನಗೆ ಇರಲಿ ಎಂದು ಹೇಳಿದನು. ಆದರೂ ರಾಜನು ಕಲಿಯ ಆವೇಶವುಳ್ಳವನಾಗಿ ಪುತ್ರಸ್ನೇಹದಿಂದಲೂ ವಿದುರನನ್ನು ಪಾಂಡವರ ಬಳಿಗೆ ಕಳುಗಿಸಿದನು. ಕಲಿಯು ದುರ್ಯೋಧನನ ರೂಪದಿಂದ ಮಗನಾಗಿ ಹುಟ್ಟಲು ಧೃತರಾಷ್ಟನನ್ನು ಯಾವಾಗ ಪ್ರವೇಶಿಸಿದನೋ ಆ ಕಾಲವನ್ನು ಆರಂಭಿಸಿಯೇ ಅವನು ಕೊನೆಗೆ ವನಕ್ಕೆ ಹೋಗುವವರೆಗೆ ಒಂದು ಅಂಶದಿಂದ ಅವನನ್ನು ಬಿಟ್ಟು ಹೋಗಲೇ ಇಲ್ಲ. ಆದುದರಿಂದ ಅವನ ಮನಸ್ಸು ಅಷ್ಟರವರೆಗೆ ದೋಷಯುಕ್ತವಾಗಿಯೇ ಇದ್ದಿತು.

ವಿದುರನು ಧೃತರಾಷ್ಟನೊಡನೆ 'ಇದು ಮಹಾಪಾಪ ಕಾರ್ಯವು ಕುಲನಾಶಕ್ಕೆ ಕಾರಣವಾದದ್ದು. ಇದರಿಂದ ನಿನಗೂ ಅಪಕೀರ್ತಿಯುಂಟಾಗುವುದು. ಇಂತಹ ಕಾರ್ಯವನ್ನು ನೀನು ಮಾಡಬೇಡ' ಎಂದನು. ಅದಕ್ಕೆ ಧೃತರಾಷ್ಟನು 'ಜಗಳವುಂಟಾಗದಂತೆ ನಾವು ತಡೆಯೋಣ. ಮಕ್ಕಳಾದ ದುರ್ಯೋಧನಾದಿಗಳೂ ಪಾಂಡವರೂ ಒಂದು ಸ್ಥಳದಲ್ಲಿ ಆಡುವುದನ್ನು ನೋಡಬೇಕೆಂದು ಆಸೆಯಾಗಿದೆ.

1. ಯಾವುದರಿಂದ

ಆದಕಾರಣ ನೀನು ಬೇಗನೇ ಹೋಗಿ ಪಾಂಡವರನ್ನು ಕರೆದುಕೊಂಡು ಬರಲೇಬೇಕು' ಎಂದನು. ವಿದುರನು ಹಾಗೆಯೇ ಇಂದ್ರಪ್ರಸ್ಥಕ್ಕೆ ಹೋದನು. ಆಸಮಯದಲ್ಲಿ ಕೃಷ್ಣಪರಮಾತ್ಮನು ಅಲ್ಲಿ ಇರಲಿಲ್ಲ, ದ್ವಾರಕಾಪಟ್ಟಣಕ್ಕೆ ಹೋಗಿದ್ದನು.

ಪೂರ್ವದಲ್ಲಿ ದುರ್ಯೋಧನನು ಕೋಪಿಸಿಕೊಂಡು ಇಂದ್ರಪ್ರಸ್ಥದಿಂದ ಹೊರಟುಬಂದ ಅನಂತರದಲ್ಲಿ ನಾರದರು ಇಂದ್ರಪ್ರಸ್ಥಕ್ಕೆ ಬಂದರು. ಧರ್ಮರಾಜನು ನಾರದರನ್ನು ಸತ್ಕರಿಸಿ 'ಈಗ ಯುದ್ಧೋದ್ಯೋಗಿಯಾಗಿ ಯಾರು ಇರುವರು?' ಎಂದು ಕೇಳಿದನು. ಆಗ ನಾರದರು 'ಸೌಭವಿಮಾನಕ್ಕೆ ಅಧಿಪತಿಯಾದ ಸಾಲ್ವನು ದಿನದಲ್ಲಿ ಒಂದು ಮುಷ್ಟಿಯಷ್ಟು ಧೂಳನ್ನು ಒಂದು ಬಾರಿ ತಿನ್ನುತ್ತಾ ಬಹುವರ್ಷ ಕಾಲ ತಪಸ್ಸು ಮಾಡಿ ಕೃಷ್ಣಪರಮಾತ್ಮನನ್ನು ಜಯಿಸುವ ವಿಷಯದಲ್ಲಿ ವರವನ್ನು ಪಡೆದು ಬಂದನು. ರುದ್ರದೇವರ ಅನುಗ್ರಹವನ್ನು ಪಡೆದು ಬಂದ ಅವನು ಜರಾಸಂಧನ ಸಂಹಾರವನ್ನು, ದಿಕ್ಕುಗಳ ಜಯವನ್ನು, ರಾಜಸೂಯಯಾಗವು ನಡೆದದ್ದನ್ನು ಶಿಶುಪಾಲನು ಸಂಹೃತನಾದದ್ದನ್ನು ಕೇಳಿ ಯಾದವರೊಡನೆ ಜಗಳವಾಡಬೇಕೆಂದು ಪ್ರಯತ್ನದಲ್ಲಿ ಇರುವನು' ಎಂದು ಹೇಳಿದರು. ಆಗ ಧರ್ಮರಾಜನು ಕೃಷ್ಣಪರಮಾತ್ಮನ ಮುಖವನ್ನು ನೋಡಿದರು. ಭಗವಂತನು ಆಗಲಿ ಎಂದು ಹೇಳಿ ಪ್ರದ್ಯುಮ್ನನೇ ಮೊದಲಾದ ಯಾದವರನ್ನು ಮೊದಲು ಕಳುಹಿಸಿ ಆಮೇಲೆ ತಾನೂ ಹೊರಟುಹೋದನು.

ಆ ಸಮಯದಲ್ಲಿ ವಿದುರನು ಅಲ್ಲಿಗೆ ಹೋಗಿ ಧರ್ಮರಾಜನನ್ನು ಪಗಡೆ ಆಟಕ್ಕೆ ಕರೆದನು. ವಿದುರನು ಅಣ್ಣನಾದ ಧೃತರಾಷ್ಟ್ರನ ಆಜ್ಞೆಯಂತೆ ಕರೆದರೂ 'ನೀನು ಬರುವುದು ಸರಿಯಲ್ಲ' ಎಂದು ಹೇಳಿ ಪಗಡೆ ಆಟದಿಂದ ಆಗುವ ದೋಷಗಳನ್ನೆಲ್ಲಾ ಹೇಳಿ 'ಪಗಡೆ ಆಟದಿಂದ ಇಷ್ಟೆಲ್ಲಾ ದೋಷಗಳಿವೆ. ಆದರೆ ನಿನ್ನ ದೊಡ್ಡ ತಂದೆಯು ಹೇಳಿ ಕಳುಹಿಸಿದ್ದಾನೆ. ಇದೆರಡನ್ನು ಯೋಚನೆ ಮಾಡಿ ಹೇಗೆ ಮಾಡಬೇಕೋ ಹಾಗೆ ಮಾಡು ಎಂದನು. ಹಾಗೆ ಹೇಳಿದರೂ ಧರ್ಮರಾಜನು ಕಲಿಪ್ರವೇಶದಿಂದ ಪಗಡೆ ಆಟಕ್ಕಾಗಿ ಹೊರಟೇ ಬಿಟ್ಟನು. ಸಹೋದರರೂ ದ್ರೌಪದೀದೇವಿಯರೂ ಬೇಡವೆಂದು ಹೇಳಿದರೂ ಕೇಳಲೇ ಇಲ್ಲ. ಕಲ್ಯಾವೇಶದಿಂದ 'ನಾನು ಹಸ್ತಿನಾವತಿ ಯಲ್ಲಿ ಪಗಡೆ ಆಟಕ್ಕೆ ಯಾರಾದರೂ ಕೂಗಿದರೆ ಯಾರು ಬೇಡವೆಂದರೂ ಕೇಳಲಾರೆನು. ಆಡಿಯೇ ಆಡುವೆನು' ಎಂದು ಪ್ರತಿಜ್ಞೆಯನ್ನು ಮಾಡಿದನು. ಮಿತ್ರರು ಬೇಡವೆಂದು ಹೇಳಿದರೂ ಕೇಳದೆ ಸಹೋದರರಿಂದಲೂ ದ್ರೌಪದೀದೇವಿಯ ರಿಂದಲೂ ಸಹಿತನಾಗಿ ಬೇಗನೆ ಹಸ್ತಿನಾವತಿಗೆ ಹೋದನು. ದುರ್ಯೋಧನಾದಿಗಳು

ಬಂದ ಪಾಂಡವರನ್ನು ಸತ್ಕರಿಸಿದರು. ಪಾಂಡವರು ರಾತ್ರಿಯಲ್ಲಿ ಸಂತೋಷದಿಂದ ಅಲ್ಲಿಯೇ ಇದ್ದರು.



## ಪಾಂಡವರ ಪಗಡೆ ಆಟ [1]

ಮರುದಿನ ಬೆಳಿಗ್ಗೆ ಭೀಷ್ಮಾಚಾರ್ಯರೇ ಮೊದಲಾದವರೂ ಎಲ್ಲಾ ರಾಜರೂ ಪಾಂಡವರಿಂದ ಸಹಿತರಾಗಿ ಸಭೆಗೆ ಬಂದರು. ಧೃತರಾಷ್ಟ್ರನೂ ವಿದುರನೂ ಶಕುನಿಯೂ ದುರ್ಯೋಧನಾದಿಗಳೂ ಕರ್ಣನೂ ಸಭೆಗೆ ಬಂದರು. ಅಲ್ಲಿ ಶಕುನಿಯು ಧರ್ಮರಾಜನನ್ನು ಪಗಡೆ ಆಟಕ್ಕೆ ಕೂಗಿದನು. ಆ ಸಮಯದಲ್ಲಿ ಅಲ್ಲಿ ಭೀಮ ಅರ್ಜುನ ನಕುಲ ಸಹದೇವರನ್ನೂ, ಕುಂತೀದ್ರೌಪದಿಯರನ್ನು, ವಿದುರನನ್ನು ಹೊರತು ಮತ್ತೆ ಎಲ್ಲರಿಗೂ ಕಲಿಪ್ರವೇಶವಾಗಿತ್ತು. ಆದುದರಿಂದ ಭೀಷ್ಮಾಚಾರ್ಯರೇ ಮೊದಲಾದವರೂ ಕೂಡ ಅಂತಹ ಕುಲನಾಶಕ್ಕೆ ಕಾರಣವಾದ ಕರ್ಮವನ್ನು ನಿಲ್ಲಿಸಲಿಲ್ಲ. ಭೀಮಸೇನದೇವರೇ ಮೊದಲಾದವರು, ವಿದುರನೂ, ಬೇಡವೆಂದು ಹೇಳಿದರೂ ಕೇಳದೆ ಧರ್ಮರಾಜನು ಪಗಡೆ ಆಟದಲ್ಲಿ ಅತಿಸಮರ್ಥನಾದ ಶಕುನಿಯೊಡನೆ ಆಟವಾಡಿ ಎಲ್ಲಾ ಸೊತ್ತನ್ನೂ ಕಳಕೊಂಡು ನಕುಲನನ್ನು ಪಂದ್ಯವನ್ನಾಗಿ ಇಟ್ಟು ಸೋತನು. ಆಮೇಲೆ ಸಹದೇವನನ್ನು ಅರ್ಜುನನನ್ನು ಭೀಮಸೇನದೇವರನ್ನು ದ್ರೌಪದೀದೇವಿಯರನ್ನು ತನ್ನನ್ನು ಕ್ರಮದಿಂದ ಸೋತನು.

ತರುವಾಯ ದುರ್ಯೋಧನನು ದ್ರೌಪದೀದೇವಿಯರನ್ನು ಸಭೆಗೆ ಕರೆದು ಕೊಂಡು ಬರುವುದಕ್ಕಾಗಿ ತನ್ನ ಸೂತನನ್ನು ಕಳುಹಿಸಿದನು. ಅವನು ದ್ರೌಪದೀದೇವಿಯರ ಬಳಿಗೆ ಹೋಗಿ 'ಅಮ್ಮ! ಧರ್ಮರಾಜರು ಪಗಡೆ ಆಟದಲ್ಲಿ ನಿಮ್ಮನ್ನು ಸೋತಿರುವರು. ನೀವು ಬೇಗನೇ ರಾಜರ ಸಭೆಗೆ ಬರಬೇಕು' ಎಂದನು. ಆಗ ದ್ರೌಪದೀದೇವಿಯರು ನಾನು ರಾಜರ ಸಭೆಗೆ ಬರಲಾರೆನು ಎಂದರು. ಆಗ ಸೂತನು ಬಂದುಬಿಟ್ಟನು. ದುರ್ಯೋಧನನು ತನ್ನ ಸೂತನು ಭೀಮಸೇನದೇವರಿಂದ ಭಯಪಡುತ್ತಿರುವ ನೆಂದು ತಿಳಿದು ತನ್ನ ತಮ್ಮನಾದ ದುಃಶಾಸನನಿಗೇ ಆಜ್ಞೆಯನ್ನು ಮಾಡಿದನು. ಆ ಪಾಪಿಯು ಹೋಗಿ ಲೋಕರೀತಿಯಿಂದ ರಜಸ್ವಲೆಯಾಗಿರುವ ದ್ರೌಪದೀದೇವಿಯರ ತಲೆಕೂದಲನ್ನು ಹಿಡಿದುಕೊಂಡು ತನ್ನ ತಾಯಿಯ

1. ಮ.ತಾ.ನಿ. ಅ-21

ಮುಂಭಾಗದಲ್ಲೇ ಸಭೆಗೆ ಎಳೆದುಕೊಂಡು ಬಂದನು. ಸಭೆಗೆ ಬಂದ ದ್ರೌಪದೀದೇವಿಯರು ಭೀಷ್ಮಾದಿಗಳೊಡನೆ 'ನಿಮ್ಮಂತಹ ಧರ್ಮಿಷ್ಠರು ಈ ಅಧರ್ಮವನ್ನು ಏಕೆ ನಿಲ್ಲಿಸುವುದಿಲ್ಲ? ಕಪಟದ್ಯೂತದಲ್ಲಿ ಸೋತಿದ್ದನ್ನು ಧರ್ಮದಿಂದ ಸೋತದ್ದೆಂದು ಹೇಗೆ ಆಗುವುದು? ವಿಶೇಷವಾಗಿ ರಾಜರಿಗೆ ದ್ಯೂತವನ್ನು ಧರ್ಮವಲ್ಲವೆನ್ನುವರಲ್ಲಾ' ಯಾರು ಧರ್ಮವನ್ನು ಹೇಳುವುದಿಲ್ಲವೋ ಅವರು ವೃದ್ಧರಾಗಲಾರರು. ವೃದ್ಧರಿಲ್ಲದೆ ಇದ್ದದ್ದು ಸಭೆಯೆಂದೇ ಹೇಳಲಾರಲಲ್ಲಾ! ಮೊದಲು ಪತಿಯು ಸೋಲದೆ ಇರುವಾಗ ನಾನು ಹೇಗೆ ದ್ಯೂತದಲ್ಲಿ ಸೋಲಲ್ಪಡುವೆನು? ಪತ್ನಿಯು ಸಮಾನಧರ್ಮಿಣಿಯಷ್ಟೆ! ಪತಿಯು ದಾಸನಾದರೂ ಪತ್ನಿಯು ಅವನೊಟ್ಟಿಗೆ ಕರ್ಮವನ್ನು ಮಾಡಬೇಕು. ಪತಿಯು ಸೋತಿದ್ದರೂ, ನನಗೆ ಪ್ರತ್ಯೇಕವಾಗಿ ದಾಸೀತ್ವವು ಕೂಡಲಾರದಷ್ಟೆ' ಎಂದು ಕೇಳಿದರು.

ಈರೀತಿಯಾಗಿ ಕೇಳಲು ಭೀಷ್ಮಾದಿಗಳು ಕಲಿಯ ಆವೇಶದಿಂದ ಮೋಹಿತರಾಗಿ ಧರ್ಮರಾಜನ ಹತ್ತಿರವೇ ಕೇಳು ಎಂದು ಹೇಳಿ ಸುಮ್ಮನೆ ಆಗಿಬಿಟ್ಟರು. ದುರ್ಯೋಧನನಿಗೆ ವಿರೋಧ ಮಾಡಲಿಕ್ಕೆ ಆಗ ಯಾರೊಬ್ಬರೂ ಸಮರ್ಥರಾಗ ಲಿಲ್ಲ. ವಿದುರನೊಬ್ಬನು ಮಾತ್ರ ಇದು ಧರ್ಮವಲ್ಲವೆಂದು ಸ್ಪಷ್ಟವಾಗಿ ಹೇಳಿದನು. ಅವನ ಮಾತನ್ನು ಧೃತರಾಷ್ಟ್ರನಾಗಲೀ ಅವನ ಮಕ್ಕಳಾಗಲೀ ಅಂಗೀಕರಿಸಲಿಲ್ಲ. ಆಗ ಅವನು ಆ ಅಧರ್ಮವನ್ನು ನಿಲ್ಲಿಸಲು ತನಗೆ ಶಕ್ತಿಯಿಲ್ಲವೆಂದು ದೇವತೆಗಳಿಗೆ ತಿಳಿಸುತ್ತಾ ಕೈಮೇಲೆ ಎತ್ತಿಕೊಂಡು ಇದು ಧರ್ಮವಲ್ಲವೆಂದು ಗಟ್ಟಿಯಾಗಿ ಕೂಗಿಕೊಂಡನು. ದ್ರೌಪದೀದೇವಿಯರೊಡನೆ 'ಅಮ್ಮ! ನೀನು ಧರ್ಮದಿಂದ ಸೋಲಲ್ಪಡಲಿಲ್ಲ. ಈ ಸಭೆಯಲ್ಲಿ ಮಹತ್ತಾದ ಅಧರ್ಮವು ಆಕ್ರಮಿಸಿರುವುದು' ಎಂದನು. ವಿದುರನು ಹಾಗೆ ಹೇಳಲು ದುರ್ಯೋಧನನ ತಮ್ಮನಾದ ವಿಕರ್ಣನು ಪಾಪಿಯಾದರೂ ಡಂಭಕ್ಕಾಗಿ ತಾನು ಧರ್ಮವನ್ನು ತಿಳಿದವನೆಂದು ತೋರಿಸುವುದಕ್ಕಾಗಿ 'ಇದು ಅಧರ್ಮವೇ ಸರಿ' ಎಂದು ಹೇಳಿದನು. ಆಗ ಕರ್ಣನು ಅವನನ್ನು ಬೆದರಿಸಿದನು.

ಆಗ ಭೀಮಸೇನದೇವರು ಲೋಕರೀತಿಯಿಂದ ಕ್ಲೇಶಪಡುತ್ತಿರುವ ದ್ರೌಪದೀ ದೇವಿಯರನ್ನು ನೋಡಿ, ಧರ್ಮರಾಜನು ಧರ್ಮವನ್ನು ಮೀರಿರುವುದನ್ನು ನೋಡಿ, ರಾಜನು ಧರ್ಮವನ್ನು ತಪ್ಪಿದರೆ ಯುವರಾಜನು ಶಿಕ್ಷಿಸಬೇಕೆಂದು ನ್ಯಾಯವಿರುವುದ ರಿಂದ ''ಈ ದ್ರೌಪದಿಯನ್ನು ಪಗಡೆಯಾಟದಲ್ಲಿ ಪಂದ್ಯವನ್ನಾಗಿ ಇಟ್ಟವರ ಎರಡು ಕೈಗಳನ್ನು ಸುಟ್ಟುಹಾಕಬೇಕು' ಎಂದು ಹೇಳಿದರು. ಆಗ ಅರ್ಜುನನು ಹಾಗೆ

ಮಾಡಬಾರದು ಎಂದನು. ಆಗ ಭೀಮಸೇನದೇವರು 'ಬಾಯಿಯಿಂದ ಹೇಳಬೇಕಷ್ಟೆ. ಕಾರ್ಯತಃ ಮಾಡಬಾರದು. ಅದಕ್ಕಾಗಿಯೇ ನಾನು ಹೇಳಿದೆನಷ್ಟೆ. ಮಾಡಲಿಲ್ಲ. ಉತ್ತಮರಿಗೆ ಬಾಯಿಯಿಂದ ಶಿಕ್ಷೆ. ಮಧ್ಯಮರಿಗೆ ಹಣವನ್ನು ಅಪಹರಿಸುವುದು ಶಿಕ್ಷೆಯು. ಅಧಮರಿಗೆ ದೇಹಶಿಕ್ಷೆಯೇ ಶಿಕ್ಷೆಯು. ಆದುದರಿಂದ ಧರ್ಮರಾಜನಿಗೆ ಬಾಯಿಯಿಂದ ಹೇಳಬಹುದು' ಎಂದು ಹೇಳಿದರು.

ತರುವಾಯ ಕರ್ಣನು ದ್ರೌಪದೀದೇವಿಯರನ್ನು ನೋಡಿ 'ಸುಂದರಿ! ನಿನಗೆ ಗಂಡಂದಿರೇ ಇಲ್ಲ. ದುರ್ಯೋಧನನ ಮನೆಗೆ ಹೋಗು' ಎಂದನು.

ಆಗ ದುರ್ಯೋಧನನು ಪಾಂಡವರಿಗೆ ಪರಸ್ಪರ ವಿರೋಧವನ್ನು ಉಂಟುಮಾಡಬೇಕೆಂಬ ಅಭಿಪ್ರಾಯದಿಂದ ದ್ರೌಪದೀದೇವಿಯರೊಡನೆ 'ಯುಧಿಷ್ಠಿರನೊಬ್ಬನೇ ನಿನ್ನ ದುಃಖಕ್ಕೆ ಕಾರಣ. ಅವನನ್ನು ಉಳಿದವರು ನಮಗೆ ಗುರುವಲ್ಲ ಎನ್ನಲಿ. ಅಥವಾ ಭೀಮಾರ್ಜುನರು ಅವನನ್ನು ನಮ್ಮ ಗುರುವಲ್ಲ ಎನ್ನಲಿ. ಅಥವಾ ಭೀಮನೊಬ್ಬನೇ ನನ್ನ ಗುರುವಲ್ಲವೆನ್ನಲಿ. ಆಗ ನಿನ್ನನ್ನು ಬಿಟ್ಟು ಬಿಡುವೆನು' ಎಂದನು.

ಆಗ ಭೀಮಸೇನದೇವರು 'ಧರ್ಮರಾಜನು ನಮಗೆಲ್ಲಾ ಅತ್ಯಂತ ಪೂಜ್ಯನು. ಗುರುವು. ಈ ವಿಷಯದಲ್ಲಿ ಸಂದೇಹವಿಲ್ಲ. ನಿಮಗೆಲ್ಲಾ ನಾನು ಗುರುವು. ಏಕೆಂದರೆ ಕ್ಷತ್ರಿಯರಲ್ಲಿ ಬಲ ಹೆಚ್ಚಿಗೆ ಇರುವವನೇ ಗುರುವು. ನನ್ನ ಬಲದ ಆಧಿಕ್ಯವಿರುವ ಪಕ್ಷದಲ್ಲಿ ಯುದ್ಧಕ್ಕೆ ಬನ್ನಿರಿ. ನಿಮ್ಮನ್ನೆಲ್ಲಾ ಕಾಲಿನಿಂದ ಒದೆದು ಪುಡಿ ಮಾಡುವೆನು' ಎಂದು ಹೇಳುತ್ತಾ ಎದ್ದು ನಿಂತನು. ಆಗ ಸಭೆಯೆಲ್ಲಾ ಭಯದಿಂದ ನಡುಗಿ ಹೋಯಿತು. ಒಬ್ಬರೂ ಮಾತಾಡಲಿಲ್ಲ. ಭೀಷ್ಮರೂ ದ್ರೋಣರೂ ವಿದುರಾದಿಗಳೂ 'ನೀನು ಹೇಳಿದ್ದೆಲ್ಲಾ ಸತ್ಯವು. ಕ್ಷಮಿಸು' ಎಂದು ಹೇಳಿ ಕೈಹಿಡಿದು ಕೂತುಕೊಳ್ಳಿಸಿದರು. ಆಗ ದುರ್ಯೋಧನಾದಿಗಳು ಶಾಂತಿಯನ್ನು ಹೊಂದಿದರು. ಧರ್ಮರಾಜನಿಂದಲೂ ಇತರ ದೊಡ್ಡವರಿಂದಲೂ ತಡೆಯಲ್ಪಟ್ಟವರಾಗಿ ದೊಡ್ಡವರ ಬಹುಮಾನಕ್ಕಾಗಿ ಭೀಮಸೇನದೇವರು ದುರ್ಯೋಧನಾದಿಗಳನ್ನು ಸಂಹರಿಸಲಿಲ್ಲ. ದುರ್ಯೋಧನಾದಿಗಳ ಪಾಪ ಅಭಿವೃದ್ಧಿಗಾಗಿಯೂ ಅಣ್ಣನಾದ ಧರ್ಮರಾಜನನ್ನು ಮೀರಲಿಲ್ಲ.

ತರುವಾಯ ಪಾಪಿಯಾದ ದುರ್ಯೋಧನನು ಭೀಮಸೇನದೇವರು ನೋಡುವಂತೆ ದ್ರೌಪದೀದೇವಿಯರಿಗೆ ತನ್ನ ತೊಡೆಯನ್ನು ತೋರಿಸಿದನು. ಆಗ ಭೀಮಸೇನದೇವರು 'ನಿನ್ನ ಈ ತೊಡೆಯನ್ನು ಗದೆಯಿಂದ ಸೀಳಿ ಹಾಕುವೆನು' ಎಂದರು. ಆಮೇಲೆ ದುರ್ಯೋಧನನು 'ಇನ್ನು ನಿಮಗೆ ಪಂದ್ಯವಾಗಿ ಇಡಲಿಕ್ಕೆ ಬೇರೆಯೊಂದೂ ಇಲ್ಲ. ಕೃಷ್ಣನನ್ನೇ ಪಂದ್ಯವಾಗಿ ಇಡಿರಿ' ಎಂದನು. ಈರೀತಿಯಾಗಿ

ಪಾಪಿಯು ಶ್ರೀಕೃಷ್ಣಪರಮಾತ್ಮನ ಅವಮಾನವನ್ನು ಮಾಡಲು ಭೀಮಸೇನದೇವರು ದುರ್ಯೋಧನನು ನಿನ್ನನ್ನು ಕೆಳಗೆ ಬೀಳಿಸಿ ತಲೆಯನ್ನು ಚೆನ್ನಾಗಿ ಮೆಟ್ಟಿಹಾಕುವೆನು' ಎಂದರು. ಯಾರು ದೂರದಲ್ಲಿಯಾದರೂ ಪರಮಾತ್ಮನನ್ನು ನಿಂದಿಸುವರೋ ಅವರನ್ನು ಕೊಂದು ಹಾಕುವೆನೆಂದು ಭೀಮಸೇನದೇವರ ಪ್ರತಿಜ್ಞೆಯು. ಆದರೂ ಮತ್ತೂ ಪಾಪ ಅಭಿವೃದ್ಧಿಗಾಗಿ ಆಗಲೇ ಸಂಹರಿಸಲಿಲ್ಲ.

ಆಮೇಲೆ ಕರ್ಣನು ದ್ರೌಪದೀದೇವಿಯೊಡನೆ 'ನೀನು ದುರ್ಯೋಧನನ ಮನೆಗೆ ಹೋಗು. ಪಾಂಡವರು ಇಲ್ಲ' ಎಂದನು. ಆಗ ಭೀಮಸೇನದೇವರೂ ಅರ್ಜುನನೂ ಎದ್ದು ನಿಂತರು. ಧರ್ಮರಾಜನು ಅವರಿಬ್ಬರನ್ನು ತಡೆದು ಕೂತುಕೊಳ್ಳಿಸಿದನು. ತರುವಾಯ ದುರ್ಯೋಧನನು 'ದುಃಶಾಸನ! ಈ ನಮ್ಮ ದಾಸರ ವಸ್ತ್ರಗಳನ್ನು ಸೆಳೆದುಕೊಳ್ಳು' ಎಂದು ಹೇಳಿದನು. ದುಃಶಾಸನನು ಪಾಂಡವರ ಬಳಿಗೆ ಹೋದನು. ಅವರು ನಾರುವಸ್ತ್ರವನ್ನು ಧರಿಸಿ ತಮ್ಮ ವಸ್ತ್ರಗಳನ್ನು ಕೊಟ್ಟು ಬಿಟ್ಟರು. ಮತ್ತು ದುರ್ಯೋಧನನು ಹೇಳಲು ದುಃಶಾಸನನು ಪಾಂಡವರೆಲ್ಲರೂ ನೋಡುತ್ತಿರುವಂತೆ ದ್ರೌಪದೀದೇವಿಯರ ಸೀರೆಯನ್ನು ಸೆಳೆದನು. ಆಗ ಭೀಮಸೇನದೇವರು 'ಪಾಪಿಗಳಲ್ಲಿ ಪ್ರಥಮನಾದ ಧರ್ಮಶೀಲರಾದ ಕುರುಗಳ ವಂಶದಲ್ಲಿ ಅಧಮನಾದ ದುಃಶಾಸನನ ಎದೆಯನ್ನು ಸೀಳಿ ಎಲ್ಲರ ಎದುರಲ್ಲಿ ರಕ್ತಪಾನ ಮಾಡುವೆನು' ಎಂದು ಪ್ರತಿಜ್ಞಾ ಮಾಡಿದರು. ವಿಶೇಷವಾಗಿ ಶ್ರೀಕೃಷ್ಣಪರಮಾತ್ಮನನ್ನು ಸ್ಮರಿಸಿದರು. ಆಗ ದುಃಶಾಸನನು ಒಂದು ಸೀರೆಯನ್ನು ಸೆಳೆಯಲು ಮತ್ತೊಂದು ಸೀರೆಯಾಯಿತು. ಅದನ್ನು ಸೆಳೆಯಲು ಇನ್ನೊಂದು ಸೀರೆಯಾಯಿತು. ಹೀಗೆಯೇ ಸೀರೆಗಳು ಬೆಳೆಯುತ್ತಾ ಹೋದವು. ದುಃಶಾಸನನೇ ಶ್ರಮದಿಂದ ಸಭೆಯಲ್ಲಿ ಕೂತುಕೊಂಡನು. ಬೆಟ್ಟದಂತೆ ವಸ್ತ್ರದ ರಾಶಿಯಾಗಲು ದುರ್ಯೋಧನನು ಕೋಪಿಸಿಕೊಂಡು 'ಇವಳನ್ನು ಮನೆಯೊಳಗೆ ಎಳೆದುಕೊಂಡು ಹೋಗು. ಯಾಕೆ ಸಾವಕಾಶಮಾಡುವಿ?' ಎಂದನು. ಅದನ್ನು ಕೇಳಿ ದ್ರೌಪದೀ ದೇವಿಯರು 'ಭೀಮಸೇನದೇವರು ದುರ್ಯೋಧನನನ್ನು ಸಂಹರಿಸುವರು. ಅರ್ಜುನನು ಕರ್ಣನನ್ನು ಸಹದೇವನು ಶಕುನಿಯನ್ನು ಸಂಹರಿಸುವರು' ಎಂದು ಪ್ರತಿಜ್ಞೆಯನ್ನು ಮಾಡಿದರು. ಆ ಭೀಮಸೇನದೇವರೂ ಅರ್ಜುನನೂ ಸಹದೇವನೂ ಆ ಪ್ರತಿಜ್ಞೆಯನ್ನು ಅಂಗೀಕರಿಸಿದರು. ಆಗ ನಕುಲನು ಶಕುನಿಯ ಮಗನನ್ನು ಸಂಹರಿಸುವೆನೆಂದು ಪ್ರತಿಜ್ಞೆಯನ್ನು ಮಾಡಿದನು.

ತರುವಾಯ ದುಃಶಾಸನನು ದ್ರೌಪದೀದೇವಿಯರನ್ನು ಮನೆಯ ಒಳಗೆ

ಎಳೆದುಕೊಂಡು ಹೋಗುವೆನೆಂದು ಸೆಳೆದನು. ಅದನ್ನು ನೋಡಿ ಭೀಮಸೇನ ದೇವರು ಕೋಪವುಳ್ಳವರಾಗಿ 'ಅರ್ಜುನ! ಅರ್ಜುನ! ಇನ್ನು ಮೇಲೆ ನಾನು ಕ್ಷಮಿಸಲಾರೆನು. ಕಟ್ಟಿಗೆಯಂತೆ ಇರುವ ಬಿದ್ದು ಹೋಗುವ ಈ ದೇಹಕ್ಕೆ ವಿದ್ಯಾ ಕರ್ಮ ಮಕ್ಕಳು ಎಂದು ಮೂರು ಫಲವೆನ್ನುವರು. ಇದು ವೇದದಲ್ಲಿ ಹೇಳಲ್ಪಟ್ಟಿದೆ. ಪತ್ನಿಯು ಕೆಟ್ಟು ಹೋದರೆ ಮಕ್ಕಳಾಗಲಾರರು. ಪತ್ನಿಯು ಕೆಟ್ಟು ಹೋದವನು ಉತ್ತಮ ಲೋಕವನ್ನು ಹೊಂದಲಾರನು. ಅವನ ಅರ್ಧವು ದೂಷಿತವಾಗಿರುವುದು. ನಾವಾಗಿ ರಕ್ಷಿಸದೆ ಪತ್ನಿಯು ಕೆಟ್ಟುಹೋದರೆ ಅಂತವಳನ್ನು ಪರಿತ್ಯಾಗ ಮಾಡಿದರೂ, ಶುಭವಾಗಲಾರದು. ಆದುದರಿಂದ ಈಗಲೇ ಈ ದುರ್ಯೋಧನಾದಿಗಳನ್ನೆಲ್ಲಾ ಕೊಂದು ಹಾಕುವೆನು' ಎಂದು ಹೇಳುತ್ತಾ ಕೋಪದಿಂದ ಶತ್ರುವನ್ನು ನೋಡಿದನು. ಎಲ್ಲರನ್ನು ಕೊಂದು ಹಾಕುವೆನೆಂದು ಅಭಿಪ್ರಾಯದಿಂದ ಅಲ್ಲಿಯೇ ಇದ್ದ ಘೋರವಾದ ಪರಿಘವೆಂಬ ಆಯುಧವನ್ನು ತೆಗೆಯಲಿಕ್ಕೆ ನೋಡಿದರು.

ಆಗ ದುರ್ಯೋಧನನ ಅಗ್ನಿಗೃಹದಲ್ಲಿ ಹೆಣ್ಣು ನರಿಗಳು ಪ್ರವೇಶಿಸಿ ಕೂಗಲಿಕ್ಕೆ ಆರಂಭಿಸಿದವು. ಅದೇ ರೀತಿಯಾದ ಧೃತರಾಷ್ಟ್ರನ ಅಗ್ನಿಗೃಹದಲ್ಲಿ ನರಿಗಳು ಕೂಗಿದವು. ಅನೇಕ ಭಯಂಕರ ಉತ್ಪಾತಗಳು ನಡೆದವು. ಅದನ್ನು ತಿಳಿದು ಧೃತರಾಷ್ಟ್ರನು ಬೇಗನೆ ಅವುಗಳ ಫಲವನ್ನು ವಿದುರನೊಡನೆ ಕೇಳಿದನು. ವಿದುರನು 'ನಿನ್ನ ಮಕ್ಕಳು ಈ ಕ್ಷಣದಲ್ಲಿಯೇ ಪರಿವಾರ ಸಹಿತರಾಗಿ ಭೀಮಸೇನನ ಕ್ರೋಧಾಗ್ನಿಯಿಂದ ಉರಿದುಹೋಗುವರು' ಎಂದನು. 'ನೀನು ಚಿಕ್ಕ ಕೂಸಿನಂತೆ ಏನು ಜಯಿಸಿದಿ ಏನು ಜಯಿಸಿದಿ ಎಂದು ಹೇಳುತ್ತಾ ಆಟ ಆಡುವವನಾಗಿರುವಿ. ಅಧರ್ಮದಿಂದ ಸೋತ ಪಾಂಡವರನ್ನು ಧರ್ಮದಿಂದ ಸೋತರು ಎಂದು ತಿಳಿದುಕೊಂಡಿರುವಿ. ಸ್ತ್ರೀಯರಲ್ಲಿ ಕೊಟ್ಟದ್ದೂ, ಪಗಡೆಯಾಟದಲ್ಲಿ ಕೊಟ್ಟದ್ದೂ, ಮದಾಂಧ ಪುರುಷನು ಕೊಟ್ಟದ್ದೂ, ಕೊಟ್ಟದ್ದಕ್ಕೆ ಸೇರಿದ್ದಲ್ಲ. ಅದನ್ನು ಪುನಃ ಬಂಧುಗಳು ಸ್ವೀಕರಿಸಬಹುದು. ಆದರೆ ಹಾಗೆ ಪಾಂಡವರು ಮಾಡಲಿಲ್ಲ. ನಿನ್ನ ಮಕ್ಕಳ ಅಯೋಗ್ಯತೆಯನ್ನು ತೋರಿಸುವುದಕ್ಕಾಗಿ ಪಾಂಡವರು ಅಪಹರಿಸದೆ ಇರುವರು' ಎಂದು ಹೇಳಿದನು.

ಅದಕ್ಕೆ ಧೃತರಾಷ್ಟ್ರನು 'ಏನು ಮಾಡಿದಿರೆ ಈ ಶಕುನಗಳ ಫಲಗಳು ಆಗಲಾರವು' ಎಂದು ಕೇಳಿದನು. 'ಬೇಗನೇ ದ್ರೌಪದಿಯನ್ನು ಬಿಡಿಸು. ಅವಳಿಗೆ ಬೇಕಾದ ವರಗಳನ್ನು ಕೊಟ್ಟು ಸಂತೋಷಪಡಿಸು. ಇಲ್ಲದಿದ್ದರೆ ಈಗಲೇ ನಿನ್ನ ಮಕ್ಕಳು ಭೀಮನಿಂದ ಪುಡಿಪುಡಿಯಾಗಿ ಸಾಯುವರೆಂದು ತಿಳಿಯು. ಇದಕ್ಕೆ ಸಂಶಯವೇ

ಇರುವುದಿಲ್ಲ. ದ್ರೌಪದೀದೇವಿಯೂ ಪಾಂಡವರೂ ತಮ್ಮ ತಪಸ್ಸು ಹಾಳಾಗಬಾರದೆಂದು ನಿನ್ನ ಮಕ್ಕಳನ್ನು ತಪಸ್ಸಿನ ಸಾಮರ್ಥ್ಯದಿಂದ ನಿನ್ನ ಮಕ್ಕಳನ್ನು ಸುಡದೆ ಇದ್ದಾರೆ. ಆದರಿಂದ ನಿನ್ನ ಮಕ್ಕಳು ಬದುಕಿದ್ದಾರೆ. ಹಾಗಿದ್ದರೂ ನೀನು ದ್ರೌಪದಿಯನ್ನು ಬಿಡಿಸದೆ ಇದ್ದರೆ ಭೀಮಸೇನನು ನಿನ್ನ ಮಕ್ಕಳನ್ನು ತನ್ನ ಬಲದಿಂದಲೇ ಸಂಹರಿಸುವನು' ಎಂದು ವಿದುರನು ಹೇಳಿದನು.

ಆಗ ಧೃತರಾಷ್ಟ್ರನು ಮಗನಾದ ದುಃಶಾಸನನನ್ನು ಬೆದರಿಸಿ ದ್ರೌಪದೀ ದೇವಿಯರನ್ನು ಬಿಡಿಸಿದನು. ಬೇಕಾದ ವರವನ್ನು ಕೇಳಿಕೊಳ್ಳಲಿಕ್ಕೆ ಹೇಳಿದನು. ಆಗ ದ್ರೌಪದೀದೇವಿಯರು ಶುದ್ಧಭಾಗವತ ಧರ್ಮದಲ್ಲಿ ಇದ್ದವರಾದ ಕಾರಣ ತನಗಾಗಿ ವರವನ್ನು ಕೇಳಿಕೊಳ್ಳಲಿಲ್ಲ. ಧರ್ಮರಾಜನನ್ನು ಅವನ ಸಹೋದರರನ್ನು ರಾಜ್ಯವನ್ನೂ ಬಿಡಿಸಬೇಕೆಂದು ಕೇಳಿಕೊಂಡಳು. ಆಮೇಲೆ ವರವನ್ನು ಕೇಳಲಿಕ್ಕೆ ಹೇಳಿದರೂ ಕೇಳಿಕೊಳ್ಳಲಿಲ್ಲ. ಪತಿಯಿಂದಲೂ ಪರಮಾತ್ಮನಿಂದಲೂ ಹೊರತು ಇತರರಿಂದ ವರವನ್ನು ಕೇಳಬಾರದೆಂದು ಭಾಗವತಧರ್ಮವು. ಆದುದರಿಂದ ಬೇರೆ ಯಾವುದನ್ನೂ ಕೇಳಲಿಲ್ಲ. ಪಾಂಡವರನ್ನೂ ರಾಜ್ಯವನ್ನೂ ದುರ್ಯೋಧನಾದಿಗಳು ಅಧರ್ಮದಿಂದ ಜಯಿಸಿದ ಕಾರಣ ಅದನ್ನು ಕೇಳಿದರೆ ವರವನ್ನು ಕೇಳಿದಂತೆ ಆಗಲಾರದು ಎಂದು ಅಷ್ಟನ್ನು ಮಾತ್ರ ಕೇಳಿಕೊಂಡರು. ಮತ್ತು ಮಾವನಿಂದ ಕ್ಷತ್ರಿಯಸ್ತ್ರೀಯು ಮೂರು ಐಹಿಕವರಗಳನ್ನು ಕೇಳಬಹುದೆಂದೂ, ಬ್ರಾಹ್ಮಣಸ್ತ್ರೀಯು ನೂರು ವರಗಳನ್ನು ಕೇಳಬಹುದೆಂದೂ, ಭಾಗವತಧರ್ಮವು. ಆದುದರಿಂದ ದ್ರೌಪದೀದೇವಿಯರು ಬೇರೆ ಯಾವ ವರವನ್ನು ಕೇಳಿಕೊಳ್ಳಲಿಲ್ಲ. ತರುವಾಯ ಪಾಂಡವರು ಬಿಡಲ್ಪಟ್ಟವರಾಗಿ ದೊಡ್ಡವರಿಗೆಲ್ಲಾ ನಮಸ್ಕರಿಸಿ ದ್ರೌಪದೀ ದೇವಿಯರಿಂದ ಸಹಿತರಾಗಿ ಇಂದ್ರಪ್ರಸ್ಥಕ್ಕೆ ಹೋದರು.



# ಪುನಃ ದ್ಯೂತವು [1]

ಪಾಂಡವರು ಹೊರಟು ಹೋದಮೇಲೆ ಪಾಪಿಗಳಲ್ಲಿ ಪ್ರಧಾನನಾದ ದುಃಶಾಸನನು ಧೃತರಾಷ್ಟ್ರನೊಡನೆ 'ನಮಗೆ ಕೈಗೆ ಬಂದು ಸೇರಿದ ಪಾಂಡವರ ಸಂಪತ್ತನ್ನು ನಮ್ಮ ಕೈಯಿಂದ ತಪ್ಪಿಸಿದೆಯಲ್ಲಾ! ಹೇಗಾದರೂ ಭೀಮಸೇನನು ನಮ್ಮನ್ನು ಕೊಲ್ಲದೆ ಬಿಡುವುದಿಲ್ಲ. ಆದುದರಿಂದ ನಮಗಾಗಿ ಪುನಃ ಪಾಂಡವರನ್ನು ಕರೆಸು ಸೋತುಹೋದವರು ವನಕ್ಕೆ ಹೋಗಲಿ' ಎಂದು ಹೇಳಿದನು. ಧೃತರಾಷ್ಟ್ರನು ಅದಕ್ಕೆ ಒಪ್ಪಿ ಪುನಃ ಪಾಂಡವರಿಗೆ ಪಗಡೆ ಆಟಕ್ಕೆ ಬರಬೇಕೆಂದು ಹೇಳಿ ಕಳುಹಿಸಿದನು.

ಧೃತರಾಷ್ಟ್ರನು ಪಗಡೆ ಆಟಕ್ಕೆ ಕೂಗುವನೆಂದು ಭೃತ್ಯನು ಬಂದು ಹೇಳಲು ಧರ್ಮರಾಜನು ಸಹೋದರರೂ ದ್ರೌಪದೀದೇವಿಯರೂ ಬೇಡವೆಂದರೂ ಕೇಳದೆ ಸಭೆಗೆ ಹೋದನು. ದುರ್ಯೋಧನನು ದುಃಶಾಸನು ಹೇಳಿಕೊಟ್ಟಂತೆ ಪಂದ್ಯವನ್ನು ಮಾಡಿದನು. 'ಸೋತುಹೋದವರು ಹನ್ನೆರಡು ವರ್ಷಕಾಲ ವನದಲ್ಲಿ ವಾಸಮಾಡಬೇಕು. ಮತ್ತೆ ಒಂದು ವರ್ಷಕಾಲ ನಮ್ಮ ಊರಿಗೆ ಸಮೀಪದಲ್ಲಿಯೇ ಪ್ರಸಿದ್ಧನಾದ ಒಬ್ಬ ರಾಜನ ನಗರದಲ್ಲಿ ತಿಳಿಯದಂತೆ ವಾಸಮಾಡಬೇಕು. ಆ ಸಮಯದಲ್ಲಿ ದ್ರೌಪದೀದೇವಿಯನ್ನೋ ಪಾಂಡವರಲ್ಲಿ ಒಬ್ಬನನ್ನೋ ಯಾರನ್ನಾದರೂ ಕಂಡುಹಿಡಿದರೆ ಎಲ್ಲರೂ ಪುನಃ ಹನ್ನೆರಡು ವರ್ಷ ವನವಾಸ ಮಾಡಬೇಕು. ಪುನಃ ಒಂದು ವರ್ಷ ಅಜ್ಞಾತವಾಸ ಮಾಡಬೇಕು. ಆ ಅಜ್ಞಾತವಾಸ ಸಮಯದಲ್ಲಿಯೂ ಯಾರನ್ನಾದರೂ ಒಬ್ಬರನ್ನಾದರೂ ಕಂಡುಹಿಡಿದರೆ ಪುನಃ ಹಾಗೆಯೇ ಹನ್ನೆರಡು ವರ್ಷ ವನವಾಸ ಒಂದು ವರ್ಷ ಅಜ್ಞಾತವಾಸವನ್ನು ಮಾಡಬೇಕು' ಎಂದು ದುರ್ಯೋಧನನು ಹೇಳಿದನು. ತರುವಾಯ ಶಕುನಿಯೊಡನೆ ಧರ್ಮರಾಜನು ಪುನಃ ಪಗಡೆ ಆಟವನ್ನು ಆಡಿ ಸೋತುಹೋದನು.

ಅನಂತರದಲ್ಲಿ ಸಹೋದರರಿಂದ ಸಹಿತನಾಗಿ ಧರ್ಮರಾಜನು ವನಕ್ಕೆ ಹೋಗಲು ಆರಂಭಿಸಲು ದುಃಶಾಸನನು ಭೀಮಸೇನದೇವರನ್ನು ನೋಡಿ ನಗುತ್ತಾ ಪಶುಪಶು ಎಂದು ಹೇಳುತ್ತಾ ಕುಣಿದನು. ಮತ್ತು ಕುಣಿಯುತ್ತಲೇ ದ್ರೌಪದೀ ದೇವಿಯರೊಡನೆ 'ಸುಂದರಿ! ನಿನ್ನ ಗಂಡಂದಿರು ಇಲ್ಲ. ದುರ್ಯೋಧನನ ಮನೆಗೆ ಹೋಗು. ಇವರೆಲ್ಲಾ ಹೊಟ್ಟಾದ ಎಳ್ಳಿನಂತೆ ಇರುವವರು. ಅಂಧಂತಮಸ್ಸಿನಲ್ಲಿ ಬಿದ್ದರು. ಇನ್ನು ಮೇಲೆ ಬರುವಂತಿಲ್ಲ' ಎಂದು ಹೇಳುತ್ತಾ ಭೀಮಸೇನದೇವರು ನಡೆಯುವಂತೆಯೇ ಅವನ ಹಿಂದೆಯೇ ನಡೆಯುತ್ತಾ ಹೋದನು. ಆಗ

1. ಮ.ತಾ.ನಿ. ಅ-21

ದುರ್ಯೋಧನಾದಿಗಳೆಲ್ಲರೂ ನಗುವವರಾದರು. ಆಗ ಭೀಮಸೇನದೇವರು 'ನಾನು ನಿಮ್ಮನ್ನೆಲ್ಲರನ್ನೂ ಯುದ್ಧದಲ್ಲಿ ಸಂಹರಿಸುವೆನು' ಎಂದು ಪ್ರತಿಜ್ಞಾಮಾಡಿದರು. ಆಗ ಎಲ್ಲಾ ದುರ್ಯೋಧ ನಾದಿಗಳೂ ದ್ರೋಣಾಚಾರ್ಯರನ್ನು ಮರೆಹೊಂದಿದರು. ದ್ರೋಣಾಚಾರ್ಯರಿದ್ದ ಪಕ್ಷದಲ್ಲಿ ಅವರ ಮಗನಾದ ಅಶ್ವತ್ಥಾಮಾಚಾರ್ಯರೂ, ಭೀಷ್ಮಾಚಾರ್ಯರೂ ಇರುವರು. ಇಷ್ಟು ದೊಡ್ಡವರನ್ನೆಲ್ಲಾ ಭೀಮಸೇನದೇವರು ಅತಿಕ್ರಮಿಸಲಾರರು ಎಂದು ಅಭಿಪ್ರಾಯದಿಂದ ದುರ್ಯೋಧನಾದಿಗಳು ದ್ರೋಣಾ ಚಾರ್ಯರನ್ನು ಮರೆಹೊಂದಿದರು. ಆಗ ದ್ರೋಣಾಚಾರ್ಯರು ಅವರೊಡನೆ 'ನಾನು ಬ್ರಾಹ್ಮಣನಾಗಿದ್ದರೂ ನಿಮಗಾಗಿ, ಮಗನಿಂದಲೂ ಕೃಪಾಚಾರ್ಯರಿಂದಲೂ ಸಹಿತನಾಗಿ ಶಸ್ತ್ರಗಳನ್ನು ಹಿಡಿಯುವೆನು. ಆದರೆ ನಿಮ್ಮನ್ನು ಭೀಮಸೇನನಿಂದ ರಕ್ಷಣೆ ಮಾಡಲಿಕ್ಕೆ ಶಕ್ತನಾಗಲಾರೆನು. ಸತ್ಯವಾಗಿಯೂ ಹೇಳುವೆನು' ಎಂದು ಹೇಳಿದರು.

ತರುವಾಯ ಪಾಂಡವರು ದ್ರೌಪದೀದೇವಿಯರಿಂದ ಸಹಿತರಾಗಿ ಆ ಅಯೋಗ್ಯರ ಸಭೆಯಿಂದ ಹೊರಟುಹೋದರು. ಸಿಂಹದಂತೆ ನಡೆಯುತ್ತಿರುವ ಭೀಮಸೇನದೇವರು ನಡೆಯುವಂತೆಯೇ ಅದರ ಹಿಂದೆ ಅಪಹಾಸ ಮಾಡುತ್ತಾ ದುರ್ಯೋಧನನು ಹೋದನು. ಸಭೆಯಿಂದ ಅರ್ಧದೇಹವನ್ನು ಹೊರಗೆ ಇಟ್ಟವರು ಹಿಂದೆ ತಿರುಗಿ ಕಣ್ಣುಕೆಂಪಗೆ ಮಾಡಿಕೊಂಡು 'ನಿನ್ನ ಇನ್ನೊಂದು ತೊಡೆಯನ್ನು ಯುದ್ಧದಲ್ಲಿ ಮುರಿದು ಹಾಕುವೆನು' ಎಂದು ಹೇಳಿ ಆ ಅಯೋಗ್ಯರ ಸಭೆಯಿಂದ ಹೊರಟುಹೋದರು. ಆಗ ಕುಂತಿಯು ಅವರ ಹಿಂದೆಯೇ ಅಳುತ್ತಾ ಹೋದಳು. ವಿದುರನು ಅವಳನ್ನು ತನ್ನ ಮನೆಯಲ್ಲಿ ಇರಿಸಿಕೊಂಡನು.

ಪಾಂಡವರು ದ್ರೌಪದೀದೇವಿಯರಿಂದ ಸಹಿತನಾಗಿ ಕುಂತೀದೇವಿಗೆ ನಮ ಸ್ಕರಿಸಿ ಬೇಗನೇ ಹೊರಟುಹೋದರು. ಯುಧಿಷ್ಠಿರನು ಹೋಗುವಾಗ ಮುಖವನ್ನು ತಗ್ಗಿಸಿಕೊಂಡು ಹೋದನು. ಕೌರವರನ್ನು ಕ್ರೋಧಯುಕ್ತವಾದ ದೃಷ್ಟಿಯಿಂದ ಸುಟ್ಟುಹಾಕ ಬಾರದೆಂದು ಕರುಣೆಯಿಂದ ಅವನು ಹಾಗೆ ಮಾಡಿದನು. ಭೀಮಸೇನದೇವರು ಇದೇ ಎರಡು ಕೈಗಳಿಂದ ಶತ್ರುಗಳನ್ನೆಲ್ಲಾ ಕೊಂದು ಹಾಕಲು ಶಕ್ತನೆಂದು ಸೂಚಿಸುತ್ತಾ ಎರಡು ಬಾಹುಗಳನ್ನೂ ಎತ್ತಿಕೊಂಡು ಹೋದರು. ಅರ್ಜುನನು ಶತ್ರುಗಳಲ್ಲಿ ಇದೇ ರೀತಿಯಾಗಿ ಬಾಣಗಳನ್ನು ಸುರಿಸುತ್ತೇನೆಂದು ಸೂಚಿಸುತ್ತಾ ಉಸುಬುಗಳನ್ನು ಚೆಲ್ಲುತ್ತಾ ಹೋದನು. ನಕುಲಸಹದೇವರು ಈ ಅವಸ್ಥೆಯಲ್ಲಿ ಶತ್ರುಗಳು ನಮ್ಮ ಮುಖವನ್ನು ನೋಡಬಾರದೆಂದು ಮುಖವನ್ನು ತಗ್ಗಿಸಿಕೊಂಡು ಹೋದರು. ದ್ರೌಪದೀ ದೇವಿಯರು ದುರ್ಯೋಧನಾದಿಗಳೆಲ್ಲರೂ ಸತ್ತು ಅವರ ಪತ್ನಿಯರು ಹೀಗೆಯೇ ತಲೆಕೂದಲನ್ನು ಬಿಚ್ಚಿಕೊಳ್ಳುವರು ಎಂದು

ತಿಳಿಸುವುದಕ್ಕಾಗಿ ತಾನು ತಲೆಕೂದಲನ್ನು ಬಿಚ್ಚಿಕೊಂಡೇ ಸಭೆಯಿಂದ ಹೋದರು. ದುರ್ಯೋಧನಾದಿಗಳು ಸತ್ತಮೇಲೆ ನಾನು ಉತ್ತರಕ್ರಿಯೆಗಳನ್ನು ಮಾಡಬೇಕೆಂದು ತಿಳಿಸುತ್ತಾ ಧೌಮ್ಯಾಚಾರ್ಯರು ಪ್ರೇತಸೂಕ್ತಗಳನ್ನು ಜಪಿಸುತ್ತಾ ಹೋದರು. ಅವರ ಹಿಂದೆ ಪಾಂಡವರ ಸಾರಥಿಗಳೂ ಸುತ್ತಲೂ ಹದಿನಾಲ್ಕು ಉಪರಥಗಳಿಂದ ಸಹಿತಗಳಾದ ರಥಗಳಿಂದ ಕೂಡಿಕೊಂಡು ಹೋದರು. ಅಡಿಗೆ ಮಾಡುವವರೂ ಅವರ ಅಧ್ಯಕ್ಷರೂ ಇನ್ನೂ ಇತರ ಭೃತ್ಯರೂ ಆಪ್ತರೂ ಪಾಂಡವರ ಹಿಂದೆಯೇ ಹೋದರು. ತರುವಾಯ ಅವರೆಲ್ಲರೂ ಗಂಗಾತೀರದಲ್ಲಿ ಇದ್ದ ಒಂದು ವನದಲ್ಲಿ ಬಂದಿರುವ ಊರಜನರೆಲ್ಲರನ್ನೂ ನೋಡಿ ಒಂದು ಆಲದಮರದ ಬುಡದಲ್ಲಿ ಕೂತುಕೊಂಡರು. ತರುವಾಯ ಜಗತ್ಸ್ವಾಮಿಯಾದ ಶ್ರೀಭಗವಂತನನ್ನು ವಿಶೇಷವಾಗಿ ಸ್ಮರಣೆ ಮಾಡಿದರು.



# ವನಪರ್ವ

## ಪಾಂಡವರು ವನಕ್ಕೆ ಹೋದದ್ದು [1]

ಪಾಂಡವರು ತಮ್ಮ ಒಟ್ಟಿಗೆ ಬರಲಿಚ್ಛಿಸುವ ಊರಜನರನ್ನೆಲ್ಲಾ ಬಹು ಕಷ್ಟದಿಂದ ನಿಲ್ಲಿಸಿ ರಾತ್ರಿಯಲ್ಲಿ ಭಯಂಕರವಾದ ಅರಣ್ಯವನ್ನು ಪ್ರವೇಶಿಸಿದರು. ತರುವಾಯ ಅಲ್ಲಿ ಕಿರ್ಮೀರ ಎಂಬ ರಾಕ್ಷಸನು ಸಿಕ್ಕಿದನು. ಅವನು ಬಕಾಸುರನ ತಮ್ಮನು ರುದ್ರದೇವರ ವರದಿಂದ ಮರಣರಹಿತನಾಗಿದ್ದನು. ಅವನು ಪತ್ನಿಯಿಂದಲೂ ಸಹೋದರ ರಿಂದಲೂ ಸಹಿತರಾದ ಭೀಮಸೇನದೇವರನ್ನು ಕೊಲ್ಲಬೇಕೆಂದು ದೊಡ್ಡದೊಡ್ಡ ಮರಗಳನ್ನು ಪರ್ವತಗಳನ್ನೂ ಬಿಸಾಡುತ್ತಾ ಬಂದನು. ಭೀಮಸೇನದೇವರು ಅವನೊಡನೆ ಭಯಂಕರವಾದ ಯುದ್ಧವನ್ನು ಮಾಡಿ ಅವನನ್ನು ಬೇಗನೇ ಭೂಮಿಯಲ್ಲಿ ಬೀಳಿಸಿ ಸಂಹಾರಮಾಡಿದರು. ಈರೀತಿಯಾಗಿ ರಾಕ್ಷಸನನ್ನು ಸಂಹರಿಸಿದ ಮೇಲೆ ಪಾಂಡವರು ಆ ವನಮಧ್ಯದಲ್ಲಿಯೇ ವಾಸಮಾಡಿದರು.

ಪಾಂಡವರ ಬಳಿಯಲ್ಲಿ ಹತ್ತು ಸಾವಿರ ಯತಿಗಳೂ, ಎಂಭತ್ತ ಎಂಟು ಸಾವಿರ ಗೃಹಸ್ಥಾಶ್ರಮಿಗಳಾದ ಮುನಿಗಳೂ ಇದ್ದರು. ಧರ್ಮರಾಜನು ಇವರನ್ನೆಲ್ಲಾ ಹೇಗೆ

---

1. ಮ.ತಾ.ನಿ. ಅ-21

ರಕ್ಷಣೆ ಮಾಡಲಿ ಎಂದು ಯೋಚಿಸಿ ಸೂರ್ಯನಲ್ಲಿ ಅಂತರ್ಯಾಮಿಯಾದ ಭಗವಂತನನ್ನು ಪೂಜಿಸಿ ಅವನಿಂದ ಅಕ್ಷಯಪಾತ್ರೆಯನ್ನು ಪಡೆದನು. ಆ ಪಾತ್ರೆಯು ಪ್ರತಿನಿತ್ಯವೂ ದ್ರೌಪದೀದೇವಿಯು ಭೋಜನ ಮಾಡುವವರೆಗೆ ಬೇಕಾದ ಅನ್ನವನ್ನು ಭಕ್ಷ್ಯಭೋಜ್ಯಗಳನ್ನು ರತ್ನಾದಿಗಳನ್ನು ಕೊಡುತ್ತಿದ್ದಿತು. ಧರ್ಮರಾಜನು ಪ್ರತಿಯೊಬ್ಬರೂ ಮೂವತ್ತು ದಾಸದಾಸಿಯರಿಂದ ಸಹಿತರಾದ ಪೂರ್ವದಲ್ಲಿ ಹೇಳಿದ ಯತಿಗಳನ್ನು ಗೃಹಸ್ಥಮುನಿಗಳನ್ನು ರಕ್ಷಣೆ ಮಾಡಿದನು. ಎಲ್ಲರೂ ಬಂಗಾರದ ಪಾತ್ರೆಯಲ್ಲಿ ಭೋಜನ ಮಾಡುತ್ತಿದ್ದರು. ಸಜ್ಜನ ಸಹವಾಸವನ್ನು ಅಪೇಕ್ಷಿಸುವವರಾಗಿ ಪೂರ್ವದಲ್ಲಿ ಹೇಳಿದ ಯತಿಗಳೂ ಮುನಿಗಳೂ ಇನ್ನೂ ಇತರ ಮುನಿಗಳೂ ಪಾಂಡವರೊಡನೆ ಭಗವತ್ಕಥೆಗಳನ್ನು ಹೇಳುತ್ತಾ ಕೇಳುತ್ತಾ ವಾಸಮಾಡುತ್ತಿದ್ದರು. ಈರೀತಿಯಾಗಿ ಪಾಂಡವರು ತಮ್ಮ ರಾಜ್ಯಸಂಪತ್ತನ್ನು ಬಿಟ್ಟು ವನದಲ್ಲಿ ದೇವತೆಗಳಂತೆ ಸುಖದಿಂದ ಇದ್ದರು. ಧರ್ಮರಾಜನು ಪ್ರತಿನಿತ್ಯವೂ ಬ್ರಾಹ್ಮಣರಿಗೆ ಲಕ್ಷಗೋದಾನಗಳನ್ನು, ನೂರುಭಾರ (ಇಪ್ಪತ್ತೈದು ತೊಲೆಗೆ ಒಂದು ಭಾರವೆಂದು ಹೆಸರು) ಬಂಗಾರವನ್ನು ದಾನಮಾಡುತ್ತಿದ್ದನು. ಈರೀತಿಯಾಗಿ ಬ್ರಾಹ್ಮಣರಿಂದ ಸಹೋದರರಿಂದ ಕೂಡಿಕೊಂಡು ಸ್ವರ್ಗದಲ್ಲಿ ಇಂದ್ರದೇವರು ಇರುವಂತೆ ಸುಖದಿಂದ ಇದ್ದನು.

ಹಸ್ತಿನಾವತಿಯಲ್ಲಿ ಧೃತರಾಷ್ಟ್ರನು ಪಾಂಡವರು ವನಕ್ಕೆ ಹೊರಟುಹೋದಮೇಲೆ ವಿದುರನನ್ನು ಕರೆದು ನಾನು ಇನ್ನು ಏನು ಮಾಡಬೇಕು? ಎಂದು ಕೇಳಿದನು. ಅದಕ್ಕೆ ವಿದುರನು 'ಪಾಂಡವರನ್ನು ಹಿಂದೆ ಕರೆದು ಅವರ ರಾಜ್ಯವನ್ನು ಕೊಟ್ಟುಬಿಡು' ಎಂದು ಹೇಳಿದನು. ಆ ಮಾತನ್ನು ಕೇಳಿ ಧೃತರಾಷ್ಟ್ರನಿಗೆ ಕೋಪವು ಬಂದಿತು. 'ವಿದುರ! ನೀನು ನನ್ನ ಮಕ್ಕಳಿಗೆ ವಿರೋಧಿಯಾಗಿರುವಿ. ತಿಳಿಯಿತು. ನೀನು ಇಲ್ಲಿ ಇದ್ದು ನನಗೊಂದು ಆಗಬೇಕಾಗಿಲ್ಲ. ನೀನು ಬೇಕಾದರೆ ಇಲ್ಲಿ ಇರು. ಅಥವಾ ನಿನ್ನ ಇಚ್ಛಾನುಸಾರವಾಗಿ ಹೊರಟುಹೋಗು' ಎಂದು ಹೇಳಿದನು. ಇದನ್ನು ಕೇಳಿ ವಿದುರನು ಅಲ್ಲಿಂದ ಹೊರಟು ಪಾಂಡವರಿದ್ದಲ್ಲಿಗೆ ಹೊರಟುಹೋದನು. ವಿದುರನು ಹೊರಟು ಹೋಗಲು ಧೃತರಾಷ್ಟ್ರನು ಅವನ ವಿಯೋಗ ದುಃಖದಿಂದ ಮೂರ್ಛಿತನಾಗಿ ಬಿದ್ದನು. ಸ್ವಲ್ಪ ಹೊತ್ತಿನ ಮೇಲೆ ಜ್ಞಾನವನ್ನು ಹೊಂದಿ 'ಸಂಜಯ! ನಾನು ಬದುಕಿರಬೇಕಾಗಿದ್ದರೆ ನನ್ನ ತಮ್ಮನನ್ನು ಕರೆದುಕೊಂಡು ಬಾ' ಎಂದು ಹೇಳಿದನು. ಆಗ ಸಂಜಯನು ಅಲ್ಲಿಂದ ಹೊರಟು ಬೇಗನೆ ಹೋಗಿ ಪಾಂಡವರ ಬಳಿಯಿಂದ ವಿದುರನನ್ನು ಕರೆದುಕೊಂಡು ಬಂದನು. ವಿದುರನು ಕೋಪವಿಲ್ಲದೆ ಬಂದು ಧೃತರಾಷ್ಟ್ರನಿಗೆ ನಮಸ್ಕರಿಸಿದನು. ಧೃತರಾಷ್ಟ್ರನು ಅವನನ್ನು ಆಲಿಂಗಿಸಿ

ತೊಡೆಯಮೇಲೆ ಕೂತುಕೊಳ್ಳಿಸಿ ಶಿರಸ್ಸನ್ನು ಮೂಸಿ ಬಹುಸಂತೋಷವನ್ನು ಹೊಂದಿದನು.

ವಿದುರನು ಬಂದಿರುವುದನ್ನು ನೋಡಿ ದುರ್ಯೋಧನಾದಿಗಳೂ ಶಕುನಿಯೂ ಕೋಪದಿಂದ ಪಾಂಡವರನ್ನು ಕೊಂದುಹಾಕಬೇಕೆಂದು ಯೋಚಿಸಿ ಕರ್ಣನಿಂದಲೂ ಸಹಿತರಾಗಿ ಕಪಟದಿಂದ ಹೊರಟುಹೋದರು. ಇದನ್ನು ತಿಳಿದ ಶ್ರೀವೇದವ್ಯಾಸ ದೇವರು ಧೃತರಾಷ್ಟ್ರನಿದ್ದಲ್ಲಿಗೆ ಬಂದು 'ನಿನ್ನ ಮಗನನ್ನು ನಿಲ್ಲಿಸು. ಇಲ್ಲದಿದ್ದರೆ ಸಪರಿವಾರನಾಗಿ ಪಾಂಡವರ ಬಳಿಗೆ ಯುದ್ಧಕ್ಕೆ ಹೋಗಿ ಈಗಲೇ ಸಾಯುವನು' ಎಂದು ಹೇಳಿದರು. ಅದಕ್ಕೆ ವೇದವ್ಯಾಸದೇವರೊಡನೆ ಧೃತರಾಷ್ಟ್ರನು ನೀವೇ ಅವನನ್ನು ತಡೆಯಬೇಕು ಎಂದರು. ಅದಕ್ಕೆ ವೇದವ್ಯಾಸದೇವರು 'ನಾನು ನಿನ್ನ ಮಕ್ಕಳ ಹತ್ತಿರ ಮಾತಾಡಲಾರೆನು. ಇನ್ನು ಮುಂದೆ ಮೈತ್ರೇಯಋಷಿಗಳು ಬರುವರು. ಅವರು ನಿನ್ನ ಮಕ್ಕಳಿಗೆ ಹಿತಕರವಾದ ಮಾತುಗಳನ್ನು ಹೇಳುವರು. ಅವನ್ನು ನಿನ್ನ ಮಕ್ಕಳು ಕೇಳಿದರೆ ಕ್ಷೇಮವಾಗುವುದು. ಇಲ್ಲದಿದ್ದರೆ ಅವರು ನಿನ್ನ ಮಕ್ಕಳಿಗೆ ಶಾಪವನ್ನು ಕೊಟ್ಟು ಹೋಗುವರು' ಎಂದು ಹೇಳಿ ಹೊರಟುಹೋದರು. (ದುರ್ಯೋಧನಾದಿ ಗಳು ಈಗಲೇ ಪಾಂಡವರಿದ್ದಲ್ಲಿಗೆ ಯುದ್ಧಕ್ಕೆ ಹೋಗಿ ಸತ್ತುಹೋದರೆ ಅನೇಕ ಅಕ್ಷೌಹಿಣೀ ಸೈನ್ಯಗಳಿಂದ ಕುರುಕ್ಷೇತ್ರದಲ್ಲಿ ಯುದ್ಧವು ನಡೆದು ಭೂಭಾರವು ಪರಿಹಾರವಾದಂತೆ ಭೂಭಾರಪರಿಹಾರವಾಗಲಾರದು ಎಂಬ ಅಭಿಪ್ರಾಯದಿಂದ ಧೃತರಾಷ್ಟ್ರನ ಬಳಿಗೆ ಬಂದು ಹಾಗೆ ಹೇಳಿದರು. ಎಲ್ಲಾ ವ್ಯಾಪಾರಗಳೂ ಪರಮಾತ್ಮನಿಂದ ಪ್ರೇರಿಸಲ್ಪಟ್ಟೇ ಆಗುವುವು. ಆದರೂ ಕೆಲವು ಸಮಯ ಒಳಗೆ ಪ್ರೇರಣೆ ಮಾಡುವವನಾದರೂ ಹೊರಗೆ ಇತರ ಜನರಂತೆ ಆ ಭಗವಂತನು ನಟಿಸುವನು. ಆರೀತಿಯಾಗಿ ವೇದವ್ಯಾಸದೇವರು ಬಂದು ಹೇಳಿಹೋದರು.)

ವೇದವ್ಯಾಸದೇವರು ಹೊರಟುಹೋದ ಮೇಲೆ ಮೈತ್ರೇಯರು ಬಂದರು. ಧೃತರಾಷ್ಟ್ರನು ತನ್ನ ಮಕ್ಕಳನ್ನು ಕರ್ಣನನ್ನು ಶಕುನಿಯನ್ನು ಕರೆದನು. ಮೈತ್ರೇಯರನ್ನು ಪೂಜಿಸಿದನು. ಮೈತ್ರೇಯರು ಪಾಂಡವರನ್ನು ಸ್ತೋತ್ರಮಾಡಿ ಪಾಂಡವರಿಗೆ ರಾಜ್ಯವನ್ನು ಕೊಡಬೇಕೆಂದು ಹೇಳಿದರು. ಕಿರ್ಮೀರನ ಸಂಹಾರ ಮೊದಲಾದದ್ದನ್ನು ಹೇಳಿ ವಿಶೇಷವಾಗಿ ಭೀಮಸೇನದೇವರನ್ನು ಹೊಗಳಿದರು. ಅದನ್ನು ಕೇಳಿ ದುರ್ಯೋಧನನು ಸಹಿಸದೆ ತನ್ನ ತೊಡೆಯನ್ನು ತಟ್ಟಿಕೊಂಡನು. ಆಗ ಮೈತ್ರೇಯರು ಕೋಪಿಸಿಕೊಂಡು ನಿನ್ನ ತೊಡೆಯ ಮುರಿದು ಹೋಗಲಿಕ್ಕೆ ಯುದ್ಧವು ನಡೆಯಲಿ ಎಂದು ಶಾಪವನ್ನು ಕೊಟ್ಟರು. ಆಗ ಧೃತರಾಷ್ಟ್ರನು ನಮಸ್ಕರಿಸಿ ಕ್ಷಮೆಯನ್ನು

ಕೇಳಿಕೊಂಡನು. ಮೈತ್ರೇಯರು ಪಾಂಡವರಿಗೆ ರಾಜ್ಯವನ್ನು ಕೊಡದೆ ಇದ್ದರೆ ಹಾಗೆಯೇ ಆಗುವುದು ಎಂದು ಹೇಳಿ ಹೊರಟುಹೋದರು. ದುರ್ಯೋಧನನು ಧೃತರಾಷ್ಟ್ರನ ಬಳಿಯಲ್ಲಿ ವಿದುರನು ಹೇಳಿದ ಕಿರ್ಮೀರನ ಸಂಹಾರವನ್ನು ಕೇಳಿ ಭಯವನ್ನು ಹೊಂದಿದನು.



## ಕೃಷ್ಣನ ಆಗಮನ [1]

ತರುವಾಯ ಪಾಂಡವರು ವನದಲ್ಲಿ ಇದ್ದುಕೊಂಡು ತಮ್ಮ ವೃತ್ತಾಂತವನ್ನು ಶ್ರೀಕೃಷ್ಣಪರಮಾತ್ಮನಿಗೆ ಹೇಳಿ ಕಳುಹಿಸಿದರು. ಕೂಡಲೇ ಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರಿಂದ ಕೂಡಿಕೊಂಡು ಪಾಂಡವರಿದ್ದಲ್ಲಿಗೆ ಬಂದನು. ಹಾಗೆಯೇ ಪಾಂಡವರ ಬಂಧುಗಳೆಲ್ಲರೂ ಪಾಂಚಾಲದೇಶದವರೇ ಮೊದಲಾದ ವರು ಅಲ್ಲಿಗೆ ಬಂದರು. ಶ್ರೀಕೃಷ್ಣಪರಮಾತ್ಮನು ಕೌರವರ ಮೇಲೆ ತುಂಬಾ ಕೋಪಿಸಿಕೊಂಡಂತೆ ನಟಿಸಿದನು. ಆಗ ಪಾಂಡವರು ಸ್ತೋತ್ರ ಮಾಡುತ್ತಾ ಭಗವಂತನನ್ನು ಸಮಾಧಾನಪಡಿಸಿದನು. ದ್ರೌಪದೀದೇವಿಯರೂ ಲೋಕರೀತಿ ಯಿಂದ ಅಳುತ್ತಾ ಶ್ರೀಭಗವಂತನನ್ನು ಸ್ತುತಿಸುತ್ತಾ ಭಗವಂತನ ಪಾದಗಳಲ್ಲಿ ಬಿದ್ದು ಅನುಭವಿಸಿರುವ ಎಲ್ಲಾ ವಿಷಯಗಳನ್ನು ಹೇಳಿಕೊಂಡರು. ಆಗ ಕೃಷ್ಣಪರಮಾತ್ಮನು 'ಕೌರವರ ಹೆಂಗಸರೆಲ್ಲರೂ ಭೀಮಸೇನನಿಂದ ಮೃತರಾದ ತಮ್ಮ ಪತಿಗಳನ್ನು ಆಲಿಂಗಿಸಿಕೊಂಡು ತಲೆಕೂದಲನ್ನು ಬಿಚ್ಚಿಕೊಂಡು ಅಳುತ್ತಿರುವುದನ್ನು ನಿನಗೆ ತೋರಿಸುವೆನು' ಎಂದು ಪ್ರತಿಜ್ಞೆಯನ್ನು ಮಾಡಿದನು.

ಈರೀತಿಯಾಗಿ ಮಧುರ ಮಾತುಗಳಿಂದ ದ್ರೌಪದೀದೇವಿಯರನ್ನು ಸಮಾಧಾನಪಡಿಸಿ 'ನಾನು ಆ ಸಮಯದಲ್ಲಿ ನಿಮ್ಮ ಬಳಿಯಲ್ಲಿಯೇ ಇರುತ್ತಿದ್ದರೆ ಇಂತಹ ಆಪತ್ತು ಬರುತ್ತಿದ್ದಿಲ್ಲ. ನನಗಾದರೋ ಸಾಲ್ವನೊಡನೆ ಯುದ್ಧಮಾಡಲಿಕ್ಕೆ ಹೋಗಬೇಕಾಯಿತು. ಆದುದರಿಂದ ನಿಮಗೆ ಇಷ್ಟೆಲ್ಲಾ ಆಪತ್ತು ಬಂದಿತು' ಎಂದು ಹೇಳಿದನು. ಈ ಮಾತಿನಿಂದ 'ಶ್ರೀಭಗವಂತನು ಪಾಂಡವರ ಹತ್ತಿರವೇ ಇದ್ದಿದ್ದರೆ ಅವನು ಪಾಂಡವರನ್ನು ಈ ಆಪತ್ತಿನಿಂದ ರಕ್ಷಿಸುತ್ತಿದ್ದನು. ದೂರಕ್ಕೆ ಹೋದಕಾರಣ ಅವನಿಗೆ ರಕ್ಷಿಸಲು ಸಾಧ್ಯವಾಗಲಿಲ್ಲ. ಮತ್ತು ಅವನಿಗೆ ಪಾಂಡವರಿಗೆ ಬಂದ ಆಪತ್ತು ತಿಳಿಯಲೂ ಇಲ್ಲ' ಎಂದು, ಇಷ್ಟು ಅಭಿಪ್ರಾಯವು ತೋರುವುದು.

1. ಮ.ತಾ.ನಿ. ಅ-22

ಅದನ್ನು ಮಾತ್ರ ಹಾಕಿ ತಿಳಿಯಬಾರದು. ಏಕೆಂದರೆ ಶ್ರೀಭಗವಂತನಿಗೆ ಹತ್ತಿರವಿದ್ದ ವಸ್ತುವನ್ನು ದೂರದಲ್ಲಿ ಇರುವ ವಸ್ತುವನ್ನು, ಕಳೆದುಹೋದವಸ್ತುವನ್ನು, ಮುಂದೆ ಬರಲಿರುವ ವಸ್ತುವನ್ನು, ನಿತ್ಯ ಅತೀಂದ್ರಿಯವಾದ ಧರ್ಮ ಅಧರ್ಮಾದಿವಸ್ತುವನ್ನು ನೋಡಲಿಕ್ಕೂ, ವ್ಯಾಪಿಸಲಿಕ್ಕೂ ಮಾಡಲಿಕ್ಕೂ ಶಕ್ತಿಯು ಇದ್ದೇ ಇರುವುದು. ಅವನು ಎಲ್ಲಾ ದೇಶದಲ್ಲಿಯೂ ಎಲ್ಲಾ ಕಾಲದಲ್ಲಿಯೂ ಇದ್ದುಕೊಂಡು ಎಲ್ಲಾ ವಸ್ತುವನ್ನು ಪ್ರತ್ಯಕ್ಷವಾಗಿ ನೋಡುತ್ತಿರುವನು. ಆದರೂ ಲೋಕದ ಜನರನ್ನು ಅನುಕರಣೆ ಮಾಡಿ ಹಾಗೆ ಹೇಳಿದನು. ವಾಸ್ತವಿಕವಾಗಿ ಪರಮಾತ್ಮನಿಗೆ ಪಾಂಡವರಿಗೆ ಬಂದ ಆಪತ್ತು ಮೊದಲೇ ತಿಳಿದಿರುವುದು. ಅದನ್ನು ಬಾರದಂತೆ ಮಾಡುವ ಶಕ್ತಿಯೂ ಇತ್ತು. ಅವನೇ ಈ ರೀತಿಯಾಗಿ ಪಗಡೆ ಆಟವು ನಡೆಯುವಂತೆ ಮಾಡಿದವನು. ಅವನ ಪ್ರೇರಣೆಯಿಲ್ಲದೆ ಯಾವ ಕಾರ್ಯವೂ ನಡೆಯಲಾರದು. ''ದುಷ್ಟರಿಗೆ ಶ್ರೀಕೃಷ್ಣನು ಈಗ ಪಾಂಡವರ ಬಳಿಯಲ್ಲಿ ಇಲ್ಲ. ಆದುದರಿಂದ ಅವನು ಒಂದೂ ಮಾಡುವಂತಿಲ್ಲ. ಭೀಮಾದಿಗಳು ಅಸಮರ್ಥರು' ಎಂದು ವಿಪರೀತಜ್ಞಾನದಿಂದ ದೋಷಾಭಿವೃದ್ಧಿಯಾಗಲಿ ಎಂದೂ, ಭೀಮಸೇನ ದೇವರಿಗೆ ಪರಮಾತ್ಮನ ಸಂಕಲ್ಪವನ್ನು ತಿಳಿದು ಕ್ಷಮಾಗುಣವನ್ನು ಪಗಡೆ ಆಟಕಾಲದಲ್ಲಿ ವಹಿಸಿಕೊಂಡು ಇದ್ದಪ್ರಯುಕ್ತ ಗುಣಾಧಿಕ್ಯವಾಗಲಿ ಎಂದೂ ಧರ್ಮರಾಜನಿಗೆ ರಾಜರಿಗೆ ಅಯೋಗ್ಯವಾದ ಪಗಡೆ ಆಟ ಆಡಿದ ದೋಷವು ಬರುವುದಕ್ಕಾಗಿಯೂ, ಭೀಮಸೇನದೇವರೇ ಮೊದಲಾದವರಿಗೂ ದ್ರೌಪದೀದೇವಿಯರಿಗೂ ಧರ್ಮರಾಜನನ್ನು ಅನುಸರಿಸಿದ ಇದ್ದಕಾರಣವೂ ತಮ್ಮನ್ನೇ ಪಣವನ್ನಾಗಿ ಇಟ್ಟರೂ ಸಹಿಸಿಕೊಂಡು ಇದ್ದ ಪ್ರಯುಕ್ತವೂ ಗುಣವುಂಟಾಗುವುದಕ್ಕಾಗಿಯೂ ಶ್ರೀಭಗವಂತನೇ ಪಗಡೆ ಆಟವು ನಡೆಯುವಂತೆ ಮಾಡಿದನು. ಮತ್ತು ಧರ್ಮರಾಜನು ಅಣ್ಣನಾದ ಕಾರಣ ಅವನೇ ಹೋಮಾದಿಗಳನ್ನು ಮಾಡಿದ ಕಾರಣ ಅವನ ಯೋಗ್ಯತೆಗಿಂತ ಹೆಚ್ಚಾಗಿ ಅವನಲ್ಲಿ ಪುಣ್ಯವು ಬಂದಿತ್ತು. ಅವನಲ್ಲಿ ಹೆಚ್ಚಾಗಿರುವ ಪುಣ್ಯವನ್ನು ಅವನಿಂದ ತೆಗೆದು ಕ್ರಮದಿಂದ ಎಂದರೆ ಭೀಮಸೇನ ದೇವರಲ್ಲಿ ಅಧಿಕವಾಗಿಯೂ, ಆಮೇಲೆ ದ್ರೌಪದೀದೇವಿಯಲ್ಲಿ, ಆಮೇಲೆ ಅರ್ಜುನನಲ್ಲಿ, ಆಮೇಲೆ ನಕುಲಸಹದೇವರಲ್ಲಿ ಬರುವಂತೆ ಮಾಡುವುದಕ್ಕಾಗಿಯೂ ಕೃಷ್ಣಪರಮಾತ್ಮನು ತನ್ನ ಇಚ್ಛೆಯಿಂದಲೇ ಪಗಡೆ ಆಟವಾಗುವಂತೆ ಮಾಡಿದನು.

'ಏಧಮಾನದ್ವಿಟ್' ಅಂದರೆ ಯೋಗ್ಯತೆಯನ್ನು ಮೀರಿ ಪುಣ್ಯಮಾಡಿದವರನ್ನು ದ್ವೇಷಿಸುವವನು ಅಂದರೆ ಅವರ ಪುಣ್ಯವನ್ನು ಕಡಿಮೆ ಮಾಡಿಸುವವನು ಎಂದು

ಭಗವಂತನಿಗೆ ವೇದದಲ್ಲಿ ಹೆಸರೇ ಇರುವುದು. ಭೀಷ್ಮ ದ್ರೋಣ ಧೃತರಾಷ್ಟ್ರ ಇವರೇ ಮೊದಲಾದವರಲ್ಲಿ ಇರುವ ಧರ್ಮಜ್ಞಾನಾದಿಗಳಿಂದ ಉಂಟಾಗಿರುವ ಯೋಗ್ಯತೆಗಿಂತ ಹೆಚ್ಚಾದ ಪುಣ್ಯವನ್ನು ಪಾಂಡವರಿಗೆ ಬರುವಂತೆ ಮಾಡುವುದಕ್ಕೂ, ದುರ್ಯೋಧನಾದಿಗಳಿಗೆ ಪಾಪವು ಹೆಚ್ಚುವಂತೆ ಮಾಡುವುದಕ್ಕೂ ಈ ಆಟವು ನಡೆಯಿತು. ಆ ಸಮಯದಲ್ಲಿ ವೇದವ್ಯಾಸದೇವರು ಬಂದು ಧೃತರಾಷ್ಟ್ರನೊಡನೆ ನನಗೆ ಪಾಂಡವರು ಮಾತ್ರ ಪ್ರಿಯರಾದವರು ಎಂದು ಹೇಳಿದರು. ಪಾಂಡವರು ಪ್ರಿಯರೆಂದು ದೇವರು ಶ್ಲಾಘನೇ ಮಾಡಿದ್ದರಿಂದ ಪಾಂಡವರಿಗೆ ಹೆಚ್ಚಿಗೆ ಪುಣ್ಯವುಂಟಾಯಿತು. ಪಾಂಡವರೇ ಪ್ರಿಯರು ಎಂದು ಹೇಳಿದ್ದರಿಂದ ಕೌರವರು ಅಪ್ರಿಯರು ಎಂದು ಹೇಳಿದಂತೆ ಆಯಿತು. ಈರೀತಿಯಾಗಿ ಪರಮಾತ್ಮನು ಮಾಡಿದ ನಿಂದೆಗೆ ವಿಷಯರಾದ ಕಾರಣ ದುರ್ಯೋಧನಾದಿಗಳಿಗೆ ಪಾಪವು ಅಧಿಕವಾಗುವಂತೆ ಆಯಿತು. ಪಗಡೆ ಆಟದ ಸಮಯದಲ್ಲಿ ಭೀಮಸೇನದೇವರು ಕೋಪಿಸಿಕೊಳ್ಳುವಾಗ ಅರ್ಜುನಾದಿಗಳು ಕೋಪಿಸಿಕೊಳ್ಳದೆ ಕ್ಷಮಾಧರಿಸಿಕೊಂಡಿದ್ದರು. ಭೀಮಸೇನದೇವರು ಅವರಿಗೆ ಅಣ್ಣನಾದ ಪ್ರಯುಕ್ತ ಗುರುಗಳಾದರು. ಗುರುಗಳಾದ ಅವರು ಕೋಪಿಸಿಕೊಳ್ಳುವಾಗ ತಾವೂ ಕೋಪಿಸಿಕೊಂಡು ಗುರುಗಳನ್ನು ಅನುಸರಿಸುವುದನ್ನು ಬಿಟ್ಟು ಕ್ಷಮಿಸಿಕೊಂಡಿದ್ದ ಪ್ರಯುಕ್ತ ಅವರಿಗೆ ಧರ್ಮವುಂಟಾಗಲಿಲ್ಲ. ಅಧರ್ಮವೇ ಉಂಟಾಯಿತು. ಆದುದರಿಂದ ಅವರಲ್ಲಿ ಧರ್ಮರಾಜನಲ್ಲಿದ್ದ ಪುಣ್ಯದ ಸ್ವಲ್ಪಭಾಗವನ್ನು ಮಾತ್ರ ಅವರಿಗೆ ಸೇರಿತು. ಭೀಮಸೇನದೇವರಾದರೋ ಪಗಡೆ ಆಟದಲ್ಲಿ ಸ್ವಲ್ಪ ಅನ್ಯಾಯ ಮಾಡಿದ ಧರ್ಮರಾಜನನ್ನು ಬೆದರಿಸಿದ್ದರಿಂದಲೂ ದ್ಯೂತಸಭೆಯಲ್ಲಿ ದ್ರೌಪದೀದೇವಿಯರನ್ನು ಎಳೆದುಕೊಂಡು ಬರೋಣ ಇತ್ಯಾದಿ ಅನ್ಯಾಯವನ್ನು ಮಾಡಿದ ದುರ್ಯೋಧನಾದಿಗಳನ್ನು ಕೊಲ್ಲುವ ಉದ್ಯೋಗ ಮಾಡಿದ್ದರಿಂದಲೂ ಮಹಾಧರ್ಮವನ್ನು ಮಾಡಿದವರಾದರು. ಆದುದರಿಂದ ಧರ್ಮರಾಜನಲ್ಲಿ ಯೋಗ್ಯತೆ ಮೀರಿ ಇದ್ದ ಪುಣ್ಯದಲ್ಲಿ ಬಹುಭಾಗವು ಭೀಮಸೇನದೇವರಲ್ಲಿಯೇ ಬಂದು ಸೇರಿತು.

ದ್ರೌಪದೀದೇವಿಯರು ದುರ್ಯೋಧನಾದಿಗಳು ಪಡಿಸಿದ ಕ್ಲೇಶವನ್ನು ಸಹಿಸಿಕೊಂಡು ಇದ್ದಪ್ರಯುಕ್ತವೂ, ಆಗಲೇ ಶಾಪದಿಂದ ದುರ್ಯೋಧನಾದಿಗಳನ್ನು ಸಂಹರಿಸಿದರೆ ಬಹುತರ ಭೂಭಾರವು ಪರಿಹೃತವಾಗಲಾರದಾದ ಪ್ರಯುಕ್ತ ಆಗಲೇ ಶಾಪಕೊಡಬಾರದು ಎಂಬ ಕೃಷ್ಣಪರಮಾತ್ಮನ ಮತ್ತೂ ಭೀಮಸೇನದೇವರ ಮನಸ್ಸಿನ ಅಭಿಪ್ರಾಯವನ್ನು ತಿಳಿದು ಶಾಪಕೊಡದೆ ಕ್ಷಮಿಸಿಕೊಂಡು ಇದ್ದಪ್ರಯುಕ್ತ

ಕೃಷ್ಣಪರಮಾತ್ಮನ ಮತ್ತು ಭೀಮಸೇನದೇವರ ಮನಸ್ಸನ್ನು ಅನುಸರಿಸಿದ ಪ್ರಯುಕ್ತ ಮಹಾಪುಣ್ಯವುಳ್ಳವರಾದ ಪ್ರಯುಕ್ತವೂ, ಅರ್ಜುನಾದಿಗಳಂತೆ ಹೆಚ್ಚಾಗಿಯೇ ಭೀಮಸೇನದೇವರ ಅನಂತರ ಅವರಲ್ಲಿಯೂ ಧರ್ಮರಾಜನಲ್ಲಿ ಇದ್ದ ಪುಣ್ಯದ ಭಾಗವು ಬಂದಿತು. ಈರೀತಿಯಾಗಿ ಮಹಾಕಾರ್ಯವು ನಡೆಯುವುದಕ್ಕಾಗಿಯೇ ಶ್ರೀಕೃಷ್ಣಪರಮಾತ್ಮನು ತನ್ನ ಇಚ್ಛೆಯಿಂದಲೇ ಪಗಡೆ ಆಟವು ನಡೆಯುವಂತೆ ಮಾಡಿದನಲ್ಲದೆ 'ಭಗವಂತನಿಗೆ ತಿಳಿಯದೆ ಇದ್ದು ಪಗಡೆಯಾಟವು ನಡೆಯಿತು. ಅವನು ಹತ್ತಿರ ಇದ್ದರೆ ನಡೆಯುತ್ತಿದ್ದಿಲ್ಲ' ಇತ್ಯಾದಿ ವಿಷಯಗಳನ್ನು ನಾವು ತಿಳಿಯಬಾರದು.

ಆಮೇಲೆ ಶ್ರೀಕೃಷ್ಣಪರಮಾತ್ಮನು ''ಸಾಲ್ವನು ಬರುವನು ಎಂಬ ವರ್ತಮಾನ ವನ್ನು ಕೇಳಿ ನಾನು ನಿಮ್ಮ ಎದುರಲ್ಲೇ ಪ್ರದ್ಯುಮ್ನಾದಿಗಳನ್ನು ದ್ವಾರಕಾಪಟ್ಟಣಕ್ಕೆ ಕಳುಹಿಸಿದೆನಲ್ಲಾ! ಅವರು ಊರಿಗೆ ಹೋಗಿ ಸೇರಿದರು. ಆಗಲೇ ಸಾಲ್ವನೂ ಬಂದು ದ್ವಾರಕಾಪಟ್ಟಣವನ್ನು ಪೀಡಿಸಿದನು. ಆಗ ಪ್ರದ್ಯುಮ್ನನು ಸರ್ವಸೈನಿಕರಿಂದಲೂ ಇತರ ಯಾದವರಿಂದಲೂ ಸಹಿತನಾಗಿ ಸಹೋದರರಿಂದಲೂ ಕೂಡಿಕೊಂಡು ಯುದ್ಧಕ್ಕೆ ಬಂದನು. ಆಗ ಪಾಪಿಯಾದ ಸಾಲ್ವನು ವಿಮಾನದಿಂದ ಇಳಿದು ಯುದ್ಧಮಾಡಲಿಕ್ಕೆ ರಥವನ್ನು ಏರಿದನು. ನನ್ನ ಮಗನು ಅವನೊಡನೆ ಬಹುಹೊತ್ತು ಯುದ್ಧವನ್ನು ಮಾಡಿ ಅವನ ಅಸ್ತ್ರಗಳನ್ನೆಲ್ಲಾ ತನ್ನ ಅಸ್ತ್ರಸಮೂಹದಿಂದ ತಡೆಯುವವನಾಗಿ ಅವನನ್ನು ಕೊಲ್ಲುವುದಕ್ಕಾಗಿ ನಾನು ಕೊಟ್ಟಿರುವ ಯಾರಲ್ಲಿಯೂ ವ್ಯರ್ಥವಾಗದ ಬಾಣವನ್ನು ತೆಗೆದನು. ಆಗ 'ಪೂರ್ವದಲ್ಲಿ ನಾರಾಯಣರೂಪಿ ಪರಮಾತ್ಮನು ತಾನು ಕೃಷ್ಣಾವತಾರವನ್ನು ಮಾಡಿ ಈ ಸಾಲ್ವನನ್ನು ಕೊಲ್ಲುವೆನೆಂದು ಸಂಕಲ್ಪ ಮಾಡಿದ್ದನು. ಆದುದರಿಂದಲೇ ಪರಶುರಾಮಾವತಾರದಲ್ಲಿಯೂ ತನ್ನ ಮನಸ್ಸನ್ನು ಅನುಸರಿಸಿ ಇವನನ್ನು ಅನೇಕಬಾರಿ ಓಡಿ ಓಡಿಸಿದನಷ್ಟೆ. ಸಂಹರಿಸಲಿಲ್ಲ. ಆದುದರಿಂದ ನೀನು ಅವನನ್ನು ಕೊಲ್ಲಬಾರದು. ಭಗವಂತನ ಪ್ರಿಯವಾದ ಈ ಬಾಣವಾದರೋ ವ್ಯರ್ಥವಾಗತಕ್ಕದ್ದಲ್ಲ. ಆದುದರಿಂದ ಈ ಬಾಣವನ್ನು ಬಿಡಬೇಡ' ಎಂದು ಅಶರೀರವಾಣಿಯನ್ನು ಕೇಳಿದನು. 'ನಾನು ಇವನ ಮನಸ್ಸಿನಲ್ಲಿ ಇದ್ದು ಯುದ್ಧವನ್ನು ಬಿಟ್ಟು ಹೋಗುವಂತೆ ಮಾಡುವೆನು' ಎಂದೂ ಅಶರೀರವಾಣಿಯಿಂದ ವಾಯುದೇವರು ಹೇಳಿದರು. ಆ ವಾಯುದೇವರ ಮಾತನ್ನು ಕೇಳಿ ನನ್ನ ಮಗನು ಆ ಬಾಣವನ್ನು ಉಪಸಂಹರಿಸಿದನು. ಸಾಲ್ವನು ಈ ಹುಡುಗರ ಹತ್ತಿರ ಜಗಳವಾಡಿ ಏನು ಪ್ರಯೋಜನವಿದೆ? ಕೃಷ್ಣನ ಹತ್ತಿರ ಯುದ್ಧವನ್ನು ಮಾಡಬೇಕು' ಎಂದು ಹೇಳುತ್ತಾ

ತನ್ನ ದೇಶಕ್ಕೆ ಹೊರಟುಹೋದನು. ಪ್ರದ್ಯುಮ್ನ ಗದ ಸಾಂಬ ಸಾರಣ ಚಾರುದೇಷ್ಣರು ಸಾಲ್ವನ ಮಂತ್ರಿಗಳನ್ನೂ ಸೈನ್ಯವನ್ನೂ ಸಂಹರಿಸಿ ಸಂತೋಷದಿಂದ ನಗರವನ್ನು ಪ್ರವೇಶಿಸಿದರು.

ಅಷ್ಟರಲ್ಲಿ ನಾನೂ ಊರಿಗೆ ಹೋಗಿ ಸೇರಿದೆನು. ನಾನು ಅಮೋಘ ಬಾಣ ದಿಂದ ಶತ್ರುವು ಓಡಿಹೋದದ್ದನ್ನೂ ಅವನಿಂದ ನನ್ನ ನಗರವು ಭಗ್ನವಾದದ್ದನ್ನೂ ತಿಳಿದು ಆ ಶತ್ರುವನ್ನು ಅಟ್ಟಿಸಿಕೊಂಡು ಹೋದೆನು. ಅವನು ಸಮುದ್ರದ ಮೇಲಿನ ಭಾಗದಲ್ಲಿ ಆಕಾಶದಲ್ಲಿ ವಿಮಾನದಲ್ಲಿ ಕೂತುಕೊಂಡು ಹೋಗುತ್ತಿರುವುದನ್ನು ನೋಡಿದೆನು. ಅವನು ನನ್ನನ್ನು ನೋಡಿ ಬಾಣಗಳ ಮಳೆಗಳನ್ನೇ ಸುರಿಸಿದನು. ಅಸ್ತ್ರಗಳ ಮಳೆಗಳನ್ನು ಸುರಿಸಿದನು. ನಾನು ಅವನ್ನೆಲ್ಲಾ ತಡೆದು ಬಾಣಗಳಿಂದ ಅವನನ್ನು ಬಡೆದನು. ಆಮೇಲೆ ಅವನು ನನ್ನಲ್ಲಿ ಮಾಯೆಯನ್ನು ಉಪಯೋಗಿ ಸಿದನು. ಅಂದರೆ ವಸುದೇವನಂತೆ ಒಂದು ಆಕಾರವನ್ನು ಮಾಡಿ ತಲೆಕಡಿದನು. ನಾನು ಸ್ವಲ್ಪಹೊತ್ತು ಕ್ರೀಡೆಯಿಂದ ಸ್ವಲ್ಪಹೊತ್ತು ನೋಡುತ್ತಾ ಇದ್ದವನಾಗಿ ಆಮೇಲೆ ವಿಜ್ಞಾನಾಸ್ತ್ರವನ್ನು ಬಿಟ್ಟು ಆ ಮಾಯೆಯನ್ನು ಪರಿಹರಿಸಿ ಅನೇಕ ದೈತ್ಯರನ್ನು ಸಂಹರಿಸಿ ಸೌಭವಿಮಾನವನ್ನು ಮುರಿದು ಸಮುದ್ರದಲ್ಲಿ ಹಾಕಿದೆನು. ತರುವಾಯ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಬರಲು ಅವನ ಕೈಗಳನ್ನು ಕತ್ತರಿಸಿ ಚಕ್ರಾಯುಧದಿಂದ ಅವನ ತಲೆಯನ್ನು ಕತ್ತರಿಸಿದೆನು. ಆಗ ಬ್ರಹ್ಮ ರುದ್ರಾದಿದೇವತೆಗಳು ಸ್ತುತಿಸಿದರು. ನಾನು ದ್ವಾರಕೆಗೆ ಬಂದೆನು. ಆಮೇಲೆ ನನಗೆ ನಿಮ್ಮ ವಿಷಯವು ತಿಳಿಯಿತು. ನಾನು ದೂರದಲ್ಲಿ ಇದ್ದ ಪ್ರಯುಕ್ತ ಈ ವ್ಯಸನವು ನಿಮಗೆ ಬಂದು ಸೇರಿತು'' ಎಂದು ಹೇಳಿ ಪಾಂಡವರನ್ನು ದ್ರೌಪದೀದೇವಿಯರನ್ನು ಸಮಾಧಾನಪಡಿಸುವುದಕ್ಕಾಗಿ ಕೆಲವು ದಿವಸದಲ್ಲಿ ಅಲ್ಲಿಯೇ ಇದ್ದರು. ಸತ್ಯಭಾಮಾದೇವಿಯರೂ ದ್ರೌಪದೀದೇವಿಯರನ್ನು ಸಮಾಧಾನಪಡಿಸುತ್ತಾ ಇದ್ದರು.

ಪಾಂಡವರ ಇತರ ಹೆಂಡತಿಯರೂ ಮಕ್ಕಳೂ ಕೂಡ ಪಾಂಡವರ ಹಿಂದೆಯೇ ಬಂದು ಕಾಡಿನಲ್ಲಿಯೇ ಇದ್ದರು. ಧೃಷ್ಟದ್ಯುಮ್ನನು ಬಂದವನು ದ್ರೌಪದೀ ದೇವಿಯರನ್ನು ಸಮಾಧಾನಪಡಿಸಿ ಕೃಷ್ಣಪರಮಾತ್ಮನಿಗೆ ನಮಸ್ಕರಿಸಿ ಅನುಜ್ಞೆಯನ್ನು ಪಡೆದು ಸೋದರ ಅಳಿಯರನ್ನು ಅಂದರೆ ದ್ರೌಪದೀದೇವಿಯರ ಮಕ್ಕಳನ್ನು ಕರೆದುಕೊಂಡು ಪಾಂಚಾಲನಗರಿಗೆ ಹೋದನು. ಧೃಷ್ಟಕೇತುವು ತನ್ನ ತಂಗಿಯಾದ ದೇವಕಿಯೆಂದು ಹೆಸರುಳ್ಳ ಧರ್ಮರಾಜನ ಪತ್ನಿಯನ್ನು ಕಾಶಿರಾಜನು ಕಾಲಿಯೆಂದು ಹೆಸರುಳ್ಳ ಭೀಮಸೇನದೇವರ ಪತ್ನಿಯಾದ ತನ್ನ ಮಗಳನ್ನು ಕರೆದುಕೊಂಡು ತಮ್ಮ

ರಾಜ್ಯಕ್ಕೆ ಹೊರಟುಹೋದರು. ಉಳಿದ ಪಾಂಡವರ ಪತ್ನಿಯರು ಕುಂತಿಯ ಬಳಿಯಲ್ಲಿ ವಿದುರನ ಮನೆಯಲ್ಲಿಯೇ ಇದ್ದರು. ಪಾರ್ವತೀ ಎಂದು ಹೆಸರುಳ್ಳ ನಕುಲನ ಹೆಂಡತಿಯಿದ್ದಳು. ಅವಳು ಪೂರ್ವಜನ್ಮದಲ್ಲಿ ತಿಲೋಮತ್ತಮಾ ಎಂಬ ಅಪ್ಸರಸ್ತ್ರೀಯು. ಅವಳೂ ನಕುಲನ ಹೆಂಡತಿಯಾದ ಶಲ್ಯನ ಮಗಳೂ ಜರಾಸಂಧನ ಮಗಳಾದ ಸಹದೇವನ ಹೆಂಡತಿಯೂ ಕುಂತಿಯಿಂದ ತಡೆಯಲ್ಪಟ್ಟವರಾಗಿ ಅವಳ ಬಳಿಯಲ್ಲೇ ಇದ್ದರು. ಶ್ರೀಕೃಷ್ಣಪರಮಾತ್ಮನು ಸುಭದ್ರೆಯನ್ನು ಅಭಿಮನ್ಯುವನ್ನು ರಥದಲ್ಲಿ ಕೂತುಕೊಳ್ಳಿಸಿ ಪಾಂಡವರಿಗೆ ಅನುಜ್ಞೆಯನ್ನು ಕೊಟ್ಟು ಸತ್ಯಭಾಮೆಯರಿಂದ ಸಹಿತರಾಗಿ ದ್ವಾರಕಾಪುರಿಗೆ ಹೋದರು. ದ್ರೌಪದೀದೇವಿಯರ ಮಕ್ಕಳು ಕೆಲವು ಸಮಯ ಪಾಂಚಾಲನಗರಿಯಲ್ಲಿ ಇದ್ದು ದ್ವಾರಕಾಪಟ್ಟಣಕ್ಕೇನೇ ಬಂದು ಅಲ್ಲಿ ಕೃಷ್ಣಪರಮಾತ್ಮನಿಂದ ಆದೃತರಾಗಿ ಅಲ್ಲಿಯೇ ಸಂತೋಷದಿಂದ ಇದ್ದರು.



## ಹಠವಾದವು [1]

ಧರ್ಮರಾಜನು ತಮ್ಮಂದಿರಿಗೆಲ್ಲಾ ಕಷ್ಟವುಂಟಾಗುವಂತೆ ಮಾಡಿದೆನೆಂದು ತುಂಬಾ ಪಶ್ಚಾತ್ತಾಪವುಳ್ಳವನಾಗಿ ದ್ರೌಪದೀದೇವಿಯರನ್ನು ಸಹೋದರರ ಪತ್ನಿಯನ್ನಾಗಿಯೇ ಮಾಡಿದನು.[2] ಪಾಂಡವರೆಲ್ಲರೂ ವನದಲ್ಲಿ ಮುನಿಗಳು ಭೋಜನ ಮಾಡಿಯಾದ ಮೇಲೆ ಅವರ ಶೇಷವನ್ನು ಭೋಜನ ಮಾಡುತ್ತಿದ್ದರು. ತಮ್ಮಂದಿರೆಲ್ಲರೂ ಭೋಜನ ಮಾಡಿದ ಮೇಲೆಯೇ ಧರ್ಮರಾಜನು ಭೋಜನ ಮಾಡುತ್ತಿದ್ದನು. ಅಣ್ಣನ ಆಜ್ಞೆಯನ್ನು ಮೀರಲಾಗದೆ ಭೀಮಸೇನದೇವರೇ ಮೊದಲಾದವರು ಧರ್ಮರಾಜ ನಿಗಿಂತ ಮೊದಲು ಭೋಜನ ಮಾಡುತ್ತಿದ್ದರು. ಧರ್ಮರಾಜನ ಭೋಜನವೂ ಮುಗಿದಮೇಲೆ ದ್ರೌಪದೀದೇವಿಯರೊಬ್ಬರೇ ಭೋಜನ ಮಾಡುತ್ತಿದ್ದರು. ಈರೀತಿಯಾಗಿ ಪರಮಾತ್ಮನ ಕಥೆಯಲ್ಲಿಯೇ ಆಸಕ್ತರಾಗಿ ಪರಮಾತ್ಮನ ನಿವೇದಿತ ವಾದ ಅನ್ನವನ್ನು ಭೋಜನ ಮಾಡುತ್ತಾ ವನದಲ್ಲಿ ಒಂದು ವರ್ಷವನ್ನು ಕಳೆದರು.

ಒಂದುದಿನ ಭೀಮಸೇನದೇವರು 'ಧರ್ಮರಾಜನು ಅತಿಮೃದು ಸ್ವಭಾವವುಳ್ಳವನಾದ ಕಾರಣ ಹದಿಮೂರು ವರ್ಷ ಮುಗಿದು ಹದಿನಾಲ್ಕನೇ ವರ್ಷದಲ್ಲಿಯೂ ಗುರುಗಳ ಭಯದಿಂದ ರಾಜ್ಯವನ್ನು [1]ಇಚ್ಛಿಸಲಾರನಾದ ಕಾರಣ

1. ಮ.ತಾ.ನಿ. ಅ-22 2. ಇರಿಸಿದನು (ಸ್ಥಾಪಯಾಮಾಸ-ಮತಾನಿ ಅ-22-60)

ಈಗಲೇ ಅವನನ್ನು ಎಚ್ಚರಿಸಬೇಕೆಂಬ ಅಭಿಪ್ರಾಯದಿಂದ 'ಮೊದಲು ದ್ರೌಪದೀದೇವಿಯನ್ನು ಧರ್ಮರಾಜನಿದ್ದಲ್ಲಿಗೆ ಕಳುಹಿಸಿದರು.

'ಸಾಮರ್ಥ್ಯವುಳ್ಳ ರಾಜರಿಗೆ ಎಲ್ಲರ ವಿಷಯದಲ್ಲಿಯೂ ಕ್ಷಮೆಯು ಧರ್ಮವಲ್ಲ. ದುರ್ಜನರ ವಿಷಯವು ಕ್ಷಮೆಯು ಪಾಪಕ್ಕೂ ಕಾರಣವಾಗುತ್ತದೆ' ಎಂದು ಶಾಸ್ತ್ರದಿಂದ ಸ್ಥಾಪಿಸಿ, ಹದಿನಾಲ್ಕನೇ ವರ್ಷದಲ್ಲಿ ರಾಜ್ಯವನ್ನು ಕೊಡದೆ ಇರುವ ಕೌರವರನ್ನು ಕೊಂದು ರಾಜ್ಯಭಾರ ಮಾಡಲಿಕ್ಕೆ ತಾನು ಮುಂದೆ ಬರುವೆನೆಂದು ಧರ್ಮರಾಜನಿಂದ ಆಗಲೇ ಪ್ರತಿಜ್ಞೆಯನ್ನು ಮಾಡಿಸುವುದಕ್ಕಾಗಿ ವಿವಾದವನ್ನು ಆರಂಭಿಸುವುದಕ್ಕಾಗಿ ದ್ರೌಪದೀ ದೇವಿಯರನ್ನು ಕಳುಹಿಸಿದರು.

ದ್ರೌಪದೀದೇವಿಯರು ಬಂದು 'ದುರ್ಜನರಲ್ಲಿ ಕ್ಷಮೆಯು ಸರ್ವಥಾ ಧರ್ಮವಲ್ಲ. ಅದನ್ನು ನೀವು ವ್ಯರ್ಥವಾಗಿ ಸರ್ವಕಾಲದಲ್ಲಿಯೂ ಧರಿಸಿಕೊಂಡಿರುವಿರಿ' ಎಂದು ಹೇಳಿದರು. ಅದಕ್ಕೆ ಧರ್ಮರಾಜನು 'ಸರ್ವರಲ್ಲಿಯೂ ಕ್ಷಮೆಯೇ ಧರ್ಮವು. ಕ್ಷಮೆಯಿಂದಲೇ ಜಗತ್ತೆಲ್ಲಾ ಧರಿಸಲ್ಪಟ್ಟಿದೆ. ಎಲ್ಲರಿಗೂ ಪರಮಾತ್ಮನೇ ಸುಖದುಃಖಗಳನ್ನು ಕೊಡುವವನು. ಅವನು ಕೊಟ್ಟದ್ದನ್ನು ನಾವು ಅನುಭವಿಸುವೆವು. ಆದುದರಿಂದ ನಾವು ಯಾರನ್ನು ಕೋಪಿಸಿಕೊಳ್ಳುವ ಆಗತ್ಯವಿಲ್ಲ. ಆದುದರಿಂದ ಎಲ್ಲರ ವಿಷಯದಲ್ಲಿಯೂ ಕ್ಷಮೆಯೇ ಧರ್ಮವು' ಎಂದು ಹೇಳಿದನು. ಆಗ ದ್ರೌಪದೀದೇವಿಯರು 'ಎಲ್ಲರನ್ನೂ ಕ್ಷಮಿಸುವುದೇ ಧರ್ಮವಾಗಿದ್ದರೆ ಲೋಕದಲ್ಲಿ ರಾಜನು ಯಾಕೆ ಬೇಕು? ಲೋಕಯಾತ್ರೆಯು ನಡೆಯಲಾರದು. ಲೋಕವು ದುಷ್ಟರಿಂದ ನಾಶವನ್ನು ಹೊಂದುವುದು. ಶ್ರೀಭಗವಂತನು ಸರ್ವಪ್ರೇರಕನೆಂಬ ಮಾತು ಸತ್ಯವೇ. ರಮಾಬ್ರಹ್ಮಾದಿ ದೇವತೆಗಳೂ ಮರದ ಬೊಂಬೆಯಂತೆ ಭಗವಂತನ ಅಧೀನರೇ. ಆದರೂ ಜನರು ಮಾಡುವ ಪ್ರಯತ್ನವು ವ್ಯರ್ಥವಲ್ಲ. ಪರಮಾತ್ಮನ ಆಜ್ಞೆಯಿಂದ ಪುರುಷನು ಪ್ರಯತ್ನ ಮಾಡುವವನಾಗಿ ತಾನು ಮಾಡಿದ ಕಾರ್ಯಕ್ಕೆ ಅನುಗುಣವಾಗಿ ಶುಭಾಶುಭ ಫಲವನ್ನು ಹೊಂದುವನು. ಅವನು ಮಾಡಿದ ಪ್ರಯತ್ನವು ವ್ಯರ್ಥವಾಗುವುದಿಲ್ಲ. ಆದುದರಿಂದ ಪುರುಷನಿಗೂ, ಪರಮಾತ್ಮನ ಅಧೀನವಾದ ಕರ್ತೃತ್ವವಿರುವುದು. ಪುರುಷಪ್ರಯತ್ನವು ವ್ಯರ್ಥವಾಗುವುದಾದರೆ, ಪುರುಷರಿಗೆ ಕರ್ತೃತ್ವವೇ ಇಲ್ಲವೆನ್ನುವುದಾದರೆ ಶಾಸ್ತ್ರದಲ್ಲಿ 'ಇದನ್ನು ಮಾಡು. ಇದನ್ನು ಮಾಡಬೇಡ' ಎಂಬ ವಿಧಿನಿಷೇಧಗಳಿಗೆ ಯಾರು ವಿಷಯರು? ಅಂದರೆ ಯಾರನ್ನು ಕುರಿತು 'ಇದನ್ನು ಮಾಡು, ಇದನ್ನು ಮಾಡಬೇಡ'

1. ಇಟ್ಟಸಲಾರನು ಆದಕಾರಣ

ಎನ್ನುವುದು. ಅದನ್ನು ಪರಮಾತ್ಮನಿಗೆ ಹೇಳುವುದು ಎನ್ನಲಾಗದು. ಅವನಿಗೆ ಹೇಳಿದರೆ ಅದರಿಂದ ಅವನಿಗೆ ಪುಣ್ಯಪಾಪಗಳ ಸಂಬಂಧವೂ ಬರಬೇಕಾಗುವುದು. ಸ್ವತಂತ್ರನಾದ ಪರಮಾತ್ಮನಿಗೆ ಪುಣ್ಯಪಾಪಗಳ ಸಂಬಂಧವಿಲ್ಲವಷ್ಟೆ! ಆದುದರಿಂದ ಪರಮಾತ್ಮನು ವಿಧಿನಿಷೇಧಗಳಿಗೆ ವಿಷಯನಲ್ಲ. ಜೀವನೇ ಆಗಬೇಕು. ಆದುದರಿಂದ ಅವನಿಗೆ ದೇವರ ಅಧೀನವಾದ ಕರ್ತೃತ್ವವನ್ನು ಅಂದರೆ ಜೀವನು ಪರಮಾತ್ಮನ ಅಧಿ ೕನವಾಗಿ ಪ್ರಯತ್ನವನ್ನು ಮಾಡುವನೆಂದು ಒಪ್ಪಲೇಬೇಕು' ಎಂದು ಹೇಳಿದರು.

ಧರ್ಮರಾಜನಿಗೆ ಇದಕ್ಕೇನು ಉತ್ತರ ಕೊಡಬೇಕು ತೋರಲಿಲ್ಲ. ಅವನು 'ನೀನು ಹೀಗೆ ಕುಯಕ್ತಿಯಿಂದ ಪರಮಾತ್ಮನಿಗೆ ಅಸ್ವಾತಂತ್ರ್ಯವನ್ನು ಸಾಧನೆ ಮಾಡುವಿ' ಎಂದು ಹೇಳಿ ಗದರಿಸಿದನು. ಆಗ ದ್ರೌಪದೀದೇವಿಯರು ಹೆಂಗಸರು ಗಂಡನ ಹತ್ತಿರ ಹೆಚ್ಚಿಗೆ ವಿವಾದ ಮಾಡುವುದು ಚೆನ್ನಾಗಿಲ್ಲವೆಂದು ಸುಮ್ಮನೆ ಆಗಿಬಿಟ್ಟರು. ಆಮೇಲೆ ಭೀಮಸೇನದೇವರು ಬಂದರು.

ಭೀಮಸೇನದೇವರು ''ರಾಜನೇ! ಶ್ರೀವಿಷ್ಣುವೇ ಸಮಸ್ತ ಜಗತ್ತನ್ನು ಮಾಡಿದವನು. ಇನ್ನೊಬ್ಬನಲ್ಲ. ಅವನೊಬ್ಬನೇ ಸ್ವತಂತ್ರನು. ಉಳಿದವರೆಲ್ಲರೂ ಅವನ ಅಧೀನರು. ಆದರೂ ಪುರುಷರು ವಿಹಿತವಾದ ಕರ್ಮವನ್ನು ಅತ್ಯಂತ ಪ್ರಯತ್ನದಿಂದ ಮಾಡಬೇಕು. ನಿಷಿದ್ಧಕರ್ಮವನ್ನು ಅತ್ಯಂತ ಪ್ರಯತ್ನದಿಂದ ಬಿಡಬೇಕು. (ಅಂದರೆ ವ್ಯಭಿಚಾರಿಣಿ ಸ್ತ್ರೀಯೊಬ್ಬಳು ನನ್ನ ಸಂಗವನ್ನು ಮಾಡು ಎಂದು ಬಲಾತ್ಕಾರ ಮಾಡುತ್ತಾ ಬಂದರೆ ಅವಳ ಕುತ್ತಿಗೆಗೆ ಕೈಹಾಕಿ ಮನೆಯಿಂದ ಹೊರಗೆ ಕಳುಹಿಸಬೇಕು.) ನಾವು ಸಂಧ್ಯಾವಂದನಾದಿ ಕರ್ಮವನ್ನು ಮಾಡುವುದು ಪ್ರತ್ಯಕ್ಷವಾಗಿ ಕಾಣಿಸುತ್ತದೆ. ಇದರಿಂದ ಪರಮಾತ್ಮನ ಪ್ರೇರಣೆಯನ್ನು ಅನುಮಾನ ಮಾಡಬೇಕು. (ಎಲ್ಲರೂ ಜೀವರಾಗಿರುವಾಗ ಕಾಮುಕರು ಸಂಧ್ಯಾವಂದನೆಯನ್ನು ಮಾಡದೆ ಆಸ್ತಿಕರು ಮಾತ್ರ ಯಾಕೆ ಸಂಧ್ಯಾವಂದನೆಯನ್ನು ಮಾಡಬೇಕು? ಆದುದರಿಂದ ಭಗವಂತನು ಕಾಮುಕರಲ್ಲಿ ಕಾಮವನ್ನೇ ಹೆಚ್ಚಿಸುವನು. ಆಸ್ತಿಕರಲ್ಲಿ ಶ್ರದ್ಧೆಯನ್ನೇ ಹೆಚ್ಚಿಸುವನೆಂದು ಹೇಳಬೇಕು. ಆದುದರಿಂದ ಭಗವಂತನ ಪ್ರೇರಣೆ ಯೆಂದೇ ಅನುಮಾನ ಮಾಡಬೇಕು. ಅವರವರ ಯೋಗ್ಯತೆಯಿಂದಲೇ ನಡೆಯುತ್ತದೆ ಎಂದು ಹೇಳಲಾಗದು. ಏಕೆಂದರೆ ಯೋಗ್ಯರಾದವರೇ ಇಂದ್ರಾದಿಗಳು ಕೆಲವರು ಪರಸ್ತ್ರೀಗಮನಾದಿಗಳನ್ನು ಮಾಡಿರುತ್ತಾರೆ. ಜನರು ಎಷ್ಟೋ ಪಾಪಕರ್ಮ ಗಳು ಅನಿಷ್ಟಕ್ಕೆ ಕಾರಣವೆಂದು ತಿಳಿದೂ ಕೂಡ ಮಾಡುತ್ತಾರೆ. ಅದರಿಂದ ಅವರು ಭಗವಂತನ ಪ್ರೇರಣೆಯಿಂದ ಮಾಡುತ್ತಾರಲ್ಲದೆ ಸ್ವತಂತ್ರರಾಗಿ ಮಾಡುತ್ತಾರೆಂದು

ಹೇಳಲಾಗದು. ಸ್ವತಂತ್ರರಾದರೆ ತಮಗೆ ಅನಿಷ್ಟವನ್ನು ಏಕೆ ಮಾಡಿಕೊಳ್ಳುತ್ತಾರೆ. ಜಡವಾದ ಕರ್ಮವೇ ಪ್ರೇರಿಸುವುದು ಎನ್ನುವುದು ಸರಿಯೇ ಅಲ್ಲ. ಜಡವಾದ ಕೊಡಲಿಯು ದೇವದತ್ತನನ್ನು ಪ್ರೇರಿಸಿ ಮರವನ್ನು ಕಡಿಯುವುದಿಲ್ಲವಷ್ಟೆ!! ಚೇತನನಾದ ದೇವದತ್ತನು ಜಡವಾದ ಕೊಡಲಿಯನ್ನು ಪ್ರೇರಿಸಿ ಮರವನ್ನು ಕಡಿಯುವನು. ಆದುದರಿಂದ ಪ್ರೇರಿಸುವವನು ಚೇತನನಾಗಬೇಕು. ಹೆಚ್ಚಿಗೆ ಏಕೆ? ತಾನು ಸ್ವತಂತ್ರನಾದರೆ ಊಟಮಾಡುವಾಗ ತನ್ನ ನಾಲಿಗೆಯನ್ನೇಕೆ ಕಚ್ಚಿಕೊಳ್ಳುವನು? ಆದುದರಿಂದ ಒಂದೊಂದು ಕಾರ್ಯಕ್ಕೆ ಭಗವಂತನ ಪ್ರೇರಣೆಯು ಕಾರಣವೆಂದು ಒಪ್ಪಿಕೊಳ್ಳಬೇಕು.)

ಜ್ಞಾನಿಯಾದವನು ವಿಹಿತವಾದ ಕರ್ಮವನ್ನು ಮಾಡಿ ಭಗವಂತನು ಪ್ರೇರಿಸಿದನು ಎಂದು ಅಂದುಕೊಳ್ಳುವನು. ಅದರಿಂದ ಪರಮಾತ್ಮನ ಪ್ರಸಾದದಿಂದ ಉತ್ತಮಫಲವನ್ನು ಹೊಂದುವನು. ಅಜ್ಞಾನಿಯು ಎಲ್ಲಾ ಭಗವಂತನ ಪ್ರೇರಣೆ ಯಿಂದಲೇ ನಡೆಯುವುದು ಎಂದು ಹೇಳುತ್ತಾ ಸೋಮಾರಿಯಾಗಿ ತನ್ನ ವಿಹಿತ ಕರ್ಮವನ್ನು ಬಿಟ್ಟು ನರಕವನ್ನು ಹೊಂದುವನು. ಆದುದರಿಂದ ವಿಹಿತವಾದ ಕರ್ಮವನ್ನು ಎಲ್ಲರೂ ಮಾಡಿಯೇ ಆಗಬೇಕು. ಎಲ್ಲವೂ ಪರಮಾತ್ಮನ ವಶವೆಂದು ತಿಳಿದುಕೊಂಡು ವಿಹಿತಕರ್ಮವನ್ನು ಮಾಡಬೇಕು. ಜೀವರಲ್ಲಿ ಕರ್ತೃತ್ವವಿರುವುದು 'ನಾನು ಇದನ್ನು ಮಾಡುತ್ತೇನೆ' ಎಂಬ ಸಾಕ್ಷಿ ಪ್ರತ್ಯಕ್ಷದಿಂದ ಸಿದ್ಧವಾಗಿದೆ. ಹಾಗೆಯೇ ಜೀವನು ನೂರು ವರ್ಷ ಬದುಕಿದ್ದರೂ ವಿಹಿತಕರ್ಮಗಳನ್ನು ಮಾಡುತ್ತಲೇ ಇರಬೇಕು (ಕುರ್ವನ್ನೇವೇಹ ಕರ್ಮಾಣಿ ಜಿಜೀವಿಷೇಚ್ಛತಂ ಸಮಾಃ) ಎನ್ನುವ ಆಗಮದಿಂದಲೂ ಸಿದ್ಧವಾಗಿದೆ.

'ಜೀವನು ಯಜ್ಞಾದಿ ಕರ್ಮಗಳನ್ನು ಮಾಡುವವನು. ಅವುಗಳ ಫಲವನ್ನು ಹೊಂದುವವನಾದ ಕಾರಣ ಲೋಕದಲ್ಲಿ ಗಡಿಗೆಯು ಯಜ್ಞಾದಿಕರ್ಮಗಳನ್ನು ಮಾಡುವುದೂ ಇಲ್ಲ. ಅದರ ಫಲವಾದ ಸ್ವರ್ಗಾದಿ ಫಲವನ್ನು ಹೊಂದುವುದೂ ಇಲ್ಲ' ಎಂಬ ಅನುಮಾನದಿಂದಲೂ ಸಿದ್ಧವಾಗುವುದು. ಮತ್ತು ಜೀವನ ಕರ್ತೃತ್ವಾದಿಗಳು ಪರಮಾತ್ಮನ ಅಧೀನವಾಗಿರುವುದು ಎನ್ನುವುದು ಜ್ಞಾನಿಗಳ ಪ್ರತ್ಯಕ್ಷದಿಂದ ತಿಳಿಯುವುದು. ಪರಮಾತ್ಮನಿಲ್ಲದೆ ಯಾವ ಕಾರ್ಯವೂ ನಡೆಯಲಾರದು (ನ ಋತೇ ತ್ವತ್ಕ್ರಿಯತೇ) ಎನ್ನುವ ಆಗಮದಿಂದಲೂ ಸಿದ್ಧವಾಗು ವುದು. 'ಕರ್ತೃತ್ವಾದಿಗಳು ಪರಮಾತ್ಮನ ಅಧೀನವು. ಕಾರ್ಯವಾದ ಪ್ರಯುಕ್ತ. ಅಂಕುರಾದಿಗಳಂತೆ' ಎಂಬ ಅನುಮಾನ ಪ್ರಮಾಣದಿಂದಲೂ ಸಿದ್ಧವಾಗುವುದು.

ಆದುದರಿಂದ ಜೀವನ ಕರ್ತೃತ್ವವಿದೆಯೆಂದೂ ಅದು ಪರಮಾತ್ಮನ ಅಧೀನ ವಾಗಿರುವುದೆಂದೂ ಈ ಎರಡನ್ನೂ ಬಿಡದೆ, ತಿಳಿದುಕೊಂಡು ಜ್ಞಾನಿಯಾದವನು ಶಾಸ್ತ್ರದಲ್ಲಿ ತನಗೆ ಹೇಳಿದ ಸಂಧ್ಯಾವಂದನೆ ಇತ್ಯಾದಿ ಕರ್ಮವನ್ನು ಮಾಡುವನು.

ಪ್ರತ್ಯಕ್ಷ ಅನುಮಾನ ಆಗಮ ಎಂಬ ಮೂರು ಪ್ರಮಾಣಗಳನ್ನು ಅನುಸರಿಸ ಬೇಕು. ಒಂದೇ ವಿಷಯದಲ್ಲಿ ಮೂರು ಪ್ರಮಾಣಗಳಿದ್ದರೆ ಉತ್ತಮಪ್ರಮಾಣ ವಾಗುವುದು. ಜೀವನ ಕರ್ತೃತ್ವ ವಿಷಯದಲ್ಲಿಯೂ ಅದು ಈಶ್ವರಾಧೀನ ಎಂಬ ವಿಷಯದಲ್ಲಿಯೂ ಪೂರ್ವದಲ್ಲಿ ಹೇಳಿದಂತೆ ಮೂರು ಪ್ರಮಾಣವಿರುವುದರಿಂದ ಉತ್ತಮ ಪ್ರಮಾಣವಾಯಿತು. ಮೂರು ಪ್ರಮಾಣಗಳು ವಿರೋಧವಿಲ್ಲದೆ ಬೇರೆಬೇರೆ ವಿಷಯದಲ್ಲಿ ಇದ್ದರೆ ಮಧ್ಯಮ ಪ್ರಮಾಣವಾಗುವುದು. ಇದು ಗಡಿಗೆಯೆಂಬ ಪ್ರತ್ಯಕ್ಷವು 'ಪರ್ವತದಲ್ಲಿ ಬೆಂಕಿಯಿದೆ. ಹೊಗೆ ಇರುವ ಪ್ರಯುಕ್ತ' ಎಂಬ ಅನುಮಾನವು. ನದಿಯ ಬಳಿಯಲ್ಲಿ ಐದು ಹಣ್ಣುಗಳು ಇವೆ ಎಂಬ ಆಪ್ತನ ವಾಕ್ಯವು ಬೇರೆಬೇರೆ ವಿಷಯದಲ್ಲಿ ಇರುವ ಕಾರಣ ವಿರೋಧವು ಇರದ ಕಾರಣ ಮಧ್ಯಮಪ್ರಮಾಣವಾಗುವುದು. ನಾನು ಸರ್ವಜ್ಞನು ಎಂಬ ವಚನವು, 'ನಾನು ಸರ್ವಜ್ಞನಲ್ಲ' ಎಂಬ ಸಾಕ್ಷಿ ಪ್ರತ್ಯಕ್ಷದಿಂದಲೂ, ಸರ್ವಜ್ಞನಾದ ಪರಮಾತ್ಮನು ಬೇರೆ, ಜೀವನು ಬೇರೆ 'ದ್ವಾಸುಪರ್ಣಾ' ಎಂದು ಹೇಳುವ ಆಗಮದಿಂದಲೂ, 'ಜೀವಪರಮಾತ್ಮರು ಬೇರೆ. 'ಸರ್ವಜ್ಞತ್ವ' 'ಅಸರ್ವಜ್ಞತ್ವ' ಎಂಬ ವಿರುದ್ಧ ಧರ್ಮವಿರುವ ಪ್ರಯುಕ್ತ' ಎಂಬ ಅನುಮಾನದಿಂದಲೂ ಈ ಪ್ರಕಾರವಾಗಿ ಮೂರು ಪ್ರಮಾಣಗಳಿಂದ ವಿರುದ್ಧವಾದ ಕಾರಣ ಅತ್ಯಂತವಿರುದ್ಧವು. ಇದು ಬೆಳ್ಳಿಯು ಎಂದು ಕಾಗೆಚಿಪ್ಪನ್ನು ನೋಡಿ ಬರುವ ಪ್ರತ್ಯಕ್ಷವು ಇದು ಬೆಳ್ಳಿಯಲ್ಲವೆಂಬ ಪ್ರತ್ಯಕ್ಷದಿಂದ ವಿರುದ್ಧವಾದ ಕಾರಣ ಅಪ್ರಮಾಣವಾಗುವುದು. ಗೋವುಗಳನ್ನು ಕೊಲ್ಲಬೇಕು ಎಂಬ ಮ್ಲೇಂಚ್ಛರ ವಾಕ್ಯವು ಗೋವನ್ನು ಕೊಲ್ಲಬಾರದು (ಗೌರ್ನಹಂತವ್ಯಾ) ಎಂಬ ಆಗಮದಿಂದ ವಿರುದ್ಧವಾದ ಕಾರಣ ಅಪ್ರಮಾಣವಾಗುವುದು.

ಅಜ್ಞಾನಿಯು ಪ್ರತ್ಯಕ್ಷಸಿದ್ಧವಾದ ಕರ್ತೃತ್ವವನ್ನು ಬಿಟ್ಟು ಎಲ್ಲವೂ ದೇವಾಧಿ ೀನವೆಂದು ಹೇಳುತ್ತಾ ತಮ್ಮ ವಿಹಿತಕರ್ಮವನ್ನು ಬಿಡುವನು. ಜ್ಞಾನಿಯು ಎಲ್ಲವೂ ವಿಷ್ಣುವಿನ ಅಧೀನವೆಂದು ತಿಳಿದುಕೊಂಡು ವಿಹಿತವಾದ ಕಾರ್ಯವನ್ನು ಮಾಡುವನು. ಸ್ವಭಾವವೆಂದೂ ಹಠವೆಂದೂ ಹೆಸರುಳ್ಳ ಅನಾದಿಕಾಲೀನವಾದ ಯೋಗ್ಯತೆಯು ಎಲ್ಲಾ ಜೀವರಲ್ಲಿಯೂ ಇರುತ್ತದೆ. ಅದು ಪ್ರತಿಯೊಂದು ಕಾರ್ಯಕ್ಕೂ ಮೊದಲಿನ ಕಾರಣವು. ಅನಾದಿಕಾಲೀನವಾದ ಕರ್ಮವು ಎರಡನೇ

ಕಾರಣವು. ಜೀವರ ಪ್ರಯತ್ನವು ಮೂರನೆಯ ಕಾರಣವು. ಈ ಮೂರೂ ಪರಮಾತ್ಮನ ಅಧೀನವಾದವುಗಳು. ಪರಮಾತ್ಮನು ಯಾರ ಅಧೀನವೂ ಅಲ್ಲ, ಅವನು ಸ್ವತಂತ್ರನು. ಹಠವು ಬ್ರಹ್ಮದೇವರನ್ನು ಆರಂಭಿಸಿ ಕಲಿಯವರೆಗೆ ತಾರತಮ್ಯದಿಂದ ಇರುತ್ತದೆ.

(ಬ್ರಹ್ಮದೇವರಲ್ಲಿ ಎಲ್ಲರಿಗಿಂತಲೂ ಪ್ರಧಾನವಾದ ಯೋಗ್ಯತೆಯಿರುವುದು. ಆಮೇಲೆ ರುದ್ರಾದಿಗಳಲ್ಲಿ ಸ್ವಲ್ಪಸ್ವಲ್ಪವೇ ಕಡಿಮೆಯಾಗುತ್ತಾ ಬರುತ್ತದೆ. ಈ ಯೋಗ್ಯತೆಯು ಇಲ್ಲಿ ಜ್ಞಾನಭಕ್ತ್ಯಾದಿಗುಣಗಳಿಗೆ ಕಾರಣವು. ಕೊನೆಗೆ ಮೋಕ್ಷವು ಕಾರಣವು. ಪರಮಾತ್ಮನಲ್ಲಿ ಮಾಡುವ ಜ್ಞಾನಭಕ್ತ್ಯಾದಿಗುಣಗಳ ತಾರತಮ್ಯದಿಂದ ಇದಕ್ಕೆ ತಾರತಮ್ಯವು. ಮೋಕ್ಷದಲ್ಲಿ ಅನುಭವಿಸಲ್ಪಡುವ ಸುಖತಾರತಮ್ಯದಿಂದ ತಾರತಮ್ಯವು. ಮುಕ್ತಿಗೆ ಹೋಗುವವರು ಕೇವಲ ಗುಣವುಳ್ಳವರಾದ ಕಾರಣ ಉತ್ತಮ ಜೀವರು ಎಂದು ಹೇಳಲ್ಪಡುವರು. ಮಿಶ್ರಜೀವರಲ್ಲಿ ಮಧ್ಯಮ ಯೋಗ್ಯತೆಯು. ಸಂಸಾರದಲ್ಲಿ ವಿಷ್ಣುಭಕ್ತ್ಯಾದಿಗುಣಗಳಿಗೂ ವಿಷ್ಣುದ್ವೇಷಾದಿ ದೋಷ ಗಳಿಗೂ ತಾರತಮ್ಯದಿಂದ ಈ ಯೋಗ್ಯತೆಗೆ ತಾರತಮ್ಯವು. ಕೊನೆಗೆ ಅನುಭವಿಸ ಲ್ಪಡುವ ಸುಖದುಃಖಗಳ ತಾರತಮ್ಯದಿಂದ ತಾರತಮ್ಯವು. ಗುಣದೋಷಮಿಶ್ರವಾದ ಕಾರಣ ಈ ಯೋಗ್ಯತೆಗೆ ಮಧ್ಯಮಯೋಗ್ಯತೆಯೆಂದು ಹೆಸರು. ಈ ಯೋಗ್ಯತೆಯು ಮಧ್ಯಮಗತಿಗೆ ಕಾರಣವು. ಮೋಕ್ಷಕ್ಕೂ ಕಾರಣವಲ್ಲ, ಅಂಧಂತಮಸ್ಸಿಗೂ ಕಾರಣ ವಲ್ಲ. ಈ ಯೋಗ್ಯತೆಯುಳ್ಳ ಜೀವರು ಗುಣದೋಷಮಿಶ್ರರಾದ ಕಾರಣ ಮಿಶ್ರಜೀವರು ಎಂದು ಹೇಳಲ್ಪಡುತ್ತಾರೆ. ಮನುಷ್ಯರನ್ನು ಆರಂಭಿಸಿ ಕಲಿಯವರೆಗೆ ಇರುವ ಜೀವರಲ್ಲಿ ಅಧಮ ಯೋಗ್ಯತೆಯು. ವಿಷ್ಣುಜ್ಞಾನವಿಪರೀತಜ್ಞಾನ ಇತ್ಯಾದಿ ದೋಷಗಳಿಗೆ ಮಾತ್ರ ಕಾರಣವಾದ ಪ್ರಯುಕ್ತ ಈ ಯೋಗ್ಯತೆಗೆ ಅಧಮಯೋಗ್ಯತೆ ಯೆಂದು ಹೆಸರು. ಈ ದೋಷಗಳು ಯಾರಲ್ಲಿ ಸ್ವಲ್ಪವಾಗಿರುವುವೋ ಅವರು ಅಧಮರಲ್ಲಿ ಸ್ವಲ್ಪ ಉತ್ತಮರು. ಯಾರಲ್ಲಿ ದೋಷಗಳು ಮಧ್ಯಮವಾಗಿ ಇರುವವೋ ಅವರು ಅಧಮರಲ್ಲಿ ಮಧ್ಯಮರು. ಕಲಿಯು ಎಲ್ಲರಿಂದಲೂ ಈ ಮೂರು ವಿಧ ಜೀವರಲ್ಲಿ ಯೋಗ್ಯತೆಯೂ ಪ್ರಧಾನಾಧಮ ಮಧ್ಯಮಾಧಮ ಅಧಮಾಮಧ ಎಂದು ಮೂರು ಪ್ರಕಾರವಾಗಿ ಇರುವುದು. ಈ ಯೋಗ್ಯತೆಯು ಸಂಸಾರದಲ್ಲಿ ದೋಷಗಳಿಗೇ ಕಾರಣವಾದದ್ದು. ಕೊನೆಗೆ ತಮಸ್ಸಿನಲ್ಲಿ ಅನುಭವಿಸಲ್ಪಡುವ ದುಃಖಕ್ಕೆ ಕಾರಣವು. ಈಜೀವರು ದೋಷಕ್ಕೇ ಆಶ್ರಯರಾದ ಕಾರಣ ಅಧಮರು ಎನ್ನಲ್ಪಡುತ್ತಾರೆ. ಅಧಮಾಧಮನು ಕಲಿಯು.)

ಪ್ರಯತ್ನವು ಹಠ ಕರ್ಮಗಳಿಂದ ಫಲವುಂಟಾಗಲಿಕ್ಕೆ ಕಾರಣವು. ಪ್ರಯತ್ನವಿಲ್ಲದೆ ಹಠವಾಗಲೀ ಕರ್ಮವಾಗಲೀ ಫಲವನ್ನು ಉಂಟುಮಾಡಲಾರದು. ಪ್ರಯತ್ನ ಕರ್ಮ ಹಠ ಈ ಮೂರು ಸೇರಿದವರಿಗೇ ಭಗವಂತನು ಫಲವನ್ನು ಕೊಡುವನು. ಭಗವಂತನು ಸ್ವತಂತ್ರನಾದರೂ ಇವುಗಳನ್ನು ಅನುಸರಿಸಿಯೇ ಫಲವನ್ನು ಕೊಡುವನು. ಇವುಗಳನ್ನು ಅನುಸರಿಸಿ ಫಲವನ್ನು ಕೊಡುವನೆಂದು ತನ್ನ ಸಂಕಲ್ಪದಿಂದಲೇ ಹಾಗೆ ಮಾಡುವುದರಿಂದ ಅವನ ಸ್ವಾತಂತ್ರ್ಯಕ್ಕೆ ಹಾನಿಯಿಲ್ಲ. ಆದುದರಿಂದ ಭಗವಂತನಿಂದ ವಿಹಿತವಾದ ಕರ್ಮವನ್ನು ಅವನ ಪೂಜೆಗಾಗಿ ಮಾಡಬೇಕು. ಇದರಿಂದ ಭಗವಂತನ ಪ್ರಾಪ್ತಿಯಾಗುವುದು. ಹಾಗೆ ಮಾಡದೆ ಇದ್ದರೆ ನರಕವುಂಟಾಗುವುದು.

ಬ್ರಾಹ್ಮಣಜಾತಿಯವರಿಗೆ ಜಪ ಮಾಡುವುದೂ ಉಪದೇಶ ಮಾಡುವುದೂ ಧರ್ಮವು. ಬ್ರಾಹ್ಮಣಜಾತಿಯು ಭಗವಂತನ ಮುಖದಿಂದ ಹುಟ್ಟಿರುತ್ತದೆ. ಇದರಿಂದ ಬ್ರಾಹ್ಮಣಜಾತಿಯವರಿಗೆ ಮುಖದ ಕರ್ಮವನ್ನೇ ಭಗವಂತನು ಕೊಟ್ಟಿರುವನು. ಕ್ಷತ್ರಿಯನು ಬಾಹುವಿನಿಂದ ಹುಟ್ಟಿದವನು. ಆದುದರಿಂದ ಅವನಿಗೆ ಬಾಹುವಿನ ಧರ್ಮವಾದ ಪಾಪಿಗಳನ್ನು ನಿಗ್ರಹಿಸುವುದೂ, ಸಾಧುಕಾರ್ಯವನ್ನು ಮಾಡಿಸುವುದೂ ಧರ್ಮವು ಬಾಹುಗಳಿಗೂ ಮುಖಕ್ಕೂ ಸಾಮೀಪ್ಯವಿರುವ ಕಾರಣ ಮುಖದ ಧರ್ಮವಾದ ಜಪ ಉಪದೇಶಗಳು ಕ್ಷತ್ರಿಯರಿಗೂ ಧರ್ಮವಾಗಿವೆ. ಬ್ರಾಹ್ಮಣನಿಗೆ ಯಜ್ಞ ಮಾಡುವುದೂ ಧರ್ಮವು. ವೈಶ್ಯನು ತೊಡೆಯಿಂದ ಹುಟ್ಟಿದವನಾದ ಕಾರಣ ಅವನಿಗೆ ಪ್ರಜೆಗಳನ್ನು ವೃದ್ಧಿಪಡಿಸುವುದೇ ಧರ್ಮವು. ಅದರ ಸಾದೃಶ್ಯದಿಂದ ಮರಗಿಡಗಳನ್ನು ಅಭಿವೃದ್ಧಿಪಡಿಸೋಣ ರೂಪವಾದ ಕೃಷಿಯೂ ಧರ್ಮವು. ಕೈಗಳಿಗೂ ತೊಡೆಗಳಿಗೂ ಸಾಮೀಪ್ಯವಿರುವ ಕಾರಣ ಗೋರಕ್ಷಣೆ ವ್ಯಾಪಾರ ಮಾಡುವುದು ಹಣವನ್ನು ಬಡ್ಡಿಗೆ ಹಾಕುವುದೂ ಅವನ ಧರ್ಮವಾಗಿದೆ. ಶೂದ್ರನು ದೇವರ ಪಾದದಿಂದ ಹುಟ್ಟಿದವನಾದ ಕಾರಣ ನಡೆಯುವುದೇ ಪ್ರಧಾನವಾಗಿ ಉಳ್ಳ ಸೇವಾ ಮಾಡುವುದೇ ಅವನಿಗೆ ಧರ್ಮವು. ಹಸ್ತಕ್ಕೂ ಪಾದಕ್ಕೂ ಸಾದೃಶ್ಯವಿರುವುದರಿಂದ ಹಸ್ತದ ಕರ್ಮವೂ ಇರುವುದು. ತೊಡೆಗೂ ಪಾದಕ್ಕೂ ಸಾಮಿಪ್ಯವಿರುವ ಕಾರಣ ಸಂತಾನಾವೃದ್ಧಿಯೂ ಶೂದ್ರಧರ್ಮವಿರುವುದು. ಭುಜಗಳೂ ಹೃದಯವೂ ಬಲಕ್ಕೂ ಜ್ಞಾನಕ್ಕೂ ಸ್ಥಾನವಾದ ಕಾರಣ ಕ್ಷತ್ರಿಯರಿಗೆ ಬಲವೂ ಜ್ಞಾನವೂ ಧರ್ಮವು. ಕರ್ಮವು ಹಸ್ತದಿಂದ ಆಗುವ ಕಾರ್ಯವು ಕೈಗಳಿಗೂ ತೊಡೆಗೂ ಪಾದಗಳಿಗೂ ಸಾಮೀಪ್ಯವಿರುವ ಕಾರಣ ವೈಶ್ಯಶೂದ್ರರಿಗೂ

ಶಿಲ್ಪಾದಿಗಳು ಧರ್ಮವು. ಈರೀತಿಯಾಗಿ ಪ್ರಧಾನ ಕರ್ಮಗಳನ್ನು ಹೇಳಿದ್ದು.

ಸಾಮಾನ್ಯವಾಗಿ ಎಲ್ಲರಿಗೂ ಎಲ್ಲಾ ಧರ್ಮಗಳಿರುವುವು. ಆಪತ್ತಿನಲ್ಲಿ ಬ್ರಾಹ್ಮಣರಿಗೆ ಕ್ಷತ್ರಿಯ ಧರ್ಮವು ವಿಹಿತವು. ಕ್ಷತ್ರಿಯರಿಗೆ ವೈಶ್ಯರ ಧರ್ಮವೂ ವೈಶ್ಯರಿಗೆ ಶೂದ್ರರ ಧರ್ಮವೂ ವಿಹಿತವು. ಅತಿ ಆಪತ್ತಿನಲ್ಲಿ ಬ್ರಾಹ್ಮಣರಿಗೆ ಕ್ಷತ್ರಿಯರಿಗೆ ವೈಶ್ಯರಿಗೆ ನಾಲ್ಕು ಜಾತಿಯ ಧರ್ಮಗಳೂ ವಿಹಿತವೇ. ಶೂದ್ರರಿಗೆ ಬ್ರಾಹ್ಮಣಧರ್ಮ ಹೊರತು ಇತರ ಧರ್ಮಗಳು ವಿಹಿತವು. ನಾವು ದೇವತೆಗಳಾದ ಕಾರಣ ಪ್ರಾಯಃ ನಮಗೆ ಎಲ್ಲವೂ ಧರ್ಮವೇ. ಈರೀತಿಯಾಗಿ ಭಗವಂತನಿಂದ ನಿರ್ಮಿತಗಳಾದ ಧರ್ಮಗಳಿಂದ ಎಲ್ಲರೂ ಭಗವಂತನನ್ನೇ ಪೂಜಿಸಬೇಕು. ಪರಮಾತ್ಮನಲ್ಲಿ ಭಕ್ತಿಮಾಡುವುದೇ ಎಲ್ಲರಿಗೂ ಧರ್ಮವು. ಯೋಗ್ಯತೆಯನ್ನು ಅನುಸರಿಸಿ ಅವನನ್ನು ತಿಳಿದುಕೊಳ್ಳುವುದೇ ಅವನ ಪೂಜೆಯು. ಪರಮಾತ್ಮನೇ ತಂದೆಯು. ಗುರುವು. ಉತ್ತಮ ದೇವತೆಯೂ. ಆದರಿಂದ ಅವನು ಎಲ್ಲರಿಗೂ ಪೂಜ್ಯನೇ. ಪರಮಾತ್ಮನ ಭಕ್ತರಾದ ಕಾರಣ ದೇವತೆಗಳನ್ನು ಪೂಜಿಸಬೇಕು. ಪರಮಾತ್ಮನನ್ನು ಪೂಜಿಸಿದರೆ ಮೋಕ್ಷವನ್ನು ಕೊಡುವನು. ಪೂಜಿಸದಿದ್ದರೆ ದುಃಖವನ್ನೇ ಕೊಡುವನು. ಅವನು ಸ್ವತಂತ್ರನಾದ ಕಾರಣ ಸುಖದುಃಖಗಳನ್ನು ಕೊಡುವನು. ಇನ್ನೊಬ್ಬರು ಯಾರೂ ಸ್ವತಂತ್ರರಿಲ್ಲ. ಎಲ್ಲರೂ ಅವನ ಅಧೀನರೇ. ಪರಮಾತ್ಮನು ಸ್ವತಂತ್ರನಾದ ಕಾರಣವೇ ಸುಖಜ್ಞಾನ ಶಕ್ತಿ ಮೊದಲಾದ ಧರ್ಮಗಳಿಂದ ಪೂರ್ಣನಾಗಿರುವನು. ಸ್ವತಂತ್ರನಾದ ಕಾರಣವೇ ಸರ್ವದೋಷಗಳಿಂದ ರಹಿತನಾಗಿರುವನು. ದೋಷಗಳು ಬರದಂತೆ ಮಾಡುವುದಕ್ಕೂ ಗುಣಗಳು ಪೂರ್ಣವಾಗಿರುವುದಕ್ಕೂ ಸಂಪೂರ್ಣಶಕ್ತಿಯು ಅವನಿಗೆ ಇರುವುದು. ಈರೀತಿಯಾಗಿ ಸಕಲಗುಣಗಳಿಂದ ಪೂರ್ಣನಾದ ಪರಮಾತ್ಮನನ್ನು ಸ್ವಧರ್ಮಗಳಿಂದ ಪೂಜಿಸಬೇಕು. ಆದುದರಿಂದ ನಮಗೆ ಅತಿಕ್ಷಮೆಯು ಧರ್ಮವಲ್ಲ. ದುಷ್ಟರನ್ನು ತಡೆಯುವುದೂ ಧರ್ಮವು. ಯಾವ ಕ್ಷತ್ರಿಯನು ಯುದ್ಧದಲ್ಲಿ ಬಂದಿರುವ ದುಷ್ಟಕ್ಷತ್ರಿಯರನ್ನು ಭಗವತ್ಸ್ಮರಣೆಯನ್ನು ಮಾಡುತ್ತಾ ಸ್ವಬಾಹುವೀರ್ಯದಿಂದ ಸಂಹರಿಸುವನೋ ಅವನಿಗೆ ಮೋಕ್ಷವು ಹಸ್ತಗತವಾಗುವುದು. ಬಲಿಷ್ಠರಾದ ಪಾಪಿಗಳನ್ನು ಸಂಹರಿಸಿದರೆ ಮೋಕ್ಷದಲ್ಲಿ ಆನಂದವೃದ್ಧಿಯು ಉಂಟಾಗುವುದು. ಅದರಿಂದ ಪರಮಾತ್ಮನಿಗೆ ಅತ್ಯಂತ ಪ್ರೀತಿಯಾಗುವುದು. ಆದುದರಿಂದ ಪಾಪಿಗಳನ್ನು ಸರ್ವಥಾ ಸಂಹರಿಸಬೇಕು.

ಪಗಡೆ ಆಟ ಆಡುವ ಪಾಪಿಗಳು ಕೈಗೆ ಸಿಕ್ಕಿದರೆ ಅವರನ್ನು ಇನ್ನೊಬ್ಬರಿಂದ ಸಂಹಾರ ಮಾಡಿಸಬೇಕು. ರಾಜನೋ ರಾಜಪುತ್ರನೋ ರಾಜನ ತಮ್ಮನೇ ಯುದ್ಧಕ್ಕೆ

ಬಂದರೆ ತನ್ನ ಕೈಗಳಿಂದಲೇ ಸಂಹರಿಸಬೇಕು. ಮದುವೆಯಾಗದೆ ಇದ್ದ ರಾಜಪುತ್ರನು ಯುದ್ಧಕ್ಕೆ ಬಂದರೆ ತಾನು ಕೊಲ್ಲಬಾರದು. ಇನ್ನೊಬ್ಬರಿಂದ ಕೊಲ್ಲಿಸಬೇಕು. ಕಳ್ಳರ ಶಿರಚ್ಛೇದಾದಿಕ್ರೂರ ಕರ್ಮವನ್ನು ಭಟರಿಂದಲೇ ಮಾಡಿಸಬೇಕು. ತಾನೇ ಮಾಡಬಾರದು. ಈರೀತಿಯಾಗಿ ವೇದಗಳಲ್ಲಿಯೂ ಪಂಚರಾತ್ರಾಗಮದಲ್ಲಿಯೂ ಧರ್ಮಗಳು ಹೇಳಲ್ಪಟ್ಟಿವೆ. ಪಗಡೆ ಆಟವಾಡುವುದು ಪಾಪಕರವಾದದ್ದೇ. ನೀನು ಶಕುನಿಯೊಡನೆ ಅಂತಹ ಪಾಪಕರವಾದ ಧರ್ಮವನ್ನು ಮಾಡಿದಿ. ಹೀಗೆ ದ್ಯೂತದಲ್ಲಿ ಜಯಿಸಲಿಕ್ಕೆ ವಿಧಿಯೇ ಇಲ್ಲ. ಭಯವುಳ್ಳವನು ಕೊಟ್ಟಿದ್ದು ದ್ಯೂತದಲ್ಲಿ ಕೊಟ್ಟದ್ದೂ ಹಾಗೆಯೇ ಒಂದು ಹೆಂಗಸಿಗೆ ಕೊಟ್ಟದ್ದೂ ಇವುಗಳನ್ನೆಲ್ಲಾ ಬಂಧುಗಳು ಅಪಹರಿಸಬಹುದು. ದ್ಯೂತದಲ್ಲಿ ಕೊಟ್ಟದ್ದೂ ಸ್ತ್ರೀಗೆ ಕೊಟ್ಟದ್ದೂ ಸ್ವಲ್ಪವಾಗಿ ಇದ್ದರೆ ಬಂಧುಗಳು ಅಪಹರಿಸಬಾರದು. ಅಲ್ಪಭೋಗಕ್ಕಾಗಿ ಹೆಂಗಸೋ ಅಥವಾ ದ್ಯೂತ ಆಡುವವನೋ ಮೋಸಗೊಳಿಸಿ ಬಹುಧನವನ್ನು ಅಪಹರಿಸಿದ್ದರೆ ಅದನ್ನು ಬಂಧುಗಳು ಅಪಹರಿಸಬಹುದು.

ಅಣ್ಣನಾದ ನೀನು ದ್ಯೂತದಲ್ಲಿ ಕೊಡುವಾಗ ನಿನ್ನನ್ನು ತಡೆಯಲಿಕ್ಕೆ ನಾವು ಅಸಮರ್ಥರಾದರೂ ಈಗ ನಾವು ಅದನ್ನು ಅಪಹರಿಸಬಹುದು. ನೀನೀಗ ಆಜ್ಞೆಯನ್ನು ಕೊಡುವಿಯಾದರೆ ಈಗಲೇ ಎಲ್ಲರನ್ನೂ ಸಂಹರಿಸಿ ನಿನ್ನನ್ನೇ ರಾಜ್ಯದಲ್ಲಿ ಸ್ಥಾಪನೆ ಮಾಡುವೆನು. ನೀನು ಧರ್ಮಿಷ್ಠನು ಅಣ್ಣನು. ಆದುದರಿಂದ ನಿನ್ನ ಆಜ್ಞೆಯಿಲ್ಲದೆ ನಾನು ಹಾಗೆ ಮಾಡಲಿಲ್ಲ. ಪಾಪಿಗಳಾದ ದುರ್ಯೋಧನಾದಿಗಳ ವಿಷಯದಲ್ಲಿ ಸತ್ಯವನ್ನೇ ಮಾಡಬೇಕೆಂದು ಇಚ್ಛೆಯಿದ್ದರೆ ಹಾಗೂ ಮಾಡಬಹುದು. ವೇದದಲ್ಲಿ ಸಾವಿರವರ್ಷ ಸತ್ರಯಾಗವನ್ನು ಮಾಡಬೇಕೆಂದು ಹೇಳಿದೆ. ಮನುಷ್ಯರಿಗೇ ನೂರುವರ್ಷವೇ ಆಯುಷ್ಯವಿರುವ ಕಾರಣ ಅದಕ್ಕೆ ಸಾವಿರಮಾಸದಲ್ಲಿ ಮಾಡಬೇಕೆಂದು ಅರ್ಥಮಾಡಿದರೆ ಮಾತ್ರ ಪ್ರಾಮಾಣ್ಯವು ಕೂಡುವುದು. ಆದುದರಿಂದ ಈಗ ನಾವು ವನಕ್ಕೆ ಬಂದು ಒಂದುವರ್ಷವಾದ ಕಾರಣ ಹನ್ನೆರಡು ವರ್ಷ ವನವಾಸ ಮಾಡಿದಂತೆ ಆಯಿತು. ಇನ್ನು ಒಂದು ತಿಂಗಳು ಅಜ್ಞಾತವಾಸಮಾಡಿ ಆಮೇಲೆ ಶತ್ರುಗಳನ್ನು ಸಂಹರಿಸಿ ರಾಜ್ಯವನ್ನು ಪರಿಪಾಲಿಸುವ ಮಿತ್ರರಿಗೆ ಸಂತಾಪವನ್ನು ಉಂಟುಮಾಡಬೇಡ. ಅಮಿತ್ರರಿಗೆ ಸಂತೋಷವನ್ನು ಉಂಟುಮಾಡಬೇಡ ಶತ್ರುಗಳನ್ನು ಸಂಹರಿಸಿ ಮಿತ್ರರನ್ನು ಸಂತೋಷಪಡಿಸಿ ಪರಮಾತ್ಮನನ್ನು ಭಜಿಸು. ಪರಮಾತ್ಮನ ಸ್ವಾತಂತ್ರ್ಯವು ಪ್ರತ್ಯಕ್ಷವಾಗಿಯೇ ಕಾಣಿಸುತ್ತದೆ. ಕೃಷ್ಣಪರಮಾತ್ಮನು ರುದ್ರಾದಿದೇವತೆಗಳನ್ನೂ ಬ್ರಹ್ಮಾದಿ ವರದಿಂದ ಪರಾಜಯ

ಶೂನ್ಯರಾದ ಜರಾಸಂಧಾದಿಗಳನ್ನೂ ಜಯಿಸಿರು ವನು. ವೇದವ್ಯಾಸದೇವರ ದೇಹದಲ್ಲಿ ಬ್ರಹ್ಮಾದಿದೇವತೆಗಳೂ ರಮಾದೇವಿಯರೂ ಭಗವಂತನ ವಶರಾಗಿರುವುದನ್ನು ಅನೇಕಬಾರಿ ನೋಡಿರುವೆವು. ವೇದವ್ಯಾಸ ದೇವರು ದಿವ್ಯದೃಷ್ಟಿಯನ್ನು ಕೊಟ್ಟು ನಮಗೆ ತನ್ನ ಸ್ವಾತಂತ್ರ್ಯವನ್ನು ತೋರಿಸಿರುವರು. ಆದುದರಿಂದ ಎಲ್ಲಾ ಶತ್ರುಗಳನ್ನೂ ಸಂಹರಿಸುವುದಕ್ಕೂ ರಾಜ್ಯವನ್ನು ಅನುಭವಿಸುವುದಕ್ಕೂ ಹೊರಡು. ಹೀಗೆ ಮಾಡುವುದರಿಂದ ಭಗವಂತನ ಅನುಗ್ರಹದಿಂದ ಬಹಳ ಕೀರ್ತಿಧರ್ಮಗಳನ್ನು ಹೊಂದುವಿ'' ಎಂದು ಹೇಳಿದರು.

ಈರೀತಿಯಾಗಿ ಭೀಮಸೇನದೇವರು ಹೇಳಲು ಧರ್ಮರಾಜನು 'ಹದಿಮೂರು ವರ್ಷವಾದ ನಂತರದಲ್ಲಿ ನೀನು ಹೇಳಿದಂತೆಯೇ ಮಾಡುವೆನು. ಇದು ಸತ್ಯವಾದ ವಿಷಯ. ಸಂದೇಹವೇ ಇಲ್ಲ. ನನ್ನ ಆಣೆಯಿಟ್ಟು ಹೇಳುತ್ತೇನೆ. ಲೋಕಾಪವಾದ ಭಯವುಳ್ಳ ನನ್ನೊಡನೆ ಇನ್ನು ಹೆಚ್ಚಿಗೆ ಹೇಳಬೇಡ. ನೀನು ಹೀಗೆ ಹೇಳಿದರೆ ನನಗೆ ತುಂಬಾ ವ್ಯಥೆಯಾಗುವುದು. ಇನ್ನು ಮುಂದೆ ಹೀಗೆ ಹೇಳಬೇಡ. ಹದಿಮೂರು ವರ್ಷವಾದರ ಮೇಲೆ ನಾನು ಅಂಗೀಕರಿಸದಿದ್ದರೆ ಆಗ ನನ್ನ ಅತಿಕ್ರಮಿಸಿಹೋಗು. ಶತ್ರುಗಳನ್ನು ಸಂಹರಿಸು. ಈಗ ಇಂತಹ ಮಾತುಗಳಿಂದ ನನ್ನನ್ನು ಪೀಡಿಸಬೇಡ. ಭೀಷ್ಮದ್ರೋಣಾದಿಗಳೆಲ್ಲರೂ ಅಸ್ತ್ರವನ್ನು ತಿಳಿದವರು. ಅವರನ್ನು ಯುದ್ಧದಲ್ಲಿ ಹೇಗೆ ಎದುರಿಸಬೇಕು? ಪೂಜ್ಯರಾದ ಅವರೊಡನೆ ಬಾಹುಯುದ್ಧವನ್ನು ಮಾಡುವುದು ಸರಿಯಲ್ಲ. ನೀನು ಅಸ್ತ್ರಗಳನ್ನು ತಿಳಿದವನಾದರೂ ಯಾವಾಗಲೂ ಉಪಯೋಗಿಸುವುದಿಲ್ಲ. ಆದುದರಿಂದ ಅರ್ಜುನನು ಅಸ್ತ್ರವನ್ನು ಚೆನ್ನಾಗಿ ತಿಳಿದಮೇಲೆಯೇ ಯುದ್ಧಕ್ಕೆ ಹೋಗಬೇಕು'' ಎಂದು ಹೇಳಿದನು.

ಆಗ ಭೀಮಸೇನದೇವರು ಇನ್ನು ಹೆಚ್ಚಿಗೆ ಹೇಳಿದರೆ ಧರ್ಮರಾಜನ ಸ್ನೇಹಕ್ಕೆ ಭಂಗವಾಗುವುದೆಂದೂ, ನನ್ನ ಮನಸ್ಸಿನ ಅಭಿಪ್ರಾಯವು ಸಿದ್ಧವಾದುದರಿಂದಲೂ ಸುಮ್ಮನೆ ಆದರು. ಭೀಮಸೇನದೇವರ ಅಭಿಪ್ರಾಯವು ಧರ್ಮರಾಜನು ಆಗಲೇ ಯುದ್ಧಕ್ಕೆ ಹೋಗಬೇಕೆಂದೂ ಇಲ್ಲ. ಹದಿಮೂರನೇ ವರ್ಷವು ಮುಗಿದ ಮೇಲೆ ರಾಜ್ಯಕ್ಕಾಗಿ ಹೋಗುವೆನೆಂದು ಆಗಲೇ ಪ್ರತಿಜ್ಞೆಯನ್ನು ಮಾಡಿಸಬೇಕೆಂದು ಮಾತ್ರ. ಹಾಗೆ ಆಗಲೇ ಪ್ರತಿಜ್ಞೆಯನ್ನು ಮಾಡಿಸದೆ ಇದ್ದರೆ ಹದಿಮೂರನೇ ವರ್ಷವು ಮುಗಿದಮೇಲೆಯೂ ಮೃದುಸ್ವಭಾವವುಳ್ಳವನಾದ ಕಾರಣ ಯುದ್ಧಕ್ಕೆ ಹೋಗಲಾರನೆಂದು ಹಾಗೆ ಮಾಡಿದರು. ಈರೀತಿಯಾಗಿ ಭೀಮಸೇನದೇವರು ತನ್ನ ಕಾರ್ಯವನ್ನು ಮಾಡಿಯಾದ ಮೇಲೆ ಧರ್ಮರಾಜನು ಮುಂದೇನು ಮಾಡಲಿ? ಎಂದು

ಯೋಚಿಸುತ್ತಿರುವಾಗ ವೇದವ್ಯಾಸದೇವರು ಬಂದು ಧರ್ಮರಾಜನಿಗೆ ಒಂದು ಮಂತ್ರವನ್ನು ಉಪದೇಶಿಸಿ ಇದನ್ನು ಅರ್ಜುನನಿಗೆ ಉಪದೇಶಿಸು. ಇದರಿಂದ ಅರ್ಜುನನು ಭೀಷ್ಮದ್ರೋಣಾದಿಗಳನ್ನು ಜಯಿಸುವನು ಎಂದು ಹೇಳಿ ಹೊರಟುಹೋದರು. ಅರ್ಜುನನು ಆ ಮಂತ್ರವನ್ನು ಪಡೆದು ತಪಸ್ಸು ಮಾಡಲಿಕ್ಕೆ ಹೋದನು.



## ಪಾಂಡವರ ತೀರ್ಥಯಾತ್ರೆ [1]

ಅರ್ಜುನನು ಇಂದ್ರಲೋಕಕ್ಕೆ ಹೋಗಿ ಅಸ್ತ್ರವಿದ್ಯೆಯನ್ನು ಇಂದ್ರದೇವರಲ್ಲಿ ಅಭ್ಯಾಸಮಾಡುತ್ತಿದ್ದನು. ಆಗ ಇಂದ್ರದೇವರಿಂದಲೂ ಅರ್ಜುನನಿಂದಲೂ ಹೇಳಲ್ಪಟ್ಟ ಲೋಮಶಮುನಿಗಳು ಬಂದು ಪಾಂಡವರಿಗೆ ತೀರ್ಥಯಾತ್ರೆಗೆ ಸಹಾಯಕ ರಾಗಿದ್ದರು. ಅವರು ಭೂಮಿಗೆ ಪ್ರದಕ್ಷಿಣೆಯಾಗಿ ಕ್ರಮದಿಂದ ಸಮಸ್ತತೀರ್ಥಗಳಲ್ಲಿ ಸ್ನಾನಮಾಡಿ ಅಲ್ಲಿ ಭಗವಂತನನ್ನು ಪೂಜಿಸಿ ಶ್ರೀಭಗವಂತನಿಗೆ ಸಮರ್ಪಣೆ ಮಾಡುವುದಕ್ಕಾಗಿ ಪ್ರಭಾಸಕ್ಕೆ ಹೋದರು. ಅದನ್ನು ತಿಳಿದು ಶ್ರೀಕೃಷ್ಣಪರಮಾತ್ಮನು ಅವರಿಗೆ ಬಹುಮಾನ ಮಾಡುವುದಕ್ಕಾಗಿ ಸಮಸ್ತ ಯಾದವರಿಂದಲೂ ಬಲರಾಮ ದೇವರಿಂದಲೂ ಸಹಿತನಾಗಿ ಬಂದನು. ಶ್ರೀಭಗವಂತನು ಯಾದವರಿಂದ ಸಹಿತನಾಗಿ ಪಾಂಡವರಿಂದ ಸತ್ಕೃತನಾದನು. ಯಾದವರು ಭಗವಂತನ ಆಜ್ಞೆಯಿಂದ ಪಾಂಡವರನ್ನು ಪೂಜಿಸಿದರು. ಆಗ ಬಲರಾಮದೇವರು ತಪಸ್ವಿಗಳ ವೇಷವುಳ್ಳ ಭೀಮಸೇನದೇವರನ್ನು ನೋಡಿ ಅವರಮೇಲಿರುವ ಅತಿಸ್ನೇಹದಿಂದ ದುರ್ಯೋಧನನನ್ನು ನಿಂದಿಸಿದರು. ಆಗ ಸಾತ್ಯಕಿಯು 'ನಾವೆಲ್ಲರೂ ಈಗಲೇ ಕರ್ಣನಿಂದ ಸಹಿತರಾದ ದುರ್ಯೋಧನಾದಿಗಳನ್ನು ಸಂಹರಿಸಿ ಅಭಿಮನ್ಯುವನ್ನು ರಾಜ್ಯದಲ್ಲಿ ಸ್ಥಾಪಿಸುವ. ಹದಿಮೂರು ವರ್ಷದವರೆಗೆ ಅಭಿಮನ್ಯುವು ರಾಜ್ಯದಲ್ಲಿ ಇರಲಿ. ಪಾಂಡವರು ಹದಿಮೂರು ವರ್ಷಗಳನ್ನು ಮುಗಿಸಿಕೊಂಡು ರಾಜ್ಯಕ್ಕೆ ಬರಲಿ. ಆಮೇಲೆ ಧರ್ಮರಾಜನು ಪೂರ್ವದಂತೆಯೇ ರಾಜ್ಯವನ್ನು ಆಳಲಿ' ಎಂದು ಹೇಳಿದನು.

ಅದನ್ನು ಕೇಳಿ ಶ್ರೀಕೃಷ್ಣಪರಮಾತ್ಮನು ಪಾಂಡವರ ಮುಖಗಳನ್ನು ನೋಡಿ

1. ಮ.ತಾ.ನಿ. ಅ-22

'ಸಾತ್ಯಕಿಯೇ! ಪಾಂಡವರು ಇನ್ನೊಬ್ಬರು ಸಂಪಾದಿಸಿಕೊಟ್ಟ ರಾಜ್ಯವನ್ನು ಅಪೇಕ್ಷಿಸುವವರಲ್ಲ. ಅವರು ತನ್ನ ಬಾಹುಬಲದಿಂದ ಶತ್ರುಗಳನ್ನು ಜಯಿಸಿ ತಮ್ಮ ರಾಜ್ಯವನ್ನು ಹೊಂದುವವರು' ಎಂದು ಹೇಳಿದನು. ಆಗ ಪಾಂಡವರು ದೇವರು ಹೇಳಿದ ಮಾತು ಸರಿಯೆಂದರು.

ತರುವಾಯ ಯಾದವರು ಕೃಷ್ಣಪರಮಾತ್ಮನನ್ನು ಮುಂದೆ ಮಾಡಿಕೊಂಡು ಹೋದರು. ಪಾಂಡವರು ಕ್ರಮದಿಂದ ಅಲ್ಲಿಂದ ಹೊರಟು ಹಿಮವತ್ಪರ್ವತಕ್ಕೆ ಬಂದು ಸೇರಿದರು. ಅಲ್ಲಿ ದ್ರೌಪದೀದೇವಿಯರು ಲೋಕರೀತಿ ಯಿಂದ ನಡೆಯಲಿಕ್ಕೆ ಶ್ರಮಪಡಲು ಪಾಂಡವರು ಘಟೋತ್ಕಚನನ್ನು ಸ್ಮರಿಸಿದರು. ಘಟೋತ್ಕಚನು ತನ್ನ ಭೃತ್ಯರಾದ ರಾಕ್ಷಸರಿಂದ ಸಹಿತನಾಗಿ ಬಂದನು. ಘಟೋತ್ಕಚನು ದ್ರೌಪದೀದೇವಿ ಯರನ್ನು ಹೊತ್ತುಕೊಂಡು ಹೋದನು. ಅವನ ಭೃತ್ಯರು ಪಾಂಡವರನ್ನು ಹೊತ್ತುಕೊಂಡು ಹೋದರು. ಬದರಿಕಾಶ್ರಮಕ್ಕೆ ಹೋಗಿ ನಾರಾಯಣಪೂಜೆಯನ್ನು ಮಾಡಿ ಉತ್ತರದಿಕ್ಕಿಗೆ ಪ್ರಯಾಣಮಾಡಿದರು. ಅವರು ಕ್ರಮದಿಂದ ಹಿಮವತ್ಪರ್ವತ ವನ್ನು ದಾಟಿ, ಸುವರ್ಣಕೂಟ ಪರ್ವತವನ್ನು, ನಿಷಧಪರ್ವತವನ್ನು ದಾಟಿ, ಮೇರುಪರ್ವತದ ಪೂರ್ವದಿಕ್ಕಿನಲ್ಲಿರುವ ಗಂಧಮಾದ ಪರ್ವತದಲ್ಲಿ ಉತ್ತಮವಾದ ಬದರಿಕಾಶ್ರಮವನ್ನು ಹೊಂದಿದರು. ಅಲ್ಲಿ ಮುನೀಂದ್ರರಿಂದ ಪೂಜಿಸಲ್ಪಡುತ್ತಾ ನಾರಾಯಣನನ್ನು ಸರ್ವದಾ ಪೂಜಿಸುತ್ತಾ ತತ್ವವನ್ನು ಹೇಳುತ್ತಾ ತಪಸ್ಸನ್ನು ಮಾಡುತ್ತಿದ್ದರು.



## ಸೌಗಂಧಿಕ ಪುಷ್ಪವನ್ನು ತಂದದ್ದು [1]

ಪಾಂಡವರು ಬದರಿಕಾಶ್ರಮದಿಂದ ಸುಖದಿಂದ ಇರುತ್ತಿರಲು ಒಂದುದಿನದಲ್ಲಿ ಏಕಾಂತದಲ್ಲಿ ದ್ರೌಪದೀದೇವಿಯಿಂದ ಸಹಿತರಾಗಿ ಭೀಮಸೇನದೇವರು ಕೂತಿರಲು ಗರುಡದೇವರು ಒಂದು ಮಡುವಿನಿಂದ ಸರ್ಪವನ್ನು ಎತ್ತಿಕೊಂಡು ಹೋದರು. ಗರುಡದೇವರ ರೆಕ್ಕೆಯ ಗಾಳಿಯಿಂದ ಪರ್ವತವೇ ನಡುಗಿತು. ಆಗ ಭೀಮಸೇನ ದೇವರ ದ್ರೌಪದೀದೇವಿಯರ ಸಮೀಪದಲ್ಲಿ ಉದಯಿಸಿಕೊಂಡು ಬರುವ ಸೂರ್ಯನಂತೆ ಇರುವ ಬಂಗಾರದ ಕಮಲವು ಬಂದು ಬಿದ್ದಿತು. ಅತಿ

1. ಮ.ತಾ.ನಿ. ಅ-22

ಸುವಾಸನೆಯುಳ್ಳ ಸುಂದರವಾದ ಬಂಗಾರದ ಕಮಲಪುಷ್ಪವನ್ನು ನೋಡಿ ಕುತೂಹಲದಿಂದ ಭೀಮಸೇನದೇವರೊಡನೆ ದ್ರೌಪದೀದೇವಿಯರು ಹಾಗೆಯೇ ಇರುವ ಬಹುಪುಷ್ಪಗಳನ್ನು ತಂದುಕೊಡಬೇಕೆಂದು ಕೇಳಿಕೊಂಡರು. ಅವರು ಭೀಮಸೇನದೇವರ ಬಲವು ದೇವದೈತ್ಯರಿಂದ ಸಹಿಸಲಿಕ್ಕೆ ಅಶಕ್ಯವಾದದ್ದು ಎಂದು ತಿಳಿದವರಾದ ಕಾರಣ ಹಾಗೆ ಹೇಳಿದರು. ಹಾಗೆ ದ್ರೌಪದೀದೇವಿಯರಿಂದ ಪ್ರಾರ್ಥಿತರಾದ ಭೀಮಸೇನದೇವರು ವೇಗದಿಂದ ಆ ಗಂಧಮಾದಪರ್ವತವನ್ನು ಹತ್ತಿಹೋದರು. ಆಗ ದೇವತೆಗಳೂ, ಸಿದ್ಧರೂ, ಅವರನ್ನು ಹೊಗಳುತ್ತಿದ್ದರು. ದಾರಿಯಲ್ಲಿ ಸಿಕ್ಕಿದ ಸಿಂಹಹುಲಿಗಳ ರೂಪವುಳ್ಳ ದೈತ್ಯರನ್ನು ಮರ್ದನ ಮಾಡುತ್ತಾ ಹೋದರು.

ದಾರಿಯಲ್ಲಿ ಭೀಮಸೇನದೇವರು ಹನುಮಂತದೇವರನ್ನು ನೋಡಿದರು. ಹನುಮಂತದೇವರು ಭೀಮಸೇನದೇವರನ್ನು ಭಯಪಡಿಸಿದಂತೆ ಭಾರತದಲ್ಲಿ ಇದೆ. ಅದರ ಅಭಿಪ್ರಾಯವೇನೆಂದರೆ, ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ತನ್ನ ಅವತಾರರೂಪದೊಡನೆಯೂ, ಇನ್ನೊಬ್ಬರಲ್ಲಿ ನಡೆಯುವಂತೆ ನಡೆಯಬೇಕೆಂದೂ, ದೇವತಾಸ್ವರೂಪದಲ್ಲಿರುವ ಶಕ್ತಿಯನ್ನು ಸ್ವೀಕರಿಸಬಾರದೆಂದೂ, ಮನುಷ್ಯಸ್ವಭಾವ ದಿಂದಲೇ ಸರ್ವದಾ ಇರಬೇಕೆಂದೂ, ಭಗವಂತನಿಂದ ನಿರ್ಮಿತ ವಾದ ಧರ್ಮವು. ಆದುದರಿಂದಲೇ ಭೀಮಸೇನದೇವರು ಹನುಮಂತದೇವ ರೊಡನೆ ಇನ್ನೊಬ್ಬರಲ್ಲಿ ನಡೆದುಕೊಳ್ಳುವಂತೆ ನಡೆದುಕೊಂಡರು. ಅವರಿಗಿಂತ ಕಡಿಮೆಶಕ್ತಿಯುಳ್ಳವರಂತೆ ತೋರಿಸಿದರು. ಅವರು ಅಣ್ಣನೆಂದೂ ತಾನು ತಮ್ಮನೆಂದೂ ಕೊನೆಗೆ ಭಾವವನ್ನು ತೋರಿಸಿದರು. ವಸ್ತುತಃ ಭೀಮಸೇನದೇವರೂ ಹನುಮಂತದೇವರೂ ಒಬ್ಬರೇ. ಮತ್ತು ದೇವತೆಗಳು ಮನುಷ್ಯರಾಗಿ ಅವತರಿಸಿದಾಗ ಅವರ ಗುಣಗಳೆಲ್ಲವೂ ಆವೃತವಾಗುವುವು. ಅಂದರೆ ಅವುಗಳೆಲ್ಲ ತಿಳಿಯುವುದಿಲ್ಲ. ಕೆಲವು ಭಾಗಗಳು ತಿಳಿಯುತ್ತದೆ. ಅಂದರೆ ವ್ಯಕ್ತವಾಗುತ್ತವೆ. ಕಲಿಯುಗದಲ್ಲಿ ಎಷ್ಟು ಗುಣಗಳು ಮರೆಯಾಗುವವೋ ಅಷ್ಟು ಗುಣಗಳು ದ್ವಾಪರಯುಗದಲ್ಲಿ ಆವೃತವಾಗಲಾರವು. ತ್ರೇತಾಯುಗದಲ್ಲಿ ಅಷ್ಟು ಅಂದರೆ ದ್ವಾಪರಯುಗದಲ್ಲಿ ಆವೃತವಾದಷ್ಟು ಆಗಲಾರದು. ಕೃತಯುಗದಲ್ಲಿ ತ್ರೇತಾಯುಗದಷ್ಟು ಮರೆಯಾಗಲಾರವು. ಮೂಲರೂಪವು ಉತ್ತಮವಾಗಿದ್ದರೆ ಅವತಾರರೂಪದಲ್ಲಿ ಸ್ವಲ್ಪ ಮರೆಯಾಗುವುದು. ಮೂಲರೂಪವು ಅಧಮವಾಗಿದ್ದರೆ ಅವತಾರದಲ್ಲಿ ಹೆಚ್ಚಿಗೆ ಭಾಗವು ಮರೆಯಾಗು ವುದು. ವಾಯುದೇವರು ಶೇಷದೇವರು ಇತ್ಯಾದಿ ಉತ್ತಮ ದೇವತೆಗಳಿಗೆ

ಮೂಲರೂಪದ ಶಕ್ತಿಯನ್ನು ಸ್ವೀಕರಿಸಲಿಕ್ಕೆ ಆಗುವುದು. ವಾಯುದೇವರಿಗೆ ಇಚ್ಛಾಮಾಡುವುದರಿಂದಲೇ ಮೂಲರೂಪದ ಸಾಮರ್ಥ್ಯವು ಬರುವುದು. ಶೇಷಾದಿ ದೇವತೆಗಳಿಗೆ ಮೂಲರೂಪಸ್ಮರಣಾದಿ ಕಾರಣಗಳಿಂದ ಆ ಸಾಮರ್ಥ್ಯವು ಬರುವುದು.

ಆದುದರಿಂದಲೇ ಲಕ್ಷ್ಮಣನು ರಾವಣನಿಂದ ಮೂರ್ಛಿತನಾದಾಗ ರಾವಣನು ಬಂದು ಸೆಳೆಯಲು ಆಗ ಲಕ್ಷ್ಮಣನು ಸ್ವಲ್ಪ ಜ್ಞಾನವುಳ್ಳವನಾಗಿ ತನ್ನ ಮೂಲರೂಪಿಯಾದ ಶೇಷದೇವರನ್ನು ಸ್ಮರಣೆ ಮಾಡಿದ ಕಾರಣ ಮೂಲರೂಪದ ಸಾಮರ್ಥ್ಯವೇ ಬಂದು ಅವನನ್ನು ರಾವಣನಿಂದ ಸೆಳೆಯಲಿಕ್ಕೆ ಆಗಲಿಲ್ಲ. ಭಗವಂತನಿಗೆ ಮಾತ್ರ ಯಾವಾಗಲೂ ಯಾವರೂಪದಲ್ಲಿಯೂ ಎಲ್ಲಾ ಗುಣಗಳೂ ಒಂದೇ ಪ್ರಕಾರವಾಗಿರುವುವು. ಆದುದರಿಂದ ಭೀಮಸೇನದೇವರು ತಾನು ದ್ವಾಪರಯುಗದಲ್ಲಿ ಹುಟ್ಟಿದುದರಿಂದಲೂ, ಹನುಮಂತದೇವರು ತ್ರೇತಾಯುಗದಲ್ಲಿ ಹುಟ್ಟಿದ ಕಾರಣವೂ ಅವರು ಅಣ್ಣನೆಂದೂ ತಾನು ತಮ್ಮನೆಂದೂ, ತಾನು ಅಶಕ್ತನಂತೆಯೂ ತೋರಿಸಿದರು. ತಿಳಿಯದವರಂತೆ ಕಥೆಗಳನ್ನು ಕೇಳಿದರು. ಅವರ ಬಾಲವನ್ನು ಎತ್ತಲಿಕ್ಕೆ ಅಸಮರ್ಥರಂತೆಯೂ ತೋರಿಸಿದರು. ವಸ್ತುತಃ ಹನುಮಂತದೇವರೂ ಭೀಮಸೇನದೇವರೂ ಒಂದೇ ವಿಧ ಸಾಮರ್ಥ್ಯವುಳ್ಳವರು. ಆದುದರಿಂದ ಭೀಮಸೇನದೇವರು ಭಗವಂತನಿಂದ ವಿಹಿತವಾದ ದೇವತೆಗಳು ತನ್ನ ಅವತಾರರೂಪದಲ್ಲಿ ಇನ್ನೊಬ್ಬರಲ್ಲಿ ನಡೆದುಕೊಳ್ಳುವಂತೆಯೇ ಇರಬೇಕೆಂಬ ಧರ್ಮವನ್ನು ಪರಿಪಾಲಿಸುವುದಕ್ಕಾಗಿಯೂ, ಅಸುರರ ಮೋಹಕ್ಕೂ ತಾನು ಶಕ್ತರಾದರೂ ಅಶಕ್ತರಂತೆ ತೋರಿಸಿದರು.

ಆಮೇಲೆ ಭೀಮಸೇನದೇವರು ಹನುಮಂತದೇವರ ದೊಡ್ಡ ರೂಪವನ್ನು ನೋಡಿ ಹನುಮಂತದೇವರ ಮುಖದಿಂದ ರಾಮದೇವರ ಮಹಿಮೆಯನ್ನೂ, ನಾಲ್ಕು ಯುಗಗಳ ಧರ್ಮವನ್ನೂ ಕೇಳಿದರು. ಹನುಮಂತದೇವರು ತಾನು ಅರ್ಜುನನ ರಥದ ಧ್ವಜದಲ್ಲಿ ಇದ್ದುಕೊಂಡು ಗರ್ಜನೆಯಿಂದಲೇ ಅರ್ಜುನನ ಶತ್ರುಗಳಿಗೆ ಪರಾಜಯವನ್ನುಂಟು ಮಾಡುವೆನೆಂದು ವರವನ್ನು ಕೊಟ್ಟರು. ಭೀಮಸೇನದೇವರು ಹನುಮಂತದೇವರಿಗೆ ನಮಸ್ಕರಿಸಿ ಸೌಗಂಧಿಕಪುಷ್ಪವಿರುವಲ್ಲಿಗೆ ಹೋದರು.

ಮನುಷ್ಯರಿಂದ ಹೋಗಲಿಕ್ಕೆ ಆಗದ ಸರೋವರಕ್ಕೆ ಹೋಗಿ ಅಲ್ಲಿ ಅದ್ಭುತವಾದ ಆಕಾರವುಳ್ಳ ದಿವ್ಯವಾಸನೆಯುಳ್ಳ ಬಂಗಾರದ ಕಮಲಗಳನ್ನು ನೋಡಿ ಹತ್ತಿರ ಹೋದರು. ಆಗ ರಾಕ್ಷಸರೆಲ್ಲರೂ ಅವರನ್ನು ತಡೆದರು. ರುದ್ರದೇವರ ವರದಿಂದ

ಪರಾಜಯಶೂನ್ಯರಾದ ನೂರುಸಾವಿರ ರಾಕ್ಷಸರು ಕೋಪವುಳ್ಳವರಾಗಿ ಭೀಮಸೇನದೇವರ ಮೇಲೆ ಭಯಂಕರವಾದ ಶಸ್ತ್ರಾಸ್ತ್ರಗಳ ಮಳೆಯನ್ನು ಸುರಿಸಿದರು. ಭೀಮಸೇನದೇವರು ಅವರನ್ನು ವಾಗ್ಯುದ್ಧದಲ್ಲಿ ವೈಷ್ಣವಶಾಸ್ತ್ರಗಳಿಂದ ಜಯಿಸಿದರು. 'ದೇವರು ಇಲ್ಲ, ಜಗತ್ತು ಸುಳ್ಳು' ಇತ್ಯಾದಿ ಹೇಳುವ ಅವರನ್ನು 'ಪರಮಾತ್ಮನು ಎಲ್ಲರಿಂದಲೂ ಭಿನ್ನನು, ಗುಣಪೂರ್ಣನು' ಇತ್ಯಾದಿರೀತಿಯಾಗಿ ಸಮರ್ಥಿಸುತ್ತಾ ಜಯಿಸಿದರು. ಆಮೇಲೆ ಅವರು ಬಿಡುವ ಶಸ್ತ್ರಾಸ್ತ್ರಗಳ ಮಳೆಯನ್ನು ತಡೆಯುತ್ತಾ ಆಲಕ್ಷ ಜನರನ್ನು ಬಡೆದುಹಾಕಿದರು. ಅವರೆಲ್ಲರೂ ಭೀಮಸೇನದೇವರ ವಿದ್ಯಾಬಲವನ್ನು ಬಾಹುಬಲವನ್ನು ತಡೆಯಲಾರದೆ ಓಡಿದರು. ಭೀಮಸೇನದೇವರು ಎಲ್ಲರನ್ನು ಗದೆಯಿಂದ ಬಡಿದು ಓಡಿಸಿ ಸರೋವರನ್ನು ಪ್ರವೇಶಿಸಿ ಅಮೃತಸಮಾನವಾದ ನೀರನ್ನು ಕುಡಿದು ದಿವ್ಯಗಳಾದ ಕಮಲಪುಷ್ಪಗಳನ್ನು ತೆಗೆದರು.

ಇಲ್ಲಿ ಧರ್ಮರಾಜನು ಕಲಹವನ್ನು ಸೂಚಿಸುವ ನಿಮಿತ್ತಗಳನ್ನು ನೋಡಿ ದೀನ ನಾಗಿ ದ್ರೌಪದೀದೇವಿಯರೊಡನೆ ಭೀಮನೆಲ್ಲಿ? ಎಂದು ಕೇಳಿದನು. ಸೌಗಂಧಿಕ ಪುಷ್ಪವನ್ನು ತರಲಿಕ್ಕೆ ಹೋಗಿರುವರೆಂದು ಅವರು ಹೇಳಿದರು. ಕೂಡಲೇ ಧರ್ಮರಾಜನು ತಮ್ಮಂದಿರಿಂದಲೂ ದ್ರೌಪದೀದೇವಿಯರಿಂದಲೂ ಕೂಡಿಕೊಂಡು ರಾಕ್ಷಸರ ಮೇಲೆ ಕೂತುಕೊಂಡು ಭೀಮಸೇನದೇವರಿದ್ದಲ್ಲಿಗೆ ಹೋದನು. ಭೀಮಸೇನದೇವರನ್ನು ನೋಡಿ ಧರ್ಮರಾಜನು ರುದ್ರದೇವರ ಕೋಪದ ಭಯದಿಂದ ಹಾಗೆ ಮಾಡಬೇಡ ಎಂದನು. ದೇವತೆಗಳಿಂದ ಮರಣದ ಭಯದಿಂದ ರಾಕ್ಷಸರು ಕುಬೇರನ ಆಜ್ಞೆಯಿಂದ ಕುಬೇರನ ಸರೋವರವನ್ನು ಕಾಯುತ್ತಿದ್ದರು. ಅವರಿಗೆ ರುದ್ರದೇವರು ಆಶ್ರಯರು. ಕುಬೇರನು ಭೀಮಸೇನದೇವರ ಮಹಿಮೆಯನ್ನು ತಿಳಿದವನಾದ ಕಾರಣ ಭೀಮಸೇನದೇವರು ಅಸುರರನ್ನು ಜಯಿಸಿದ್ದನ್ನು ತಿಳಿದೂ ಕೋಪಿಸಿಕೊಳ್ಳಲಿಲ್ಲ.



# ಜಟಾಸುರನ ಸಂಹಾರವು [1]

ಪಾಂಡವರು ವನವಾಸ ಕಾಲದಲ್ಲಿ ನರನಾರಾಯಣಾಶ್ರಮದಲ್ಲಿ ವಾಸಮಾಡಿಕೊಂಡು ಇರುವಾಗ ಪಾಪಿಯಾದ ಜಟಾಸುರನೆಂಬ ಅಸುರನು ಬ್ರಾಹ್ಮಣವೇಷವನ್ನು ಧರಿಸಿಕೊಂಡು ಬಂದು 'ನಾವು ಮಂತ್ರಗಳಲ್ಲಿ ಸಮರ್ಥನಾದ ಸರ್ವಾಸ್ತ್ರಗಳನ್ನು ತಿಳಿದವನಾದ ಬ್ರಾಹ್ಮಣನು' ಎಂದು ಹೇಳಿಕೊಂಡು ವಾಸಮಾಡುತ್ತಿದ್ದನು. ಅವನು ಪಾಂಡವರ ಆಭರಣಗಳನ್ನು ಆಯುಧಗಳನ್ನು ದ್ರೌಪದೀದೇವಿಯರನ್ನು ಅಪಹರಿಸಬೇಕೆಂದು ಅವಕಾಶವನ್ನು ನೋಡುತ್ತಿದ್ದನು. ಧರ್ಮರಾಜನು ಅವನನ್ನು ಬ್ರಾಹ್ಮಣನೆಂದೇ ತಿಳಿದುಕೊಂಡು ಪೋಷಿಸುತ್ತಿದ್ದನು. ಭೀಮಸೇನದೇವರು ಮಾತ್ರ ಸರ್ವಜ್ಞರಾದ ಕಾರಣ ಅವನು ಅಸುರನೆಂದು ತಿಳಿದವರಾಗಿದ್ದರು. ಬ್ರಾಹ್ಮಣ ವೇಷದಿಂದ ಇರುವ ಅವನನ್ನು ಕೊಲ್ಲಬಾರದೆಂದೇ ಸುಮ್ಮನೇ ಇದ್ದರು. ಆ ಸಮಯದಲ್ಲಿ ಅರ್ಜುನನು ಇಂದ್ರದೇವರಲ್ಲಿ ಅಸ್ತ್ರವಿದ್ಯೆಯನ್ನು ಅಭ್ಯಾಸಮಾಡುತ್ತಾ ಸ್ವರ್ಗದಲ್ಲಿ ಇದ್ದನು.

ಒಂದು ದಿನದಲ್ಲಿ ಭೀಮಸೇನದೇವರು ಮೃಗಬೇಟೆಗೆ ಹೋಗಿದ್ದರು. ಆ ಸಮಯದಲ್ಲಿ ಈ ಪಾಪಿಯು ಭಯಂಕರವಾದ ಆಕಾರವನ್ನು ಧರಿಸುವವನಾಗಿ ಪಾಂಡವರ ಸರ್ವಶಸ್ತ್ರಗಳನ್ನು ಹಿಡಿದುಕೊಂಡು ದ್ರೌಪದೀದೇವಿಯರನ್ನು ಹಿಡಿದುಕೊಂಡು ಮೂರು ಜನ ಪಾಂಡವರನ್ನು ಹಿಡಿದುಕೊಂಡು ಹೊರಟನು. ಆಗ ಸಹದೇವನು ಮಾತ್ರ ಅವನಿಂದ ತಪ್ಪಿಸಿಕೊಂಡು ಹೋಗಿ ಗಟ್ಟಿಯಾಗಿ ಭೀಮಸೇನದೇವರನ್ನು ಕೂಗಿಕೊಂಡನು. ಧರ್ಮರಾಜನು ತನ್ನನ್ನು ಅಸುರನು ಹಿಡಿದುಕೊಂಡುಹೋಗುವುದನ್ನು ನೋಡಿ 'ಮೂರ್ಖನೇ! ನಿನ್ನ ಧರ್ಮವು ನಷ್ಟವಾಗುವುದು. ಅದು ನಿನಗೆ ತಿಳಿಯುವುದಿಲ್ಲವಲ್ಲಾ! ರಾಕ್ಷಸರೂ ವಿಶೇಷವಾಗಿ ಧರ್ಮವನ್ನು ನೋಡುವರು. ದೇವತೆಗಳು ಋಷಿಗಳು ಮೊದಲಾದವರೂ ಮನುಷ್ಯರನ್ನು ಉಪಜೀವಿಸುವರು. ನೀನೂ ನಮ್ಮನ್ನು ಆಶ್ರಯಿಸಿಕೊಂಡು ಜೀವಿಸುತ್ತಾ ಇದ್ದಿ. ನಾವು ರಾಜ್ಯವನ್ನು ಆಳುವ ಅರಸರು. ರಾಕ್ಷಸರಾದರೂ ರಾಜನನ್ನು ಅವಮಾನ ಮಾಡಬಾರದು. ನಿನಗೆ ನಾವು ಸ್ವಲ್ಪವೂ ಅಪರಾಧವನ್ನು ಮಾಡಲಿಲ್ಲ. ನೀನು ನಮ್ಮ ಅನ್ನವನ್ನು ಊಟಮಾಡುತ್ತಾ ಇದ್ದಿ. ಯಾರ ಅನ್ನವನ್ನು ಮಾಡುವರೋ ಅವರಿಗೆ ದ್ರೋಹವನ್ನು ಮಾಡಬಾರದು. ಹೀಗೆ ನಮ್ಮನ್ನೇ ಈಗ ಹೇಗೆ ಅಪಹರಿಸುವಿ? ನೀನು ದುಷ್ಟಬುದ್ಧಿಯುಳ್ಳವನಾಗಿ ಸರ್ವಧರ್ಮ ಭ್ರಷ್ಟನಾಗಿದ್ದರೂ

---

1. ಭಾ.ವ.ಪ. ಅ-157. ಮ.ತಾ.ನಿ. ಅ-22

ನಮ್ಮ ಶಸ್ತ್ರಗಳನ್ನು ಕೊಟ್ಟು ಯುದ್ಧಮಾಡಿ ನಮ್ಮನ್ನು ಜಯಿಸಿ ಆಮೇಲೆ ದ್ರೌಪದಿಯನ್ನು ಅಪಹರಿಸು. ನೀನು ಈಗ ಮಾಡುವ ಕಾರ್ಯವು ವಿಷವನ್ನು ಕುಡಿಯುವಂತೆ ಇರುವುದು' ಇತ್ಯಾದಿರೀತಿಯಾಗಿ ಹೇಳುತ್ತಿದ್ದನು. ಅಷ್ಟರಲ್ಲಿ ರಾಕ್ಷಸನಿಗೆ ಧರ್ಮರಾಜನು ಮಹಾಭಾರವಾದನು. ಆದರಿಂದ ಅವನು ಪೂರ್ವ ದಷ್ಟು ವೇಗದಿಂದ ಹೋಗಲಿಕ್ಕೆ ಆಗಲಿಲ್ಲ. ಆಗ ಧರ್ಮರಾಜನು ನಕುಲನೊಡನೆಯೂ ದ್ರೌಪದೀದೇವಿಯೊಡನೆಯೂ 'ನೀವು ಈ ಮೂಢನಾದ ರಾಕ್ಷಸನಿಂದ ಭಯಪಡುವುದು ಬೇಡ. ನಾನು ಇವನ ನಡೆಯನ್ನು ಕಮ್ಮಿಮಾಡಿರುವೆನು. ಇಲ್ಲಿಯೇ ಎಲ್ಲಿಯಾದರೂ ಸಮೀಪದಲ್ಲಿಯೇ ಭೀಮಸೇನನು ಇರಬೇಕು. ಅವನು ಬಂದುಬಿಟ್ಟರೆ ಈ ರಾಕ್ಷಸನು ಬದುಕಲಿಕ್ಕೆ ಹೋಗುವುದಿಲ್ಲ' ಎಂದು ಹೇಳಿದನು. ಸಹದೇವನು ಆ ರಾಕ್ಷಸನನ್ನು ನೋಡಿ ಧರ್ಮರಾಜನೊಡನೆ 'ಕ್ಷತ್ರಿಯನಿಗೆ ಇದಕ್ಕಿಂತ ಹೆಚ್ಚಿನ ಉತ್ತಮ ಕಾರ್ಯವು ಏನಿದೆ? ಏನೆಂದರೆ ಯುದ್ಧದಲ್ಲಿ ಎದುರಾಗಿ ನಿಂತು ಪ್ರಾಣವನ್ನು ಬಿಡಬೇಕು. ಅಥವಾ ತಾನು ಜಯಿಸಬೇಕು. ಒಂದೋ ಇವನು ನಮ್ಮನ್ನು ಕೊಲ್ಲಲಿ. ಅಥವಾ ನಾವು ಯುದ್ಧಮಾಡಿ ಇವನನ್ನು ಸಂಹರಿಸುವ. ಕ್ಷತ್ರಿಯ ಧರ್ಮವನ್ನು ತೋರಿಸುವ ಕಾಲವು ಬಂದಿರುವುದು. ಒಂದೋ ಜಯಿಸುವ. ಅಥವಾ ಮೃತರಾಗಿ ಸದ್ಗತಿಯನ್ನು ಹೊಂದುವ. ರಾಕ್ಷಸನು ಬದುಕಿದ್ದು ಈ ದಿನ ಸೂರ್ಯನು ಮುಳುಗುವುದಾದರೆ ನಾನು ನನ್ನನ್ನು ಕ್ಷತ್ರಿಯನಾಗಿದ್ದೇನೆಂದು ಹೇಳಿಕೊಳ್ಳಲಾರೆನು' ಎಂದು ಹೇಳುವವನಾಗಿ ರಾಕ್ಷಸನೊಡನೆ 'ಎಲಾ ರಾಕ್ಷಸನೇ! ನಿಲ್ಲು, ನಿಲ್ಲು, ನಾನು ಪಾಂಡವನಾದ ಸಹದೇವನು. ನನ್ನನ್ನು ಕೊಂದು ಈ ದ್ರೌಪದೀದೇವಿಯನ್ನು ಅಪಹರಿಸು. ಅಥವಾ ನೀನೇ ಸತ್ತು ಇಲ್ಲಿ ಮಲಗುವಿ' ಎಂದು ಹೇಳಿದನು.

ಸಹದೇವನು ಈ ಪ್ರಕಾರವಾಗಿ ಹೇಳುತ್ತಿರುವಾಗ ದೈವೇಚ್ಛೆಯಿಂದ ವಜ್ರಧಾರಿಯಾದ ಇಂದ್ರದೇವರಂತೆ ಭೀಮಸೇನದೇವರೇ ಅಲ್ಲಿ ಕಾಣಿಸಿಕೊಂಡರು. ಅವರು ಧರ್ಮರಾಜನನ್ನು ನಕುಲನನ್ನೂ ದ್ರೌಪದೀದೇವಿಯರನ್ನು ಹಿಡಿದುಕೊಂಡು ಇದ್ದ ದೈತ್ಯನನ್ನು ನೆಲದಲ್ಲಿ ನಿಂತುಕೊಂಡು ಅಸುರನನ್ನು ಆಕ್ಷೇಪಿಸುತ್ತಾ ಇದ್ದ ಸಹದೇವನನ್ನು ನೋಡಿದರು. ದಾರಿಯು ತಪ್ಪಿಹೋಗಿ ಅಲ್ಲಿಯೇ ಸುತ್ತುತ್ತಾ ಇದ್ದ ಆ ಅಸುರನನ್ನು ನೋಡಿದರು. ಇದೆಲ್ಲವನ್ನೂ ನೋಡಿ ಭೀಮಸೇನದೇವರು ಬಹಳ ಕೋಪವುಳ್ಳವರಾದರು. ಅಸುರನೊಡನೆ 'ನೀನು ಶಸ್ತ್ರಗಳನ್ನು ಪರೀಕ್ಷಿಸುತ್ತಿರುವಾಗಲೇ ನಿನ್ನ ಕಪಟವು ನನಗೆ ತಿಳಿದಿತ್ತು. ಆದರೆ ನಾನು ಅದರಲ್ಲಿ ಆಸಕ್ತಿಯನ್ನು ಇಡಲಿಲ್ಲ. ಆದುದರಿಂದ ನೀನು ಆಗಲೇ ನನ್ನಿಂದ ಹತನಾಗಲಿಲ್ಲ. ಮಾತ್ರವಲ್ಲದೆ ನೀನು ಬ್ರಾಹ್ಮಣವೇಷವುಳ್ಳವನಾಗಿದ್ದಿ ನಮಗೊಂದು ಅಪ್ರಿಯವಾದ ಮಾತನ್ನು

ಆಡಲಿಲ್ಲ. ಪ್ರಿಯವಾಗಿ ಇದ್ದ ಅಪ್ರಿಯವನ್ನು ಮಾಡದೆ ಇದ್ದ ಬ್ರಾಹ್ಮಣವೇಷವುಳ್ಳ ನಿರಪರಾಧಿಯಾದ ನಿನ್ನನ್ನು ಕೊಲ್ಲಲಿಲ್ಲ. ಕಾಲವು ಬರದೆ ನಿನ್ನನ್ನು ಸಂಹರಿಸುವುದು ಸರಿಯಲ್ಲವೆಂದು ಬಿಟ್ಟಿದ್ದೆನು. ಈಗ ನಿನಗೆ ಸಾಯುವ ಕಾಲವು ಬಂದ ಕಾರಣವೇ ದ್ರೌಪದಿಯನ್ನು ಅಪಹರಿಸಿಕೊಂಡು ಹೋಗಲಿಕ್ಕೆ ಬುದ್ಧಿಯು ಬಂದಿತು. ನೀನು ಯಾವ ದೇಶಕ್ಕೆ ಹೋಗಬೇಕೆಂದು ಮನಸ್ಸಿನಿಂದ ಯೋಚಿಸಿರುವಿಯೋ ಆ ದೇಶಕ್ಕೆ ಹೋಗಲಾರೆ. ಬಕಾಸುರನೂ ಹಿಡಿಂಬಾಸುರನೂ ಹೋದ ಗತಿಗೆ ಹೋಗುವಿ' ಎಂದು ಹೇಳಿದರು. ಈರೀತಿಯಾಗಿ ಭೀಮಸೇನದೇವರು ಹೇಳಲು ಜಟಾಸುರನು ದ್ರೌಪದೀದೇವಿಯೇ ಮೊದಲಾದವರನ್ನು ಭಯದಿಂದ ಬಿಟ್ಟುಬಿಡುವವನಾದನು. ತಾನು ಯುದ್ಧಕ್ಕೆ ಸಿದ್ಧನಾದನು. ಭೀಮಸೇನದೇವರೊಡನೆ ರೋಷದಿಂದ 'ಮೂಢನೇ! ನನಗೆ ದಾರಿ ತಪ್ಪಿಹೋಗಲಿಲ್ಲ. ನಿನಗಾಗಿಯೇ ನಾನು ಸಾವಕಾಶ ಮಾಡುತ್ತಿದ್ದೇನೆ. ನೀನು ಎಷ್ಟೋ ರಾಕ್ಷಸರನ್ನು ಕೊಂದಿರುವಿಯೆಂದು ಕೇಳಿದ್ದೇನೆ. ಅವರಿಗೆಲ್ಲಾ ನಿನ್ನ ರಕ್ತದಿಂದ ತರ್ಪಣವನ್ನು ಕೊಡುವೆನು' ಎಂದು ಹೇಳಿ ಭೀಮಸೇನದೇವರೊಡನೆ ಯುದ್ಧಕ್ಕೆ ಹೋದನು.

ಇಬ್ಬರಿಗೂ ಭಯಂಕರವಾದ ಬಾಹುಯುದ್ಧವು ನಡೆಯಿತು. ಆಗ ನಕುಲಸಹದೇವರೂ ಕೋಪದಿಂದ ಯುದ್ಧಕ್ಕೆ ಬಂದರು. ಆಗ ಭೀಮಸೇನದೇವರು ನಗುತ್ತಾ 'ಈ ರಾಕ್ಷಸನಿಗೆ ನಾನೇ ಸಾಕು. ನೀವು ನೋಡುತ್ತಾ ಇರಿ' ಎಂದು ಹೇಳಿದರು. ಇಬ್ಬರೂ ಭಯಂಕರ ಯುದ್ಧ ಮಾಡಿಕೊಂಡರು. ಮರಗಳೆಲ್ಲವನ್ನೂ ಮುರಿದು ಹಾಕಿದರು. ಕಲ್ಲುಗಳಿಂದ ಯುದ್ಧ ಮಾಡಿಕೊಂಡರು. ಭುಜಗಳಿಂದ ಸೆಳೆದು ಕೊಂಡರು. ಮುಷ್ಟಿಗಳಿಂದ ಬಡಿದು ಕೊಂಡರು. ತರುವಾಯ ಕಟಕಟ ಎಂಬ ಶಬ್ದ ವುಂಟಾಯಿತು. ತರುವಾಯ ರಾಕ್ಷಸನು ಶ್ರಮವುಳ್ಳವನಾದನು. ಅದನ್ನು ತಿಳಿದು ಭೀಮಸೇನದೇವರು ಎರಡು ಕೈಗಳಿಂದ ಎತ್ತಿ ಕೆಳಗೆ ಹಾಕಿ ತಿಕ್ಕಿದರು. ಅವನ ದೇಹವನ್ನೆಲ್ಲಾ ಪುಡಿ ಮಾಡಿದರು. ಅವನ ತಲೆಯನ್ನು ದೇಹದಿಂದ ಅಪಹರಿಸಿದರು. ತುಟಿಯನ್ನು ಕಚ್ಚಿಕೊಂಡಿದ್ದ ಕಣ್ಣಿನ ಗುಡ್ಡು ಮೇಲಕ್ಕೆ ಬಂದು ರಕ್ತದಿಂದ ತುಂಬಿ ಹೋದ ರಾಕ್ಷಸನ ತಲೆಯು ಮರದಿಂದ ಹಣ್ಣು ಉದುರಿ ಕೆಳಗೆ ಬೀಳುವಂತೆ ಕೆಳಗೆ ಬಿದ್ದಿತು. ಈರೀತಿಯಾಗಿ ಅವನನ್ನು ಸಂಹರಿಸಿ ಭೀಮಸೇನದೇವರು ಧರ್ಮ ರಾಜನ ಬಳಿಗೆ ಬಂದರು. ತರುವಾಯ ಬ್ರಾಹ್ಮಣರೆಲ್ಲರೂ ಸ್ತೋತ್ರಮಾಡಿದರು. ತರುವಾಯ ಎಲ್ಲರೂ ನರನಾರಾಯಣಶ್ರಮಕ್ಕೆ ಬಂದು ಅಲ್ಲಿಯೇ ಸ್ವಲ್ಪ ದಿವಸ ವಾಸ ಮಾಡುತ್ತಿದ್ದರು.

# ಭೀಮಸೇನದೇವರ ಪರಾಕ್ರಮ [1]

ಪಾಂಡವರು ಗಂಧಮಾದನ ಪರ್ವತದ ಶಿಖರದಲ್ಲಿ ವಾಸಮಾಡುತ್ತಿರಲು ಗಾಳಿಯ ವೇಗದಿಂದ ಜನರಿಂದ ಹೋಗಲಿಕ್ಕೆ ಆಗದ ಕುಬೇರನ ಮನೆಯ ಸಮೀಪದಲ್ಲಿರುವ ಸರೋವರದಿಂದ ತನ್ನ ಸಮೀಪಕ್ಕೆ ಬಂದು ಬಿದ್ದ ಐದು ಬಣ್ಣದ ಪುಷ್ಪಗಳನ್ನು ನೋಡಿ ಭೀಮಸೇನದೇವರಿಗೆ ಕೀರ್ತಿಯೂ ಧರ್ಮವೂ ಅಭಿವೃದ್ಧಿಯನ್ನು ಹೊಂದಲಿ ಎಂಬ ಅಭಿಪ್ರಾಯದಿಂದ, ಭೀಮಸೇನದೇವರೊಡನೆ 'ಕುಬೇರನಿಂದ ರಕ್ಷಿತವಾದ ಈ ಪರ್ವತವು ಯಾರಿಂದಲೂ ಹೊಂದಲಿಕ್ಕೆ ಅಶಕ್ಯವಾದದ್ದು. ಈಗ ನೀವು ಎಲ್ಲಾ ರಾಕ್ಷಸರನ್ನು ತಿರಸ್ಕರಿಸಿ ಅಲ್ಲಿಗೆ ಹೋಗಬೇಕು' ಎಂದರು. ಕೂಡಲೇ ಭೀಮಸೇನದೇವರು ಗದೆಯನ್ನು ಹಿಡಿದುಕೊಂಡು ಧನುರ್ಬಾಣಗಳನ್ನು ಧರಿಸಿದವರಾಗಿ ಹೊರಟುಹೋದರು.

ಬಂದ ಭೀಮಸೇನದೇವರನ್ನು ನೋಡಿ ಮೂರು ಪದ್ಮಸಂಖ್ಯೆಯುಳ್ಳ ಅಹಂಕಾರಿಗಳಾದ ರಾಕ್ಷಸರು ರುದ್ರದೇವರ ವರದಿಂದ ಪರಾಜಯಶೂನ್ಯನಾದ ಉಗ್ರನಾದ ಮಣಿಮಂತನನ್ನು ಮುಂದೆ ಮಾಡಿಕೊಂಡು ನಾನಾವಿಧ ಶಸ್ತ್ರಾಸ್ತ್ರಗಳ ಮಳೆಯನ್ನು ಸುರಿಸುತ್ತಾ ಬಂದರು. ಭೀಮಸೇನದೇವರು ಅವರನ್ನೆಲ್ಲಾ ಬಾಣಗಳಿಂದ ಬಡೆದರು. ಮಹಾಬಲಿಷ್ಠರಾದ ಭೀಮಸೇನದೇವರು ಅವಧ್ಯರಾದ ಮಣಿಮಂತ ನಿಂದ ಸಹಿತರಾದ ಕ್ರೋಧವಶರೆಂದು ಹೆಸರುಳ್ಳ ಅಷ್ಟು ರಾಕ್ಷಸರನ್ನೂ ಕೊಂದು ಹಾಕಿದರು. ಆ ರಾಕ್ಷಸರೆಲ್ಲರೂ ಅಂಧಂತಮಸ್ಸಿಗೆ ಹೋದರು. ಮಣಿಮಂತನು ಮಾತ್ರ ಪುನಃ ಕಲಿಯುಗದಲ್ಲಿ ಹುಟ್ಟಿ ವಿಪರೀತಜ್ಞಾನವನ್ನು ಜನರಿಗೆ ಹೆಚ್ಚಿಸಿ ಅಧಿ ಕವಾದ ಅಂಧಂತಮಸ್ಸಿಗೆ ಹೋಗುವನು. ತರುವಾಯ ಕುಬೇರನು ಮೂರು ಮಹಾಪದ್ಮಸಂಖ್ಯೆಯುಳ್ಳ ಅವಧ್ಯರಾದ ರಾಕ್ಷಸರೂ ತನ್ನ ಮಿತ್ರನಾದ ಮಣಿಮಂತನೂ ಸಾಯಲು ಭೀಮಸೇನದೇವರೊಡನೆ ಯುದ್ಧಮಾಡುವೆನೆಂದು ದಿವ್ಯವಾದ ರಥವನ್ನು ಏರಿದನು. ಅಸುರಾವೇಶದಿಂದ ಆಗ ಆವನಿಗೆ ಭೀಮಸೇನದೇವರಲ್ಲಿ ಬಹಳ ಕೋಪವು ಬಂದಿತು. ಆತನು ಬೇಗನೇ ಭೀಮಸೇನದೇವರೊಡನೆ ಯುದ್ಧ ಮಾಡಲಿಕ್ಕೆ ಬಂದನು.

ಆ ಸಮಯದಲ್ಲಿ ಧರ್ಮರಾಜನು ಭೀಮಸೇನದೇವರು ಗರ್ಜನೆ ಮಾಡುವ ಶಬ್ದವನ್ನು ಕೇಳಿ ಬೇಗನೇ ದ್ರೌಪದೀದೇವಿಯರೊಡನೆ ಪುನಃ ಭೀಮನೆಲ್ಲಿ ಎಂದು

---

1. ಮ.ತಾ.ನಿ. ಅ-22

ಕೇಳಿದನು. ತರುವಾಯ ದ್ರೌಪದೀದೇವಿಯರು ಹೇಳಿದ ಮಾತನ್ನು ಕೇಳಿ ಅವರಿಂದಲೂ ಸಹೋದರರಿಂದಲೂ ಸಹಿತರಾಗಿ ರಾಕ್ಷಸರ ಮೇಲೆ ಕೂತುಕೊಂಡು ಭೀಮಸೇನದೇವರಿದ್ದಲ್ಲಿಗೆ ಹೋದನು. ಆಗ ಅಲ್ಲಿ ಕುಬೇರನು ಭೀಮಸೇನ ದೇವರನ್ನೂ ಧರ್ಮರಾಜನನ್ನು ನೋಡಿ ಸ್ವಲ್ಪ ಅಸುರಾವೇಶವು ಕಡಿಮೆಯಾಗಿ ಸ್ವಲ್ಪ ಸ್ನೇಹವುಳ್ಳವನಾದನು. ಆಯುಧಧಾರಿಯಾದ ಭೀಮಸೇನದೇವರನ್ನು ನೋಡಿಯೂ ಅಸುರಾವೇಶವಿದ್ದುದರಿಂದ ಭೀಮಸೇನದೇವರನ್ನು ಬಹುಮಾನ ಮಾಡಲಿಲ್ಲ. ತನ್ನ ಮಿತ್ರನಾದ ಮಣಿಮಂತನು ಸಾಯಲು ಅಗಸ್ತ್ಯರ ಶಾಪವು ಕಾರಣವೆಂದು ಹೇಳಿದನು. ಆಮೇಲೆ ಸಂಪೂರ್ಣದೈತ್ಯಾವೇಶವು ಬಿಟ್ಟುಹೋಗಲು ಶಾಂತನಾಗಿ ಸಂತುಷ್ಟನಾಗಿ ಅವರಿಗೆ ವಾಸಮಾಡಲಿಕ್ಕೆ ತನ್ನ ಸ್ಥಾನವನ್ನು ಕೊಟ್ಟನು. ಪಾಂಡವರು ಅಲ್ಲಿಯೂ ಇತರ ದೇವತೆಗಳ ಮನೆಗಳಲ್ಲಿಯೂ ವಾಸಮಾಡುತ್ತಿರಲು ನಾಲ್ಕು ವರ್ಷಗಳು ಕಳೆದುಹೋದವು. ತರುವಾಯ ದೇವಲೋಕಕ್ಕೆ ಹೋಗಿದ್ದ ಅರ್ಜುನನು ಅಲ್ಲಿ ಬಂದು ಸೇರಿದನು. ಬರುತ್ತಿರುವ ಅವನನ್ನು ನೋಡಿ ಎಲ್ಲರೂ ಸಂತೋಷವನ್ನು ಹೊಂದಿದರು. ಆಮೇರುಪರ್ವತದಲ್ಲಿ ಪುನಃ ನಾಲ್ಕು ವರ್ಷ ಸಂತೋಷದಿಂದ ವಾಸಮಾಡಿದರು. ಪರಮಾತ್ಮನ ಕಥೆಗಳಿಂದಲೂ, ಧ್ಯಾನದಿಂದಲೂ, ಪೂಜೆಯಿಂದಲೂ, ಅವರಿಗೆ ಕಾಲವು ಸುಖವಾಗಿಯೇ ಕಳೆದುಹೋಯಿತು.

'ಶತ್ರುಗಳನ್ನು ಸಂಹರಿಸದೆ, ಮಹಾಕೀರ್ತಿಯನ್ನು ಪಡೆಯದೆ, ಭಗವದಾಜ್ಞೆ ಯನ್ನು ಪರಿಪಾಲಿಸದೆ, ಕ್ಷತ್ರಿಯರಿಗೆ ಮುಖ್ಯವಾದ ಗತಿಯಾಗಲಾರದು. ಇತರ ವರ್ಣದವರಿಗೆ ಮಾತ್ರ ಬಾಹ್ಯಶತ್ರುಗಳಲ್ಲಿ ಕ್ಷಮೆಯು ಧರ್ಮವು ಎಂದು ಹೇಳಲ್ಪಟ್ಟಿದೆ. ಇದು ಭಗವಂತನ ಆಜ್ಞೆಯು' ಎಂದು ಹೇಳಿದ ಭೀಮಸೇನದೇವರ ಮಾತನ್ನು ಕೇಳಿ ಧರ್ಮರಾಜನು ಸಹೋದರರಿಂದಲೂ ದ್ರೌಪದೀದೇವಿಯ ರಿಂದಲೂ ಸಹಿತನಾಗಿ ರಾಕ್ಷಸರ ಮೇಲೆ ಕೂತುಕೊಂಡು ಮೇರುಶಿಖರದಿಂದ ಕೆಳಗೆ ಬಂದನು.



---

ನೈವ ಶತ್ರೂನನುತ್ಸಾದ್ಯ ನಾನಾದಾಯ ಮಹದ್ಯಶಃ ।
ನಾಕೃತ್ವಾ ವಾಸುದೇವಾಜ್ಞಾಂ ರಾಜ್ಞಾಂ ಮುಖ್ಯಗತಿರ್ಭವೇತ್ ॥ ಮ.ತಾ.ನಿ. 22-340

# ನಹುಷನ ಉದ್ಧಾರ [1]

ಪಾಂಡವರು ಹಿಮವತ್ಪರ್ವತದ ದಕ್ಷಿಣದಿಕ್ಕಿನಲ್ಲಿರುವ ಚಿಕ್ಕ ಪರ್ವತಗಳಲ್ಲಿ ವಾಸಮಾಡುತ್ತಿರಲು ಒಂದುದಿನದಲ್ಲಿ ಭೀಮಸೇನದೇವರು ಧನುರ್ಧಾರಿಯಾಗಿ ಮೃಗಬೇಟೆಯಾಡುತ್ತಾ ಹೋಗಿ ಹೆಬ್ಬಾವಿನ ರೂಪವುಳ್ಳ ನಹುಷರಾಜನನ್ನು ಹೊಂದಿದರು.

ಪೂರ್ವದಲ್ಲಿ ಇಂದ್ರದೇವರು ವೃತ್ರಾಸುರನನ್ನು ಸಂಹರಿಸಿ ಬ್ರಹ್ಮಹತ್ಯೆಯಿಂದ ಪೀಡಿತರಾಗಿ ಕಮಲದ ನಾಳದ ಒಳಗೆ ಪ್ರವೇಶಮಾಡಿಕೊಂಡಿರಲು ದೇವತೆಗಳು ಯೋಚನೆ ಮಾಡಿ ಆಯುರಾಜನ ಮಗನಾದ ನಹುಷನನ್ನು ಕರೆದುಕೊಂಡು ಬಂದು ಇಂದ್ರನನ್ನಾಗಿ ಮಾಡಿದರು. ಯಾರು ಅವರ ಕಣ್ಣಿಗೆ ಕಾಣಿಸುತ್ತಾರೋ ಅವರೆಲ್ಲರ ತಪಸ್ಸಿನ ಫಲವೂ ಬಲವೂ ಆ ನಹುಷನಿಗೆ ಬರುವಂತೆ ವರಕೊಟ್ಟರು. ಅವನು ಎಲ್ಲ ದೇವತೆಗಳ ಋಷಿಗಳ ತಪಸ್ಸನ್ನೂ ಅಕ್ಷಯವಾದ ಬಲವನ್ನೂ ಹೊಂದಿ ಅಭಿವೃದ್ಧನಾದನು. [2]ಅಹಂಕಾರದಿಂದ ಶಚೀದೇವಿಯನ್ನು ಅಪೇಕ್ಷಿಸಿದನು.

ಇಂದ್ರದೇವರು ಹೇಳಿಕೊಟ್ಟಂತೆ ಶಚೀದೇವಿಯೂ ಅವನೊಡನೆ ಸಪ್ತಋಷಿ ಗಳು ಹೊತ್ತುಕೊಂಡು ಬರುವ ವಾಹನದಲ್ಲಿ ಬರಬೇಕೆಂದು ಹೇಳಿದಳು. ಅವನು ಹಾಗೆಯೇ ಸಪ್ತಋಷಿಗಳನ್ನು ವಾಹನವನ್ನು ಹೊರಲಿಕ್ಕೆ ಹೇಳಿದನು. ಹೊತ್ತುಕೊಂಡು ಬರುವಾಗ ಅಗಸ್ತ್ಯರು ನಹುಷನೊಡನೆ ವೇದವು ಪ್ರಮಾಣವೋ ಎಂದು ಕೇಳಿದರು. ಅವರ ಅಭಿಪ್ರಾಯವು ವೇದವು ಪ್ರಮಾಣವೆಂದರೆ ವೇದದಲ್ಲಿ ಪರಸ್ತ್ರೀಯನ್ನು ಹೊಂದಬಾರದೆಂದು ಹೇಳಿರುವ ಕಾರಣ ಶಚೀಗಮನವನ್ನು ನಿಷೇಧ ಮಾಡುವೆ ನೆಂದೂ ಪ್ರಮಾಣವಲ್ಲವೆಂದರೆ ಪ್ರಮಾಣವೆಂದು ಸಾಧನ ಮಾಡುವೆನೆಂದೂ ಇದ್ದಿತು. ನಹುಷನು ವೇದವು ಪ್ರಮಾಣವಲ್ಲವೆಂದನು. ಅಗಸ್ತ್ಯರು ಪ್ರಮಾಣವೇ ಸರಿ ಎಂದರು. ಆಗ ನಹುಷನು ಕೋಪವುಳ್ಳವನಾಗಿ ಅಗಸ್ತ್ಯರ ತಲೆಗೆ ಒದೆದನು. ಆಗ ಅಗಸ್ತ್ಯರ ಜಟೆಯೊಳಗೆ ಭೃಗುಋಷಿಗಳು ಅಡಗಿದ್ದರು. ಭೃಗುಋಷಿಗಳು ಅಷ್ಟರವರೆಗೆ ಯಾವಾಗಲೂ ನಹುಷನ ಕಣ್ಣಿಗೆ ಬೀಳದೆ ಇದ್ದ ಕಾರಣ ಅವರ ತಪಸ್ಸು ಬಲವೂ ಅವರಲ್ಲೇ ಇತ್ತು. ನಹುಷನಿಗೆ ಹೋಗಿರಲಿಲ್ಲ. ಆ [3]ಭೃಗುಋಷಿಗಳು ಬ್ರಹ್ಮದೇವರು

---

1. ಮ.ತಾ.ನಿ. ಅ-22 2. ದರ್ಪಾದ್ವೈಚ್ಚತ್ ಶಚೀಮಪಿ..... ॥ ಮ.ತಾ.ನಿ. 22-345
3. ತದಾಭೃಗುಂ ತಸ್ಯ ಜಟಾಸು ಲೀನಂ...ಆವಿಶ್ಯಕಂಜಪ್ರಭವಃ ಶಶಾಪ ॥ ಮ.ತಾ.ನಿ. 22-348 ಭೃಗುಋಷಿಗಳನ್ನು

ಪ್ರವೇಶಿಸಿ 'ನೀನು ಹೆಬ್ಬಾವು ಆಗು. ಆರನೇ ಕಾಲದಲ್ಲಿ ಅಂದರೆ ಎರಡೂವರೆ ದಿವಸವಾಗಿ ರಾತ್ರಿಯಲ್ಲಿ ಯಾರು ನಿನಗೆ ಸಿಗುತ್ತಾನೋ ಅವನು ಬಲಾಧಿಕನಾದರೂ ನಿನ್ನ ವಶನಾಗಲಿ. ಅವನನ್ನು ನೀನು ಕೊಲ್ಲಲಿಕ್ಕೆ ಸಮರ್ಥನಾಗುವುದಿಲ್ಲ. ಅವನು ತನ್ನನ್ನು ಬಿಡಿಸಿಕೊಳ್ಳಲು ಸಮರ್ಥನಾದರೂ ತನ್ನನ್ನು ಬಿಡಿಸಿಕೊಳ್ಳುವುದಿಲ್ಲ. ಆಗ ನಿನ್ನಲ್ಲಿರುವ ಸಮಸ್ತದೇವಮುನಿಗಳ ತಪಸ್ಸೂ ಬಲವೂ ಅವನಿಗೇ ಹೋಗಿ ಸೇರುವುದು. ನೀನು ಕೇಳಿದ ಪ್ರಶ್ನೆಗಳಿಗೆ ಯಾವಾಗ ಒಬ್ಬನು ಬಂದು ಉತ್ತರವನ್ನು ಹೇಳುತ್ತಾನೋ ಆಗ ನೀನು ಹೆಬ್ಬಾವಿನದೇಹವನ್ನು ಬಿಟ್ಟು ಸ್ವರ್ಗವನ್ನು ಹೊಂದುವಿ. ನನ್ನ ಅನುಗ್ರಹದಿಂದ ನಿನಗೆ ಪೂರ್ವಸ್ಮರಣೆಯು ಇರುವುದು' ಎಂದು ಶಾಪಕೊಟ್ಟರು.

ಈರೀತಿಯಾಗಿ ಭೃಗುಋಷಿಗಳಲ್ಲಿ ಆವಿಷ್ಟರಾದ ಬ್ರಹ್ಮದೇವರಿಂದ ಶಾಪವನ್ನು ಹೊಂದಿ ನಹುಷನು ಒಂದೇ ಕ್ಷಣದಲ್ಲಿ ಹೆಬ್ಬಾವಾಗಿ ಬಿದ್ದನು. ಇಂದ್ರದೇವರು ಪರಮಾತ್ಮನನ್ನು ಅಶ್ವಮೇಧಯಾಗದಿಂದ ಪೂಜಿಸಿ ಪಾಪರಹಿತರಾದರು. ಇಂದ್ರದೇವರಿಗೆ ಅಪರೋಕ್ಷಜ್ಞಾನಿಯಾದ ಕಾರಣ ಪಾಪಲೇಪವಿರುವುದಿಲ್ಲ. ಆದುದರಿಂದ ಪಾಪದ ನೆಪದಿಂದ ಸಾವಿರವರ್ಷದವರೆಗೆ ನರಸಿಂಹದೇವರ ಧ್ಯಾನಮಾಡಿ ಮಹಾಪುಣ್ಯವನ್ನು ಹೊಂದಲಿಕ್ಕೇ ಕಾರಣವಾಯಿತು. ಮೂರುಲೋಕ ವನ್ನೂ ರಕ್ಷಿಸುವ ಇಂದ್ರದೇವರಿಗೆ ಲೋಕರಕ್ಷಣೆಗೆ ಕಾರಣವಾದ ವೃತ್ರಹತ್ಯೆಯು ಪಾಪಕರವಾಗಲಾರದು. ಲೋಕೋಪಕಾರಕ್ಕಾಗಿ ಮಾಡಿದ ಆ ಕಾರ್ಯವು ಹೇಗೆ ಪಾಪಕರವಾಗುವುದು? [1]ವೃತ್ರಾಸುರನನ್ನು ಕೊಂದು ಇಂದ್ರದೇವರಿಗೆ ಮಹತ್ತ್ವ ವುಂಟಾಯಿತು ಎಂದು ವೇದವಾಕ್ಯವೇ ಇದೆ. ದೇವತೆಗಳಿಗಾಗಲೀ ಮುನಿಗಾಗಲೀ ಕೆಲವು ಸಂದರ್ಭದಲ್ಲಿ ಪಾಪವೂ ಪುಣ್ಯಾಭಿವೃದ್ಧಿಗೇ ಕಾರಣವಾಯಿತು. ಇಂದ್ರ ದೇವರು ಮಾಡಿದ ವೃತ್ರಹತ್ಯೆಯು ಅವರ ಧರ್ಮಾಭಿವೃದ್ಧಿಗೇ ಕಾರಣವಾಯಿತು. ಮನುಷ್ಯರಿಗೆ ಮಾತ್ರ ಹಾಗೆ ಇಲ್ಲ. ಅವರು ಮಾಡಿದ ಪುಣ್ಯವು ಪುಣ್ಯವೇ ಪಾಪವು ಪಾಪವೇ. ಅಸುರರಿಗೆ ಪುಣ್ಯವೂ ಪಾಪವೇ ಆಗುವುದು. ಈರೀತಿಯಾಗಿ ಸ್ಕಾಂದಪುರಾಣದಲ್ಲಿ ಹೇಳಿದೆ. ಆದುದರಿಂದ ವೃತ್ರಹತ್ಯೆಯು ಇಂದ್ರದೇವರಿಗೆ ಪಾಪಕರವಾದದ್ದಲ್ಲ. ದೇವತೆಗಳಲ್ಲಿ ಒಬ್ಬರು ಇನ್ನೊಬ್ಬರ ಪದವಿಯನ್ನು ಹೊಂದ ಲಾರರು. ಆದುದರಿಂದ ಇಂದ್ರದೇವರಿಗೆ ಸಮಾನನಾದ ಕಾಮನಿಗೂ ಇಂದ್ರ ಪದವಿಯನ್ನು ಕೊಡಲಿಲ್ಲ. ಅದಕ್ಕಾಗಿ ಇಂದ್ರಪದವಿಯಲ್ಲಿ ನಹುಷನನ್ನು ತಂದಿಟ್ಟರು.

---

1. ''ವೃತ್ರಹತ್ಯಾ ಮಹಾನಾಸ'' ಇತಿ ಶೃತಿಃ । ಮ.ತಾ.ನಿ. ಅ.22-355

ಈರೀತಿಯಿಂದ ಬ್ರಹ್ಮದೇವರ ಶಾಪದಿಂದ ನಹುಷನು ಕೆಳಗೆ ಹೆಬ್ಬಾವಾಗಿ ಬೀಳಲು ಹಾಗೆಯೇ ಇಪ್ಪತ್ತೆಂಟನೆಯ ದ್ವಾಪರಯುಗವು ಬರಲು ಭೀಮಸೇನ ದೇವರು ತಿಳಿದುಕೊಂಡೇ ಆ ನಹುಷನಲ್ಲಿರುವ ಎಲ್ಲಾ ದೇವತೆಗಳ ಮತ್ತು ಮುನಿಗಳ ತಪಸ್ಸಿನ ಫಲವು ಸ್ವೀಕಾರಮಾಡುವುದಕ್ಕಾಗಿ ತನ್ನ ಇಚ್ಛೆಯಿಂದಲೇ ನಹುಷನ ವಶರಾಗಿ ನಿಂತರು. ದೇವತೆಗಳು ಮನುಷ್ಯರಾಗಿ ಹುಟ್ಟಿದಾಗ ಸ್ವಲ್ಪಮಾತ್ರ ಬಲವು ವ್ಯಕ್ತವಾಗುವುದು. ವಾಯುದೇವರಿಗೆ ಇಚ್ಛಾ ಮಾಡುವುದರಿಂದ ಎಲ್ಲಾ ಬಲವೂ ವ್ಯಕ್ತವಾಗುತ್ತದೆ. ಇತರ ದೇವತೆಗಳಿಗೆ ಹಾಗೆ ಅಲ್ಲ, ಸ್ವಲ್ಪ ಬಲವು ಮಾತ್ರ ವ್ಯಕ್ತವಾಗುವುದು. ಪರಮಾತ್ಮನ ಗುಣಗಳು ಯಾವಾಗಲೂ ವ್ಯಕ್ತಗಳಾಗಿಯೇ ಇರುವುವು.

ಇದೇರೀತಿಯಾಗಿ ದೇವತೆಗಳಿಗೆ ಮನುಷ್ಯರಾದಾಗ ಇತರ ಗುಣಗಳೂ ಮರೆಯಾಗಿರುವುವು. ದೇವತೆಗಳು ಮನುಷ್ಯರಾಗಿದ್ದಾಗ ದೇವತಾಬಲವನ್ನು ವ್ಯಕ್ತಪಡಿಸದೆ ಇದ್ದರೆ ಅವರಿಗೆ ಧರ್ಮಾಭಿವೃದ್ಧಿಯುಂಟಾಗುವುದು. ಆದರಿಂದ ಪರಮಾತ್ಮನು ಸಂತುಷ್ಟನಾಗುವನು. ನಹುಷನಲ್ಲಿರುವ ತಪಸ್ಸನ್ನು ಸ್ವೀಕಾರಮಾಡುವ ನಿಮಿತ್ತದಿಂದ ಸಮಸ್ತಲೋಕವನ್ನು ಸಂಹರಿಸುವ ಸಾಮರ್ಥ್ಯವುಳ್ಳ ಭೀಮಸೇನ ದೇವರ ಮನುಷ್ಯ ಜನ್ಮದಲ್ಲಿ ಯೋಗ್ಯವಾದ ಬಲವು ಬ್ರಹ್ಮದೇವರ ವರದಾನದಿಂದ ತಡೆಯಲ್ಪಟ್ಟಂತೆ ಇರಲು ದೇವತಾರೂಪದಲ್ಲಿ ಇರುವ ಬಲವನ್ನು ಶಕ್ತರಾದರೂ ವ್ಯಕ್ತಪಡಿಸಲಿಲ್ಲ. ತನ್ನನ್ನು ಬಿಡಿಸಿಕೊಳ್ಳುವುದಕ್ಕಾಗಿ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಿಲ್ಲ. ವಿದ್ಯೆಯಿಂದ ಜೀವಿಸುವುದು ಬ್ರಾಹ್ಮಣರಿಗೂ ಧರ್ಮವಲ್ಲ. ಕ್ಷತ್ರಿಯರಿಗೆ ಅಲ್ಲವೇ ಅಲ್ಲ. ನಹುಷನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಹೇಳಿ ತನ್ನನ್ನು ಬಿಡಿಸಿಕೊಂಡರೆ ವಿದ್ಯೆಯಿಂದ ಜೀವಿಸಿದಂತೆ ಆಗುವುದು ಎಂದು ಅಭಿಪ್ರಾಯದಿಂದ ನಹುಷನು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲು ಇಚ್ಛಿಸಲಿಲ್ಲ. ಭೀಮಸೇನ ದೇವರು ಸ್ವಲ್ಪವೂ ಪ್ರಯತ್ನಮಾಡದೆ ಸುಮ್ಮನೆ ಇದ್ದರೂ ನಹುಷನು ಸರ್ವಲೋಕದ ಬಲದಿಂದ ಪೂರ್ಣನಾಗಿದ್ದರೂ ಭೀಮಸೇನದೇವರನ್ನು ತನ್ನ ದೇಹದಿಂದ ಸುತ್ತಿಕೊಂಡು ಇದ್ದನಷ್ಟೇ ವಿನಹ [1]ಮತ್ತೊಂದು ಮಾಡಲಿಕ್ಕೂ ಸಾಧ್ಯವಾಗಲಿಲ್ಲ. ಸಹೋದರರಲ್ಲಿಯೂ ತಾಯಿಯಲ್ಲಿಯೂ ಸ್ನೇಹದಿಂದ ಅಲ್ಲಿ ನಿಲ್ಲಬಾರದು ಎಂಬ ಅಭಿಪ್ರಾಯವಿದ್ದರೂ ಕಾಲಕ್ರಮದಿಂದ ನಹುಷನಲ್ಲಿರುವ ಬಲವೆಲ್ಲವೂ ತನ್ನಲ್ಲಿಯೇ ಬಂದು ಸೇರಲು ಅವನು ದುರ್ಬಲನಾಗಿ ತಾನಾಗಿಯೇ ಬಿದ್ದುಹೋಗುವನು.

1. ಮತ್ತೇನನ್ನೂ

ಭಗವಂತನ ಆಜ್ಞೆಯಿಂದಲೂ ನನ್ನ ದೇಹದ ದಾರ್ಢ್ಯದಿಂದಲೂ ಅವನಾಗಿಯೇ ಬಿದ್ದುಹೋದಮೇಲೆ ನಾನು ಹೊರಟುಹೋಗುವೆನು ಎಂದು ಯೋಚಿಸುತ್ತಾ ತನ್ನ ಸ್ವಭಾವದಿಂದ ಪರಮಾತ್ಮನನ್ನು ಧ್ಯಾನಮಾಡುತ್ತಾ ಸುಮ್ಮನೆ ನಿಂತಿದ್ದರು. ಆಗಲೇ ಬ್ರಹ್ಮದೇವರ ಆಜ್ಞೆಯಿಂದ ಪರಮಾತ್ಮನ ವಚನದಿಂದ ನಹುಷನಲ್ಲಿದ್ದ ತಪಸ್ಸೂ ಬಲವೂ ಭೀಮಸೇನದೇವರಿಗೆ ಬಂದುಬಿಟ್ಟಿತು. ಭೀಮಸೇನದೇವರು ಎಲ್ಲಾ ತಪಸ್ಸಿನಿಂದಲೂ ಬಲದಿಂದಲೂ ಪೂರ್ಣರಾಗಲು ನಹುಷನ ದೇಹವು ಮೆಲ್ಲಮೆಲ್ಲನೆ ಕೆಳಗೆ ಬೀಳಲಿಕ್ಕೆ ಆರಂಭವಾಯಿತು.

ಭೀಮಸೇನದೇವರು ಹೊರಟುಹೋದ ಮೇಲೆ ಅನೇಕ ದುರ್ನಿಮಿತ್ತಗಳನ್ನು ಧರ್ಮರಾಜನು ನೋಡಿ ಚಂಚಲವಾದ ಮನಸ್ಸುಳ್ಳವನಾಗಿ ಭೀಮಸೇನನು ಎಲ್ಲಿ? ಎಂದು ಕೇಳಿದನು. ಭೀಮಸೇನದೇವರು ಮೃಗಬೇಟೆಗೆ ಹೋಗಿರುವುದನ್ನು ತಿಳಿದು ಅವರು ಹೋಗಿರುವಾಗ ಅವರ ತೊಡೆಯ ವೇಗದಿಂದ ಮುರಿದುಬಿದ್ದಿರುವ ಮರಗಳನ್ನು ನೋಡುತ್ತಾ ಹೋಗಿ ಸರ್ಪದಿಂದ ಸುತ್ತಲ್ಪಟ್ಟ ಭೀಮಸೇನದೇವರನ್ನು ನೋಡಿದರು. ನಹುಷನಿಂದ ಎಲ್ಲಾ ವಿಷಯವನ್ನು ತಿಳಿದುಕೊಂಡು ತಮ್ಮನ ಮೇಲಿನ ಸ್ನೇಹದಿಂದ ಅವನು ಕೇಳಿದ ಪ್ರಶ್ನೆಗಳಿಗೆಲ್ಲಾ ಉತ್ತರವನ್ನು ಹೇಳಿದನು. ಆಗಲೇ ನಹುಷನು ಸರ್ಪದೇಹವನ್ನು ಬಿಟ್ಟು ದಿವ್ಯದೇಹವುಳ್ಳವನಾಗಿ ಸ್ವರ್ಗಕ್ಕೆ ಹೋದನು.

ತರುವಾಯ ಧರ್ಮರಾಜನೂ, ಭೀಮಸೇನದೇವರೂ ತಮ್ಮ ಆಶ್ರಮಕ್ಕೆ ಬಂದರು. ಭೀಮಸೇನದೇವರಲ್ಲಿ ಅತಿಭಕ್ತಿಯುಳ್ಳವರಾದ ದ್ರೌಪದೀದೇವಿಯರೂ ಸಹೋದರರೂ ಮುನಿಶ್ರೇಷ್ಠರೂ ಭೀಮಸೇನದೇವರು ಆ ಹಾವು ಹಿಡಿದದ್ದರಿಂದ ನಾಚಿಕೆಯನ್ನು ಹೊಂದಿದರು. ಭೀಮಸೇನದೇವರೊಡನೆ 'ನೀವು ಇಂತಹ ಸಾಹಸ ಕಾರ್ಯವನ್ನು ಮಾಡಬಾರದಿತ್ತು. ಆ ಸರ್ಪದಿಂದ ಬಿಡಿಸಿಕೊಳ್ಳದೆ ಸಮರ್ಥ ನಾಗಿದ್ದರೂ ನೀವು ಪ್ರಯತ್ನವನ್ನು ಮಾಡಲಿಲ್ಲ. ಇದರಿಂದ ನಮ್ಮೆಲ್ಲರ ಹೃದಯದಲ್ಲಿ ಬಹಳ ದುಃಖವನ್ನು ಉಂಟುಮಾಡಿದಿರಿ. ಇಂತಹ ಕಾರ್ಯವನ್ನು ಇನ್ನು ಮುಂದೆ ಮಾಡಬಾರದು' ಎಂದು ಹೇಳುತ್ತಾ ಎಲ್ಲರೂ ಬಂದು ಭೀಮಸೇನದೇವರನ್ನು ಆಲಿಂಗನ ಮಾಡಿಕೊಂಡರು. ತರುವಾಯ ಕುರುರಾಜ್ಯದಲ್ಲಿರುವ ದ್ವೈತವನಕ್ಕೆ ಹೋದರು.



# ಸೈಂಧವನ ಪರಾಜಯ [1]

ಪಾಂಡವರು ದ್ವೈತವನದಲ್ಲಿರುವ ಸಮಯದಲ್ಲಿ ಅಲ್ಲಿಗೆ ಶ್ರೀಕೃಷ್ಣಪರಮಾತ್ಮನು ಸತ್ಯಭಾಮಾದೇವಿಯರಿಂದ ಸಹಿತನಾಗಿ ಬಂದನು. ಪಾಂಡವರಿಂದ ಸತ್ಕೃತನಾಗಿ ಸ್ನೇಹದಿಂದ ಅನೇಕ ಕಥೆಗಳನ್ನು ಮಾತಾಡಿಕೊಂಡರು. ಆಗ ದ್ರೌಪದೀದೇವಿಯರೂ ಸತ್ಯಭಾಮಾದೇವಿಯರೂ ಸಂತೋಷದಿಂದ ಪರಸ್ಪರ ಸಂಭಾಷಣೆ ಮಾಡಿಕೊಂಡರು. ಸತ್ಯಭಾಮಾದೇವಿಯರು ಸರ್ವವನ್ನೂ ತಿಳಿದವರಾದರೂ ಪರೀಕ್ಷೆಯನ್ನು ಮಾಡುವುದಕ್ಕಾಗಿ ದ್ರೌಪದೀದೇವಿಯರೊಡನೆ ಸ್ತ್ರೀಧರ್ಮಗಳನ್ನು ಕೇಳಿದರು. ದ್ರೌಪದೀದೇವಿಯರು ಸರ್ವಜ್ಞರಾದ ಸತ್ಯಭಾಮಾದೇವಿಯರು ಲೋಕಶಿಕ್ಷೆಗೋಸ್ಕರ ಕೇಳುತ್ತಿರುವವರು ಎಂದು ತಿಳಿದುಕೊಂಡೇ ಮತ್ತು ಕ್ರೀಡೆಗೋಸ್ಕರ ಕೇಳುತ್ತಿರುವವರು ಎಂದೂ ತಿಳಿದುಕೊಂಡೇ ಎಲ್ಲಾ ಧರ್ಮಗಳನ್ನು ಹೇಳಿದರು. ಸತ್ಯಭಾಮಾದೇವಿಯರ ಪ್ರೀತಿಗಾಗಿಯೇ ಅವರ ಮಾತಿಗನುಸಾರವಾಗಿ ತಾನು ಹೇಳಿದರು. ತರುವಾಯ ಭಗವಂತನು ಅಲ್ಲಿ ಕೆಲವು ದಿವಸವಿದ್ದು ಪಾಂಡವರನ್ನು ಸತ್ಕರಿಸಿ ಸತ್ಯಭಾಮಾದೇವಿಯರಿಂದ ಸಹಿತನಾಗಿ ದ್ವಾರಕಾಪಟ್ಟಣಕ್ಕೆ ಹೋದನು.

ಒಂದುದಿವಸದಲ್ಲಿ ಪಾಂಡವರು ಮೃಗಬೇಟೆಗೆ ಹೋಗಿರಲು ಸೈಂಧವನು ಸೈನ್ಯದಿಂದಲೂ ಕೋಟಿಕಾಶ್ಯನಿಂದಲೂ ಸಹಿತನಾಗಿ ಅಲ್ಲಿಗೆ ಬಂದನು. ಅಲ್ಲಿ ಆಶ್ರಮದಲ್ಲಿ ದ್ರೌಪದೀದೇವಿಯರನ್ನು ನೋಡಿದನು. ವಿವಾಹಕ್ಕೆ ಹೋಗುತ್ತಿದ್ದ ಅವನು ದ್ರೌಪದೀದೇವಿಯರನ್ನು ನೋಡಿ ಕೋಟಿಕಾಶ್ಯನನ್ನು ಕಳುಹಿಸಿ ತನಗೆ ಹೆಂಡತಿಯಾಗಿ ಬರಬೇಕೆಂದು ಹೇಳಿಸಿದನು. ಅವರಿಂದ ತಿರಸ್ಕೃತನಾಗಿ ಹೋಗಿ ಕೈಹಿಡಿದನು ಅವರಿಂದ ತಳ್ಳಲ್ಪಟ್ಟವನಾಗಿ ಸೈಂಧವನು ಕೆಳಗೆ ಬಿದ್ದನು. ಮೂರ್ಛಿತನಾದನು. ಪುನಃ ಲಜ್ಜಾಹೀನನಾಗಿ ಬಂದನು. ತರುವಾಯ ದ್ರೌಪದೀ ದೇವಿಯರು ಸಹಾಯಕರು ಇಲ್ಲದಿರುವ ಕಾರಣ ಧೌಮ್ಯಾಚಾರ್ಯರೊಡನೆ ಅಗ್ನಿಸಹಿತರಾಗಿ ಬನ್ನಿರಿ ಎಂದು ಹೇಳಿ ಸೈಂಧವನ ರಥವನ್ನು ಏರಿದರು. ನೀನು ಸುಖವಾಗಿ ಹೋಗುವುದಿಲ್ಲ ಎಂದರು.

ಆಗ ಪಾಂಡವರು ದುರ್ನಿಮಿತ್ತಗಳನ್ನು ನೋಡಿ ಬೇಗನೆ ಆಶ್ರಮಕ್ಕೆ ಬಂದರು. ಅಲ್ಲಿ ದಾಸಿಯ ಮಾತಿನಿಂದ ಎಲ್ಲವನ್ನೂ ತಿಳಿದು ಬೇಗನೇ ಸೈಂಧವನನ್ನು ಅನುಸರಿಸಿಹೋದರು. ಭೀಮಸೇನದೇವರನ್ನು ಕೂಗುತ್ತಿರುವ ಧೌಮ್ಯಾಚಾರ್ಯ

1. ಮ.ತಾ.ನಿ. ಅ-22

ರನ್ನು ಅವರ ಮುಂದೆ ಇರುವ ಅತಿಪಾಪಿಯಾದ ಸೈಂಧವನನ್ನು ನೋಡಿ ಪಾಂಡವರು ಸಿಂಹದಂತೆ ಗರ್ಜನೆ ಮಾಡಿದರು. ಅವರನ್ನು ನೋಡಿ ದ್ರೌಪದೀದೇವಿಯರು ರಥದಿಂದ ಕೆಳಗೆ ಹಾರಿ ಧೌಮ್ಯಾಚಾರ್ಯರೊಡನೆ ಆಶ್ರಮಕ್ಕೆ ಹೋದರು. ಪಾಂಡವರು ಸೈಂಧವನ ಸೈನ್ಯವನ್ನು ಸಂಹರಿಸಿದರು. ಮೊದಲು ದ್ರೌಪದೀ ದೇವಿಯರನ್ನು ಸೈಂಧವನ ಬಳಿಗೆ ಬರಬೇಕೆಂದು ಹೇಳಿದ ಕೋಟಿಕಾಶ್ಯನನ್ನು ಭೀಮಸೇನದೇವರು ತಲೆಯನ್ನು ಕಡಿದು ಸಂಹರಿಸಿದರು. ಅವನು ತಮಸ್ಸಿಗೆ ಹೋದನು. ಭೀಮಾರ್ಜುನರು ಸೈಂಧವನ ಸೈನ್ಯವನ್ನೆಲ್ಲಾ ಸಂಹರಿಸಿ ನಕುಲಸಹದೇವ ರನ್ನು ಧರ್ಮರಾಜನನ್ನು ಕಳುಹಿಸಿ ಓಡುತ್ತಿದ್ದ ಸೈಂಧವನನ್ನು ಅಟ್ಟಿಸಿಹೋದರು. ಅರ್ಜುನನು ಸೈಂಧವನ ರಥವನ್ನು ಪುಡಿಮಾಡಿದನು. ಭೀಮಸೇನದೇವರು ಕಾಲುಗಳಿಂದಲೇ ಓಡುತ್ತಿದ್ದ ಜಯದ್ರಥನನ್ನು ಹಿಡಿದ ಕಾಲಿನಿಂದ ಒದೆದು ಸೆಳೆದುಕೊಂಡು ಬಂದು ದ್ರೌಪದೀದೇವಿಯರ ಕಾಲುಗಳಲ್ಲಿ ಬೀಳಿಸಿದರು. ಅವನನ್ನು ಧರ್ಮರಾಜನು ಬಿಡಿಸಿದನು. 'ನಾನು ದ್ರೌಪದಿಯ ದಾಸನು' ಎಂದು ಅವನು ಹೇಳಿದ ಮೇಲೆ ಭೀಮಸೇನದೇವರು ಅವನನ್ನು ಬಿಟ್ಟರು. ಅವನು ನಾಚಿಕೆಯಿಂದ ಮುಖವನ್ನು ತಗ್ಗಿಸಿಕೊಂಡು ಹೋದನು.

ತರುವಾಯ ಮಾರ್ಕಂಡೇಯರು ಬಂದು ಪಾಂಡವರಿಗೆ ಸಮಾಧಿ, ದರ್ಶನ, ಗುಹ್ಯ ಎಂಬ ಮೂರು ಭಾಷೆಯಿಂದ ನಾನಾ ಕಥೆಗಳನ್ನು ಹೇಳಿದರು. ಭೀಮಸೇನದೇವರು ಜಯದ್ರಥನನ್ನು ತಲೆಬೋಳಿಸಿ ಐದು ಸ್ಥಳಗಳಲ್ಲಿ ತಲೆಕೂದಲುಗಳನ್ನು ಬಿಟ್ಟು ಕಳುಹಿಸಿದ್ದರು. ಅವನು ತಪಸ್ಸಿನಿಂದ ರುದ್ರದೇವರನ್ನು ಸಂತೋಷಪಡಿಸಿ ಯುದ್ಧದಲ್ಲಿ ಪಾಂಡವರನ್ನು ತಡೆಯುವಂತೆ ವರವನ್ನು ಕೇಳಿದನು. ರುದ್ರದೇವರು ಅರ್ಜುನನನ್ನು ಬಿಟ್ಟು ಇತರ ಪಾಂಡವರನ್ನು ತಡೆಯುವಂತೆ ವರವನ್ನು ಕೊಟ್ಟರು. ಆಗಲೇ ರುದ್ರದೇವರು ಅರ್ಜುನನ ತಪಸ್ಸಿಗೆ ಮೆಚ್ಚಿ ವರವನ್ನು ಕೊಟ್ಟಿದ್ದರು. ಆದುದರಿಂದ ಅರ್ಜುನನನ್ನು ಬಿಟ್ಟು ಇತರರನ್ನು ಮಾತ್ರ ತಡೆಯುವಂತೆ ವರವನ್ನು ಕೊಟ್ಟರು. ಪಾಂಡವರು ವನದಲ್ಲಿ ವಾಸ ಮಾಡುತ್ತಿರುವಾಗಲೇ ದುರ್ಯೋಧನನು ಪಾಂಡವರು ಮಾಡಿದ ರಾಜಸೂಯ ಯಾಗದ ಸ್ಪರ್ಧೆಯಿಂದ ಪೌಂಡರೀಕ ಎಂಬ ಯಾಗವನ್ನು ಮಾಡಿದನು. ಆದರೆ ಆ ಯಾಗವು ಪಾಂಡವರು ಮಾಡಿದ ರಾಜಸೂಯಯಾಗದ ಹದಿನಾರನೇ ಒಂದು ಭಾಗದಷ್ಟೂ ಆಗಿರಲಿಲ್ಲ. ಆ ಯಾಗಕ್ಕೆ ದುರ್ಯೋಧನನ ಆಜ್ಞೆಯಿಂದ ದುಃಶಾಸನನು ಪಾಂಡವರಿಗೆ ಯಜ್ಞಕ್ಕೆ

ಬರಬೇಕೆಂದು ಆಳನ್ನು ಕಳುಹಿಸಿದನು. ಅದಕ್ಕೆ ಭೀಮಸೇನದೇವರು ನಾವು ಈ ಯಾಗಕ್ಕೆ ಬರುವವರಲ್ಲ, ರಣಯಜ್ಞಕ್ಕೆ ಬರುವೆವು ಎಂದು ಹೇಳಿದರು.



# ದುರ್ಯೋಧನನ ಮಾನಭಂಗ [1]

ಸ್ವಲ್ಪದಿವಸಗಳಾದ ಮೇಲೆ ದುರ್ಯೋಧನಾದಿಗಳು ಕರ್ಣನಿಂದಲೂ ಶಕುನಿಯಿಂದಲೂ ಸಹಿತರಾಗಿ ಯೋಚನೆ ಮಾಡಿ ತಮ್ಮ ಮಹತ್ತಾದ ಐಶ್ವರ್ಯವನ್ನು ತೋರಿಸಿ ಪಾಂಡವರಿಗೂ ದ್ರೌಪದೀದೇವಿಯರಿಗೂ ಅವಮಾನವನ್ನು ಮಾಡುವುದಕ್ಕಾಗಿ ಹೋದರು. ಅವರು ಬಂಗಾರದ ರತ್ನಖಚಿತಗಳಾದ ರಥಗಳಿಂದಲೂ, ಆನೆಗಳಿಂದಲೂ, ಕುದುರೆಗಳಿಂದಲೂ, ಪದಾತಿಗಳಿಂದಲೂ ಸಹಿತರಾಗಿ ವಿಚಿತ್ರವಾದ ವಸ್ತ್ರಪುಷ್ಪಾದಿಗಳನ್ನು ಧರಿಸಿಕೊಂಡು ಅಲಂಕಾರ ಮಾಡಿಕೊಂಡು ಬೇಗನೇ ದ್ವೈತವನಕ್ಕೆ ಹೋದರು. ಗೋವುಗಳನ್ನು ನೋಡಿಕೊಂಡು ಬರುವ ವ್ಯಾಜದಿಂದ ಕೌರವರು ವನಕ್ಕೆ ಹೋಗಿರುವುದನ್ನು ತಿಳಿದು ಇಂದ್ರದೇವರು ಅವನಿಗೆ ತೇಜೋಭಂಗವನ್ನು ಮಾಡಬೇಕೆಂದು ಚಿತ್ರಸೇನ ಎಂಬ ಗಂಧರ್ವನನ್ನು ಅವನಿಗೆ ವರವನ್ನು ಕೊಟ್ಟು ದುರ್ಯೋಧನನನ್ನು ಕಟ್ಟಿಕೊಂಡು ಬರಲಿಕ್ಕೆ ಕಳುಹಿಸಿದರು. ಆ ಚಿತ್ರಸೇನನು ಅರವತ್ತು ಸಾವಿರ ಕೋಟಿ ಸೇನಾನಾಯಕರುಳ್ಳ ಗಂಧರ್ವಶ್ರೇಷ್ಠರಿಂದ ಕೂಡಿಕೊಂಡು ದುರ್ಯೋಧನನು ಸ್ನಾನ ಮಾಡಲು ಹೋಗಲಿಕ್ಕೆ ಇಚ್ಛಿಸಿದ ಸರೋವರಕ್ಕೆ ಹೋದನು. ಅಲ್ಲಿ ದುರ್ಯೋಧನನ ಪುರುಷರು ಗಂಧರ್ವರೊಡನೆ ರಾಜಾಧಿರಾಜನಾದ ದುರ್ಯೋಧನನು ಇಲ್ಲಿ ಸ್ನಾನಮಾಡಲಿಕ್ಕೆ ಬರುವನು. ಆದುದರಿಂದ ನೀವೆಲ್ಲರೂ ಅವನ ಆಜ್ಞೆಯನ್ನು ಸ್ವೀಕರಿಸುವವರಾಗಿ ಈ ಸರೋವರದಿಂದ ಹೊರಟುಹೋಗಿರಿ' ಎಂದು ಹೇಳಿದರು. ಅದಕ್ಕೆ ಗಂಧರ್ವರು ಗಟ್ಟಿಯಾಗಿ ನಗುವವರಾದರು. 'ನಾವು ಮೂರುಲೋಕಕ್ಕೂ ಅಧಿಪತಿಯಾದ ಇಂದ್ರದೇವರ ಆಜ್ಞೆಯನ್ನು ಸ್ವೀಕರಿಸುವೆವು. ಮನುಷ್ಯರಾದ ಚಕ್ರವರ್ತಿಗಳ ಆಜ್ಞೆಯನ್ನು ಸ್ವೀಕರಿಸಲಾರೆವು. ಅಲ್ಪಸಾಮರ್ಥ್ಯವುಳ್ಳ ದುರ್ಯೋಧನನ ಆಜ್ಞೆಯನ್ನು ನಾವೇಕೆ ಕೇಳುವೆವು' ಎಂದು ಹೇಳಿದರು.

ಈರೀತಿಯಾಗಿ ಅವರು ಹೇಳಲು ದುರ್ಯೋಧನನು ಕೋಪಿಸಿಕೊಂಡು

---

1. ಮ.ತಾ.ನಿ. ಅ-22

ಗಂಧರ್ವಶ್ರೇಷ್ಠರನ್ನು ಬಾಣಗಳಿಂದ ಬಡೆದನು. ಕರ್ಣನಿಂದ ಸಹಿತರಾದ ಅವನ ಸಹೋದರರೂ ಗಂಧರ್ವರನ್ನು ಬಡೆದರು. ಗಂಧರ್ವರೂ ದುರ್ಯೋಧನನ ಸೇನೆಯನ್ನು ಬಡೆದರು. ಒಂದು ಮುಹೂರ್ತದವರೆಗೆ ದುರ್ಯೋಧನನಿಗೂ ಗಂಧರ್ವರಿಗೂ ಯುದ್ಧವು ಸಮಸಮವಾಗಿ ನಡೆಯಿತು. ಆಮೇಲೆ ಇಂದ್ರದೇವರ ವರದಿಂದಲೂ ಗಂಧರ್ವರ ಮಾಯೆಯಿಂದಲೂ ಗಂಧರ್ವರಿಗೇನೇ ಸಾಮರ್ಥ್ಯವು ಹೆಚ್ಚಿತು. ಪಾಂಡವರಿಗಾಗಿ ದುರ್ಯೋಧನನಿಗೆ ತೇಜೋಭಂಗವನ್ನು ಮಾಡ ಬೇಕೆಂದೇ ಬ್ರಹ್ಮದೇವರೂ ಪರಮಾತ್ಮನೂ ಗಂಧರ್ವರಿಗೆ ಬಲವನ್ನು ಕೊಟ್ಟಿದ್ದರು. ಅದರಿಂದ ಅವರು ದುರ್ಯೋಧನಾದಿಗಳೊಡನೆ ಯುದ್ಧವನ್ನು ಮಾಡಿದರು.

ಚಿತ್ರಸೇನನು ಮೊದಲು ಕರ್ಣನೊಡನೆ ಯುದ್ಧವನ್ನು ಮಾಡಿದನು. ಕರ್ಣನು ಅರ್ಜುನನ ಮೇಲೆ ಸ್ಪರ್ಧೆಯಿಂದ ಯುದ್ಧಮಾಡುವವನಾದನು. ಅದರಿಂದ ಪರಶುರಾಮದೇವರ ಶಾಪದಿಂದ ಯುದ್ಧಮಾಡಲಿಕ್ಕೆ ಶಕ್ತನಾಗಲಿಲ್ಲ. ಅವನ ರಥವು ಪುಡಿಯಾಯಿತು. ಅವನು ವಿಕರ್ಣನ ರಥವನ್ನು ಹತ್ತಿ ಕುದುರೆಗಳನ್ನು ಓಡಿಸುತ್ತಾ ವಿಕರ್ಣನೊಡನೆ ಓಡಿಹೋದನು. ಆಮೇಲೆ ದುರ್ಯೋಧನನು ಚಿತ್ರಸೇನನೊಡನೆ ಯುದ್ಧವನ್ನು ಮಾಡಿದನು. ಒಂದು ಮುಹೂರ್ತ ಕಾಲ ದುರ್ಯೋಧನನೊಡನೆ ಸಮವಾಗಿ ಯುದ್ಧವನ್ನು ಮಾಡುವವನಾದನು. ತರುವಾಯ ಬಹುಗಂಧರ್ವರು ಮಾಯೆಯಿಂದ ದುರ್ಯೋಧನನ ರಥವನ್ನು ಪುಡಿ ಮಾಡಿದರು. ದುರ್ಯೋಧನನು ನೆಲದ ಮೇಲೆ ನಿಂತುಕೊಂಡನು. ಚಿತ್ರಸೇನನು ಬಂದು ಅವನನ್ನು ಹಿಡಿದನು. ದುರ್ಯೋಧನನು ಮಹಾಬಲಿಷ್ಠನಾಗಿದ್ದರೂ ಇಂದ್ರದೇವರ ವರದಿಂದ ಪರಮಾತ್ಮನ ಆಜ್ಞೆಯಿಂದಲೂ ಬಲಾಭಿವೃದ್ಧಿಯನ್ನು ಹೊಂದಿದ ಚಿತ್ರಸೇನನಿಂದ ಇಂದ್ರದೇವರು ಕೊಟ್ಟ ಮಿಂಚಿನಂತೆ ಹೊಳೆಯುವ ಬಂಗಾರದ ಹಗ್ಗಗಳಿಂದ ಕಟ್ಟಲ್ಪಟ್ಟನು. ಇಂದ್ರದೇವರ ಭೃತ್ಯರಾದ ಗಂಧರ್ವರು ದುರ್ಯೋಧನನ ತಮ್ಮಂದಿರನ್ನು, ಶಕುನಿಯನ್ನೂ, ಪತ್ನಿಯರನ್ನೂ, ಕಟ್ಟಿ ಎಳೆದುಕೊಂಡು ಹೋದರು. ಎಲ್ಲರನ್ನೂ ಎಳೆದುಕೊಂಡು ಆಕಾಶಮಾರ್ಗದಲ್ಲಿ ಹೋದರು. ಆಗ ಮಂತ್ರಿಗಳು ಪಾಂಡವರ ಬಳಿಗೆ ಬಂದು 'ನಿಮ್ಮ ಕುಲಕ್ಕೆ ಇಂದ್ರದೇವರ ಭೃತ್ಯರಿಂದ ಪರಾಜಯವನ್ನು ಹೊಂದಿತು. ಇಂದ್ರಭೃತ್ಯರು ದುರ್ಯೋಧನನನ್ನು ಅವನ ತಮ್ಮಂದಿರನ್ನೂ ಹೆಂಗಸರನ್ನೂ ಎಳೆದುಕೊಂಡು ಹೋಗುತ್ತಿರುವರು. ನಿಮ್ಮ ಸಹೋದರನನ್ನು ಬಿಡಿಸಿರಿ' ಎಂದು ಹೇಳಿದರು.

ಆಗ ಭೀಮಸೇನದೇವರು ಅಣ್ಣನಾದ ಧರ್ಮರಾಜನೊಡನೆ 'ಈಗ ನಡೆದ

ವಿಷಯವನ್ನು ನಾನು ತಿಳಿದಿರುವೆನು. ದುರ್ಯೋಧನನು ನಮ್ಮ ತೇಜೋಭಂಗವನ್ನು ಮಾಡಬೇಕೆಂದು ತಮ್ಮ ಐಶ್ವರ್ಯವನ್ನೆಲ್ಲಾ ನಮಗೆ ತೋರಿಸಬೇಕೆಂಬ ಅಭಿಪ್ರಾಯದಿಂದ ಇಲ್ಲಿಗೆ ಬಂದನು. ಅವರ ದುರಾಲೋಚನೆಯನ್ನು ತಿಳಿದು ಇಂದ್ರದೇವರು ಈ ಕಾರ್ಯವನ್ನು ಮಾಡಿದರು. ಇದರಿಂದ ನಮಗೇನೂ ಕಾರ್ಯಹಾನಿಯಿರುವುದಿಲ್ಲ' ಎಂದು ತನ್ನ ದಿವ್ಯಜ್ಞಾನವನ್ನು ತೋರಿಸುತ್ತಾ ಹೇಳಿ ಸುಮ್ಮನೆ ಆದರು. ಆಮೇಲೆ ಒಂದೇದಿನದಲ್ಲಿ ಮಾಡುವ ಒಂದು ಯಾಗದಲ್ಲಿ ದೀಕ್ಷಿತನಾದ ಧರ್ಮರಾಜನಿಂದ ಪ್ರೇರಿತರಾಗಿ ಭೀಮಸೇನದೇವರೂ ಅರ್ಜುನನೂ ನಕುಲಸಹದೇವರೂ ಹೋಗಿ ಯುದ್ಧದಲ್ಲಿ ಚಿತ್ರಸೇನನನ್ನು ಜಯಿಸಿ ದುರ್ಯೋಧನನ್ನು ಬಿಡಿಸಿದರು. ಚಿತ್ರಸೇನನು ಭೀಮಾರ್ಜುನರೊಡನೆ ಇಂದ್ರದೇವರು ಹೇಳಿದ ಆ ದುರ್ಯೋಧನಾದಿಗಳ ದುರಾಲೋಚನೆಯನ್ನೆಲ್ಲಾ ಹೇಳಿದನು. ಅದನ್ನು ಕೇಳಿ ದುರ್ಯೋಧನನಿಗೆ ತುಂಬಾ ನಾಚಿಕೆಯಾಯಿತು. [1]ಯಜ್ಞವನ್ನು ಮುಗಿಸಿ ಬಂದ ಧರ್ಮರಾಜನ ಬಳಿಗೆ ಎಲ್ಲರೂ ಹೋದರು. ಧರ್ಮರಾಜನು ಬೇಗನೆ ಚಿತ್ರಸೇನನನ್ನು ಪೂಜಿಸಿ ಕಳುಹಿಸಿ 'ದುರ್ಯೋಧನ! ಇನ್ನು ಮುಂದೆ ಇಂತಹ ಕಾರ್ಯವನ್ನು ಮಾಡದಿರು' ಎಂದು ಹೇಳಿ ಕಳುಹಿಸಿದನು.

ದುರ್ಯೋಧನನು ತಮ್ಮಂದಿರಿಂದಲೂ ಹೆಂಗಸರಿಂದಲೂ ಕೂಡಿಕೊಂಡು ಅಲ್ಲಿಂದ ಸ್ವಲ್ಪದೂರ ಹೋಗಿ ಎಲ್ಲರೂ ಬಂದು ಸೇರುವುದಕ್ಕಾಗಿ ಒಂದು ಸ್ಥಳದಲ್ಲಿ ಬಂದು ಕೂತುಕೊಂಡನು. ತುಂಬಾ ನಾಚಿಕೆಯಿಂದ ಕೂತುಕೊಂಡನು. ಆಗ ಕರ್ಣನನ್ನು ನೋಡಿದನು. ಕರ್ಣನು 'ರಾಜನೇ! ದೈವೇಚ್ಛೆಯಿಂದ ಗಂಧರ್ವರನ್ನು ಜಯಿಸಿದಿ' ಎಂದು ಹೇಳಿದನು. ಆಗ ದುರ್ಯೋಧನನು ತುಂಬಾ ನಾಚಿಕೆ ಯುಳ್ಳವನಾಗಿ 'ನಾನು ಜಯಿಸಲಿಲ್ಲ' ಎಂದು ಹೇಳಿ ನಡೆದ ವಿಷಯವನ್ನೆಲ್ಲಾ ತಿಳಿಸಿದನು. ತುಂಬಾ ದುಃಖವುಳ್ಳವನಾಗಿ ಸಾಯುವವರೆಗೆ ಉಪವಾಸದಿಂದ ಇರುವೆನೆಂದನು. ಕರ್ಣನೂ ದುಃಶಾಸನನೂ ಶಕುನಿಯೂ ಇತರರೂ ಎಷ್ಟು ಪ್ರಾರ್ಥಿಸಿದರೂ ದುರ್ಯೋಧನನು ಏಳಲೇ ಇಲ್ಲ.

ತರುವಾಯ ರಾತ್ರಿಯಾಗಲು ಅಸುರರೆಲ್ಲರೂ ತಮ್ಮ ಪಕ್ಷಕ್ಕೆ ಪರಾಜಯ ವೇರ್ಪಡಲು ಯೋಚನೆಮಾಡಿ ಹೋಮಮಾಡಿ ಒಂದು ಕೃತ್ಯೆಯನ್ನು ಕಳುಹಿಸಿದನು. ಶುಕ್ರಾಚಾರ್ಯರಿಂದ ನಿರ್ಮಿತವಾದ ಕೃತ್ಯೆಯು ಮಂತ್ರಿಗಳು ಮಲಗಿರಲು ದುರ್ಯೋಧನನನ್ನು ಎತ್ತಿಕೊಂಡು ಬೇಗನೇ ಪಾತಾಳಕ್ಕೆ ಹೋಯಿತು. ತರುವಾಯ

1. ಸಾದ್ಯಸ್ಕ ಎಂಬ ಒಂದು ದಿನದ ಯಜ್ಞ. (ಅ.ಭಾ.ಮಾ.ಮಂ.ಮ.ತಾ.ನಿ. ಭಾ.3.199. ಪುಟ 529)

ದೈತ್ಯರು ದುರ್ಯೋಧನನೊಡನೆ 'ನೀನು ದಿವ್ಯಪುರುಷನು. ನಮ್ಮ ತಪಸ್ಸಿನಿಂದ ಸಂತುಷ್ಟರಾದ ರುದ್ರದೇವರಿಂದ ನೀನು ಹುಟ್ಟಿರುವಿ. ವಜ್ರಕಾಯ ನಾಗಿರುವಿ. ಯಾವಾಗಲೂ ಅವಧ್ಯನು. ನೀನು ನಮ್ಮ ಪಕ್ಷದವನು. ಪಾಂಡವರು ದೇವತೆಗಳ ಪಕ್ಷದವರು. ನೀನೀಗ ಎಲ್ಲಾ ದೇವತೆಗಳ ವರದಿಂದ ಯುದ್ಧದಲ್ಲಿ ಸೋತು ಹೋಗಿರುವಿ. ಇನ್ನು ಮುಂದೆ ನೀನು ಪಾಂಡವರನ್ನು ಜಯಿಸುವಂತೆ ನಾವು ಮಾಡುವೆವು. ಕೃಷ್ಣನಿಂದ ಮೃತನಾದ ನರಕಾಸುರನು ಕರ್ಣನಲ್ಲಿ ಪ್ರವಿಷ್ಟ ನಾಗಿರುವನು. ಅವನು ಕೃಷ್ಣಾರ್ಜುನರಿಬ್ಬರೂ ಇಲ್ಲದಂತೆ ಮಾಡುವನು. ನಿನ್ನ ಜಯಕ್ಕಾಗಿ ಭೀಷ್ಮಾದಿಗಳೆಲ್ಲರನ್ನೂ ನಾವು ಪ್ರವೇಶಿಸುವೆವು. ತಪಸ್ಸುಮಾಡಿ ನಿನ್ನನ್ನು ಕರ್ಣಾದಿಗಳನ್ನು ಅಭಿವೃದ್ಧಿಗೊಳಿಸುವೆವು. ಆದುದರಿಂದ ನೀನು ಭಯವಿಲ್ಲದೆ ಹೋಗಿ ರಾಜ್ಯವನ್ನು ರಕ್ಷಿಸುತ್ತಿರು. ಈ ರಹಸ್ಯವನ್ನು ಯಾರೊಬ್ಬರಿಗೂ ಹೇಳದಿರು' ಎಂದು ಹೇಳಿ ಆ ಕೃತ್ಯೆಯಿಂದ ಪೂರ್ವದಲ್ಲಿ ಇದ್ದ ಸ್ಥಳದಲ್ಲಿಯೇ ಅವನನ್ನು ಇರುವಂತೆ ಮಾಡಿದರು.

ತರುವಾಯ ದುರ್ಯೋಧನನು ತನ್ನ ಅರ್ಧದೇಹವು ಪಾರ್ವತಿಯಿಂದ ಮಾಡಲ್ಪಟ್ಟದ್ದು, ಅರ್ಧದೇಹವು ರುದ್ರದೇವರಿಂದ ಮಾಡಲ್ಪಟ್ಟದ್ದು ಎಂದು ತಿಳಿದುಕೊಂಡು ತನಗೆ ಸಾವಿಲ್ಲವೆಂದೂ ತಿಳಿದುಕೊಂಡು ರಾಜ್ಯಭಾರವನ್ನು ಮಾಡುವ ವಿಷಯದಲ್ಲಿ ಮನಸ್ಸುಳ್ಳವನಾದನು. ತಾನು ಅನುಭವಿಸಿದ ವಿಷಯವನ್ನು ಯಾರೊಡನೆಯೂ ಹೇಳಲಿಲ್ಲ. ರಾತ್ರಿಯು ಕಳೆದು ಬೆಳಗಾಗಲು ಕರ್ಣನು 'ರಾಜನೇ! ನಿನ್ನ ಭೃತ್ಯರಾದ ಪಾಂಡವರಿಂದ ನೀನು ಬಿಡಿಸಲ್ಪಟ್ಟಿರುವಿ. ನಿನ್ನ ಭೃತ್ಯರೇ ಇಷ್ಟು ಪರಾಕ್ರಮಶಾಲಿಗಳಾಗಿರುವಾಗ ನಿನ್ನ ಸಾಮರ್ಥ್ಯವೆಷ್ಟಿರಬೇಕೆಂದು ಬಹುಮಾನಕ್ಕೇ ಪಾತ್ರನಾಗಿರುವಿ. ಆದುದರಿಂದ ಏಳು! ಸ್ಥಿರನಾಗಿ ಇರು! ಅರ್ಜುನನ ಮಹಿಮೆಯ ವಿಷಯದಲ್ಲಿ ನಿನಗೆ ಇರುವ ಸಂದೇಹವನ್ನು ಬಿಡು. ಅರ್ಜುನನನ್ನು ಸಂಹರಿಸುವವರೆಗೆ ಇನ್ನೊಬ್ಬರಿಂದ ನನ್ನ ಪಾದ ಪ್ರಕ್ಷಾಲನೆ ಮಾಡಿಸಲಾರೆನು'! ಎಂದು ಹೇಳಿದನು. ಹಾಗೆಯೇ ದುರ್ಯೋಧನನ ತಮ್ಮಂದಿರೂ ಶಕುನಿಯೂ ಪ್ರಾರ್ಥಿಸಲು ಬೇಗನೇ ರಥದಲ್ಲಿ ಕೂತುಕೊಂಡು ಹಸ್ತಿನಾವತಿಗೆ ಹೋದನು.



# ಯಕ್ಷಪ್ರಶ್ನೆ[1]

ಕರ್ಣನು ಕವಚಕುಂಡಲಗಳಿರುವವರೆಗೆ ಅವಧ್ಯನೆಂದು ತಿಳಿದು ಇಂದ್ರದೇವರು ಕವಚಕುಂಡಲಗಳನ್ನು ಕರ್ಣನಿಂದ ಬ್ರಾಹ್ಮಣರೂಪದಿಂದ ತೆಗೆದುಕೊಳ್ಳಬೇಕೆಂದು ಇಚ್ಛಿಸಿದರು. ಅದನ್ನು ತಿಳಿದು ಸೂರ್ಯದೇವರು ಕರ್ಣನಿಗೆ ಸ್ವಪ್ನದಲ್ಲಿ ಕಾಣಿಸಿಕೊಂಡು ಎಲ್ಲವನ್ನೂ ತಿಳಿಸಿ ಕೊಡಬೇಡವೆಂದು ಹೇಳಿದರು. ಕರ್ಣನು ನಾನು ಸರ್ವಥಾ ಕೊಡುವೆನೆಂದು ಹೇಳಿದನು. ಹಾಗಾದರೆ ಉತ್ತಮವಾದ ಒಂದು ಆಯುಧವನ್ನು ಇಂದ್ರದೇವರಿಂದ ಪಡೆಯು ಎಂದು ಸೂರ್ಯದೇವರು ಹೇಳಿದರು. ತರುವಾಯ ಬ್ರಾಹ್ಮಣರೂಪದಿಂದ ಬಂದ ಇಂದ್ರದೇವರಿಗೆ ಕವಚವನ್ನು ಕುಂಡಲ ಗಳನ್ನು ಕಿತ್ತಿ ತೆಗೆದುಕೊಟ್ಟನು. ಅಮೋಘವಾದ ಒಂದು ಶಕ್ತಿಯೆಂಬ ಆಯುಧವನ್ನು ಅವರಿಂದ ಪಡೆದನು. (ಅರ್ಜುನನಿಂದ ಇತರನಾದ)ಒಬ್ಬ ವೀರನನ್ನು ಮಾತ್ರ ಇದರಿಂದ ಸಂಹರಿಸುವಿ ಎಂದು ಆ ಶಕ್ತಿಯನ್ನು ಕೊಟ್ಟು ಇಂದ್ರದೇವರು ಕವಚಕುಂಡಲಗಳನ್ನು ಹಿಡಿದುಕೊಂಡು ಹೋದರು.

ಪಾಂಡವರು ದುರ್ಯೋಧನನನ್ನು ಚಿತ್ರಸೇನನಿಂದ ಬಿಡಿಸಿದ ಮೇಲೆ ವನದಲ್ಲಿಯೇ ಸಂತೋಷದಿಂದ ವಾಸಮಾಡುತ್ತಿದ್ದರು. ಒಬ್ಬ ಬ್ರಾಹ್ಮಣನ ಅಗ್ನಿಮಥನ ಮಾಡುವ ಅರಣಿಗಳನ್ನು (ಕಟ್ಟಿಗೆಯ ತುಂಡುಗಳನ್ನು) ಪಾತ್ರೆಯನ್ನು ಮೃಗವೊಂದು ಅಪಹರಿಸಿಕೊಂಡು ಹೋದದ್ದನ್ನು ಕೇಳಿ ಆ ಮೃಗವನ್ನು ಅಟ್ಟಿಸಿಕೊಂಡು ಹೋದರು. ಮೃಗವು ಕಣ್ಣಿಗೆ ಕಾಣಿಸದಾಯಿತು. ಪಾಂಡವರಿಗೆ ತುಂಬಾ ನೀರಡಿಕೆಯಾಯಿತು. ತರುವಾಯ ಧರ್ಮರಾಜನೊಬ್ಬನನ್ನು ಬಿಟ್ಟು ಒಬ್ಬೊಬ್ಬರೇ ನೀರು ಕುಡಿಯುವುದಕ್ಕಾಗಿ ಒಂದು ಸರೋವರಕ್ಕೆ ಹೋದರು. ಅಲ್ಲಿ ಯಮದೇವರು ಮರೆಯಾಗಿದ್ದುಕೊಂಡು ತಾನು ಕೇಳುವ ಪ್ರಶ್ನೆಗಳಿಗೆ ಉತ್ತರವನ್ನು ಕೊಡದೆ ನೀರನ್ನು ಕುಡಿಯಬಾರದೆಂದರು. ಆದರೆ ಅವರು ಕ್ಷತ್ರಿಯಧರ್ಮವು ವಿದ್ಯೆಯಿಂದ ಬದುಕಬಾರದು ಎಂದು ಇದ್ದದ್ದರಿಂದ ಕ್ಷತ್ರಿಯಧರ್ಮವನ್ನು ರಕ್ಷಿಸುವುದಕ್ಕಾಗಿ ಪ್ರಶ್ನೆಗಳಿಗೆ ಉತ್ತರವನ್ನು ಕೊಡಲಿಲ್ಲ. ಬಲಾತ್ಕಾರದಿಂದಲೇ ನೀರನ್ನು ಕುಡಿದರು. ಆದರಿಂದ ಅವರು ಯಮದೇವರ ಸಾಮರ್ಥ್ಯದಿಂದ ಅಲ್ಲಿಯೇ ಮಲಗಿದರು. ದೇವತೆಗಳು ಮನುಷ್ಯರಾಗಿ ಹುಟ್ಟಿದಾಗ ಅತ್ಯಂತ ಬಲಿಷ್ಠರಾಗಿದ್ದರೂ ಭಗವಂತನನ್ನು ಹೊರತು ಎಲ್ಲರೂ ಮನುಷ್ಯಸ್ವಭಾವದಿಂದಲೇ ಯುಕ್ತರಾಗಿರುವರು. ಯಾವು ದಾದರೂ ಕಾರ್ಯವಾಗಬೇಕಾದಾಗ ಕ್ರಮದಿಂದ ಗುಣಗಳು ಅಭಿವ್ಯಕ್ತವಾಗುವುವು.

---

1. ಮ.ತಾ.ನಿ. ಅ-22

ಆದುದರಿಂದ ಭೀಮಸೇನದೇವರೂ ಅರ್ಜುನನೂ ಯಮದೇವರಿಂದ ಅತಿ ಅಧಿಕವಾದ ಬಲವುಳ್ಳವರಾದರೂ ಯಮದೇವರು ಅವರನ್ನು ದೇವತಾಸಾಮರ್ಥ್ಯದಿಂದ ಒಂದೇ ಕ್ಷಣದಲ್ಲಿ ಮಲಗಿಸಿದರು. ಆದರೆ ಆ ದೇವತಾಸಾಮರ್ಥ್ಯವು ಒಂದು ಮುಹೂರ್ತ ಸಮಯ ಮಾತ್ರ ಮಲಗಿಸಲಿಕ್ಕೆ ಶಕ್ತವಾದದ್ದು. ಆಮೇಲೆ ಅವರು ಎದ್ದಮೇಲೆ ಯಮದೇವರು ಅವರ ಸಾಮರ್ಥ್ಯದ ನೂರನೇ ಒಂದು ಅಂಶವನ್ನು ಹೊಂದಲಾರರು. ಈ ವಿಷಯವು ಪದ್ಮಪುರಾಣದಲ್ಲಿ ಚೆನ್ನಾಗಿ ಹೇಳಲ್ಪಟ್ಟಿದೆ. ಆದುದರಿಂದ ಭೀಮಸೇನದೇವರೂ ಅರ್ಜುನನೂ ಯಮದೇವರ ಸಾಮರ್ಥ್ಯದಿಂದ ಮಲಗಿದರೆಂದು ಅವರಿಗೆ ಯಮದೇವರಿಗಿಂತ ಕಡಿಮೆ ಸಾಮರ್ಥ್ಯವೆಂದು ಎಷ್ಟು ಮಾತ್ರಕ್ಕೂ ತಿಳಿಯಬಾರದು.

ತರುವಾಯ ಧರ್ಮರಾಜನೇ ಸರೋವರದ ಬಳಿಗೆ ಹೋದನು. ಅಲ್ಲಿ ಮೂರ್ಛಿತರಾಗಿ ಮಲಗಿದ್ದ ತಮ್ಮಂದಿರನ್ನು ನೋಡಿ ತುಂಬಾ ದುಃಖಿತನಾದನು. ಅವನೂ ನೀರನ್ನು ಕುಡಿಯಲಿಕ್ಕೆ ಹೋಗಲು ಕೊಕ್ಕರೆಯ ರೂಪವುಳ್ಳ ಯಮದೇವರು ತಾನು ಕೇಳುವ [1]ಪ್ರಶ್ನೆಗಳಿಗೆ ಉತ್ತರವನ್ನು ಕೊಡದೆ ನೀರನ್ನು ಕುಡಿಯಬಾರದೆಂದರು. ಆಗ ಕೃಪಾಶೀಲವಾದ ಧರ್ಮರಾಜನು ತಮ್ಮಂದಿರಿಗಾಗಿ ಪ್ರಶ್ನೆಗಳಿಗೆ ಪ್ರತ್ಯುತ್ತರಗಳನ್ನು ಕೊಡಲಿಕ್ಕೆ ಇಚ್ಛಿಸಿದನು. ತರುವಾಯ ಯಮದೇವರು ಯಕ್ಷರೂಪವನ್ನು ಧರಿಸಿದವರಾಗಿ ಪ್ರಶ್ನೆಗಳನ್ನು ಕೇಳಿದರು. ಧರ್ಮರಾಜನು ಅವುಗಳಿಗೆಲ್ಲಾ ಉತ್ತರವನ್ನು ಕೊಟ್ಟನು.

ತರುವಾಯ ಯಮದೇವರು ಸಂತುಷ್ಟರಾಗಿ 'ತಮ್ಮಂದಿರಲ್ಲಿ ಒಬ್ಬನನ್ನು ಎಬ್ಬಿಸುವೆನು. ಯಾರನ್ನು ಎಬ್ಬಿಸಲಿ?' ಎಂದು ಹೇಳಿದರು. ಅದಕ್ಕೆ ಧರ್ಮರಾಜನು 'ಒಬ್ಬನನ್ನು ಎಬ್ಬಿಸುವುದಾದರೆ ನಕುಲನನ್ನು ಎಬ್ಬಿಸಬೇಕು' ಎಂದು ಹೇಳಿದನು. ಆಗ ಯಮದೇವರು ಸಂತೋಷವುಳ್ಳವರಾದರು. 'ನಿನಗೆ ಭೀಮಸೇನನಲ್ಲಿ ಅತಿಪ್ರೀತಿಯಿರುವುದು. ಅವನು ಮಹಾಬಲಿಷ್ಠನು. ನಿನಗೆ ರಾಜ್ಯಪ್ರಾಪ್ತಿಗೂ ಕಾರಣನಾದವನು. ಅವನನ್ನು ಬಿಟ್ಟು ನಕುಲನನ್ನು ಎಬ್ಬಿಸಲಿಕ್ಕೆ ಯಾಕೆ ಹೇಳಿದಿ?' ಎಂದು ಕೇಳಿದರು. ಧರ್ಮರಾಜನು 'ನಮ್ಮ ತಂದೆಗೆ ಇಬ್ಬರು ಹೆಂಡತಿಯರು. ಅವರಲ್ಲಿ ಕುಂತೀದೇವಿಯರ ಮಗನು ನಾನು ಬದುಕಿರುವೆನು. ಆದರಿಂದ ಇನ್ನೊಬ್ಬನಾದರೆ ಮಾದ್ರೀಪುತ್ರನೇ ಬದುಕಬೇಕು. ಅವನನ್ನೇ ಎಬ್ಬಿಸಬೇಕಲ್ಲದೆ

---

1. ಧರ್ಮರಾಜನು ಯಕ್ಷನ ಪ್ರಶ್ನೆಗಳಿಗೆ ಉತ್ತರ ಕೊಟ್ಟಿದ್ದಾನೆ. ಅವೆಲ್ಲವೂ ಅಧ್ಯಾತ್ಮ ಹಾಗೂ ನಿತ್ಯಜೀವನದ ಅನೇಕ ತತ್ತ್ವ ನೀತಿ, ಆದರ್ಶಗಳಿಗೆ ಸಂಬಂಧಿಸಿವೆ. ವ.ಪ.ಅ-313(ಗೀ.ಪ್ರೆ.)

ಕುಂತೀದೇವಿಯ ಮಗನನ್ನು ಎಬ್ಬಿಸುವುದು ಸರಿಯಲ್ಲ' ಎಂದನು. ಈರೀತಿಯಾಗಿ ಹೇಳಿದ ಧರ್ಮರಾಜನ ಮಾತನ್ನು ಕೇಳಿ ಯಮದೇವರು ಅತ್ಯಂತ ಪ್ರೀತಿಯುಳ್ಳವರಾಗಿ ಎಲ್ಲರನ್ನೂ ಎಬ್ಬಿಸಿದನು. ಅಜ್ಞಾತವಾಸಕ್ಕಾಗಿ ಎಲ್ಲರಿಗೂ ಇಚ್ಛಾನುಸಾರವಾಗಿ ರೂಪಬರುವಂತೆಯೂ ಆಮೇಲೆ ಇಚ್ಛಾನುಸಾರವಾಗಿ ನಿಜರೂಪವನ್ನು ಹೊಂದುವಂತೆಯೂ ಅಜ್ಞಾತವಾಸದಲ್ಲಿ ಒಬ್ಬರೂ ಕಂಡುಹಿಡಿಯದಂತೆಯೂ ವರವನ್ನು ಕೊಟ್ಟರು. ಈರೀತಿಯಾಗಿ ಯಮದೇವರು ತನ್ನ ಸ್ವರೂಪನಾದ ಧರ್ಮರಾಜನೊಡನೆ ಕ್ರೀಡಾಮಾಡುವವರಾಗಿ ತನ್ನ ರೂಪವಾದ ಧರ್ಮರಾಜನಿಗೆ ಕೀರ್ತಿಯನ್ನೂ ಧರ್ಮವನ್ನೂ ಹೆಚ್ಚಿಸುವವರಾದರು. ಯಮದೇವರು ತನ್ನ ಸ್ವರೂಪಭೂತನಾದ ಧರ್ಮರಾಜನಿಗೆ ಕೀರ್ತಿಯೂ ಧರ್ಮವೂ ಹೆಚ್ಚುವುದಕ್ಕಾಗಿ ತಾನೇ ಮೃಗರೂಪದಿಂದ ಅರಣಿಯನ್ನು ಅಪಹರಿಸಿ ಆಮೇಲೆ ಬ್ರಾಹ್ಮಣನಿಗೆ ಕೊಡುವುದಕ್ಕಾಗಿ ಅರಣಿಯನ್ನು ಕೊಟ್ಟು ಸ್ವರ್ಗಲೋಕಕ್ಕೆ ಹೋದರು. ತರುವಾಯ ಧರ್ಮರಾಜನೂ ಭೀಮಾರ್ಜುನರೂ ನಕುಲ ಸಹದೇವರೂ ಅರಣಿಯನ್ನು ಬ್ರಾಹ್ಮಣನಿಗೆ ಕೊಟ್ಟು ದ್ರೌಪದೀದೇವಿಯರಿಂದ ಕೂಡಿಕೊಂಡು ಸಂತೋಷದಿಂದ ಭಗವಂತನನ್ನು ಸ್ತೋತ್ರ ಮಾಡುತ್ತಾ ಇದ್ದರು.



# ವಿರಾಟಪರ್ವ

## ಪಾಂಡವರು ವಿರಾಟನಗರಕ್ಕೆ ಹೋದುದು [1]

ಪಾಂಡವರು ನಾರಾಯಣನ ಪರಮಾನುಗ್ರಹದಿಂದ ಹನ್ನೆರಡುವರ್ಷ ವನದಲ್ಲಿ ವಾಸವನ್ನು ಮಾಡಿ ಧೌಮ್ಯಾಚಾರ್ಯರನ್ನು ಎಲ್ಲಾ ಬ್ರಾಹ್ಮಣರನ್ನೂ ಕಳುಹಿಸಿ ಅಜ್ಞಾತವಾಸವನ್ನು ಮಾಡಲಿಕ್ಕೆ ಮನಸ್ಸು [2]ಧರಿಸಿದರು. ವಿರಾಟನಗರಕ್ಕೆ ಹೋಗಿ ಆಯುಧಗಳನ್ನು ಒಂದು ಶಮೀವೃಕ್ಷದಲ್ಲಿ ಇಟ್ಟು ವೇಷಾಂತರವನ್ನು ಧರಿಸಿದರು. ಧರ್ಮರಾಜನು ಯತಿ ವೇಷವನ್ನು ಧರಿಸಿದನು. ಭೀಮಸೇನದೇವರು ಅಡಿಗೆ ಮಾಡುವವನ ವೇಷವನ್ನು ಧರಿಸಿದರು. ಅರ್ಜುನನು ನಪುಂಸಕವೇಷವನ್ನೂ ನಕುಲನು ಸೂತನ ವೇಷವನ್ನೂ, ಸಹದೇವನು ಗೋಪಾಲನ ವೇಷವನ್ನು ದ್ರೌಪದೀದೇವಿಯರು ಸೈರಂಧ್ರಿಯ ವೇಷವನ್ನೂ ಧರಿಸಿದರು.

1. ಮ.ತಾ.ನಿ. ಅ-23 2. ಮಾಡಿದರು.

ಗೃಹಸ್ಥಾಶ್ರಮವನ್ನು ಹೊಂದಿರುವ ಕ್ಷತ್ರಿಯನಿಗೆ ಸಂಬಂಧವಿಶೇಷವನ್ನು ಫಲವಿಶೇಷವನ್ನು ಹೊರತು ಇನ್ನೊಬ್ಬರು ಮಾಡಿ ಅಡಿಗೆಯನ್ನು ಊಟ ಮಾಡುವುದು ಅನೇಕ ಧರ್ಮವಲ್ಲ. ಸಂಬಂಧವಿಶೇಷದಿಂದ ಅಂದರೆ ಬಂಧುಗಳ ಮನೆಯಲ್ಲಿ ಊಟಮಾಡಬಹುದು. ಉತ್ತಮರಾದ ಬ್ರಾಹ್ಮಣರ ಮನೆಯಲ್ಲಿ ಭೋಜನ ಮಾಡಿದರೆ ಪುಣ್ಯವಿಶೇಷವು ಉಂಟಾಗುವ ಭೋಜನ ಮಾಡಬಹುದು. ಈ ಎರಡು ಕಾರಣಗಳಿಲ್ಲದೆ ಗೃಹಸ್ಥಾಶ್ರಮಿಯಾದ ಕ್ಷತ್ರಿಯನು ಇನ್ನೊಬ್ಬರ ಅಡಿಗೆಯನ್ನು ಭೋಜನ ಮಾಡುವುದು ಪ್ರಶಸ್ತವಲ್ಲ. ಕ್ಷತ್ರಿಯರಾದರೂ ಬ್ರಹ್ಮಚಾರಿಗಳಾಗಿದ್ದರೆ ಭಿಕ್ಷಾನ್ನವು ವಿಹಿತವಾದ ಕಾರಣ ನಿಷಿದ್ಧವಲ್ಲ. ಬ್ರಾಹ್ಮಣರಿಗೆ ಶ್ರಾದ್ಧಾದಿಗಳಲ್ಲಿ ಭೋಜನವು ವಿಹಿತವಾದ ಕಾರಣ ಅವರಿಗೂ ಪರಪಾಕವು ಅಷ್ಟು ನಿಷಿದ್ಧವಲ್ಲ. ಈ ಕಾರಣದಿಂದ ಶುದ್ಧಭಾಗವತ ಧರ್ಮವನ್ನು ಅನುಸರಿಸುವ ಭೀಮಸೇನದೇವರು ಅಡಿಗೆ ಮಾಡುವವರ ವೇಷವನ್ನು ಧರಿಸಿದರು ಮತ್ತು ವೈದಿಕವ್ಯವಹಾರಗಳಲ್ಲಿ ತಾನು ಮಾತಾಡಲಿಕ್ಕೆ ಹೋದರೆ ಜ್ಞಾನಾಧಿಕ್ಯದಿಂದ ತನ್ನನ್ನು ಭೀಮನೆಂದು ತಿಳಿಯುವ ರೆಂದೂ ಅಡಿಗೆಯವೇಷವನ್ನು ಧರಿಸಿದರು.

ಶಾಪದಿಂದಲೇ ಅರ್ಜುನನು ನಪುಂಸಕವೇಷವನ್ನು ಧರಿಸಿದನು. ಕ್ಷತ್ರಿಯ ಜಾತಿಯ ಅನಂತರದ ಜಾತಿಯು ಸೂತಜಾತಿಯಾದ ಕಾರಣ ನಕುಲನು ಸೂತನ ವೇಷವನ್ನು ಧರಿಸಿದನು. ಆಮೇಲಿನ ಜಾತಿಯು ವೈಶ್ಯಜಾತಿಯಾದ ಕಾರಣ ವೈಶ್ಯ ಜಾತಿಯಲ್ಲಿಯೂ ಶ್ರೇಷ್ಠನಾದ ಗೋಪಾಲನಾಗಿ ಸಹದೇವನಾದನು. ಎಲ್ಲರಿಂದಲೂ ಯತಿಯು ಪೂಜ್ಯನಾದ ಕಾರಣ ಧರ್ಮರಾಜನು ಶೂದ್ರಸ್ತ್ರೀಯವೇಷವನ್ನು ಧರಿಸಿದರು. ಧರ್ಮರಾಜನು ಕಂಕನೆಂಬ ಹೆಸರನ್ನು, ಭೀಮಸೇನದೇವರು ವಲಲ ಎಂಬ ಹೆಸರನ್ನು, ಅರ್ಜುನನು ಬೃಹನ್ನಳೆಯೆಂಬ ಹೆಸರನ್ನು, ನಕುಲನು ರಾಮಗ್ರಂಥಿ ಯೆಂಬ ಹೆಸರನ್ನೂ, ಸಹದೇವನು ತಂತ್ರಿಪಾಲನೆಂಬ ಹೆಸರನ್ನು ಧರಿಸಿದರು.

ಸ್ವಲ್ಪದಿವಸವಾದ ಮೇಲೆ ರುದ್ರದೇವರ ವರದಿಂದ ಭೂಮಂಡಲದಲ್ಲಿಯೇ ಪರಾಜಯ ರಹಿತನಾದ ಜೀಮೂತ ಎಂದು ಹೆಸರುಳ್ಳ ಮಲ್ಲನು ವಿರಾಟನಗರಕ್ಕೆ ಬಂದನು. ಅವನನ್ನು ನೋಡಿ ವಿರಾಟರಾಜನನ್ನು ಆಶ್ರಯಿಸಿದ್ದ ಎಲ್ಲಾ ಮಲ್ಲರೂ ಭಯದಿಂದ ಓಡಿಹೋದರು. ಆಗ ಯತಿರೂಪಿಯಾದ ಧರ್ಮರಾಜನು ವಿರಾಟರಾಜನೊಡನೆ ಅಡಿಗೆ ಮಾಡುವ ವಲಲನು ಬೇಗನೇ ತನ್ನ ಸಾಮರ್ಥ್ಯದಿಂದ ಈ ಮಲ್ಲನನ್ನು ಕೊಂದು ನಿನಗೆ ಕೀರ್ತಿಯನ್ನು ಹೆಚ್ಚಿಸುವನು ಎಂದು ಹೇಳಿದನು. ಅದನ್ನು ಕೇಳಿ ಭೀಮಸೇನದೇವರನ್ನು ಕೂಗಲು ಅವರು ಬಂದರು. 'ನಾನು

ಭಗವಂತನ ಅನುಗ್ರಹದಿಂದ ಈಗ ಮಲ್ಲನನ್ನು ಜಯಿಸುವೆನು' ಎಂದು ಹೇಳಿದರು. ಆಗ ಸಭಿಕರು ಈ ಮಲ್ಲನಿಗೆ ಮಹಾದೇವನ ಅನುಗ್ರಹವಿದೆಯೆಂದರು. ಆಗ ಭೀಮಸೇನದೇವರು ನನಗೂ ಮಹಾದೇವನ ಅನುಗ್ರಹವಿರುವುದೆಂದರು. ಯುಧಿಷ್ಠಿರನ ರಾಜ್ಯಕಾಲದಲ್ಲಿ ಅವನಿಗೆ ಅಡಿಗೆ ಮಾಡುತ್ತಾ ಬಹುಕಾಲವಿದ್ದೆನು. ಆದರಿಂದ ನನ್ನಲ್ಲಿ ಯುಧಿಷ್ಠಿರನ ಅನುಗ್ರಹವು ನನ್ನಲ್ಲಿ ಇದೆ. ಈಗ ಅನ್ನ ಹಾಕುತ್ತಿರುವ ನಿನ್ನ ಅನುಗ್ರಹವೂ ನನ್ನಲ್ಲಿ ಇದೆ. ಆದುದರಿಂದ ನಾನು ಈ ಮಲ್ಲನನ್ನು ಜಯಿಸುವೆನು' ಎಂದು ಭೀಮಸೇನದೇವರು ಹೇಳಿದರು. ಭೀಮಸೇನದೇವರು ರುದ್ರಾದಿಗಳಿಂದ ಉತ್ತಮರಾದ ಪ್ರಯುಕ್ತ ಅವರಿಗೆ ರುದ್ರಾದಿಗಳ ಅನುಗ್ರಹವು ಬೇಕಾಗಿಲ್ಲ. ಅವರ ಮಾತಿನ ಅಭಿಪ್ರಾಯವೇನೆಂದರೆ ಮಹಾದೇವ ಎಂದರೆ ರುದ್ರದೇವರು ಎಂದು ಅರ್ಥವಲ್ಲ. ಮಹಾದೇವ ಉತ್ತಮದೇವತೆಯೆಂದು ಅರ್ಥ. ಉತ್ತಮದೇವತೆಯು ಪರಮಾತ್ಮನೇ. ಮತ್ತು [2]ಎಲ್ಲಾ ದೇವತೆಗಳ ಹೆಸರೂ ಭಗವಂತನಿಗೆ ಇರುವುದೆಂದು ವೇದದಲ್ಲಿ ಹೇಳಿರುವುದು. ಆದುದರಿಂದಲೂ ಮಹಾದೇವ ಶಬ್ದಕ್ಕೆ ಮುಖ್ಯವಾಗಿ ಪರಮಾತ್ಮನೆಂದು ಹೆಸರು. ಯುಧಿಷ್ಠಿರನಲ್ಲಿ ಯುಧಿಷ್ಠಿರ ಎಂದು ಹೆಸರುಳ್ಳವನೂ ಪರಮಾತ್ಮನೇ. ವಿರಾಟರಾಜನಲ್ಲಿ ನೀನು ಎಂದು ಹೆಸರುಳ್ಳವನೂ ಪರಮಾತ್ಮನೇ. ಆ ಪರಮಾತ್ಮನ ಅನುಗ್ರಹವು ತನ್ನಲ್ಲಿ ಇರುವುದು. ಆದರಿಂದ ತಾನು ಮಲ್ಲನನ್ನು ಜಯಿಸುವೆನು ಎಂದು ಭೀಮಸೇನದೇವರು ಹೇಳಿದರು. ಈಪ್ರಕಾರವಾಗಿ ಹೇಳುತ್ತಾ ಮಲ್ಲನೊಡನೆ ಯುದ್ಧವನ್ನು ಅವನನ್ನು ಸಂಹರಿಸಿದರು.



## ಕೀಚನಕ ಸಂಹಾರವು [1]

ಮಹಾನುಭಾವರಾದ ಪಾಂಡವರು ಹತ್ತು ತಿಂಗಳು ಸುಖವಾಗಿ ಕಳೆದರು. ಇನ್ನು ಎರಡು ತಿಂಗಳು ಅಜ್ಞಾತವಾಸವು ಉಳಿದಿತ್ತು. ಆ ಸಮಯದಲ್ಲಿ ವಿರಾಟರಾಜನ ಭಾವನಾದ ಮಹಾಬಲಿಷ್ಠನಾದ ಕೀಚಕನು ದಿಗ್ವಿಜಯಕ್ಕೆ ಹೋದವನು ಎಲ್ಲಾ ದಿಕ್ಕನ್ನೂ ಜಯಿಸಿ ವಿರಾಟನಗರಕ್ಕೆ ಬಂದು ಸೇರಿದನು. ಅವನು ದ್ರೌಪದೀ ದೇವಿಯರನ್ನು ನೋಡಿ ಮೋಹಾಕ್ರಾಂತನಾದನು. ದ್ರೌಪದೀದೇವಿಯರ ಬಳಿಗೆ

---

1. ಮ.ತಾ.ನಿ. ಅ-23

2. ಯೋ ದೇವಾನಾಂ ನಾಮಧಾ ಏಕ ಏವ । ಶ್ರುತಿ 'ಭಗವಂತನು ಸರ್ವಶಬ್ದ ವಾಚ್ಯನಾದ್ದರಿಂದ'

ಹೋಗಿ ಪ್ರಾರ್ಥಿಸಿದನು. ಅವರಿಂದ ತಿರಸ್ಕೃತನಾದನು. ಹೀಗೆ ಆಮೇಲೆ ಒಂದು ತಿಂಗಳಾಯಿತು. ಕೊನೆಗೆ ತನ್ನ ಸಹೋದರಿಯಾದ ಸುದೇಷ್ಣೆಯೊಡನೆ ಪ್ರಾರ್ಥಿಸಿದನು. ಆಗ ಅವಳು ನಿಷೇಧಿಸಿದಳು. ಆದರೂ ಕೀಚಕನೂ ಕೇಳದೆ ಪುನಃ ಪುನಃ ಸುದೇಷ್ಣೆಯೊಡನೆ ಪ್ರಾರ್ಥಿಸಿದನು. ಕೊನೆಗೆ ಸುದೇಷ್ಣೆಯು ದ್ರೌಪದೀ ದೇವಿಯರೊಡನೆ 'ಕೀಚಕನ ಮನೆಗೆ ಹೋಗಿ ನನಗಾಗಿ ಮದ್ಯವನ್ನು ತೆಗೆದುಕೊಂಡು ಬಾ' ಎಂದಳು. ದ್ರೌಪದೀದೇವಿಯರು ಲೋಕರೀತಿಯಿಂದ ಭಯವುಳ್ಳವರಂತೆ ನನ್ನಿಂದ ಆಗಲಾರದು ಎಂದು ಕಾರಣವನ್ನು ತಿಳಿಸಿ ಹೇಳಿದರು.

ಆದರೆ ಸುದೇಷ್ಣೆಯು ಕೇಳಲಿಲ್ಲ. ನೀನೇ ಹೋಗಿ ತರಲೇಬೇಕೆಂದು ಬಲಾತ್ಕಾರವನ್ನು ಮಾಡಿದಳು. ದ್ರೌಪದೀದೇವಿಯರು ಬಲಾತ್ಕಾರದಿಂದ ಕಳುಹಿಸಲ್ಪಟ್ಟವರಾಗಿ ಕೀಚಕನ ಮನೆಗೆ ಹೋದರು. ಆಗ ಕೀಚಕನು ಬಂದು ಅವರ ಕೈಯಲ್ಲಿ ಹಿಡಿದನು. [1]ದ್ರೌಪದೀದೇವಿಯರು ಅವನನ್ನು ತಳ್ಳಿ ಸೂರ್ಯನಲ್ಲಿ ಅಂತರ್ಯಾಮಿಯಾದ ಭಗವಂತನನ್ನು ಸ್ಮರಿಸುತ್ತಾ ಸಭೆಗೆ ಓಡಿದರು. ಆಗ ಕೀಚಕನು ಅವರ ಹಿಂದೆಯೇ ಓಡಿಬಂದು ಹಿಡಿದು ಕೆಳಗೆ ಬೀಳಿಸಿ ಕಾಲಿನಿಂದ ಒದೆದನು. ಆಗ ಸೂರ್ಯನಲ್ಲಿ ಅಂತರ್ಯಾಮಿಯಾದ ಪರಮಾತ್ಮನು ಹೇತಿಯೆಂಬ ರಾಕ್ಷಸನನ್ನು ಕಳುಹಿಸಿದನು. ಆ ರಾಕ್ಷಸನು ಮರೆಯಾಗಿ ಬಂದನು. ವಾಯುದೇವರು ಆ ರಾಕ್ಷಸನಲ್ಲಿ ಪ್ರವೇಶಿಸಿ ಕೀಚಕನನ್ನು ಕೆಳಗೆ ಬೀಳಿಸಿದರು. ಆಗ ಭೀಮಸೇನದೇವರು ದ್ರೌಪದೀದೇವಿಯರು ಕೀಚಕನು [2]ಒದೆದನ್ನು ನೋಡಿ ಕೋಪದಿಂದ ಮರವನ್ನು ನೋಡಿದರು. ಆಗ ಧರ್ಮರಾಜನು ಸಂಜ್ಞೆಯಿಂದ ಬೇಡವೆಂದನು.

ರಾತ್ರಿಕಾಲದಲ್ಲಿ ದ್ರೌಪದೀದೇವಿಯರು ಭೀಮಸೇನದೇವರ ಸಮೀಪಕ್ಕೆ ಬಂದು ಪಾಪಿಯಾದ ಕೀಚಕನನ್ನು ಸಂಹರಿಸಬೇಕೆಂದು ಪ್ರೇರಿಸಿದರು. ಆಮೇಲೆ ಭೀಮಸೇನದೇವರ ಮಾತಿನಿಂದ ಒಬ್ಬರೂ ಇಲ್ಲದಿರುವ ಮನೆಗೆ ರಾತ್ರಿಯಲ್ಲಿ ಬರಲಿಕ್ಕೆ ಕೀಚಕನಿಗೆ ಹೇಳಿದರು. ಅಲ್ಲಿಗೆ ಭೀಮಸೇನದೇವರು ಹೋಗಿ ಬಾಹುಯುದ್ಧದಲ್ಲಿ ಅವನನ್ನು ಸಂಹರಿಸಿ ತಲೆಯನ್ನೂ ಕೈಕಾಲುಗಳನ್ನೂ ಗುದ್ದಿ ಗುದದ್ವಾರದಿಂದ ಹೊಟ್ಟೆಯೊಳಗೆ ಮಾಡಿದರು. ಅವಧ್ಯನಾದ ಕೀಚಕನು ಮೃತನಾದದ್ದನ್ನು ನೋಡಿ ಅವನ ಉಪಕೀಚಕರೆಂದು ಹೆಸರುಳ್ಳ ನೂರಐದು ತಮ್ಮಂದಿರು ಅವನೊಡನೆ ದ್ರೌಪದೀದೇವಿಯರನ್ನು ಸುಡಬೇಕೆಂದು ಅವನ ಹೆಣದೊಡನೆ ಅವರನ್ನು ಕಟ್ಟಿ ಸ್ಮಶಾನಕ್ಕೆ ತೆಗೆದುಕೊಂಡು ಹೋದರು. ಅವರು

1. ದ್ರೌಪದೀದೇವಿಯರನ್ನು 2. ಒದೆದುದನ್ನು

ತೆಗೆದುಕೊಂಡು ಹೋಗುವಾಗ ದ್ರೌಪದೀದೇವಿಯರು ಕೂಗಿದರು. ಅದನ್ನು ಕೇಳಿ ಭೀಮಸೇನದೇವರು ಒಂದು ದೊಡ್ಡ ಮರವನ್ನು ಕಿತ್ತಿ ಅದರಿಂದ ನೂರಐದು ಉಪಕೀಚಕರನ್ನು ಸಂಹರಿಸಿ ದ್ರೌಪದೀದೇವಿಯರನ್ನು ಕರೆದುಕೊಂಡು ಬಂದರು. ನೂರಐದು ಉಪಕೀಚಕರೂ ಪ್ರಧಾನಕೀಚಕನೂ ಒಟ್ಟಿಗೆ ನೂರ ಆರು ಜನರೂ ತಪಸ್ಸನ್ನೂ ಮಾಡಿ ರುದ್ರದೇವರಿಂದ ಅವಧ್ಯತ್ವರವನ್ನು ಪಡೆದವರು ಭೀಮಸೇನ ದೇವರಿಂದ ಸಂಹೃತರಾದರು. ಗಂಧರ್ವನು ಸಂಹರಿಸಿದನು ಎಂದು ಪ್ರಸಿದ್ಧಿಯನ್ನು ಉಂಟುಮಾಡಿ ಅವರನ್ನು ಸಂಹರಿಸಿ ಭೀಮಸೇನದೇವರು ಸಂತೋಷವನ್ನು ಹೊಂದಿದರು. ದ್ರೌಪದೀದೇವಿಯರೂ ಸಂತೋಷವನ್ನು ಹೊಂದಿದರು.

ತರುವಾಯ ವಿರಾಟರಾಯನ ಹೆಂಡತಿಯಾದ ಸುದೇಷ್ಣೆಯನ್ನು ದ್ರೌಪದೀದೇವಿಯರನ್ನು ಭಯದಿಂದ ಮನೆಯನ್ನು ಬಿಟ್ಟು ಹೋಗಬೇಕೆಂದು ಹೇಳಿದಳು. ದ್ರೌಪದೀದೇವಿಯರು ಹದಿಮೂರು ದಿವಸಗಳವರೆಗೆ ರಕ್ಷಿಸಿಕೊಂಡು ಇರಬೇಕೆಂದು ಕೇಳಿದರು. ಆಗ ಸುದೇಷ್ಣೆಯು ಭಯದಿಂದ ಹಾಗೆಯೇ ಆಗಲಿ ಎಂದು ಒಪ್ಪಿಕೊಂಡಳು. ತರುವಾಯ ಪಾಂಡವರು ಸಂಪೂರ್ಣ ಒಂದು ವರ್ಷವು ಮುಗಿಯುವವರೆಗೆ ವಿರಾಟನಗರದಲ್ಲಿಯೇ ವಾಸಮಾಡಿದರು. ತರುವಾಯ ದುರ್ಯೋಧನನು ಬಂದು ವಿರಾಟರಾಜನ ಗೋವುಗಳನ್ನು ಅಪಹರಿಸಲು ಅರ್ಜುನನು ಉತ್ತರನಿಗೆ ಸಾರಥಿಗೆ ಹೋಗಿ, ಕೊನೆಗೆ ಅವನನ್ನೇ ಸಾರಥಿಯನ್ನಾಗಿ ಮಾಡಿ ತಾನೇ ಯುದ್ಧಮಾಡಿ ಎಲ್ಲರನ್ನೂ ಜಯಿಸಿ ಗೋವುಗಳನ್ನು ಬಿಡಿಸಿಕೊಂಡು ಬಂದನು. ಕೌರವರು ಅರ್ಜುನನನ್ನು ನೋಡಿದ ಸಮಯ ಚಾಂದ್ರಮಾನರೀತ್ಯಾ ಒಂದು ವರ್ಷ ಸಂಪೂರ್ಣವಾಯಿತು.[1] ಸೌರಮಾನ ರೀತಿಯಾಗಿ ಸಂಪೂರ್ಣ ವಾಗಿಲ್ಲವೆಂದು ಕೌರವರು ರಾಜ್ಯವನ್ನು ಕೊಡಲಾರೆವೆಂದು ಹೇಳಿದರು. ತರುವಾಯ ವಿರಾಟನಗರದಲ್ಲಿ ಅಭಿಮನ್ಯುವಿಗೆ ವಿರಾಟರಾಜನ ಮಗಳಾದ ಉತ್ತರೆಯನ್ನು ಕೊಟ್ಟು ವಿವಾಹವಾಯಿತು. ಪಾಂಡವರು ಬ್ರಾಹ್ಮಣರಿಂದ ತಾವು ಹೇಳಿದ ಸಮಯವು ಸಂಪೂರ್ಣವಾಯಿತೆಂದು ಸ್ಥಾಪನೆ ಮಾಡುವವರಾಗಿ ಕೃಷ್ಣಪರಮಾತ್ಮನಿಂದಲೂ ಸಮಸ್ತಯಾದವರಿಂದಲೂ ಪಾಂಚಾಲದೇವರಿಂದಲೂ ಸಹಿತರಾಗಿ ಪತ್ನಿಯರಿಂದ ಸಹಿತರಾಗಿ ಉಪಪ್ಲಾವ್ಯ ನಗರದಲ್ಲಿ ಕೆಲವು ದಿನಗಳವರೆಗೆ ವಾಸ ಮಾಡಿದರು.



1. ಸಂಪೂರ್ಣವಾಗಿತ್ತು.

# ಉದ್ಯೋಗ ಪರ್ವ

## ದ್ರುಪದರಾಜನ ಪುರೋಹಿತರನ್ನು ಸಂಧಿಗಾಗಿ ಕಳುಹಿಸಿದ್ದು[1]

ದ್ರುಪದರಾಜನು ಯೋಚನೆಮಾಡಿ ಕೃಷ್ಣಪರಮಾತ್ಮನ ಅನುಮತಿಯಿಂದ ತನ್ನ ಪುರೋಹಿತರನ್ನು ರಾಜಿಗಾಗಿ ಧೃತರಾಷ್ಟ್ರನ ಬಳಿಗೆ ಕಳುಹಿಸಿದನು. ಪುರೋಹಿತರು ಭೀಷ್ಮದ್ರೋಣಾದಿಗಳಿಂದ ಸಹಿತನಾದ ಧೃತರಾಷ್ಟ್ರನ ಬಳಿಗೆ ಹೋಗಿ 'ನೀನು ಧರ್ಮರಾಜನೊಡನೆ ವಿರೋಧವನ್ನು ಮಾಡುವುದು ಸರಿಯಲ್ಲ. ಧರ್ಮರಾಜನ ಪಕ್ಷದಲ್ಲಿ ಭೀಮಾರ್ಜುನರು ಯುದ್ಧ ಮಾಡುವವರಿರುವರು. ಅವನಿಗೆ ಶ್ರೀಕೃಷ್ಣಪರಮಾತ್ಮನು ನಿಯಾಮಕನಾಗಿರುವನು. ಜರಾಸಂಧಾದಿಗಳೆಲ್ಲರೂ ಭೀಮಸೇನದೇವರಿಂದ ಮೃತರಾಗಿರುವುದನ್ನು ಕೇಳಿರುವಿ. ರುದ್ರದೇವರ ವರದಿಂದ ಅವಧ್ಯರಾದ ತೀರ್ಥಸ್ಥಳಗಳಲ್ಲಿ ಜನರಿಗೆ ಉಪದ್ರವನ್ನು ಉಂಟುಮಾಡುತ್ತಿದ್ದ ಮಹಾಪರಾಕ್ರಮಶಾಲಿಗಳಾದ ಮೂರುಕೋಟಿ ರಾಕ್ಷಸರನ್ನು ಸಹೋದರರಿಗೂ ಬ್ರಾಹ್ಮಣರಿಗೂ ಲೋಕಗಳಿಗೂ ಹಿತಮಾಡುವ ಇಚ್ಛೆಯಿಂದ ಭೀಮಸೇನದೇವರು ಸಂಹಾರ ಮಾಡಿರುವರು. ಅದರಿಂದ ಭೂಮಿಯಲ್ಲಿ ತೀರ್ಥಗಳಿಗೆ ಜನರು ಹೋಗುವಂತೆ ಆಯಿತು.

ಜಟಾಸುರನೆಂಬ ರಾಕ್ಷಸನು ಪಾರ್ವತೀದೇವಿಯರ ವರದಿಂದ ಮರಣರಹಿತ ನಾಗಿದ್ದನು. ಅವನು ಬ್ರಾಹ್ಮಣರೂಪವನ್ನು ಧರಿಸಿಕೊಂಡು ಬಂದು ಪಾಂಡವರನ್ನು ವಂಚನೆ ಮಾಡುತ್ತಿದ್ದನು. ಸರ್ವಜ್ಞರಾದ ಭೀಮಸೇನದೇವರು ಇದನ್ನು ತಿಳಿದವ ರಾದರೂ ಬ್ರಾಹ್ಮಣವೇಷವನ್ನು ಧರಿಸಿರುವ ಅವರನ್ನು ಸಂಹರಿಸುವುದು ಉಚಿತ ವಲ್ಲವೆಂದು ಸಂಹರಿಸಲಿಲ್ಲ. ಒಂದು ದಿವಸದಲ್ಲಿ ಭೀಮಸೇನದೇವರು ಮೃಗಬೇಟೆಗೆ ಹೋಗಿರಲು ನಕುಲಸಹದೇವರನ್ನೂ, ಧರ್ಮರಾಜರನ್ನೂ, ದ್ರೌಪದೀ ದೇವಿಯರನ್ನೂ, ಎತ್ತಿಕೊಂಡು ಓಡಿಹೋದನು. ದಾರಿಯಲ್ಲಿ ಭೀಮಸೇನದೇವರು ನೋಡಲು ಅವರನ್ನೆಲ್ಲಾ ಬಿಟ್ಟು ಭೀಮಸೇನದೇವರೊಡನೆ ಯುದ್ಧಮಾಡಿದನು. ಭೀಮಸೇನ ದೇವರು ಯುದ್ಧದಲ್ಲಿ ಅವನನ್ನು ಭೂಮಿಯಲ್ಲಿ ಬೀಳಿಸಿ ಅವನ ತಲೆಯನ್ನು ಕಾಲಿನಿಂದ ಮೆಟ್ಟಿ ನಾಶಮಾಡಿದರು. ಹೀಗಿರುವಾಗ ನಿನ್ನ ಮಕ್ಕಳನ್ನು ಸಂಹರಿಸುವುದು ಏನು ಅಶಕ್ಯವು? ನಿವಾತಕವಚರೂ ಅರ್ಜುನನಿಂದ

---

1. ಮ.ತಾ.ನಿ. ಅ-24

ಸಂಹೃತರಾದದ್ದು ನಿನಗೆ ತಿಳಿದಿರುವುದು ಭಗವಂತನ ಮಹಿಮೆಯನ್ನಂತೂ ತಿಳಿದೇ ಇರುವುದು. ಎಲ್ಲಾ ಜಗತ್ತೂ ಅವನ ಅಧೀನವಾಗಿರುವುದು. ಆದುದರಿಂದ ಇವರಿಂದ ರಕ್ಷಿತನಾದ ಧರ್ಮರಾಜನ ರಾಜ್ಯವನ್ನು ಕೊಟ್ಟು ಬಿಡು' ಎಂದು ಹೇಳಿದರು. ಆದರೆ ಧೃತರಾಷ್ಟ್ರನು ಅವರ ಮಾತನ್ನು ಕೇಳಲಿಲ್ಲ. ಪುರೋಹಿತರು ಹಾಗೆಯೇ ಹಿಂದೆ ಹೋದರು.



## ಕೃಷ್ಣಪರಮಾತ್ಮನು ಸಂಧಿಗೆ ಹೋದದ್ದು [1]

ತರುವಾಯ ಕೃಷ್ಣಪರಮಾತ್ಮನು ಯಾದವರಿಂದ ಸಹಿತನಾಗಿ ದ್ವಾರಕಾಪಟ್ಟಣಕ್ಕೆ ಹೋದನು. ಆ ಭಗವಂತನೊಡನೆ ಯುದ್ಧಕ್ಕೆ ಸಹಾಯಮಾಡಬೇಕೆಂದು ಕೇಳುವುದ ಕ್ಕಾಗಿ ದುರ್ಯೋಧನನೂ ಅರ್ಜುನನೂ ಇಬ್ಬರೂ ಹೋದರು. ದುರ್ಯೋಧನನು ಮೊದಲು ಹೋಗಿ ನಾನು ರಾಜಾಧಿರಾಜನು ಎಂಬ ಅಹಂಕಾರದಿಂದ ದೇವರ ತಲೆಯ ಬಳಿಯಲ್ಲಿ ಕೂತುಕೊಂಡನು. ಸರ್ವಜ್ಞನಾದ ಭಗವಂತನು ಅವರಿಬ್ಬರೂ ಬರುವುದನ್ನು ಮೊದಲೇ ತಿಳಿದು ನಿದ್ದೆಯಿಲ್ಲದಿದ್ದರೂ ನಿದ್ರೆ ಬಂದವನಂತೆ ಮಲಗಿದನು. ಆಮೇಲೆ ಅರ್ಜುನನು ಬಂದವನು ಭಕ್ತಿಯಿಂದ ಅವನಿಗೆ ನಮಸ್ಕರಿಸಿ ಪಾದಗಳ ಬಳಿಯಲ್ಲಿ ಕೈಮುಗಿದುಕೊಂಡು ನಿಂತುಕೊಂಡನು. ತರುವಾಯ ಪರಮಾತ್ಮನು ಎದ್ದು ಅರ್ಜುನನನ್ನು ನೋಡಿದನು. ದುರ್ಯೋಧನನು ಬಂದದ್ದು ತಿಳಿದಿದ್ದರೂ ಭಗವಂತನು 'ಅರ್ಜುನ! ಬರಬೇಕು' ಎಂದು ಹೇಳಿದನು. ಆಗ ದುರ್ಯೋಧನನು 'ನಾನು ಮೊದಲೇ ಬಂದಿರುವೆನು' ಎಂದನು. ಅದಕ್ಕೆ ಪರಮಾತ್ಮನು 'ನೀನೂ ಬರಬೇಕು' ಎಂದು ಹೇಳಿದನು. ಆಮೇಲೆ ಪರಮಾತ್ಮನು ಅವರಿಬ್ಬರೂ ಬಂದ ಕಾರಣವನ್ನು ಕೇಳಿ 'ಒಬ್ಬನು ಮೊದಲು ಬಂದವನು. ಒಬ್ಬನನ್ನು ಮೊದಲು ನೋಡಿದೆನು. ಆದುದರಿಂದ ನಿಮಗಿಬ್ಬರಿಗೂ ಸಮವಾಗಿ ಮಾಡುವೆನು. ಒಬ್ಬನ ಪಕ್ಷದಲ್ಲಿ ಆಯುಧವನ್ನೂ ಧರಿಸದೆ ನಾನು ಇರುವೆನು. ಮತ್ತೊಂದು ಪಕ್ಷದಲ್ಲಿ ಪರಾಕ್ರಮಶಾಲಿಗಳಾದ ಹತ್ತು ಲಕ್ಷ ಮಕ್ಕಳು ಪದಾತಿಗಳಾಗಿ ಯುದ್ಧಕ್ಕೆ ಬರುವರು' ಎಂದು ಹೇಳಿದನು. ಆಗ ಅರ್ಜುನನು ಪರಮಾತ್ಮನಲ್ಲಿ ಭಕ್ತಿಉಳ್ಳವನಾದ ಕಾರಣ ಪರಮಾತ್ಮನೇ ಸಹಾಯಕ್ಕೆ ಬರಬೇಕೆಂದು ದುರ್ಯೋಧನನು ಭಕ್ತಿರಹಿತನಾದ ಕಾರಣ ಯುದ್ಧಮಾಡುವ ದೇವರ ಮಕ್ಕಳಾದ ಗೋಪಾಲರನ್ನು ಕೇಳಿಕೊಂಡನು.

1. ಮ.ತಾ.ನಿ. ಅ-24

ಶ್ರೀಭಗವಂತನು ಪಾಂಡವರಿಗೆ ಸಹಾಯವನ್ನು ಮಾಡುವವನಾದರೂ ದುರ್ಯೋಧನನಿಗೆ ತನ್ನಲ್ಲಿ ಭಕ್ತಿಯಿಲ್ಲವೆಂದು ತಿಳಿಸುವುದಕ್ಕಾಗಿ ಸಮವಾಗಿ ಮಾಡುವಂತೆ ಮಾಡಿದನು. ತರುವಾಯ ಅರ್ಜುನನಿಂದ ಸಹಿತನಾಗಿ ಕೃಷ್ಣಪರಮಾತ್ಮನು ಪಾಂಡವರ ಬಳಿಗೆ ಹೋದನು.

ದುರ್ಯೋಧನನು ಬಲರಾಮದೇವರ ಸಮೀಪಕ್ಕೆ ಸಹಾಯವನ್ನು ಕೇಳಲಿಕ್ಕೆ ಹೋದನು. ಆಗ ಬಲರಾಮದೇವರು ದುರ್ಯೋಧನನಲ್ಲಿ ಸ್ನೇಹವುಳ್ಳವರಾಗಿದ್ದರೂ ಕೃಷ್ಣನ ಭಯದಿಂದ ನಾನು ಸಹಾಯವನ್ನು ಮಾಡಲಾರೆನು ಎಂದರು. ಪೂರ್ವದಲ್ಲಿ ಉಪಪ್ಲಾವ್ಯನಗರದಲ್ಲಿ ಸಭೆಯಲ್ಲಿ ಬಲರಾಮದೇವರು ದುರ್ಯೋಧನನ ಪಕ್ಷವಾಗಿ ಮಾತಾಡಲು ಕೃಷ್ಣಪರಮಾತ್ಮನ ಎದುರಲ್ಲೇ ಸಾತ್ಯಕಿಯು ಅವರನ್ನು ತಿರಸ್ಕರಿಸಿದನು. ಆದಕಾರಣ ದುರ್ಯೋಧನನ ಪಕ್ಷವು ಕೃಷ್ಣಪರಮಾತ್ಮನಿಗೆ ಸಮ್ಮತವಲ್ಲವೆಂದು ತಿಳಿದುಕೊಂಡು ದುರ್ಯೋಧನನ ಸಹಾಯಕ್ಕೆ ಹೋಗಲಿಲ್ಲ. ದುರ್ಯೋಧನನಿಗೆ ಹನ್ನೊಂದು ಅಕ್ಷೌಹಿಣೀ ಸೈನ್ಯವು ಸೇರಿತು. ಪಾಂಡವರಿಗೆ ಏಳು ಅಕ್ಷೌಹಿಣೀಸೈನ್ಯವು ಸೇರಿತು.

ವಿರಾಟ, ದ್ರುಪದ, ಕೈಕಯ, ಧೃಷ್ಟಕೇತು, ಜರಾಸಂಧನ ಮಗ ಕಾಶೀರಾಜ, ಪುರುಜಿತ್, ಕುಂತೀಭೋಜ, ಚೇಕಿತಾನ, ಸಾತ್ಯಕಿ ಮೊದಲಾದ ದೇವಪಕ್ಷದ ರಾಜರು ಪಾಂಡವರ ಪಕ್ಷವನ್ನು ಸೇರಿದರು. ಅವಂತೀದೇಶದ ರಾಜರಾದ ವಿಂದ ಅನುವಿಂದರೂ, ಜಯತ್ಸೇನನೂ, ಇತರ ಕೈಕಯ ರಾಜರೂ, ಕ್ಷೇಮಧೂರ್ತಿ, ದಂಡಧರ, ಕಲಿಂಗ, ಅಂಬಷ್ಠ, ಶ್ರುತಾಯು, ಅಚ್ಯುತಾಯು, ಬೃಹದ್ಬಲ, ಸುದಕ್ಷಿಣ, ಶ್ರುತಾಯುಧ, ಸೈಂಧವ, ಅಲಂಬುಸ, ಅಲಾಯುಧ, ಅಲಂಬಲ ಇತ್ಯಾದಿ ದೈತ್ಯರೂ ದುರ್ಯೋಧನನ ಪಕ್ಷಕ್ಕೆ ಬಂದರು. ದುರ್ಯೋಧನನು ಭಗದತ್ತನ ಬಳಿಗೆ ಹೋಗಿ ಕರೆದುಕೊಂಡು ಬಂದನು. ಬಾಹ್ಲೀಕರಾಜನೂ ಮಕ್ಕಳು ಮೊಮ್ಮಕ್ಕಳಿಂದ ಸಹಿತನಾದಿ ದುರ್ಯೋಧನನ ಪಕ್ಷಕ್ಕೆ ಬಂದನು. ಭೀಷ್ಮದ್ರೋಣಕೃಪರೂ ಧೃತರಾಷ್ಟ್ರನ ಪ್ರೀತಿಗಾಗಿ ಅವನ ಪಕ್ಷಕ್ಕೆ ಬಂದರು. ವೀರಸೇನ ಎಂಬ ಪಾಂಡ್ಯರಾಜನೂ ಪಾಂಡವರ ಪಕ್ಷಕ್ಕೆ ಬಂದನು. ಶಲ್ಯನು ಪಾಂಡವರ ಪಕ್ಷಕ್ಕೆಂದು ಬರುತ್ತಿದ್ದನು. ಅದನ್ನು ತಿಳಿದು ದುರ್ಯೋಧನನು ದಾರಿಯಲ್ಲಿ ಸರ್ವಭೋಗಗಳಿಂದ ಕೂಡಿದ ಸಭೆಗಳನ್ನು ಮಾಡಿಸಿದನು. ಶಲ್ಯನು ಅವುಗಳನ್ನು ಧರ್ಮರಾಜನು ಮಾಡಿಸಿರುವನು ಎಂದು ತಿಳಿದುಕೊಂಡು 'ಈ ಸಭೆಗಳನ್ನು ಯಾರು ಮಾಡಿಸಿರುವರೋ ಅವರ ಅಭೀಷ್ಟವನ್ನು ಮಾಡುವೆನು' ಎಂದು ಹೇಳಿದನು. ಆಗ ದುರ್ಯೋಧನನು ಮರೆಯಾಗಿ ಇದ್ದುಕೊಂಡು 'ನಿನ್ನ ಮಾತನ್ನು ಸತ್ಯಮಾಡು. ನನಗೆ ಯುದ್ಧದಲ್ಲಿ ಸಹಾಯಮಾಡು'

ಎಂದನು. ಶಲ್ಯನು ಕೀರ್ತಿಯನ್ನು ಅಪೇಕ್ಷಿಸಿ ತನ್ನ ಮಾತನ್ನು ಸತ್ಯಮಾಡುವುದಕ್ಕಾಗಿ ಹಾಗೆಯೇ ಆಗಲಿ ಎಂದನು. ಅವನು ಪಾಂಡವರ ಬಳಿಗೆ ನಡೆದ ವಿಷಯವನ್ನೆಲ್ಲಾ ತಿಳಿಸಿದನು. ಪಾಂಡವರು ಕರ್ಣನ ತೇಜೋಭಂಗವನ್ನು ಮಾಡಬೇಕೆಂದು ಕೇಳಿಕೊಂಡು ದುರ್ಯೋಧನನ ಪಕ್ಷಕ್ಕೆ ಹೋಗಲಿಕ್ಕೆ ಸಮ್ಮತಿಸಿದರು.

ತರುವಾಯ ಧೃತರಾಷ್ಟ್ರನು ರಾಜಿ ಮಾಡಿಕೊಂಡು ಬರುವುದಕ್ಕಾಗಿ ಸಂಜಯನನ್ನು ಕಳುಹಿಸಿದನು. ಅವನು ಬಂದು ಪಾಂಡವರೊಡನೆ ಯುದ್ಧವು ಅಧರ್ಮವೆಂದು ಹೇಳಿದನು. ಆಗ ಧರ್ಮರಾಜನು ಹಠವಾದದಲ್ಲಿ ದ್ರೌಪದೀ ದೇವಿಯರೂ ಭೀಮಸೇನದೇವರೂ ಹೇಳಿದ ಧರ್ಮವನ್ನು ಹೇಳಿ ಸಂಜಯನಿಗೆ ಉತ್ತರ ಹೇಳಲು ಬಾರದಂತೆ ಮಾಡಿದನು. ಕೃಷ್ಣಪರಮಾತ್ಮನೂ ಅದು ಸರಿಯೆಂದು ಸಮರ್ಥಿಸಿದನು. ತರುವಾಯ ಸಂಜಯನು ಪ್ರತ್ಯುತ್ತರರಹಿತನಾಗಿ ಕೃಷ್ಣ ಪರಮಾತ್ಮನಿಗೂ ಪಾಂಡವರಿಗೂ ನಮಸ್ಕರಿಸಿ ಧೃತರಾಷ್ಟ್ರನ ಬಳಿಗೆ ಹೋಗಿ ಅವನನ್ನು ನಿಂದಾಮಾಡಿ ಮನೆಗೆಹೋದನು. ಸಂಜಯನಿಂದ ನಿಂದಿತನಾದ ಧೃತರಾಷ್ಟ್ರನು ರಾತ್ರಿಯಲ್ಲಿ ವಿದುರನನ್ನು ಕರೆದು ಧರ್ಮವನ್ನು ಕೇಳಿದನು. ಅವನು 'ಪಾಂಡವರಿಗೆ ರಾಜ್ಯವನ್ನು ಕೊಡುವುದೇ ಧರ್ಮವು. ಈ ಲೋಕದಲ್ಲಿ ಸುಖಕ್ಕೂ ಕಾರಣವು. ಇಲ್ಲದಿದ್ದರೆ ಧರ್ಮವನ್ನು ಮೀರಿದಂತೆ ಆಗುವುದು. ಎಲ್ಲಾ ಮಕ್ಕಳೂ ಸಾಯುವರು' ಎಂದು ಹೇಳಿದನು. ಧೃತರಾಷ್ಟ್ರನು ಪಾಂಡವರಿಗೆ ರಾಜ್ಯವನ್ನು ಕೊಡಲಿಕ್ಕೆ ಮನಸ್ಸಿಲ್ಲದೆ ಜ್ಞಾನದಿಂದ ಪಾಪವನ್ನು ಪರಿಹರಿಸಿಕೊಳ್ಳಬೇಕೆಂಬ ಅಭಿಪ್ರಾಯದಿಂದ ವಿದುರನೊಡನೆ ಭಗವಂತನ ಸ್ವರೂಪವನ್ನು ಕೇಳಿದನು. ಅವನು ಸನತ್ಸುಜಾತರೆಂದು ಹೆಸರುಳ್ಳ ಸನಾತನ ಎಂಬ ಋಷಿಗಳನ್ನು ಸ್ಮರಿಸಿದನು. ಅವರು ಬಂದು ಭಗವಂತನ ಸ್ವರೂಪವನ್ನು ಉಪದೇಶಿಸಿದರು. ಬೆಳಿಗ್ಗೆ ಸಂಜಯನು ಸಭೆಯಲ್ಲಿ ಕೌರವರ ಸಮೀಪದಲ್ಲಿ ಧೃತರಾಷ್ಟ್ರನೊಡನೆ ಪಾಂಡವರು ಹೇಳಿದ ಮಾತನ್ನು ಹೇಳಿದನು. ಅದನ್ನು ಕೇಳಿ ಧೃತರಾಷ್ಟ್ರನು ಭಯವುಳ್ಳವನಾದರೂ ಪುತ್ರಸ್ನೇಹಪರವಶನಾಗಿ ಪಾಂಡವರಿಗೆ ರಾಜ್ಯವನ್ನು ಕೊಡಲಿಲ್ಲ.

ಧರ್ಮರಾಜನು ಸಂಜಯನನ್ನು ಕಳುಹಿಸುವಾಗ 'ನನ್ನ ದೊಡ್ಡ ತಂದೆಯು ರಾಜ್ಯವನ್ನು ಕೊಡುವ ಅಭಿಪ್ರಾಯವುಳ್ಳವರಾದರೆ ನೀನು ಬಾ. ಅಥವಾ ವಿದುರನು ಬರಲಿ. ಇಲ್ಲದಿದ್ದರೆ ಬರುವುದು ಬೇಡ' ಎಂದು ಹೇಳಿದ್ದನು. ಇಬ್ಬರೂ ಬಾರದೆ ಇದ್ದದ್ದನ್ನು ನೋಡಿ ಧರ್ಮರಾಜನು ಶ್ರೀಕೃಷ್ಣಪರಮಾತ್ಮನೊಡನೆ ಏನು ಮಾಡಲಿ ಎಂದು ಯೋಚನೆ ಮಾಡಿದನು. ಆಗ ಭಗವಂತನು 'ನಾನು ಹೋಗುತ್ತೇನೆ.

ಸಭೆಯಲ್ಲಿ ಋಷಿಗಳ ಸಮೀಪದಲ್ಲಿ ಹಿತಕರವಾದ ಮಾತನ್ನು ಹೇಳುವೆನು. ಆ ಮಾತನ್ನು ಕೇಳದಿದ್ದರೆ ಸರ್ವಧರ್ಮವನ್ನೂ ಬಿಟ್ಟ ಅವನು ಎಲ್ಲರಿಗೂ ವಧಕ್ಕೆ ಅರ್ಹನಾಗವನು' ಎಂದು ಹೇಳಿದನು. ಆಗ ಭೀಮಸೇನದೇವರು ಲೋಕ ಸಂಗ್ರಹಕ್ಕಾಗಿ ತನ್ನ ನಿಮಿತ್ತ ವಿರೋಧದಿಂದ ವಂಶವು ನಾಶವಾಯಿತು ಎಂದು ಬೇಡವೆಂದು ಜನರಿಗೆ ತಿಳಿಸುವುದಕ್ಕಾಗಿ 'ನಮ್ಮ ನಿಮಿತ್ತವಾಗಿ ಕುಲವು ನಾಶವನ್ನು ಹೊಂದುವುದು ಬೇಡ. ಕುಲವನ್ನು ರಕ್ಷಿಸುವುದಕ್ಕಾಗಿ ನಾವು ದುರ್ಯೋಧನನ ಕೆಳಗೆ ಇರುವೆವು' ಎಂದರು (ಈ ಮಾತಿಗೆ ಭೀಮಸೇನದೇವರ ಸರಿಯಾದ ಅಭಿಪ್ರಾಯವು ಯುದ್ಧದಲ್ಲಿ ಮರಣಾನಂತರದಲ್ಲಿ ಕೆಲವು ಸಮಯ ವೀರಸ್ವರ್ಗದಲ್ಲಿ ದುರ್ಯೋಧನನು ಇರುತ್ತಿರಲು ಅವನ ಕೆಳಗೆ ಭೂಮಿಯಲ್ಲಿ ತಾವು ರಾಜ್ಯಭಾರ ಮಾಡುತ್ತಾ ಇರುವೆವು ಎಂದು) ದುರ್ಯೋಧನನೇ ಮೊದಲಾದವರನ್ನು ಸಂಹರಿಸುವ ಇಚ್ಛೆಯುಳ್ಳವರಾಗಿದ್ದರೂ ಲೋಕದ ಜನರಂತೆ ಈರೀತಿಯಾಗಿ ಭೀಮಸೇನದೇವರು ಹೇಳಲು ಶ್ರೀಭಗವಂತನು ದುರ್ಯೋಧನಾದಿಗಳನ್ನು ಸಂಹರಿಸುವುದೇ ಧರ್ಮವೆಂದು ಲೋಕದಲ್ಲಿ ತಿಳಿಸುವುದಕ್ಕಾಗಿ ಭೀಮಸೇನ ದೇವರನ್ನು ಆಕ್ಷೇಪಿಸುವಂತೆ ಮಾತಾಡಿ ಯುದ್ಧಮಾಡಲಿಕ್ಕೆ ಅತ್ಯಂತ ಪ್ರೇರಣೆಯನ್ನು ಮಾಡಿದರು. ಆಮೇಲೆ ಭೀಮಸೇನದೇವರು ಕೃಷ್ಣಪರಮಾತ್ಮನ ಅಭಿಪ್ರಾಯವನ್ನು ತಿಳಿದು ರಾಜರ ಮಧ್ಯದಲ್ಲಿ ತನ್ನ ಬಲವನ್ನು ಹೇಳಿದರು. ಭಗವಂತನು ಭೀಮಸೇನದೇವರು ಹೇಳಿಕೊಂಡ ಬಲಕ್ಕಿಂತ ಅತ್ಯಂತ ಅಧಿಕವಾದ ಬಲವೇ ಇರುವುದೆಂದು ಹೇಳಿದನು. ಮತ್ತು ರಾಜರ ಮಧ್ಯದಲ್ಲಿ ಕೌರವರನ್ನು ಕೊಲ್ಲುವುದೇ ಧರ್ಮವೆಂದು ಸಮರ್ಥಿಸಿ ಭೀಮಸೇನದೇವರ ಅಮಿತಗುಣಗಳನ್ನು ಹೇಳಿದನು. ಕೃಷ್ಣಪರಮಾತ್ಮನೂ ಭೀಮಸೇನದೇವರೂ ಯಾವಾಗಲೂ ಒಂದೇ ಮನಸ್ಸುಳ್ಳವ ರಾಗಿದ್ದರೂ ಲೋಕದ ಜನರಂತೆ ನಟಿಸುತ್ತಾ ಈಪ್ರಕಾರ ಮಾತಾಡಿಕೊಂಡರು. ತರುವಾಯ ಕೃಷ್ಣಪರಮಾತ್ಮನು ಕೃಪಾಶೀಲನಾದ ರಾಜಿಯಾಗಬೇಕೆಂದು ಅಭಿಪ್ರಾಯ ವುಳ್ಳ ಅರ್ಜುನನ್ನು ಯುಕ್ತಿಯುಕ್ತವಾದ ಮಾತಿನಿಂದ ಸಮಾಧಾನಪಡಿಸಿದನು. ನಕುಲನು ಮನುಷ್ಯಬುದ್ಧಿಯಿಂದ ನೀತಿಯನ್ನು ಹೇಳಿದನು. ಸಹದೇವನೂ ಸಾತ್ಯಕಿಯೂ ನಮ್ಮ ಶೌರ್ಯವನ್ನು ತೋರಿಸುವುದಕ್ಕಾಗಿಯೇ ಯುದ್ಧವನ್ನೇ ನಿಶ್ಚಯಿಸಿಕೊಂಡು ಬರಬೇಕೆಂದರು. ಆಗ ದ್ರೌಪದೀದೇವಿಯರು ಕ್ಷತ್ರಿಯರಿಗೆ ದುಷ್ಟರನ್ನು ಸಂಹರಿಸುವುದೇ ಮುಖ್ಯಧರ್ಮವಾದ ಕಾರಣ ನಮಗೆ ದುರ್ಯೋಧನಾದಿಗಳಿಂದ ರಾಜಿಯಾಗುವುದು ಬೇಡವೆಂದರು. ಶ್ರೀಭಗವಂತನು ಹಾಗೆಯೇ ಆಗಲಿ ಎಂದನು.

ತರುವಾಯ ಶ್ರೀಭಗವಂತನು ಸಾತ್ಯಕಿಯಿಂದ ಸಹಿತನಾಗಿ ರಥದಲ್ಲಿ ಕೂತುಕೊಂಡು ತನ್ನ ಹಿಂದೆಯೇ ಬಂದ ಪಾಂಡವರನ್ನು, ರಾಜರನ್ನು, ಅಲ್ಲಿಯೇ ನಿಲ್ಲಿಸಿ ಕೌರವರಿದ್ದಲ್ಲಿಗೆ ಹೋದನು. ಅನೇಕ ಋಷಿಗಳೂ ಅಲ್ಲಿಗೆ ಹೋದರು. ಪರಶುರಾಮದೇವರೂ, ಶಿಷ್ಯರಿಂದ ಸಹಿತರಾದ ವೇದವ್ಯಾಸದೇವರೂ ಅಲ್ಲಿಗೆ ಹೋದರು. ಭಗವಂತನು ಹೇಳಿದ ಮಾತುಗಳ ಗುಣಗಳನ್ನು ಅವನೇ ರೂಪಾಂತರ ದಿಂದ ತಿಳಿಯಬೇಕಲ್ಲದೆ ಇನ್ನೊಬ್ಬರಿಗೆ ತಿಳಿಯಲು ಸಾಮರ್ಥ್ಯವು ಸಾಲದು. ಆದುದರಿಂದ ವೇದವ್ಯಾಸದೇವರೂ ಪರಶುರಾಮದೇವರೂ ಹೋದರು. ದಾರಿಯಲ್ಲಿ ಊರಿನ ಜನರೆಲ್ಲರೂ ನಮಸ್ಕಾರ ಮಾಡುತ್ತಿದ್ದರು. ದೇವತೆಗಳು ಹೂವಿನಮಳೆಯನ್ನು ಸುರಿಸುತ್ತಿದ್ದರು. ಬ್ರಹ್ಮಾದಿದೇವತೆಗಳು ಸ್ತೋತ್ರಮಾಡುತ್ತಿದ್ದರು. ಈಪ್ರಕಾರವಾದ ವೈಭವದಿಂದ ಭಗವಂತನು ಹಸ್ತಿನಾವತಿಯನ್ನು ಹೊಂದಿದನು.

ಭೀಷ್ಮಾಚಾರ್ಯರೇ ಮೊದಲಾದವರು ಎದುರುಗೊಂಡು ಕರಕೊಂಡು ಹೋಗಲಿಕ್ಕೆ ಬಂದಿದ್ದರು. ಅವರಿಂದ ಸಹಿತನಾಗಿ ಪರಮಾತ್ಮನು ರಾಜಮಾರ್ಗದಲ್ಲಿ ಹೋದನು. ಆಗ ಜನರೆಲ್ಲರೂ ಬಂದು ಅವನನ್ನು ನೋಡಿದರು. ಅವರಿಂದ ಆದರದಿಂದ ಸತ್ಕೃತನಾಗಿ ರಾಜನ ಮನೆಯ ಒಳಗೆ ಪ್ರವೇಶಿಸಿದರು. ಅಲ್ಲಿ ಧೃತರಾಷ್ಟ್ರನು ಭೀಷ್ಮಾಚಾರ್ಯರೇ ಮೊದಲಾದವರನ್ನು ಮುಂದೆ ಮಾಡಿಕೊಂಡು ಕೃಷ್ಣಪರಮಾತ್ಮನನ್ನು ಸತ್ಕರಿಸಿದನು. ಅಲ್ಲಿ ಪರಮಾತ್ಮನು ಬಂಗಾರದಿಂದ ಮಾಡಿದ ಉತ್ತಮವಾದ ಆಸನದಲ್ಲಿ ಕೂತುಕೊಂಡು ತನ್ನ ದೇಹಕಾಂತಿಯಿಂದ ದಿಕ್ಕುಗಳನ್ನು ಪ್ರಕಾಶಿಸುತ್ತಾ ಶೋಭಿಸಿದನು. ಅಲ್ಲಿ ಎಲ್ಲರಿಗೂ ಉಚಿತವಾದ ಸತ್ಕಾರವನ್ನು ಮಾಡಿ ದುರ್ಯೋಧನನ ಮನೆಗೆ ಹೋದನು. ಅಲ್ಲಿ ದುರ್ಯೋಧನನು ಪೂಜಿಸಿದನು. ಆದರೆ ಅವನು ಗುಣವಂತರಾದ ಪಾಂಡವರಲ್ಲಿ ದ್ವೇಷವುಳ್ಳವನೆಂದು ಅವನು ಮಾಡಿದ ಪೂಜೆಯನ್ನು ಸ್ವೀಕರಿಸಲಿಲ್ಲ. ವಿದುರನ ಮನೆಗೆ ಹೋದನು. ಭೀಷ್ಮಾಚಾರ್ಯರು ದ್ರೋಣಾಚಾರ್ಯರು ಮೊದಲಾದವರು ತಮ್ಮ ಮನೆಗೆ ಬರಬೇಕೆಂದು ಪ್ರಾರ್ಥಿಸಿದರೂ ಅವರೆಲ್ಲರೂ ಪಗಡೆ ಆಟದ ಸಭೆಯಲ್ಲಿ ದ್ರೌಪದೀದೇವಿಯರನ್ನು ಉಪೇಕ್ಷಿಸಿದವರೆಂದು ಅವರ ಮನೆಗೆ ಹೋಗಲೇ ಇಲ್ಲ. ಶೀಘ್ರವಾಗಿ ವಿದುರನ ಮನೆಗೆ ಹೋದನು. ವಿದುರನು ಭಕ್ತಿಯಿಂದ ಬಂದು ಪರಮಾತ್ಮನನ್ನು ಎದುರುಗೊಂಡು ಕರೆದುಕೊಂಡುಹೋದನು. ಭಗವಂತನು ಸಂತೋಷದಿಂದ ಮನೆಯೊಳಗೆ ಪ್ರವೇಶಿಸಿದನು. ವಿದುರನು ಭಕ್ತಿಯಿಂದ ಸಂಭ್ರಮದಿಂದ ಸರ್ವಸ್ವವನ್ನು ಸಮರ್ಪಿಸಿ ಪೂಜಿಸಿದನು. ಮರುದಿನದಲ್ಲಿ

ದುರ್ಯೋಧನನು ಸಭೆಗೆ ಕರೆಸಿದನು. ಭಗವಂತನು ಸಭೆಯನ್ನು ಪ್ರವೇಶಿಸಿ ದಿವ್ಯವಾದ ರತ್ನಖಚಿತವಾದ ಬಂಗಾರದ ಆಸನದಲ್ಲಿ ಕೂತುಕೊಂಡು ಭೀಷ್ಮಾದಿಗಳಿಂದ ಪೂಜಿತನಾಗಿ ಮುನೀಂದ್ರರಿಂದ ಸಹಿತನಾಗಿ ಪ್ರಕಾಶಿಸಿದನು.

ಶ್ರೀಭಗವಂತನು ಉಚಿತ ಮಾತುಗಳನ್ನು ಆಡಿ ಆಮೇಲೆ 'ಧೃತರಾಷ್ಟ್ರ! ನಿನ್ನ ಕುಲದ ಅಭಿವೃದ್ಧಿಗಾಗಿ ನಿನ್ನ ಸತ್ಪುತ್ರನಾದ ಧರ್ಮರಾಜನಿಗೆ ರಾಜ್ಯವನ್ನು ಕೊಡು. ಇದರಿಂದ ಉತ್ತಮವಾದ ಧರ್ಮವನ್ನು ಕೀರ್ತಿಯನ್ನು ನನ್ನ ಅನುಗ್ರಹವನ್ನು ಹೊಂದುವಿ. ಹಾಗೆ ಮಾಡದೆ ಇದ್ದರೆ ಕೀರ್ತಿಯಿಂದಲೂ ಧರ್ಮದಿಂದಲೂ ರಹಿತನಾಗಿ ನನ್ನ ವಿರೋಧವನ್ನು ಹೊಂದುವಿ' ಎಂದು ಹೇಳಿದನು. ಆದಕ್ಕೆ ಧೃತರಾಷ್ಟ್ರನು ನನ್ನ ಮಾತನ್ನು ಕೇಳದೆ ಇರುವ ಮಗನಿಗೆ ನೀನೇ ಉಪದೇಶ ಮಾಡಬೇಕೆಂದನು. ಆಗ ಭಗವಂತನು ದುರ್ಯೋಧನನಿಗೆ ಉಪದೇಶಿಸಲು ಪಾಪಿಯಾದ ದುರ್ಯೋಧನನು ಅಲ್ಲಿಂದ ಎದ್ದು ಹೋಗಿ ಸಹೋದರರಿಂದಲೂ ಮಂತ್ರಿಗಳಿಂದಲೂ ಕೂಡಿಕೊಂಡು ಕೃಷ್ಣಪರಮಾತ್ಮನನ್ನು ಕಟ್ಟಿಹಾಕಲಿಕ್ಕೆ ಯೋಚನೆ ಮಾಡಿದನು. ಯಾರು ಯಾರು ಆಗ ಪರಮಾತ್ಮನನ್ನು ಕಟ್ಟಲಿಕ್ಕೆ ಯೋಚನೆ ಮಾಡಿಲಿಕ್ಕೆ ಹೋದರೋ ಅವರೆಲ್ಲರೂ ದೇವರ ದ್ವೇಷಿಗಳು. ಆದುದರಿಂದ ವಿಕರ್ಣನೇ ಮೊದಲಾದವರೂ ಸಹ ಪರಮಾತ್ಮನನ್ನು ಕಟ್ಟಿಹಾಕಲಿಕ್ಕೆ ಯೋಚನೆ ಮಾಡಿದವರಲ್ಲಿ ಸೇರಿದಕಾರಣ ವಧಕ್ಕೆ ಅರ್ಹರಾದರು. ಉತ್ತಮಗತಿಯನ್ನು ಹೊಂದಲಿಲ್ಲ. ಕರ್ಣನು ದೇವತಾಂಶದವನಾದರೂ ದುರ್ಯೋಧನನಿಗಾಗಿ ಯೋಚನೆ ಮಾಡಿದನು. ಸ್ವಭಾವದಿಂದ ದುಷ್ಟನಲ್ಲ. ಆದುದರಿಂದಲೇ ಅವನಿಗೆ ಒಳ್ಳೇ ಗತಿಯಾಯಿತು. ಆ ಸಮಯದಲ್ಲಿ ಯಾರು ಪರಮಾತ್ಮನ ಪಕ್ಷದಲ್ಲಿ ಇದ್ದರೋ ಅವರೆಲ್ಲರೂ ಯೋಗ್ಯರಾದವರು.

ಋಷಿಗಳಿಂದಲೂ, ಪರಶುರಾಮದೇವರಿಂದಲೂ, ವೇದವ್ಯಾಸದೇವರಿಂದಲೂ, ತಂದೆತಾಯಿಗಳಿಂದಲೂ, ಭೀಷ್ಮಾದಿಗಳಿಂದಲೂ, ಉಪದೇಶ ಮಾಡಲ್ಪಟ್ಟರೂ ದುರ್ಬುದ್ಧಿಯುಳ್ಳ ದುರ್ಯೋಧನನು ಭಗವಂತನನ್ನು ಕಟ್ಟಿಹಾಕಲಿಕ್ಕೇ ಯೋಚನೆ ಮಾಡಿದನು. ಸಾತ್ಯಕಿಯೂ ಕೃತವರ್ಮನೂ ಇಬ್ಬರೂ ಅದನ್ನು ಕೇಳಿದರು. ಕೃತವರ್ಮನನ್ನು ನಿಲ್ಲಿಸಿ ಸಾತ್ಯಕಿಯು ರಹಸ್ಯದಲ್ಲಿ ಬಂದು ಭಗವಂತನೊಡನೆ ದುರ್ಯೋಧನನ ನಿಶ್ಚಯವನ್ನು ಹೇಳಿದನು. ಶ್ರೀಭಗವಂತನು ಸರ್ವಜ್ಞನಾದ ಕಾರಣ ಅದನ್ನು ಮೊದಲೇ ತಿಳಿದವನಾದರೂ ಸಾತ್ಯಕಿಯ ಮುಖದಿಂದ ಕೇಳಿ ಧೃತರಾಷ್ಟ್ರನೊಡನೆ ಸರ್ವತ್ರವ್ಯಾಪ್ತನಾದ ನನ್ನನ್ನು ನೋಡು ಎಂದನು. ಧೃತರಾಷ್ಟ್ರನು

ಮಂತ್ರಿಗಳಿಂದ ಸಹಿತನಾದ ಮಗನು ಕರೆಯಲು ತನ್ನ ವಿಶ್ವರೂಪವನ್ನು ತೋರಿಸಿದನು. ಆ ರೂಪವನ್ನು ನೋಡಿ ದುರ್ಯೋಧನಾದಿಗಳು ಕಣ್ಣುಮುಚ್ಚಿಕೊಂಡರು. ಅವರಿಂದ ನೋಡಲಾಗಲಿಲ್ಲ. ಆ ರೂಪವನ್ನು ಆಮೇಲೆ ಮರೆಮಾಡಿದನು. ಮೊದಲು ಆ ರೂಪವನ್ನು ನೋಡಲು ಧೃತರಾಷ್ಟ್ರನಿಗೆ ಪರಮಾತ್ಮನು ಕಣ್ಣನ್ನು ಕೊಟ್ಟಿದ್ದನು. ತರುವಾಯ ಪರಮಾತ್ಮನು ಅವನಿಂದ ಪ್ರಾರ್ಥಿತನಾಗಿ ಅವನನ್ನು ಕುರುಡನನ್ನಾಗಿಯೇ ಮಾಡಿ ಅಲ್ಲಿಂದ ಹೊರಟನು. ಅನಂತ ಸಾಮರ್ಥ್ಯವುಳ್ಳ ಪರಮಾತ್ಮನು ದುರ್ಯೋಧನನ ಮನಸ್ಸನ್ನು ತಿರುಗಿಸಲಿಕ್ಕೆ ಸಮರ್ಥನಾಗಿದ್ದರೂ ತಮಸ್ಸಿಗೆ ಕಳುಹಿಸುವುದಕ್ಕಾಗಿ ತನ್ನ ಮಾತನ್ನು ಕೇಳದಂತೆ ಮಾಡಿದನು.

ಆಮೇಲೆ ಪರಮಾತ್ಮನು ಕುಂತಿಯ ಮನೆಗೆ ಹೋಗಿ ಕುಂತಿಯ ಮುಖದಿಂದ ಧರ್ಮರಾಜನು ಯುದ್ಧೋದ್ಯೋಗವನ್ನು ಮಾಡಬೇಕೆಂದು ಹೇಳಿದ ಮಾತನ್ನು ಕೇಳಿ, ಹೋಗುವಾಗ ಕರ್ಣನನ್ನು ತನ್ನ ರಥದಲ್ಲಿ ಕೂತುಕೊಳ್ಳಿರಿಸಿಕೊಂಡು ಅವನ ಜನ್ಮಚರಿತ್ರೆಯನ್ನು ಹೇಳಿ ಪಾಂಡವರ ಪಕ್ಷಕ್ಕೆ ಬರುವಂತೆ ಹೇಳಿದನು. ಆದರೆ ಅವನು ಕೌರವರಿಂದ ಬಹುಮಾನವನ್ನು ಹೊಂದಿದವನಾದ ಕಾರಣ ಆ ಮಾತನ್ನು ಅಂಗೀಕರಿಸಲಿಲ್ಲ. ತರುವಾಯ ಅವನನ್ನು ಅಲ್ಲಿಯೇ ನಿಲ್ಲಿಸಿ ಏಕಾಂತದಲ್ಲಿ ಅಶ್ವತ್ಥಾಮಾಚಾರ್ಯರೊಡನೆ ಪಾಂಡವರಲ್ಲಿ ಸ್ನೇಹದಿಂದ ಇರಬೇಕೆಂದು ಹೇಳಿದರು. ಅದಕ್ಕೆ ಅವರು ತಂದೆಯ ಮರಣದವರೆಗೆ ಸ್ನೇಹದಿಂದ ಇರುವಂತೆ ಹೇಳಿದರು. ಆಮೇಲೆ ಪರಮಾತ್ಮನು ಅವರನ್ನು ಬಿಟ್ಟು ಪಾಂಡವರ ಸಮೀಪಕ್ಕೆ ಹೋದನು. ಕುಂತೀದೇವಿಯು ಕರ್ಣನಿದ್ದಲ್ಲಿಗೆ ಹೋಗಿ 'ನೀನು ನನ್ನ ಮಗನು. ಪಾಂಡವರೊಡನೆ ಸೇರು' ಎಂದಳು. ಅದಕ್ಕೆ ಕರ್ಣನು 'ಅದು ಆಗಲಾರದು. ನಿನ್ನ ಮಕ್ಕಳಲ್ಲಿ ಅರ್ಜುನನ್ನು ಹೊರತು ಮತ್ತೆ ಯಾರನ್ನು ಸಂಹರಿಸುವುದಿಲ್ಲ' ಎಂದನು.

ತರುವಾಯ ಕೌರವರೂ ಪಾಂಡವರೂ ಕೃಷ್ಣಪರಮಾತ್ಮನಿಂದ ಸಹಿತರಾಗಿ ಯುದ್ಧಮಾಡುವುದಕ್ಕಾಗಿ ಕುರುಕ್ಷೇತ್ರಕ್ಕೆ ಹೋದರು. ಪಾಂಡವರು ಕೃಷ್ಣಪರಮಾತ್ಮನ ಬುದ್ಧಿಯಿಂದ ಉತ್ತಮ ಪ್ರದೇಶದಲ್ಲಿ ಶಿಬಿರಗಳನ್ನು ಮಾಡಿದರು.



# ಭೀಷ್ಮಪರ್ವ

## ಭೀಮಸೇನದೇವರ ಪರಾಕ್ರಮ [1]

ಪಾಂಡವರ ಕೌರವರ ಸೈನ್ಯಗಳು ಯುದ್ದ ಮಾಡಲಿಕ್ಕಾಗಿ ಬಂದು ಸೇರಿದವು. ಆಗ ಅರ್ಜುನನು ಎಲ್ಲಾ ಬಂಧುಗಳನ್ನು ನೋಡಿ ಯುದ್ಧಮಾಡಲಾರೆನೆನ್ನಲು ಕೃಷ್ಣಪರಮಾತ್ಮನು ಗೀತೆಯನ್ನು ಉಪದೇಶಿಸಿ ಅವನು ಯುದ್ಧಮಾಡುವಂತೆ ಮಾಡಿದನು. ತರುವಾಯ ಯುದ್ದವು ಆರಂಭಿಸಿತು. ಸೈನ್ಯಗಳು ವ್ಯೂಹವಾಗಿ [2]ನಿಂತಿದ್ದಿತು. ಆಗ ಭೀಮಸೇನದೇವರು ಗರ್ಜನೆಮಾಡುತ್ತಾ ಕೌರವರ ಸೈನ್ಯವನ್ನು ಪ್ರವೇಶಿಸಿದರು. ಕೌರವರೆಲ್ಲರೂ ಅವರನ್ನು ತಡೆದರು. ಭೀಮಸೇನದೇವರ ತಲೆಯಮೇಲೆ ಬಾಣದ ಮಳೆಯನ್ನು ಸುರಿಸಿದರು. ಬಂಧುಗಳು ಬಡಿಯುತ್ತಿರುವಾಗ ಮೊದಲೇ ಬಡಿಯಬಾರದು ಎಂಬ ಅಭಿಪ್ರಾಯದಿಂದ ಭೀಮಸೇನದೇವರು ಅವರನ್ನು ಬಡಿಯದೆ ಸುಮ್ಮನೆ ಇದ್ದರು. ಇದರಿಂದ ಭೀಮಸೇನದೇವರ ಮೈಯಲ್ಲಿ ಗಾಯಗಳು ಉಂಟಾದವು. ಆಗ ಅಭಿಮನ್ಯುವೇ ಮೊದಲಾದ ವೀರರೂ ಇತರ ಪಾಂಡವರೂ ಬಾಣಸಮೂಹಗಳಿಂದ ಕೌರವರನ್ನು ಸುತ್ತಲೂ ಪೀಡಿಸಿದರು. ಆಗ ಕೌರವರು ಅವರ ಮೇಲೆ ಬಾಣಗಳನ್ನು ಸುರಿಸಿದರು. ಆಗ ಭೀಮಸೇನದೇವರು ಬಾಣಗಳ ಸಮೂಹಗಳನ್ನು ಸುರಿಸುತ್ತಾ ಅಭಿಮನ್ಯು ಮೊದಲಾದವರನ್ನು ರಕ್ಷಿಸಿದರು. ಕೌರವರೆಲ್ಲರೂ ಭೀಮಸೇನದೇವರ ಬಾಣಗಳಿಂದ ಭಗ್ನರಾದರು. ಅವರನ್ನು ಭೀಷ್ಮಾಚಾರ್ಯರು ರಕ್ಷಿಸಿದರು.

ತರುವಾಯ ಭೀಷ್ಮದ್ರೋಣಭಗದತ್ತಾದಿಗಳಿಂದ ಓಡಿಸಲ್ಪಟ್ಟ ತನ್ನ ಸೈನ್ಯವನ್ನು ಭೀಮಸೇನದೇವರು ನಿಲ್ಲಿಸಿದರು. ದ್ರೋಣಾಚಾರ್ಯರನ್ನೂ ಭಗದತ್ತನನ್ನೂ ಕೃಪಾಚಾರ್ಯರನ್ನೂ ದುರ್ಯೋಧನನನ್ನೂ ಕೇವಲ ತನ್ನ ವೀರ್ಯದಿಂದ ಜಯಿಸಿದರು.

ಭೀಮಸೇನದೇವರು ಸಮರ್ಥರಾಗಿದ್ದರೂ ಭೀಷ್ಮಾಚಾರ್ಯರಲ್ಲಿ ಸ್ನೇಹ ದಿಂದಲೂ ಗೌರವದಿಂದಲೂ ಅವರನ್ನು ಕೊಲ್ಲದೆ ಅನುಸರಿಸಿಕೊಂಡು ಇದ್ದರು.

ಒಂದು ದಿನದಲ್ಲಿ ಭೀಮಸೇನದೇವರು ಯುದ್ಧದಲ್ಲಿ ಮುಂದೆ ಹೋಗುವವ ರಾಗಿ ಭೀಷ್ಮಾಚಾರ್ಯರ ಮತ್ತು ದ್ರೋಣಾಚಾರ್ಯರ ಸಾರಥಿಯರನ್ನು ಸಂಹರಿಸಿ ಕುದುರೆಗಳನ್ನು ಓಡಿಸಿ ವ್ಯೂಹವನ್ನು ಭೇದಿಸಿ ಒಳಗೆ ಪ್ರವೇಶಿಸಿದರು. ರಥವನ್ನು ಸರಿಪಡಿಸಿಕೊಂಡು ಬಂದ ಪ್ರಯತ್ನದಿಂದ ಯುದ್ಧಮಾಡುತ್ತಿದ್ದ ಅವರನ್ನು

1. ಮ.ತಾ.ನಿ. ಅ-25 2. ನಿಂತಿದ್ದವು.

ಅನಾಯಾಸದಿಂದ ಪುನಃ ಜಯಿಸಿ **ಇಪ್ಪತ್ತೈದು ಜನ ದುರ್ಯೋಧನನ ತಮ್ಮಂದಿರನ್ನು ಸಂಹರಿಸಿದರು.** ಭಗದತ್ತ, ಅಶ್ವತ್ಥಾಮಾಚಾರ್ಯರು, ಕೃಪಾಚಾರ್ಯರು, ಶಲ್ಯ, ದುರ್ಯೋಧನ ಮೊದಲಾದವರನ್ನು ಜಯಿಸಿ ಓಡಿಸಿದರು. ಬಹುಸೈನ್ಯವನ್ನು ಸಂಹರಿಸಿದರು. ಎಲ್ಲಾ ರಾಜರೂ ನೋಡುವಂತೆ ದುರ್ಯೋಧನನ ರಥವನ್ನು ಪುಡಿ ಮಾಡಿ ಆಯುಧಗಳನ್ನು ನಾಶಮಾಡಿ ಬಲವಾಗಿ ಬಡಿದು ಮೂರ್ಛೆಗೊಳಿಸಿದರು.

ತರುವಾಯ ಕೌರವರು ಸೈನ್ಯವನ್ನು ಅಪಹರಿಸಿದರು. ಭೀಮಸೇನದೇವರ ಬಾಣಗಳಿಂದ ಮೈಯೆಲ್ಲಾ ರಕ್ತಸುರಿಯುತ್ತಿದ್ದ ದುರ್ಯೋಧನನು ರಾತ್ರಿಯಲ್ಲಿ ಭೀಷ್ಮಾಚಾರ್ಯರ ಬಳಿಗೆ ಬಂದು ಅವರಿಗೆ ನಮಸ್ಕರಿಸಿ 'ನಾವು ನಿತ್ಯವೂ ಯಾಕೆ ಸೋತು ಹೋಗುವೆವು? ಪಾಂಡವರು ನಿತ್ಯವೂ ಜಯವನ್ನು ಹೊಂದಿ ಸಂತೋಷಪಡುವರೇಕೆ?' ಎಂದು ಕೇಳಿದನು.

ಅದಕ್ಕೆ ಭೀಷ್ಮಾಚಾರ್ಯರು 'ಅವರನ್ನು ಜಯಿಸಲಿಕ್ಕೆ ಆಗಲಾರದು. ಅವರು ಭೂಮಿಗೆ ಬಂದ ದೇವತೆಗಳು. ವಿಶೇಷವಾಗಿ ಕೃಷ್ಣಪರಮಾತ್ಮನಿಂದ ರಕ್ಷಿತರಾಗಿರು ವರು. ಪರಮಾತ್ಮನಿಗೆ ಪ್ರಿಯರಾಗಿರುವರು. ಪೂರ್ವದಲ್ಲಿ ಮಾನಸೋತ್ತರ ಪರ್ವತದಲ್ಲಿ ಬ್ರಹ್ಮಾದಿದೇವತೆಗಳಿದ್ದರು. ಅವರಲ್ಲಿ ಬ್ರಹ್ಮದೇವರೊಬ್ಬರೇ ಆಕಾಶದಲ್ಲಿ ಭಗವಂತನನ್ನು ನೋಡಿದರು. ಅವರು ಪರಮಾತ್ಮನನ್ನು ಸ್ತೋತ್ರಮಾಡಿ ಪೂಜಾ ಮಾಡಿ ಭೂಮಿಯ ಭಾರವನ್ನು ಪರಿಹರಿಸಬೇಕೆಂದು ಪ್ರಾರ್ಥಿಸಿಕೊಂಡರು. ಆಮೇಲೆ ಆ ಪರಮಾತ್ಮನು ತನ್ನೊಡನೆ ತಿಳಿಸಿದ ವಿಷಯವನ್ನು ದೇವತೆಗಳೊಡನೆ 'ಈ ಪರಮಾತ್ಮನು ನಿಮ್ಮನ್ನೆಲ್ಲಾ ಭೂಮಿಯಲ್ಲಿ ಅವತರಿಸುವಂತೆ ಆಜ್ಞಾಪಿಸಿರುವನು. ತಾನೂ ದೇವಕೀಪುತ್ರನಾಗಿ ಅವತರಿಸುವನು' ಎಂದು ತಿಳಿಸಿದರು. ಈರೀತಿಯಾದ ಪರಮಾತ್ಮನಿಂದ ಆಜ್ಞಪ್ತರಾದ ಯಮದೇವರು ವಾಯುದೇವರು ಮೊದಲಾದವರು ಪಾಂಡವರೇ ಮೊದಲಾದವರಾಗಿ ಹುಟ್ಟಿರುವರು. ಆ ಭಗವಂತನೇ ಕೃಷ್ಣನಾಗಿ ಅವತರಿಸಿರುವನು. ಆದುದರಿಂದ ಆ ಪರಮಾತ್ಮನಿಂದ ರಕ್ಷಿತರಾದ ದೇವತೆಗಳ ಅವತಾರಭೂತರಾದ ಪಾಂಡವರನ್ನು ಜಯಿಸಲಿಕ್ಕೆ ಆಗಲಾಗದು. ಆದುದರಿಂದ ಪರಾಜಯವಾಗಬಾರದು ಎಂದಿದ್ದರೆ ಅವರೊಡನೆ ರಾಜಿಮಾಡಿಕೊ' ಎಂದು ಹೇಳಿದರು. ಅದಕ್ಕೆ ದುರ್ಯೋಧನನು ಡಂಭಬುದ್ಧಿಯಿಂದ ಭಗವಂತನಿಗೆ ನಮಸ್ಕರಿಸಿ ಹೋದನು. ಮರುದಿನ ಯುದ್ಧಕ್ಕೆ ಸೈನ್ಯವನ್ನು ಕಳುಹಿಸಿದನು.

ಆದಿನ ಪಾಂಡವರಿಗೂ ಕೌರವರಿಗೂ ಮಹಾಯುದ್ಧವು ನಡೆಯಿತು. ಧೃಷ್ಟದ್ಯುಮ್ನನು ಭೀಮಸೇನದೇವರನ್ನು ಅನುಸರಿಸಿ ಹೋಗಿ ದುರ್ಯೋಧನನ

ತಮ್ಮಂದಿರಿಂದ ಯುದ್ಧಮಾಡುವವನಾಗಿ ವಿಕರ್ಣನೇ ಮೊದಲಾದವರನ್ನು ಸಂಮೋಹನಾಸ್ತ್ರದಿಂದ ಮೋಹಗೊಳಿಸಿ ಸೈನ್ಯವನ್ನು ಸಂಹರಿಸಿದನು. ತರುವಾಯ ದ್ರೋಣಾಚಾರ್ಯರು ವಿಜ್ಞಾನಾಸ್ತ್ರದಿಂದ ಎಲ್ಲರನ್ನೂ ಎಬ್ಬಿಸಿ ಧೃಷ್ಟದ್ಯುಮ್ನನೊಡನೆ ಯುದ್ಧಕ್ಕೆ ಹೋದರು. ಭೀಮಸೇನದೇವರು ದ್ರೋಣಾಚಾರ್ಯರ ಸಾರಥಿಯನ್ನು ನಾಶಮಾಡಿ ಬಾಣಗಳಿಂದ ಶತ್ರುಗಳನ್ನು ಓಡಿಸಿದರು. ತರುವಾಯ ಕೃತವರ್ಮನು ಧೃಷ್ಟದ್ಯುಮ್ನನೊಡನೆ ಯುದ್ಧಕ್ಕೆ ಹೋದನು. ಧೃಷ್ಟದ್ಯುಮ್ನನು ಅವನನ್ನು ಅನಾಯಾಸದಿಂದ ರಥರಹಿತನನ್ನಾಗಿ ಮಾಡಿದನು. ಆಗ ದುರ್ಯೋಧನನು ಧೃಷ್ಟದ್ಯುಮ್ನನೊಡನೆ ಯುದ್ಧಕ್ಕೆ ಹೋದನು. ಭೀಮಸೇನದೇವರು ಅವನ ರಥವನ್ನೂ ಆಯುಧಗಳನ್ನೂ ಪುಡಿಮಾಡಿ ಅವನ ಎದೆಗೂ ಕುತ್ತಿಗೆಗೂ ಸಂಧಿನಲ್ಲಿ ಬಾಣದಿಂದ ಬಡೆದರು. ರಕ್ತವನ್ನು ಕಾರುತ್ತಾ ಮೂರ್ಛಿತನಾದ ಅವನನ್ನು ಕೃಪಾಚಾರ್ಯರು ರಥದಲ್ಲಿ ಕೂತುಕೊಳ್ಳಿಸಿಕೊಂಡು ಹೋದರು. ಭೀಮಸೇನದೇವರು ಬಾಣಗಳಿಂದ ದುರ್ಯೋಧನನ ಸೇನೆಯನ್ನು ಓಡಿಸಿದರು.

ಸಾತ್ಯಕಿಯೂ ಭೂರಿಶ್ರವನೂ ಯುದ್ಧಮಾಡಿಕೊಂಡು ಪರಸ್ಪರ ರಥಗಳನ್ನು ಪುಡಿಮಾಡಿಕೊಂಡು ಆಯುಧಗಳನ್ನು ನಾಶಮಾಡಿಕೊಂಡರು. ತರುವಾಯ ಖಡ್ಗವನ್ನು ಕೈಯಲ್ಲಿ ಧರಿಸಿದ ಸಾತ್ಯಕಿಯ ಬಳಿಗೆ ಭೂರಿಶ್ರವನೂ ಖಡ್ಗವನ್ನು ಹಿಡಿದುಕೊಂಡು ಬಂದದ್ದನ್ನು ನೋಡಿ ಭೀಮಸೇನದೇವರು ಸಾತ್ಯಕಿಯನ್ನು ತನ್ನ ರಥದಲ್ಲಿ ಕೂತಿಕೊಳ್ಳಿಸಿದರು. ದುರ್ಯೋಧನನು ಭೂರಿಶ್ರವನನ್ನು ರಥದಲ್ಲಿ ಕೂತುಕೊಳ್ಳಿಸಿಕೊಂಡು ದುರ್ಯೋಧನನು ಇದ್ದಲ್ಲಿಂದ ಓಡಿಹೋದನು.

ಮತ್ತೊಂದು ದಿನ ಭೀಮಸೇನದೇವರನ್ನು ಭೀಷ್ಮಾಚಾರ್ಯರನ್ನು ಮುಂದೆ ಮಾಡಕೊಂಡು ಎರಡು ಸೈನ್ಯದವರೂ ಯುದ್ಧಕ್ಕೆ ಬಂದರು. ಭೀಮಸೇನದೇವರು ಭೀಷ್ಮಾಚಾರ್ಯರ ಸಾರಥಿಯನ್ನು ನಾಶಮಾಡಿ ಶತ್ರುಗಳನ್ನು ಎದುರಿಸಿಕೊಂಡು ಹೋದರು. ರಥಗಳೂ ಆನೆಗಳೂ ಕುದುರೆಗಳೂ ಭೀಮಸೇನದೇವರಿಂದ ಬಿದ್ದವು. ಉಳಿದವು ಓಡಿಹೋದವು. ದುರ್ಯೋಧನಾದಿಗಳೂ ಭೀಷ್ಮ ದ್ರೋಣ ಅಶ್ವತ್ಥಾಮಾ ಚಾರ್ಯರೂ ಮೊದಲಾದವರು ಭೀಮಸೇನದೇವರಿಂದ ಸೋತುಹೋಗಲು ದೊಡ್ಡ ಆನೆಯ ಮೇಲೆ ಕೂತುಕೊಂಡು ಭಗದತ್ತನು ಬಂದನು. ಬರುತ್ತಾ ಭೀಮಸೇನದೇವರ ಮೇಲೆ ಬಾಣವನ್ನು ಬಿಟ್ಟನು. ಆ ಬಾಣದಿಂದ ಅತ್ಯಂತ ಬಡಿಯಲ್ಪಟ್ಟವರಾಗಿ ಭೀಮಸೇನದೇವರು ಯುದ್ಧಕ್ಕೆ ಉದ್ಯುಕ್ತರಾಗಲು, ಅವರ ಮಗನಾದ ಘಟೋತ್ಕಚನು ತನ್ನ ಮಾಯೆಯಿಂದ ನಾಲ್ಕು ಆನೆಗಳ ಮೇಲೆ

ಕೂತುಕೊಂಡು ಯುದ್ಧಕ್ಕೆ ಹೋದನು. ಆ ಸಮಯದಲ್ಲಿ ಭಗದತ್ತನ ಕೈಯಲ್ಲಿ ವೈಷ್ಣವಾಸ್ತ್ರವಿದ್ದಿತು. ಅದು ಯಾವಾಗಲೂ ವ್ಯರ್ಥವಾಗಲಾರದು. ಭೀಮಸೇನ ದೇವರೂ ಪರಮಾತ್ಮನ ವಿಶೇಷಾನುಗ್ರಹದಿಂದ ಅವಧ್ಯರು. ವೈಷ್ಣವಾಸ್ತ್ರಕ್ಕೂ ಭಗವಂತನದ್ದೇ ವರವು. ಭೀಮಸೇನದೇವರು ಯುದ್ಧಕ್ಕೆ ಹೋದಾಗ ಭಗದತ್ತನು ವೈಷ್ಣವಾಸ್ತ್ರವು ಬಿಟ್ಟುದ್ದಾದರೆ ವೈಷ್ಣವಾಸ್ತ್ರವು ವ್ಯರ್ಥವಾಗಲಿಕ್ಕೂ ಇಲ್ಲ, ಭೀಮಸೇನದೇವರು ಸಾಯಲಿಕ್ಕೂ ಇಲ್ಲ. ಈರೀತಿಯಾದ ಸಂದರ್ಭವು ಒದಗುವ ಕಾರಣ ಭೀಮಸೇನದೇವರು ಪರಮಾತ್ಮನಲ್ಲಿ ಭಕ್ತಿಯಿಂದ ಭಗದತ್ತನೊಡನೆ ಯುದ್ಧಕ್ಕೆ ತಾನು ಹೋಗಲಿಲ್ಲ. ತನ್ನ ಮಗನು ಹೋಗಲು ಸುಮ್ಮನೆ ಆದರು.

ತನ್ನ ಮಗನಿಂದ ಅವನು ಸೋತುಹೋಗುವುದಾದರೆ ನಾನೇಕೆ ಹೋಗ ಬೇಕೆಂದು ಅವರ ಅಭಿಪ್ರಾಯವು. ಭಗದತ್ತನು ವೈಷ್ಣವಾಸ್ತ್ರವನ್ನು ಮರೆತಿರುವಾಗ ಭೀಮಸೇನದೇವರು ಭಗದತ್ತನೊಡನೆ ಯುದ್ಧಕ್ಕೆ ಹೋಗುವರು. ಭಗದತ್ತನು ಭೀಮಸೇನದೇವರನ್ನು ಅರ್ಜುನನ್ನು ಹೊರತು ಇನ್ನೊಬ್ಬರಿಗೆ ವೈಷ್ಣವಾಸ್ತ್ರವನ್ನು ಬಿಡಲಾರನು ಎಂದು ಭೀಮಸೇನದೇವರು ತಿಳಿದಿರುವರು. ಆದುದರಿಂದ ಮಗನು ಯುದ್ಧಕ್ಕೆ ಹೋಗುವಾಗ ಸುಮ್ಮನೆ ಆದರು. ಘಟೋತ್ಕಚನು ನಾಲ್ಕು ಆನೆಯ ರೂಪವನ್ನು ಅದರಮೇಲೆ ಕೂತಿರುವ ರೂಪವನ್ನು ಧರಿಸಿಕೊಂಡು ಸುಪ್ರತೀಕ ಎಂಬ ಆನೆಯನ್ನೂ ಅದರ ಮೇಲೆ ಕುಳಿತಿದ್ದ ಭಗದತ್ತನನ್ನು ಚೆನ್ನಾಗಿ ಪೀಡಿಸಿ ಸಾಯುವರೋ ಏನೋ ಸಂದೇಹ ಬರುವಂತೆ ಮಾಡಿದನು. ಸುಪ್ರತೀಕವೆಂಬ ಆ ಆನೆಯ ಆರ್ತಧ್ವನಿಯನ್ನು ಕೇಳಿ ಭೀಷ್ಮಾಚಾರ್ಯರೇ ಮೊದಲಾದವರು ಬಂದರು. ದೊಡ್ಡ ಶರೀರವನ್ನು ಘಟೋತ್ಕಚನನ್ನು ಅವನನ್ನು ಹಿಂದಿನಿಂದ ರಕ್ಷಿಸುತ್ತಿದ್ದ ಭೀಮಸೇನದೇವರನ್ನು ನೋಡಿ ತುಂಬಾ ಭಯವುಳ್ಳವರಾಗಿ ಸೇನೆಯನ್ನು ಅಪಹಾರಮಾಡಿ ಬೇಗನೇ ಶಿಬಿರಕ್ಕೆ ಹೋದರು.

ಮರುದಿನ ಎರಡು ಪಕ್ಷದವರೂ ಯುದ್ಧಕ್ಕೆ ಬಂದರು. ಅರ್ಜುನನ ಮಗನಾದ ಇರಾವಂತನು ಶಕುನಿಯ ಆರು ಮಕ್ಕಳೊಡನೆ ಯುದ್ಧಮಾಡಿ ಅವರ ತಲೆಯನ್ನು ಕಡಿದುಹಾಕಿದನು. ಆಗ ದುರ್ಯೋಧನನು ಅಲಂಬುಸ ಎಂಬ ರಾಕ್ಷಸನನ್ನು ಇರಾವಂತನನ್ನು ಸಂಹರಿಸಲು ಕಳುಹಿಸಿದನು. ಅಲಂಬುಸನಿಗೂ ಇರಾವಂತನಿಗೂ ಮಾಯೆಯಿಂದ ಭಯಂಕರವಾದ ಯುದ್ಧವು ನಡೆಯಿತು. ರಾಕ್ಷಸನು ಮಾಯೆಯಿಂದ ಕುದುರೆಸವಾರರನ್ನು ಸೃಷ್ಟಿಮಾಡಿದನು. ಆ ಕುದುರೆ ಸವಾರರು ಬಂದು ಇರಾವಂತನ ಕುದುರೆ ಸವಾರರನ್ನು ಸಂಹರಿಸಿದರು. ತರುವಾಯ ಸರ್ಪರೂಪವನ್ನು ಧರಿಸಿದ

ಇರಾವಂತನನ್ನು ರಾಕ್ಷಸನು ಗರುಡರೂಪವನ್ನು ಧರಿಸಿ ಕೊಂದು ಹಾಕಿದನು. ಅದನ್ನು ನೋಡಿ ಘಟೋತ್ಕಚನು ಕೋಪದಿಂದ ಗರ್ಜಿಸಿದನು. ಅವನ ಗರ್ಜನೆಯಿಂದ ಭೂಮಿಯೇ ನಡುಗಿತು. ಬಲಿಷ್ಠನಾದ ಘಟೋತ್ಕಚನನ್ನು ನೋಡಿ ಅಲಂಬುಸನು ಭಯದಿಂದ ಓಡಿದನು. ಎಲ್ಲಾ ದುರ್ಯೋಧನನ ಸೈನಿಕರು ಓಡಿದರು. ದುರ್ಯೋಧನನು ಘಟೋತ್ಕಚನೊಡನೆ ಯುದ್ಧಕ್ಕೆ ಬಂದನು. ಘಟೋತ್ಕಚನ ಬಲಿಷ್ಠರಾದ ನಾಲ್ಕು ಜನ ಮಂತ್ರಿಗಳನ್ನು ಇತರರನ್ನು ಸಂಹರಿಸಿದನು. ಸತ್ತು ಉಳಿದವರು ಓಡಿಹೋದರು. ಆಗ ಘಟೋತ್ಕಚನು ದುರ್ಯೋಧನನನ್ನು ಪೀಡಿಸಿದನು. ಆಗ ದುರ್ಯೋಧನನು ಬಾಣದಿಂದ ದೃಢವಾಗಿ ಬಡಿಯಲು ಘಟೋತ್ಕಚನು ತುಂಬಾ ಶ್ರಮವುಳ್ಳವನಾಗಿ ಬೀಳುವವನು ದೃಢಪಡಿಸಿಕೊಂಡು ನಿಂತುಕೊಂಡನು.

ಆಮೇಲೆ ಪುನಃ ಇಬ್ಬರೂ ಭಯಂಕರವಾಗಿ ಯುದ್ಧಮಾಡಿಕೊಂಡರು. ದ್ರೋಣಾಚಾರ್ಯರೇ ಮೊದಲಾದವರು ಅದನ್ನು ನೋಡಿ ದುರ್ಯೋಧನನನ್ನು ರಕ್ಷಿಸಲಿಕ್ಕೆ ಬಂದರು. ದ್ರೋಣಾಚಾರ್ಯರು, ಶಲ್ಯ, ಅಶ್ವತ್ಥಾಮಾಚಾರ್ಯರು, ಭೂರಿಶ್ರವ, ಕೃತವರ್ಮ ಇತ್ಯಾದಿಗಳ ಮೇಲೆ ಘಟೋತ್ಕಚನು ಆಕಾಶದಲ್ಲಿ ನಿಂತುಕೊಂಡು ಬಾಣಗಳ ಮಳೆಗಳನ್ನು ಸುರಿಸಿದರು. ಆಗ ಘಟೋತ್ಕಚನನಿಗೆ ಸಹಾಯಮಾಡಲಿಕ್ಕೆ ಬಂದು ಭೀಮಸೇನದೇವರು ಎಲ್ಲರೊಡನೆಯೂ ಯುದ್ಧವನ್ನು ಮಾಡಿದರು. ದ್ರೋಣಾಚಾರ್ಯರು ಭೀಮಸೇನದೇವರ ಬಾಣಗಳಿಂದ ಅತ್ಯಂತ ಪೀಡಿತನಾಗಿ ಮೂರ್ಛಿತರಾಗಿ ಬಿದ್ದರು. ಅಶ್ವತ್ಥಾಮಾಚಾರ್ಯರು ಕೃಪಾಚಾರ್ಯರು ಸುಯೋಧನ ಮೊದಲಾದವರ ರಥಗಳನ್ನು ಭೀಮಸೇನದೇವರು ಒಂದೇ ಕ್ಷಣದಲ್ಲಿ ಪುಡಿಮಾಡಿದರು. ಘಟೋತ್ಕಚನು ಅವರೆಲ್ಲರ ಮೇಲೆ ಆಕಾಶದಲ್ಲಿ ನಿಂತುಕೊಂಡು ಮರದಂತೆ ಇರುವ ಬಾಣಗಳನ್ನು ಸುರಿಸಿದನು. ಕೆಳಗಿನಲ್ಲಿ ಭೀಮಸೇನದೇವರು ಬಾಣಗಳನ್ನು ಬಿಟ್ಟರು. ಇದರಿಂದ ಎಲ್ಲರೂ ಬಹಳ ಭಯಹೊಂದಿ ಕೂಗಿಕೊಂಡರು. ಭೀಮಸೇನದೇವರೂ, ಘಟೋತ್ಕಚನೂ, ಭೀಷ್ಮಾಚಾರ್ಯರನ್ನು ಬಿಟ್ಟು ಮತ್ತೆ ಎಲ್ಲರನ್ನೂ ಶಿಬಿರದವರೆಗೆ ಓಡಿಸಿ ಗರ್ಜಿಸಿದರು. ತರುವಾಯ ದುರ್ಯೋಧನನು ಸ್ವಜನರಿಂದ ಕೂಡಿಕೊಂಡು ಪುನಃ ಯುದ್ಧಭೂಮಿಗೆ ಬಂದನು. ಭೀಷ್ಮಾಚಾರ್ಯರೊಡನೆ ಘಟೋತ್ಕಚನನ್ನು ನಾನು ಹೇಗೆ ಜಯಿಸಲಿ ಎಂದು ಕೇಳಿದನು. ಅದಕ್ಕೆ ಭೀಷ್ಮಾಚಾರ್ಯರು 'ನೀನು ಅವನೊಡನೆ ಯುದ್ಧಕ್ಕೆ ಹೋಗಬೇಡ' ಎಂದು ಹೇಳಿ ಭಗದತ್ತನನ್ನು ಘಟೋತ್ಕಚನೊಡನೆ ಯುದ್ಧಕ್ಕೆ ಕಳುಹಿಸಿದನು.

ಬಲಿಷ್ಠನಾದ ಭಗದತ್ತನು ಘಟೋತ್ಕಚನ ಬಳಿಗೆ ಬಂದು ಯುದ್ಧಮಾಡಿದನು. ಘಟೋತ್ಕಚನು ಭಗದತ್ತನನ್ನೂ ಆನೆಯನ್ನೂ ಪೀಡಿಸಿದನು. ಆಗ ಭಗದತ್ತನು ಶೂಲವನ್ನು ತೆಗೆದು ಘಟೋತ್ಕಚನ ಮೇಲೆ ಬೀಸಿದನು. ಘಟೋತ್ಕಚನು ಆಕಾಶದಲ್ಲಿ ಹಾರಿ ಅದನ್ನು ಹಿಡಿದು ಮೊಳಕಾಲಿನಲ್ಲಿ ಇಟ್ಟು ಮುರಿದನು. ಅದನ್ನು ನೋಡಿ ದೇವತೆಗಳೆಲ್ಲರೂ ಸಂತೋಷಪಟ್ಟರು. ಆಗ ಭಗದತ್ತನು ಘಟೋತ್ಕಚನ ಸಹಾಯಕರನ್ನು ಸಂಹರಿಸಿದನು. ಆಗ ಭೀಮಸೇನದೇವರು ಭಗದತ್ತನೊಡನೆ ಯುದ್ಧಕ್ಕೆ ಹೋದರು. ಭಗದತ್ತನು ಭೀಮಸೇನದೇವರಮೇಲೆ ಆನೆಯನ್ನು ಬಿಟ್ಟನು. ಭೀಮಸೇನದೇವರು ಬಾಣಗಳಿಂದ ಆನೆಯನ್ನು ಸ್ತಂಭನೆ ಮಾಡಿದರು. ಆಗ ಭಗದತ್ತನು ಭೀಮಸೇನದೇವರ ಕುದುರೆಗಳನ್ನು ಬಾಣಗಳಿಂದ ಪೀಡಿಸಿದನು. ಭೀಮಸೇನದೇವರು ಗದೆಯನ್ನು ಹಿಡಿದುಕೊಂಡು ಆ ರಾಜನನ್ನು ಕೊಲ್ಲಲಿಕ್ಕೆ ಹೋದರು. ಹಿಂದಿನಿಂದ ಅವನಲ್ಲಿರುವ ವೈಷ್ಣವಾಸ್ತ್ರವನ್ನು ಅಪಹರಿಸುವುದಕ್ಕಾಗಿ ಕೃಷ್ಣಾರ್ಜುನರು ಬಂದರು. ಆಗ ಭಗದತ್ತನು ಅತ್ಯಂತ ಭಯವುಳ್ಳವನಾಗಿ ಓಡಿ ಹೋದನು. ಭೀಮಾರ್ಜುನರು ಎಲ್ಲಾ ರಾಜರನ್ನೂ ಓಡಿಸಿದರು. ಭೀಷ್ಮಾಚಾರ್ಯರು ಸೇನೆಯನ್ನು ಅಪಹರಿಸಿಕೊಂಡು ಹೋದರು.

ರಾತ್ರಿಯಲ್ಲಿ ದುರ್ಯೋಧನನು ಭೀಷ್ಮಾಚಾರ್ಯರ ಬಳಿಗೆ ಹೋಗಿ ಕಠಿನವಾಗಿ ಮಾತನಾಡಿದನು. ಆಗ ಭೀಷ್ಮಾಚಾರ್ಯರು ಮರಣಭಯವನ್ನು ಬಿಟ್ಟು ನನ್ನ ಶಕ್ತಿಯಿದ್ದಷ್ಟು ಶತ್ರುಗಳನ್ನು ಸಂಹರಿಸುವೆನೆಂದು ಪ್ರತಿಜ್ಞೆ ಮಾಡಿದರು. ಹಾಗೆಯೇ ಮರುದಿನ ಭಯಂಕರವಾದ ಯುದ್ಧವನ್ನು ಮಾಡಿದರು. ದುರ್ಯೋಧನಾದಿಗಳು ಭೀಷ್ಮಾಚಾರ್ಯರನ್ನು ರಕ್ಷಿಸಿದರು ಪಾಂಚಾಲದೇಶದವರೂ, ಮತ್ಸ್ಯದೇಶದವರೂ, ಚೇದಿದೇಶದವರೂ, ಭೀಷ್ಮಾಚಾರ್ಯರಿಂದ ಪೀಡಿತರಾಗಿ ಓಡಿದರು. ಅವರನ್ನೆಲ್ಲಾ ನಿಲ್ಲಿಸಿ ಅಭಿಮನ್ಯುವು ಭೀಷ್ಮಾಚಾರ್ಯರಿದ್ದಲ್ಲಿಗೆ ಯುದ್ಧಕ್ಕೆ ಬಂದನು. ಅವನನ್ನು ಅಲಂಬುಸನು ಬಂದು ತಡೆದನು. ಅಲಂಬುಸನನ್ನು ಅಭಿಮನ್ಯುವು ಜಯಿಸಿ ಭೀಷ್ಮಾಚಾರ್ಯರ ಬಳಿಗೆ ಬರುತ್ತಿರಲು ದುರ್ಯೋಧನನು ತಡೆದನು. ಇಬ್ಬರಿಗೂ ವಿಚಿತ್ರವಾದ ಯುದ್ಧವು ನಡೆಯಿತು. ದುರ್ಯೋಧನನು ಅಭಿಮನ್ಯುವಿನ ಧನುಸ್ಸನ್ನು ಧ್ವಜವನ್ನು ಕತ್ತರಿಸಿದನು. ಉಗ್ರಬಾಣಗಳಿಂದ ಪೀಡಿಸಿದನು. ಸಾರಥಿಯನ್ನೂ ಸಂಹರಿಸಿದನು. ಆಗ ಭೀಮಸೇನದೇವರು ಬಂದರು. ದುರ್ಯೋಧನನ ಕುದುರೆ ಗಳನ್ನು ಕೊಂದರು. ಆಗ ದ್ರೋಣ, ಅಶ್ವತ್ಥಾಮ, ಭಗದತ್ತ, ಕೃಪ, ಕೃತವರ್ಮ, ಚಿತ್ರಸೇನರು, ಭೀಮಸೇನದೇವರನ್ನು ಎದುರಿಸಿಕೊಂಡು ಬಂದರು. ಭೀಮಸೇನ

ದೇವರು ಅವರೆಲ್ಲರನ್ನೂ ಪರಾಙ್ಮುಖರನ್ನಾಗಿ ಮಾಡಿ ಚಿತ್ರಸೇನನಿಗಾಗಿ ಗದೆಯನ್ನು ತೆಗೆದನು. ಭೀಮಸೇನದೇವರು ಗದೆಯನ್ನು ಎತ್ತಿದ್ದನ್ನು ನೋಡಿ ಎಲ್ಲರೂ ಓಡಿಹೋದರು. ಚಿತ್ರಸೇನನು ರಥದಿಂದ ಹಾರಿ ಓಡಿಹೋದನು. ಗದೆಯಿಂದ ಅವನ ರಥವು ಪುಡಿಯಾಯಿತು. ಅವನು ಬದುಕಿ ಉಳಿದುದರಿಂದ ಕೌರವರೆಲ್ಲರೂ ಸಂತೋಷವನ್ನು ಹೊಂದಿದರು. ಭೀಷ್ಮಾಚಾರ್ಯರು ಹದಿನಾಲ್ಕು ಸಾವಿರ ರಥಿಕರನ್ನು ಸಂಹರಿಸಿದರು.

ಧರ್ಮರಾಜನು ಭೀಷ್ಮಾಚಾರ್ಯರ ಪರಾಕ್ರಮವನ್ನು ನೋಡಿ ಭಯಪಟ್ಟನು. ಅವರನ್ನು ಕೊಲ್ಲುವ ಉಪಾಯವನ್ನು ಅವರಲ್ಲಿಯೇ ಕೇಳಬೇಕೆಂದು ರಾತ್ರಿಯಲ್ಲಿ ಅವರ ಬಳಿಗೆ ಹೋದನು. ಧರ್ಮರಾಜನೊಡನೆ ಇತರ ಪಾಂಡವರೂ ಕೃಷ್ಣಪರಮಾತ್ಮನೂ ಹೋದರು. ಭೀಮಾರ್ಜುನರು ಭೀಷ್ಮರನ್ನು ಸಂಹರಿಸಲಿಕ್ಕೆ ಸಮರ್ಥರಾಗಿದ್ದರೂ ಅವರು ಪೂಜ್ಯರಾದ ಕಾರಣ ಅವರ ಅನುಜ್ಞೆಯಿಲ್ಲದೆ ಅವರನ್ನು ಸಂಹರಿಸಲಿಕ್ಕೆ ಇಚ್ಛಿಸಲಿಲ್ಲ. ತರುವಾಯ ಅವರು ಭೀಷ್ಮಾಚಾರ್ಯರಿಂದ ಅನುಜ್ಞೆಯನ್ನು ಪಡೆದು ಅವರ ಮಾತಿನಿಂದ ಶಿಖಂಡಿಯನ್ನು ಮುಂದೆ ಮಾಡಿಕೊಂಡು ಯುದ್ಧಕ್ಕೆ ಹೋದರು. ಶಿಖಂಡಿಗೆ ರಕ್ಷಕನಾಗಿ ಅರ್ಜುನನು ಇದ್ದನು. ಭೀಷ್ಮಾಚಾರ್ಯರಿಗೆ ದುಃಶಾಸನನು ರಕ್ಷಕನಾಗಿದ್ದನು. ಭಯಂಕರವಾದ ಯುದ್ಧವು ನಡೆಯಿತು. ದ್ರೋಣ, ಅಶ್ವತ್ಥಾಮ, ದುರ್ಯೋಧನ, ಭೂರಿಶ್ರವ, ಭಗದತ್ತ, ಕೃಪ, ಶಲ್ಯ, ಬಾಹ್ಲೀಕ, ಕೃತವರ್ಮ, ಸುಶರ್ಮ ಇತ್ಯಾದಿ ಸಮಸ್ತರನ್ನೂ ಭೀಷ್ಮಾಚಾರ್ಯರ ಸಹಾಯಕ್ಕೆ ಬಂದವರು ಭೀಮಸೇನದೇವರು ತಡೆದರು. ಅವರೆಲ್ಲರ ರಥಗಳನ್ನು ಪುಡಿಮಾಡಿದರು. ಅರ್ಜುನನ ಹತ್ತಿರ ಯುದ್ಧಮಾಡಲಿಕ್ಕೆ ಬಂದ ಭಗದತ್ತನನ್ನೂ ಅವನ ಆನೆಯನ್ನು ಓಡಿಸಿದರು. ಅರ್ಜುನನು ಭೀಷ್ಮಾಚಾರ್ಯರ ಬಳಿಗೆ ಹೋದನು. ಎಲ್ಲರೂ ಭೀಷ್ಮಾಚಾರ್ಯರ ಬಳಿಗೆ ಹೋಗಿ ಶಿಖಂಡಿಯನ್ನು ಮುಂದೆ ಮಾಡಿ ಬಾಣವನ್ನು ಬಿಟ್ಟರು. [1]ಭೀಷ್ಮಾಚಾರ್ಯರು ಎಲ್ಲರ ರಥಗಳನ್ನು ಪುಡಿಮಾಡಿದರು. ಇಪ್ಪತ್ತೈದು ಸಾವಿರ ರಥಿಕರನ್ನು ಯಮಲೋಕಕ್ಕೆ ಕಳುಹಿಸಿದರು. [2]ದೇವರಿಂದ ಪ್ರಾರ್ಥಿತನಾಗಿ ಅರ್ಜುನನು ಭೀಷ್ಮಾಚಾರ್ಯರ ಧನುಸ್ಸನ್ನು ಮುರಿದನು. ಭೀಷ್ಮಾಚಾರ್ಯರು ಬೇರೆ ಒಂದು ಧನುಸ್ಸನ್ನು ತೆಗೆದರು. ಹೀಗೆ ಎಂಟು ಧನುಸ್ಸನ್ನು ಮುರಿದರು. ಶಕ್ತಿ ಖಡ್ಗ ಇತರ ರಾಜರು ಕೊಟ್ಟ ಧನುಸ್ಸು ಇತ್ಯಾದಿ ಭೀಷ್ಮಾಚಾರ್ಯರು ಧರಿಸಿದ ಸಮಸ್ತ ಆಯುಧಗಳನ್ನು ಅರ್ಜುನನು ಕತ್ತರಿಸಿದನು.

---

1. ಮ.ತಾ.ನಿ. ಅ-25-132 2. ಕೃಷ್ಣನಿಂದ ಪ್ರೇರಿತನಾಗಿ

ತರುವಾಯ ಎಲ್ಲರೂ ಬಾಣಗಳಿಂದ ಭೀಷ್ಮಾಚಾರ್ಯರನ್ನು ಬಡಿದರು. ಭೀಷ್ಮಾಚಾರ್ಯರು ರಥದಿಂದ ಕೆಳಗೆ ಬಿದ್ದರು. ಆದರೂ ಉತ್ತರಾಯಣದವರೆಗೆ ಪ್ರಾಣಗಳನ್ನು ಧರಿಸಿಕೊಂಡು ಇದ್ದರು. ಭೀಷ್ಮಾಚಾರ್ಯರು ಕೆಳಗೆ ಬೀಳಲು ಭೀಮಸೇನದೇವರು ದ್ರೋಣಾ ಚಾರ್ಯರೇ ಮೊದಲಾದವರನ್ನು ಓಡಿಸಿ ಭೀಷ್ಮಾಚಾರ್ಯರಿದ್ದಲ್ಲಿಗೆ ಬಂದರು. ತರುವಾಯ ಪಾಂಡವ ಪಕ್ಷದವರೂ ಕೌರವಪಕ್ಷದವರೂ ಆಯುಧಗಳನ್ನು ಕೆಳಗೆ ಇಟ್ಟು ಭೀಷ್ಮಾಚಾರ್ಯರ ಸಮೀಪಕ್ಕೆ ಬಂದರು. ಅವರ ಮಾತಿನಿಂದ ಅವರಿಗೆ ನಮಸ್ಕರಿಸಿ ಆದಿನ ಎಲ್ಲರೂ ಶಿಬಿರಕ್ಕೆ ಹೋದರು.

ಮರುದಿನ ಎಲ್ಲರೂ ಭೀಷ್ಮಾಚಾರ್ಯರಿದ್ದಲ್ಲಿಗೆ ಬಂದರು. ಭೀಷ್ಮಾಚಾರ್ಯರು ಬಾಣದ ಮಂಚದಲ್ಲಿಯೇ ಮಲಗಿದ್ದರು. ಅಂದರೆ ಎಲ್ಲರೂ ಬಿಟ್ಟ ಬಾಣಗಳು ಭೀಷ್ಮಾಚಾರ್ಯರ ಮೈಯಲ್ಲಿಯೇ ಇದ್ದಿತು. ಅವರು ಬೀಳಲು ಬಾಣಗಳ ಮಂಚದಲ್ಲಿಯೇ ಮಲಗಿದಂತೆ ಆಯಿತು. ತರುವಾಯ ಬಾಣವನ್ನೇ ತಲೆದಿಂಬನ್ನಾಗಿ ಅರ್ಜುನನು ಮಾಡಿದ್ದನು. ಮರುದಿನ ಭೀಷ್ಮಾಚಾರ್ಯರು ನೀರಡಿಕೆಯುಳ್ಳವರಾಗಿ ಪಾನೀಯವನ್ನು ಕೇಳಿದರು. ದುರ್ಯೋಧನಾದಿಗಳಿಗೆ ಅವರ ಅಭಿಪ್ರಾಯವೂ ತಿಳಿಯಲಿಲ್ಲ. ಅರ್ಜುನನು ಮಾತ್ರ ತಿಳಿದು ವಾರುಣಾಸ್ತ್ರದಿಂದ ಭೂಮಿಯನ್ನು ಭೇದಿಸಿ ಒಳ್ಳೇ ವಾಸನೆಯುಳ್ಳ ನೀರನ್ನು ಭೀಷ್ಮಾಚಾರ್ಯರ ಬಾಯಿಗೆ ಬೀಳುವಂತೆ ಮಾಡಿದನು. ಇದರಿಂದ ಭೀಷ್ಮಾಚಾರ್ಯರು ತೃಪ್ತರಾಗಿ 'ಕೌರವರೇ! ಅರ್ಜುನನಲ್ಲಿ ಎಂತಹ ಅಸ್ತ್ರಜ್ಞಾನವಿದೆಯೆಂದು ತಿಳಿದಿರುವುದಲ್ಲಾ! ಯುದ್ಧದಲ್ಲಿ ಭೀಮಸೇನನ ಬಲವನ್ನು ಪುನಃ ಪುನಃ ನೋಡಿದಿರಲ್ಲಾ! ಶ್ರೀಭಗವಂತನ ಅನಂತಮಹಾತ್ಮ್ಯೆಯನ್ನು ನೋಡಿದಿರಲ್ಲಾ! ಆದುದರಿಂದ ಯುದ್ಧವನ್ನು ಬಿಡಿರಿ. ಎಲ್ಲಾ ರಾಜರೂ ಸುಖವನ್ನು ಹೊಂದಲಿ' ಎಂದು ಹೇಳಲು ದುರ್ಯೋಧನನು ಮಾತನಾಡದೆ ತನ್ನ ಮನೆಗೆ ಹೋದನು. ವೇದವ್ಯಾಸದೇವರು ಅನುಗ್ರಹಿಸಿದ ಜ್ಞಾನವುಳ್ಳ ಸಂಜಯನಿಂದ ಧೃತರಾಷ್ಟ್ರನು ಎಲ್ಲವನ್ನೂ ಕೇಳಿ ತುಂಬಾ ಸಂತಾಪವನ್ನು ಹೊಂದಿದನು. ಪಾಂಡವರು ಶಿಬಿರವನ್ನು ಹೊಂದಿ ಸಂತೋಷವನ್ನು ಹೊಂದಿದರು.



# ದ್ರೋಣಪರ್ವ

## ಭೀಮಸೇನದೇವರ ಪರಾಕ್ರಮ [1]

ಭೀಷ್ಮಾಚಾರ್ಯರು ಸೇನಾಧಿಪತ್ಯವನ್ನು ವಹಿಸಿ ಹತ್ತುದಿವಸಗಳಲ್ಲಿ ಕಾದಾಡಿ ಸರಳಮಂಚದಲ್ಲಿ ಮಲಗಿದಮೇಲೆ ದುರ್ಯೋಧನನು ಸಮಸ್ತ ರಾಜರಿಗೂ ಗುರುಗಳಾದ, ರಥಿಕರಲ್ಲಿ ಶ್ರೇಷ್ಠರಾದ, ಪರಶುರಾಮದೇವರ ಶಿಷ್ಯರಾದ, ದ್ರೋಣಾಚಾರ್ಯರನ್ನು ಸೇನಾಧಿಪತಿಯನ್ನಾಗಿ ಮಾಡಿದನು. ಅಷ್ಟರವರೆಗೆ ಭೀಷ್ಮಾ ಚಾರ್ಯರಿಂದ ಅವಮಾನಿತನಾಗಿ ಯುದ್ಧಮಾಡದೆ ಇದ್ದ ಕರ್ಣನೂ ಭೀಷ್ಮಾ ಚಾರ್ಯರ ಅನುಮತಿಯನ್ನು ಪಡೆದು ಯುದ್ಧಕ್ಕೆ ಬಂದನು. ದ್ರೋಣಾಚಾರ್ಯರು ದುರ್ಯೋಧನನ ಪ್ರಾರ್ಥನೆಯಿಂದ ಧರ್ಮರಾಜನನ್ನು ಹಿಡಿದುಕೊಡುವೆನೆಂದು ಪ್ರತಿಜ್ಞೆಯನ್ನು ಮಾಡಿದರು. ಅದನ್ನು ತಿಳಿದು ಪಾಂಡವರು ಜಾಗ್ರತೆಯಿಂದ ಯುದ್ಧಕ್ಕೆ ಬಂದರು. ಭಯಂಕರವಾದ ಯುದ್ಧವು ನಡೆಯಿತು. ದ್ರೋಣಾಚಾರ್ಯರು ಬಾಣಗಳಿಂದ ಶತ್ರುಗಳನ್ನು ನಡುಗಿಸಿದರು. ಆಗ ಭೀಮಸೇನದೇವರು ಅವರನ್ನು ಎದುರಿಸಿಕೊಂಡು ಹೋದರು. ಆಗ ಅಶ್ವತ್ಥಾಮಾಚಾರ್ಯರೂ ಕೃಪಾಚಾರ್ಯರೂ ಶಲ್ಯನೂ ಭೀಮಸೇನದೇವರನ್ನು ಎದುರಿಸಿದರು. ಭೀಮಸೇನದೇವರು ಅವರನ್ನು ತಿರಸ್ಕರಿಸಿ ದ್ರೋಣಾಚಾರ್ಯರ ಹತ್ತಿರವೇ ಯುದ್ಧಕ್ಕೆ ಹೋದರು. ಅವರ ಹಿಂದೆಯೇ ಅಭಿಮನ್ಯುವು ಹೋದನು. ಅವನನ್ನು ಶಲ್ಯನು ತಡೆದನು. ಅವರಿಬ್ಬರಿಗೂ ಯುದ್ಧವು ನಡೆಯಿತು.

ಕೊನೆಗೆ ಶಲ್ಯನು ಗದೆಯನ್ನು ತೆಗೆದನು. ಆಗ ಭೀಮಸೇನದೇವರು ಗದೆಯನ್ನು ಹಿಡಿದುಕೊಂಡು ಅವನನ್ನು ಎದುರಿಸಿದರು. ಇಬ್ಬರೂ ಗರ್ಜನೆಯನ್ನು ಮಾಡುತ್ತಾ ವಿಚಿತ್ರವಾಗಿ ಯುದ್ಧವನ್ನು ಮಾಡಿಕೊಂಡರು. ಭೀಮಸೇನದೇವರ ಗದೆಯ ಪೆಟ್ಟಿನಿಂದ ಶಲ್ಯನು ಮೂರ್ಛಿತನಾಗಿ ಬಿದ್ದನು. ಭೀಮಸೇನದೇವರೂ ಕೋಪದಿಂದ ನಡುಗಿದ ಪಾದವುಳ್ಳವರಾಗಿ ಭೂಮಿಯಲ್ಲಿ ಮೊಳಕಾಲನ್ನು ಊರಿ ತತ್‌ಕ್ಷಣದಲ್ಲಿಯೇ ಎದ್ದರು. ಮೂರ್ಛಿತನಾಗಿ ಬಿದ್ದಿದ್ದ ಶಲ್ಯನನ್ನು ಅವನನ್ನು ಯುದ್ಧಕ್ಕೆ ಕರೆಯುತ್ತಿದ್ದ ಭೀಮಸೇನದೇವರನ್ನು ನೋಡಿ ಕೃಪಾಚಾರ್ಯರು ಎಲ್ಲ ಜನರೂ ನೋಡುವಂತೆ ಭೀಮಸೇನದೇವರ ಮುಂಭಾಗದಲ್ಲಿಯೇ ಶಲ್ಯನನ್ನು ರಥದಲ್ಲಿ ಇಟ್ಟುಕೊಂಡು ಓಡಿಹೋದರು. ಭೀಮಸೇನದೇವರು ಶಲ್ಯನನ್ನು ಜಯಿಸಿ ಗರ್ಜನೆ ಮಾಡುತ್ತಾ ತನ್ನ ರಥವನ್ನು ಹೊಂದಿ ದ್ರೋಣಾಚಾರ್ಯರ ಎದುರಲ್ಲೇ ಶತ್ರುಸೈನ್ಯವನ್ನು ಓಡಿಸಿದನು.

---

1. ಮ.ತಾ.ನಿ. ಅ-26

ತರುವಾಯ ಭೀಮಾರ್ಜುನರಿಂದ ಮರ್ದಿತವಾದ ಸೈನ್ಯವನ್ನು ಅಪಹರಿಸಿಕೊಂಡು ದ್ರೋಣಾಚಾರ್ಯರು ರಾತ್ರಿಯಾಗಲು ಶಿಬಿರಕ್ಕೆ ಹೋದರು.

ಮರುದಿನ ಭೀಮಸೇನದೇವರು ಆನೆಗಳ ಸೈನ್ಯದೊಡನೆ ಯುದ್ಧಮಾಡುತ್ತಿದ್ದರು. ಆನೆಗಳೆಲ್ಲವೂ ಸತ್ತವು. ರಾಜರು ಓಡಿದರು. ಆಗ ಭಗದತ್ತನು ಆನೆಯ ಮೇಲೆ ಕೂತುಕೊಂಡು ದುರ್ಯೋಧನನಿಂದ ಪ್ರಾರ್ಥಿತನಾಗಿ ಯುದ್ಧಕ್ಕೆ ಬಂದನು. ಆ ಸುಪ್ರತೀಕ ಎಂಬ ಆನೆಯಿಂದ ಭಯಪಡಿಸಲ್ಪಟ್ಟ ಭೀಮಸೇನದೇವರಿಂದ ಕುದುರೆಗಳು ನಿಲ್ಲಲಿಕ್ಕೆ ಕೇಳಲಿಲ್ಲ. ಓಡಲಿಕ್ಕೆ ಆರಂಭಿಸಿದವು. ಆಮೇಲೆ ಸಾತ್ಯಕಿ ಅಭಿಮನ್ಯು ಮೊದಲಾದವರು ಆ ಆನೆಯ ಬಳಿಗೆ ಯುದ್ಧಕ್ಕೆ ಹೋದರು. ಆ ಆನೆಯು ಅವರೆಲ್ಲರ ರಥಗಳನ್ನೂ ಆಕಾಶದಲ್ಲಿ ಹಾರಿಸಿತು. ಸಾತ್ಯಕಿಯೇ ಮೊದಲಾದವರು ರಥದಿಂದ ಕೆಳಗೆ ಹಾರಿಬಿಟ್ಟರು. ಭೀಮಸೇನದೇವರು ಭಯಪಟ್ಟ ಕುದುರೆಗಳನ್ನು ಸಮಾಧಾನಪಡಿಸುತ್ತಾ ಯುದ್ಧಮಾಡುತ್ತಿದ್ದರು. ಇದನ್ನು ಸಂಶಪ್ತಕರೊಡನೆ ಯುದ್ಧಮಾಡುತ್ತಿದ್ದ ಅರ್ಜುನನಿಗೆ ಸಾರಥ್ಯ ಮಾಡುತ್ತಿದ್ದ ಕೃಷ್ಣಪರಮಾತ್ಮನು ನೋಡಿದನು. 'ಕ್ಲೇಶವನ್ನು ಹೊಂದಿದ ಭಗದತ್ತನು ಈಗ ಭೀಮಸೇನದೇವನಿಗೆ ವೈಷ್ಣವಾಸ್ತ್ರವನ್ನು ಬಿಡುವನು. ಇನ್ನೊಬ್ಬರಿಂದ ಧರಿಸಲಿಕ್ಕೆ ಅಶಕ್ಯವಾದ ಅದನ್ನು ನಾನೇ ಹೋಗಿ ಧರಿಸುವೆನು' ಎಂದು ಯೋಚಿಸಿ ಅರ್ಜುನನಿಂದ ಸಹಿತನಾಗಿ ಅಲ್ಲಿಗೆ ಬಂದನು.

ತ್ರಿಗರ್ತದೇಶದವರು ಆಗ ಅರ್ಜುನನನ್ನು ತಡೆದರು. ಅರ್ಜುನನು ಅವರಿಗೆ ಮೋಹಗೊಳಿಸುವುದಕ್ಕಾಗಿ ತ್ವಾಷ್ಟ್ರಾಸ್ತ್ರವ ್ ಬಿಟ್ಟನು. ಇದರಿಂದ ಅವರೇ ಪರಸ್ಪರವಾಗಿ ಕೃಷ್ಣಅರ್ಜುನ ಎಂದು ತಿಳಿದುಕೊಂಡು ಬಡೆದುಕೊಂಡು ಸತ್ತರು. ಅರ್ಜುನನು ಭಗದತ್ತನನ್ನು ಸಂಹರಿಸಲಿಕ್ಕೆ ಬೇಗನೇ ಬಂದನು. ಆಗ ಭಗದತ್ತನು ಭೀಮಸೇನದೇವರನ್ನು ಬಿಟ್ಟು ಅರ್ಜುನನ ರಥವನ್ನು ಹಿಡಿಯಲು ಆನೆಯನ್ನು ಬಿಟ್ಟನು. ಕೃಷ್ಣಪರಮಾತ್ಮನು ಮನೋವೇಗದಿಂದ ರಥವನ್ನು ತಿರುಗಿಸಿಬಿಟ್ಟನು. ಇದರಿಂದ ಆನೆಗೆ ರಥವನ್ನು ಹಿಡಿಯಲಾಗಲಿಲ್ಲ. ಅರ್ಜುನನು ತೀಕ್ಷ್ಣಬಾಣಗಳಿಂದ ಅದನ್ನು ಪೀಡಿಸಿದನು. ಭಗದತ್ತನೂ ಅರ್ಜುನನ್ನೂ ಅಸ್ತ್ರಶಸ್ತ್ರಗಳಿಂದ ಬಹುಹೊತ್ತು ಯುದ್ಧಮಾಡಿಕೊಂಡರು. ಅರ್ಜುನನು ಭಗದತ್ತನ ಧನುಸ್ಸನ್ನು ಕತ್ತರಿಸಿದನು. ಭಗದತ್ತನು ಅಂಕುಶದಲ್ಲಿ ವೈಷ್ಣವಾಸ್ತ್ರಮಂತ್ರವನ್ನು ಜಪಿಸಿ ಬಿಟ್ಟನು. ಅದನ್ನು ಕೃಷ್ಣಪರಮಾತ್ಮನೇ ಧರಿಸಿದನು. ಆ ವೈಷ್ಣವಾಸ್ತ್ರವು ಕೃಷ್ಣಪರಮಾತ್ಮನ ಕೊರಳಲ್ಲಿ ವೈಜಯಂತೀಮಾಲೆಯಾಗಿ ಬಿದ್ದಿತು. ಅರ್ಜುನನು ಅದನ್ನು ನೋಡಿ

ಪರಮಾತ್ಮನೊಡನೆ ನೀವೇಕೆ ಧರಿಸಬೇಕು? ಎಂದು ಕೇಳಿದನು. ಅದಕ್ಕೆ ಪರಮಾತ್ಮನು 'ಯಾವಾಗಲೂ ಎಲ್ಲವನ್ನೂ ನಾನೇ ಧರಿಸುವೆನು. ನನಗೆ ಸಮಾನರು ಒಬ್ಬರೂ ಇಲ್ಲ. ಉತ್ತಮರು ಇಲ್ಲವೇ ಇಲ್ಲ. ನಾನೇ ವಾಸುದೇವ ಸಂಕರ್ಷಣ ಪ್ರದ್ಯುಮ್ನ ಅನಿರುದ್ಧ ಎಂಬ ರೂಪಗಳಿಂದ ಜಗತ್ತಿಗೆ ಮೋಕ್ಷ ಸಂಹಾರ ಸೃಷ್ಟಿಸ್ಥಿತಿಗಳಿಗೆ ಕಾರಣನಾಗಿರುವೆನು. ನಾನೇ ಪೂರ್ವದಲ್ಲಿ ವರಾಹರೂಪವುಳ್ಳವನಾಗಿ ಭೂಮಿದೇವಿಯ ಪ್ರೀತಿಗಾಗಿ ನರಕಾಸುರನಿಗೆ ನನ್ನ ಅಸ್ತ್ರವನ್ನು ಕೊಟ್ಟಿರುವೆನು. ಆ ಅಸ್ತ್ರವಿರುವವರೆಗೆ ಅವನಿಗೂ ಅವನ ಮಗನಾದ ಭಗದತ್ತನಿಗೂ ಮರಣವಿಲ್ಲದಂತೆ ವರವನ್ನು ಕೊಟ್ಟಿರುವೆನು. ನಾನು ಹೊರತು ಮತ್ತೆ ಯಾರೊಬ್ಬರೂ ಈ ಅಸ್ತ್ರದಿಂದ ಸಾಯದೇ ಇರುವವರು ಇಲ್ಲ. ಆದುದರಿಂದಲೇ ನಾನೇ ಈ ಅಸ್ತ್ರವನ್ನು ಧರಿಸುವೆನು. ಈಗ ಅಸ್ತ್ರಹೀನನಾದ ಇವನನ್ನು ಸಂಹರಿಸು' ಎಂದು ಹೇಳಲು ಅರ್ಜುನನು ಒಂದು ಬಾಣವನ್ನು ಭಗದತ್ತನಿಗೂ ಮತ್ತೊಂದು ಬಾಣವನ್ನು ಆನೆಯ ಕುಂಭಸ್ಥಳಕ್ಕೂ ಬಿಟ್ಟನು. ಭಗದತ್ತನೂ ಆನೆಯೂ ಇಬ್ಬರೂ ಸತ್ತು ಬಿದ್ದರು.

ಅಶ್ವತ್ಥಾಮಾಚಾರ್ಯರು ಮಾಹಿಷ್ಮತಿಯ ರಾಜನನ್ನು ಸಂಹರಿಸಿದರು. ಭೀಮಸೇನದೇವರು ಅಶ್ವತ್ಥಾಮಾಚಾರ್ಯರ ಕುದುರೆಗಳನ್ನು ಸಂಹರಿಸಿ ಸೈನ್ಯವನ್ನು ಓಡಿಸಿದರು. ಭೀಮಾರ್ಜುನರಿಂದ ಸಂಹರಿಸಲ್ಪಡುವ ಸೈನ್ಯವನ್ನು ನೋಡಿ ದ್ರೋಣಾಚಾರ್ಯರು ಬೇಗನೆ ಸೇನೆಯನ್ನು ಅಪಹರಿಸಿಕೊಂಡು ಹೋದರು. ಭಗದತ್ತನು ಸಂಹೃತನಾದ ಕಾರಣವು ಧರ್ಮರಾಜನನ್ನು ಹಿಡಿದುಕೊಂಡರೆ ಇದ್ದಕಾರಣವೂ ದುರ್ಯೋಧನನು ದ್ರೋಣಾಚಾರ್ಯರೊಡನೆ ದೈನ್ಯಯುಕ್ತವಾದ ಮಾತುಗಳನ್ನು ಆಡಿದನು. ಅದಕ್ಕೆ ದ್ರೋಣಾಚಾರ್ಯರು 'ನಾಳೆ ಅರ್ಜುನನು ದೂರಕ್ಕೆ ಹೋದರೆ ಧರ್ಮರಾಜನನ್ನು ಹಿಡಿದುಕೊಡುವೆನು. ಅಥವಾ ಅವನಂತೆ ಇರುವ ಒಬ್ಬ ವೀರನನ್ನು ಸಂಹರಿಸುವೆನು' ಎಂದು ಪ್ರತಿಜ್ಞೆಯನ್ನು ಮಾಡಿದರು.

ಮರುದಿನ ದ್ರೋಣಾಚಾರ್ಯರು ಪರಮಾತ್ಮನ ವರದಿಂದ ಇತರರಿಂದ ಅಭೇದ್ಯವಾದ ಪದ್ಮವ್ಯೂಹದಿಂದ ಮಾಡಿ ಮಂತ್ರವನ್ನು ಜಪಿಸಿ ಯುದ್ಧಕ್ಕೆ ಹೋದರು. ಅರ್ಜುನನು ಸಂಶಪ್ತಕರೊಡನೆ ಯುದ್ಧಕ್ಕೆ ಹೋದನು. ಉಳಿದ ಪಾಂಡವರು ವ್ಯೂಹದ ಬಳಿಗೆ ಹೋದರು. ಆದರೆ ಆ ವ್ಯೂಹವನ್ನು ಭೇದಿಸಲಿಕ್ಕೆ ಶಕ್ತರಾಗಲಿಲ್ಲ. ಭೀಮಸೇನದೇವರು ಪ್ರತಿಭಾಸಾಮರ್ಥ್ಯದಿಂದ ಶಕ್ತರಾಗಿದ್ದರೂ ಕಾಮ್ಯಮಂತ್ರವನ್ನು ಜಪಿಸದ ಕಾರಣ ಅವರು ಹೋಗಲಿಲ್ಲ. ಆ ಮಂತ್ರವನ್ನು ತಿಳಿದ ಅಭಿಮನ್ಯುವಿನೊಡನೆ ಧರ್ಮರಾಜನು 'ನೀನು ಈ ವ್ಯೂಹವನ್ನು ಭೇದಿಸಿಕೊಂಡು ಒಳಗೆ

ಹೋಗು. ನಿನ್ನ ಹಿಂದೆಯೇ ನಾವೆಲ್ಲರೂ ಬರುವೆವು' ಎಂದನು. ಈರೀತಿಯಾಗಿ ಹೇಳಲು ಅಭಿಮನ್ಯುವು ವ್ಯೂಹವನ್ನು ಭೇದಿಸಿ ಶತ್ರುಸೈನ್ಯವನ್ನು ಪ್ರವೇಶಿಸಿದನು. ಅವನ್ನು ಅನುಸರಿಸಿ ಭೀಮಸೇನದೇವರೇ ಮೊದಲಾದವರು ಒಳಗೆ ಪ್ರವೇಶಿಸಲಿಕ್ಕೆ ಬರಲು ಸೈಂಧವನು ಅವರನ್ನು ತಡೆದನು. ರುದ್ರದೇವರ ವರದಿಂದ ಜಯದ್ರಥನು ತಡೆಯುತ್ತಿರಲು ಭೀಮಸೇನದೇವರು ಆ ದಿನದಲ್ಲಿ ಅಭಿಮನ್ಯುವಿನ ಸಂಹಾರವು ಕೃಷ್ಣಪರಮಾತ್ಮನಿಗೆ ಇಷ್ಟವೆಂದು ತಿಳಿದವರಾಗಿ ಅವನನ್ನು ಅತಿಕ್ರಮಿಸಿ ಮುಂದೆ ಹೋಗಲಿಲ್ಲ. ಜಯದ್ರಥನಲ್ಲಿ ಆವಿಷ್ಟರಾದ ರುದ್ರದೇವರೊಡನೆ ಭೀಮಸೇನ ದೇವರೇ ಮೊದಲಾದವರು ಯುದ್ಧಮಾಡುತ್ತಿರಲು ಅಭಿಮನ್ಯುವು ಶತ್ರುಸೈನ್ಯವನ್ನು ಪ್ರವೇಶಿಸಿ ಅಲ್ಲೋಲಕಲ್ಲೋಲ ಮಾಡಿದನು. ದ್ರೋಣಾಚಾರ್ಯರೇ ಮೊದಲಾದ ಸಮಸ್ತರೊಡನೆಯೂ ಯುದ್ಧಮಾಡುತ್ತಾ ವೀರರ ತಲೆಗಳನ್ನು ಕಡಿದು ಹಾಕುತ್ತಾ ಸಂಚರಿಸಿದನು. ದುರ್ಯೋಧನನ ಸಮೀಪದಲ್ಲೇ ಅವನ ಮಗನಾದ ಲಕ್ಷಣನನ್ನು ಸಂಹರಿಸಿದನು. ಬೃಹದ್ಬಲನನ್ನು ಕೊಂದನು. ಹತ್ತುಸಾವಿರ ವೀರರನ್ನು ಕೊಂದನು.

ದ್ರೋಣಾಚಾರ್ಯರೇ ಮೊದಲಾದವರು ಕೃಷ್ಣಪರಮಾತ್ಮನ ಭಯದಿಂದ ಪ್ರತ್ಯಕ್ಷವಾಗಿ ಅಭಿಮನ್ಯುವನ್ನು ಸಂಹರಿಸಲು ಶಕ್ತರಾಗಲಿಲ್ಲ. ಎಲ್ಲರೂ ಯೋಚನೆ ಮಾಡುವವರಾಗಿ ಕರ್ಣನನ್ನು ಮುಂದೆ ಮಾಡಿ ಕ್ಷಣದಲ್ಲಿಯೇ ಅವನ ಧನುಸ್ಸು ಕುದುರೆ ರಥಗಳನ್ನು ನಾಶ ಮಾಡಿದರು. ಕರ್ಣನು ಧನುಸ್ಸನ್ನು ಮುರಿದನು. ಕೃಪಾಚಾರ್ಯರು ಸಾರಥಿಯನ್ನು ಸಂಹರಿಸಿದರು. ದ್ರೋಣಾಚಾರ್ಯರು ಕುದುರೆಗಳನ್ನು ಕೊಂದರು. ಖಡ್ಗಚರ್ಮಗಳನ್ನು ರಥದ ಚಕ್ರವನ್ನೂ ಪುಡಿಮಾಡಿ ಬರೇ ಕೈಗಳಿಂದ ನಿಲ್ಲುವಂತೆ ಮಾಡಿದರು. ಆಮೇಲೆ ಅವರು ಕೃಷ್ಣಪರಮಾತ್ಮನ ಭಯದಿಂದ ಅವನನ್ನು ಕೊಲ್ಲಲು ಹಿಂದೆ ತೆಗೆಯುತ್ತಿರಲು ದುಃಶಾಸನನ ಮಗನು ಯುದ್ಧಕ್ಕೆ ಬಂದನು. ಅವರಿಬ್ಬರೂ ಪರಸ್ಪರ ಗದಾಪ್ರಹಾರದಿಂದ ಮೃತರಾದರು. ಅಭಿಮನ್ಯುವು ಸಾಯಲು ಶತ್ರುಗಳ ಸಂತೋಷದ ಗರ್ಜನೆಯನ್ನು ಕೇಳಿ ಭೀಮಸೇನದೇವರು ಜಯದ್ರಥನೇ ಮೊದಲಾದ ಸಮಸ್ತರನ್ನು ಜಯಿಸಿ ಆಮೇಲೆ ಧರ್ಮರಾಜನ ಅನುಮತಿಯಿಂದ ಸುಮ್ಮನೆ ಆದರು. ವೇದವ್ಯಾಸದೇವರು ಬಂದು ಧರ್ಮರಾಜನೇ ಮೊದಲಾದವರಿಗೆ ಸಮಾಧಾನಪಡಿಸಿದರು. ಸಂಶಪ್ತಕರನ್ನು ಜಯಿಸಿ ರಾತ್ರಿಯಲ್ಲಿ ಬಂದ ಅರ್ಜುನನು ಈ ವಿಷಯವನ್ನು ತಿಳಿದು ಮರುದಿನ ಜಯದ್ರಥನನ್ನು [1]ಸಂಹರಿಸುವಂತೆ ಪ್ರತಿಜ್ಞೆಯನ್ನು ಮಾಡಿದನು. ಅರ್ಜುನನ

1. ಸಂಹರಿಸುವೆನೆಂದು.

ಪ್ರತಿಜ್ಞೆಯನ್ನು ತಿಳಿದು ದುರ್ಯೋಧನನು ಪ್ರಾರ್ಥಿಸಲು ದ್ರೋಣಾಚಾರ್ಯರು ತಾನು ಸೈಂಧವನನ್ನು ರಕ್ಷಿಸುವೆನೆಂದು ಪ್ರತಿಜ್ಞೆಯನ್ನು ಮಾಡಿ ಯುದ್ಧಮಾಡಿದರು. ಅರ್ಜುನನು ದ್ರೋಣಾಚಾರ್ಯರನ್ನು ಜಯಿಸಿ ಹೋಗುವುದಾದರೆ ಹೊತ್ತಾಗುವು ದೆಂದು ದ್ರೋಣಾಚಾರ್ಯರಿಗೆ ಪ್ರದಕ್ಷಿಣೆಯಾಗಿ ಬೇಗನೆ ವ್ಯೂಹದ ಒಳಗೆ ಹೋಗಿ ಭಯಂಕರವಾದ ಯುದ್ಧವನ್ನು ಮಾಡಿದನು.

ದ್ರೋಣಾಚಾರ್ಯರು ಪಾಂಡವರ ಸೈನ್ಯವನ್ನು ಪ್ರವೇಶಿಸಿ ಅನೇಕರನ್ನು ಸಂಹರಿಸುತ್ತಾ ಬಂದರು. ಆಗ ಭೀಮಸೇನದೇವರು ಶತ್ರುಸೇನೆಯನ್ನು ಮರ್ದಿಸಿ ದರು. ಅನೇಕರು ಓಡಿಹೋದರು.

ಆಗ ಅಲಂಬುಸ ಎಂಬ ರಾಕ್ಷಸನು ಭೀಮಸೇನದೇವರ ಬಳಿಗೆ ಯುದ್ಧಕ್ಕೆ ಬಂದನು. ಅವನು ಭೀಮಸೇನದೇವರಿಂದ ಅತ್ಯಂತಪೀಡಿತನಾಗಿ ಅದೇ ಕ್ಷಣದಲ್ಲಿಯೇ ಮಾಯೆಯಿಂದ ಅದೃಶ್ಯನಾದನು. ಅವನು ಅದೃಶ್ಯನಾಗಿದ್ದುಕೊಂಡು ಭೀಮಸೇನದೇವರ ಅನುಚರರನ್ನು ಪೀಡಿಸಿದನು. ಆಗ ಭೀಮಸೇನದೇವರು ಕಾಮ್ಯ ಕರ್ಮದಿಂದ ರಹಿತರಾದರೂ ಪರಮಾತ್ಮನ ಆಜ್ಞೆಯಿಂದ ತನಗೆ ಅಸ್ತ್ರಜ್ಞಾನ ವಿದೆಯೆಂದು ತಿಳಿಸುವುದಕ್ಕಾಗಿ ತ್ವಾಷ್ಟ್ರಾಸ್ತ್ರವನ್ನು ಬಿಟ್ಟರು. ಆ ಅಸ್ತ್ರಮಂತ್ರದಿಂದ ಬಾಣಗಳು ಉಂಟಾಗಿ ಅದೃಶ್ಯನಾದ ರಾಕ್ಷಸನನ್ನು ಬಡೆದವು. ಆ ರಾಕ್ಷಸನು ಭಯವುಳ್ಳವನಾಗಿ ಭೀಮಸೇನದೇವರನ್ನು ಬಿಟ್ಟು ಬಹುದೂರ ಓಡಿಹೋದನು. ತರುವಾಯ ಭೀಮಸೇನದೇವರು ಶತ್ರುಸೈನ್ಯವನ್ನು ಓಡಿಸಿದರು. ಆ ಸಮಯದಲ್ಲಿಯೇ ದ್ರೌಪದೀದೇವಿಯರ ಮಕ್ಕಳು ಸೋಮದತ್ತನ ಮಗನಾದ ಶಲನನ್ನು ಸಂಹರಿಸಿರು. ತರುವಾಯ ಅಲಂಬುಸ ಎಂಬ ರಾಕ್ಷಸನೂ ಘಟೋತ್ಕಚನೂ ಯುದ್ಧಮಾಡಿಕೊಂಡರು. ಘಟೋತ್ಕಚನು ಅವನ ರಥವನ್ನು ಪುಡಿಮಾಡಿ ಆಕಾಶದಲ್ಲಿ ಯುದ್ಧಮಾಡುತ್ತಿದ್ದ ಅವನೊಡನೆ ತಾನೂ ಆಕಾಶಕ್ಕೆ ಹೋಗಿ ಯುದ್ಧಮಾಡಿ ಅವನನ್ನು ಹಿಡಿದು ಕೆಳಗೆ ಬೀಳಿಸಿ ತಲೆಯನ್ನು ಮೆಟ್ಟಿ ಪುಡಿಮಾಡಿದನು. ಅವನು ರಾಜರ ಮಧ್ಯದಲ್ಲಿ ಮೃತನಾದನು. ಅವನು ಸಾಯಲು ಘಟೋತ್ಕಚನು ಕೌರವರ ಪಕ್ಷದವರನ್ನು ಓಡಿಸಿದನು. ಆಗ ಕೃತವರ್ಮನು ಬಾಣಗಳನ್ನು ಬಿಡುತ್ತಾ ಬಂದನು. ಪೂರ್ವದಲ್ಲಿ ಶ್ರೀಭಗವಂತನು ಸಂತುಷ್ಟನಾಗಿ ಒಂದು ಮುಹೂರ್ತದಲ್ಲಿ ಎಲ್ಲರನ್ನೂ ಜಯಿಸುವಂತೆ ವರವನ್ನು ಕೊಟ್ಟಿದ್ದನು. ಅದರಿಂದ ಅವನು ಪಾಂಚಾಲದೇಶದವರನ್ನೆಲ್ಲರನ್ನು ಜಯಿಸಿದನು. ಭೀಮಸೇನದೇವರ ಮುಂಭಾಗ ದಲ್ಲಿ ನಕುಲಸಹದೇವರನ್ನು ಜಯಿಸಿದನು. ಭೀಮಸೇನದೇವರಿಗೂ ಬಾಣವನ್ನು

ಬಿಟ್ಟನು. ಆಗ ಭೀಮಸೇನದೇವರು ಅವನಿಗೆ ಭಗವಂತನ ವರವು ಇರುವುದನ್ನು ತಿಳಿದವರಾದ ಕಾರಣ ಅವನ ಹತ್ತಿರ ಯುದ್ಧಕ್ಕೆ ಹೋಗಲಿಲ್ಲ. ಯಾದವರನ್ನು ಹೊರತು ಇತರರನ್ನು ಮಾತ್ರ ಜಯಿಸುವಂತೆ ಭಗವಂತನ ವರವಾದ ಕಾರಣ ಸಾತ್ಯಕಿಯು ಅವನ ಕುದುರೆಗಳನ್ನು ನಾಶಮಾಡಿ ಬಾಣಗಳಿಂದ ಪೀಡಿಸಿದನು. ಕೃತವರ್ಮನು ಬೇರೆ ವಾಹನವನ್ನು ಏರಿಕೊಂಡು ಬೇರೆ ಸ್ಥಳಕ್ಕೆ ಹೊರಟುಹೋದನು.

ತರುವಾಯ ಅರ್ಜುನನು ಯುದ್ಧಮಾಡುತ್ತಿರಲು ಕೃಷ್ಣ ಪರಮಾತ್ಮನು ಶತ್ರುಗಳ ಬಲವು ಕಡಿಮೆಯಾಗುವುದಕ್ಕಾಗಿ ಪಾಂಚಜನ್ಯಶಂಖವನ್ನು ಊದಿದನು. ಅದರಿಂದ ಜಗತ್ತೆಲ್ಲಾ ನಡುಗಿಹೋಯಿತು. ಅದರಿಂದ ಗಾಂಡೀವಧನುಸ್ಸಿನ ಶಬ್ದವು ಕೇಳದೆ ಹೋಯಿತು. ಇದರಿಂದ ಧರ್ಮರಾಜನು ಬೆದರಿ ನೋಡಿಕೊಂಡು ಬರಲಿಕ್ಕೆ ಸಾತ್ಯಕಿಯೊಡನೆ ಹೇಳಿದನು. ಸಾತ್ಯಕಿಯು ಬ್ರಾಹ್ಮಣರಿಗೆ ದಕ್ಷಿಣೆ ಕೊಟ್ಟು ಪೂಜಿಸಿ ಆಶೀರ್ವಾದವನ್ನು ಪಡೆದು ಭೀಮಸೇನದೇವರಿಂದ ಸಹಿತನಾಗಿ ಸೇನಾದ್ವಾರಕ್ಕೆ ಹೋದನು. ಭೀಮಸೇನದೇವರು ಸೇನಾದ್ವಾರವನ್ನು ಬಿಡಿಸಿ ಒಳಗೆ ಕಳುಹಿಸಿದರು. ಸಾತ್ಯಕಿಗೆ ಬ್ರಾಹ್ಮಣರ ಆಶೀರ್ವಾದಿಂದಲೂ ಕೃಷ್ಣಪರಮಾತ್ಮನ ವರದಿಂದಲೂ ಬಲವು ಹೆಚ್ಚಾಗಿತ್ತು. ಕೃಷ್ಣಪರಮಾತ್ಮನು ಸಂತುಷ್ಟನಾಗಿ ಆದಿನದಲ್ಲಿ ಸಾತ್ಯಕಿಗೆ ಬಲವು ಅಧಿಕ ವಾಗುವಂತೆ ವರವನ್ನು ಕೊಟ್ಟಿದ್ದನು. ಆದುದರಿಂದ ಸಾತ್ಯಕಿಯು ಭೀಮಸೇನ ದೇವರನ್ನು ಅಲ್ಲಿಯೇ ಇರಲಿಕ್ಕೆ ಹೇಳಿ ತಾನು ಎಲ್ಲರನ್ನೂ ಜಯಿಸುತ್ತಾ ಹೋದನು. ಕೃಷ್ಣಾರ್ಜುನರ ಸಮೀಪಕ್ಕೆ ಹೋದನು. ಅಷ್ಟರಲ್ಲಿ ಬಲಿಷ್ಠನಾದ ಭೂರಿಶ್ರವನು ಸಾತ್ಯಕಿಯೊಡನೆ ಯುದ್ಧಕ್ಕೆ ಬಂದನು. ಇಬ್ಬರಿಗೂ ಘೋರವಾದ ಯುದ್ಧವು ನಡೆಯಿತು. ಇಬ್ಬರೂ ಪರಸ್ಪರ ಕುದುರೆಗಳನ್ನು ನಾಶಮಾಡಿಕೊಂಡು ಸಾರಥಿ ಯರನ್ನು ಕೊಂದು ಧನುಸ್ಸುಗಳನ್ನು ಕತ್ತರಿಸಿ ಖಡ್ಗಚರ್ಮಗಳನ್ನು ಧರಿಸಿಕೊಂಡು ಯುದ್ಧಮಾಡಿಕೊಂಡರು. ಕೊನೆಗೆ ಭೂರಿಶ್ರವನು ಸಾತ್ಯಕಿಯನ್ನು ಭೂಮಿಯಲ್ಲಿ ಬೀಳಿಸಿ ತಲೆ ಕೂದಲಿನಲ್ಲಿ ಹಿಡಿದು ಎದೆಮೇಲೆ ಪಾದವನ್ನು ಇಟ್ಟು ಅವನ ತಲೆಯನ್ನು ಕತ್ತರಿಸಲಿಕ್ಕೆ ಖಡ್ಗವನ್ನು ಎತ್ತಿದನು. ಸರ್ವತ್ರದೃಷ್ಟಿಯುಳ್ಳ ಪರಮಾತ್ಮನು ಅರ್ಜುನ ನೊಡನೆ ಸಾತ್ಯಕಿಯನ್ನು ರಕ್ಷಿಸುವಂತೆ ಹೇಳಿದನು. ಅರ್ಜುನನು ಭಲ್ಲ ಎಂಬ ಆಯುಧದಿಂದ ಭೂರಿಶ್ರವನ ಎತ್ತಿದ ಕೈಯನ್ನು ಕತ್ತರಿಸಿದನು. ಕೈಕತ್ತರಿಸಿ ಹೋಗಲು ಭೂರಿಶ್ರವನು ಅರ್ಜುನನನ್ನು ನಿಂದಿಸುತ್ತಾ ಭೂಮಿಯಲ್ಲಿ ಕೂತುಕೊಂಡನು. ಅಸುರಾವೇಶದಿಂದ ಪರಮಾತ್ಮನನ್ನು ನಿಂದಿಸಿದನು. ಅಸುರಾವೇಶವು ಹೋದಮೇಲೆ ಪರಮಾತ್ಮನನ್ನು ಭಕ್ತಿಯಿಂದ ಧ್ಯಾನಮಾಡುತ್ತಾ ಇದ್ದನು. ಆಗ

ಸಾತ್ಯಕಿಯು ಎದ್ದು ಕೃಷ್ಣಾರ್ಜುನಾದಿಗಳು ತಡೆಯುತ್ತಿರುವಂತೆಯೇ ಭೂರಿಶ್ರವನ ತಲೆಯನ್ನು ಕತ್ತರಿಸಿದನು. ತರುವಾಯ ಭಯಂಕರವಾದ ಯುದ್ಧವು ನಡೆಯಿತು.

ಇಲ್ಲಿ ಸಾತ್ಯಕಿಯು ಹೊರಟುಹೋದ ಮೇಲೆ ಧರ್ಮರಾಜನಿಗೆ ಪುನಃ ಯೋಚನೆಯುಂಟಾಯಿತು. ಭೀಮಸೇನದೇವರ ಹತ್ತಿರ 'ಈಗ ಗಾಂಡೀವಧನುಸ್ಸಿನ ಶಬ್ದವು ಕೇಳಿಸುವುದಿಲ್ಲ. ಪಾಂಚಜನ್ಯಶಂಖದ ಧ್ವನಿಯು ಕೇಳಿಸುತ್ತಿದೆ. ಸಾತ್ಯಕಿಯನ್ನು ಕಳುಹಿಸಿದೆನು. ಸಾತ್ಯಕಿಗೂ ಮಹಾಭಾರವಾಗಿರುವುದೆಂದು ತಿಳಿಯುವೆನು. ಭೀಮ! ಆದುದರಿಂದ ನೀನು ಹೋಗಿ ಆ ಅರ್ಜುನನೂ ಸಾತ್ಯಕಿಯೂ ಇಬ್ಬರೂ ಬದುಕಿದ್ದರೆ ರಕ್ಷಣೆ ಮಾಡು' ಎಂದು ಹೇಳಿದನು. ಅದಕ್ಕೆ ಭೀಮಸೇನದೇವರು 'ಶ್ರೀಕೃಷ್ಣ ಪರಮಾತ್ಮನಿಂದ ರಕ್ಷಿತನಾದ ಅರ್ಜುನನನ್ನು ಬ್ರಹ್ಮರುದ್ರರೂ ಜಯಿಸಲಿಕ್ಕೆ ಆಗಲಾರದು. ದ್ರೋಣಾದಿಗಳು ಹೇಗೆ ಜಯಿಸಲಿಕ್ಕೆ ಆಗುವುದು? ಆದುದರಿಂದ ಅರ್ಜುನನಿಗೂ ಸಾತ್ಯಕಿಗೂ ಪರಮಾತ್ಮನ ಅನುಗ್ರಹದಿಂದ ಯಾವ ಭಯವೂ ಇಲ್ಲ. ನಿನ್ನನ್ನೇ ನಾನು ರಕ್ಷಿಸಬೇಕಾಗಿದೆ. ದ್ರೋಣಾಚಾರ್ಯರು ನಿನ್ನನ್ನು ಹಿಡಿಯಲಿಕ್ಕೆ ಪ್ರಯತ್ನಮಾಡುತ್ತಿರುವರು' ಎಂದು ಹೇಳಿದರು. ಅದಕ್ಕೆ ಧರ್ಮರಾಜನು 'ಘಟೋತ್ಕಚನೂ ದೃಷ್ಟದ್ಯುಮ್ನನೂ ಬದುಕಿರುವಾಗ ದ್ರೋಣಾಚಾರ್ಯರು ನನ್ನನ್ನು ಹಿಡಿಯಲು ಆಗಲಾರದು. ನನಗೆ ಪ್ರಿಯವನ್ನು ಮಾಡಲಿಕ್ಕೆ ಇಚ್ಛೆಯಿರುವುದಾದರೆ ನೀನು ಅರ್ಜುನ ಸಾತ್ಯಕಿಯರು ಇದ್ದಲ್ಲಿಗೆ ಹೋಗಿ ಅವರನ್ನು ರಕ್ಷಿಸು. ಅವರನ್ನು ನೋಡಿದ ಕೂಡಲೇ ಸಿಂಹಗರ್ಜನೆಯನ್ನು ಮಾಡಿ ನನಗೆ ಸೂಚನೆಯನ್ನು ಮಾಡು ಹಾಗೆಯೇ ಅರ್ಜುನನು ಜಯದ್ರಥನನ್ನು ಸಂಹಾರಮಾಡಿದ ಮೇಲೆಯೂ ಸೂಚನೆಯನ್ನು ಮಾಡು' ಎಂದು ಹೇಳಿದನು.

ಆಗ ಭೀಮಸೇನದೇವರು ಘಟೋತ್ಕಚನನ್ನು ದೃಷ್ಟದ್ಯುಮ್ನನನ್ನು ಧರ್ಮರಾಜನನ್ನು ನೋಡಿಕೊಳ್ಳಲಿಕ್ಕೆ ಹೇಳಿದರು. ಆಗ ದೃಷ್ಟದ್ಯುಮ್ನನು ಭೀಮಸೇನ ದೇವರೊಡನೆ 'ನೀವು ಕೃಷ್ಣಾರ್ಜುನರಿದ್ದಲ್ಲಿಗೆ ಹೋಗಿರಿ. ನಾನು ಬದುಕಿರುವಾಗ ದ್ರೋಣಾಚಾರ್ಯರಿಗೆ ಧರ್ಮರಾಜನನ್ನು ಹಿಡಿಯಲಿಕ್ಕೆ ಆಗಲಾರದು. ನಾನು ಆ ದ್ರೋಣಾಚಾರ್ಯರಿಗೆ ಮೃತ್ಯುವು' ಎಂದು ಹೇಳಿದನು. ಭೀಮಸೇನದೇವರು ಅವನನ್ನು ಧರ್ಮರಾಜನ ರಕ್ಷಣೆಗೆ ನಿಲ್ಲಿಸಿ ಗದೆಯನ್ನು ಹಿಡಿದುಕೊಂಡು ಬಾಣಗಳನ್ನು ಬಿಡುತ್ತಾ ಶತ್ರುಸೈನ್ಯವನ್ನು ಪ್ರವೇಶಿಸಿದರು. ದ್ರೋಣಾಚಾರ್ಯರು ಬಾಣಗಳ ಮಳೆಯನ್ನು ಸುರಿಸುತ್ತಾ ಅವರನ್ನು ತಡೆದರು 'ಅರ್ಜುನನೂ ಸಾತ್ಯಕಿಯೂ ಇಬ್ಬರೂ ನನಗೆ ನಮಸ್ಕಾರ ಮಾಡಿದ ಕಾರಣ ಶಿಷ್ಯಸ್ನೇಹದಿಂದ ಅವರಿಬ್ಬರನ್ನೂ ಒಳಗೆ

ಹೋಗಲಿಕ್ಕೆ ಬಿಟ್ಟೆನು. ಅರ್ಜುನಿಗಾಗಿ ಸೈಂಧವನ ರಕ್ಷಣೆಗಾಗಿ ಮಾಡಿದ ಪ್ರತಿಜ್ಞೆಯನ್ನು ಬಿಟ್ಟುಬಿಟ್ಟೆನು. ನಿನಗೆ ನಾನು ಎಷ್ಟು ಮಾತ್ರವೂ ದಾರಿಯನ್ನು ಬಿಡಲಾರೆನು. ನನ್ನ ವೀರ್ಯವನ್ನು ನೋಡು' ಎಂದು ಹೇಳಿದರು.

ಈರೀತಿಯಾಗಿ ದ್ರೋಣಾಚಾರ್ಯರು ಹೇಳಲು ಭೀಮಸೇನದೇವರು ಗದೆಯನ್ನು ತೆಗೆದು ದ್ರೋಣಾಚಾರ್ಯರ ರಥದ ಮೇಲೆ ಬಿಸಾಡಿದರು. 'ನಾನು ಯಾವಾಗಲೂ ನಿಮ್ಮನ್ನು ತಂದೆಯಂತೆ ಬಹುಮಾನ ಮಾಡುತ್ತಿರುವೆನು. ನಿಮ್ಮನ್ನು ಕುರಿತು ಯಾವಾಗಲೂ ಮೃದುಸ್ವಭಾವವುಳ್ಳವನಾಗಿರುವೆನು. ಮೃದುಸ್ವಭಾವವನ್ನು ಬಿಟ್ಟೆನಾದರೆ ನನ್ನ ಸಾಮರ್ಥ್ಯವು ಹೇಗೆ ಇದೆಯೆಂದು ನೋಡಿರಿ' ಎಂದರು. ಭೀಮಸೇನದೇವರ ಗದಾಪ್ರಹಾರದಿಂದ ಸಾರಥಿಯಿಂದಲೂ ಕುದುರೆಗಳಿಂದಲೂ ಸಹಿತವಾದ ರಥವು ಪುಡಿಯಾಯಿತು. ದ್ರೋಣಾಚಾರ್ಯರು ಗದೆಯು ಬರುತ್ತಿರುವುದನ್ನು ನೋಡಿ ರಥದಿಂದ ಕೆಳಗೆ ಹಾರಿಬಿಟ್ಟರು. ಆಗಲೇ ದುರ್ಯೋಧನನ್ನು ಕಳುಹಿಸಿ ಕೊಟ್ಟ ಮತ್ತೊಂದು ರಥವನ್ನು ಏರಿ ಬಾಣಗಳನ್ನು ಸುರಿಸಿದರು. ಆಗ ಭೀಮಸೇನದೇವರು ಮಳೆಬರುವಾಗ ಎತ್ತು ತಲೆಯನ್ನು ಮುಂದೆ ಮಾಡಿಕೊಂಡು ಓಡುವಂತೆ ಭೀಮಸೇನದೇವರು ಬಾಣಗಳ ಮಳೆಗೆ ತಲೆಯನ್ನು ಮುಂದೆ ಮಾಡಿಕೊಂಡು ರಥದಿಂದ ಇಳಿದು ದ್ರೋಣಾಚಾರ್ಯರು ಇದ್ದಲ್ಲಿಗೆ ಓಡಿ ದ್ರೋಣಾಚಾರ್ಯರ ರಥವನ್ನು ಹಿಡಿದು ಆಕಾಶದ ಮೇಲೆ ಹಾರಿಸಿದರು. 'ನಾನು ನಿಮ್ಮನ್ನು ಸಂಹರಿಸಲಿಕ್ಕೆ ಸಮರ್ಥನಾದರೂ ಗೌರವದಿಂದ ನಿಮ್ಮನ್ನು ಸಂಹರಿಸದೆ ಬಿಟ್ಟಿರುವೆನು' ಎಂದು ಸೂಚನೆ ಮಾಡಿದರು. ಕುದುರೆಗಳಿಂದಲೂ ಸಾರಥಿಯಿಂದಲೂ ಸಹಿತನಾಗಿ ಆ ರಥವು ಕೆಳಗೆ ಬಿದ್ದು ಪುಡಿಪುಡಿಯಾಯಿತು. ದ್ರೋಣಾಚಾರ್ಯರು ರಥದಿಂದ ಕೆಳಗೆ ಹಾರಿ ಬದುಕಿಕೊಂಡರು. ಆಗ ವಿಶೋಕನು ಭೀಮಸೇನದೇವರ ರಥವನ್ನು ಅವರಿದ್ದಲ್ಲಿಗೆ ತೆಗೆದುಕೊಂಡು ಬಂದನು. ಭೀಮಸೇನದೇವರು ರಥವನ್ನು ಏರಿದರು. ದ್ರೋಣಾಚಾರ್ಯರು ದುರ್ಯೋಧನನು ತಂದುಕೊಟ್ಟ ಮತ್ತೊಂದು ರಥವನ್ನು ಏರಿ ಧರ್ಮರಾಜನನ್ನು ಹಿಡಿಯಲು ಹೋದರು.

ಭೀಮಸೇನದೇವರು ಕೌರವರ ಸೈನ್ಯವನ್ನು ಮರ್ದನ ಮಾಡುತ್ತಾ ಹೋದರು. ವಿಂದ ಅನುವಿಂದ ಮೊದಲಾದ ದುರ್ಯೋಧನನ ಹನ್ನೆರಡು ತಮ್ಮಂದಿರು ಯುದ್ಧಕ್ಕೆ ಬಂದರು. ಅವರು ಭೀಮಸೇನದೇವರಿಗೆ ಬಾಣಗಳನ್ನು ಬಿಡಲು ಭೀಮಸೇನದೇವರು ಅವರ ತಲೆಗಳನ್ನು ಕಡಿದುಹಾಕಿದರು. ಏಕಕಾಲದಲ್ಲಿ ಅಷ್ಟು ಜನರೂ ಸಾಯಲು ಸತ್ಯವ್ರತ, ಪುರುಮಿತ್ರ, ಜಯ, ವೃಂದಾರಕ, ಪೌರವ ಮೊದಲಾದ

ದುರ್ಯೋಧನನ ಮಂತ್ರಿಗಳು ಭೀಮಸೇನದೇವರ ಹತ್ತಿರ ಯುದ್ಧಕ್ಕೆ ಬಂದರು. ಭೀಮಸೇನದೇವರು ಒಂದೇ ಸಮಯದಲ್ಲಿ ಅವರ ತಲೆಗಳನ್ನು ಕತ್ತರಿಸಿದರು. ಉಳಿದವರು ಓಡಿಹೋದರು. ಕೃತವರ್ಮನು ಯುದ್ಧಕ್ಕೆ ಬಂದನು. ಭೀಮಸೇನ ದೇವರು ಅವನಿಗೆ ಚೆನ್ನಾಗಿ ಬಡಿಯಲು ಆ ಕ್ಷಣದಲ್ಲಿ ಅವನು ಯುದ್ಧವನ್ನು ಬಿಟ್ಟುಹೋದನು. ಭೀಮಸೇನದೇವರು ಕೃತವರ್ಮನನ್ನು ಜಯಿಸಿ ಶತ್ರುಸೈನ್ಯವನ್ನು ಓಡಿಸಿದರು. ಆನೆಗಳನ್ನು ಮನುಷ್ಯರನ್ನೂ ಸಂಹರಿಸುತ್ತಾ ಕೃಷ್ಣಾರ್ಜುನರ ಸಮೀಪಕ್ಕೆ ಹೋದರು. ಕೃಷ್ಣಾರ್ಜುನರನ್ನು ನೋಡಿ ಸಂತೋಷಪಟ್ಟರು. ಕೃಷ್ಣಾರ್ಜುನರು ಅವರನ್ನು ನೋಡಿ ಮಾತಾಡಿದರು. ಧರ್ಮರಾಜನಿಗೆ ತಾನು ಕೃಷ್ಣಾರ್ಜುನರನ್ನು ನೋಡಿದ್ದನ್ನು ಸೂಚಿಸುವುದಕ್ಕಾಗಿ ಸಿಂಹಗರ್ಜನೆಯನ್ನು ಮಾಡಿದರು. ಅದನ್ನು ಕೇಳಿ ಧರ್ಮರಾಜನು ಸಂತೋಷಹೊಂದಿದನು.

ಭೀಮಸೇನದೇವರು ಗರ್ಜನೆ ಮಾಡುತ್ತಿರಲು ಆ ಶಬ್ದದಿಂದ ಅನೇಕರು ಮಲಮೂತ್ರವಿಸರ್ಜನೆ ಮಾಡಿ ರಕ್ತವನ್ನು ಕಾರಿ ಸತ್ತರು. ಎಲ್ಲ ರಾಜರೂ ಭಯಪಟ್ಟರು. ಆಗ ಕರ್ಣನೂ ವಿಕರ್ಣನೇ ಮೊದಲಾದ ದುರ್ಯೋಧನನ ತಮ್ಮಂದಿರೂ ಯುದ್ಧಕ್ಕೆ ಬಂದರು. ಭೀಮಸೇನದೇವರು ವಿಕರ್ಣನನ್ನೂ ಚಿತ್ರಸೇನನನ್ನು ಕೊಂದು ಹಾಕಿ ಕರ್ಣನ ರಥವನ್ನು ಪುಡಿಮಾಡಿ ಬಾಣಗಳಿಂದ ಅವನನ್ನು ಪೀಡಿಸಿದನು. ಅವನು ಬೇಗನೇ ಭೀಮಸೇನದೇವರ ಭಯದಿಂದ ಓಡಿಹೋದನು. ಆಮೇಲೆ ಬಹುಹೊತ್ತು ಶ್ರಮಪರಿಹಾರ ಮಾಡಿಕೊಂಡ ಮೇಲೆ ದುರ್ಯೋಧನನ ಇತರ ತಮ್ಮಂದಿರಿಂದ ಕೂಡಿಕೊಂಡು ಭೀಮಸೇನದೇವರೊಡನೆ ಯುದ್ಧಕ್ಕೆ ಹೋದನು. ಭೀಮಸೇನದೇವರು ದುರ್ಯೋಧನನ ತಮ್ಮಂದಿರನ್ನು ಕೊಂದು ಕರ್ಣನ ಕುದುರೆಗಳನ್ನು ಆಯುಧಗಳನ್ನು ನಾಶಮಾಡಿ ಓಡಿಸಿದರು. ವಿಕರ್ಣ ಚಿತ್ರಸೇನ ಮೊದಲಾದ ಇಪ್ಪತ್ತಮೂರು ಜನ ದುರ್ಯೋಧನನ ತಮ್ಮಂದಿರು ಕರ್ಣನಿಗೆ ಸಹಾಯಮಾಡಲಿಕ್ಕೆ ಬಂದು ಕರ್ಣನು ನೋಡುವಂತೆ ಭೀಮಸೇನದೇವರಿಂದ ಕತ್ತರಿಸಲ್ಪಟ್ಟ ತಲೆಯುಳ್ಳವರಾಗಿ ರಥಗಳಿಂದ ಕೆಳಗೆ ಬಿದ್ದರು. ಕರ್ಣನು ಇಪ್ಪತ್ತೊಂದು ಬಾರಿ ಭೀಮಸೇನದೇವರಿಂದ ಕುದುರೆ ಸಾರಥಿ ರಥ ಧ್ವಜಗಳಿಂದ ರಹಿತನಾಗಿ ಮಾಡಲ್ಪಟ್ಟು ತೀಕ್ಷ್ಣಬಾಣಗಳಿಂದ ಚೆನ್ನಾಗಿ ಬಡಿಯಲ್ಪಟ್ಟು ಪ್ರಾಣಸಂಶಯವುಳ್ಳವನಾಗಿ ಎಲ್ಲರೂ ನೋಡುವಂತೆ ದುಃಖದಿಂದ ಅಳುತ್ತಾ ಯುದ್ಧವನ್ನು ಬಿಟ್ಟು ಓಡಿಹೋದನು. ಇಪ್ಪತ್ತೆರಡನೆಯ ಯುದ್ಧದಲ್ಲಿ ಪರಶುರಾಮ ದೇವರು ಕೊಟ್ಟಿರುವ ಅಭೇದ್ಯವಾದ ರಥವನ್ನು ಏರಿ ಪರಶುರಾಮದೇವರೇ

ಕೊಟ್ಟಿರುವ ಜಯಶೀಲವಾದ ಧನುಸ್ಸನ್ನು ಹಿಡಿದುಕೊಂಡು ಅಕ್ಷಯಬಾಣಗಳಿಂದ ಕೂಡಿದ ಬಾಣಚೀಲಗಳನ್ನು ಹಿಡಿದು ಕೊಂಡು ಕರ್ಣನು ಭೀಮಸೇನದೇವರ ಬಳಿ ಯುದ್ಧಕ್ಕೆ ಹೋದನು. ಭೀಮಸೇನ ದೇವರಿಗೂ ಕರ್ಣನಿಗೂ ಭಯಂಕರವಾದ ಯುದ್ಧವು ನಡೆಯಿತು. ತರುವಾಯ ಭೀಮಸೇನದೇವರು ಕರ್ಣನಿಗೆ 'ನೀನು ಸ್ವಾಭಾವಿಕ ಕವಚಕುಂಡಲಗಳಿಂದ ಸಹಿತನಾಗಿ ಇದ್ದರೂ ನಿನ್ನನ್ನು ಕೊಲ್ಲಲಿಕ್ಕೆ ನಾನು ಸಮರ್ಥನು' ಎಂದು ತಿಳಿಸುವುದಕ್ಕಾಗಿ ಅವನು ಆಗ ಧರಿಸಿದ್ದ ಕವಚಕುಂಡಲಗಳನ್ನು ಕತ್ತರಿಸಿ ಕೆಳಗೆ ಬೀಳಿಸಿದರು. 'ಇದೇ ರೀತಿಯಾಗಿ ನಿನ್ನ ಸ್ವಾಭಾವಿಕಕವಚ ಕುಂಡಲಗಳನ್ನು ಕಿತ್ತಿಹಾಕುತ್ತಿದ್ದೆನು' ಎಂದು ತೋರಿಸಿದರು. ಮತ್ತೂ ಅನೇಕ ಬಾಣಗಳಿಂದ ಮರ್ದನ ಮಾಡಿದರು.

'ಕರ್ಣನು ಸ್ಪರ್ಧೆಯಿಲ್ಲದೆ ಯುದ್ಧಮಾಡುತ್ತಿದ್ದರೆ ಅವನಿಗೆ ಜಯವುಂಟಾಗುವುದೆಂದು ಪರಶುರಾಮದೇವರ ವರವಿದೆ. ಈಗ ಇವನು ನನ್ನೊಡನೆ ಸ್ಪರ್ಧೆಯಿಂದ ಯುದ್ಧವನ್ನು [1]ಮಾಡುತ್ತಿದ್ದಿಲ್ಲ. ಆದರೂ ಪರಶುರಾಮದೇವರು ನನಗೆ ಅತ್ಯಂತ ಅನುಗ್ರಹದಿಂದ ತನ್ನ ಮಾತನ್ನು ಬಿಟ್ಟು ಜಯವನ್ನೇ ಕೊಡುವರು. ಆದರೂ ನಾನು ಹಾಗೆ ಮಾಡುವುದು ಧರ್ಮವಲ್ಲ. ಪರಮಾತ್ಮನ ಮಾತು ನನಗೆ ಯಾವಾಗಲೂ ಬಹುಮಾನಕ್ಕೆ ಅರ್ಹವು. ಆದುದರಿಂದ ಈಗ ನಾನು ಕರ್ಣನಿಗೆ ಅವಕಾಶವನ್ನು ಕೊಡುವೆನು' ಎಂದು ಭೀಮಸೇನದೇವರು ಯೋಚಿಸಿ ಅವಕಾಶವನ್ನು ಕೊಡಲು ಕರ್ಣನು ಅಸ್ತ್ರಸಾಮರ್ಥ್ಯದಿಂದ ಭೀಮಸೇನದೇವರ ಧನುಸ್ಸನ್ನು ಮುರಿದನು. ಕುದುರೆಗಳ ಹಗ್ಗವನ್ನು ಕತ್ತರಿಸಿದನು. ಆಗ ಭೀಮಸೇನದೇವರು ತನ್ನ ಸ್ವಾಭಾವಿಕಬಲವನ್ನು ತೋರಿಸುತ್ತಾ ರಥವನ್ನು ಪರಿತ್ಯಾಗ ಮಾಡಿದರು. ಭೀಮಸೇನದೇವರು ತನಗೆ ರಥಾದಿಗಳಿಂದಲೂ ಧನುಸ್ಸಿನಿಂದಲೂ ಒಂದೂ ಆಗಬೇಕಾಗಿಲ್ಲ ಎಂದು ತೋರಿಸುವುದಕ್ಕಾಗಿ ಮೇಲೆ ಹಾರಿದರು. ಕರ್ಣನ ರಥವನ್ನು ಏರಿದರು. ಕರ್ಣನು ಭಯವುಳ್ಳವನಾಗಿ ರಥದಲ್ಲಿಯೇ ಒಂದು ಬದಿಯಲ್ಲಿ ಅಡಗಿಕೂತುಕೊಂಡನು. ಭೀಮಸೇನದೇವರು ತನಗೆ ಆಯುಧವಿಲ್ಲದೆಯೂ ಶತ್ರುಗಳನ್ನು ನಿಗ್ರಹಿಸಲಿಕ್ಕೆ ಸಾಮರ್ಥ್ಯವಿದೆಯೆಂದು ತಿಳಿಸುವವರಾಗಿ ಕರ್ಣನ ರಥದಿಂದ ಕೆಳಗೆ ಇಳಿದರು. ಭೀಮಸೇನದೇವರು ಕರ್ಣನನ್ನು ಕೊಲ್ಲಲಿಕ್ಕಾಗಲೀ ಹಿಡಿಯುವುದಕ್ಕಾಗಲೀ ಯುದ್ಧದಲ್ಲಿ ಅವನ ಧನುಸ್ಸನ್ನು ಅಪಹರಿಸಲಿಕ್ಕಾಗಲೀ ಇಚ್ಛಿಸಲಿಲ್ಲ. ಪರಶುರಾಮದೇವರ ಮೇಲಿನ ಭಕ್ತಿಯಿಂದ ಅವರ ಮಾತನ್ನು

1. ಮಾಡುತ್ತಿಲ್ಲ.

ಬಹುಮಾನಿಸಿದರು. ಅರ್ಜುನನ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡುವುದಕ್ಕಾಗಿಯೂ, ಕರ್ಣನು ವೈಷ್ಣವನಾದ ಕಾರಣವೂ ಅವನನ್ನು ಸಂಹರಿಸಲಿಲ್ಲ. ಕರ್ಣನಿಗೆ ಅವಕಾಶವನ್ನು ಕೊಡುವುದಕ್ಕಾಗಿ ಅವನಿಗೆ ಬಾಣಗಳನ್ನು ಬಿಡುವುದಕ್ಕಾಗಿ ಅವಕಾಶಕೊಡುತ್ತಾ ದೂರದಲ್ಲಿ ನಿಂತನು.

ತರುವಾಯ ಕರ್ಣನು ಪರಶುರಾಮದೇವರ ವರಕ್ಕೆ ಬಹುಮಾನ ಕೊಟ್ಟು ನಿಂತಿರುವ ಭೀಮಸೇನದೇವರನ್ನು ತಿಳಿದು ಅವರಿಗೆ ಅನೇಕ ಬಾಣಗಳನ್ನು ಬಿಟ್ಟನು. ಭೀಮಸೇನದೇವರು ಬಾಣಗಳನ್ನು ಸತ್ತ ಆನೆಗಳಿಂದ ತಡೆದರು. ಕರ್ಣನು ಆ ಆನೆಗಳ ಹೆಣಗಳನ್ನು ಬಾಣಗಳಿಂದ ಕತ್ತರಿಸಿದನು. ಭೀಮಸೇನದೇವರು ಆನೆಗಳ ಹೆಣಗಳನ್ನೆಲ್ಲಾ ಕರ್ಣನ ಮೇಲೆ ಹಾಕಲು ಕರ್ಣನು ಅವುಗಳನ್ನು ಧನುಸ್ಸಿನಿಂದ ದೂರ ಮಾಡುತ್ತಾ ತಾನು ಭೀಮಸೇನದೇವರ ಸಾಮರ್ಥ್ಯವನ್ನು ತಿಳಿದವನಾದರೂ ದುರ್ಯೋಧನನ ಪ್ರೀತಿಗಾಗಿ ಕ್ರೂರಮಾತುಗಳನ್ನು ಆಡಿದನು. ಆಗ ಅರ್ಜುನನು ಬಂದು ಕರ್ಣನನ್ನು ಬಾಣಗಳಿಂದ ಬಡಿದನು. ಕವಚರಹಿತನಾದ ಕರ್ಣನು ಅರ್ಜುನನ ಬಾಣಗಳಿಂದ ಸಂತಪ್ತನಾಗಿ ಹೊರಟುಹೋದನು. ಭೀಮಸೇನ ದೇವರು ತನ್ನ ರಥವನ್ನು ಹೊಂದಿದರು. ಕರ್ಣನು ಅರ್ಜುನನನ್ನು ಹೊರತು ಮತ್ತೆ ಸಹೋದರರನ್ನು ಸಂಹರಿಸಲಾರೆನೆಂದು ಕುಂತೀದೇವಿಯೊಡನೆ ಪ್ರತಿಜ್ಞೆ ಮಾಡಿದ್ದ ಕಾರಣ ಇಂದ್ರದೇವರಶಕ್ತಿಯನ್ನು ಭೀಮಸೇನದೇವರಲ್ಲಿ ಬಿಡಲಿಕ್ಕೆ ಇಚ್ಛಿಸಲಿಲ್ಲ. ಅವನು ಭೀಮಸೇನದೇವರಿಗೆ ಬಿಟ್ಟರೂ ಆ ಶಕ್ತಿಯು ಭೀಮಸೇನದೇವರಿಗೆ ಒಂದೂ ಮಾಡಲಿಕ್ಕೆ ಆಗಲಾರದು. ನಾರಾಯಣಾಸ್ತ್ರವೇ ಭೀಮಸೇನದೇವರ ತಲೆಯಲ್ಲಿ ಬಿದ್ದದ್ದು ಒಂದು ರೋಮವನ್ನು ಸುಡಲಿಲ್ಲ. ಹೀಗೆ ಇರುವಾಗ ಇಂದ್ರದೇವರ ಶಕ್ತಿಯೂ ಇತರ ಅಸ್ತ್ರಶಸ್ತ್ರಗಳೂ ಅವರನ್ನು ಏನು ಮಾಡಲಿಕ್ಕೆ ಆಗುವುದು?

ಭೀಮಸೇನದೇವರು ಕರ್ಣನ ರಥಕ್ಕೆ ಹತ್ತಿಹೋದವರು ಅಲ್ಲಿ ಇದ್ದ ಇಂದ್ರದೇವರ ಶಕ್ತಿಯನ್ನು ಅಪಹರಿಸಿಕೊಂಡು ಬರಲಿಕ್ಕೆ ಇಚ್ಛಿಸಲಿಲ್ಲ. ಏಕೆಂದರೆ ಆ ಶಕ್ತಿಯಿಂದ ಘಟೋತ್ಕಚನು ಸಾಯಬೇಕೆಂದು ಭಗವಂತನ ಇಚ್ಛೆಯಿದೆಯೆಂದು ತಿಳಿದವರಾಗಿದ್ದರು. ತರುವಾಯ ಕರ್ಣನು ಬೇರೊಂದು ರಥದಲ್ಲಿ ಕೂತುಕೊಂಡು ಅರ್ಜುನನೊಡನೆ ಯುದ್ಧಕ್ಕೆ ಹೋದನು. 'ಪರಶುರಾಮದೇವರು ಕೊಟ್ಟ ರಥವನ್ನು ಧನುಸ್ಸನ್ನೂ ಇಂದ್ರದೇವರ ಶಕ್ತಿಯನ್ನೂ ಮೂರನ್ನೂ ಒಟ್ಟಿಗೆ ತೆಗೆದುಕೊಂಡು ಹೋದರೆ ಕೃಷ್ಣಪರಮಾತ್ಮನ ಮಾತಿನಿಂದ ಅರ್ಜುನನು ಅಪಹರಿಸಬಹುದು. ಆದುದರಿಂದ ಒಂದೊಂದನ್ನೇ ತೆಗೆದುಕೊಂಡು ಹೋಗಬೇಕು. ಒಂದನ್ನು

ಅಪಹರಿಸಿದರೆ ಮತ್ತೊಂದು ಉಳಿಯಬಹುದು' ಎಂಬ ಅಭಿಪ್ರಾಯದಿಂದ ಅರ್ಜುನನ ಬಳಿಗೆ ಹೋಗುವಾಗ ಕರ್ಣನು ದಿವ್ಯವಾದ ಆ ರಥವನ್ನು ಬಿಟ್ಟು ಇಂದ್ರದೇವರ ಶಕ್ತಿಯನ್ನು ಮಾತ್ರ ಹಿಡಿದುಕೊಂಡು ಯುದ್ಧಕ್ಕೆ ಹೋದನು. ಸಾಯುವಕಾಲದಲ್ಲಿ ಮಾತ್ರ ಎಲ್ಲವನ್ನು ಹಿಡಿದುಕೊಂಡು ಹೋದನು. ಕರ್ಣನ ರಥದಲ್ಲಿ ಇದ್ದ ಶಕ್ತಿಯನ್ನು ನೋಡಿ ಕೃಷ್ಣಪರಮಾತ್ಮನು ಅರ್ಜುನನನ್ನು ನಿಲ್ಲಿಸಿ ಸಾತ್ಯಕಿಯನ್ನೇ ಯುದ್ಧಮಾಡಲಿಕ್ಕೆ ಕಳುಹಿಸಿದನು. ಅವನಿಗೆ ತನ್ನ ರಥವನ್ನು ಕೊಟ್ಟು ಬಲವನ್ನೂ ಕೊಟ್ಟು ಕಳುಹಿಸಿದನು. ಆಗ ಕರ್ಣನು ಅಶಕ್ತನಾದ ಶಿಷ್ಯನಾದ ಸಾತ್ಯಕಿಯನ್ನು ಯುದ್ಧಕ್ಕೆ ಕಳುಹಿಸಿದನೆಂದು ಸಾತ್ಯಕಿಯನ್ನು ನೋಡುತ್ತಾ ಅರ್ಜುನನ ಮೇಲೆ ಸ್ಪರ್ಧೆಯಿಂದ ಸಾತ್ಯಕಿಯೊಡನೆ ಯುದ್ಧವನ್ನು ಮಾಡಿದನು. ಪರಮಾತ್ಮನ ರಥದಲ್ಲಿ ಇದ್ದುಕೊಂಡು ಯುದ್ಧಮಾಡುತ್ತಿದ್ದ ಸಾತ್ಯಕಿಯು ಕರ್ಣನು ಸ್ಪರ್ಧೆಯಿಂದ ಯುದ್ಧಮಾಡಿದ ಕಾರಣವೇ ಕರ್ಣನ ರಥವನ್ನು ಪುಡಿಮಾಡಿದನು. ಪರಮಾತ್ಮನ ರಥದಲ್ಲಿ ಇದ್ದು ಯುದ್ಧಮಾಡುವವನು ಪರಾಜಯವನ್ನು ಹೊಂದಲಾರನು. ಆದುದರಿಂದಲೂ ಸಾತ್ಯಕಿಯು ಕರ್ಣನಿಂದ ಪರಾಜಯವನ್ನು ಹೊಂದಲಿಲ್ಲ.

ದ್ರೋಣಾಚಾರ್ಯರಲ್ಲಿ ರಾಜಪುತ್ರರು ವಿದ್ಯಾಭ್ಯಾಸ ಮಾಡುತ್ತಿರುವಾಗ 'ಎಲ್ಲರೂ ರಹಸ್ಯವಾಗಿ ಒಂದು ಪ್ರತಿಜ್ಞೆಯನ್ನು ಮಾಡಬೇಕು. ಅದು ಒಬ್ಬರಿಗೂ ತಿಳಿದಿರಬಾರದು. ಶತ್ರುಸಂಹಾರಕ್ಕೆ ಕಾರಣವಾಗಿರಬೇಕು. ಪೂರ್ವದಲ್ಲಿ ಯಾರೂ ಹಾಗೆ ಪ್ರತಿಜ್ಞೆ ಮಾಡಿರಬಾರದು' ಎಂದು ಹೇಳಿದ್ದರು. ಭೀಮಸೇನದೇವರು 'ತೂಬರ' ಎಂದು ಹೇಳಿದವರನ್ನು ಕೊಂದು ಹಾಕುವೆನೆಂದು ಪ್ರತಿಜ್ಞೆ ಮಾಡಿದ್ದರು. 'ತೂಬರ' ಎಂದರೆ ಚೆನ್ನಾಗಿ ಮೀಸೆಯಿಲ್ಲದವನೆಂದು ಅರ್ಥ. ಭೀಮಸೇನದೇವರು 'ತನಗೆ ತುಂಬಾ ಮೀಸೆಯಿರುವ ಕಾರಣ ಹಾಗೆ ತನ್ನನ್ನು ಒಬ್ಬರೂ ಹೇಳಲಾರರು. ಈ ಪ್ರತಿಜ್ಞೆಯು ಒಬ್ಬರಿಗೂ ಉಪದ್ರವಕಾರಿಯಾಗಲಾರದು' ಎಂದು ಹಾಗೆ ಪ್ರತಿಜ್ಞೆಯನ್ನು ಮಾಡಿದ್ದರು. ತಾನು ಪ್ರತಿಜ್ಞೆಮಾಡಿದ ವಿಷಯವನ್ನು ಸ್ನೇಹದಿಂದ ಅರ್ಜುನನೊಡನೆ ಹೇಳಿದ್ದರು. ಅದನ್ನು ಮೆಲ್ಲನೆ ದುರ್ಯೋಧನನು ಕೇಳಿದ್ದನು. ಅವನು ಕರ್ಣನೊಡನೆ ಹೇಳಿದ್ದನು. ಆದುದರಿಂದ ಕರ್ಣನು ಆಗ ಭೀಮಸೇನ ದೇವರಿಗೆ ಕೋಪವುಂಟುಮಾಡುವುದಕ್ಕಾಗಿ 'ತೂಬರ' 'ತೂಬರ' ಎಂದು ಅನೇಕಬಾರಿ ಹೇಳಿದನು. ಆಗ ಭೀಮಸೇನದೇವರು 'ಅರ್ಜುನ! ನನ್ನ ಪ್ರತಿಜ್ಞೆಯನ್ನು ನೀನು ತಿಳಿದಿರುವಿ. ನಿನ್ನ ಪ್ರತಿಜ್ಞೆಯನ್ನು ನಾನು ತಿಳಿದಿರುವೆನು. ಆದುದರಿಂದ ನಾನೀಗ ಕರ್ಣನನ್ನು ಕೊಲ್ಲಬೇಕಾಯಿತು. ನೀನೂ ಇವನನ್ನು ಕೊಲ್ಲುವೆನೆಂದು

ಪ್ರತಿಜ್ಞೆಯನ್ನು ಮಾಡಿರುವಿ. ಆದುದರಿಂದ ನೀನೋ [1]ಅವನೋ ಇವನನ್ನು ಕೊಲ್ಲಬೇಕು' ಎಂದರು. ಅದಕ್ಕೆ ಅರ್ಜುನನು 'ನಾನೇ ಇವನನ್ನು ಕೊಲ್ಲಬೇಕು. ನಾನು ನಿಮ್ಮವನು. ಆದುದರಿಂದ ನಾನು ಕೊಂದರೆ ನೀವು ಕೊಂದಂತೆಯೇ ಆಗುವುದು. ನೀವು ಕೊಂದರೆ ನಾನು ಕೊಂದಂತೆ ಆಗಲಾರದು. ನೀವು ನನಗೆ ಗುರುಗಳು. ಆದುದರಿಂದ ನಾನೇ ಕೊಲ್ಲುವೆನು' ಎಂದು ಹೇಳಿ ಕರ್ಣನೊಡನೆ 'ನೀನು ಭೀಮಸೇನರಿಗೆ ಕಠಿನವಾದ ಮಾತನ್ನು ಹೇಳಿದಿ. ನೀವೆಲ್ಲರೂ ಒಟ್ಟಿಗೆ ಸೇರಿ ಅಭಿಮನ್ಯುವನ್ನು ಕೊಂದಿರಿ. ಆದುದರಿಂದ ನಿನ್ನನ್ನು ನಿನ್ನ ಮಗನನ್ನೂ ಸಂಹರಿಸುವೆನು' ಎಂದನು. ಆಗ ಕರ್ಣನು ಬೇರೊಂದು ರಥವನ್ನು ಏರಿ ಜಯದ್ರಥನನ್ನು ರಕ್ಷಿಸಿದನು. ಅರ್ಜುನನು ಎಷ್ಟು ಪ್ರಯತ್ನ ಮಾಡಿದರೂ ಕರ್ಣ ಅಶ್ವತ್ಥಾಮರಿಂದ ರಕ್ಷಿತನಾದ ಜಯದ್ರಥನನ್ನು ಸಂಹರಿಸಲಿಕ್ಕೆ ಸಮರ್ಥನಾಗಲಿಲ್ಲ.

ತರುವಾಯ ಭಗವಂತನ ಅನುಗ್ರಹದಿಂದ ಅರ್ಜುನನು ಜಯದ್ರಥನನ್ನು ಸಂಹರಿಸಿದಮೇಲೆ ಭೀಮಸೇನದೇವರು ಶಲ್ಯ ದುರ್ಯೋಧನ ಕೃಪಾದಿಗಳನ್ನು ಜಯಿಸಿ ಭಯಂಕರವಾಗಿ ಗರ್ಜನೆ ಮಾಡಿದರು. ಕೃಷ್ಣಪರಮಾತ್ಮನು ಪಾಂಚಜನ್ಯ ಶಂಖವನ್ನು, ಅರ್ಜುನನು ದೇವದತ್ತ ಎಂಬ ಶಂಖವನ್ನೂ ಊದಿದರು. ಭೀಮಸೇನದೇವರ ಸಿಂಹಗರ್ಜನೆಯನ್ನು ಪಾಂಚಜನ್ಯದ ಶಬ್ದವನ್ನು ಕೇಳಿ ಧರ್ಮರಾಜನು ಜಯದ್ರಥನು ಮೃತನಾದನೆಂದು ತಿಳಿದು ಸಂತೋಷವನ್ನು ಹೊಂದಿದನು. ದುರ್ಯೋಧನನು ತುಂಬಾ ದುಃಖವನ್ನು ಹೊಂದಿದನು. ತರುವಾಯ ಭೀಮಸೇನದೇವರು ಅಶ್ವತ್ಥಾಮಾಚಾರ್ಯರೇ ಮೊದಲಾದ ಸೈನ್ಯವನ್ನು ಎದುರಿಸಿದರು. ಅರ್ಜುನನು ಕರ್ಣಾದಿಗಳನ್ನು ಎದುರಿಸಿದನು. ಆ ಸೈನ್ಯವೆಲ್ಲವೂ ಭಗ್ನವಾಯಿತು.

ತರುವಾಯ ಓಡುತ್ತಿರುವ ಸೈನ್ಯವನ್ನು ನೋಡಿಯೂ ಜಯದ್ರಥನ ವಧದಿಂದಲೂ ಕೋಪವುಳ್ಳವನಾಗಿ ದುರ್ಯೋಧನನು . ಯುದ್ಧಕ್ಕೆ ಬಂದನು. ಅವನು ಭೀಮಸೇನದೇವರ ಮೇಲೆಯೂ ಅರ್ಜುನ, ಧರ್ಮರಾಜ, ನಕುಲ, ಸಹದೇವ, ಧೃಷ್ಟದ್ಯುಮ್ನ, ಸಾತ್ಯಕಿ, ದ್ರೌಪದೀದೇವಿಯರ ಮಕ್ಕಳ ಮೇಲೆಯೂ ಬಾಣಗಳ ಮಳೆಯನ್ನು ಸುರಿಸಿದನು. ಅವರೂ ಪ್ರತಿಯುದ್ಧವನ್ನು ಮಾಡಿದರು. ಅನೇಕರೊಡನೆ ಅವನೊಬ್ಬನು ಯುದ್ಧಮಾಡುವುದನ್ನು ನೋಡಿ ದ್ರೋಣ, ಅಶ್ವತ್ಥಾಮ, ಕೃಪ ಮೊದಲಾದವರು ಅವನ ಸಹಾಯಕ್ಕೆ ಬಂದರು.

1. ಅಥವಾ ನಾನೋ

ದುರ್ಯೋಧನನು ಕರ್ಣನೊಡನೆ 'ಈ ಭೀಮಸೇನನನ್ನು ಯುದ್ಧದಲ್ಲಿ ಸಂಹರಿಸು' ಎಂದು ಹೇಳಿದನು. ಅದಕ್ಕೆ ಅವನು 'ಇಂದ್ರಾದಿದೇವತೆಗಳೂ ಇವನನ್ನು ಸಂಹರಿಸಲಿಕ್ಕೆ ಆಗಲಾರದು. ಇವನೊಡನೆ ಯುದ್ಧಮಾಡಿ ಅತ್ಯಂತ ಪೀಡಿತನಾಗಿ ದೈವೇಚ್ಛೆಯಿಂದ ಬದುಕಿರುವೆನು' ಎಂದನು. 'ಆದುದರಿಂದ ಶಕ್ತಿಯಿದ್ದಷ್ಟು ಯುದ್ಧಮಾಡುವೆನು. ಜಯವಾಗುವುದು ದೈವೇಚ್ಛೆಯಿಂದ' ಎಂದು ಹೇಳಿದನು. ಆಮೇಲೆ ದುರ್ಯೋಧನನು ದ್ರೋಣಾಚಾರ್ಯರೊಡನೆ 'ನಿಮ್ಮ ಉಪೇಕ್ಷೆಯಿಂದ ಅರ್ಜುನನು ಜಯದ್ರಥನನ್ನು ಸಂಹರಿಸಿದನು. ಭೀಮಸಾತ್ಯಕಿಯರಿಂದ ನನ್ನ ಬಲವೆಲ್ಲಾ ನಷ್ಟವಾಯಿತು. ಪಾಂಡವರ ಮೇಲಿನ ಸ್ನೇಹದಿಂದ ನೀವು ಪ್ರತಿಜ್ಞೆಯನ್ನು ಬಿಟ್ಟುಬಿಟ್ಟಿರಿ' ಎಂದು ಹೇಳಿದನು. ಅದನ್ನು ಕೇಳಿ ದ್ರೋಣಾಚಾರ್ಯರು ಕೋಪಿಸಿಕೊಂಡು 'ನಾನು ಇನ್ನು ಮುಂದೆ ರಾತ್ರಿಯಲ್ಲಿಯೂ ಹಗಲಿನಲ್ಲಿಯೂ ಹಾಕಿದ ಕವಚವನ್ನು ಬಿಚ್ಚಲಾರೆನು. ನನ್ನ ಮಗನೊಡನೆಯೂ ಪಾಂಚಾಲದೇಶದವರನ್ನು ಅವರ ಮೊಮ್ಮಕ್ಕಳನ್ನು ಉಳಿಸಬಾರದು ಎಂದು ಹೇಳು' ಎಂದು ಹೇಳಿ ರಾತ್ರಿಯಾಗಲು ಯುದ್ಧಕ್ಕೆ ಹೊರಟರು.

ಭೀಮಸೇನದೇವರು ಅಶ್ವತ್ಥಾಮಾಚಾರ್ಯರನ್ನು ದುರ್ಯೋಧನನನ್ನು ರಥರಹಿತರನ್ನಾಗಿ ಮಾಡಿ ಶತ್ರುಸೈನ್ಯವನ್ನು ಓಡಿಸಿದರು. ಆ ಸಮಯದಲ್ಲಿ ಎರಡು ಸೈನ್ಯಗಳಲ್ಲಿಯೂ ಒಟ್ಟಿಗೆ ಏಳು ಅಕ್ಷೌಹಿಣೀ ಸೈನ್ಯಗಳು ನಾಶಹೊಂದಿದ್ದವು. ಅವುಗಳ ಮಧ್ಯದಲ್ಲಿ ಭೀಮಸೇನದೇವರಿಂದ ಮೂರು ಅಕ್ಷೌಹಿಣೀ ಸೈನ್ಯಗಳೂ ಅರ್ಜುನನಿಂದ ಎರಡು ಅಕ್ಷೌಹಿಣೀಸೈನ್ಯಗಳೂ ಅಭಿಮನ್ಯು ಸಾತ್ಯಕಿ ಮೊದಲಾದವರಿಂದ ಭೀಮಾರ್ಜುನರಿಂದ ಮೃತಗಳಾದ ಸೈನ್ಯಗಳಲ್ಲಿ ಹದಿನಾರನೇ ಒಂದಂಶವೂ ಘಟೋತ್ಕಚಾದಿಗಳಿಂದ ಮೂರು ಅಕ್ಷೌಹಿಣೀಸೈನ್ಯಗಳಲ್ಲಿ ಹತ್ತನೇ ಒಂದು ಅಂಶವೂ ಭೀಷ್ಮ ದ್ರೋಣ ಅಶ್ವತ್ಥಾಮಾಚಾರ್ಯರಿಂದ ಎರಡು ಅಕ್ಷೌಹಿಣೀ ಸೈನ್ಯಗಳೂ ಉಳಿದ ಸಮಸ್ತರಿಂದ ಅದರಲ್ಲಿ ನಾಲ್ಕನೇ ಭಾಗವೂ ಮೃತವಾದವು. ತರುವಾಯ ರಾತ್ರಿಯಲ್ಲಿ ಪಾಂಡವರು ಐದು ಅಕ್ಷೌಹಿಣೀ ಸೈನ್ಯಗಳಿಂದಲೂ ಕೌರವರು ಆರು ಅಕ್ಷೌಹಿಣೀ ಸೈನ್ಯಗಳಿಂದಲೂ ಸಹಿತರಾಗಿ ಯುದ್ಧಮಾಡಿಕೊಂಡರು. ಭೀಮಸೇನದೇವರು ಸೈನ್ಯವನ್ನು ಓಡಿಸುತ್ತಿರಲು ಕರ್ಣನು ಯುದ್ಧಕ್ಕೆ ಬಂದನು. ಆಗ ಭೀಮಸೇನದೇವರು ಕರ್ಣನ ಮುಂಭಾಗದಲ್ಲಿ ದುಷ್ಕರ್ಣನನ್ನು ಕರ್ಣನನ್ನು ಪಾದದಿಂದ ತಿಕ್ಕಿ ನಾಶಮಾಡಿದರು. ಅವರಿಬ್ಬರೂ ದುರ್ಯೋಧನನ ತಮ್ಮಂದಿರು ರಥ ಧ್ವಜ ಕುದುರೆ ಸಾರಥಿಗಳಿಂದ ಸಹಿತರಾಗಿ ನಾಶವನ್ನು ಹೊಂದಿದರು. 'ಪೂರ್ವದಲ್ಲಿ ನಾನು

ಆಯುಧಗಳಿಂದ ರಹಿತನಾಗಿದ್ದೇನೆಂದು ನನ್ನೊಡನೆ ಕಠಿನ ಮಾತುಗಳನ್ನು ಆಡಿದಿ. ಆಗಲೇ ನಿನ್ನನ್ನು ಕಾಲಿನಿಂದ ಒದೆದು ಕೊಲ್ಲಲಿಕ್ಕೆ ಸಮರ್ಥನಾಗಿದ್ದೆನು' ಎಂದು ಭೀಮಸೇನದೇವರು ಹಾಗೆ ಸಂಜ್ಞೆಯನ್ನು ಮಾಡಿ ತೋರಿಸಿದರು. ತರುವಾಯ ಕಲಿಂಗರಾಜನನ್ನು ಮುಷ್ಟಿಯಿಂದ ಗುದ್ದಿ ಕೊಂದು ಹಾಕಿದರು. 'ನಿನ್ನನ್ನು ಮುಷ್ಟಿಯಿಂದ ಗುದ್ದಿ ಕೊಂದು ಹಾಕಲು ಸರ್ವಥಾ ಸಮರ್ಥನಾಗಿದ್ದೆನು. ನನ್ನ ಇಚ್ಛೆಯಿಂದ ನೀನು ಬದುಕಿರುವಿ' ಎಂದು ತಿಳಿಸುವುದಕ್ಕಾಗಿ ಹಾಗೆ ಕುದುರೆ ಸಾರಥಿ ರಥ ಧ್ವಜಗಳಿಂದ ಸಹಿತನಾದ ಕಲಿಂಗರಾಜನನ್ನು ಮುಷ್ಟಿಯಿಂದ ಗುದ್ದಿ ಪುಡಿಮಾಡಿದನು. ಕೇತುಮಾನ್ ಶಕ್ರದೇವ ಶ್ರುತಾಯುಧ ಇವರು ಭೀಮಸೇನದೇವರಿಂದ ಅಕ್ಷೌಹಿಣೀಸೈನ್ಯದಿಂದ ಸಹಿತರಾಗಿ ಮೃತರಾದರು. ಪೂರ್ವದಲ್ಲಿ ಭೀಷ್ಮಾಚಾರ್ಯರು ಸೇನಾಧಿಪತ್ಯವನ್ನು ಮಾಡುತ್ತಿರಲು ರಾತ್ರಿಯಲ್ಲಿ ಖಡ್ಗಯುದ್ಧದಲ್ಲಿ ಧ್ರುವ ಮೊದಲಾದ ಅನೇಕ ಕರ್ಣನ ತಮ್ಮಂದಿರನ್ನು ಭೀಮಸೇನದೇವರು ಸಂಹರಿಸಿದ್ದರು.

ಭೀಮಸೇನದೇವರು ಮಾಡಿದ ಸಂಜ್ಞೆಯನ್ನು ತಿಳಿದು ಕರ್ಣನು 'ಆಗ ನಾನು ದಿವ್ಯವಾದ ಶಕ್ತಿಯನ್ನು ಬಿಡಲಿಲ್ಲ. ಆದರಿಂದ ಬದುಕಿರುವಿ' ಎಂದು ತಿಳಿಸುತ್ತಾ ಭೀಮಸೇನದೇವರ ಮೇಲೆ ಬೇರೆ ಒಂದು ಶಕ್ತಿಯನ್ನು ಬಿಟ್ಟನು. ಆ ಕ್ಷಣ ಭೀಮಸೇನದೇವರು ಮೇಲೆ ಹಾರಿ ಆ ಶಕ್ತಿಯನ್ನು ಹಿಡಿದು ಕರ್ಣನ ಮೇಲೆಯೇ ಹಾಕಿದರು. ಹೀಗೆ ಮಾಡಿ 'ನೀನು ಆಗ ದಿವ್ಯವಾದ ಶಕ್ತಿಯನ್ನು ಬಿಟ್ಟಿದ್ದರೆ ಅದು ನಿನ್ನನ್ನೇ ಸಂಹರಿಸುತ್ತಿತ್ತು' ಎಂದು ಸೂಚನೆ ಮಾಡಿದರು. ಆದರೆ ಭೀಮಸೇನದೇವರು ಕರ್ಣನನ್ನು ಕೊಲ್ಲುವ ಅಭಿಪ್ರಾಯವಿಲ್ಲದೆ ಅವನು ಬದುಕಿರಲಿ ಎಂಬ ಅಭಿಪ್ರಾಯದಿಂದ ಬಿಟ್ಟ ಕಾರಣ ಆ ಶಕ್ತಿಯು ಕರ್ಣನ ಬಲಭುಜವನ್ನು ಸೀಳಿ ಭೂಮಿಯನ್ನು ಭೇದಿಸಿಕೊಂಡು ಪ್ರವೇಶಿಸಿತು. ತರುವಾಯ ಭೀಮಸೇನದೇವರು ಪುನಃ ತನ್ನ ರಥದಲ್ಲಿ ಕೂತುಕೊಂಡು ಕರ್ಣನು ನೋಡುವಂತೆ ಶತ್ರುಸೈನ್ಯವನ್ನು ಓಡಿಸಿದರು. ಅವರನ್ನು ಕರ್ಣನು ತೀಕ್ಷ್ಣಗಳಾದ ಬಾಣಗಳಿಂದ ತಡೆದನು. ಭೀಮಸೇನದೇವರು ಕರ್ಣನ ರಥದಮೇಲೆ ಗದೆಯನ್ನು ಬಿಸಾಡಿದರು. ಕರ್ಣನು ಗದೆಯನ್ನು ತಡೆಯುವುದಕ್ಕಾಗಿ ಸ್ಥೂಣಾಕರ್ಣಾಸ್ತ್ರವನ್ನು ಬಿಟ್ಟನು. ಆ ಅಸ್ತ್ರದಿಂದ ತಡೆಯಲ್ಪಟ್ಟು ಭೀಮಸೇನದೇವರ ಗದೆಯು ಭೀಮಸೇನದೇವರ ಕೈಗೇ ಬಂದು ಸೇರಿತು. ಭೀಮಸೇನದೇವರು ಗದೆಯನ್ನು ಕೈಯಲ್ಲಿ ಹಿಡಿದುಕೊಂಡು ಕರ್ಣನ ರಥವನ್ನು ಏರಿ 'ಇದೇ ರೀತಿಯಾಗಿ ನಿನ್ನನ್ನು ಪುಡಿಮಾಡಲು ನಾನು ಶಕ್ತನಾಗಿರುವೆನು. ನನ್ನ ಇಚ್ಛೆಯಿಂದಲೇ ನೀನು ಬದುಕಿರುವಿ' ಎಂದು ತಿಳಿಸುತ್ತಾ ಗದೆಯಿಂದ ರಥದ

ಕೂಬರವೆಂಬ ಭಾಗವನ್ನು ಪುಡಿಮಾಡಿದರು. ಪುನಃ ತನ್ನ ರಥಕ್ಕೆ ಬಂದು ಕರ್ಣನ ಮುಂಭಾಗದಲ್ಲಿ ಬಹು ಶತ್ರುಗಳನ್ನು ಸಂಹರಿಸಿದರು.

ಕರ್ಣನು ಅವರನ್ನು ಬಿಟ್ಟು ಸಹದೇವನೊಡನೆ ಯುದ್ಧಕ್ಕೆ ಹೋದನು. ಸಹದೇವನನ್ನು ಜಯಿಸಿದನು. ತರುವಾಯ ಅಶ್ವತ್ಥಾಮಾಚಾರ್ಯರು ಪಾಂಡವ ಸೈನ್ಯವನ್ನು ನಾಶಪಡಿಸಿದರು. ಆಗ ಘಟೋತ್ಕಚನಿಗೂ ಅವರಿಗೂ ಯುದ್ಧವು ನಡೆಯಿತು. ಅಶ್ವತ್ಥಾಮಾಚಾರ್ಯರು ನಿಷ್ಕ್ಯ ಎಂದು ಹೆಸರುಳ್ಳ ಘಟೋತ್ಕಚನ ಮಗನನ್ನು ಕೊಂದರು. ಆ ನಿಷ್ಕ್ಯನು ಪೂರ್ವಜನ್ಮದಲ್ಲಿ ಅಂಜನವರ್ಮ ಎಂದು ಹೆಸರುಳ್ಳವನು. ಆಮೇಲೆ ಘಟೋತ್ಕಚನಿಗೂ ಅಶ್ವತ್ಥಾಮಾಚಾರ್ಯರಿಗೂ ಭಯಂಕರ ಯುದ್ಧವು ನಡೆಯಿತು. ಘಟೋತ್ಕಚನು ಮೂರ್ಛಿತನಾದನು. ಅವನನ್ನು ಸಾರಥಿಯು ದೂರ ಕರೆದುಕೊಂಡು ಹೋದನು. ಅಶ್ವತ್ಥಾಮಾಚಾರ್ಯರು ಪಾಂಡವರ ಸೈನ್ಯವನ್ನು ಓಡಿಸಿದನು. ಘಟೋತ್ಕಚನು ಮೂರ್ಛೆಯಿಂದ ಎದ್ದು ಯುದ್ಧಕ್ಕೆ ಬಂದವನಾಗಿ ಕೌರವರ ಸೈನ್ಯವನ್ನೆಲ್ಲಾ ನಡುಗಿಸಿದನು. ಆಗಲೇ ಅರ್ಜುನನೊಡನೆ ಯುದ್ಧಕ್ಕೆ ಬಂದ ಕರ್ಣನನ್ನು ನೋಡಿ ಪರಮಾತ್ಮನು ಅವನ ಕೈಯಲ್ಲಿದ್ದ ದಿವ್ಯವಾದ ಶಕ್ತಿಯನ್ನು ನೋಡಿ ಅದನ್ನು ಘಟೋತ್ಕಚನಲ್ಲಿ ಬಿಡಿಸುವುದಕ್ಕಾಗಿ ಅರ್ಜುನನ ರಕ್ಷೆಗಾಗಿ ಘಟೋತ್ಕಚನನ್ನೇ ಯುದ್ಧಕ್ಕೆ ಕಳುಹಿಸಿದನು. ಘಟೋತ್ಕಚನು ಎಲ್ಲರೊಡೆಯೂ ಯುದ್ಧ ಮಾಡಿದನು. ಕರ್ಣನು ಅಸ್ತ್ರಸಾಮರ್ಥ್ಯ ದಿಂದ ಭಯಪಡದೆ ಯುದ್ಧಮಾಡಿದನು. ಅಶ್ವತ್ಥಾಮಾಚಾರ್ಯರನ್ನು ಭೀಮಸೇನ ದೇವರು ತಡೆದರು. ತ್ರಿಗರ್ತದೇಶದವರನ್ನು ಅರ್ಜುನನು ತಡೆದನು. ಆಗ ಅಲಂ ಬಲ ಎಂಬ ರಾಕ್ಷಸನು ಯುದ್ಧಕ್ಕೆ ಬಂದನು. ಅವನನ್ನು ಘಟೋತ್ಕಚನು ಕೊಂದು ಅವನ ತಲೆಯನ್ನು ದುರ್ಯೋಧನನ ಮೇಲೆ ಬಿಸಾಡಿದನು. ಆಮೇಲೆ ಅಲಾಯುಧ ಎಂಬ ರಾಕ್ಷಸನು ಯುದ್ಧಕ್ಕೆ ಬರಲು ಅವನ ತಲೆಯನ್ನು ಕಡಿದು ದುರ್ಯೋಧನನ ಎದೆಯ ಮೇಲೆ ಬಿಸಾಡಿದನು. ಇದರಿಂದ ಎಲ್ಲರೂ ಭಯವುಳ್ಳವರಾಗಿ ಕರ್ಣನೊಡನೆ ಅರ್ಜುನನಿಗಾಗಿ ಇಟ್ಟಿದ್ದ ಶಕ್ತಿಯನ್ನು ಅವನಿಗೆ ಬಿಡಲಿಕ್ಕೆ ಹೇಳಿದರು. 'ಇವನು ಸತ್ತರೇ ಎಲ್ಲರೂ ಸತ್ತಂತೆ. ಅರ್ಜುನನು ಏನು ಮಾಡಲಿಕ್ಕೆ ಹೋಗುವನು. ಇವನಿಗೇ ಶಕ್ತಿಯನ್ನು ಬಿಡು' ಎಂದು ಎಲ್ಲರೂ ಹೇಳಲಿಕ್ಕೆ ಆರಂಭಿಸಿದರು.

ತರುವಾಯ ಕರ್ಣನು ಇಂದ್ರದೇವರು ಕೊಟ್ಟಿದ್ದ ಆ ಶಕ್ತಿಯನ್ನು ಆಕಾಶದಲ್ಲಿ ಯುದ್ಧಮಾಡುತ್ತಿದ್ದ ಘಟೋತ್ಕಚನಿಗೆ ಬಿಟ್ಟನು. ಅವನು ಎದೆಯು ಸೀಳಿ ಹೋಗಿ ಸತ್ತುಬಿದ್ದನು. ದುರ್ಯೋಧನಾದಿಗಳೆಲ್ಲರೂ ಸಂತೋಷಹೊಂದಿದರು. ಆಗ

ಕೃಷ್ಣಪರಮಾತ್ಮನು ಅರ್ಜುನನನ್ನು ಆಲಿಂಗನ ಮಾಡಿಕೊಂಡು ನರ್ತನ ಮಾಡಿದನು. ಶಂಖವನ್ನು ಊದಿದನು. ಗಟ್ಟಿಯಾಗಿ ನಗಾಡಿದನು. ಇದನ್ನು ನೋಡಿ ಅರ್ಜುನನು ದುಃಖವುಳ್ಳವನಾಗಿ 'ನಮ್ಮ ಜ್ಯೇಷ್ಠಪುತ್ರನು ಮೃತನಾಗಿರುವಾಗ ಹೀಗೆಲ್ಲಾ ಏಕೆ ಮಾಡುವಿರಿ?' ಎಂದು ಕೇಳಿದನು. ಅದಕ್ಕೆ ಕೃಷ್ಣಪರಮಾತ್ಮನು 'ಈ ಶಕ್ತಿಯಿಂದ ನೀನು ಸಾಯಬೇಕಾಗಿತ್ತು. ನೀನು ಬದುಕಿಕೊಂಡಿ' ಎಂದನು. ತರುವಾಯ ಧರ್ಮರಾಜನು ದುಃಖದಿಂದ ಕೋಪದಿಂದಲೂ ಕರ್ಣನಿದ್ದಲ್ಲಿಗೆ ಬಂದನು. ಆಗ ವೇದವ್ಯಾಸ ದೇವರು ಬಂದು 'ಯಾವ ಶಕ್ತಿಯಿಂದ ಅರ್ಜುನನು ಸಾಯಬೇಕಾಗಿತ್ತೋ ಅದರಿಂದ ಘಟೋತ್ಕಚನು ಸತ್ತನು. ದೈವೇಚ್ಛೆಯಿಂದ ಅರ್ಜುನನು ಬದುಕಿಕೊಂಡನು. ಆದುದರಿಂದ ದುಃಖಿಸದಿರು' ಎಂದು ಸಮಾಧಾನ ಹೇಳಿ ಹೋದರು. ಆಮೇಲೆ ಯುದ್ಧವು ನಡೆಯಿತು.

ಭೀಮಾರ್ಜುನರು ಸೈನ್ಯವನ್ನು ಸಂಹರಿಸುತ್ತಿರಲು ದೀಪಹಿಡಿದುಕೊಂಡಿದ್ದ ಸೈನ್ಯಕರೆಲ್ಲರೂ ನಿದ್ರಾವಶರಾದರು. ಅರ್ಜುನನು ಅವರನ್ನೆಲ್ಲಾ ಚಂದ್ರೋದಯ ವಾಗುವವರೆಗೆ ಮಲಗಲಿಕ್ಕೆ ಹೇಳಿದನು. ಆಮೇಲೆ ಪುನಃ ಯುದ್ಧವು ನಡೆಯಿತು. ಸೋಮದತ್ತನನ್ನು, ಅವನ ಮಗನಾದ ಭೂರಿಯನ್ನು, ಸಾತ್ಯಕಿಯು ಸಂಹರಿಸಿದನು. ಬಾಹ್ಲೀಕರಾಜನು ಸಾತ್ಯಕಿಯ ರಥವನ್ನು ಪುಡಿಮಾಡಿ ಅವನನ್ನು ಕೊಲ್ಲಲಿಕ್ಕೆ ಒಂದು ಬಾಣವನ್ನು ಬಿಟ್ಟನು. ಆ ಬಾಣವನ್ನು ಭೀಮಸೇನದೇವರು ಕತ್ತರಿಸಿದರು. ಬಾಹ್ಲೀಕನು ಭೀಮಸೇನದೇವರಿಗೆ ಶತಘ್ನಿಯೆಂಬ ಆಯುಧದಿಂದ ಬಡೆದನು. ಭೀಮಸೇನದೇವರು ಅದರಿಂದ ಬಡಿಯಲ್ಪಟ್ಟವರಾಗಿ ಪರವಶರಾದಂತೆ ಆಗಿ ಗದೆಯಿಂದ ಬಾಹ್ಲೀಕನನ್ನು ಬಡೆದನು. ಅವನು ಸತ್ತುಬಿದ್ದನು. ಬಾಹ್ಲೀಕರಾಜನು ಪೂರ್ವದಲ್ಲಿ ಸ್ನೇಹದಿಂದಲೇ 'ಭೀಮ! ನೀನೇ ನನ್ನನ್ನು ಯುದ್ಧದಲ್ಲಿ ಸಂಹರಿಸಬೇಕು. ಅದರಿಂದ ನಾನು ಆ ಲೋಕದಲ್ಲಿ ಕೀರ್ತಿಯನ್ನು ಪರಲೋಕದಲ್ಲಿ ಧರ್ಮವನ್ನು ಹೊಂದುವೆನು' ಎಂದು ಕೇಳಿಕೊಂಡಿದ್ದನು. ಅದಕ್ಕೆ ಭೀಮಸೇನದೇವರು 'ನಿಮ್ಮಿಂದ ನಮಗೆ ಯುದ್ಧದಲ್ಲಿ ತುಂಬಾ ವ್ಯಥೆಯುಂಟಾದರೆ ಮಾತ್ರ ನಿಮ್ಮನ್ನು ಸಂಹರಿಸುವೆನು. ಇಲ್ಲದಿದ್ದರೆ ಸಂಹರಿಸಲಾರೆನು. ನಿಮ್ಮನ್ನು ಸಂಹರಿಸುವುದು ನಿಮ್ಮ ಸೇವಾ ರೂಪವಾಗಿ ಆಗಬೇಕು' ಎಂದು ಹೇಳಿದ್ದರು. ಆದುದರಿಂದ ಭೀಮಸೇನದೇವರು ಬಾಹ್ಲೀಕ ರಾಜನನ್ನು ಸಂಹರಿಸಿದರು. ತರುವಾಯ ಎರಡು ಪಕ್ಷದವರಿಗೂ ಭಯಂಕರವಾದ ಯುದ್ಧವು ನಡೆಯಿತು. ದ್ರೋಣಾಚಾರ್ಯರು ವಿರಾಟದ್ರುಪದ ಇತ್ಯಾದಿ ಬಹುಜನ ಪ್ರಸಿದ್ಧರಾದವರನ್ನು ಸಂಹರಿಸಿದರು.

ಧೃಷ್ಟದ್ಯುಮ್ನನು ಭೀಮಸೇನದೇವರಿಂದ ರಕ್ಷಿತನಾಗಿ ದ್ರೋಣಾಚಾರ್ಯರನ್ನು ಕೊಲ್ಲಲಿಕ್ಕೆ ಬಹುಪ್ರಯತ್ನ ಮಾಡಿದನು. ಧೃಷ್ಟದ್ಯುಮ್ನನಿಂದ ದ್ರೋಣಾಚಾರ್ಯರು ಮೂರ್ಛಿತರಾದರು. ಆಗ ಬೇಗನೇ ಧೃಷ್ಟದ್ಯುಮ್ನನು ಖಡ್ಗಚರ್ಮಗಳನ್ನು ಹಿಡಿದುಕೊಂಡು ಅವರ ರಥಕ್ಕೆ ಹೋದನು. ಅಷ್ಟರಲ್ಲೇ ಅವರು ಎದ್ದು ಅತಿಚಿಕ್ಕ ಬಾಣಗಳಿಂದ ಅವನನ್ನು ಅತ್ಯಂತ ಪೀಡಿಸಿದರು. ಅವನು ತನ್ನ ರಥಕ್ಕೇ ಬಂದುಬಿಟ್ಟನು. ಪುನಃ ಇಬ್ಬರೂ ಭಯಂಕರವಾದ ಯುದ್ಧವನ್ನು ಮಾಡಿಕೊಂಡರು. ದ್ರೋಣಾಚಾರ್ಯರು ಶತ್ರುವನ್ನು ತಡೆದು ಬ್ರಹ್ಮಾಸ್ತ್ರದಿಂದ ಶತ್ರುಸೈನ್ಯವನ್ನೆಲ್ಲಾ ಸುಟ್ಟುಹಾಕಿದರು. ಭೀಮಸೇನದೇವರೂ, ಅರ್ಜುನನೂ, ಸಾತ್ಯಕಿಯೂ, ಕ್ರಮದಿಂದ ಮಹಾಸೇನೆಯಿಂದ ಸಹಿತರಾಗಿ ಅಶ್ವತ್ಥಾಮಾಚಾರ್ಯರನ್ನು ದೂರದಲ್ಲಿಯೇ ತಡೆದನು. ಭೀಮಸೇನದೇವರು ಆನೆಗಳ ಸೈನ್ಯವನ್ನು ಸಂಹರಿಸುತ್ತಾ ಜಯತ್ಸೇನ ಎಂಬ ಮಗಧದೇಶದವನನ್ನು ಇತರ ಅನೇಕ ಮಗಧದೇಶದವರನ್ನು ಸಂಹರಿಸಿ ದರು. ಮಾಲವ ರಾಜನ ಅಶ್ವತ್ಥಾಮ ಎಂದು ಹೆಸರುಳ್ಳ ಆನೆಯನ್ನು ಸಂಹರಿಸಿದರು.

ಅದನ್ನು ನೋಡಿ ಕೃಷ್ಣಪರಮಾತ್ಮನಿಂದ ಪ್ರೇರಿತನಾಗಿ ಧರ್ಮರಾಜನು 'ಅಶ್ವತ್ಥಾಮನು ಸತ್ತನು' ಎಂದು ಹೇಳಿದನು. ಅಶ್ವತ್ಥಾಮನ ಸಂಹಾರವನ್ನು ಕೇಳಿ ನಾನು ಯುದ್ಧ ಮಾಡಲಾರೆನು ಎಂದು ಮೊದಲೇ ದ್ರೋಣಾಚಾರ್ಯರು ಧರ್ಮರಾಜನೊಡನೆ ತಿಳಿಸಿದ್ದ ಕಾರಣ ಆಗ ಅವರು ಧರ್ಮರಾಜನೊಡನೆ 'ಸತ್ಯವನ್ನು ಹೇಳು' ಎಂದರು. ಅದಕ್ಕೆ ಧರ್ಮರಾಜನು ಮೆಲ್ಲನೆ ಅಶ್ವತ್ಥಾಮ ಎಂಬ ಆನೆಯು ಎಂದು ಹೇಳಿ ನಾನು ಸತ್ಯವನ್ನೇ ಹೇಳುತ್ತಿರುವೆನು ಎಂದನು. ಆನೆಯೆಂಬ ಮಾತು ದ್ರೋಣಾಚಾರ್ಯರ ಕಿವಿಗೆ ಬೀಳಲಿಲ್ಲ. ಅವರು ಅಶ್ವತ್ಥಾಮಾಚಾರ್ಯರು ಸತ್ತರೆಂದೇ ತಿಳಿದುಕೊಂಡು ತುಂಬಾ ದುಃಖವನ್ನು ಹೊಂದಿದರು. ಆಗ ಭೀಮಸೇನದೇವರು ಅವರ ರಥದ ಒಂದು ಭಾಗವನ್ನು ಹಿಡಿದುಕೊಂಡು 'ಗುಣವಂತರಾದ ನಿಮಗೆ ಯಾವಾಗಲೂ ಕ್ಷತ್ರಿಯಧರ್ಮವನ್ನು ಆಶ್ರಯಿಸುವುದು ಯೋಗ್ಯವಲ್ಲ' ಎಂದರು. ಆಕಾಶದಲ್ಲಿ ಇದ್ದ ಋಷಿಗಳೂ ಯುದ್ಧ ಮಾಡಿದ್ದು ಸಾಕು. ಇಲ್ಲಿಗೆ ಬಾ' ಎಂದು ಹೇಳಿದರು. ಅದನ್ನೆಲ್ಲಾ ನೋಡಿ ದ್ರೋಣಾಚಾರ್ಯರು ಶಸ್ತ್ರವನ್ನು ಪರಿತ್ಯಾಗ ಮಾಡಿದರು. ಪರಮಾತ್ಮನನ್ನು ಧ್ಯಾನಮಾಡುತ್ತಾ ದೇಹವನ್ನು ಪರಿತ್ಯಾಗಮಾಡಿ ತನ್ನ ಲೋಕಕ್ಕೆ ಹೋದರು. ಕೃಷ್ಣಪರಮಾತ್ಮನೂ ಪಾಂಡವರೂ ಕೃಪಾಚಾರ್ಯರು ತನ್ನ ಲೋಕಕ್ಕೆ ಹೋಗುತ್ತಿದ್ದ ಅವರನ್ನು ನೋಡಿದರು. ಆಗ ಧೃಷ್ಟದ್ಯುಮ್ನನು ಮಾತ್ರ ಪಾಂಡವರೆಲ್ಲರೂ ಬೇಡವೆಂದು ಹೇಳುತ್ತಿದ್ದರೂ ಖಡ್ಗ

ಚರ್ಮವನ್ನು ಹಿಡಿದುಕೊಂಡು ದ್ರೋಣಾಚಾರ್ಯರ ರಥಕ್ಕೆ ಹಾರಿ ಅವರ ತಲೆಯನ್ನು ಕಡಿದುಹಾಕಿ ತನ್ನ ರಥಕ್ಕೆ ಬಂದನು. ಅದನ್ನು ನೋಡಿ ಕೃಪಾಚಾರ್ಯರು ಭಯದಿಂದ ಒಂದು ಕುದುರೆಯ ಮೇಲೆ ಕೂತುಕೊಂಡು ಓಡಿಹೋದರು. ಆಗ ಧರ್ಮರಾಜನೂ, ಅರ್ಜುನನೂ, ಸಾತ್ಯಕಿಯೂ, ಧೃಷ್ಟದ್ಯುಮ್ನನನ್ನು ನಿಂದಿಸಿದರು. ಆಗ ಧೃಷ್ಟದ್ಯುಮ್ನನು ಭೂರಿಶ್ರವನನ್ನು ಹೇಗೆ ಕೊಂದಿರಿ? ಎಂದನು. ಆಗ ಸಾತ್ಯಕಿಯು ಕೋಪಿಸಿಕೊಂಡು ಗದೆಯ ಹಿಡಿದುಕೊಂಡು ಅವನನ್ನು ಯುದ್ಧಕ್ಕೆ ಕರೆದನು. ಧೃಷ್ಟದ್ಯುಮ್ನನು ಭಯವಿಲ್ಲದೆ ಖಡ್ಗವನ್ನು ಹಿಡಿದುಕೊಂಡು ಅವನನ್ನು ಯುದ್ಧಕ್ಕೆ ಕರೆದನು. ಆಗ ಪರಮಾತ್ಮನಿಂದ ಪ್ರೇರಿತನಾಗಿ ಭೀಮಸೇನದೇವರು ಸಾತ್ಯಕಿಯನ್ನು ಹಿಡಿದುಕೊಂಡರು. ಧೃಷ್ಟದ್ಯುಮ್ನನ ಮೇಲಿನ ಸ್ನೇಹದಿಂದ ಅರ್ಜುನನನ್ನು ಸಮಾಧಾನಪಡಿಸಿದರು. ತರುವಾಯ ಅವರು ಪರಮಾತ್ಮನಿಂದ ಶಿಕ್ಷಿತರಾಗಿ ಪೂರ್ವದಂತೆ ಸ್ನೇಹವುಳ್ಳವರಾಗಿ ಯುದ್ಧಕ್ಕೆ ಹೋದರು.

ಆಗ ಅಶ್ವತ್ಥಾಮಾಚಾರ್ಯರು ಬಂದರು. ತಂದೆಯ ಮರಣವನ್ನು ಕೇಳಿ ಎಲ್ಲಾ ಶತ್ರುಗಳನ್ನೂ ಸಂಹರಿಸುವಂತೆ[1] ಪ್ರತಿಜ್ಞೆಯನ್ನು ಮಾಡಿದರು. ಕೋಪದಿಂದ ನಾರಾಯಣಾಸ್ತ್ರವನ್ನು ಬಿಟ್ಟರು. ಆಗ ಭೀಮಸೇನದೇವರನ್ನು ಬಿಟ್ಟು ಮತ್ತೆಲ್ಲರೂ ಭಯವುಳ್ಳವರಾದರು. ಆಗ ಧರ್ಮರಾಜನು ವಿಷಾದವುಳ್ಳವನಾಗಿ ಸಾತ್ಯಕಿಯೇ ಮೊದಲಾಗಿ ಉಳ್ಳವರೊಡನೆ 'ನೀವೆಲ್ಲರೂ ಹೊರಟುಹೋಗಿರಿ. ನಾನು ಸಹೋದರರಿಂದ ಸಹಿತನಾಗಿ ಅಶ್ವತ್ಥಾಮಾಚಾರ್ಯರ ಅಸ್ತ್ರದಿಂದ ಸುಟ್ಟುಹೋಗುವೆನು' ಎಂದು ಹೇಳಿದನು. ಅದಕ್ಕೆ ಪರಮಾತ್ಮನು 'ನೀವೆಲ್ಲರೂ ಈ ಅಸ್ತ್ರಕ್ಕೆ ನಮಸ್ಕರಿಸಿರಿ. ಆಗ ಇದು ನಿಮ್ಮನ್ನು ಬಿಟ್ಟು ಹೋಗುವುದು' ಎಂದನು. ಅರ್ಜುನಾದಿಗಳೆಲ್ಲರೂ ನಮಸ್ಕರಿಸಿದರು. ಭೀಮಸೇನದೇವರು ಮಾತ್ರ ನಮಸ್ಕರಿಸಲಿಲ್ಲ. ಆಗ ಆ ನಾರಾಯಣಾಸ್ತ್ರವು ಭೀಮಸೇನದೇವರ ತಲೆಯಮೇಲೆ ಬಂದು ಒಂದು ಅಗ್ನಿಯ ಮೇಲೆ ಮತ್ತೊಂದು ಅಗ್ನಿಯು ಇರುವಂತೆ ಜ್ವಲಿಸುತ್ತಾ ಇದ್ದಿತು. ಆದರೆ ಭೀಮಸೇನದೇವರಿಗೆ ಸುಡಲಿಲ್ಲ. ಆಗ ಅರ್ಜುನನು ಭೀಮಸೇನದೇವರ ಸುತ್ತಲೂ ವಾರುಣಾಸ್ತ್ರವನ್ನು ಬಿಟ್ಟು ನೀರನ್ನು ಉಂಟುಮಾಡಿದನು. ದೇಹದಲ್ಲಿ ಅಸ್ತ್ರವು ಬಿದ್ದಾಗ ಹೊರಗಿನಿಂದ ನೀರನ್ನು ಉಂಟು ಮಾಡಿದರೆ ಯದ್ಯಪಿ ಪ್ರಯೋಜನವಿಲ್ಲ. ಆದರೂ ಸ್ನೇಹವಶದಿಂದ ಅರ್ಜುನನು ಹಾಗೆ ನೀರನ್ನು ಉಂಟುಮಾಡಿದನು. ಆಗ ಕೃಷ್ಣಪರಮಾತ್ಮನು 'ಭೀಮಸೇನದೇವರೂ ಸಾಯಬಾರದು. ತನ್ನ ನಾರಾಯಣಾಸ್ತ್ರವೂ

1. ಸಂಹರಿಸುವೆನೆಂದು

ವ್ಯರ್ಥವಾಗಬಾರದು' ಎಂದು ಮಾಡಬೇಕೆಂದು ಅರ್ಜುನನೊಡನೆ ಭೀಮಸೇನ ದೇವರ ರಥವನ್ನು ಹತ್ತಿದನು. ಆಗ ಹೊರಗಿನಿಂದ ವಾರುಣಾಸ್ತ್ರವಿದ್ದ ಕಾರಣವೂ ಕೃಷ್ಣಪರಮಾತ್ಮನು ಹತ್ತಿರವೇ ಇದ್ದ ಕಾರಣವೂ ತನ್ನಲ್ಲಿ ನರಾವೇಶವಿದ್ದಕಾರಣವೂ ಅಷ್ಟು ಹತ್ತಿರಹೋದರೂ ಅರ್ಜುನನಿಗೆ ನಾರಾಯಣಾಸ್ತ್ರವು ಸುಡಲಿಲ್ಲ. ಇಬ್ಬರೂ ಅಂದರೆ ಕೃಷ್ಣಾರ್ಜುನರು ಸೇರಿ ಭೀಮಸೇನದೇವರ ಕೈಯಲ್ಲಿ ಇದ್ದ ಆಯುಧವನ್ನು ಎಳೆದುಕೊಂಡು ಅವರನ್ನು ರಥದಿಂದ ಕೆಳಗೆ ದೂಡಿದರು. ಆಗ ಆ ನಾರಾಯಣಾಸ್ತ್ರವು ಶಾಂತಿಯನ್ನು ಹೊಂದಿತು.

ಭೀಮಸೇನದೇವರು ಶುದ್ಧಕ್ಷತ್ರಿಯ ಧರ್ಮದಲ್ಲಿ ಆಸಕ್ತರಾಗಿದ್ದ ಕಾರಣ ಇತರರೆಲ್ಲರೂ ರಥದಿಂದ ಕೆಳಗೆ ಇಳಿದು ಆಯುಧಗಳನ್ನು ಕೆಳಗೆ ಇಟ್ಟು ನಾರಾಯಣಾಸ್ತ್ರಕ್ಕೆ ನಮಸ್ಕರಿಸಿದರೂ ತಾನು ಮಾತ್ರ ಹಾಗೆ ಮಾಡಲಿಲ್ಲ. ತಾನು ರಥದಲ್ಲಿ ಕೂತುಕೊಂಡು ಆಯುಧವನ್ನು ಹಿಡಿದುಕೊಂಡು ಯುದ್ಧಮಾಡುತ್ತಲೇ ಇದ್ದರು. ಮಿತ್ರರು ತಮ್ಮ ಧರ್ಮವನ್ನು ಬಿಡುವ ಪ್ರಸಂಗದಲ್ಲಿ ನಿಷೇಧ ಮಾಡುವುದೂ ಧರ್ಮವಾದ ಕಾರಣ ಎಲ್ಲರೊಡನೆಯೂ ನೀವು ಅಸ್ತ್ರಕ್ಕೆ ನಮಸ್ಕಾರ ಮಾಡಬೇಡಿರಿ ಎಂದು ಹೇಳಿತ್ತಲೇ ಇದ್ದರು. ಯದ್ಯಪಿ ನಾರಾಯಣಾಸ್ತ್ರವು ನಮಸ್ಕಾರಕ್ಕೆ ಅರ್ಹವೇ. ಆದರೂ ಯುದ್ಧದಲ್ಲಿ ಶತ್ರುವು ಬಿಟ್ಟ ಅಸ್ತ್ರಕ್ಕೆ ಬದುಕಿರಬೇಕೆಂಬ ಇಚ್ಛೆಯಿಂದ ನಮಸ್ಕರಿಸುವುದು ಧರ್ಮವಲ್ಲವೆಂದು ಭೀಮಸೇನದೇವರು ನಮಸ್ಕರಿಸಲಿಲ್ಲ. ಆದರೂ ಅಸ್ತ್ರನಿಯಾಮಕನಾದ ನಾರಾಯಣನಿಗೆ ಮನಸ್ಸಿನಿಂದಲೇ ಆದರವನ್ನು ತೋರಿಸಿದರು. ಆ ಅಸ್ತ್ರಕ್ಕೆ ಅಭಿಮಾನಿಯು ವಾಯುದೇವರು. ದೇವತೆಯು ಪರಮಾತ್ಮನು. ಆದುದರಿಂದ ಆ ಅಸ್ತ್ರವು ಭೀಮಸೇನದೇವರಿಂದ ಅಭಿಮನ್ಯವಾದ ಕಾರಣ ಅಗ್ನಿಯನ್ನು ಹೇಗೆ ಸುಡುವುದಿಲ್ಲವೋ ಹಾಗೆಯೇ ಅವರನ್ನು ಅದು ಸುಡಲಿಲ್ಲ. ಭೀಮಸೇನದೇವರು ಅಸ್ತ್ರದೇವತೆಯಾದ ಪರಮಾತ್ಮನಿಗೆ ಮನಸ್ಸಿನಿಂದಲೇ ಆದರವನ್ನು ಮಾಡಿದರು. ಕ್ಷತ್ರಿಯ ಧರ್ಮವನ್ನು ಅನುಸರಿಸಿ ಹೊರಗಿನಿಂದ ನಮಸ್ಕರಿಸಲಿಲ್ಲ. ಶ್ರೀಭಗವಂತನು ಈರೀತಿಯಾಗಿ ಭೀಮಸೇನದೇವರು ಸಾಯದಂತೆಯೂ ತನ್ನ ಅಸ್ತ್ರವು ವ್ಯರ್ಥವಾಗದಂತೆಯೂ ಮಾಡಿ ಪುನಃ ಬಂದು ಅರ್ಜುನನ ರಥವನ್ನು ನಡೆಸಿದನು. ದುರ್ಯೋಧನನು ಇನ್ನೊಂದು ಬಾರಿ ನಾರಾಯಣಾಸ್ತ್ರವನ್ನು ಬಿಡಬೇಕು ಎಂದನು. ಅಶ್ವತ್ಥಾಮಾಚಾರ್ಯರು ಶಕ್ಯವಲ್ಲ ವೆಂದರು.

ಧೃಷ್ಟದ್ಯುಮ್ನನು ಸಾತ್ಯಕಿಯ ಹತ್ತಿರ ಯುದ್ಧಕ್ಕೆ ಹೋಗಿ ಯುದ್ಧಮಾಡಿ

ಇಬ್ಬರನ್ನೂ ಮೂರ್ಛಿತರನ್ನಾಗಿ ಮಾಡಿದರು. ಭೀಮಸೇನದೇವರು ಯುದ್ಧಕ್ಕೆ ಬರಲು ಅಶ್ವತ್ಥಾಮಾಚಾರ್ಯರು ಅವರ ಕುದುರೆಗಳನ್ನು ಓಡಿಸಿದರು. ಭೀಮಸೇನ ದೇವರು ಕುದುರೆಗಳನ್ನು ಸರಿಪಡಿಸುತ್ತಿರಲು ಅರ್ಜುನನು ಅಶ್ವತ್ಥಾಮಾಚಾರ್ಯರನ್ನು ನೋಡಿದನು. ಅರ್ಜುನನು ಕೋಪಿಸಿಕೊಂಡು ಕ್ರೂರವಾದ ಮಾತನ್ನು ಆಡುತ್ತಾ ಅಶ್ವತ್ಥಾಮಾಚಾರ್ಯರೊಡನೆ ಯುದ್ಧಕ್ಕೆ ಬಂದನು. ಅಶ್ವತ್ಥಾಮಾಚಾರ್ಯರು ಆಗ್ನೇಯಾಸ್ತ್ರವನ್ನು ಬಿಟ್ಟರು. ಅದರಿಂದ ಪಾಂಡವರ ಸೈನ್ಯವು ವ್ಯಾಪಿಸಿಹೋಯಿತು. ಪರಮಾತ್ಮನು ರಥಸಹಿತವಾಗಿ ಅರ್ಜುನನನ್ನು ಉದ್ಧರಿಸಿದನು. ಅಶ್ವತ್ಥಾಮಾ ಚಾರ್ಯರು ಅರ್ಜುನನು ಬದುಕಿರುವುದನ್ನು ನೋಡಿ ಕೋಪದಿಂದ ಧನುಸ್ಸನ್ನು ಪರಿತ್ಯಜಿಸಿ ಹೋದರು. ಆಗ ವೇದವ್ಯಾಸದೇವರು ಬಂದು ಸಮಾಧಾನ ಪಡಿಸುವವರಾಗಿ ಇನ್ನೂ ನಿನ್ನಿಂದ ಆಗುವ ಮಹಾಕಾರ್ಯವಿದೆಯೆಂದು ಹೇಳಲು ನಾಳೆ ಬೆಳಿಗ್ಗೆ ಆಗಲಿ ಎಂದು ಹೇಳಿ ಅವರಿಗೆ ನಮಸ್ಕರಿಸಿ ಹೋದರು. ದುರ್ಯೋಧನಾದಿಗಳು ಅವರನ್ನು ಅನುಸರಿಸಿ ದುಃಖದಿಂದ ಹೊರಟುಹೋದರು. ಪಾಂಡವರು ಸಂತೋಷದಿಂದ ಶಿಬಿರಕ್ಕೆ ಹೋಗಿ ರಾತ್ರಿಯಲ್ಲಿ ಪರಮಾತ್ಮನನ್ನು ಸ್ಮರಿಸುತ್ತಾ ಸಂತೋಷದಿಂದ ಇದ್ದರು.



# ಕರ್ಣಪರ್ವ

## ಭೀಮಸೇನದೇವರ ಪರಾಕ್ರಮ [1]

ತರುವಾಯ ಅಶ್ವತ್ಥಾಮಾಚಾರ್ಯರ ಅನುಮತಿಯಿಂದ ದುರ್ಯೋಧನನು ಕರ್ಣನನ್ನು ಸೇನಾಧಿಪತಿಯನ್ನಾಗಿ ಮಾಡಿದನು. ಕರ್ಣನು ಯುದ್ಧಕ್ಕೆ ಹೋದನು. ಪಾಂಡವರಿಗೂ ಕೌರವರಿಗೂ ಭಯಂಕರವಾದ ಯುದ್ಧವು ನಡೆಯಿತು. ಭೀಮಸೇನದೇವರು ಆನೆಯ ಮೇಲೆ ಕೂತುಕೊಂಡು ಯುದ್ಧಮಾಡುತ್ತಾ ಬಂದರು. ಆಗ ಕ್ಷೇಮಧೂರ್ತಿಯೆಂಬವನು ಬಂದು ಅವರ ಆನೆಯನ್ನು ಸಂಹರಿಸಿದನು. ಭೀಮಸೇನದೇವರು ಬೇಗನೇ ಅವನನ್ನೇ ಯಮಲೋಕಕ್ಕೆ ಕಳುಹಿಸಿದರು. ಇತರ ಶತ್ರುಗಳ ತಲೆಗಳನ್ನು ಕಡಿಯುತ್ತಾ ಹೋದರು. ಅದನ್ನು ನೋಡಿ ಅಶ್ವತ್ಥಾಮಾಚಾರ್ಯರು ರಥದಲ್ಲಿ ಕೂತುಕೊಂಡು ಅವರನ್ನು ಎದುರಿಸಿಕೊಂಡು ಹೋದರು. ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಆ ಯುದ್ಧವನ್ನು

1. ಮ.ತಾ.ನಿ. ಅ-27

ನೋಡಿ ದೇವತೆಗಳೂ ಗಂಧರ್ವರೂ ಋಷಿಗಳೂ 'ಈರೀತಿಯಾದ ಯುದ್ಧವನ್ನು ನಾವು ಇಷ್ಟರವರೆಗೆ ಇಲ್ಲಿ ನೋಡಿದ್ದೇ ಇಲ್ಲ. ಇನ್ನೂ ನಡೆಯಲಾರದು. ಇತರ ಎಲ್ಲಾ ಯುದ್ಧಗಳೂ ಈ ಯುದ್ಧದ ಹದಿನಾರನೇ ಒಂದು ಭಾಗವೂ ಆಗಲಾರದು. ಈ ವಾಯುದೇವರಿಗೂ ರುದ್ರದೇವರಿಗೂ ಹೊರತು ಇತರರಿಗೆ ಇಂತಹ ಜ್ಞಾನವೂ ಬಲವೂ ಹೇಗೆ ಬರಬೇಕು?' ಎಂದು ಹೇಳಿಕೊಂಡರು. ತರುವಾಯ ಭೀಮಸೇನ ದೇವರೂ ಅಶ್ವತ್ಥಾಮಾಚಾರ್ಯರೂ ಬಾಣಗಳನ್ನು ಬಿಟ್ಟು ಸರ್ವತ್ರ ಬಾಣಗಳನ್ನು ತುಂಬಿಸಿದರು. ಮಹಾರಥಿಕರೆಲ್ಲರೂ ಭಯಪಟ್ಟರು. ಭೀಮಸೇನದೇವರು ಅಶ್ವತ್ಥಾಮಾಚಾರ್ಯರ ಧನುಸ್ಸನ್ನು ಕತ್ತರಿಸಲು ಅಶ್ವತ್ಥಾಮಾಚಾರ್ಯರು ಭೀಮಸೇನದೇವರ ಮೇಲೆ ಮಹಾ ಅಸ್ತ್ರಗಳನ್ನು ಉಪಯೋಗಿಸಿದರು. ಭೀಮಸೇನ ದೇವರು ಅವುಗಳನ್ನು ಅಸ್ತ್ರಗಳಿಂದಲೇ ಶಾಂತಿಗೊಳಿಸಿದರು. [1]ಬಾಣಗಳಿಂದ ಅತ್ಯಂತ ಪೀಡಿತರಾಗಿ ಅತ್ಯಂತಮೂರ್ಛಿತರಾಗಿ ಬಿದ್ದರು. ಭೀಮಸೇನದೇವರೂ ಸ್ವಲ್ಪ ಪರವಶರಾದಂತೆ ತೋರಿಸುವವರಾಗಿ ಅಶ್ವತ್ಥಾಮಾಚಾರ್ಯರು ಮೂರ್ಛಿತರಾಗಲು ಗರ್ಜನೆ ಮಾಡುತ್ತಾ ಆನೆಗಳ ಹತ್ತಿರ ಯುದ್ಧಮಾಡಲಿಕ್ಕೆ ಹೋದರು.

ಭೀಮಸೇನದೇವರು ಆನೆಗಳನ್ನು ಸಂಹರಿಸುತ್ತಿರಲು ದುರ್ಯೋಧನನು ಧರ್ಮರಾಜನೊಡನೆ ಯುದ್ಧಕ್ಕೆ ಬಂದನು. ಇಬ್ಬರೂ ಬಹುಹೊತ್ತು ಯುದ್ಧಮಾಡಿ ಕೊಂಡರು. ಧರ್ಮರಾಜನು ದುರ್ಯೋಧನನ ರಥವನ್ನು ಪುಡಿಮಾಡಿದನು. ದುರ್ಯೋಧನನು ಭಾರವುಳ್ಳ ಗದೆಯನ್ನು ತೆಗೆದನು. ಆಗ ಭೀಮಸೇನದೇವರು ಗದೆಯನ್ನು ಹಿಡಿದುಕೊಂಡು ಅವನ ಬಳಿಗೆ ಬಂದರು. ಅದನ್ನು ನೋಡಿ ಕೃಪಾಚಾರ್ಯರು ದುರ್ಯೋಧನನನ್ನು ತನ್ನ ರಥದಲ್ಲಿ ಕೂತುಕೊಳ್ಳಿಸಿಕೊಂಡು ಹೋದರು.

ಮೊದಲಿನ ದಿವಸದಲ್ಲಿ ಯುದ್ಧದಲ್ಲಿ ಅರ್ಜುನನು ಕರ್ಣನನ್ನು ಸೋಲಿಸಲು ಕರ್ಣನು 'ತನಗೆ ಕೃಷ್ಣನಂತೆ ಇರುವ ಸಾರಥಿಯಿಲ್ಲ. ಆದುದರಿಂದ ಶಲ್ಯನು ಸಾರಥಿಯಾಗಬೇಕು' ಎಂದು ದುರ್ಯೋಧನನ ಹತ್ತಿರ ತಿಳಿಸಿ ಮರುದಿನ ದುರ್ಯೋಧನನ ಪ್ರಾರ್ಥನಾನುಸಾರವಾಗಿ ಶಲ್ಯನು ಸಾರಥ್ಯವನ್ನು ಮಾಡಲು ಯುದ್ಧಕ್ಕೆ ಬಂದನು. ಪಾಂಡವರ ಸೈನ್ಯದಲ್ಲಿ ಭಯಂಕರವಾದ ಯುದ್ಧವನ್ನು ಮಾಡಿ ಧರ್ಮರಾಜನನ್ನು ಪೀಡಿಸಿದನು. ಅವನ ರಥವನ್ನು ಪುಡಿಮಾಡಿ ಧನುಸ್ಸನ್ನು ಅವನ ಕುತ್ತಿಗೆಗೆ ಹಾಕಿ ಸೆಳೆದು ಗಟ್ಟಿಯಾಗಿ ಕಠಿನಮಾತುಗಳನ್ನು ಆಡಿದನು. ಅದನ್ನು ನೋಡಿ

1. ಅಶ್ವತ್ಥಾಮರು

ಭೀಮಸೇನದೇವರು ದುರ್ಯೋಧನನ ರಥಧನುಸ್ಸುಗಳನ್ನು ಪುಡಿಮಾಡಿ ಚೆನ್ನಾಗಿ ಮರ್ದನ ಮಾಡಿದರು. ಅವನು ಸಾಯುವಂತೆ ಆದನು. ಅದನ್ನು ಶಲ್ಯನು ಕರ್ಣನಿಗೆ ತೋರಿಸಿ 'ಯಾರಿಗೋಸ್ಕರ ಈ ಯುದ್ಧವು ನಡೆಯುತ್ತಿರುವುದೋ, ಇಷ್ಟು ಸೇನೆಯೂ ಇರುವುದೋ ಆ ದುರ್ಯೋಧನನು ಈಗ ಭೀಮಸೇನದೇವರಿಂದ ಪೀಡಿತನಾಗಿ ಸಾಯುತ್ತಿರುವನು. ಇವನನ್ನು ಮೊದಲು ಬಿಡಿಸು. ಧರ್ಮರಾಜನನ್ನು ಪೀಡಿಸಿ ಏನು ಪ್ರಯೋಜನ?' ಎಂದು ಹೇಳಿದನು. ಆಗ ಕರ್ಣನು ದುರ್ಯೋಧನನನ್ನು ರಕ್ಷಿಸಲಿಕ್ಕೆ ಹೋದನು. ಭೀಮಸೇನದೇವರು ಕರ್ಣನನ್ನು ನೋಡಿ ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಹೋದರು. ಆಗ ಅವರ ರೂಪವು ಕೊನೆಯ ಕಾಲದಲ್ಲಿ ಜಗತ್ತನ್ನು ನುಂಗಲಿಕ್ಕೆ ಹೊರಟ ನರಸಿಂಹದೇವರ ರೂಪದಂತೆ ಇದ್ದಿತು. ಅವರ ವೇಗದಿಂದ ಭೂಮಿಯೆಲ್ಲಾ ನಡುಗಿತು. ಸಕಲ ಸೈನ್ಯವೂ ಓಡಿಹೋಯಿತು. ಕರ್ಣನು ಭೀಮಸೇನದೇವರಿಗೆ ಬಾಣಗಳಿಂದ ಬಡೆಯಲು ಭೀಮಸೇನದೇವರು ವಜ್ರದಂತೆ ಇರುವ ಬಾಣವನ್ನು ಅವನಿಗೆ ಬಿಟ್ಟನು. ಅದರಿಂದ ಅವನು ಸತ್ತಂತೆ ಬಿದ್ದನು. ಆಗ ಭೀಮಸೇನದೇವರು ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಅವನ ಬಳಿಗೆ ಹೋದರು. ದೂರದಲ್ಲಿಯಾದರೂ ಯಾರಾದರೂ ಪರಮಾತ್ಮನ ನಿಂದೆಯನ್ನು ಮಾಡಿದವರ ನಾಲಿಗೆಯನ್ನು ಕತ್ತರಿಸುವೆನೆಂದು ಭೀಮಸೇನದೇವರ ಪ್ರತಿಜ್ಞೆಯಾದ ಕಾರಣ 'ನಿಮ್ಮನ್ನು ರಕ್ಷಿಸುವ ಕೃಷ್ಣನು ಈಗ ಎಲ್ಲಿ?' ಇತ್ಯಾದಿರೀತಿಯಾಗಿ ಕರ್ಣನು ಭಗವಂತನ ನಿಂದಾರೂಪವಾದ ವಚನವನ್ನು ಹೇಳಿದುದರಿಂದ ಕರ್ಣನ ನಾಲಿಗೆಯನ್ನು ಕತ್ತರಿಸುವೆನೆಂದು ಕರ್ಣನ ಬಳಿಗೆ ಹೋದರು. ಹತ್ತಿರ ಬಂದ ಭೀಮಸೇನದೇವರನ್ನು ನೋಡಿ ಶಲ್ಯನು 'ಅರ್ಜುನನು ಕರ್ಣನನ್ನು ಕೊಲ್ಲುವೆನೆಂದು ಪ್ರತಿಜ್ಞೆಯನ್ನು ಮಾಡಿರುವನು. ಆದುದರಿಂದ ಅವನ ಪ್ರತಿಜ್ಞೆಯನ್ನು ಸುಳ್ಳು ಮಾಡಬಾರದು. ಕರ್ಣನ ನಾಲಿಗೆಯನ್ನು ಕತ್ತರಿಸುವುದು ಬೇಡ' ಎಂದು ಹೇಳಿ ಎಲ್ಲರನ್ನೂ ನೋಡುವಂತೆ ರಥದಿಂದ ಕರ್ಣನನ್ನು ದೂರಕ್ಕೆ ಕರಕೊಂಡು ಹೋದನು. ಈರೀತಿಯಾಗಿ ಭೀಮಸೇನದೇವರು ಕರ್ಣನನ್ನು ಜಯಿಸಿ ಎಲ್ಲಾ ಸೈನ್ಯವನ್ನೂ ಓಡಿಸಿದರು. ಆಗ ಒಂದೇ ಕ್ಷಣದಲ್ಲಿ ಮೂರು ಅಕ್ಷೌಹಿಣೀ ಸೈನ್ಯವನ್ನೂ ಓಡಿಸಿದರು.

ತರುವಾಯ ಧೃಷ್ಟದ್ಯುಮ್ನನಿಗೂ ಅಶ್ವತ್ಥಾಮಾಚಾರ್ಯರಿಗೂ ಯುದ್ಧವು ನಡೆಯಿತು. ಅಶ್ವತ್ಥಾಮಾಚಾರ್ಯರು ಒಂದೇ ಕ್ಷಣದಲ್ಲಿ ಧೃಷ್ಟದ್ಯುಮ್ನನ ರಥವನ್ನು ಆಯುಧಗಳನ್ನೂ ನಾಶಮಾಡಿ ಅವನನ್ನು ಸಂಹರಿಸುವುದಕ್ಕಾಗಿ ತೀಕ್ಷ್ಣಬಾಣಗಳನ್ನು

ಬಿಟ್ಟರು. ಆದರೆ ಆ ಬಾಣಗಳು ಧೃಷ್ಟದ್ಯುಮ್ನನ ಚರ್ಮದಲ್ಲಿ ಒಂದು ಗಾಯವನ್ನು ಮಾಡಲಿಲ್ಲ. ಆಮೇಲೆ ಅಶ್ವತ್ಥಾಮಾಚಾರ್ಯರು ಕೈಯಲ್ಲಿ ಖಡ್ಗವನ್ನು ಹಿಡಿದು ಕೊಂಡು ಹೋದರು. ಖಡ್ಗದಿಂದಲೂ ಯಾವ ಅಸ್ತ್ರಶಸ್ತ್ರಗಳಿಂದಲೂ ಅವನ ಮೈಯಲ್ಲಿ ಒಂದು ಗಾಯವನ್ನು ಮಾಡಲಿಕ್ಕೂ ಆಗಲಿಲ್ಲ. ಆಮೇಲೆ ಅವನನ್ನು ಅಶ್ವತ್ಥಾಮಾಚಾರ್ಯರು ಭೂಮಿಯಲ್ಲಿ ಬೀಳಿಸಿ ಅವನ ಕುತ್ತಿಗೆಗೆ ಧನುಸ್ಸಿನ ಹಗ್ಗವನ್ನು ಕಟ್ಟಿ ಮಥನಮಾಡಿದರು. ಅದನ್ನು ನೋಡಿ ಕೃಷ್ಣಪರಮಾತ್ಮನಿಂದ ಪ್ರೇರಿತನಾಗಿ ಅರ್ಜುನನೂ ಭೀಮಸೇನದೇವರೂ ಎರಡು ಪಾರ್ಶ್ವದಿಂದ ಬಂದು ಅಶ್ವತ್ಥಾಮಾ ಚಾರ್ಯರನ್ನು ಬಾಣಗಳಿಂದ ಬಡಿದರು. ಇಬ್ಬರಿಂದಲೂ ವಜ್ರಸಮಾನಗಳಾದ ಬಾಣಗಳಿಂದ ಅತ್ಯಂತ ಬಡಿಯಲ್ಪಟ್ಟವರಾಗಿ ಅಶ್ವತ್ಥಾಮಾಚಾರ್ಯರು ಧೃಷ್ಟದ್ಯುಮ್ನ ನನ್ನು ಬಿಟ್ಟು ತನ್ನ ರಥವನ್ನು ಏರಿದರು. ಬೇರೆ ಸ್ಥಳಕ್ಕೆ ಹೊರಟುಹೋದರು. ಧೃಷ್ಟದ್ಯುಮ್ನನೂ ಎದ್ದು ಕೃತವರ್ಮನೊಡನೆ ಯುದ್ಧಕ್ಕೆ ಹೋದನು.

ತರುವಾಯ ಬಂದ ಕರ್ಣನನ್ನು ನೋಡಿ ಭೀಮಸೇನದೇವರು ವೇಗದಿಂದ ಹೋದರು. ಆ ಕರ್ಣನ ಎದುರಲ್ಲಿಯೇ ದುರ್ಯೋಧನನ ರಥವನ್ನು ಪುಡಿಮಾಡಿದರು. ಕರ್ಣನನ್ನು ತಡೆದು ಬಾಣಗಳಿಂದ ಅವನ ಮಗನಾದ ಸುಷೇಣನ ತಲೆಯನ್ನು ಕತ್ತರಿಸಿದರು. ಹೀಗೆಯೇ ಪೂರ್ವದಲ್ಲಿ ಸತ್ಯಸೇನನನ್ನು ಸಂಹರಿಸಿದ್ದರು. ಹಾಗೆಯೇ ಪೂರ್ವದಲ್ಲಿ ರಾತ್ರಿಯುದ್ಧದಲ್ಲಿ ಕರ್ಣನ ತಮ್ಮಂದಿರನ್ನೂ ಕೊಂದಿದ್ದರು. ಕರ್ಣನು ತನ್ನ ಮಗನು ಸತ್ತುಬಿದ್ದದ್ದನ್ನು ನೋಡಿ ಕೋಪದಿಂದ ಭೀಮಸೇನದೇವರನ್ನು ಬಿಟ್ಟು ಸೈನ್ಯವನ್ನು ಮರ್ದನ ಮಾಡುತ್ತಾ ಧರ್ಮರಾಜನ ಸಮೀಪಕ್ಕೆ ಹೋದನು. ನಕುಲಸಹದೇವರಿಂದ ಸಹಿತನಾದ ಧರ್ಮರಾಜನ ಕುದುರೆಗಳನ್ನು ನಾಶಮಾಡಿ ನಕುಲಸಹದೇವರ ಆಯುಧಗಳನ್ನು ಪುಡಿಮಾಡಿದನು. ಒಂದೇ ರಥದಲ್ಲಿ ಕೂತುಕೊಂಡು ಬಂದ ಆ ಮೂರು ಜನರನ್ನೂ ಬಾಣಗಳಿಂದ ಮರ್ದನ ಮಾಡಿದನು. ಉಗ್ರಮಾತುಗಳನ್ನು ಆಡಿದನು. ಆಗ ಧರ್ಮರಾಜನನ್ನು ಬಿಡಿಸುವುದಕ್ಕಾಗಿ ಭೀಮಸೇನದೇವರು ದುರ್ಯೋಧನನ ರಥವನ್ನು ಪುಡಿಮಾಡಿ ಅತಿತೀಕ್ಷ್ಣಬಾಣಗಳಿಂದ ಅವರ ಮರ್ಮಸ್ಥಳಕ್ಕೆ ಬಡಿಯಲಿಕ್ಕೆ ಆರಂಭಿಸಿದರು. ಅದನ್ನು ಶಲ್ಯನು ಕರ್ಣನಿಗೆ ತೋರಿಸಿದನು. ಆಗ ಕರ್ಣನು ಧರ್ಮರಾಜನನ್ನು ಬಿಟ್ಟುಹೋದನು. ಕರ್ಣನು ದುರ್ಯೋಧನನನ್ನು ಬಿಡಿಸಲಿಕ್ಕಾಗಿ ಹೋಗಲು ಧರ್ಮರಾಜನು ಶ್ರಮದಿಂದ ಮೆಲ್ಲಗೆ ಶಿಬಿರಕ್ಕೆ ಹೋಗಿ ಮಲಗಿದರು. ಆಗಲೇ ಅಶ್ವತ್ಥಾಮಾಚಾರ್ಯರೂ ಕೃಪಾಚಾರ್ಯರೂ ಬಂದರು. ಆಗ ಭೀಮಸೇನದೇವರು

ಅಶ್ವತ್ಥಾಮ ಕರ್ಣರ ಹತ್ತಿರ ಹೋದರು. ಕೃಪಾಚಾರ್ಯರು ಬಂದು ಭೀಮಸೇನ ದೇವರ ಬಾಣಗಳಿಂದ ತುಂಬಾ ಗಾಯವನ್ನು ಹೊಂದಿದ್ದ ದುರ್ಯೋಧನನನ್ನು ತನ್ನ ರಥದಲ್ಲಿ ಕೂತುಕೊಳ್ಳಿಸಿಕೊಂಡು ಕರಕೊಂಡು ಹೋದರು. ಭೀಮಸೇನದೇವರಿಂದ ಪೀಡಿತರಾದ ಅಶ್ವತ್ಥಾಮಾಚಾರ್ಯರೂ ಅವರನ್ನು ಬಿಟ್ಟು ಪಾಂಚಾಲದೇಶದವರ ಸೈನ್ಯಗಳನ್ನು ಬೀಳಿಸುತ್ತಾ ಹೋದರು.

ತರುವಾಯ ಕರ್ಣಾದಿಗಳಿಂದ ತಮ್ಮ ಸೈನ್ಯವು ಭಗ್ನವಾಗುವುದನ್ನು ನೋಡಿ ಭೀಮಸೇನದೇವರು ಭೂಮಿಯೇ ನಡುಗುವಂತೆ ಭಯಂಕರವಾಗಿ ಸಿಂಹಗರ್ಜನೆ ಯನ್ನು ನೋಡುತ್ತಾ ಶತ್ರುಸೈನ್ಯವನ್ನು ಎದುರಿಸಿದರು. ಭೀಮಸೇನದೇವರ ಗರ್ಜನೆಯಿಂದಲೂ ಬಾಣಗಳಿಂದಲೂ ಕೌರವಸೈನ್ಯವು ಭಗ್ನವಾಗಿ ದಿಕ್ಕುದಿಕ್ಕುಗಳಿಗೆ ಓಡಿಹೋಯಿತು. ಭೀಮಸೇನದೇವರು ದುರ್ಯೋಧನನ ವಾಹನವನ್ನು ಆಯುಧ ಗಳನ್ನೂ ಪುಡಿಮಾಡಿದರು. ಇದನ್ನೆಲ್ಲಾ ನೋಡಿ ಪಾಂಡವರ ಸೈನ್ಯವು ಬಹುವೇಗ ದಿಂದ ಬಂದಿತು. ಕೌರವಸೈನ್ಯವು ಭಗ್ನವಾಗಿ ಬಹುದೂರ ಓಡಿಹೋಯಿತು.

ಭೀಮಸೇನದೇವರ ಆಶ್ರಯದಿಂದ ಪಾಂಚಾಲದೇಶದವರಿಂದ ಓಡಿಹೋಗು ತ್ತಿರುವ ಸೈನ್ಯವನ್ನು ನೋಡಿ ಕರ್ಣನು ಕೋಪದಿಂದ ಉರಿದುಹೋದನು. ಅವನು ಎಲ್ಲಾ ಅಸ್ತ್ರಗಳನ್ನು ನಾಶಮಾಡುವ ವ್ಯರ್ಥವಾಗದೆ ಇರುವ ಪರಶುರಾಮದೇವರು ದೇವತೆಯಾಗಿಉಳ್ಳ ಭಾರ್ಗವಾಸ್ತ್ರವನ್ನು ತೆಗೆದು ಭೀಮಸೇನದೇವರೇ ಮೊದಲಾದ ಸೈನ್ಯದಲ್ಲಿ ಬಿಟ್ಟುಬಿಟ್ಟನು. ಆ ಅಸ್ತ್ರವು ಪರಶುರಾಮದೇವರ ಅನುಗ್ರಹದಿಂದ ಭೀಮಸೇನದೇವರನ್ನು ಬಿಟ್ಟುಬಿಟ್ಟಿತು. ಕೆಲವರು ಓಡಿಹೋದರು. ಉಳಿದವರು ಅದರಿಂದ ಸುಟ್ಟುಹೋದರು. ಆ ಅಸ್ತ್ರವು ಓಡಿಹೋಗುವವರನ್ನು ಕೊಲ್ಲುವುದಿಲ್ಲ. ಧೃಷ್ಟದ್ಯುಮ್ನಾದಿಗಳೆಲ್ಲರೂ ಓಡಿಹೋಗಿ ಅದರಿಂದ ತಪ್ಪಿಸಿಕೊಂಡರು. ಅರ್ಜುನನೂ ಕೂಡ ಪ್ರತ್ಯಸ್ತ್ರರಹಿತವಾದ ಆ ಅಸ್ತ್ರವನ್ನು ನೋಡಿ ಕರ್ಣನ ಸಮೀಪಕ್ಕೆ ಹೋಗದೆ ಕೃಷ್ಣಪರಮಾತ್ಮನೊಡನೆ 'ಕರ್ಣನ ಬಳಿಗೆ ಹೋಗದೆ ಬೇರೆ ಸ್ಥಳಕ್ಕೆ ಹೋಗುವೆನು. ಇಲ್ಲದಿದ್ದರೆ ಈ ಅಸ್ತ್ರದಿಂದ ಬದುಕಲಿಕ್ಕೆ ಆಗಲಾರದು' ಎಂದನು. ಭಗವಂತನು ಹಾಗೆಯೇ ಆಗಲಿ ಎಂದು ಹೇಳಿ ಕರ್ಣನ ಬಳಿಗೆ ಹೋಗದೆ ಬೇರೆ ಮಾರ್ಗದಿಂದ ಭೀಮಸೇನದೇವರ ಬಳಿಗೆ ಕರೆದುಕೊಂಡು ಹೋದನು.

ಅರ್ಜುನನು ಭೀಮಸೇನದೇವರೊಡನೆ 'ಧರ್ಮರಾಜನನ್ನು ನೋಡಲಿಕ್ಕೆ ಹೋಗಿರಿ. ಧರ್ಮರಾಜನು ಏನು ಮಾಡುತ್ತಾನೆಂದು ನೋಡಿರಿ. ನನ್ನನ್ನು ಸಂಶಪ್ತಕರು ಯುದ್ಧಕ್ಕೆ ಕರೆಯುತ್ತಾರೆ. ಆದುದರಿಂದ ನಾನು ಅವರಿದ್ದಲ್ಲಿಗೆ

ಹೋಗುತ್ತೇನೆ' ಎಂದನು. ಅದಕ್ಕೆ ಭೀಮಸೇನದೇವರು 'ಸಂಶಪ್ತರೊಡನೆಯೂ ಕರ್ಣನೊಡನೆಯೂ ಕೌರವರೊಡನೆಯೂ ನಾನೊಬ್ಬನೇ ಯುದ್ಧವನ್ನು ಮಾಡುವೆನು. ನೀನೇ ಧರ್ಮರಾಜರಿದ್ದಲ್ಲಿಗೆ ಹೋಗು. ನಾನು ಯುದ್ಧರಂಗವನ್ನು ಬಿಟ್ಟು ಹೋಗಲಾರೆನು. ನನ್ನನ್ನು ಯುದ್ಧದಿಂದ ಭಯಪಟ್ಟು ಹೋದನು ಎಂದು ಯಾರೂ ಹೇಳಬಾರದು' ಎಂದರು. ಅದನ್ನು ಕೇಳಿ ಪರಮಾತ್ಮನು ಸಂತೋಷದಿಂದ ಅವರನ್ನು ಸ್ತೋತ್ರ ಮಾಡಿದನು. ಕೃಷ್ಣನಿಂದ ಸಹಿತನಾಗಿ ಅರ್ಜುನನು ಧರ್ಮರಾಜನನ್ನು ನೋಡಲಿಕ್ಕೆ ಹೋದನು. ಧರ್ಮರಾಜನನ್ನು ನೋಡಿ ಅಲ್ಲಿ ಬಂದ ಮಹಾ ಆಪತ್ತನ್ನು ಕೃಷ್ಣಪರಮಾತ್ಮನ ಅನುಗ್ರಹದಿಂದ ಪರಿಹಾರ ಮಾಡಿಕೊಂಡು ಧರ್ಮರಾಜನಿಂದ ಆಶೀರ್ವಾದ ಪಡೆದು ಕರ್ಣನನ್ನು ಸಂಹರಿಸಲಿಕ್ಕಾಗಿ ಯುದ್ಧರಂಗಕ್ಕೆ ಬಂದನು. ಆಗ ಭೀಮಸೇನದೇವರು ಸಮಸ್ತ ಶತ್ರುಸೈನ್ಯವನ್ನು ಓಡಿಸಿದರು. ತನ್ನ ಸಾರಥಿಯಾದ ವಿಶೋಕನೊಡನೆ ಲೋಕವೃತ್ತಾಂತವನ್ನು ಮಾತಾಡುತ್ತಲೇ ಬಂದ ಬಂದ ವೀರರನ್ನು ಸಂಹರಿಸಿದರು. ಆಗ ಶಕುನಿಯು ಸೈನ್ಯಸಹಿತನಾಗಿ ದುರ್ಯೋಧನನ ತಮ್ಮಂದಿರಿಂದ ಸಹಿತನಾಗಿ ಬಂದನು. ಭೀಮಸೇನದೇವರು ಅವನ ರಥವನ್ನು ಆಯುಧಗಳನ್ನು ಪುಡಿಮಾಡಿ ಬಾಣಗಳಿಂದ ಅವನನ್ನು ನೆಲದಲ್ಲಿ ಬೀಳಿಸಿದರು. ತಾನೇ ಪಗಡೆ ಆಟದ ಸಭೆಯಲ್ಲಿ ಅವನು ಸಹದೇವನ ಭಾಗಕ್ಕೆ ಸೇರಿದವನು ಎಂದು ಮಾಡಿದ್ದರಿಂದ ಕೊಲ್ಲಲಿಲ್ಲ. ಮೂರ್ಛಿತನಾಗಿ ಶ್ವಾಸಮಾತ್ರದಿಂದ ಉಳಿದ ಅವನನ್ನು ದುರ್ಯೋಧನನು ತನ್ನ ರಥದಿಂದ ಕರೆದುಕೊಂಡು ಹೋದನು. ದುರ್ಯೋಧನನ ಹತ್ತು ಜನ ತಮ್ಮಂದಿರು ಭೀಮಸೇನದೇವರನ್ನು ಬಿಟ್ಟು ಓಡಿಹೋದರು. ಆಗ ಭೀಮಸೇನದೇವರು ಅರ್ಜುನನ್ನು ಕೃಷ್ಣಪರಮಾತ್ಮನನ್ನು ನೋಡಿ ಧರ್ಮರಾಜನ ವಿಷಯವನ್ನು ಕೇಳಿ ಸಂತೋಷಪಟ್ಟರು.



# ದುಃಶಾಸನ ಸಂಹಾರ [1]

ಭೀಮಸೇನದೇವರು ಶತ್ರುಗಳನ್ನು ಸಂಹರಿಸುತ್ತಾ ಸೈನ್ಯವನ್ನು ಓಡಿಸುತ್ತಾ ಇದ್ದರು. ಆಗ ದುಃಶಾಸನನು ಧನುಸ್ಸನ್ನು ಧರಿಸಿಕೊಂಡು ಬಂದನು. ಆಗ ಭೀಮಸೇನದೇವರು ಸಿಂಹದಂತೆ ಅವನನ್ನು ಹೊಂದಿದರು. ಅವನು ಕ್ರೂರಗಳಾದ ಮಾತುಗಳನ್ನು ಆಡುತ್ತಿದ್ದನು. ಭೀಮಸೇನದೇವರು ಒಂದೇ ಕ್ಷಣದಲ್ಲಿ ಅವನ ರಥವನ್ನು ಪುಡಿಮಾಡಿದರು. ಅವನನ್ನು ಹಿಡಿದು ಭೂಮಿಯಲ್ಲಿ ಬೀಳಿಸಿದರು. ಗದೆಯಿಂದ ಎದೆಗೆ ಬಡೆದು ಎದೆಯನ್ನು ಸೀಳಿಹಾಕಿದರು. ಹೊಟ್ಟೆಯ ಮೇಲೆ ಕೂತುಕೊಂಡು ಕುತ್ತಿಗೆಯಲ್ಲಿ ಪಾದವನ್ನು ಇಟ್ಟು ರೋಷದಿಂದ ಅವನ ಮುಖವನ್ನು ನೋಡುತ್ತಾ ದೊಡ್ಡ ಖಡ್ಗವನ್ನು ತೆಗೆದು ಅವನ ಎದೆಯನ್ನು ಕುಕ್ಕಿದರು. ಎದೆಯಲ್ಲಿ ದೊಡ್ಡ ಸರೋವರದಂತೆ ಮಾಡಿದರು. ಅಮೃತಪಾನ ಮಾಡುವಂತೆ ಎದೆಯಲ್ಲಿ ರಕ್ತವನ್ನು ತೆಗೆದು ಕುಡಿಯುವಂತೆ ತೋರಿಸಿದರು. ಮನುಷ್ಯರ ರಕ್ತವನ್ನು ಕುಡಿಯಬಾರದಾದ ಕಾರಣ ತಾನು ಕುಡಿಯಲಿಲ್ಲ. ಆಗ ದಃಶಾಸನನಿಗೆ ಕಣ್ಣು ಸುತ್ತುತ್ತಾ ಇದ್ದಿತು. ಅವನು ಪೂರ್ವದಲ್ಲಿ ಮಾಡಿದ ದುಷ್ಕರ್ಮಗಳನ್ನೆಲ್ಲಾ ಜ್ಞಾಪಕಪಡಿಸಿದರು. ದುಃಶಾಸನನ ರಕ್ತವು ಭೀಮಸೇನದೇವರ ಹಲ್ಲಿನ ಒಳಗೂ ಹೋಗಲಿಲ್ಲ. ಆದರೂ ಶತ್ರುಗಳಿಗೆ ಭಯವನ್ನು ಉಂಟುಮಾಡುವುದಕ್ಕಾಗಿ ಕುಡಿಯುವಂತೆ ತೋರಿಸಿದರು. **ನರಸಿಂಹ ದೇವರನ್ನು ಧ್ಯಾನಿಸುತ್ತಾ [2]ಮನ್ಯುಸೂಕ್ತವನ್ನು ಹೇಳಿದರು.**

ಪುರುಷಶ್ರೇಷ್ಠರಾದ ಭೀಮಸೇನದೇವರು ಜನರ ಮಧ್ಯದಲ್ಲಿ ತಾನು ಮಾಡಿದ ಪ್ರತಿಜ್ಞೆಯನ್ನು ಸತ್ಯವನ್ನಾಗಿ ಮಾಡಿ 'ಯಾವ ದುಃಶಾಸನಾದಿಗಳ ಹೆಂಡತಿಯರು ಪತಿಸಹಿತರಾಗಿದ್ದಾರೋ ಅವರೆಲ್ಲರೂ ಈಗ ಪತಿಹೀನರಾದರು. ಯಾವ ದ್ರೌಪದಿಯು ಪತಿಹೀನಳೆಂದು ಹೇಳಲ್ಪಟ್ಟಳೋ ಅವಳು ಈಗ ಪತಿಉಳ್ಳವಳಾದಳು. ಭಗವಂತನ ವಿಚಿತ್ರಶಕ್ತಿಯನ್ನು ನೋಡಬೇಕು. ಯಾವ ಪಾಂಡವರು ಹೊಟ್ಟು ಎಳ್ಳಿನಂತೆ ಇದ್ದರೋ ಅವರೀಗ ಸಾರಯುಕ್ತವಾದ ಎಳ್ಳಿನಂತೆ ಆದರು. ನಾನು ಹಿಡಿದಿರುವ ಇವನನ್ನು ಯಾರಾದರೂ ಇದ್ದರೆ ತನ್ನ ಪರಾಕ್ರಮದಿಂದ ಬಿಡಿಸಲಿ' ಎಂದು ಹೇಳುತ್ತಾ ಪುನಃ ರಕ್ತವನ್ನು ಪಾನಮಾಡುವಂತೆ ತೋರಿಸಿದರು. ಆಗಲೂ ದುಃಶಾಸನನ ಪ್ರಾಣವು ಹೋಗಿರಲಿಲ್ಲ. ಆಮೇಲೆ ಭೀಮಸೇನದೇವರು ಅವನನ್ನು ಬಿಟ್ಟು ಆಯುಧರಹಿತರಾಗಿ ಶತ್ರುಸೈನ್ಯದಲ್ಲಿ ನರ್ತನ ಮಾಡಿದರು. 'ಯಾರು

---

1. ಮ.ತಾ.ನಿ. ಅ-27. 2. ಋಗ್ವೇದ X-83. ಅಥರ್ವವೇದ IV-32

ಪೂರ್ವದಲ್ಲಿ ನಮ್ಮನ್ನು ನೋಡಿ ಗೋವು, ಗೋವು ಎಂದು ಹೇಳುತ್ತಾ ನರ್ತನ ಮಾಡಿದರೋ ಅವರನ್ನು ಕುರಿತು ನಾವು ಈಗ ಗೋವು ಗೋವು ಎಂದು ಹೇಳುತ್ತಾ ನರ್ತನ ಮಾಡುವೆವು' ಎಂದು ಹೇಳುತ್ತಾ ಶತ್ರುಗಳ ಮಧ್ಯದಲ್ಲಿ ಕುಣಿಯುತ್ತಾ ಕೈಬಡಿಯುತ್ತಾ ಶತ್ರುಗಳನ್ನು ಕೂಗಿದರು. ಆಗ ಕರ್ಣ ಅಶ್ವತ್ಥಾಮ ದುರ್ಯೋಧನ ಇತ್ಯಾದಿಗಳಲ್ಲಿ ಒಬ್ಬರೂ ಅವರನ್ನು ನೋಡಲಿಕ್ಕೇ ಸಮರ್ಥರಾಗಲಿಲ್ಲ. ಭಯದಿಂದ ಕರ್ಣನ ಧನುಸ್ಸು ಕೆಳಗೆ ಬಿದ್ದಿತು. ಎರಡು ಕಣ್ಣುಗಳನ್ನು ಮುಚ್ಚಿಕೊಂಡನು. ಆಗ ಶಲ್ಯನು ಸಮಾಧಾನಪಡಿಸಲು ಬಹುಕಷ್ಟದಿಂದ ನಿಂತನು. ಅಶ್ವತ್ಥಾಮಾಚಾರ್ಯರು ಭೀಮಸೇನದೇವರನ್ನು ಬಿಟ್ಟು ದೂರಕ್ಕೆ ಹೋದರು. ಆಗ ಭೀಮಸೇನದೇವರು 'ಈಗ ಯುದ್ಧವೆಂಬ ಯಜ್ಞದಲ್ಲಿ ಸೋಮಪಾನ ಮಾಡಿಯಾಯಿತು. ಪಶುವಾದ ದುರ್ಯೋಧನನನ್ನು ಸಂಹಾರ ಮಾಡಬೇಕು' ಎಂದು ಹೇಳುತ್ತಾ ಮೃತನಾದ ಶತ್ರುವನ್ನು ಬಿಟ್ಟು ದುರ್ಯೋಧನನಿದ್ದಲ್ಲಿಗೆ ರೋಷದಿಂದ ಓಡಿಹೋದರು. ಓಡಿಬರುತ್ತಿದ್ದ ಉಗ್ರಪೌರುಷವುಳ್ಳ ಭೀಮಸೇನದೇವರನ್ನು ನೋಡಿ ದುರ್ಯೋಧನನು ತುಂಬಾ ಭಯವುಳ್ಳವನಾಗಿ ಓಡಿಹೋದನು. ಎರಡು ಸೈನ್ಯವೂ ಭಯದಿಂದ ಭೀಮಸೇನದೇವರನ್ನು ಬಿಟ್ಟು ಓಡಿಹೋದರು. ಕೃಷ್ಣಾರ್ಜುನರನ್ನು ಹೊರತು ಮತ್ತೆ ಎಲ್ಲರೂ ಓಡಿಹೋದರು. ಒಂದು ಮುಹೂರ್ತ ಯುದ್ಧರಂಗವು ಶೂನ್ಯವಾಗಿತ್ತು. ಭೀಮಸೇನದೇವರು ಹರ್ಷದಿಂದ ಹುಲಿಯಂತೆ ನರ್ತನ ಮಾಡಿದರು. ಶತ್ರುಗಳನ್ನೆಲ್ಲಾ ಗೋವುಗಳಂತೆ ಸಂಕಲ್ಪಮಾಡಿ ಹುಲಿಯಂತೆ ನರ್ತನ ಮಾಡುತ್ತಿದ್ದ ಅವರ ವ್ಯಾಪಾರವನ್ನು ನೋಡಿ ಕೃಷ್ಣಾರ್ಜುನರು ನಗಾಡಿದರು. ಅತಿಸಂತೋಷವುಳ್ಳವರಾಗಿ ಅವರನ್ನು ಸ್ತೋತ್ರ ಮಾಡಿದರು.

ಯಾವಾಗ ಭೀಮಸೇನದಿಂದ ಯುದ್ಧರಂಗವು ಒಂದು ಮುಹೂರ್ತಕಾಲ ಜನರಹಿತವಾಗಿ ಮಾಡಲ್ಪಟ್ಟಿತೋ ಆಗ ದುರ್ಯೋಧನನ ತಮ್ಮಂದಿರು ಬಂದು ಭೀಮಸೇನದೇವರ ಮೇಲೆ ಬಾಣಗಳನ್ನು ಸುರಿಸಿದರು. ಭೀಮಸೇನದೇವರು ಬಾಣಗಳಿಂದ ಅವರೆಲ್ಲರ ತಲೆಗಳನ್ನು ಕಡಿದುಹಾಕಿದರು. ಆ ದಿವಸದಲ್ಲಿ ಇಪ್ಪತ್ತು ಜನ ದುರ್ಯೋಧನನ ತಮ್ಮಂದಿರು ಮೃತರಾದರು. ಉಳಿದವರು ಯುದ್ಧರಂಗವನ್ನು ಬಿಟ್ಟು ಓಡಿಹೋದರು. ಈರೀತಿಯಾಗಿ ಭೀಮಸೇನದದೇವರು ಭಯಂಕರ ಕರ್ಮಗಳನ್ನು ಮಾಡುತ್ತಿರಲು ಶತ್ರುಗಳೆಲ್ಲರೂ ಭಯವುಳ್ಳವರಾಗಿರುತ್ತಿರಲು ಕರ್ಣನು ಭಯದಿಂದ ಕಣ್ಣುಮುಚ್ಚಿಕೊಂಡಿರುವಾಗ ಕರ್ಣನ ಮಗನಾದ ವೃಷಸೇನನು ನಕುಲನೊಡನೆ ಯುದ್ಧಕ್ಕೆ ಹೋದನು. ನಕುಲನು ಬಾಣಗಳಿಂದ

ವೃಷಸೇನನ್ನು ತಡೆದನು. ಅವನು ನಕುಲನ ರಥವನ್ನು ಪುಡಿಮಾಡಿದನು. ನಕುಲನು ಖಡ್ಗಚರ್ಮವನ್ನು ಹಿಡಿದುಕೊಂಡು ಮೂರುಸಾವಿರ ವೃಷಸೇನನ ಅನುಚರರನ್ನು ಸಂಹರಿಸಿದನು. ವೃಷಸೇನನು ನಕುಲನ ಚರ್ಮವನ್ನು ಕತ್ತರಿಸಿ ಭೀಮಾರ್ಜುನಾದಿಗಳ ಮೇಲೆಯೂ ಬಾಣಗಳನ್ನು ಸುರಿಸಿದರು. ಆಗ ಅರ್ಜುನನು ಬಾಣದಿಂದ ಅವನ ಕುತ್ತಿಗೆಯನ್ನು ಕೈಗಳನ್ನು ಏಕಕಾಲದಲ್ಲಿ ಕತ್ತರಿಸಿದನು. ತರುವಾಯ ಕರ್ಣನು ಅರ್ಜುನನೊಡನೆ ಯುದ್ಧಕ್ಕೆ ಬಂದನು. ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಯುದ್ಧದಲ್ಲಿ ಕರ್ಣನು ಅರ್ಜುನನಿಗಿಂತಲೂ ವಿಶೇಷವಾಗಿ ಬಾಣಗಳನ್ನು ಬಿಟ್ಟನು. ಆಗ ಭೀಮಸೇನದೇವರು ಗರ್ಜನೆ ಮಾಡುತ್ತಾ ಗದೆಯನ್ನು ಹಿಡಿದುಕೊಂಡು ರೋಷದಿಂದ 'ನಾನೇ ಗದೆಯಿಂದ ಬಡಿದು ಇವನನ್ನು ಕೊಂದುಹಾಕುವೆನು. ಅಥವಾ ನೀನು ಪರಾಕ್ರಮವುಳ್ಳವನಾಗಿ ಇವನನ್ನು ಸಂಹರಿಸು' ಎಂದು ಹೇಳಿದರು.

ಆಗ ಭಗವಂತನು ಅವನಲ್ಲಿ ನರಾವೇಶವನ್ನು ವಿಶೇಷವಾಗಿ ಉಂಟುಮಾಡಿದನು. ಅದರಿಂದ ಮಹಾಪರಾಕ್ರಮವುಳ್ಳವನಾಗಿ ಅರ್ಜುನನು ದುರ್ಯೋಧನ ಅಶ್ವತ್ಥಾಮ ಕೃಪ ಇತ್ಯಾದಿಗಳ ರಥಗಳನ್ನು ಪುಡಿಮಾಡಿ ಅವರನ್ನು ಬಡೆದನು. ಅವರೆಲ್ಲರೂ ಅದ್ಭುತವಾದ ಆ ಯುದ್ಧವನ್ನು ನೋಡುತ್ತಾ ಸ್ವಲ್ಪದೂರದಲ್ಲೇ ನಿಂತರು. ಕೊನೆಗೆ ಯುದ್ಧದಲ್ಲಿ ಅರ್ಜುನನು ಕರ್ಣನನ್ನು ಸಂಹರಿಸಿದನು. ಧರ್ಮರಾಜನು ಕರ್ಣನ ಸಂಹಾರವನ್ನು ಕೇಳಿ ಯುದ್ಧರಂಗಕ್ಕೆ ಬಂದು ಅವನ ದೇಹವನ್ನು ನೋಡಿದನು. ಕೃಷ್ಣಪರಮಾತ್ಮನನ್ನು ಅರ್ಜುನನ್ನು ಭೀಮಸೇನದೇವರನ್ನು ಇತರ ಪರಾಕ್ರಮಶಾಲಿಗಳನ್ನು ಸ್ತೋತ್ರ ಮಾಡಿದನು. ಎಲ್ಲರೂ ಕೃಷ್ಣಪರಮಾತ್ಮನಿಂದ ಸಹಿತರಾಗಿ ಸಂತೋಷದಿಂದ ಶಿಬಿರಕ್ಕೆ ಹೋದರು.



# ಶಲ್ಯಪರ್ವ

## ಭೀಮಸೇನದೇವರ ಪರಾಕ್ರಮ [1]

ಮರುದಿನ ಬೆಳಗಾಗಲು ಅಶ್ವತ್ಥಾಮಾಚಾರ್ಯರ ಅನುಮತಿಯನ್ನು ಪಡೆದು ದುರ್ಯೋಧನನು ಶಲ್ಯನನ್ನು ಸೇನಾಧಿಪತಿಯನ್ನು ಮಾಡಿ ಯುದ್ಧಕ್ಕೆ ಹೋದನು. ಪಾಂಡವರೂ ಸಂತೋಷದಿಂದ ಅವನನ್ನು ಎದುರಿಸಿಕೊಂಡು ಹೋದರು. ಪಾಂಡವರ ಮುಂಭಾಗದಲ್ಲಿ ಭೀಮಸೇನದೇವರೂ ಮಧ್ಯದಲ್ಲಿ ಧರ್ಮರಾಜನೂ ಹಿಂದಿನ ಭಾಗದಲ್ಲಿ ಕೃಷ್ಣಪರಮಾತ್ಮನಿಂದ ರಕ್ಷಿತನಾಗಿ ಅರ್ಜುನನೂ ಯುದ್ಧಕ್ಕೆ ಹೋದರು. ನಕುಲಸಹದೇವರು ಧರ್ಮರಾಜನ ಚಕ್ರರಕ್ಷಕರಾಗಿದ್ದರು. ಧೃಷ್ಟದ್ಯುಮ್ನನೂ ಸಾತ್ಯಕಿಯೂ ಎರಡು ಪಾರ್ಶ್ವದಲ್ಲಿ ಇದ್ದರು. ಕೌರವರ ಪಕ್ಷದಲ್ಲಿ ಮುಂಭಾಗದಲ್ಲಿ ಅಶ್ವತ್ಥಾಮಾಚಾರ್ಯರೂ ಮಧ್ಯದಲ್ಲಿ ಶಲ್ಯನೂ ಹಿಂದಿನಿಂದ ಸಹೋದರರಿಂದ ಸಹಿತನಾದ ದುರ್ಯೋಧನನೂ ಇದ್ದನು. ಶಲ್ಯನಿಗೆ ಶಕುನಿಯೂ ಅವನ ಮಗನೂ ಚಕ್ರರಕ್ಷಕರಾಗಿದ್ದರು. ಕೃಪಾಚಾರ್ಯರೂ ಕೃತವರ್ಮನೂ ಪಾರ್ಶ್ವದಲ್ಲಿ ಇದ್ದರು.

ಭೀಮಸೇನದೇವರಿಗೂ ಅಶ್ವತ್ಥಾಮಾಚಾರ್ಯರಿಗೂ ಮಹತ್ತಾದ ಯುದ್ಧವು ನಡೆಯಿತು. ಭೀಮಸೇನದೇವರು ಬಾಣಗಳಿಂದ ಅನಾಯಾಸದಿಂದ ಅಶ್ವತ್ಥಾಮಾಚಾರ್ಯರ ರಥವನ್ನು ಪುಡಿಮಾಡಿದರು. ಶಲ್ಯನು ಧರ್ಮರಾಜನ ರಥವನ್ನು ಪುಡಿಮಾಡಿದನು. ಆಗ ಶಲ್ಯನ ಬಳಿಗೆ ಅರ್ಜುನನು ಬಂದನು. ಶಲ್ಯನಿಗೂ ಅರ್ಜುನನಿಗೂ ರೋಮಾಂಚಜನಕವಾದ ಯುದ್ಧವು ನಡೆಯಿತು. ಅಶ್ವತ್ಥಾಮಾಚಾರ್ಯರು ಬೇರೊಂದು ರಥವನ್ನು ಏರಿಕೊಂಡು ಭೀಮಸೇನದೇವರ ಬಳಿಗೆ ಯುದ್ಧಕ್ಕೆ ಬಂದರು. ದುರ್ಯೋಧನನೂ ಭೀಮಸೇನದೇವರ ಸುತ್ತಲೂ ಬಾಣಗಳನ್ನು ಬಿಟ್ಟನು. ಭೀಮಸೇನದೇವರು ಅವರಿಬ್ಬರನ್ನೂ ಬಾಣದ ಮಳೆಗಳಿಂದ ತಡೆದರು. ಅವರಿಬ್ಬರೊಡನೆ ಭೀಮಸೇನದೇವರಿಗೆ ಭಯಂಕರವಾದ ಯುದ್ಧವು ನಡೆಯಿತು.

ಶಲ್ಯನಿಗೂ ಅರ್ಜುನನಿಗೂ ಭಯಂಕರವಾದ ಯುದ್ಧವು ನಡೆಯಿತು. ಧರ್ಮರಾಜನು ಬಂದು ಶಲ್ಯನ ನಾಲ್ಕು ಕುದುರೆಗಳನ್ನೂ ಸಂಹರಿಸಿದನು. ಶಲ್ಯನು ಬೇರೊಂದು ರಥವನ್ನು ಏರಿ ಎಲ್ಲರ ಮೇಲೆಯೂ ಬಾಣಗಳನ್ನು ಬಿಟ್ಟನು. ಧರ್ಮರಾಜನ ರಥವನ್ನು ಪುಡಿಮಾಡಿದನು. ಸಾತ್ಯಕಿಯ ಮತ್ತು ಧೃಷ್ಟದ್ಯುಮ್ನನ ಕುದುರೆಗಳನ್ನು ಸಂಹರಿಸಿ ನಕುಲಸಹದೇವರ ಧನುಸ್ಸುಗಳನ್ನು ಮುರಿದು ಶಂಖವನ್ನು

1. ಮ.ತಾ.ನಿ. ಅ-28

ಊದಿದನು. ತರುವಾಯ ಈರೀತಿಯಾಗಿ ಅಧಿಕವಾಗಿ ಯುದ್ಧಮಾಡುತ್ತಿದ್ದ ಶಲ್ಯನನ್ನು ನೋಡಿ ಭೀಮಸೇನದೇವರು ಬಾಣಗಳಿಂದ ತಡೆದನು. ಒಂದೇ ಕ್ಷಣದಲ್ಲಿ ರಥವನ್ನು ಪುಡಿಮಾಡಿದರು. ಬೇರೊಂದು ರಥದಲ್ಲಿ ಕೂತುಕೊಂಡು ಅವನು ಬರಲು ಮರ್ಮಸ್ಥಾನದಲ್ಲಿ ಬಾಣಗಳಿಂದ ಅತ್ಯಂತವಾಗಿ ಬಡಿದು ರಥವನ್ನು ಪುಡಿಮಾಡಿದರು. ಶಲ್ಯನು ಮೂರನೆಯ ರಥವನ್ನು ಏರಿಕೊಂಡು ಬಂದನು. ಅದನ್ನು ಪುಡಿ ಮಾಡಿದರು. ಅವನು ಧರಿಸಿದ ಆಯುಧಗಳನ್ನೆಲ್ಲಾ ಮುರಿದುಹಾಕಿದರು. ಮರ್ಮಸ್ಥಳಗಳನ್ನೆಲ್ಲಾ ಬಾಣಗಳಿಂದ ಸೀಳಿ ಹಾಕಿದರು. ತರುವಾಯ ಅವನು ಮುಷ್ಟಿಯನ್ನು ಎತ್ತಿಕೊಂಡು ಧರ್ಮರಾಜನಿದ್ದಲ್ಲಿಗೆ ಬಂದನು. ಭೀಮಸೇನ ದೇವರಿಂದ ಮರ್ಮಸ್ಥಳವೆಲ್ಲವೂ ಸೀಳಿಹೋಗಿ ಕವಚ ಆಯುಧಗಳಿಂದ ರಹಿತನಾಗಿ ಶ್ವಾಸಮಾತ್ರವುಳ್ಳವನಾಗಿ ಸಾಯುವುದಕ್ಕಾಗಿಯೇ ತನ್ನ ಬಳಿಗೆ ಬರುತ್ತಿರುವ ಶಲ್ಯನನ್ನು ನೋಡಿ ಧರ್ಮರಾಜನು ಬೇರೊಂದು ರಥವನ್ನು ಏರಿಕೊಂಡು ಬಂದವನಾಗಿ ವ್ಯರ್ಥವಾಗದೆ ಇರುವ ಶಕ್ತಿಯೆಂಬ ಆಯುಧವನ್ನು ತೆಗೆದನು. ದಿವ್ಯ ಅಸ್ತ್ರಮಂತ್ರಗಳಿಂದ ಅಭಿಮಂತ್ರಿಸಿ ಸತ್ಯಧರ್ಮ ಫಲಗಳಿಂದಲೂ ಜೋಡಿಸಿ ಬೇಗನೆ ಶಲ್ಯನ ಎದೆಗೆ ಬಿಟ್ಟನು. ಶಲ್ಯನು ಎದೆಸೀಳಿಹೋದವನಾಗಿ ಧರ್ಮರಾಜನಿಗೆ ಎದುರಾಗಿ ಭೂಮಿಯಲ್ಲಿ ಬಿದ್ದನು. ಸತ್ಯಧರ್ಮದಲ್ಲಿ ಆಸಕ್ತನಾದ ಶಲ್ಯನು ಇಂದ್ರದೇವರಿಗೆ ಅತಿಥಿಯಾದನು.

ಉಳಿದ ದುರ್ಯೋಧನನ ತಮ್ಮಂದಿರನ್ನು ಎಲ್ಲರನ್ನು ಭೀಮಸೇನದೇವರು ಸಂಹರಿಸಿದರು. ಸೈನ್ಯವನ್ನೆಲ್ಲಾ ಸಂಹರಿಸಿದರು. ಸಹದೇವನು ಉಲೂಕನನ್ನು ಶಕುನಿಯನ್ನೂ ಸಂಹರಿಸಿದನು. ಭೀಮಾರ್ಜುನರು ಅಶ್ವತ್ಥಾಮ ಕೃಪಕೃತವರ್ಮರನ್ನು ಅನೇಕಬಾರಿ ರಥವನ್ನು ಮುರಿದು ಪುನಃ ಪುನಃ ಪೀಡಿಸಿ ಓಡಿಸಿದರು. ಅವರು ಭಯವುಳ್ಳವರಾಗಿ ವನವನ್ನು ಪ್ರವೇಶಿಸಿದರು. ಸಾತ್ಯಕಿಯು ಸಂಜಯನನ್ನು ಓಡಿಯಲು ಅವನನ್ನು ವೇದವ್ಯಾಸದೇವರು ಬಿಡಿಸಿದರು. ತರುವಾಯ ದುರ್ಯೋಧನನೊಬ್ಬನೇ ಎಲ್ಲ ಪಾಂಡವರೊಡನೆ ಯುದ್ಧಕ್ಕೆ ಹೋದನು. ಅರ್ಜುನನನ್ನು ಅನೇಕಬಾರಿ ಮೂರ್ಛೆಗೊಳಿಸಿದನು. ಧರ್ಮರಾಜ ನಕುಲ ಸಹದೇವರ ರಥಗಳನ್ನು ಪುಡಿಮಾಡಿದನು. ಭೀಮಸೇನದೇವರು ಅವನ ರಥವನ್ನು ಪುಡಿಮಾಡಿದರು. ಆಮೇಲೆ ಅವನು ಆನೆಯ ಮೇಲೆ ಕೂತುಕೊಂಡು ಬಂದನು. ಸಾತ್ಯಕಿ ಮೊದಲಾದವರ ಆಯುಧಗಳನ್ನು ಪುಡಿಮಾಡಿದನು. ಭೀಮಸೇನದೇವರು ಬಾಣಗಳಿಂದ ಆನೆಯನ್ನೂ ನಾಶ ಮಾಡಿದರು. ದುರ್ಯೋಧನನು ಭಯವಿಲ್ಲದೆ

ಕುದುರೆಯನ್ನು ಏರಿದನು. ಪ್ರಾಸದಿಂದ ಸಾತ್ಯಕಿಯನ್ನು ಬಡೆದನು. ಅವನು ಮೂರ್ಛಿತನಾದನು. ನಕುಲಸಹದೇವರೂ ರಥದಲ್ಲಿ ಕೂತುಕೊಂಡು ಬಿಟ್ಟರು. ಆಮೇಲೆ ಅವನು ಧರ್ಮರಾಜನ ಬಳಿಗೆ ಹೋಗುವುದನ್ನು ನೋಡಿ ಭೀಮಸೇನ ದೇವರು ಕುದುರೆಯನ್ನು ಕೊಂದರು. ಪ್ರಾಸವನ್ನು ತುಂಡುಮಾಡಿದರು. ತರುವಾಯ ಆಯುಧ ವಾಹನಗಳಿಂದ ರಹಿತನಾಗಿ ಗದೆಯನ್ನು ಹಿಡಿದುಕೊಂಡು ಹೋಗಿ ದ್ವೈಪಾಯನ ಸರೋವರವನ್ನು ಪ್ರವೇಶಿಸಿದನು. ಈರೀತಿಯಾಗಿ ಹನ್ನೊಂದು ಅಕ್ಷೋಹಿಣೀ ಸೈನ್ಯಗಳಲ್ಲಿ ಕಲಿಂಗದೇಶದ ರಾಜರನ್ನು ಸೇರಿಸಿ ಆರು ಅಕ್ಷೌಹಿಣೀ ಸೈನ್ಯವನ್ನು ಭೀಮಸೇನದೇವರು ಸಂಹರಿಸಿದರು. ಐದು ಅಕ್ಷೌಹಿಣೀ ಸೈನ್ಯವನ್ನು ಅರ್ಜುನನು ಸಂಹರಿಸಿದನು. ಉಳಿದ ಸೈನ್ಯವನ್ನು ಇತರರು ಸಂಹರಿಸಿದರು. ಹಾಗೆಯೇ ಪಾಂಡವರ ಸೈನ್ಯಗಳಲ್ಲಿ ನಾಲ್ಕು ಅಕ್ಷೋಹಿಣೀಸೇನೆಯನ್ನು ಅಶ್ವತ್ಥಾಮಾಚಾರ್ಯರು ಸಂಹರಿಸಿದರು. ಉಳಿದ ಸೈನ್ಯಗಳು ಉಳಿದವರು ಸಂಹರಿಸಿದರು.



## ಗದಾಯುದ್ಧವು [1]

ಮಹಾನುಭಾವರಾದ ಪಾಂಡವರು ಜಯವನ್ನು ಪಡೆದು ಗರ್ಜಿಸುತ್ತಿರಲು ದುರ್ಯೋಧನನು ಜಲಸ್ತಂಭವನ್ನು ಮಾಡಿ ಮಂತ್ರಗಳನ್ನು ಜಪಿಸಿದನು. ದುರ್ವಾಸರು ಸತ್ತವರನ್ನು ಬದುಕಿಸುವ ಮಂತ್ರಗಳನ್ನು ಉಪದೇಶಿಸಿದ್ದರು. ದುರ್ಯೋಧನನು ನೀರಿನಲ್ಲಿ ಇದ್ದುಕೊಂಡು ಏಳುದಿವಸ ಜಪಿಸಿ ಎಲ್ಲರನ್ನು ಮೃತರಾದವರನ್ನು ಎಬ್ಬಿಸಬಹುದು. ಆಮೇಲೆ ಅವರೆಲ್ಲರೂ ಪುನಃ ಸಾಯಲಾರರು. ಈರೀತಿಯಾಗಿ ಅವನ ವಿದ್ಯಾಬಲವನ್ನು ತಿಳಿದು ಪಾಂಡವರು ಬೇಡರಿಂದ ಅವನು ನೀರಿನಲ್ಲಿ ಇರುವನೆಂದು ತಿಳಿದರು. ಅಲ್ಲಿಗೆ ಪರಮಾತ್ಮನನ್ನು ಮುಂದೆ ಮಾಡಿಕೊಂಡು ಹೋದರು. ಆಗ ನೀರಿನಿಂದ ಮೇಲಕ್ಕೆ ಬಂದು [2]ಅಶ್ವತ್ಥಾಚಾರ್ಯರು ಮೊದಲಾದವರಿಂದ ಮಾತಾಡುತ್ತಿರುವುದನ್ನು ನೋಡಿದರು. ಆ ಮೂರು ಜನರೂ ಪಾಂಡವರನ್ನು ನೋಡಿ ಓಡಿದರು. ದುರ್ಯೋಧನನು ನೀರಿನೊಳಗೆ ಪ್ರವೇಶಿಸಿದನು. ಅವನನ್ನು ಕೃಷ್ಣಪರಮಾತ್ಮನ ಆಜ್ಞೆಯಿಂದ ಧರ್ಮರಾಜನು ಕಠಿನ ಮಾತುಗಳಿಂದ ಹೊರಗೆ ಬರುವಂತೆ ಕರೆದನು. ಆಗ ದುರ್ಯೋಧನನು

---

1. ಮ.ತಾ.ನಿ. ಅ-28 2. ದುರ್ಯೋಧನನು

ಕೋಲಿನಿಂದ ಬಡಿಯಲ್ಪಟ್ಟ ಹಾವಿನಂತೆ ಸಹಿಸದೆ ಶ್ವಾಸವನ್ನು ಬಿಡುತ್ತಾ 'ನಾನು ತಪಸ್ಸನ್ನು ಮಾಡಲಿಕ್ಕೆ ವನಕ್ಕೆ ಹೋಗುವೆನು. ನೀನು ಸರ್ವಭೂಮಿಯನ್ನು ಆಳುವವನಾಗು' ಎಂದು ನೀರಿನ ಒಳಗಿನಿಂದಲೇ ಹೇಳಿದನು. ಅದಕ್ಕೆ ಧರ್ಮ ರಾಜನು 'ಯಾವ ನೀನು ಕೃಷ್ಣಪರಮಾತ್ಮನು ಬಂದಿರುವಾಗ ಸೂಜಿಯ ತುದಿಯಿಂದ ಕುಕ್ಕುವಷ್ಟು ಭೂಮಿಯನ್ನೂ ಕೊಡಲಿಕ್ಕೆ ಇಚ್ಛಿಸಲಿಲ್ಲ, ಈಗ ಭೀಷ್ಮದ್ರೋಣ ಮೊದಲಾದ ಸಮಸ್ತರನ್ನು ಸಮಸ್ತ ಭೂಮಿಯನ್ನು ನಾಶಮಾಡಿ ಸಮಸ್ತ ಭೂಮಿಯನ್ನು ಕೊಡಲಿಕ್ಕೆ ಇಚ್ಛಿಸುವಿ! ಈಗ ನಾವು ನಿನ್ನನ್ನು ಸಂಹರಿಸದೆ ಭೂಮಿಯನ್ನು ಸ್ವೀಕರಿಸುವುದಿಲ್ಲ, ಯುದ್ಧಕ್ಕೆ ಬಾ. ನೀರಿನಲ್ಲಿ ಅಡಗಿ ಕೂತುಕೊಂಡಿರುವಿಯಲ್ಲಾ! ಕುರುವಂಶದಲ್ಲಿ ನೀನು ಹುಟ್ಟಿಲ್ಲವೇ?' ಇತ್ಯಾದಿ ಕಠಿಣ ಮಾತನ್ನು ಆಡಿದನು.

ಅದನ್ನು ಕೇಳಿ ದುರ್ಯೋಧನನು ಜಲಸ್ತಂಭವನ್ನು ಬಿಟ್ಟು ಹಾವಿನಂತೆ ಶ್ವಾಸಬಿಡುತ್ತಾ ನೀರಿನಿಂದ ಹೊರಗೆ ಬಂದನು. ಹೊರಗೆ ಬಂದವನು 'ನಾನು ಒಬ್ಬನಿರುವೆನು. ನನಗೆ ಕಿರೀಟವಿಲ್ಲ, ಕವಚವಿಲ್ಲ, ನೀವು ಬಹಳ ಜನರಿರುವಿರಿ. ಕವಚಾದಿಗಳಿಂದ ಯುಕ್ತರಾಗಿರುವಿರಿ. ಹೀಗೆ ಇದ್ದರೂ ನಿಮ್ಮೊಡನೆ ಯುದ್ಧ ಮಾಡುವುದು ಸರಿಯೆಂದಾದರೆ ನಿಮ್ಮ ಎಲ್ಲರೊಡನೆಯೋ ಅಥವಾ ಒಬ್ಬೊಬ್ಬರೊಡನೆಯೋ ಯುದ್ಧವನ್ನು ಮಾಡುವೆನು. ನನಗೆ ಭಯವಿಲ್ಲ' ಎಂದು ದುರ್ಯೋಧನನು ಹೇಳಿದನು. ಆಗ ಧರ್ಮರಾಜನು 'ನಿನಗೆ ಕವಚಾದಿಗಳನ್ನು ಕೊಡುತ್ತೇನೆ. ಐದು ಜನರ ಮಧ್ಯದಲ್ಲಿ ಯಾರನ್ನು ಇಚ್ಛಿಸುವಿಯೋ ಅವರೊಡನೆ ಯುದ್ಧವನ್ನು ಮಾಡು. ಯಾರು ಬೇಕಾದರೂ ಒಬ್ಬನನ್ನು ಸಂಹರಿಸಿ ರಾಜ್ಯವನ್ನು ಅನುಭವಿಸು. ಉಳಿದವರು ನಾವು ಕಾಡಿಗೆ ಹೋಗುವೆವು. ಅಥವಾ ನೀನು ಸತ್ತರೆ ನಾವು ಎಲ್ಲಾ ರಾಜ್ಯವನ್ನು ಅನುಭವಿಸುವೆವು. ಯಾವ ಆಯುಧದಿಂದ ಶತ್ರುವನ್ನು ಜಯಿಸಲಿಕ್ಕೆ ಇಚ್ಛಿಸುವಿಯೋ ಆ ಆಯುಧವನ್ನು ಸ್ವೀಕರಿಸು' ಎಂದು ಹೇಳಿದನು. ಆಗ ದುರ್ಯೋಧನನು 'ನಾನು ದುರ್ಬಲರಾದ ನೀನು ಅರ್ಜುನ ಇತ್ಯಾದಿ ಗಳೊಡನೆ ಯುದ್ಧಮಾಡಲಾರೆನು. ಭೀಮಸೇನನೊಡನೆ ಗದೆಯಿಂದ ಯುದ್ಧವನ್ನು ಮಾಡುವೆನು. ನನಗೆ ಗದೆಯೇ ಪ್ರಿಯವಾದ ಆಯುಧವು. ಬೇರೆ ಆಯುಧವನ್ನು ಮುಟ್ಟಲಾರೆನು' ಎಂದು ಹೇಳಿದನು. ಈ ಪ್ರಕಾರವಾಗಿ ದುರ್ಯೋಧನನ ಮಾತನ್ನು ಕೇಳಿ ಭೀಮಸೇನದೇವರು ಸಂತೋಷದಿಂದ ದುರ್ಯೋಧನನ ಗದೆಯಿಂದ ಒಂದೂವರೆ ಪಾಲು ಭಾರವಾದ ಗದೆಯನ್ನು ಹಿಡಿದುಕೊಂಡು ಯುದ್ಧಮಾಡುವ ಮನಸ್ಸುಳ್ಳವರಾಗಿ ಗರ್ಜನ ಮಾಡುತ್ತಾ ಎದ್ದುನಿಂತರು.

ಆಗ ಕೃಷ್ಣಪರಮಾತ್ಮನು ಧರ್ಮರಾಜನೊಡನೆ 'ನೀನು ಮಾಡಿದ್ದು ಕಷ್ಟಕರವಾಯಿತಲ್ಲಾ! ಗದೆಯಿಂದ ಯುದ್ಧಮಾಡುವ ಈ ರಾಜನನ್ನು ಎಲ್ಲಾ ದೇವತೆಗಳೂ ಅಸುರರೂ ಜಯಿಸಲಿಕ್ಕೆ ಆಗಲಾರದು. ಅವನು ನಿಶ್ಚಯವಾಗಿಯೂ ನಿಮ್ಮನ್ನು ನಾಲ್ಕು ಜನರನ್ನೂ ಕೊಂದು ಹಾಕುವನು. ಭೀಮಸೇನನು ಕಷ್ಟದಿಂದ ಜಯಿಸಬಹುದು. ಬಲದಲ್ಲಿ ಭೀಮಸೇನನಿಗೆ ಸಮಾನರಿಲ್ಲ. ದುರ್ಯೋಧನನು ಮಹಾಪ್ರಯತ್ನಶೀಲನು' ಎಂದು ಹೇಳಿದನು. (ಕೃಷ್ಣಪರಮಾತ್ಮನು ಭೀಮಸೇನನು ಕಷ್ಟದಿಂದ ಜಯಿಸಬಹುದು ಎಂಬ ಮಾತಿಗೆ ಭೀಮಸೇನದೇವರಿಗೆ ಸಾಮರ್ಥ್ಯ ವಿಲ್ಲವೆಂದು ಅರ್ಥವಲ್ಲ. ಭೀಮಸೇನದೇವರು ತನ್ನ ಪ್ರತಿಜ್ಞೆಯನ್ನು ರಕ್ಷಿಸುವುದಕ್ಕಾಗಿ ದುರ್ಯೋಧನನ ತೊಡೆಗಳನ್ನು ಭೇದಿಸಬೇಕು. ಗದಾಯುದ್ಧದಲ್ಲಿ ನಾಭಿಯಿಂದ ಕೆಳಗೆ ಬಡಿಯುವುದು ಧರ್ಮವಲ್ಲವೆಂದು ಜನರು ಹೇಳುವರು. ಆದುದರಿಂದ ಭೀಮಸೇನದೇವರು ಕಷ್ಟದಿಂದ ಸಂಹರಿಸುವೆಂದು ಹೇಳಿದ್ದು. ವಸ್ತುತಃ ಅವರಿಗೆ ಆಪತ್ತು ಇಲ್ಲ. ದುರ್ಯೋಧನನು ಯುದ್ಧದಲ್ಲಿ ಬಹುಪ್ರಯತ್ನ ಮಾಡುವನು. ಭೀಮಸೇನದೇವರು ಅಲ್ಪ ಕಾರ್ಯಕ್ಕಾಗಿ ಬಹುಪ್ರಯತ್ನ ಮಾಡುವುದಿಲ್ಲವೆಂದು ಹೇಳಿದ್ದೂ ಅವರಿಗೆ ಗುಣವೇ. ಆದುದರಿಂದ ಭೀಮಸೇನದೇವರಿಗೆ ಆಪತ್ತು ಇಲ್ಲದಿದ್ದರೂ ಆಪತ್ತಿನಂತೆ ತೋರಿಸಿದರು.)

ತರುವಾಯ ಭೀಮಸೇನದೇವರು ಸರ್ವಲೋಕಕ್ಕೂ ಧರ್ಮವನ್ನು ತಿಳಿಸುವವರಾಗಿ ದುರ್ಯೋಧನನೊಡನೆ 'ನಾನು ಪ್ರತಿಜ್ಞೆಯನ್ನು ಮಾಡಿದಂತೆ ನಿನ್ನ ತೊಡೆಗಳನ್ನು ಭೇದಿಸುವೆನು. ಈ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ' ಎಂದು ಹೇಳಿದರು. ಈರೀತಿಯಾಗಿ ಹೇಳಿದ ಭೀಮಸೇನದೇವರನ್ನು ದುರ್ಯೋಧನನು ಸಮೀಪಿಸಿದನು. ಆಗ ಭಯಂಕರವಾದ ಯುದ್ಧವು ನಡೆಯಿತು. ಆಗ ಭೀಮಸೇನದೇವರು ದೊಡ್ಡವರ ಸ್ವಭಾವವನ್ನು ತೋರಿಸುತ್ತಾ ಮೆಲ್ಲಮೆಲ್ಲಗೆ ಯುದ್ಧ ಮಾಡಿದರು. ವಿಚಿತ್ರವಾದ ಗದಾಯುದ್ಧವು ಕ್ರಮವನ್ನು ತೋರಿಸುತ್ತಾ ಯುದ್ಧಮಾಡಿಕೊಂಡರು. ಆಗ ತೀರ್ಥಯಾತ್ರೆಗೆ ಹೋದ ಬಲರಾಮದೇವರು ಬಂದು ಅವರ ಗದಾಯುದ್ಧವನ್ನು ನಿಲ್ಲಿಸಲಿಕ್ಕೆ ಹೋದರು. ಆದರೂ ಅವರಿಬ್ಬರೂ ಯುದ್ಧವನ್ನು ಬಿಡಲಿಲ್ಲ. ತರುವಾಯ ಕೃಷ್ಣಪರಮಾತ್ಮನೇ ಮೊದಲಾದವರಿಂದ ಬಹುಮಾನಿತರಾಗಿ ಅವರ ಯುದ್ಧವನ್ನು ನೋಡುತ್ತಾ ಇದ್ದರು. ದುರ್ಯೋಧನನೂ ಭೀಮಸೇನದೇವರೂ ವಿಚಿತ್ರವಾಗಿ ಯುದ್ಧ ಮಾಡಿದರು.

ತರುವಾಯ ದುರ್ಯೋಧನನು ಭೀಮಸೇನದೇವರನ್ನು ವಂಚನೆ

ಮಾಡುವುದಕ್ಕಾಗಿ ಕಾಲುಮೇಲೆ ತಲೆಕೆಳಗಾಗಿ ಯುದ್ಧವನ್ನು ಮಾಡಿದನು. ಆಗ ಕೃಷ್ಣಪರಮಾತ್ಮನ ಆಜ್ಞೆಯಿಂದ ದುರ್ಯೋಧನನ ಕಟಿಪ್ರದೇಶಕ್ಕೆ ಬಡಿದರು. ದುರ್ಯೋಧನನು ಕಟಿಮುರಿದು ಹೋಗಿ ಕೆಳಗೆ ಬಿದ್ದನು. ಪ್ರತಿಜ್ಞೆಯನ್ನು ಮಾಡಿದಂತೆ ಅವನ ತೊಡೆಯು ಮುರಿದು ಹೋಯಿತು. ಆದರೆ ಗದಾಯುದ್ಧ ಮರ್ಯಾದೆಯನ್ನು ರಕ್ಷಿಸುವುದಕ್ಕಾಗಿ ನಾಭಿಯ ಕೆಳಗೂ ಬಡಿಯಲಿಲ್ಲ. ನಾಭಿಗೆ ಸಮಾನವಾಗಿ ಬಡಿದರು. ಆ ಪೆಟ್ಟಿನಿಂದ ಅವನ ಎರಡು ತೊಡೆಗಳೂ ಮುರಿದವು. ಪಗಡೆ ಆಟವಾಡುವಾಗ ದುರ್ಯೋಧನನು ಕೊನೆಗೆ ಇನ್ನು ಕೃಷ್ಣನನ್ನು ಪಣವನ್ನಾಗಿ ಇಡಿ ಎಂದು ಹೇಳಿದ್ದನು. ಅದಕ್ಕೆ ಭೀಮಸೇನದೇವರು ನೀನು ಕೃಷ್ಣಪರಮಾತ್ಮನಿಗೆ ಅವಮಾನ ಮಾಡಿದಿಯಾದ ಕಾರಣ ಕೊನೆಗೆ ನಿನ್ನ ತೊಡೆಯನ್ನು ಮುರಿದು ತಲೆಯನ್ನು ಮೆಟ್ಟುವೆನೆಂದು ಪ್ರತಿಜ್ಞೆಯನ್ನು ಮಾಡಿದ್ದರು. ಆ ಪ್ರತಿಜ್ಞೆಯಂತೆ ದುರ್ಯೋಧನನ ತಲೆಯನ್ನು ಆಗ ಮೆಟ್ಟಿದರು. [1]**'ಋಷಭಂ ಮಾ ಸಮಾನಾನಾಂ'** ಎಂಬ ವೇದಮಂತ್ರವನ್ನು ಹೇಳಿದರು. ದುರ್ಯೋಧನಾದಿಗಳ ಪುಣ್ಯವನ್ನು ವಿದ್ಯೆಗಳನ್ನೂ ಸ್ವೀಕರಿಸಿ ಅವರನ್ನೆಲ್ಲಾ ತಮಸ್ಸಿಗೆ ಹೋಗುವವರನ್ನಾಗಿ ಮಾಡಿದರು. ಕೃಷ್ಣಪರಮಾತ್ಮನನ್ನು ಕಟ್ಟಿಹಾಕಬೇಕೆಂದು ಯೋಚಿಸಿದೆಯಾ' ಎಂದು ಹೇಳುತ್ತಾ ಪುನಃ ದುರ್ಯೋಧನನ ತಲೆಯನ್ನು ಮೆಟ್ಟಿದರು.

ಹೀಗೆ ಪುನಃ ಪುನಃ ತಲೆಯನ್ನು ಒದೆಯುವುದನ್ನು ನೋಡಿ ಬಲರಾಮದೇವರಿಗೆ ಕೋಪವುಂಟಾಯಿತು. ಕೈಯೆತ್ತಿಕೊಂಡು ಗಟ್ಟಿಯಾಗಿ ಇದು ಧರ್ಮವಲ್ಲ, ಇದು ಧರ್ಮವಲ್ಲ ಎಂದು ಕೂಗಿಕೊಂಡರು. ಪುನಃ ಕೋಪದಿಂದ ಕಣ್ಣನ್ನು ಕೆಂಪಗೆ ಮಾಡಿಕೊಂಡು ಮುಸಲ ಹಲ ಎಂಬ ತನ್ನ ಆಯುಧಗಳನ್ನು ಹಿಡಿದುಕೊಂಡು ಭೀಮಸೇನದೇವರಿದ್ದಲ್ಲಿ ಓಡಿದರು. ಆಗ ಭೀಮಸೇನದೇವರು ಒಂದು ಹೆಜ್ಜೆಯನ್ನೂ ಹಿಂದೆ ತೆಗೆಯಲಿಲ್ಲ. ಭೀಮಸೇನದೇವರು ಭಯರಹಿತರಾಗಿ ನಿಂತಿರಲು ಕೃಷ್ಣಪರಮಾತ್ಮನು ಬಲರಾಮದೇವರನ್ನು ಹಿಡಿದುಕೊಂಡನು. 'ಸುತ್ತುತ್ತಾ ಯುದ್ಧಮಾಡುವಾಗ ಎದುರಾಗಿ ಯುದ್ಧಮಾಡುವಾಗ ನಾಭಿಯ ಕೆಳಗೆ ಬಡಿಯ ಬಾರದು. ವಂಚನೆ ಮಾಡುವವನನ್ನು ನಾಭಿಯ ಕೆಳಗೆ ಬಡಿದರೂ ದೋಷವಿಲ್ಲ. ಭೀಮಸೇನನು ಪರಸ್ತ್ರೀಯನ್ನು ಕುರಿತು ತೊಡೆಯನ್ನು ತೋರಿಸಿದ್ದಕ್ಕಾಗಿ ನಿನ್ನ ತೊಡೆಗಳನ್ನು ಮುರಿಯುವೆನೆಂದು ಯುಕ್ತಿಯುಕ್ತವಾಗಿ ಪ್ರತಿಜ್ಞೆಯನ್ನು ಮಾಡಿರುವನು. ಆದುದರಿಂದ ಭೀಮಸೇನನು ದುರ್ಯೋಧನನನ್ನು ಧರ್ಮದಿಂದಲೇ ಸಂಹರಿಸಿ

1. **ಋಷಭಸೂಕ್ತ, ಋಗ್ವೇದ** X-166

ದನು' ಎಂದು ಕೃಷ್ಣಪರಮಾತ್ಮನು ಹೇಳಿದನು. ಪರಮಾತ್ಮನ ಮಾತನ್ನು ಕೇಳಿ ಇದು ಧರ್ಮದ ನೆಪವೆಂದು ಹೇಳುತ್ತಾ ಬಲರಾಮದೇವರು ಬೇಗನೇ ತನ್ನ ಪಟ್ಟಣಕ್ಕೇ ಹೋದರು.

ಬಲರಾಮದೇವರು ಹೊರಟುಹೋದ ಮೇಲೆ ಧರ್ಮರಾಜನು ಕೃಷ್ಣಪರಮಾತ್ಮನೊಡನೆ ದುರ್ಯೋಧನನನ್ನು ಕೊಂದದ್ದು ಧರ್ಮದಿಂದಲೋ ಅಧರ್ಮದಿಂದಲೋ ಎಂದು ಕೇಳಿದನು. ಅದಕ್ಕೆ ಕೃಷ್ಣಪರಮಾತ್ಮನು 'ಯಾರು ಪಾಪಿಗಳೋ ಅವರನ್ನು ಸರಿಯಾದ ಧರ್ಮದಿಂದ ಸಂಹರಿಸಬಾರದು. ಪೂರ್ವದಲ್ಲಿ ದೇವತೆಗಳು ದೈತ್ಯರನ್ನು ವಂಚನೆ ಮಾಡಿಯೇ ಕೊಂದರು. ಆದುದರಿಂದ ದುರ್ಯೋಧನನೂ ಅಧರ್ಮದಿಂದ ಸಂಹರಿಸಲ್ಪಟ್ಟನು. ಇದರಿಂದ ಒಂದು ದೋಷವೂ ಇಲ್ಲ. ಭೀಷ್ಮರೂ, ದ್ರೋಣಾಚಾರ್ಯರೂ, ಕರ್ಣನೂ, ಕಪಟ ದಿಂದಲೇ ಸಂಹರಿಸಲ್ಪಟ್ಟರು. ಹೀಗಿರುವಾಗ ಪಾಪಿಯಾದ ದುರ್ಯೋಧನನು ಅಧರ್ಮದಿಂದ ಕೊಲ್ಲಲ್ಪಟ್ಟರೆ ಏನು ದೋಷವಿದೆ? ಪ್ರತಿಜ್ಞೆಯನ್ನು ಪರಿಪಾಲಿಸುವುದ ಕ್ಕಾಗಿಯೂ ಭೀಮಸೇನನು ತೊಡೆಯನ್ನು ಮುರಿದನು. ಧರ್ಮದಿಂದಲೇ ಪ್ರತಿಜ್ಞೆಯನ್ನು ಮಾಡಿರುವನು. ಲೋಕರೀತಿಯಿಂದಲೂ ಎಷ್ಟು ಮಾತ್ರಕ್ಕೂ ಧರ್ಮಕ್ಕೆ ಹಾನಿಯಿಲ್ಲ. ಭೀಮಸೇನನು ಮಾಡಿದ್ದು ಧರ್ಮವೇ' ಎಂದು ಹೇಳಿ ಧರ್ಮರಾಜನಿಗೆ ಸಂಶಯವೇ ಬರುವಂತೆ ಮಾಡಿದನು. ಭೂಭಾರವನ್ನು ಪರಿಹಾರ ಮಾಡಿದ್ದ ರಿಂದಲೂ ತನ್ನ ಸೇವಾರೂಪವಾದ ಧರ್ಮವೂ ಭೀಮಸೇನದೇವರಿಗೇ ಮುಖ್ಯ ವಾಗಿ ಉಂಟಾಗುವಂತೆ ಮಾಡಿದರು. ಪರಮಾತ್ಮನು ತಾನೇ ಬಲರಾಮದೇವರಿಗೇ ಮುಖ್ಯವಾಗಿ ಉಂಟಾಗುವಂತೆ ಮಾಡಿದರು. ಪರಮಾತ್ಮನು ತಾನೇ ಬಲರಾಮದೇವರಿಗೆ ಪುನಃ ಪುನಃ ಧರ್ಮವೆಂದು ಹೇಳಿದರೂ ಧರ್ಮರಾಜನು ಸಂಶಯವನ್ನು ಬಿಡದೆ ಇದ್ದಕಾರಣ ಮತ್ತು ಸಂಶಯವು ಬರುವಂತೆ ಮಾಡಿದರು. ಮುಖ್ಯವಾದ ಧರ್ಮವನ್ನು ಬಲರಾಮದೇವರಿಗೆ ಹೇಳಿದರು. ಜನರಿಗೂ ಹೇಳಿದರು.

ದುರ್ಯೋಧನನು ಧರ್ಮದಿಂದಲೇ ಭೀಮನು ದುರ್ಯೋಧನನು ಸಂಹರಿಸಿದನೆಂದು ಕೃಷ್ಣಪರಮಾತ್ಮನು ಹೇಳುತ್ತಿರಲು ದುರ್ಯೋಧನನು ಕೋಪ ದಿಂದ ತುಟಿಯನ್ನು ನಡುಗಿಸಿಕೊಂಡು 'ಪಾಂಡವರನ್ನು ನೀನೇ ಪಾಪಿಗಳನ್ನಾಗಿ ಮಾಡಿದಿ. ನೀನೊಬ್ಬನೇ ಯಾವಾಗಲೂ ಮಹಾಪಾಪಿಯು' ಎಂದು ಕೃಷ್ಣಪರಮಾತ್ಮನೊಡನೆ ಹೇಳಿದನು. ಅದಕ್ಕೆ ಪರಮಾತ್ಮನು 'ನಿನಗೆ ಸಮಾನನಾದ

ಮಹಾಪಾಪಿಯು ಯಾವಾಗಲೂ ಇಲ್ಲ, ಭೀಷ್ಮಾದಿಗಳೂ ಪಾಪಿಯಾದ ನಿನ್ನನ್ನು ಅನುಸರಿಸಿದ ಕಾರಣವೇ ಸಾಯುವವರಾದರು. ಪಾಪಿಗಳನ್ನು, ಪಾಪಿಗಳನ್ನು ಅನುಸರಿಸಿದವರನ್ನು ಕೊಂದರೆ ಸ್ವಲ್ಪವೂ ಪಾಪವಿರಲಾರದು. ಆದುದರಿಂದ ಪಾಂಡವರಲ್ಲಿ ಸ್ವಲ್ಪವೂ ಪಾಪವಿಲ್ಲ. ಅವರು ಸ್ವಭಾವದಿಂದಲೂ ನನ್ನನ್ನು ಆಶ್ರಯಿಸಿದ ಕಾರಣವೂ ಅತ್ಯಂತ ಗುಣವಂತರು. ಅವರಲ್ಲಿ ಸ್ವಲ್ಪವಾದರೂ ಪಾಪವನ್ನು ಯಾರು ಹೇಳುವನು? ನೀನು ಸ್ವಭಾವದಿಂದಲೇ ಮಹಾಪಾಪಿಯು. ಧರ್ಮದಲ್ಲಿ ಇದ್ದವರನ್ನು ಪಾಪಮಾರ್ಗದಲ್ಲಿ ಆಸಕ್ತರಾಗುವಂತೆ ಮಾಡಿ ತಾನೂ ಪಾಪದಲ್ಲಿ ಆಸಕ್ತನಾಗಿ ಪಾಪದಿಂದ ಅತ್ಯಂತ ಪಾಪಕರವಾದ ಗತಿಯನ್ನೇ ಹೊಂದುವಿ' ಎಂದು ಹೇಳಿದನು.

ಈ ಪ್ರಕಾರವಾಗಿ ಹೇಳುತ್ತಿದ್ದ ಕೃಷ್ಣಪರಮಾತ್ಮನೊಡನೆ ಪಾಪಿಗಳಲ್ಲಿ ಪ್ರಧಾನನಾದ ದುರ್ಯೋಧನನು ಒಳ್ಳೇ ಮರಣವುಳ್ಳವರಲ್ಲಿ ನನಗಿಂತ ಶ್ರೇಷ್ಠರಾದವರು ಯಾರು ಇರುವರು. ನಾನು ಯಾವ ದೋಷವನ್ನು ಮಾಡಿರುವೆನು? ಬೇಕಾದ ಯಜ್ಞಗಳನ್ನು ಮಾಡಿದೆನು. ಅನ್ನದಾನಾದಿಗಳನ್ನು ಮಾಡಿರುವೆನು. ಶತ್ರುಗಳ ತಲೆಯನ್ನು ಮೆಟ್ಟಿರುವೆನು. ಯುದ್ಧರಂಗದಲ್ಲಿ ಯುದ್ಧವನ್ನು ಮಾಡುತ್ತಾ ಮೃತ್ಯುವನ್ನು ಹೊಂದಿರುವೆನು. ಬೇಕಾದ ಭೋಗಗಳನ್ನು ಅನುಭವಿಸಿರುವೆನು. ಒಳ್ಳೇ ಗತಿಯನ್ನು ಹೊಂದಿರುವೆನು. ದುಃಖಿಗಳಾದ ಮೋಸದಿಂದ ಯುದ್ಧವನ್ನು ಮಾಡಿದ ಪಾಂಡವರು ದುಃಖವನ್ನೇ ಹೊಂದುವರು. ಚಂದ್ರ ಸೂರ್ಯರಂತೆ ಇರುವ ಶೂರರಾದ ಧರ್ಮಿಷ್ಟರಾದ ಸಜ್ಜನರಿಂದ ರಹಿತವಾದ ರತ್ನಹೀನವಾದ ಬರೇ ಭೂಮಿಯನ್ನು ಪಾಂಡವರು ಅನುಭವಿಸಲಿ' ಎಂದು ಹೇಳಿದನು. ಆಗ ದೇವಶ್ರೇಷ್ಠರು ದುರ್ಯೋಧನನ ತಲೆಯಮೇಲೆ ಹೂವಿನ ಮಳೆಯನ್ನು ಸುರಿಸಿದರು. ದುರ್ಯೋಧನನು ಪುಷ್ಪದ ಮಳೆಯನ್ನು ನೋಡಿ ತಾನು ತಿಳಿದುಕೊಂಡದ್ದು ಸರಿಯೆಂದು ತಿಳಿದು ತಮಸ್ಸಿಗೆ ಹೋಗಲಿ ಎಂದು ದೇವತೆಗಳು ಹಾಗೆ ಮಾಡಿದರು. ಕೊನೆಯ ಕಾಲದಲ್ಲಿ ತನ್ನನ್ನು ಹೊಗಳಿಕೊಂಡು ಪರಮಾತ್ಮನನ್ನೂ ಪರಮಾತ್ಮನ ಭಕ್ತರನ್ನು ನಿಂದಿಸಿದವನಿಗೆ ಅಂದಂತಮಸ್ಸು ಏಕೆ ಆಗಲಾರದು? ಅವುಗಳಲ್ಲಿ ಒಂದೊಂದೂ ದುಃಖಕ್ಕೆ ಕಾರಣವಾದದ್ದು. ಎಲ್ಲವೂ ಸೇರಿದ್ದರಿಂದ ಅಧಿಕವಾದ ದುಃಖವೇ ಉಂಟಾಗುವುದು. ಆದುದರಿಂದ ಪರಮಾತ್ಮನು ಅದೆಲ್ಲವನ್ನು ಮಾಡಿಸಿ 'ನಿನಗೆ ಎಲ್ಲವೂ ವ್ಯರ್ಥವೇ. ಕ್ರೂರನಾದ ಕೃತಘ್ನನಾದ ಗುಣವಂತರಲ್ಲಿ ದ್ವೇಷಿಯಾದ ನಿನಗೂ ಧರ್ಮದ ಫಲವುಂಟಾಗುವುದಾದರೂ ಕತ್ತಲೆಯೂ ಸೂರ್ಯನಂತೆ ಪ್ರಕಾಶವನ್ನು ಉಂಟುಮಾಡುವುದು' ಎಂದು ಹೇಳಿ ಧರ್ಮದಿಂದಲೇ

ಮೃತನಾದನೆಂದು ಸ್ವಕೀಯರಲ್ಲಿ ಪ್ರಸಿದ್ಧಿಪಡಿಸಿದನು. ಭಗವಂತನು ಹೇಳಿದ ಮಾತು ಎಲ್ಲರ ಮನಸ್ಸಿಗೂ ಬಂದಿತು. ದುರ್ಯೋಧನನು ಧರ್ಮದಿಂದಲೇ ಮೃತನಾಗಿರುವನೆಂದೂ ಮಹಾಪಾಪಿಯೆಂದೂ ಎಲ್ಲರೂ ನಿಶ್ಚಯಿಸಿದರು. ದೇವತೆಗಳು ದುರ್ಯೋಧನನ ತಲೆಯಮೇಲೆ ಹೂವಿನ ಮಳೆಯನ್ನು ಸುರಿಸಿದ್ದರಿಂದ ಧರ್ಮರಾಜನು ಧರ್ಮದಿಂದಲೋ ಅಲ್ಲವೋ ಎಂದು ಸಂದೇಹಪಟ್ಟನು. ಅಶ್ವತ್ಥಾಮಾಚಾರ್ಯರೂ ಸಂಜಯನೂ ಬಲರಾಮದೇವರು ದುರ್ಯೋಧನನ ಮೇಲಿನ ಸ್ನೇಹದಿಂದ ಭೀಮಸೇನದೇವರು ದುರ್ಯೋಧನನನ್ನು ಅಧರ್ಮದಿಂದ ಕೊಂದದ್ದು ಎಂದು ಹೇಳಿದರು.

ತರುವಾಯ ಸಂತೋಷದಿಂದ ಗರ್ಜನೆಮಾಡುತ್ತಿದ್ದ ಪಾಂಡವರಿಂದ ಕೂಡಿಕೊಂಡು ಕೃಷ್ಣಪರಮಾತ್ಮನು ಮಂದಹಾಸವನ್ನು ಮಾಡುತ್ತಾ ಯುದ್ಧರಂಗದಿಂದ ಹೊರಟುಹೋದನು. ತರುವಾಯ ಯುಯುತ್ಸುವು ಸಂಜಯನಿಂದ ಧೃತರಾಷ್ಟ್ರನು ಅತ್ಯಂತ ಸಂತಾಪಯುಕ್ತನಾಗಿರುವನೆಂದು ಕೇಳಿ ಕೃಷ್ಣಪರಮಾತ್ಮನ ಮತ್ತು ಧರ್ಮರಾಜನು ಅನುಮತಿಯಿಂದ ಸಮಾಧಾನಪಡಿಸಲಿಕ್ಕೆ ಹೋದನು. ಅವನ ಹಿಂದೆಯೇ ಕೃಷ್ಣಪರಮಾತ್ಮನೂ ಹೋದನು. ಪರಮಾತ್ಮನು ಅನೇಕ ವಿಧ ಮಾತುಗಳಿಂದ ಧೃತರಾಷ್ಟ್ರನನ್ನೂ ಸಮಾಧಾನಪಡಿಸಿ ತಿರಿಗಿ ಪಾಂಡವರಿದ್ದಲ್ಲಿಗೆ ಬಂದನು.

ಕಾಲಾನುಸಾರವಾಗಿ ದೇವಾಂಶದವರನ್ನೆಲ್ಲರನ್ನೂ ಸಂಹಾರ ಮಾಡಿಸಬೇಕೆಂಬ ಅಭಿಪ್ರಾಯದಿಂದ ಪಾಂಡವರನ್ನೂ ಸಾತ್ಯಕಿಯರನ್ನೂ ಕರೆದುಕೊಂಡು ಕೌರವರ ಶಿಬಿರಕ್ಕೆ ಹೋದನು. ಆಸಮಯದಲ್ಲಿಯೇ ಅಶ್ವತ್ಥಾಮಾಚಾರ್ಯರು ಕೃಪಕೃತವರ್ಮರಿಂದ ಸಹಿತರಾಗಿ ಸಂಹರಿಸಿದರು. ಅವರಲ್ಲಿ ಧೃಷ್ಟದ್ಯುಮ್ನನ ಸಾರಥಿಯೊಬ್ಬನು ಮಾತ್ರ ಬದುಕಿ ಉಳಿದನು. ಕೃತವರ್ಮನು ಆವನ ತಲೆಗೆ ಖಡ್ಗದಿಂದ ಬಡೆದನು. ಕತ್ತಲೆಯಾದ ಕಾರಣ ಖಡ್ಗವು ತಲೆಗೆ ತಾಗುವುದಕ್ಕಿಂತ ಪೂರ್ವದಲ್ಲಿ ಭೂಮಿಯಲ್ಲಿ ಮಲಗಿಬಿಟ್ಟನು. ಆಮೇಲೆ ಅವನು ಬೇರೆ ಸ್ಥಳದಲ್ಲಿ ನೋಡುತ್ತಿರುವಾಗ ಎದ್ದು ಓಡಿಹೋದನು. ದ್ರೌಪದಿದೇವಿಯರ ಬಳಿ ಓಡಿ ಎಲ್ಲವನ್ನು ತಿಳಿಸಿದನು. ದ್ರೌಪದೀದೇವಿಯರು ಲೋಕರೀತಿಯಿಂದ ದುಃಖವುಳ್ಳವರಾಗಿ ಭೀಮಸೇನ ದೇವರಲ್ಲಿ ತಿಳಿಸಿದರು.



# ಸೌಪ್ತಿಕಪರ್ವ

## ಭೀಮಸೇನದೇವರು ಅಶ್ವತ್ಥಾಮಾಚಾರ್ಯರನ್ನು ನಿಗ್ರಹಿಸಿದ್ದು[1]

ಭೀಮಸೇನದೇವರು ರಥದಲ್ಲಿ ಕೂತುಕೊಂಡು ಧನುರ್ಧಾರಿಯಾಗಿ ಅಶ್ವತ್ಥಾಮಾಚಾರ್ಯರನ್ನು ಅಟ್ಟಿಸಿಕೊಂಡು ಹೋದರು. ಅಶ್ವತ್ಥಾಮಾಚಾರ್ಯರು ಒಬ್ಬರೇ ರಥದಲ್ಲಿ ಕೂತುಕೊಂಡು ಹೋಗುತ್ತಿದ್ದರು. ಭೀಮಸೇನದೇವರನ್ನು ನೋಡಿ ಭಯದಿಂದ ವೇಗದಿಂದ ಕುದುರೆಗಳಿಂದ ಓಡಿದರು. ತನ್ನ ಹಿಂದೆಯೇ ಅಟ್ಟಿಸಿಕೊಂಡು ಬರುತ್ತಿರುವ ಭೀಮಸೇನದೇವರನ್ನು ನೋಡಿ ಅಶ್ವತ್ಥಾಮಾಚಾರ್ಯರು ರೋಷದಿಂದ ಹಿಂದೆ ತಿರುಗಿ ಯುದ್ಧಮಾಡಿ ಸೋತುಹೋಗಿ ಬ್ರಹ್ಮಶಿರ ಎಂಬ ಅಸ್ತ್ರವನ್ನು ತೆಗೆದರು. ಆ ಸಮಯದಲ್ಲಿ ಕೃಷ್ಣಪರಮಾತ್ಮನು ಧರ್ಮರಾಜನನ್ನು ಅರ್ಜುನನನ್ನು ಕರೆದುಕೊಂಡು ಅಲ್ಲಿಗೆ ಬಂದನು. ಪರಮಾತ್ಮನ ಅಪ್ಪಣೆಯಿಂದ ಅರ್ಜುನನು ಬ್ರಹ್ಮಾಸ್ತ್ರವನ್ನು ಬಿಟ್ಟನು. ಆ ಅಸ್ತ್ರಗಳೂ ಎರಡೂ ಜ್ವಲಿಸಲು ಮಧ್ಯದಲ್ಲಿ ವೇದವ್ಯಾಸದೇವರು ಬಂದರು. ಅವರ ಆಜ್ಞೆಯಿಂದ ಅರ್ಜುನನು ಬ್ರಹ್ಮಾಸ್ತ್ರವನ್ನು ಉಪಸಂಹಾರ ಮಾಡಿದನು. ಅಶ್ವತ್ಥಾಮಾಚಾರ್ಯರಿಂದ ಉಪಸಂಹಾರ ಮಾಡಲಿಕ್ಕೆ ಆಗದಿರಲು ಕೃಷ್ಣಪರಮಾತ್ಮನು 'ಅಶ್ವತ್ಥಾಮನು ಬ್ರಹ್ಮಚರ್ಯಹೀನನಾದ ಕಾರಣ [2]ಬ್ರಹ್ಮಾಸ್ತ್ರವನ್ನು ಉಪಸಂಹರಿಸಲಿಕ್ಕೆ ಆಗಲಿಲ್ಲ' ಎಂದನು. ವೇದವ್ಯಾಸದೇವರು ಭೀಮಸೇನದೇವರಿಗೆ ಶಿರಸ್ಸಿನಲ್ಲಿರುವ ಮಣಿಯನ್ನು ಕೊಡುವಂತೆ ಹೇಳಿದರು. ಹಾಗೆಯೇ ಅಶ್ವತ್ಥಾಮಾಚಾರ್ಯರು ಜರಾಮರಮಣನಾಶಕವಾದ ಹಸಿವೆ ದಾಹಗಳನ್ನು ಪರಿಹರಿಸುವ ಆ ಮಣಿಯನ್ನು ಭೀಮಸೇನದೇವರಿಗೆ ಕೊಟ್ಟರು. ತರುವಾಯ ಅಶ್ವತ್ಥಾಮಾಚಾರ್ಯರು ಕೃಷ್ಣಪರಮಾತ್ಮನಿಂದ ಶಾಪವನ್ನು ಹೊಂದಿ ಹೊರಟುಹೋದ ಮೇಲೆ ಭೀಮಸೇನದೇವರು ಆ ಮಣಿಯನ್ನು ದ್ರೌಪದೀ ದೇವಿಯರಿಗೆ ಕೊಟ್ಟು ಸಮಾಧಾನಪಡಿಸಿದರು. ಭೀಮಸೇನದೇವರ ಮಾತಿನಿಂದ ದ್ರೌಪದೀದೇವಿಯರು ಕೋಪರಹಿತರಾಗಿ ಆ ರತ್ನವನ್ನು ಧರ್ಮರಾಜನಿಗೆ ಕೊಟ್ಟರು. ರಾಜರಿಗೆ ಅರ್ಹವಾದ ಮಣಿಯನ್ನು ಭೀಮಸೇನದೇವರು ತನಗೆ ಕೊಡಲು ಲೋಕದ ಜನರು ಭೀಮಸೇನದೇವರಿಗೆ ಸ್ತ್ರೀಯರಲ್ಲಿ ಪಕ್ಷಪಾತವೆಂದು ಹೇಳುವರೆಂದು ಭೀಮಸೇನದೇವರ ಪ್ರಿಯಹಿತದಲ್ಲಿ ಆಸಕ್ತರಾದ ದ್ರೌಪದೀ ದೇವಿಯರು ಆ ಮಣಿಯನ್ನು ಧರ್ಮರಾಜನಿಗೇ ಕೊಟ್ಟು ಬಿಟ್ಟರು. ಧರ್ಮರಾಜನು ಆ ಮಣಿಯನ್ನು ಶಿರಸ್ಸಿನಲ್ಲಿ ಧರಿಸಿಕೊಂಡು ಸೂರ್ಯನಂತೆ ಪ್ರಕಾಶಿಸಿದನು.

---

1. ಮ.ತಾ.ನಿ. ಅ-28. 2.ಮ.ತಾ.ನಿ. ಅ.28-172.

# ಸ್ತ್ರೀಪರ್ವ

## ಪಾಂಡವರು ಧೃತರಾಷ್ಟ್ರ ಗಾಂಧಾರಿಯರಿಗೆ ನಮಸ್ಕರಿಸಿದ್ದು[1]

ತರುವಾಯ ಪಾಂಡವರು ವೇದವ್ಯಾಸದೇವರಿಂದಲೂ ಕೃಷ್ಣಪರಮಾತ್ಮನಿಂದಲೂ ತಮ್ಮ ಪತ್ನಿಯರಿಂದಲೂ ಸಹಿತರಾಗಿ ರಾಜಧಾನಿಗೆ ಹೋದರು. ಅಲ್ಲಿ ಧರ್ಮರಾಜನು ಧೃತರಾಷ್ಟ್ರನಿಗೆ ನಮಸ್ಕರಿಸಿ ಅನಂತರದಲ್ಲಿ ಭೀಮಸೇನದೇವರು ಅವನಿಗೆ ನಮಸ್ಕರಿಸಲಿಕ್ಕೆ ಹೋಗಲು, ಕೃಷ್ಣಪರಮಾತ್ಮನು ಭೀಮಸೇನದೇವರನ್ನು ಹಿಂದೆ ಎಳೆದು, ದುರ್ಯೋಧನನು ಗದಾಯುದ್ಧವನ್ನು ಅಭ್ಯಾಸ ಮಾಡುವಾಗ ಮಾಡಿಸಿದ್ದ ಭೀಮಸೇನದೇವರ ಉಕ್ಕಿನ ಪ್ರತಿಮೆಯನ್ನು ಮುಂದೆ ನಿಲ್ಲಿಸಿದನು. ಧೃತರಾಷ್ಟ್ರನು ಆ ಉಕ್ಕಿನ ಪ್ರತಿಮೆಯನ್ನು ಗಟ್ಟಿಯಾಗಿ ಆಲಿಂಗನ ಮಾಡಿ ರಕ್ತವನ್ನು ಕಾರುತ್ತಾ 'ಹಾ ಭೀಮ' ಎಂದು ಹೇಳುತ್ತಾ ಬಿದ್ದುಬಿಟ್ಟನು. ಆಗ ಕೃಷ್ಣಪರಮಾತ್ಮನು 'ರಾಜನೇ! ಭೀಮನು ಸಾಯಲಿಲ್ಲ, ನಿನ್ನಿಂದಲಾಗಲೀ ಇನ್ನು ಯಾರಿಂದಾಗಲೀ ಅವನನ್ನು ಸಂಹರಿಸಲಿಕ್ಕೆ ಆಗಲಾರದು. ನಿನ್ನ ದುರ್ಬುದ್ಧಿಯು ಮಾತ್ರ ಎಲ್ಲರಿಗೂ ತಿಳಿಯಿತಷ್ಟೆ! ಇನ್ನೂ ನಿನ್ನ ಬುದ್ಧಿಯು ದುಷ್ಟವಾಗಿಯೇ ಇರುವುದು. ನಿನ್ನ ಬುದ್ಧಿದೋಷದಿಂದ ಅತಿ ಪಾಪಶೀಲರಾದ ಮಕ್ಕಳೆಂಬ ಪಾಪವನ್ನು ಬೆಳೆಸಿ ಅವರ ವಶನಾಗಿ ಅದರ ಫಲವನ್ನು ಈಗ ಅನುಭವಿಸುತ್ತಾ ಭೀಮಸೇನನ ಮೇಲೆ ಕೋಪಿಸುವುದು ನ್ಯಾಯವಲ್ಲ' ಎಂದು ಹೇಳಿದನು.

ತರುವಾಯ ಧೃತರಾಷ್ಟ್ರನು ಶಾಂತಬುದ್ಧಿಯಿಂದಲೇ ಭೀಮಸೇನದೇವರನ್ನು ಕೂಗಲು ಭೀಮಸೇನದೇವರು ಬಂದು ನಮಸ್ಕರಿಸಿದರು. ಆಮೇಲೆ ಅರ್ಜುನಾದಿ ಗಳೂ ಕ್ರಮದಿಂದ ನಮಸ್ಕರಿಸಿದರು. ಭೀಮಸೇನದೇವರು ನಮಸ್ಕರಿಸಲಿಕ್ಕೆ ಬರುವಾಗ ಕೃಷ್ಣಪರಮಾತ್ಮನು ಅವರನ್ನು ಹಿಂದೆ ಎಳೆದು ಉಕ್ಕಿನ ಪ್ರತಿಮೆಯನ್ನು ನಿಲ್ಲಿಸಲಿಕ್ಕೆ ಕಾರಣವೇನೆಂದರೆ ಉಕ್ಕಿನ ಪ್ರತಿಮೆಯನ್ನು ಪುಡಿ ಮಾಡಿದ ಧೃತರಾಷ್ಟ್ರನು ಭೀಮಸೇನದೇವರನ್ನೂ ಸಂಹರಿಸುವನು ಎಂದು ಸಾಮಾನ್ಯಜನರು ಹೇಳಬಹುದು. ಆದರೆ ಅದು ಸರಿಯಲ್ಲ, ಧೃತರಾಷ್ಟ್ರನಿಂದಲೋ ಇನ್ನೊಬ್ಬರಿಂದಲೋ ಅವರನ್ನು ಸಂಹರಿಸಲಿಕ್ಕೆ ಆಗಲಾರದು. ಉಕ್ಕಿಗಿಂತಲೂ ಗಟ್ಟಿಯಾದ ವಜ್ರಕ್ಕಿಂತಲೂ ಗಟ್ಟಿಯಾದ ದೇಹವುಳ್ಳವರು ಭೀಮಸೇನದೇವರು. ಆದುದರಿಂದ ಅದು ಕಾರಣವಲ್ಲ, ಮತ್ತೇನು ಕಾರಣವೇನೆಂದರೆ ಭೀಮಸೇನದೇವರು ಅತಿಗಟ್ಟಿಯಾದ ದೇಹವುಳ್ಳವರಾದ ಕಾರಣವೇ ಧೃತರಾಷ್ಟ್ರನು ಎಷ್ಟು ಗಟ್ಟಿಯಾಗಿ ಆಲಿಂಗಿಸಿದರೂ ಭೀಮಸೇನದೇವರಿಗೆ

1. ಮ.ತಾ.ನಿ. ಅ-28

ಒಂದೂ ಆಗಲಾರದು. ಇದರಿಂದ ಅವನ ಮನಸ್ಸಿನಲ್ಲಿ ಇರುವ ದೋಷವು ಒಬ್ಬರಿಗೂ ತಿಳಿಯಲಾರದೆ ಹೋಗುವುದು. ಅದಕ್ಕಾಗಿ ಕೃಷ್ಣಪರಮಾತ್ಮನು ಹೀಗೆ ವಂಚನೆ ಮಾಡಿದನು. ಆಮೇಲೆ ಎಲ್ಲರೂ ಪ್ರೇಮದಿಂದ ಆಲಿಂಗಿಸಿ ಆಶೀರ್ವಾದ ಮಾಡಿದನು.

ತರುವಾಯ ಧರ್ಮರಾಜನು 'ಅಮ್ಮ! ನಾನು ಕುಲನಾಶವನ್ನು ಮಾಡಿದವನು. ಪಾಪಿಯು. ನಿನ್ನ ಶಾಪಕ್ಕೆ ಅರ್ಹನು' ಎಂದು ಹೇಳುತ್ತಾ ಗಾಂಧಾರಿಗೆ ನಮಸ್ಕರಿಸಲು ಗಾಂಧಾರಿಯು ತನ್ನ ಕಣ್ಣಿಗೆ ಕಟ್ಟಿಕೊಂಡಿದ್ದ ವಸ್ತ್ರದ ಸಂದಿನಿಂದ ಕೋಪದಿಂದ ಧರ್ಮರಾಜನ ಕಾಲಿನ ಬೆರಳುಗಳನ್ನು ನೋಡಿದಳು. ಅದರಿಂದ ಬೆರಳುಗಳು ಉಗುರುಗಳು ಸುಟ್ಟುಹೋಗಿ ಕಪ್ಪಾದವು. ಆಮೇಲೆ ಭೀಮಸೇನದೇವರು ಗಾಂಧಾರಿಗೆ ನಮಸ್ಕರಿಸಿದರು. ಆಗ ಗಾಂಧಾರಿಯು ಕೋಪವಶಳಾಗಿ 'ಭೀಮ! ನೀನು ನನ್ನ ಮಗನನ್ನು ಅಧರ್ಮದಿಂದ ಹೇಗೆ ಕೊಂದಿರುವಿ?' ಎಂದು ಕೇಳಿದಳು. ಅದಕ್ಕೆ ಮೊದಲು ಸ್ವಲ್ಪ ಅವಳ ಕೋಪವನ್ನು ಶಾಂತಮಾಡುವುದಕ್ಕಾಗಿ 'ಪ್ರಾಣ ಸಂದೇಹಕಾಲದಲ್ಲಿ ಪಾಪಿಯನ್ನು ಕೊಂದರೆ ಪಾಪವು ಬರಲಾರದು' ಎಂದರು. ಭೀಮಸೇನದೇವರಿಗೆ ಪ್ರಾಣಸಂದೇಹವು ಬಂದಿಲ್ಲ, ಪ್ರತಿಜ್ಞಾಹಾನಿಯಾಗುವುದೇ ಪ್ರಾಣಸಂದೇಹವೆಂಬ ಅಭಿಪ್ರಾಯದಿಂದ ಹಾಗೆ ಹೇಳಿದರು. ಹಾಗೆಯೇ ಭೀಮಸೇನದೇವರು ಗಾಂಧಾರಿಯೊಡನೆ ''ಪ್ರತಿಜ್ಞಾ ಮಾಡಿದಂತೆ ಶತ್ರುಗಳನ್ನು ಸಂಹರಿಸಿದ ನನಗೆ ಕ್ಷತ್ರಿಯನಾದವನಿಗೆ ಅಧರ್ಮವೆಲ್ಲಿಂದ ಬಂದಿತು? ಪ್ರತಿಜ್ಞೆಯನ್ನು ನಡೆಸದಿದ್ದರೇನೇ ನನಗೆ ಬದುಕಲಾರದು. ಪಾಪಿಗಳನ್ನು ಶುದ್ಧಧರ್ಮದಿಂದ ಸಂಹರಿಸಬಾರದು ಎಂದು ಶ್ರುತಿಯಲ್ಲಿಯೇ ಹೇಳುತ್ತದೆ. ಇತರರನ್ನು ಸಂಹರಿಸು ವಂತೆ ಸರಿಯಾದ ಮಾರ್ಗದಿಂದ ಪಾಪಿಗಳನ್ನು ಸಂಹರಿಸುವುದು ಅಧರ್ಮವೆಂದೇ ಶ್ರುತಿಯಲ್ಲಿ ಹೇಳುತ್ತದೆ. ಆದುದರಿಂದಲೇ ದೇವತೆಗಳು ಕಪಟಿಗಳಾದ ದೈತ್ಯರನ್ನು ಕಪಟದಿಂದಲೇ ಸಂಹರಿಸಿರುವರು.

**'ಕಪಟದಿಂದ ಕಪಟಿಗಳನ್ನು ಸಂಹರಿಸಬೇಕು. ಕಪಟದಿಂದ ಧರ್ಮಿಷ್ಠರನ್ನು ಸಂಹರಿಸಬಾರದು'** ಎಂದು '**ಪೈಂಗಿಶ್ರುತಿ**ಯು ಹೇಳುತ್ತದೆ'' ಎಂದು ಹೇಳಲು ಗಾಂಧಾರಿಯು 'ನೀನು ಮನುಷ್ಯನಾಗಿದ್ದುಕೊಂಡು ಮನುಷ್ಯನಾದ ದುಃಶಾಸನನ ರಕ್ತವನ್ನು ಹೇಗೆ ಕುಡಿಯುವವನಾದಿ?' ಎಂದು ಕೇಳಿದಳು. ಭೀಮಸೇನದೇವರು 'ನಾನು ದುಃಶಾಸನನ ರಕ್ತವನ್ನು ಕುಡಿಯಲಿಲ್ಲ. ನಿನ್ನ ಮಗನ ರಕ್ತವು ನನ್ನ ಹಲ್ಲಿನ ಒಳಗೇ ಹೋಗಲಿಲ್ಲ. ಪ್ರತಿಜ್ಞೆಯನ್ನು ಪರಿಪಾಲಿಸುವುದಕ್ಕಾಗಿಯೂ ದುಃಶಾಸನಕ್ಕೆ

1. ಮ.ತಾ.ನಿ. ಅ-28-216

ಪ್ರತೀಕಾರವನ್ನು ಮಾಡುವುದಕ್ಕಾಗಿಯೂ ಶತ್ರುಗಳಿಗೆ ಭಯವನ್ನು ಉಂಟುಮಾಡುವುದಕ್ಕಾಗಿಯೂ ನಾನು ರಕ್ತವನ್ನು ಕುಡಿದಂತೆ ತೋರಿಸಿದೆನಷ್ಟೆ. ಅತಿಪಾಪಿ ಜನರನ್ನು ಕುರಿತು ಹೀಗೆ ಮಾಡುವುದು ಧರ್ಮವೆಂದು ವೇದದಲ್ಲಿಯೇ ಹೇಳಿದೆ' ಎಂದು ಹೇಳಿದರು.

ಆಗ ಗಾಂಧಾರಿಯು 'ನೂರು ಮಕ್ಕಳನ್ನು ಕೊಲ್ಲುವವನಾಗಿ ಈ ಇಬ್ಬರು ಕುರುಡರಿಗೆ ಊರುಗೋಲಿನಂತೆ ಒಬ್ಬನನ್ನು ಉಳಿಸಲಿಲ್ಲವಲ್ಲಾ?' ಎಂದಳು. ಭೀಮಸೇನದೇವರು 'ಎಲ್ಲರೂ ಪಾಪಿಗಳು. ಕೊಲ್ಲಲಿಕ್ಕೆ ಯೋಗ್ಯವಾದ ಅಪರಾಧವನ್ನು ಮಾಡಿದ್ದರು. ಎಲ್ಲರನ್ನೂ ಕೊಂದೆನು' ಎಂದರು. ಗಾಂಧಾರಿಯು ನಿನಗೆ ಅಪರಾಧ ಮಾಡದೆ ಇದ್ದವನು ಒಬ್ಬರೂ ಇಲ್ಲವೇ?' ಎಂದು ಕೇಳಿದಳು. ಭೀಮಸೇನದೇವರು 'ನೂರು ಜನರೂ ಸೇರಿ ಕೃಷ್ಣಪರಮಾತ್ಮನನ್ನು ಕಟ್ಟಿಹಾಕಲಿಕ್ಕೆ ಯೋಚನೆಯನ್ನು ಮಾಡಿದರು. ಕೃಷ್ಣಪರಮಾತ್ಮನು ಸಭೆಯಲ್ಲಿ ಧರ್ಮವನ್ನು ಹೇಳುತ್ತಿರಲು ಅವನನ್ನು ಪುನಃ ಪುನಃ ಅವಮಾನ ಮಾಡಿ ದುರ್ಯೋಧನನು ಹೊರಗೆ ಹೋಗುತ್ತಿರಲು ಎಲ್ಲರೂ ಅವನನ್ನು ಅನುಸರಿಸಿ ಹೋದರು. ಇನ್ನೂ ಅನೇಕ ಪಾಪಗಳನ್ನು ಮಾಡಿರುವರು' ಇತ್ಯಾದಿ ಅಭಿಪ್ರಾಯವನ್ನು ಮನಸ್ಸಿನಲ್ಲಿ ಇಟ್ಟುಕೊಂಡು 'ಒಬ್ಬನೂ ನನಗೆ ಅಪರಾಧವನ್ನು ಮಾಡದೆ ಇದ್ದವನು ಇಲ್ಲ. ತಾನು ಅವರನ್ನು ಶಿಕ್ಷಿಸಲಿಕ್ಕೆ ಅಸಮರ್ಥಳಾಗಿ ನನ್ನ ಮೇಲೆ ಯಾಕೆ ವ್ಯರ್ಥವಾಗಿ ಕೋಪಿಸಿಕೊಳ್ಳುವಿ?' ಎಂದರು. ಗಾಂಧಾರಿಯು ಸುಮ್ಮನೆ ಆದಳು. ಆಮೇಲೆ ಉಳಿದವರೂ ನಮಸ್ಕರಿಸಿದರು. ಗಾಂಧಾರಿಯು ವೇದವ್ಯಾಸದೇವರ ಮಾತಿನಿಂದ ಸ್ವಲ್ಪ ಶಾಂತಳಾದಳು.

ತರುವಾಯ ಪಾಂಡವರು ಸಮಸ್ತ ಸೊಸೆಯರಿಂದಲೂ ಧೃತರಾಷ್ಟ್ರನಿಂದಲೂ ವಿದುರಾದಿಗಳಿಂದಲೂ ಸಹಿತಳಾದ ಗಾಂಧಾರಿಯನ್ನು ಮುಂದೆ ಮಾಡಿಕೊಂಡು ಪತ್ನಿಯರಿಂದಲೂ ಕುಂತೀದೇವಿಯಿಂದಲೂ ಸಹಿತರಾಗಿ ಯುದ್ಧರಂಗಕ್ಕೆ ಹೋದರು. ವೇದವ್ಯಾಸದೇವರೂ ಕೃಷ್ಣಪರಮಾತ್ಮನೂ ಹೋಗಿದ್ದರು. ತರುವಾಯ ಗಾಂಧಾರಿಯ ತಪಸ್ಸಿನ ಬಲವನ್ನು ತಿಳಿದವರಾದ ವೇದವ್ಯಾಸದೇವರು ಅವಳ ತಪಸ್ಸನ್ನು ಕಡಿಮೆ ಮಾಡಬೇಕೆಂದು ಗಾಂಧಾರಿಗೆ ದಿವ್ಯದೃಷ್ಟಿಯನ್ನು ಕೊಟ್ಟರು. ಕಣ್ಣಿಗೆ ವಸ್ತ್ರಕಟ್ಟಿದಂತೆಯೇ ದಿವ್ಯದೃಷ್ಟಿಯಿಂದ ಗಾಂಧಾರಿಯು ಅಲ್ಲಲ್ಲಿ ಬಿದ್ದಿರುವ ದೇಹಗಳನ್ನು ನೋಡಿ 'ಕೃಷ್ಣ! ನೀನು ಈ ರೀತಿಯಾಗಿ ನನ್ನ ಕುಲನಾಶವನ್ನು ಮಾಡಿಸಿಯಾದ ಕಾರಣ ನಿನ್ನ ಕುಲವೂ ಒಬ್ಬರನ್ನೊಬ್ಬರು ಬಡೆದುಕೊಂಡು ಸಾಯಲಿ' ಎಂದು ಪರಮಾತ್ಮನಿಗೆ ಶಾಪವನ್ನು ಕೊಟ್ಟಳು. ಪರಮಾತ್ಮನು ಅವಳ ಶಾಪವನ್ನು

ಅನ್ಯಥಾ ಮಾಡಲಿಕ್ಕೆ ಸಮರ್ಥನಾದನು. ತನಗೆ ಅದು ಇಷ್ಟವೆಂದೇ ಅಂಗೀಕರಿಸಿದನು. ಈರೀತಿಯಾಗಿ ಭಗವಂತನಿಗೆ ಶಾಪವನ್ನು ಕೊಟ್ಟ ಕಾರಣ ಗಾಂಧಾರಿಯ ತಪಸ್ಸು ನಷ್ಟವಾಯಿತು. ಪೂರ್ವದಲ್ಲಿ ಅವಳು ಸ್ವಭಾವದಿಂದ ಕುರುಡನಾದ ಗಂಡನ ಸಮಾನಧರ್ಮವು ಬರಲು ತನ್ನ ಕಣ್ಣುಗಳಿಗೆ ವಸ್ತ್ರವನ್ನು ಕಟ್ಟಿಕೊಂಡು ಕುರುಡತನವನ್ನು ಸಂಪಾದಿಸಿಕೊಂಡು ಪರಪುರುಷದರ್ಶನಾದಿಗಳನ್ನು ಬಿಟ್ಟುದರಿಂದ ಅವಳಿಗೆ ಗಂಡನಿಗಿಂತಲೂ ಹೆಚ್ಚಾಗಿ ಪುಣ್ಯವು ಬಂದಿತ್ತು. ಕೃಷ್ಣನಿಗೆ ಶಾಪವನ್ನು ಕೊಡಲು ಪುಣ್ಯವು ನಾಶವನ್ನು ಹೊಂದಿ ಅವಳು ಗಂಡನಿಂದ ಕಡಿಮೆಯಾದಳು. ಭಗವಂತನು ಯಾವಾಗಲೂ ಯೋಗ್ಯತೆಗಿಂತ ಹೆಚ್ಚಾದ ಗುಣಗಳನ್ನು ಕಡಿಮೆ ಮಾಡಿಸುವನು.

ತರುವಾಯ ಪತಿಗಳದೇಹಗಳನ್ನು ಆಲಂಗಿಸಿಕೊಂಡು ಅಳುತ್ತಿದ್ದ ದುರ್ಯೋಧನಾದಿಗಳ ಪತ್ನಿಯರನ್ನು ಪರಮಾತ್ಮನು ದ್ರೌಪದೀದೇವಿಯರಿಗೆ ತೋರಿಸಿದನು. ದ್ರೌಪದೀದೇವಿಯರು ಪರಮಾತ್ಮನನ್ನು ಸ್ತೋತ್ರ ಮಾಡಿದರು. ತರುವಾಯ ಪ್ರಸಿದ್ಧರಾದ ರಾಜರ ದೇಹಗಳನ್ನು ಪಾಂಡವರು ದಾಹ ಮಾಡಿದರು. ಕೆಲವರಿಗೆ ಧೃತರಾಷ್ಟ್ರಾದಿಗಳನ್ನು ಮುಂದೆ ಮಾಡಿಕೊಂಡು ಮಾಡಿದರು. ಕೆಲವರ ದೇಹಗಳನ್ನು ತಮ್ಮ ಸಾರಥಿಗಳಿಂದ ಗಂಗೆಯಲ್ಲಿ ಹಾಕಿಸಿದರು. ಧರ್ಮರಾಜನೂ ನಕುಲಸಹದೇವರೂ ಸ್ನೇಹದಿಂದ ತಮ್ಮ ಸಾರಥಿಗಳನ್ನು ಆ ಕಾರ್ಯದಲ್ಲಿ ನಿಯಮಿಸಿದರು. ಹೆಣಗಳು ಅನೇಕವಿದ್ದ ಕಾರಣ ಬಹಳ ಹೆಣಗಳು ಹಾಗೆಯೇ ಅಲ್ಲಲ್ಲೇ ಇದ್ದವು. ತರುವಾಯ ಎಲ್ಲರೂ ಗಂಗೆಯಲ್ಲಿ ಸ್ವಜನರಿಗೆ ಜಲವನ್ನು ಕೊಡುತ್ತಿರಲು ಕುಂತೀದೇವಿಯು ಕರ್ಣನನ್ನು ಅಣ್ಣನೆಂದೂ ಅವನಿಗೆ ಜಲವನ್ನು ಕೊಡಬೇಕೆಂದೂ ಕುಂತೀದೇವಿಯು ಹೇಳಿದರು. ಆಗ ಧರ್ಮರಾಜನು ಹಾಹಾ ಎಂದು ವಿಲಾಪವನ್ನು ಮಾಡುತ್ತಾ ಪರಮದುಃಖವುಳ್ಳವನಾಗಿ ''ಎಲ್ಲಾ ಹೆಂಗಸರ ಮನಸ್ಸಿನಲ್ಲಿಯೂ 'ರಹಸ್ಯವು ಇಲ್ಲದೆ ಹೋಗಲಿ'' ಎಂದು ಶಾಪವನ್ನು ಕೊಟ್ಟನು. 'ಹಾ ತಾಯಿ! ನಿನ್ನ ಧೈರ್ಯದಿಂದ ನಾವೆಲ್ಲರೂ ಸತ್ತೆವು. ತಂದೆಗೆ ಸಮಾನನಾದ ಅಣ್ಣನನ್ನು ಕೊಂದು ಯಾವ ಗತಿಯನ್ನು ಹೊಂದಲಿ' ಎಂದು ಹೇಳಿದನು. ಆಗ ಕೃಷ್ಣಪರಮಾತ್ಮನೂ ನಾರದರೂ ಸಮಾಧಾನಪಡಿಸಿದರು. ತರುವಾಯ ಎಲ್ಲರಿಗೂ ಉತ್ತರಕ್ರಿಯೆಯನ್ನು ಮಾಡಿದರು. ಧರ್ಮರಾಜನು ಎಲ್ಲರಿಗೂ ಅಧಿರಾಜನಾಗಿದ್ದನು.



1. ಮ.ತಾ.ನಿ. ಅ.28-238

# ಶಾಂತಿಪರ್ವ

## ಭೀಷ್ಮಾಚಾರ್ಯರು ಉಪದೇಶಿಸಿದ್ದು [1]

ಕೃಷ್ಣಪರಮಾತ್ಮನೂ ವೇದವ್ಯಾಸದೇವರೂ ಧರ್ಮರಾಜನನ್ನು ರಾಜನನ್ನಾಗಿಯೂ ಭೀಮಸೇನದೇವರನ್ನು ಯುವರಾಜನನ್ನಾಗಿಯೂ ಪಟ್ಟಾಭಿಷೇಕ ಮಾಡಿದರು. ಆ ಸಮಯದಲ್ಲಿ ಚಾರ್ವಾಕನೆಂಬ ರಾಕ್ಷಸರನ್ನು ಮೂರುದಂಡಗಳುಳ್ಳ ಸನ್ಯಾಸಿಯ ವೇಷವನ್ನು ಧರಿಸಿಕೊಂಡು 'ಅತಿಪಾಪಿಯಾದ ನಿನ್ನನ್ನು ಬ್ರಾಹ್ಮಣರು ನಿಂದಿಸುವರು' ಎಂದು ಹೇಳಿದನು. ಅದನ್ನು ಕೇಳಿ ಧರ್ಮರಾಜನು ದುಃಖವನ್ನು ಹೊಂದಲು ಅದನ್ನು ನೋಡಿ ಬ್ರಾಹ್ಮಣರು ಅತ್ಯಂತ ದುಃಖಿತರಾಗಿ 'ನಾವು ಯಾವಾಗಲೂ ನಿಂದೆಯನ್ನು ಮಾಡದೆ ಇರುವಾಗ ನಿಂದೆ ಮಾಡಿದೆವೆಂದು ಸುಳ್ಳು ಹೇಳಿದಿಯಾದ ಕಾರಣ ನೀನು ಬೇಗನೇ ಭಸ್ಮವಾಗಿ ಹೋಗು' ಎಂದು ಶಾಪವನ್ನು ಕೊಟ್ಟರು. ಕೂಡಲೇ ಆ ಪಾಪಿಯಾದ ಚಾರ್ವಾಕನು ಸುಟ್ಟು ಬೂದಿಯಾದನು. ಸನ್ಯಾಸಿ ವೇಷವುಳ್ಳ ಅವನು ಸುಟ್ಟುಹೋಗಲು ಅದನ್ನು ನೋಡಿ ದುಃಖಿತನಾದ ಧರ್ಮರಾಜನನ್ನು ನೋಡಿ ಕೃಷ್ಣಪರಮಾತ್ಮನು ಧರ್ಮರಾಜನೊಡನೆ 'ಇವನು ಸನ್ಯಾಸಿಯಲ್ಲ. ಕ್ರೂರಕರ್ಮವುಳ್ಳ ದುರ್ಯೋಧನನ ಮಿತ್ರನಾದ ಅತ್ಯಂತ ಪಾಪಿಯಾದ ರಾಕ್ಷಸನು. ಬ್ರಾಹ್ಮಣರ ಶಾಪದಿಂದ ಸತ್ತನು. ನೀನು ದುಃಖವನ್ನು ಹೊಂದಬೇಡ. ಕೃತಾರ್ಥನಾಗಿರುವಿ' ಎಂದು ಹೇಳಿದನು. ತರುವಾಯ ಧರ್ಮ ರಾಜನು ಶಾಂತವಾದ ಮನಸ್ಸುಳ್ಳವನಾಗಿ ಬ್ರಾಹ್ಮಣರಿಗೆ ಬೇಕಾದಷ್ಟು ಹಣವನ್ನು ಕೊಟ್ಟು ಭಕ್ತಿಯಿಂದ ಸಂತೋಷಪಡಿಸಿದನು. ಬಂಧುಗಳನ್ನೂ ಸಂತೋಷ ಪಡಿಸಿದನು. ಪ್ರಜೆಗಳನ್ನು ರಕ್ಷಿಸಿದನು.

ಆಮೇಲೆ ಧರ್ಮರಾಜನು ಭೀಷ್ಮ ದ್ರೋಣ ಕರ್ಣ ದುರ್ಯೋಧನರ ಸಂಹಾರ ಮಾಡಿದ್ದರಿಂದ ತನಗೆ ಪಾಪವು ಬಂದಿರುವುದೆಂದು ಸಂದೇಹವುಳ್ಳವನಾಗಿ ರಾಜ್ಯಪರಿತ್ಯಾಗ ಮಾಡಲಿಕ್ಕೆ ಇಚ್ಛಿಸಿದನು. ಆಗ ಸಹೋದರರೂ ದ್ರೌಪದೀ ದೇವಿಯರೂ, ಬ್ರಾಹ್ಮಣರೂ ಅವನಿಗೆ ಧರ್ಮೋಪದೇಶವನ್ನು ಮಾಡಿದರು. ಆಗ ಧರ್ಮರಾಜನು ಭೀಮಸೇನದೇವರನ್ನು ಪ್ರಾರ್ಥಿಸಿ ಬಾಯಿಮುಚ್ಚಿಸಿದನು. ಅರ್ಜುನ ನೊಡನೆ ನಿನಗೆ ಧರ್ಮವು ತಿಳಿಯಲಾರದು ಎಂದನು. ಆಗ ಬ್ರಾಹ್ಮಣರು ಹೇಳಿದರೂ ಧರ್ಮರಾಜನು ಕೇಳದೆ 'ನೀವೆಲ್ಲರೂ ನನ್ನ ಮೇಲಿನ ಸ್ನೇಹದಿಂದ ನಾನು ಮಾಡಿದ್ದು ಧರ್ಮವೆಂದು ಹೇಳುವಿರಿ' ಎಂದನು. ಆಗ ಕೃಷ್ಣಪರಮಾತ್ಮನೂ

---

1. ಮ.ತಾ.ನಿ. ಅ-29

ವೇದವ್ಯಾಸದೇವರೂ ಶಾಸ್ತ್ರಯುಕ್ತಿಯಿಂದ ಧರ್ಮವೆಂದೇ ಪುನಃ ಪುನಃ ಸಮರ್ಥಿಸಿದರು. ಆದರೂ ಧರ್ಮರಾಜನಿಗೆ ಸಂದೇಹವು ಪರಿಹೃತವಾಗಲಿಲ್ಲ. 'ವಿರೋಧಿಪಕ್ಷದಲ್ಲಿ ಇದ್ದವರಾದ ಕಾರಣ ಭೀಷ್ಮಾಚಾರ್ಯರು ನಿನ್ನ ಮೇಲೆ ಸ್ನೇಹದಿಂದ ಧರ್ಮವೆಂದು ಹೇಳಲಾರರಲ್ಲಾ! ನೀನು ಅವರ ಮೇಲೆ ಸಂದೇಹ ಪಡಲಾರೆಯಷ್ಟೆ! ಆದುದರಿಂದ ಭೀಷ್ಮಾಚಾರ್ಯರು ಇದ್ದಲ್ಲಿಗೆ ಹೋಗು' ಎಂದು ಕೃಷ್ಣವೇದವ್ಯಾಸದೇವರು ಹೇಳಿದರು.

ತರುವಾಯ ಧರ್ಮರಾಜನು ಅವರಿಂದಲೂ ಮುನಿಗಳಿಂದಲೂ ಸಹಿತನಾಗಿ ಭೀಷ್ಮಾಚಾರ್ಯರ ಬಳಿಗೆ ಹೋದನು. ಅಲ್ಲಿ ಧರ್ಮರಾಜನು ಭೀಷ್ಮಾಚಾರ್ಯರಲ್ಲಿ ಪ್ರಶ್ನೆ ಮಾಡಲು ನಾಚಿಕೆಪಡಲು ಕೃಷ್ಣಪರಮಾತ್ಮನು ಭೀಷ್ಮಾಚಾರ್ಯರೊಡನೆ ಹೇಳಿದನು. ಆಗ ಭೀಷ್ಮಾಚಾರ್ಯರು ಕೇಳು ಎನ್ನಲು ಧರ್ಮರಾಜನು ಎಲ್ಲವನ್ನೂ ಕೇಳಿದನು. ಆಗ ಕೃಷ್ಣಪರಮಾತ್ಮನೇ ಧರ್ಮರಾಜನ ಶರೀರದಲ್ಲಿ ಇದ್ದುಕೊಂಡು ಎಲ್ಲಾ ಧರ್ಮಗಳನ್ನು ಹೇಳಿದನು. ಭೀಷ್ಮಾಚಾರ್ಯರು ಪರಮಾತ್ಮನೊಡನೆ 'ಭಗವಂತನೇ! ನೀನೇ ಪಾಂಡವರಿಗೆ ಉಪದೇಶಿಸಬೇಕು. ಪಾಂಡವರಿಗೆ ಉಪದೇಶಿಸಲಿಕ್ಕೆ ನನಗೇನು ಸಾಮರ್ಥ್ಯವಿದೆ?' ಎಂದು ಹೇಳಿದರು. ಆಗ ಪರಮಾತ್ಮನು ನಿನ್ನ ಕೀರ್ತಿಗಾಗಿ ನಿನ್ನಲ್ಲಿ ಇದ್ದುಕೊಂಡು ಸಮಸ್ತಧರ್ಮಗಳನ್ನು ಹೇಳುವೆನು' ಎಂದು ಹೇಳಿ ತಾನೇ ಭೀಷ್ಮಾಚಾರ್ಯರಲ್ಲಿ ಇದ್ದುಕೊಂಡು ಎಲ್ಲಾ ಧರ್ಮರಹಸ್ಯಗಳನ್ನೂ ಹೇಳಿದರು. ಸಾಮಾನ್ಯಜನರು ಮಾತ್ರ ಭೀಷ್ಮಾಚಾರ್ಯರೇ ಉಪದೇಶಿಸಿದರು ಎಂದು ತಿಳಿದುಕೊಂಡರು.

ಧರ್ಮರಾಜನು ಎಲ್ಲವನ್ನೂ ಕೇಳಿಯಾದ ಮೇಲೆ ತಮ್ಮಂದಿರೊಡನೆಯೂ ವಿದುರನೊಡನೆಯೂ ಧರ್ಮ ಅರ್ಥ ಕಾಮಗಳಲ್ಲಿ ಯಾವುದು ಶ್ರೇಷ್ಠವೆಂದು ಕೇಳಿದನು. ಆಗ ವಿದುರನು ಧರ್ಮವು ಶ್ರೇಷ್ಠವೆಂದೂ, ಅರ್ಥವು ಮಧ್ಯಮ ವೆಂದೂ, ಕಾಮವು ನೀಚವೆಂದೂ, ಹೇಳಿದನು. ಅರ್ಜುನನು 'ಅರ್ಥವೇ ಶ್ರೇಷ್ಠವು. ಅರ್ಥವು ದೈವಾರ್ಥವೆಂದೂ ಮಾನುಷಾರ್ಥವೆಂದೂ ಎರಡು ವಿಧವಾಗಿರುವುದು. ದೈವಾರ್ಥವು ವಿದ್ಯೆಯು ಮಾನುಷಾರ್ಥವೆಂದರೆ ಬಂಗಾರ ಇತ್ಯಾದಿಗಳು ಎಂದರ್ಥವು. ಧರ್ಮವು ಮಧ್ಯಮವು. ವಿದ್ಯೆಯೆಂಬ ಅರ್ಥವು ಧರ್ಮಕ್ಕೆ ಸಾಧ್ಯವೂ ಸಾಧನವೂ ಆಗುವುದು. ವಿದ್ಯೆಯಿಂದಲೇ ಮೋಕ್ಷ ಉಂಟಾಗುವುದು. ಮಾನುಷಾರ್ಥವೂ ಸರಿಯಾಗಿ ಉಪಯೋಗಿಸಿದರೆ ವಿದ್ಯೆಗೆ ಕಾರಣವಾಗುವುದು. ಹಣದಿಂದ ಸಂತುಷ್ಟರಾಗಿ ಗುರುಗಳು ಮೋಕ್ಷವನ್ನು ಕೊಡಲಿಕ್ಕೂ ಸಮರ್ಥ

ರಾಗುವರು. ಕಾಮವು ಅರ್ಥಕ್ಕಿಂತಲೂ ಕಡಿಮೆಯಾದದ್ದು' ಎಂದು ಹೇಳಿದನು. ನಕುಲಸಹದೇವರು ಅರ್ಜುನನು ಹೇಳಿದುದನ್ನೇ ಅಂಗೀಕರಿಸಿದರು.

ತರುವಾಯ ಭೀಮಸೇನದೇವರು ಸಂತೋಷದಿಂದ ಎಲ್ಲರನ್ನೂ ಕರೆದು ಮಂದಹಾಸವನ್ನು ಮಾಡುತ್ತಾ 'ಕಾಮಕ್ಕಿಂತ ಶ್ರೇಷ್ಠವಾದದ್ದು ಮತ್ತೊಂದು ಇರುವುದಿಲ್ಲ. ಕಾಮವು ಹೇಗೆ ನೀಚವಾಗುವುದು? ನಾವು ಅಪೇಕ್ಷಿಸುವ ವಸ್ತುವಿಗೆ ಕಾಮವೆಂದು ಹೆಸರು. ಅಪೇಕ್ಷಿಸದೆ ಇದ್ದರೆ ಪುರುಷಾರ್ಥವೇ ಆಗಲಾರದು. ಪುರುಷರಿಂದ ಅಪೇಕ್ಷಿಸಲ್ಪಡುವುದರಿಂದಲೇ ಪುರುಷಾರ್ಥವೆಂದು ಹೆಸರು. ನಾವು ಅಪೇಕ್ಷಿಸದೆ ಇದ್ದರೆ ಜ್ಞಾನಭಕ್ತ್ಯಾದಿಗಳೂ ಉಂಟಾಗಲಾರದು. ಮೋಕ್ಷವೂ ಉಂಟಾಗಲಾರದು. ಪರಮಾತ್ಮನನ್ನು ಅಪೇಕ್ಷಿಸದೆ ಇದ್ದರೆ ಅವನು ಉತ್ತಮಗತಿಯನ್ನು ಕೊಡಲಾರನು. ಆದುದರಿಂದ ಕಾಮವೇ ಶ್ರೇಷ್ಠವಾದದ್ದು. ಕಾಮ ಶಬ್ದಕ್ಕೆ ಇಚ್ಛೆಯೆಂಬ ಅರ್ಥವನ್ನು ಮಾಡಿದರೂ ಇಚ್ಛೆಯೂ ಶ್ರೇಷ್ಠವೇ. ಇಚ್ಛೆಯೇ ಇಲ್ಲದಾದರೆ ಕಂಬಗೋಡೆಗಳಂತೆ ಅಚೇತನನಾಗುವನು. ಆದುದರಿಂದ ಚೇತನಸ್ವರೂಪವಾದ ಇಚ್ಛೆಯೂ ಶ್ರೇಷ್ಠವೇ. ಎಲ್ಲಾ ಪುರುಷಾರ್ಥಗಳಲ್ಲಿ ಕಾಮವು ಮಿಶ್ರಿತವಾಗಿರುವ ಕಾರಣ ಪ್ರಶ್ನೆ ಮಾಡುವುದೇ ಸರಿಯಲ್ಲ. ಕಾಮದಲ್ಲಿಯೇ ತಾರತಮ್ಯವನ್ನು ಇಚ್ಛಿಸುವಿಯಾದರೆ ಹೇಳುವೆನು. ಧರ್ಮಕ್ಕೂ ಅರ್ಥಕ್ಕೂ ವಿರೋಧಿಯಾಗದೆ ಇರುವ ವೈರಾಗ್ಯಪೂರ್ವಕವಾಗಿ ವಿರಕ್ತರಾದ ಗುರುಗಳಿಂದ ಶ್ರವಣಮನನಾದಿಗಳನ್ನು ಮಾಡುವೆನು ಎಂಬ ಕಾಮವು ಉತ್ತಮವಾಗಿರುವುದು. ಅರ್ಥಕ್ಕೆ ವಿರೋಧಿಯಾಗದೆ ಇರುವ ವಿಶ್ವಜಿದ್ಯಾಗವೇ ಮೊದಲಾದ ಕಾಮ್ಯಕರ್ಮದ ಕಾಮವೂ, ಧರ್ಮಕ್ಕೆ ವಿರೋಧಿಯಾಗದೆ ಇರುವ ವ್ಯಾಪಾರಮಾಡುವ ಕಾಮವೂ ಮಧ್ಯಮವು. ಅಗಮ್ಯ ಸ್ತ್ರೀಯರನ್ನು ಹೊಂದಬೇಕೆಂಬ ಕಾಮವು ಧರ್ಮಕ್ಕೂ ಅರ್ಥಕ್ಕೂ ವಿರೋಧಿಯಾದದ್ದು ಅಧಮವಾದದ್ದು' ಇತ್ಯಾದಿ ರೀತಿಯಾಗಿ ಹೇಳಿದರು. ಧರ್ಮರಾಜನು ಭೀಮಸೇನದೇವರು ತಾನು ಹೇಳಿದ್ದಕ್ಕೆ ಅವಿರುದ್ಧವಾದ ಕಾರಣ ನಿರಾಕರಿಸಲಿಲ್ಲ.



# ಅಶ್ವಮೇಧಿಕಪರ್ವ

## ಪಾಂಡವರ ರಾಜ್ಯಭಾರ [1]

ತರುವಾಯ ಭೀಷ್ಮಾಚಾರ್ಯರು ಕೃಷ್ಣಪರಮಾತ್ಮನನ್ನು ಸ್ಮರಿಸುವವರಾಗಿ ಕೊನೆಗೆ ತನ್ನ ಮೂಲರೂಪವನ್ನೇ ಯೋಚಿಸಿ ದೇಹವನ್ನು ಪರಿತ್ಯಜಿಸಿ ಮೂಲರೂಪವನ್ನು ಹೊಂದಿದರು. ತರುವಾಯ ದುಃಖವುಳ್ಳವರಾದ ಗಂಗಾದೇವಿಯನ್ನು ಸಮಾಧಾನ ಪಡಿಸಿ ಸಮಸ್ತಕಾರ್ಯಗಳನ್ನೂ ಮಾಡಿದರು. ಧರ್ಮರಾಜನು ದುಃಖವನ್ನು ಹೊಂದಲು ಕೃಷ್ಣಪರಮಾತ್ಮನೂ ವೇದವ್ಯಾಸದೇವರೂ ಅವನನ್ನು ಸಮಾಧಾನ ಪಡಿಸಿದರು. ಕೃಷ್ಣವೇದವ್ಯಾಸರು ಧರ್ಮರಾಜನೊಡನೆ 'ದುರ್ಯೋಧನನೇ ಮೊದಲಾದವರು ವಿಷ್ಣುದ್ವೇಷಿಗಳಾದ ಕಾರಣವೂ ಭೀಷ್ಮಾದಿಗಳು ಅವರ ಅನುಸರಿಸಿದವರಾದ ಕಾರಣವೂ ಅವರನ್ನು ಸಂಹರಿಸಿದ್ದು ಪಾಪವಲ್ಲ. ಆದರೂ ಪಾಪವಲ್ಲದೆ ಇಲ್ಲದ್ದನ್ನು ಪಾಪವೆಂದು ಸಂದೇಹಪಟ್ಟ ಕಾರಣ ಅಶ್ವಮೇಧಯಾಗವನ್ನು ಮಾಡು. ಅನಾಥರಾದ ಪ್ರಜೆಗಳನ್ನು ರಕ್ಷಿಸು. ರಾಜ್ಯಭಾರವನ್ನು ಮಾಡು' ಎಂದು ಹೇಳಿದರು.

ತರುವಾಯ ಧರ್ಮರಾಜನು ರಾಜ್ಯಭಾರವನ್ನು ಮಾಡಿದನು. ಭೋಗ ಗಳನ್ನೆಲ್ಲಾ ಪರಿತ್ಯಜಿಸಿದನು. ಗೋವ್ರತ ಮೊದಲಾದ ವ್ರತಗಳನ್ನು ಮಾಡಿದನು. ಬೇಕಾದ ದಾನಗಳನ್ನು ಮಾಡಿದನು. ಯೋಗ್ಯನಾದವನು ದಾನವನ್ನು ತೆಗೆದು ಕೊಳ್ಳಬೇಕೆಂದು ಬಂದವನು ಯಾರೊಬ್ಬನೂ ಬರೇ ಕೈಯಿಂದ ಹಿಂದೆ ಹೋಗಲಿಲ್ಲ. ಧರ್ಮರಾಜನು ಬಂದವರನ್ನು ಕುಶಲಪ್ರಶ್ನೆ ಮಾಡುವುದು, ದಾನಮಾಡುವುದು, ಯಾಗವನ್ನು ಮಾಡುವುದು, ಬಂದ ಎಲ್ಲ ರಾಜರಿಂದ ನಮಸ್ಕಾರವನ್ನು ಪಡೆಯುವುದು ಇತ್ಯಾದಿ ಕಾರ್ಯವುಳ್ಳವನಾಗಿ ಪಾಂಡುರಾಜನು ವಾಸಮಾಡುತ್ತಿದ್ದ ಮನೆಯಲ್ಲಿ ವಾಸ ಮಾಡುತ್ತಾ ಸ್ತ್ರೀಸುಖವನ್ನು ಪರಿತ್ಯಜಿಸಿ ವೈರಾಗ್ಯದಿಂದ ಇದ್ದನು.

ಭೀಮಸೇನದೇವರು ತನ್ನ ಪರಾಕ್ರಮದಿಂದ ಸಿಕ್ಕಿದ ದುರ್ಯೋಧನನ ಮನೆಯಲ್ಲಿ ವಾಸಮಾಡುತ್ತಾ ಯುವರಾಜನಾಗಿದ್ದುಕೊಂಡು ದ್ರೌಪದೀದೇವಿಯ ರಿಂದ ಸಹಿತರಾಗಿ ದೇವಶ್ರೇಷ್ಠರಿಗೆ ಯೋಗ್ಯಗಳಾದ ಭೋಗಗಳನ್ನು ಅನುಭವಿಸುತ್ತಾ ಇದ್ದರು. ಆಗ ದ್ರೌಪದೀದೇವಿಯರು ಕೇವಲ ಭಾರತೀದೇವಿಯರ ಸನ್ನಿಧಾನ ವುಳ್ಳವರಾಗಿ ಇತರ ನಾಲ್ಕುಜನ ಪಾಂಡವರನ್ನು ಬಿಟ್ಟು ಭೀಮಸೇನದೇವರ ಬಳಿಯಲ್ಲಿಯೇ ಇದ್ದರು. ಇತರ ಪಾಂಡವರು ಪ್ರೀತಿಯಿಂದಲೇ ದ್ರೌಪದೀ

---

1. ಮ.ತಾ.ನಿ. ಅ-30

ದೇವಿಯರನ್ನು ಭೀಮಸೇನದೇವರ ಬಳಿಯಲ್ಲಿಯೇ ಇರಲಿಕ್ಕೆ ಸಮ್ಮತಿಸಿದ್ದರು. ಭೀಮಸೇನದೇವರು ಭಾರತೀದೇವಿಯರದ್ದೇ ಎರಡು ರೂಪವಾದ ದ್ರೌಪದೀ ದೇವಿಯರಿಂದಲೂ ಕಾಶಿರಾಜನ ಪುತ್ರಿಯಾದ ಕಾಳೀದೇವಿಯರಿಂದಲೂ ಸಹಿತರಾಗಿ ಸಂತೋಷದಿಂದ ಇದ್ದರು. ಭೀಮಸೇನದೇವಿಯರಿಗೆ ದೇವಿಯೆಂದು ಹೆಸರುಳ್ಳ ಇನ್ನೊಬ್ಬ ಹೆಂಡತಿಯಿದ್ದಳು. ಅವಳು ರೋಹಿಣಿಯ ಮಗಳು. ಅವಳು ಸ್ವರೂಪದಿಂದ ಹುಣ್ಣಿಮೆಯ ಅಭಿಮಾನಿದೇವತೆಯು. ಅವಳಲ್ಲಿ ಸರ್ವೋತ್ತುಂಗ ಎಂಬ ಮಗನಿದ್ದನು. ಅವನು ಮುಖ್ಯಪ್ರಾಣದೇವರ ಮಗನಾದ ಅಹಂಕಾರಿಕಪ್ರಾಣನ ಅವತಾರವು. ಅವನನ್ನು ರಾತ್ರಿಯಲ್ಲಿ ಅಶ್ವತ್ಥಾಮಾಚಾರ್ಯರು ಸಂಹರಿಸಿದ್ದರು. ಮತ್ತು ದಿಕ್ಕುಗಳಿಗೆ ಅಭಿಮಾನಿಗಳಾದ ದೇವತೆಗಳೂ ಜಲಕ್ಕೆ ಅಭಿಮಾನಿಯಾದ ದೇವತೆಗಳೂ ಒಟ್ಟಿಗೆ ಇಪತ್ತು ಜನರು ವಸುದೇವನಿಗೆ ಹೆಣ್ಣುಮಕ್ಕಳಾಗಿ ಹುಟ್ಟಿದರು. ಅವರೂ ಭೀಮಸೇನದೇವರ ಪತ್ನಿಯರಾಗಿದ್ದರು. ಅವರಿಂದಲೂ ಕೂಡಿಕೊಂಡು ಭೀಮಸೇನದೇವರು ದೇವತೆಗಳಿಂದಲೂ ದುರ್ಲಭಗಳಾದ ಭೋಗಗಳನ್ನು ಅನುಭವಿಸುತ್ತಾ ಇದ್ದರು.

ಅಲ್ಲಲ್ಲಿ ಸದ್ಬ್ರಾಹ್ಮಣರನ್ನು ಇಟ್ಟು ಭಗವತ್ಸಂಬಂಧಿಯಾದ ಧರ್ಮಗಳನ್ನು ಪರಿಪಾಲನೆ ಮಾಡಿದರು. ಒಂದೊಂದು ಗ್ರಾಮದಲ್ಲಿಯೂ ಧರ್ಮೋಪದೇಶವನ್ನು ಮಾಡಲಿಕ್ಕೆ ಐದೈದು ಪಂಡಿತರನ್ನು ಸಂಬಳವನ್ನು ಕೊಟ್ಟು ಇಟ್ಟಿದ್ದರು. ಅವರು ಹೇಳಿದ ಮಾತನ್ನು ಕೇಳದ ಜನರನ್ನು ತಾನೇ ಶಿಕ್ಷಿಸುತ್ತಿದ್ದರು. ಪಂಡಿತರು ಜನರಿಂದ ಲಂಚವನ್ನು ತೆಗೆದುಕೊಂಡು ತಮ್ಮ ಕಾರ್ಯವನ್ನು ಸರಿಯಾಗಿ ಮಾಡದೆ ಇರುವರೋ ಎಂದು ನೋಡಿಕೊಳ್ಳಲಿಕ್ಕೆ ಬೇರೆ ಜನರನ್ನು ನಿಯಮಿಸಿದ್ದರು. ಭೀಮಸೇನದೇವರ ರಾಜ್ಯದಲ್ಲಿ ಅವೈಷ್ಣವನು ಒಬ್ಬನೂ ಇರಲಿಲ್ಲ. ಧರ್ಮವನ್ನು ಕೆಡಿಸುವವನೂ ಇರಲಿಲ್ಲ. ಶಾಸ್ತ್ರವನ್ನು ಮೀರಿ ನಡೆಯುವವನೂ ಇರಲಿಲ್ಲ. ದುಃಖವುಳ್ಳವನೂ ಇರಲಿಲ್ಲ. ಯಾರೊಬ್ಬರೂ ದರಿದ್ರರೂ ಇರಲಿಲ್ಲ. ಈರೀತಿಯಾಗಿ ಭೀಮಸೇನದೇವರಿಂದ ಮುನಿಗಳಿಂದ ಪ್ರಜೆಗಳು ಶಿಕ್ಷಿತರಾಗಿದ್ದರು. ವೇದವ್ಯಾಸದೇವರನ್ನು ಕೃಷ್ಣಪರಮಾತ್ಮನನ್ನು ಯಾವಾಗಲೂ ನೋಡುತ್ತಿದ್ದರು. ಇದರಿಂದ ಜನರಿಗೆ ಕಲಿಯುಗವು ಕೃತಯುಗಕ್ಕಿಂತಲೂ ಶ್ರೇಷ್ಠವಾಗಿತ್ತು. ಕೃತಯುಗದಲ್ಲಿ ಬಹಳ ಪುಣ್ಯವನ್ನು ಮಾಡಿದರೆ ಸ್ವಲ್ಪ ಫಲವುಂಟಾಗುವುದು. ಪಾಪವನ್ನು ಸ್ವಲ್ಪವನ್ನು ಮಾಡಿದರೂ ಪಾಪದ ಫಲವು ಅಧಿಕವಾಗಿ ಆಗುವುದು. ಕಲಿಯುಗದಲ್ಲಿ ಹಾಗೆ ಅಲ್ಲ. ಆದುದರಿಂದ ಆಗ ಸ್ವಲ್ಪ ಪುಣ್ಯವನ್ನು ಮಾಡಿದರೂ ಯುಗಸ್ವಭಾವದಿಂದಲೂ ಕೃಷ್ಣಪರಮಾತ್ಮನ ದರ್ಶನ

ದಿಂದಲೂ ಬಹುಫಲವು ಉಂಟಾಗುತ್ತಿತ್ತು. ಬಹುಪಾಪವನ್ನು ಮಾಡಿದರೂ ಯುಗಸ್ವಭಾವದಿಂದಲೂ ಕೃಷ್ಣಪರಮಾತ್ಮನ ದರ್ಶನದಿಂದ ಕ್ಷಣೇ ಕ್ಷಣೇ ಕಡಿಮೆ ಯಾಗುವುದರಿಂದ ಪಾಪಕ್ಕೆ ಫಲವು ಬಹು ಕಡಿಮೆಯಾಗುತ್ತಿತ್ತು. ಈರೀತಿಯಾಗಿ ಭೀಮಸೇನದೇವರು ಪರಮಾತ್ಮನ ಆಶ್ರಯದಿಂದ ಆ ಕಲಿಯುಗದಲ್ಲಿ ಕೃತಯುಗ ಕ್ಕಿಂತಲೂ ಹೆಚ್ಚಾದ ಶುಭವುಂಟಾಗುವಂತೆ ಮಾಡಿದರು. ಅರ್ಜುನನು ಶತ್ರುರಾಜ್ಯದಲ್ಲಿ ಶಿಕ್ಷೆಯನ್ನು ಮಾಡುತ್ತಿದ್ದನು. ಧರ್ಮರಾಜನ ಮಾತಿನಿಂದ ಶತ್ರುರಾಜರನ್ನೆಲ್ಲಾ ಬೆದರಿಸಿಯೇ ಬೇಕಾದ ಕಪ್ಪವನ್ನು ತಂದು ಒಪ್ಪಿಸುತ್ತಿದ್ದನು. ಯಾವಾಗಲೂ ಕೃಷ್ಣನ ಪರಮಾತ್ಮನ ಮುಖದಿಂದ ಬರುತ್ತಿರುವ ತತ್ತ್ವನಿರ್ಣಯ ವೆಂಬ ಅಮೃತವನ್ನು ಪಾನಮಾಡುತ್ತಾ ಪುತ್ರವಿಯೋಗಾದಿಗಳಿಂದ ಉಂಟಾದ ದುಃಖವನ್ನು ಪರಿತ್ಯಾಗ ಮಾಡಿದನು. ಅವನು ದುಃಶಾಸನನ ಮನೆಯಲ್ಲಿ ವಾಸಮಾಡುತ್ತಾ ಸುಭದ್ರೆಯಿಂದಲೂ ಚಿತ್ರಾಂಗದೆಯಿಂದಲೂ ಕೂಡಿಕೊಂಡು ಸಂತೋಷದಿಂದ ಇದ್ದನು. ನಕುಲನು ಎಲ್ಲ ಭೃತ್ಯರ ಸಂಬಳವನ್ನು ಕೊಡುತ್ತಿದ್ದನು. ಅವನು ದುರ್ಮುಖನ ಮನೆಯಲ್ಲಿ ವಾಸಮಾಡುತ್ತಾ ಶಲ್ಯನ ಮಗಳಾದ ತನ್ನ ಪತ್ನಿಯಿಂದ ಸಹಿತನಾಗಿ ಸುಖದಿಂದ ಇದ್ದನು. ಸಹದೇವನು ಯಾರ ಹತ್ತಿರ ಜಗಳವಾಡಬೇಕು, ಯಾರ ಹತ್ತಿರ ರಾಜಿ ಮಾಡಿಕೊಳ್ಳಬೇಕು ಎಂಬ ವಿಷಯವನ್ನು ತಿಳಿದವನಾಗಿ ಹಾಗೆ ಮಾಡುತ್ತಾ ಕೈಯಲ್ಲಿ ಖಡ್ಗವನ್ನು ಹಿಡಿದುಕೊಂಡು ಧರ್ಮರಾಜನಿಗೆ ಅಂಗರಕ್ಷಕನಾಗಿರುತ್ತಾ ದುರ್ಮರ್ಷಣನ ಮನೆಯಲ್ಲಿ ತನ್ನ ಹೆಂಡತಿಯಾದ ಜರಾಸಂಧನ ಮಗಳಿಂದ ಸಹಿತನಾಗಿ ಸುಖವಾಗಿ ಇದ್ದನು.

ಕೃಪಾಚಾರ್ಯರು ಸೇನಾಧಿಪತಿಯಾಗಿದ್ದರು. ಸಂಜಯನೂ ವಿದುರನೂ ಪಾಂಡವರಿಂದ ಪ್ರೇರಿತರಾಗಿ ಧೃತರಾಷ್ಟ್ರನನ್ನು ಉಪಚರಿಸುತ್ತಿದ್ದರು. ಪಾಂಡವರೂ ಧೃತರಾಷ್ಟ್ರನನ್ನು ಉಪಚರಿಸುತ್ತಿದ್ದರು. ಕೃಷ್ಣವೇದವ್ಯಾಸರಿಂದ ಪ್ರೇರಿತರಾದ ಪಾಂಡವರು ರಾಜ್ಯವನ್ನು ಪರಿಪಾಲಿಸುತ್ತಿರಲು ರಾಜ್ಯದಲ್ಲಿ ಒಬ್ಬರೂ ದುಃಖಪಡುವವರು ಇರಲಿಲ್ಲ. ಕ್ರಮವನ್ನು ಮೀರಿ ಮೃತ್ಯುವುಂಟಾಗುತ್ತಿರಲಿಲ್ಲ. ಗಂಡಂದಿರು ಸತ್ತ ಹೆಂಡತಿಯರು ಇರುತ್ತಿರಲಿಲ್ಲ. ಹೆಂಡತಿಯು ಸತ್ತಗಂಡಂದಿರು ಇರುತ್ತಿರಲಿಲ್ಲ. ಯಾವಾಗಲೂ ಒಳ್ಳೇ ಶಬ್ದಗಳೇ ಕೇಳುತ್ತಿದ್ದವು. ಸರಿಯಾದ ಸಮಯದ ಬೇಕಾದ ಮಳೆಯು ಬರುತ್ತಿತ್ತು. ಜನರಿಗೆ ಒಂದು ಸಂತಾಪವೂ ಉಂಟಾಗುತ್ತಿರಲಿಲ್ಲ. ಭಕ್ತಿಯಿಂದ ಪರಮಾತ್ಮನನ್ನು ಪೂಜಿಸುತ್ತಿದ್ದರು. ಭೂಮಿಯಲ್ಲಿ ಬೇಕಾದ ಬೆಳೆ ಸಾಗುತ್ತಿತ್ತು. ದನಗಳು ಬೇಕಾದ ಹಾಲನ್ನು ಕೊಡುತ್ತಿದ್ದವು. ವೇದಗಳು

ಅಧ್ಯಯನ ಮಾಡುವವರಿಗೆ ಬೇಕಾದ ಫಲಕ್ಕೆ ಕಾರಣವಾಗುತ್ತಿದ್ದವು. ಸಮುದ್ರದಿಂದ ಮೇಘದಿಂದ ನದಿಗಳಿಂದ ಪರ್ವತಗಳಿಂದ ಬಿದಿರು ಇತ್ಯಾದಿಗಳಿಂದ ಆನೆಗಳು ಮೊದಲಾದ ಪ್ರಾಣಿಗಳಿಂದ ರತ್ನಗಳು ಸಿಕ್ಕುತ್ತಿದ್ದವು. ಕೃಷ್ಣಪರಮಾತ್ಮನ ಆಶ್ರಯದಿಂದ ಪಾಂಡವರು ಎಲ್ಲಾ ಜಗತ್ತನ್ನು ತಮ್ಮ ವಶಮಾಡಿಕೊಂಡು ಪರಿಪಾಲನೆ ಮಾಡುತ್ತಾ ಮುನಿಗಳೂ ಗಂಧರ್ವರೂ ರಾಜರೂ ಇವರಿಂದ ಸಹಿತರಾಗಿ ಸ್ವರ್ಗದಲ್ಲಿ ದೇವತೆಗಳು ಇರುವಂತೆ ಸಂತೋಷದಿಂದ ಇದ್ದರು. ಪಾಂಡವರ ಕೀರ್ತಿಯು ಸಮಸ್ತಲೋಕಗಳಲ್ಲಿಯೂ ವ್ಯಾಪಿಸಿತ್ತು.

ಕೃಷ್ಣಪರಮಾತ್ಮನಿಂದ ಸಹಿತರಾದ ಪಾಂಡವರು ಭೂಮಿಯನ್ನು ಪರಿಪಾಲಿಸುತ್ತಿರಲು ಕಲಿ ಬಲಿಯೆಂಬ ಇಬ್ಬರು ಪಾಪಿಗಳಾದ ದೈತ್ಯರು ರಾಜ್ಯವನ್ನು ಕೆಡಿಸಿದರು. ಅದು ಪಾಂಡವರ ಕಿವಿಗೆ ಬಿದ್ದಿತು. ತರುವಾಯ ಧರ್ಮರಾಜನಿಂದಲೂ ಕೃಷ್ಣಪರಮಾತ್ಮನಿಂದಲೂ ಪ್ರೇರಿತರಾಗಿ ಭೀಮಸೇನದೇವರು ಹೋಗಿ ಸಪರಿವಾರರಾದ ಕಲಿಯನ್ನು ಬಲಿಯನ್ನು ಜಯಿಸಿ ಬಲಿಯನ್ನು ಓಡಿಸಿ ಕಲಿಯನ್ನು ಬಂಧಿಸಿ ಎಳೆದುಕೊಂಡು ಬಂದು ಕೃಷ್ಣಧರ್ಮರಾಜರ ಮುಂದೆ ತಂದುನಿಲ್ಲಿಸಿದರು. ಧರ್ಮರಾಜನು ಕೃಷ್ಣಪರಮಾತ್ಮನ ಮುಂಭಾಗದಲ್ಲಿ ಕಲಿಯೊಡನೆ 'ದುರ್ಬುದ್ಧಿಯುಳ್ಳ ಕಲಿಯೇ! ನನ್ನ ರಾಜ್ಯವನ್ನು ಯಾಕೆ ಕೆಡಿಸುವಿ?' ಎಂದು ಕೇಳಿದನು. ಅದಕ್ಕೆ ಕಲಿಯು 'ದುರ್ಯೋಧನನು ಬಿದ್ದ ದಿವಸವನ್ನು ಆರಂಭಿಸಿ ಇದು ನನ್ನ ಕಾಲವು. ಈ ಕಾಲದಲ್ಲಿ ನೀನು ಬಲಾತ್ಕಾರದಿಂದ ಆಕ್ರಮಿಸಿ ಇರುವಿ. ಅದಕ್ಕಾಗಿ ನಾನು ನಿನ್ನ ರಾಜ್ಯವನ್ನು ಕೆಡಿಸಿದೆನು' ಎಂದು ಹೇಳಿದನು. ಅದಕ್ಕೆ ಧರ್ಮರಾಜನು 'ನಿನ್ನ ಕಾಲವಾದರೂ ರಾಜರ ಬಲದಿಂದ ರಾಜ್ಯವು ನಡೆಯುವುದು. ನಿನ್ನ ಕಾಲದಲ್ಲಿಯೂ ನನ್ನಂತೆ ಇರುವ ಬಲಿಷ್ಠರಾದ ರಾಜರು ರಾಜ್ಯವನ್ನು ಬಲಾತ್ಕಾರದಿಂದ ಅಪಹರಿಸುವರು. ಕಾಲವು ಒಳ್ಳೇದೋ ಕೆಟ್ಟದೋ ಆಗಲಿಕ್ಕೆ ರಾಜನು ಕಾರಣನೋ, ರಾಜನು ಒಳ್ಳೇದೋ ಕೆಟ್ಟದೋ ಆಗಲಿಕ್ಕೆ ಕಾಲವು ಕಾರಣವೋ ಎಂದು ಸಂದೇಹವು ಬೇಡ. ಕಾಲವು ಒಳ್ಳೇದೋ ಕೆಟ್ಟದ್ದೋ ಆಗಲಿಕ್ಕೆ ರಾಜನೇ ಕಾರಣನೆಂದು ತಿಳಿಯುವವನಾಗು. ನನ್ನಂತಹ ಬಲಿಷ್ಠರಾದ ರಾಜರು ರಾಜ್ಯವನ್ನು ಅಪಹರಿಸುವಾಗ ನಿನಗೆ ರಾಜ್ಯದ ಆಸೆಯೆಲ್ಲಿದೆ?' ಎಂದು ಹೇಳಿದನು.

ಅದಕ್ಕೆ ಕಲಿಯು 'ನನ್ನ ಕಾಲದಲ್ಲಿ ನಿನ್ನಂತಹ ರಾಜರು ಎಲ್ಲಿರುವರು? ನಾನು ಮೊದಲು ರಾಜರನ್ನು ಪ್ರವೇಶಿಸಿ ಆಮೇಲೆ ಬ್ರಾಹ್ಮಣರಲ್ಲಿಯೂ ಪ್ರವೇಶಿಸುವೆನು. ಭಗವಂತನ ಸಹಾಯವುಳ್ಳ ನಿಮ್ಮಲ್ಲಿ ನನ್ನ ಸಾಮರ್ಥ್ಯವು ನಡೆಯಲಾರದು. ನಿಮ್ಮನ್ನು

ಹೊರತು ಬೇರೆ ಯಾವ ರಾಜನು ನನ್ನ ವಶನಾಗದೆ ಇರುವನು? ಬ್ರಾಹ್ಮಣರಿಗೂ ವೇದಗಳಿಗೂ ವಿರೋಧಿಯಾದ ನನ್ನ ಕಾಲದಲ್ಲಿ ನನ್ನ ದೃಷ್ಟಿಯು ಬಿದ್ದಮೇಲೆ ಜನರಲ್ಲಿ ಎಲ್ಲಿ ಗುಣಗಳಿರುವುವು? ಎಲ್ಲಿ ವೇದಗಳ ಅಧ್ಯಯನವು ನಡೆಯುವುದು?' ಎಂದು ಹೇಳಿದನು. ಆಗ ಧರ್ಮರಾಜನು 'ಕಲಿಯೇ! ನೀನು ಸುಳ್ಳು ಹೇಳುವವನಾದರೂ ಈಗ ಸತ್ಯವನ್ನೇ ಹೇಳುತ್ತಿರುವಿ. ನಿನ್ನ ಆರ್ತವಚನದಿಂದ ನಿನ್ನನ್ನು ಬಂಧನದಿಂದ ಬಿಡಿಸುವೆನು. ನನ್ನ ಸಂತತಿಯು ಮುಗಿದ ಮೇಲೆ ನೀನು ಧರ್ಮವನ್ನೆಲ್ಲಾ ಕೆಡಿಸು. ಆಗಲೂ ಗ್ರಾಮದ ಎಲ್ಲೆ ಪ್ರದೇಶ, ತಕ್ಕಡಿಯಲ್ಲಿ ತೂಕಮಾಡುವುದು ಇತ್ಯಾದಿ ವಿಷಯದಲ್ಲಿ ಅಧರ್ಮ ನಡೆಯದಂತೆ ಮಾಡಿ ನನಗೆ ಕಪ್ಪವನ್ನು ಕೊಡು' ಎಂದನು.

ಆಗ ಕೃಷ್ಣಪರಮಾತ್ಮನು 'ಪಾಂಡವರ ಸಂತಾನವಿರುವವರೆಗೆ ನಿನಗೆ ಭೂಮಿಯಲ್ಲಿ ಬಂದರೂ ಶಕ್ತಿಯಿರಲಾರದು. ಪಾಂಡವರ ಅನಂತರದಲ್ಲಿ ಕ್ಷೇಮಕ ರಾಜನವರೆಗೆ ಸ್ವಲ್ಪಸ್ವಲ್ಪ ಸಾಮರ್ಥ್ಯವು ಬರುವುದು. ಕ್ಷೇಮಕರಾಜನ ಮೇಲೆ ನಿನಗೆ ಸಂಪೂರ್ಣ ಶಕ್ತಿಯುಂಟಾಗುವುದು. ಪಾಂಡವರೂ ನಾನೂ ಇರುವವರೆಗೆ ಭೂಮಿ ಯನ್ನು ನೋಡಲೇಬಾರದು. ಸರ್ವಥಾ ಮುಟ್ಟಬಾರದು. ಆಮೇಲೆ ಭೂಮಿಯನ್ನು ಮುಟ್ಟುವವನಾಗು' ಎಂದು ಹೇಳಿದನು. ಆಮೇಲೆ ಪರಮಾತ್ಮನಿಂದಲೂ ಧರ್ಮರಾಜನಿಂದಲೂ ಬಂಧನದಂದ ಬಿಡಿಸಲ್ಪಟ್ಟವನಾಗಿ ಅವರಿಗೆ ನಮಸ್ಕರಿಸಿ ಹೋಗಿ ಸಮುದ್ರದ ತೀರದಲ್ಲಿದ್ದ ಒಂದು ಗುಹೆಯಲ್ಲಿ ಆಶ್ರಯಿಸಿಕೊಂಡು ಇದ್ದನು. ಪಾಂಡವರು ಕೃಷ್ಣಪರಮಾತ್ಮನಿಂದ ಸಹಿತರಾಗಿ ರಾಜ್ಯವನ್ನು ರಕ್ಷಿಸುತ್ತಾ ಸಂತೋಷದಿಂದ ಇದ್ದರು. ಕೃಷ್ಣಪರಮಾತ್ಮನು ಪಾಂಡವರನ್ನು ರಾಜ್ಯದಲ್ಲಿ ಸ್ಥಾಪಿಸಿ ಅರ್ಜುನನಿಗೆ ಗೀತೆಯಲ್ಲಿ ಹೇಳಿದ ಧರ್ಮಗಳು ಮರೆತುಹೋದ ಕಾರಣ ಪುನಃ ಅವನಿಗೆ ಧರ್ಮವನ್ನು ಉಪದೇಶಿಸಿದರು. ಅದಕ್ಕೆ ಅನುಗೀತೆಯೆಂದು ಹೆಸರು. ಆಮೇಲೆ ಪಾಂಡವರನ್ನು ಸಮಾಧಾನಪಡಿಸಿ ಸುಭದ್ರೆಯಿಂದ ಸಹಿತವಾಗಿ ಕೃಷ್ಣಪರಮಾತ್ಮನು ದ್ವಾರಕಾಪಟ್ಟಣಕ್ಕೆ ಹೋದನು.



# ಅಶ್ವಮೇಧಯಾಗವು [1]

ಕೃಷ್ಣಪರಮಾತ್ಮನು ದ್ವಾರಕಾಪಟ್ಟಣಕ್ಕೆ ಹೋಗುತ್ತಿರುವಾಗ ದಾರಿಯಲ್ಲಿ ಉದಂಕ ಎಂಬ ಋಷಿಗಳು ಸಿಕ್ಕಿದರು. ಅವರು ಕೇಳಲು ಅವರೊಡನೆ ಭಗವಂತನು ದುರ್ಯೋಧನಾದಿಗಳು ಮೃತರಾದ ವಿಷಯವನ್ನು ಹೇಳಿದನು. ಆಗ ಉದಂಕರು ತನ್ನ ಶಿಷ್ಯನಾದ ದುರ್ಯೋಧನನನ್ನು ಸಂಹರಿಸಿದ್ದಕ್ಕಾಗಿ ಶಾಪವನ್ನು ಕೊಡುವೆನೆಂದು ಉದ್ಯುಕ್ತರಾದರು. ಆಗ ಪರಮಾತ್ಮನು ನನ್ನ ಭಕ್ತನಾದ ಇವನು ನನ್ನನ್ನು ತಿರಸ್ಕರಿಸಿ ತಮಸ್ಸನ್ನು ಹೊಂದದೆ ಇರಲಿ ಎಂಬ ಕರುಣೆಯಿಂದ ವಿಶ್ವರೂಪವನ್ನು ತೋರಿಸಿ ಸಮಾಧಾನಪಡಿಸಿದರು. ಆಮೇಲೆ ಉದಂಕರು ಶಾಂತರಾಗಿ ಪಶ್ಚಾತ್ತಾಪವುಳ್ಳವ ರಾದರು. ಭಗವಂತನನ್ನೇ ಮರೆ ಹೊಂದಿದರು.

ಭಗವಂತನು ಅವರಿಗೆ ಅಭಯವನ್ನು ಕೊಟ್ಟು ನಿನಗೆ ಅಮೃತವನ್ನು ಕೊಡಲಿಕ್ಕೆ ಇಂದ್ರನನ್ನು ಕಳುಹಿಸುತ್ತೇನೆ ಎಂದು ಹೇಳಿ ಪರಮಾತ್ಮನು ದ್ವಾರಕಾಪಟ್ಟಣಕ್ಕೆ ಹೋದನು. ತರುವಾಯ ಭಗವಂತನು ಉದಂಕರಿಗೆ ಅಮೃತವನ್ನು ಕೊಡೆಂದು ಆಜ್ಞಾಪಿಸಿದರು. ಇಂದ್ರದೇವರು ನಾನು ಅವರನ್ನು ಮೋಸಮಾಡುವೆನೆಂದರು. ಭಗವಂತನು ಇಂದ್ರದೇವರ ಮೇಲಿನ ಸ್ನೇಹದಿಂದ ಆಗಲಿ ಎಂದನು. ಇಂದ್ರದೇವರು ಅತ್ಯಂತ ನಿಂದ್ಯವಾದ ಚಂಡಾಲನ ವೇಷದಿಂದ ಆ ಮುನಿಗಳ ಸಮೀಪಕ್ಕೆ ಹೋದರು. ಮೂತ್ರಬರುವ ಸ್ಥಳಕ್ಕೆ ಸರಿಯಾಗಿ ಅಮೃತದ ಪಾತ್ರೆಯನ್ನು ಇಟ್ಟುಕೊಂಡು ಮೂತ್ರವನ್ನು ಹೊಯ್ಯುವಂತೆ ತೋರಿಸುತ್ತಾ 'ಮಹರ್ಷಿಗಳೇ! ಕೃಷ್ಣಪರಮಾತ್ಮನು ನಿಮಗೆ ಈ ಅಮೃತವನ್ನು ಕಳಿಹಿಸಿರುವನು. ಕುಡಿಯಿರಿ' ಎಂದು ಹೇಳಿದರು. ಆಗ ಉದಂಕರು ಅದು ಮೂತ್ರವೆಂದು ತಿಳಿದು ಹೋಗು ಎಂದು ಹೇಳಿ ಬೆದರಿಸಿದರು. ಇಂದ್ರದೇವರು ಉದಂಕರನ್ನು ವಂಚನೆಮಾಡಿ ಸಂತೋಷದಿಂದ ತಮ್ಮ ಸ್ಥಳಕ್ಕೆ ಹೋದರು.

ದೇವತೆಗಳಿಗೆ ಅಮೃತವು ಮುಖ್ಯವಾದ ಆಹಾರವು. ಅದನ್ನು ಇನ್ನೊಬ್ಬರು ಕುಡಿಯುವುದು ದೇವತೆಗಳಿಗೆ ಇಷ್ಟವಲ್ಲ. ಆದುದರಿಂದ ಇಂದ್ರದೇವರು ಹಾಗೆ ಮಾಡಿದರು. ಭಗವಂತನು ತಾನು ಹೇಳಿದಂತೆ ಇಂದ್ರದೇವರನ್ನು ಕಳುಹಿಸಿದನು. ಉದಂಕರು ತನ್ನ ಅಪರಾಧದಿಂದ ಅಂದರೆ ಹೋಗು ಎಂದು ಬೆದರಿಸಿದ್ದರಿಂದ ಮೋಸಹೋಗಲು ಭಗವಂತನು ಸರಿಯೆಂದು ತಿಳಿದುಕೊಂಡನು.

---

1. ಮ.ತಾ.ನಿ. ಅ-30

ಭಗವಂತನು ದ್ವಾರಕೆಗೆ ಹೋಗಿ ಯಾದವರಿಂದ ಸತ್ಕೃತನಾಗಿ ಯಾದವರ ಸಭೆಯಲ್ಲಿ ಯುದ್ಧದ ವೃತ್ತಾಂತವನ್ನು ಹೇಳಿದನು. ಆಗ ಅಭಿಮನ್ಯುವಿನ ಸಂಹಾರವನ್ನು ಬಿಟ್ಟು ಮುಂದಿನ ಕಥೆಯನ್ನು ಹೇಳಲು ಸುಭದ್ರೆಯು ನಮಸ್ಕರಿಸಿ ಅದನ್ನು ಹೇಳಲಿಕ್ಕೆ ಹೇಳಿದಳು. ತರುವಾಯ ಭಗವಂತನು ಹೇಳಿದನು. ಅದರಿಂದ ವಸುದೇವಾದಿಗಳು ಬಹಳ ದುಃಖವುಳ್ಳವರಾಗಿ ಅಭಿಮನ್ಯುವಿಗೆ ಶ್ರಾದ್ಧವನ್ನು ಮಾಡಿದರು.

ಪರಮಾತ್ಮನು ದ್ವಾರಕಾಪಟ್ಟಣದಲ್ಲಿ ಇರುತ್ತಿರಲು ಧರ್ಮರಾಜನು ಅಶ್ವಮೇಧ ಯಾಗವನ್ನು ಮಾಡಲಿಕ್ಕೆ ಹಣವಿಲ್ಲವೆಂದು ವ್ಯಸನವನ್ನು ಹೊಂದಿದನು. ದಯೆಯಿಂದ ಸತ್ತೂ ಉಳಿದ ಕ್ಷತ್ರಿಯರಿಂದ ಹಣವನ್ನು ಸ್ವೀಕರಿಸಲಿಕ್ಕೆ ಇಚ್ಛಿಸಲಿಲ್ಲ. ಮಧ್ಯಮ ರೀತಿಯಿಂದ ಯಜ್ಞಮಾಡಲಿಕ್ಕೆ ಅವನಿಗೆ ಮನಸ್ಸು ಬರಲಿಲ್ಲ. ಇದನ್ನು ತಿಳಿದು ಸರ್ವಜ್ಞರಾದ ವೇದವ್ಯಾಸದೇವರು ಅಲ್ಲಿಗೆ ಬಂದರು. 'ಹಿಮವತ್ ಪರ್ವತದ ಶಿಖರವೂ ಮೇರುಪರ್ವತದ ಶಿಖರವೂ ಒಟ್ಟಿಗೆ ಸೇರಿದ ಸ್ಥಳದಲ್ಲಿ ಪೂರ್ವದಲ್ಲಿ ಪರಮಾತ್ಮನೇ ಲೋಕಸಂಗ್ರಹಕ್ಕಾಗಿ ಯಾಗವನ್ನು ಮಾಡಿರುವನು. ರುದ್ರಾದಿ ದೇವತೆಗಳೂ ಮರುತ್ತರಾಜನೂ ಅಲ್ಲಿಯೇ ಯಜ್ಞದಿಂದ ಭಗವಂತನನ್ನು ಆರಾಧಿಸಿರುವರು. ವೃಷಪರ್ವ ಎಂಬ ದಾನವನೂ ಅಲ್ಲಿಯೇ ಯಾಗವನ್ನು ಮಾಡಿರುವನು. ಅಲ್ಲಿ ಬೇಕಾದ ಹಣವು ರಾಶಿಬಿದ್ದಿರುವುದು. ಅಲ್ಲಿ ರುದ್ರದೇವರಲ್ಲಿ ಅಂತರ್ಯಾಮಿಯಾದ ಪರಶುರಾಮದೇವರನ್ನು ಪೂಜಿಸಿ ಅವರ ಅನುಜ್ಞೆಯಿಂದ ಆ ಹಣವನ್ನು ಸ್ವೀಕರಿಸಿ ಅದರಿಂದ ಯಜ್ಞವನ್ನು ಮಾಡು' ಎಂದು ಹೇಳಿದರು. ವೇದವ್ಯಾಸದೇವರು ಹೇಳಿದ ಮೇಲೆ ಭೀಮಸೇನದೇವರೂ ಧರ್ಮರಾಜನೊಡನೆ 'ಪರಶುರಾಮದೇವರು ಹಣಕ್ಕೆ ದೇವತೆಯು ರುದ್ರದೇವರಲ್ಲಿ ಅಂತರ್ಯಾಮಿಯೂ ಅವರು ಯಜ್ಞದಲ್ಲಿ ಉಳಿದ ಹಣಕ್ಕೆಲ್ಲಾ ನಿಯಾಮಕರು. ಆ ರುದ್ರಾಂತರ್ಯಾಮಿಯಾದ ಭಗವಂತನೇ ಅರ್ಜುನನಿಗೆ ಪಾಶುಪತಾಸ್ತ್ರವನ್ನು ಕೊಟ್ಟನು. ಆ ಭಗವಂತನೇ ನಮಗೆ ಇತರ ಕಾರ್ಯಗಳನ್ನು ಮಾಡಿರುವನು. ಅವನೇ ಬ್ರಹ್ಮರುದ್ರಾದಿ ಪದವಿಗಳನ್ನು ಕೊಟ್ಟವನು. ಸ್ವತಂತ್ರನು. ಪರತಂತ್ರರಾದ ಅವರನ್ನೆಲ್ಲಾ ನಿಯಮಿಸುವನು. ಅವನು ನಮಗೇ ಪ್ರಿಯನು. ನಾವು ಅವನಿಗೆ ಪ್ರಿಯರು. ಆದುದರಿಂದ ಆ ಭಗವಂತನು ಅನುಜ್ಞೆ ಕೊಟ್ಟ ಹಣದಿಂದಲೇ ಯಜ್ಞವನ್ನು ಮಾಡುವ, ಈ ತಾತಂದಿರಾದ ವೇದವ್ಯಾಸದೇವರು ನಮಗೆ ಆ ಹಣವನ್ನು ಕೊಡಿಸುವರು' ಎಂದು ಹೇಳಿದರು.

ತರುವಾಯ ವೇದವ್ಯಾಸದೇವರನ್ನು ಮುಂದೆ ಮಾಡಿಕೊಂಡು ಎಲ್ಲರೂ ಅಲ್ಲಿಗೆ ಹೋದರು. ವೇದವ್ಯಾಸದೇವರು ಅಲ್ಲಿಂದ ಸುತ್ತಲೂ ನೂರು ಯೋಜನ ವಿಸ್ತಾರವಾದ ಹಣದ ರಾಶಿಯನ್ನು ತೆಗೆದುಕೊಟ್ಟರು. ಆನೆ ಕುದುರೆ ಒಂಟೆ ಮನುಷ್ಯರೇ ಮೊದಲಾದವರಿಂದ ಆ ಹಣ ರಾಶಿಯನ್ನು ಹೊರಿಸಿದರು. ಧರ್ಮರಾಜನನ್ನು ಬಿಟ್ಟು ಉಳಿದ ಭೀಮಸೇನದೇವರೇ ಮೊದಲಾದವರೆಲ್ಲರೂ ಹಣವನ್ನು ಹೊತ್ತುಕೊಂಡು ಬಂದರು. ಅದೇ ಸಮಯದಲ್ಲಿ ಕೃಷ್ಣಪರಮಾತ್ಮನೂ ಪತ್ನೀಸಹಿತನಾಗಿ ಸುಭದ್ರೆಯಿಂದ ಕೂಡಿಕೊಂಡು ಹಸ್ತಿನಾವತಿಗೆ ಬರುತ್ತಾ ದಾರಿಯಲ್ಲಿ ಉದಂಕರಿಂದ ಸತ್ಕರಿಸಲ್ಪಟ್ಟನು. ನೀರನ್ನು ಅಪೇಕ್ಷಿಸಿದ ಅವರಿಗೆ ಬೇಕಾದ ಮಳೆ ಸುರಿಸುವ ಮೇಘಗಳನ್ನು ಕೊಟ್ಟು ತಾನು ಅಮೃತವನ್ನು ಕೊಡುತ್ತೇನೆಂದು ಹೇಳಿದ ವರವನ್ನು ನೀರಿಗೂ ಅಮೃತವೆಂದು ಹೆಸರಿರುವುದರಿಂದ ನೀರನ್ನು ಕೊಟ್ಟು ಸತ್ಯವನ್ನಾಗಿ ಮಾಡಿ ಹಸ್ತಿನಾವತಿಗೆ ಹೋದನು. ಪಾಂಡವರೂ ವೇದವ್ಯಾಸದೇವರೂ ಬರುತ್ತಿರಲು ಕೃಷ್ಣಪರಮತ್ಮನು ಹಸ್ತಿನಾಪುರವನ್ನು ಪ್ರವೇಶಿಸಿದನು.

ಆ ಸಮಯದಲ್ಲಿ ಉತ್ತರೆಯು ಮೃತ ಶಿಶುವನ್ನು ಹಡೆದಳು. ಅಶ್ವತ್ಥಾಮಾ ಚಾರ್ಯರ ಬ್ರಹ್ಮಾಸ್ತ್ರದಿಂದ ಸತ್ತಿರುವ ಆ ಮಗುವನ್ನು ನೋಡಿ ಕುಂತೀದೇವಿಯೇ ಮೊದಲಾದವರು ಕೃಷ್ಣಪರಮಾತ್ಮನನ್ನು ಮರೆಹೊಂದಿದರು. ಗರ್ಭದಲ್ಲಿ ತನ್ನಿಂದ ಪ್ರತ್ಯಕ್ಷವಾಗಿ ರಕ್ಷಿಸಲ್ಪಟ್ಟ ಹಡೆಯುವಾಗ ಸತ್ತಿರುವ ಆ ಕೂಸನ್ನು ಕೃಷ್ಣಪರಮಾತ್ಮನು ಪಾಂಡವರ ಸಂತಾನವು ಬೆಳೆಯುವುದಕ್ಕಾಗಿ ರಕ್ಷಿಸಿದನು. ಆಗಲೇ ವೇದವ್ಯಾಸ ದೇವರಿಂದ ಸಹಿತರಾದ ಪಾಂಡವರು ಬಂಗಾರದ ರಾಶಿಯಿಂದ ಸಹಿತರಾಗಿ ಪುರವನ್ನು ಪ್ರವೇಶಿಸಿದರು. ಆಗ ಧರ್ಮರಾಜನು ಮೊಮ್ಮಗನು ಹುಟ್ಟಿದನೆಂದು ಸಂತೋಷದಿಂದ ಬಹುದಾನಗಳನ್ನು ಮಾಡಿದನು. ಸಂತೋಷದಿಂದ ಕೃಷ್ಣಪರಮಾತ್ಮ ನನ್ನು ನಮಸ್ಕರಿಸಿದನು. ಕುಂತೀದೇವಿಯೂ ದ್ರೌಪದೀದೇವಿಯರೂ ಸುಭದ್ರೆಯೂ ಉತ್ತರೆಯೂ ಇತರರೂ ಪಾಂಡವರೂ ಇತರ ಪುರುಷರೂ ಕೃಷ್ಣಪರಮಾತ್ಮನನ್ನು ಸ್ತುತಿಸಿದರು. ನಮಸ್ಕರಿಸಿದರು.

ತರುವಾಯ ಕೃಷ್ಣಪರಮಾತ್ಮನ ಅನುಜ್ಞೆಯನ್ನು ಪಡೆಯುವವರಾಗಿ ವೇದವ್ಯಾಸ ದೇವರನ್ನು ಸದಸ್ಯರನ್ನಾಗಿ ಮಾಡಿಕೊಂಡು ಪಾಂಡವರು ಮುನಿಗಳಿಂದ ಅಶ್ವಮೇಧ ಯಾಗವನ್ನು ಆರಂಭಿಸಿದರು. ವೇದವ್ಯಾಸದೇವರು ತಾನೇ ಸರ್ವಯಜ್ಞಗಳಲ್ಲಿ ಶ್ರೇಷ್ಠವಾದ ಆ ಯಜ್ಞವನ್ನು ಮಾಡಿಸಿದರು. ವೇದವ್ಯಾಸರಿಂದ ಪ್ರೇರಿತರಾದ ಭೀಮಸೇನದೇವರು ಯಜ್ಞಕ್ಕೆ ಬೇಕಾದ ಪಾತ್ರೆಗಳನ್ನು ಯಜ್ಞಶಾಲೆಯನ್ನು

ಬಂಗಾರದಿಂದಲೇ ಮಾಡಿಸಿದರು. ತರುವಾಯ ಕುದುರೆಯನ್ನು ಮಂತ್ರಿಸಿಬಿಟ್ಟರು. ಅದನ್ನು ಅನುಸರಿಸಿ ಅರ್ಜುನನು ಹೋದನು. ಅರ್ಜುನನು ಕುದುರೆಯನ್ನು ಸಂಚಾರಮಾಡಿಸಿದನು. [1]ಧರ್ಮರಾಜನ ಆಜ್ಞೆಯಿಂದ ಒಬ್ಬರನ್ನೂ ಸಂಹರಿಸಲಿಲ್ಲ.

ಪ್ರೀತಿಯಿಂದ ಎಲ್ಲಾ ರಾಜರನ್ನೂ ಯಜ್ಞಕ್ಕೆ [2]ಕೂಗಿದನು. ಕುದುರೆಯು ಕ್ರಮದಿಂದ [3]ಮಳಲೂರಕ್ಕೆ ಬಂದಿತು. ಅಲ್ಲಿ ಬಭ್ರುವಾಹನನು ಅರ್ಘ್ಯಪಾದ್ಯಾದಿಗಳಿಂದ ಅವನನ್ನು ಎದುರುಗೊಂಡುಬಂದನು. ಆಗ ಅರ್ಜುನನು ಮಗನೊಡನೆ 'ನಾನು ಯುದ್ಧಮಾಡಬೇಕೆಂದು ಬಂದಿರುವಾಗ ನೀನು ಅರ್ಘ್ಯವನ್ನು ಹಿಡಿದುಕೊಂಡು ಬಂದುರಿವಿಯಲ್ಲಾ! ನಿನ್ನ ಪೌರುಷದಿಂದ ನಾನು ಸಂತೋಷಪಡಲಿಲ್ಲ. ನಿನಗೆ ಧಿಕ್ಕಾರವಿರಲಿ. ನೀನು ಯಜ್ಞದ ಅಶ್ವವನ್ನು ತಡೆಯದೆ ಇದ್ದದ್ದು ಸರಿಯಲ್ಲ' ಎಂದು ಹೇಳಿದನು. ಆದರೂ ಪಿತೃಭಕ್ತಿಯಿಂದ ಯುದ್ಧಮಾಡದೆ ಇದ್ದ ಬಭ್ರುವಾಹನನನ್ನು ನೋಡಿ ಉಲೂಪಿಯು 'ತಂದೆಯ ಪ್ರೀತಿಗಾಗಿ ಯುದ್ಧವನ್ನು ಮಾಡು. ತಂದೆಗೆ ಪ್ರಿಯವಾದದ್ದನ್ನು ಮಾಡಬೇಕು. ಆದುದರಿಂದ ತಂದೆಗೆ ಸಂತೋಷವನ್ನು ಉಂಟುಮಾಡುವುದಕ್ಕಾಗಿಯೇ ನಿನ್ನ ಬಲವನ್ನು ತೋರಿಸುತ್ತಾ ಯುದ್ಧಮಾಡು' ಎಂದಳು. ಆಗ ಬಭ್ರುವಾಹನನು ತಂದೆಗೆ ಸಾಮರ್ಥ್ಯವನ್ನು ತೋರಿಸುತ್ತಾ ಯುದ್ಧವನ್ನು ಮಾಡಿದನು. ಅರ್ಜುನನು ಮಗನಮೇಲಿನ ಸ್ನೇಹದಿಂದ ಮಂದಹಾಸವನ್ನು ಮಾಡುತ್ತಾ ಮೆಲ್ಲನೆ ಯುದ್ಧವನ್ನು ಮಾಡುತ್ತಿದ್ದನು.

ಬಭ್ರುವಾಹನನು ತಾನು ಎಲ್ಲಾ ಆಯುಧಗಳನ್ನು ಬಿಟ್ಟರೂ ವಿಕಾರವಿಲ್ಲದಿರುವ ಅರ್ಜುನನನ್ನು ನೋಡಿ ಬಾಲಸ್ವಭಾವದಿಂದ ಪರೀಕ್ಷೆಗಾಗಿ ಮಂತ್ರದಿಂದ ಪವಿತ್ರವಾದ ದೊಡ್ಡಬಾಣವನ್ನು ಅರ್ಜುನನ ಮೇಲೆ ಬಿಟ್ಟನು. ಆಗ ಅವನಿಗೆ ದೈವೇಚ್ಛೆಯಿಂದ ಮೂರ್ಛೆಯುಂಟಾಯಿತು. ಮೂರ್ಛಿತನಾದ ತಂದೆಯನ್ನು ನೋಡಿ ತಂದೆಯ ಮೇಲಿನ ಭಕ್ತಿಯಿಂದ ಬಹಳ ದುಃಖವುಳ್ಳವನಾಗಿ ಪ್ರಾಯೋಪವೇಶವನ್ನು ಮಾಡಿದನು. ಅಂದರೆ ಸಾಯುವವರೆಗೆ ಉಪವಾಸದಿಂದ ಇರುವೆನೆಂದು ಕೂತುಕೊಂಡನು. ಅವನ ತಾಯಿಯಾದ ಚಿತ್ರಾಂಗದೆಯು ಅತಿದುಃಖವುಳ್ಳವಳಾಗಿ ವಿಲಾಪವನ್ನು ಮಾಡಿದಳು. ಉಲೂಪಿಯನ್ನು ನಿಂದಿಸಿದಳು. 'ಮೂರು ಜಗತ್ತಿನಲ್ಲಿಯೂ ಪೂಜಿತರಾದ ನನ್ನ ಪತಿಯನ್ನು ನನ್ನ ಒಂದನ್ನೂ ತಿಳಿಯದ ತಂದೆಯಿಂದ ಸಂಹಾರ ಮಾಡಿಸಿದಿಯಲ್ಲಾ! ಲೋಕದಲ್ಲಿ ವೀರನಾದ ಪತಿಯನ್ನು

1. ಯುಧಿಷ್ಠಿರಾಜ್ಞಯಾ ತೇನ ನ ಕಶ್ಚಿನ್ನಿಹತಸ್ತದಾ । ಮ.ತಾ.ನಿ. 30-100

2. ಆಹ್ವಾನಿಸಿದನು.
3. ಮಣಲೂರ

ಬಿಟ್ಟು ಮಗನಿಂದ ನನಗೊಂದೂ ಆಗಬೇಕಾಗಿಲ್ಲ. ನಾನು ಗಂಡನ ಲೋಕವನ್ನು ಹೊಂದುವೆನು. ಕಲಹದಲ್ಲಿ ಪ್ರೀತಿಯುಳ್ಳವಳೇ! ನೀನು ತೃಪ್ತಿಯನ್ನು ಹೊಂದು' ಎಂದು ಸಾಯಲಿಕ್ಕೆಂದು ನಿಶ್ಚಯಮಾಡಿದವಳಾಗಿ ಭೂಮಿಯಲ್ಲಿ ಹೊರಳಾಡುತ್ತಿರುವ ಚಿತ್ರಾಂಗದೆಯನ್ನು ನೋಡಿ ಸರ್ಪರಾಜನ ಮಗಳಾದ ಉಲೂಪಿಯು ನಾಗಲೋಕ ದಿಂದ ವಿಶಲ್ಯಕರಣೀ ಎಂಬ ಔಷಧಿಯನ್ನು ತಂದು ಅದರಿಂದ ಮೂರು ಲೋಕಗಳಲ್ಲಿಯೂ ಮಹಾರಥಿಕನಾದ ತನ್ನ ಪತಿಯಾದ ಅರ್ಜುನನನ್ನು ಎಬ್ಬಿಸಿದಳು.

ತರುವಾಯ ಮಂದಹಾಸವನ್ನು ಮಾಡುತ್ತಾ ''ನಾನು ಪೂರ್ವದಲ್ಲಿ ದೇವಲೋಕದಲ್ಲಿ ದೇವತೆಗಳು 'ಭೀಷ್ಮಾದಿಗಳು ಸರಿಯಾದ ಧರ್ಮದಿಂದ ಅರ್ಜುನನಿಂದ ಸಂಹರಿಸಲ್ಪಡದೆ ಇದ್ದಕಾರಣ ಅರ್ಜುನನು ಆ ದೋಷದಿಂದ ಯುದ್ಧದಲ್ಲಿ ಅತಿವೇದನೆಯನ್ನು ಹೊಂದಲಿ' ಎಂದು ಹೇಳಿದ ಮಾತನ್ನು ಕೇಳಿದೆನು. ಅದು ಇನ್ನೊಬ್ಬರಿಂದ ಆಗುವುದು ಬೇಡವೆಂದು ದೇವತೆಗಳ ಮಾತಿನಿಂದಲೇ ನಾನು ಮಗನೊಡನೆ ಯುದ್ಧವನ್ನು ಮಾಡೆಂದೆನು. ದೇವತೆಗಳ ಸಂಕಲ್ಪದಿಂದಲೇ ಅರ್ಜುನರು ಮೂರ್ಛೆಯನ್ನು ಹೊಂದಿದರು. ಒಂದು ಸಲ ದೋಷದ ಫಲವನ್ನು ಅನುಭವಿಸಿದ ಮೇಲೆ ಇನ್ನೊಬ್ಬರಿಂದ ಪುನಃ ಅನುಭವಿಸಲಾರರು. ಇನ್ನೊಬ್ಬರಿಂದ ಮೂರ್ಛಿತರಾಗಿ ಬಿದ್ದರೆ ಮೂರುಲೋಕದಲ್ಲಿ ಇರುವ ಅರ್ಜುನರ ಕೀರ್ತಿಯು ನಾಶ ಹೊಂದುವುದೆಂದು ಮಗನಿಂದಲೇ ಮೂರ್ಛೆಯನ್ನು ಹೊಂದುವಂತೆ ದೇವತೆಗಳು ಮಾಡಿದರು'' ಎಂದು ಹೇಳಲು ಅರ್ಜುನನು ಪ್ರೀತಿಯನ್ನು ಹೊಂದಿದನು. ಅವರಿಂದ ಸತ್ಕೃತನಾಗಿ ಅವರನ್ನು ಯಜ್ಞಕ್ಕೆ ಬರುವಂತೆ ಕರೆದು ಮುಂದೆ ಹೋದನು.

ದ್ವಾರಕಾಪಟ್ಟಣದ ಸಮೀಪದಲ್ಲಿ ಇದ್ದ ಕುದುರೆಯನ್ನು ಪ್ರದ್ಯುಮ್ನನೇ ಮೊದಲಾದ ಭಗವಂತನ ಮಕ್ಕಳು ಬಲಾತ್ಕಾರದಿಂದ ಅಪಹರಿಸಿಕೊಂಡು ಹೋದರು. ಅರ್ಜುನನು ಸುಭದ್ರೆಯನ್ನು ಅಪಹರಿಸಿಕೊಂಡು ಹೋದದ್ದನ್ನು ಮನಸ್ಸಿನಲ್ಲಿ ಇಟ್ಟುಕೊಂಡು ಅವರು ಅರ್ಜುನನ್ನು ಯುದ್ಧಕ್ಕೆ ಕರೆಯುತ್ತಾ ಕುದುರೆಯನ್ನು ತೆಗೆದುಕೊಂಡು ಹೋಗಲು ಅರ್ಜುನನು ಭಗವಂತನ ಮೇಲೆಯೂ ಸೋದರಮಾವನಾದ ವಸುದೇವನ ಮೇಲೆಯೂ ಗೌರವದಿಂದ ಸೋದರ ಮಾವನಾದ ವಸುದೇವನೊಡನೆ 'ನಿಮ್ಮ ಮೊಮ್ಮಕ್ಕಳು ಬೇರೆಯವರಂತೆ ಕುದುರೆಯನ್ನು ಅಪಹರಿಸಿದರು' ಎಂದು ಹೇಳಲು ವಸುದೇವನು ಆ ಕುಮಾರರನ್ನು ಬೆದರಿಸಿ ಕುದುರೆಯನ್ನು ಬಿಡಿಸಿದನು. ಅನಂತರದಲ್ಲಿ ಅರ್ಜುನನು ಮಾವನನ್ನು ನಮಸ್ಕರಿಸಿ ಎಲ್ಲರನ್ನೂ ಯಜ್ಞಕ್ಕೆ ಬರಬೇಕೆಂದು ಕರೆದು ಹಸ್ತಿನಾವತಿಗೆ ಹೋಗುವವನಾಗಿ ದೂತನನ್ನು ಮುಂದೆ ಕಳುಹಿಸಿದನು.

ಕೃಷ್ಣಪರಮಾತ್ಮನಿಂದಲೂ ಸಹೋದರರಿಂದಲೂ ಸಹಿತನಾದ ಧರ್ಮರಾಜನು ಅರ್ಜುನನು ಬರುತ್ತಿರುವನೆಂದು ಕೇಳಿ ಸಂತೋಷವುಳ್ಳವನಾಗಿ ಆನಂದಬಾಷ್ಪವನ್ನು ಸುರಿಸುವವನಾಗಿ ತಮ್ಮನ ಮೇಲಿನ ಸ್ನೇಹದಿಂದ ಕೃಷ್ಣಪರಮಾತ್ಮನೊಡನೆ 'ಭಗವಂತನೇ! ಅರ್ಜುನನಲ್ಲಿ ಯಾವ ದುರ್ಲಕ್ಷಣವೂ ಕಾಣಿಸುವುದಿಲ್ಲವಲ್ಲಾ, ಯಾವ ದುರ್ಲಕ್ಷಣದಿಂದ ಅವನು ಬಹುದುಃಖವುಳ್ಳವನಾಗಿರುವನು? ಯಾವಾಗಲೂ ದೇಶಸಂಚಾರ ಮಾಡುತ್ತಲೇ ಇರುವನು' ಎಂದು ಕೇಳಿದನು. ಆಗ ಭಗವಂತನು 'ಧರ್ಮರಾಜನೇ! ನಿನ್ನ ತಮ್ಮನು ಸ್ವಲ್ಪ ಹೆಚ್ಚಾಗಿ ಉದ್ದವಾಗಿರುವನು. ಆ ಅವರಲಕ್ಷಣದಿಂದ ಸ್ವಲ್ಪ ಹೆಚ್ಚಾಗಿ ದುಃಖವುಳ್ಳವನಾಗಿರುವನು' ಎಂದು ಹೇಳಿ ಇನ್ನೂ ಕೆಲವು ದೋಷಗಳನ್ನು ಅರ್ಜುನನಲ್ಲಿ ಹೇಳಲು ಉದ್ಯುಕ್ತನಾಗಿರಲು ದ್ರೌಪದೀದೇವಿಯರು ಕಟಾಕ್ಷದಿಂದ ಹೇಳುವುದು ಬೇಡವೆಂದು ಸೂಚನೆ ಮಾಡಿದರು.

ಪರಮಾತ್ಮನೂ ಸತ್ಯಭಾಮಾದೇವಿಯರೂ ಭೀಮಸೇನದೇವರೂ ದ್ರೌಪದೀ ದೇವಿಯರೂ ಈ ನಾಲ್ಕು ಜನರೇ ಸಮಸ್ತ ಲಕ್ಷಣಗಳನ್ನೂ ತಿಳಿದವರು. ಐದನೇಯನು ಇರುವುದಿಲ್ಲ. ಇದು ಶುದ್ಧವಾದ ವಿದ್ಯೆಯು. ವಿದ್ಯಾಸ್ವಭಾವವುಳ್ಳ ಧರ್ಮರಾಜನು ಪ್ರಸಂಗಸಂಗತಿಯಿಂದ ಅದನ್ನು ತಿಳಿಯಬೇಕೆಂದು ಇಚ್ಛಿಸಿದನು. ಆಗ ದ್ರೌಪದೀದೇವಿಯರು ಹೇಳುವುದು ಬೇಡವೆಂದು ಸೂಚಿಸಿದರು. ಕೃಷ್ಣಪರಮಾತ್ಮನು ದ್ರೌಪದೀದೇವಿಯರ ಮೇಲಿನ ಗೌರವದಿಂದ ಆಮೇಲೆ ಹೇಳಲಿಲ್ಲ. ಏನೋ ಬೇರೆ ಮಾತನ್ನಾಡಿ ಧರ್ಮರಾಜನಿಗೆ ಆ ವಿಷಯವು ಮರೆತುಹೋಗುವಂತೆ ಮಾಡಿದನು. ಅರ್ಜುನನಿಗೆ ಹೊಟ್ಟೆಯು ಸ್ವಲ್ಪ ದೊಡ್ಡ ದಾಗಿತ್ತು. ವೃಷಣವು (ಬೀಜವು) ಸ್ವಲ್ಪ ದೊಡ್ಡದಾಗಿತ್ತು. ಎಡಕೈಯೂ ಸ್ವಲ್ಪ ದೊಡ್ಡದಾಗಿತ್ತು. ಇವು ಅರ್ಜುನನಿಗೆ ಅವಲಕ್ಷಣಗಳು. ಇವೆಲ್ಲವೂ ಪ್ರತ್ಯಕ್ಷವಾಗಿ ಕಾಣಿಸುತ್ತಿದ್ದರೂ ಪರಮಾತ್ಮನು ಧರ್ಮರಾಜನಿಗೆ ಹೇಳಲಿಲ್ಲ. ಈ ಅವಲಕ್ಷಣಗಳು ಜ್ಞಾನಾನಂದಗಳು ಕಡಿಮೆಯಾಗಿರಲಿಕ್ಕೆ ಕಾರಣವಾದವುಗಳು. ಸಮಸ್ತ ಜೀವರಾಶಿ ಯಲ್ಲಿಯೂ ಅವಲಕ್ಷಣವಿಲ್ಲದೆ ಇದ್ದವರು ಭೀಮಸೇನದೇವರೂ ದ್ರೌಪದೀ ದೇವಿಯರೂ, ರುಕ್ಮಿಣೀ ಸತ್ಯಭಾಮಾದೇವಿಯರೇ ಮೊದಲಾದ ರೂಪವುಳ್ಳ ರಮಾದೇವಿಯರಿಗೆ ಅವರಿಗಿಂತಲೂ ಮುಖ್ಯವಾಗಿ ಲಕ್ಷಣವಿರುವುದು. ಅವರಿಗಿಂತಲೂ ಪರಮಾತ್ಮನಲ್ಲಿ ಅತಿಮುಖ್ಯವಾಗಿ ಲಕ್ಷಣವಿರುವುದು ಭಗವಂತನಂತೆ ಯಾರಿಗೂ ಇರುವುದಿಲ್ಲ.

ಅರ್ಜುನನು ಕುದುರೆಯಿಂದ ಸಹಿತನಾಗಿ ಯಜ್ಞಶಾಲೆಯನ್ನು ಪ್ರವೇಶಿಸಲು ಕೃಷ್ಣಪರಮಾತ್ಮನಿಂದ ಸಹಿತರಾದ ಸಹೋದರರು ಸತ್ಕರಿಸಿದರು. ತರುವಾಯ ಶ್ರೀಕೃಷ್ಣಪರಮಾತ್ಮನಿಂದ ರಕ್ಷಿತವಾದ, ವೇದವ್ಯಾಸದೇವರಿಂದ ಉಪದಿಷ್ಟವಾದ ಮುನಿಗಳಿಂದ ಪ್ರವರ್ತಿಸಲ್ಪಟ್ಟ, ಬಂದಿರುವ ಸಕಲ ರಾಜರಿಂದಲೂ ಬ್ರಾಹ್ಮಣ ರಿಂದಲೂ ಸೇವಿತವಾದ ಯಾಗವು ಅತ್ಯಂತ ಶೋಭಿತವಾಯಿತು. ಕೃಷ್ಣ ವೇದವ್ಯಾಸ ಪರಶುರಾಮ ಎಂಬ ಮೂರು ರೂಪವುಳ್ಳ ಭಗವಂತನಿಂದ ಪ್ರೇರಿತವಾದ ಆ ಯಾಗವು ಅತ್ಯಂತ ಶೋಭಿತವಾಗಿತ್ತು. ಪೂರ್ವದಲ್ಲಿ ಬ್ರಹ್ಮದೇವರ ಯಜ್ಞವೂ ಇಂದ್ರದೇವರ ಯಜ್ಞವೂ ಹೇಗೆ ನಡೆಯಿತೋ ಹಾಗೆಯೇ ಆ ಯಜ್ಞವು ಬ್ರಹ್ಮ ರುದ್ರ ಇಂದ್ರಾದಿದೇವತೆಗಳಿಂದ ಅತ್ಯಂತ ಅಲಂಕೃತವಾಗಿತ್ತು. ದೇವತೆಗಳೂ ಗಂಧರ್ವರೂ ಧರ್ಮಿಷ್ಠರಾದ ಮನುಷ್ಯರೂ ಎಲ್ಲರೂ ಆ ಯಜ್ಞಕ್ಕೆ ಬಂದಿದ್ದರು. ಅಲಂಕೃತರಾದ ಪತ್ನೀಸಹಿತರಾದ ದೇವತೆಗಳಿಂದ ಸ್ವರ್ಗಲೋಕದಂತೆ ಆ ಯಜ್ಞಶಾಲೆಯು ಶೋಭಿಸಿತ್ತು. ಅಲ್ಲಿಯೇ ವಿಚಾರವು ನಡೆದು ಕೃಷ್ಣ ವ್ಯಾಸ ಪರಶುರಾಮ ಎಂದು ಮೂರು ಹೆಸರುಳ್ಳ ಭಗವಂತನಿಂದ ಎಲ್ಲಾ ಸಂದೇಹಗಳೂ ಪರಿಹರಿಸಲ್ಪಡುತ್ತಿದ್ದವು. ಅಲ್ಲಿ ಗಂಧರ್ವರು ಗಾಯನ ಮಾಡುತ್ತಿದ್ದರು. ಅಪ್ಸರಸ್ತ್ರೀಯರು ನರ್ತನ ಮಾಡುತ್ತಿದ್ದರು. ಬ್ರಾಹ್ಮಣರು ವಾಕ್ಯಾರ್ಥವನ್ನು ಹೇಳುತ್ತಿದ್ದರು. ಅಲ್ಲಿ ದೇವತೆಗಳೂ ರಾಜರೂ ಅಲಂಕರಿಸಿಕೊಂಡು ಕೂತಿದ್ದರು. ನೋಡಿದರೆ ಯಾರು ದೇವತೆಗಳು ಯಾರು ಮನುಷ್ಯರು ಎಂದು ತಿಳಿಯುತ್ತಿರಲಿಲ್ಲ. ದೇವತೆಗಳು ತಾನು ದೇವತೆಗಳೆಂದು ಹೇಳಿಕೊಂಡರೇನೇ ತಿಳಿಯುತ್ತಿತ್ತು.

ಅಲ್ಲಿ ಬೇಕಾದ ಅಭೀಷ್ಟವು ಸಿಕ್ಕುತ್ತಿತು. ಪ್ರತಿನಿತ್ಯವೂ ಪರ್ವತಾಕಾರವಾಗಿ ಅನ್ನದ ರಾಶಿಗಳನ್ನು ಭಕ್ಷಗಳ ರಾಶಿಗಳನ್ನು ಮಾಡುತ್ತಿದ್ದರು. ಹಾಲು ತುಪ್ಪ ಜೇನುತುಪ್ಪಗಳ ನದಿಗಳೇ ಹರಿಯುತ್ತಿದ್ದವು. ಪಾಯಸದ ಮಡುವೇ ಆಗಿತ್ತು. ಕಣ್ಣಿಗೆ ಹಚ್ಚಿಕೊಳ್ಳುವ ಕಪ್ಪು ಇತ್ಯಾದಿ ಅಲಂಕಾರ ದ್ರವ್ಯಗಳ ಇಳಿಭಾವಿಗಳನ್ನು ಮಾಡಿದ್ದರು. ಭೋಜನಾದಿ ಸಮಸ್ತ ವ್ಯವಸ್ಥೆಯನ್ನೂ ಭೀಮಸೇನದೇವರು ಚೆನ್ನಾಗಿ ಮಾಡಿದ್ದರು. ರಾಮದೇವರೂ ಬ್ರಹ್ಮದೇವರೂ ಇಂದ್ರದೇವರೂ ಮಾಡಿದ ಯಾಗಗಳನ್ನು ಹೊರತು ಮತ್ತೆ ಯಾವ ಯಾಗವೂ ಈ ಯಾಗಕ್ಕೆ ಸರಿಯಾದಿ ನಡೆಯಿಲ್ಲವೆಂದು ಜನರು ಆ ಯಾಗವನ್ನು ನೋಡಿ ಹೇಳಿದರು. ಹೀಗೆ ಐದು ಅಶ್ವಮೇಧಯಾಗಗಳು ಹದಿನೈದು ದಿನಗಳವರೆಗೆ ನಡೆದವು. ಯಜ್ಞವು ಮುಗಿದ ಮೇಲೆ ಎಲ್ಲಾ ಪಾಂಡವರೂ ದ್ರೌಪದೀದೇವಿಯರೂ ಧನಸಹಿತವಾದ ಭೂಮಿಯನ್ನು ಪತ್ನಿಯ ದೇಹದಲ್ಲಿ ಮಾಂಗಲ್ಯಸೂತ್ರವನ್ನು ಬಿಟ್ಟು

ಸಮಸ್ತ ಆಭರಣಗಳನ್ನು ಋತ್ವಿಕ್‌ಗಳಿಗೆ ಕೊಡುವುದಕ್ಕಾಗಿ ವೇದವ್ಯಾಸದೇವರಲ್ಲಿ ಸಮರ್ಪಿಸಿದರು. ವೇದದಲ್ಲಿ ಹೇಳಿದ ರೀತಿಯಾಗಿ ದಕ್ಷಿಣೆ ಮೊದಲಾದವನ್ನು ವಿಭಾಗ ಮಾಡುವುದು ಪರಮಾತ್ಮನಿಗೆ ಪ್ರಿಯವಾದ ಕಾರಣ ಪರಮಾತ್ಮನೊಡನೆ ವಿಭಾಗ ಮಾಡಲಿಕ್ಕೆ ಕೊಟ್ಟರು. ತಮ್ಮ ದೇಹೇಂದ್ರಿಯಗಳನ್ನು ಪರಮಾತ್ಮನಿಗೆ ಸಮರ್ಪಿಸಿ ನಮಸ್ಕರಿಸಿದರು. 'ಎಲ್ಲವೂ ನಿಮಗೇ ಸೇರಿದ್ದು. ನಮ್ಮದೊಂದೂ ಇಲ್ಲ. ನೀವೊಬ್ಬರೇ ಸ್ವತಂತ್ರರು' ಎಂದು ಹೇಳಿದರು.[1]

ತರುವಾಯ ವೇದವ್ಯಾಸದೇವರು ಮುನಿಗಳಿಗೆಲ್ಲಾ ವಿಭಾಗ ಮಾಡಿಕೊಡಲು ಆ ಮುನಿಗಳು 'ನಾವು ರಾಜ್ಯವನ್ನೆಲ್ಲಾ ಪಾಂಡವರಿಗೇ ಸಮರ್ಪಿಸುವೆವು. ನಮಗೆ ಬಂಗಾರವೇ ಸಾಕು. ಭೂಮಿಯಲ್ಲಿ ಆಳಲಿಕ್ಕೆ ಪಾಂಡವರೇ ಯೋಗ್ಯರು' ಎಂದು ಹೇಳಿದರು. ಆಗ ಪಾಂಡವರು 'ನಾವು ಧರ್ಮದಿಂದ ಹೊಂದಿದ ರಾಜ್ಯವನ್ನು ಯಾಗದ ಕೊನೆಗೆ ಬ್ರಾಹ್ಮಣರಿಗೆ ಸಮರ್ಪಿಸಿ ಕಾಡಿನಲ್ಲಿ ಹೋಗಿ ತಪಸ್ಸನ್ನೇ ಮಾಡುತ್ತಿರುವೆವು' ಎಂದು ಹೇಳಿದರು. ಹೀಗೆ ಪಾಂಡವರು ಹೇಳಲು ಋಷಿಗಳೂ ಪ್ರಾರ್ಥಿಸಲು ವೇದವ್ಯಾಸದೇವರು 'ಬಂಗಾರವು ಮುನಿಗಳಿಗೆ ಸೇರಿದ್ದು. ನನ್ನ ಆಜ್ಞೆಯಿಂದ ಸಮಸ್ತ ರಾಜ್ಯವನ್ನು ಅನುಭವಿಸಿರಿ. ನನಗೆ ಸಮರ್ಪಿಸಿದ್ದರಿಂದ ನಿಮಗೆ ಸಮರ್ಪಿಸಿದ ಫಲವು ಬರುವುದು. ನಾನು ನಿಮಗೆ ವಿಶೇಷವಾಗಿ ಪಿತಾಮಹ ನಾಗಿಯೂ, ಗುರುವಾಗಿಯೂ, ಸ್ವಾಮಿಯಾಗಿಯೂ ಇರುವುದರಿಂದ ನಾನು ಕೊಟ್ಟ ರಾಜ್ಯವನ್ನು ನೀವು ಪುನಃ ಸ್ವೀಕರಿಸುವುದರಿಂದ ನಿಮಗೆ ಯಾವ ದೋಷವೂ ಬರಲಾರದು' ಎಂದು ಹೇಳಲು ಪಾಂಡವರು ರಾಜ್ಯವನ್ನು ಸ್ವೀಕರಿಸಲು ಸಮಸ್ತ ಬಂಗಾರವನ್ನೂ ವಿಭಾಗಮಾಡಿ ಬ್ರಾಹ್ಮಣರಿಗೆ ಕೊಡುವುದಕ್ಕಾಗಿ ಕೊಟ್ಟರು. ವೇದವ್ಯಾಸದೇವರು ಅದನ್ನು ವಿಭಾಗಮಾಡಿ ಬ್ರಾಹ್ಮಣರಿಗೆ ಕೊಟ್ಟು ತಾನೂ ಯಾಗ ದಲ್ಲಿ ಮಾಡಿದ ಕಾರ್ಯಕ್ಕಾಗಿ ತನ್ನ ಭಾಗಕ್ಕೆ ಬಂದ ಬಂಗಾರವನ್ನು ಕುಂತೀದೇವಿಗೆ ಕೊಟ್ಟರು. ಪತ್ನೀಸಹಿತರಾದ ಪಾಂಡವರಿಗೆ ಒಬ್ಬೊಬ್ಬರಿಗೂ ರತ್ನಾಭರಣಗಳನ್ನು ಕೊಟ್ಟರು. ವೇದವ್ಯಾಸದೇವರು ಪಾಂಡವರು ಮಾಡಿದ ಐದು ಯಾಗಗಳಲ್ಲಿಯೂ ಒಂದೊಂದು ಯಾಗದಲ್ಲಿಯೂ ಮೂರು ಪಾಲು ದಕ್ಷಿಣೆಯನ್ನು ಕೊಡಿಸಿ ಒಂದೊಂದು ಯಾಗವೂ ಮೂರು ಯಾಗಗಳ ಫಲವುಂಟಾಗುವಂತೆ ಮಾಡಿದರು.



1. ''ತ್ವದೀಯಮೇತನ್ನಿಖಿಲಂ ವಯಂಚ ನತ್ವಸ್ಮದೀಯಂ ಕ್ವಚ ಕಿಂಚನೇಶ''

ಮ.ತಾ.ನಿ. ಅ.30-150

# ಆಶ್ರಮವಾಸಿಕಪರ್ವ

## ಮುಂಗುಸಿಯ ಕಥೆ [1]

ಕೃಷ್ಣಪರಮಾತ್ಮನಿಂದ ಸಹಿತರಾದ ಪಾಂಡವರು ಅವಭೃಥಸ್ನಾನ ಮಾಡಿದರು. ಐದು ಇಂದ್ರರಂತೆ ಶೋಭಿಸುತ್ತಿದ್ದರು. ಋಷಿಗಳೆಲ್ಲರೂ ಪಾಂಡವರನ್ನು ಅವರು ಮಾಡಿದ ಯಾಗವನ್ನೂ ಸ್ತೋತ್ರ ಮಾಡುತ್ತಿದ್ದರು. ಆ ಸಮಯದಲ್ಲಿ ಕ್ರೋಧಕ್ಕೆ ಅಭಿಮಾನಿಯಾದ ದೈತ್ಯನು ಮುಂಗುಸಿಯ ರೂಪವನ್ನು ಧರಿಸಿಕೊಂಡು ಬಂದು ಭಯಂಕರವಾದ ಗರ್ಜನೆಯನ್ನು ಮಾಡಿ ಆ ಯಜ್ಞವನ್ನು, ಯಜ್ಞಮಾಡಿದವರನ್ನೂ ಎಲ್ಲರನ್ನೂ ನಿಂದಿಸಿ 'ಉಂಛವೃತ್ತಿಯ ಬ್ರಾಹ್ಮಣನೊಬ್ಬನು ಅತಿಥಿರೂಪದಿಂದ ಬಂದಿರುವ ಯಮದೇವರಿಗೆ ಪತ್ನಿಯಿಂದಲೂ ಮಗನಿಂದಲೂ ಸೊಸೆಯಿಂದಲೂ ಭಕ್ತಿಯಿಂದ ಹಿಟ್ಟನ್ನು ಕೊಟ್ಟನು. ಈ ಯಜ್ಞವು ಅವನು ಮಾಡಿದ ಅತಿಥಿಸತ್ಕಾರದ ಫಲದ ಹದಿನಾರನೇ ಒಂದು ಅಂಶವನ್ನು ಹೊಂದಲಾರದು' ಎಂದನು. ಆಗ ಬ್ರಾಹ್ಮಣರು ಅದೇಕೆ ಎಂದು ಕೇಳಲು ಆ ಮುಂಗುಸಿಯು 'ಆ ಬ್ರಾಹ್ಮಣನು ಅತಿಥಿಯ ಪಾದವನ್ನು ತೊಳೆದ ನೀರಿನಲ್ಲಿ ನಾನು ಹೊರಳಾಡಲು ಒಂದು ಪಾರ್ಶ್ವವು ಬಂಗಾರಮಯವಾಯಿತು. ಇನ್ನೊಂದು ಭಾಗವೂ ಬಂಗಾರಮಯವಾಗಬೇಕೆಂದು ಎಲ್ಲಾ ತೀರ್ಥಗಳಲ್ಲಿಯೂ ಸ್ನಾನ ಮಾಡಿದೆನು. ಎಲ್ಲಾ ಯಾಗಗಳಲ್ಲಿಯೂ ಈ ಯಾಗಗಳಲ್ಲಿಯೂ ಅವಭೃಥಸ್ನಾನ ಮಾಡುವಾಗ ಸ್ನಾನ ಮಾಡಿದೆನು. ಆದರೂ ನನ್ನ ಇನ್ನೊಂದು ಭಾಗವು ಬಂಗಾರಮಯವಾಗಲಿಲ್ಲ. ಆದುದರಿಂದ ಈಗ ಯಾಗವು ಶ್ರೇಷ್ಠವಲ್ಲ' ಎಂದು ಹೇಳಿತು.

ಆಗ ತತ್ವವನ್ನು ತಿಳಿದ ಋಷಿಗಳೂ ಕೃಷ್ಣಪರಮಾತ್ಮನೂ ಅದು ಹಾಗೆಯೇ ತಿಳಿದುಕೊಂಡು ಅಂಧಂತಮಸ್ಸಿಗೆ ಹೋಗಲಿ ಎಂಬ ಅಭಿಪ್ರಾಯದಿಂದ ಮಂದಹಾಸವನ್ನು ಮಾಡಿ ಸುಮ್ಮನೆ ಇದ್ದರು. ಮುಂಗುಸಿಯು ಮರೆಯಾಗಿ ಹೋಯಿತು. ಕ್ರಮದಿಂದ ಅಂಧಂತಮಸ್ಸನ್ನು ಹೊಂದಿತು. ಹಾಗೆ ಅದು ಅಂಧಂತಮಸ್ಸಿಗೆ ಹೋಗುವುದಕ್ಕಾಗಿ ಪೂರ್ವದಲ್ಲಿ ಅದರ ಪಾರ್ಶ್ವವು ಬಂಗಾರ ಮಯವಾಗಿದ್ದಿತು. ತರುವಾಯ ಭಗವಂತನ ಅಭಿಪ್ರಾಯವನ್ನು ತಿಳಿದವರಾದ ಋಷಿಗಳು ಪಾಂಡವರ ಮತ್ತು ಆ ಯಾಗದ ಬಹುಗುಣಗಳನ್ನು ಹೇಳುತ್ತಾ ಮುಂಗುಸಿಯನ್ನು ಗದರಿಸಿದರು. ಪೂರ್ವದಲ್ಲಿ ಕ್ರೋಧಾಭಿಮಾನಿ ದೈತ್ಯನು ಜಮದಗ್ನಿ ಋಷಿಗಳು ಶ್ರಾದ್ಧಕ್ಕಾಗಿ ಇಟ್ಟಿದ್ದ ಹಾಲನ್ನು ಮುಂಗುಸಿಯ ರೂಪದಿಂದ ಹೋಗಿ

1. ಮ.ತಾ.ನಿ. ಅ-30

ಕುಡಿದು ಎಂಜಲು ಮಾಡಿ ದೂಷಿಸಿದನು. ಆಗ ಪಿತೃಗಳು 'ನೀನು ಯಮದೇವರೇ ಮೊದಲಾದ ದೇವತೆಗಳನ್ನು ಆಕ್ಷೇಪಿಸುವವರೆಗೆ ಮುಂಗುಸಿಯಾಗಿಯೇ ಇರು' ಎಂದು ಶಾಪವನ್ನು ಕೊಟ್ಟರು. ಅವನು ಹಾಗೆ ಮಾಡಿ ತಮಸ್ಸನ್ನು ಹೊಂದಲಿ ಎಂಬ ಅಭಿಪ್ರಾಯದಿಂದ ಪಿತೃಗಳು ಹಾಗೆ ಶಾಪಕೊಡಲು ಕ್ರೋಧಾಭಿಮಾನಿಯು ಹಾಗೆ ಮಾಡಿ ತಮಸ್ಸನ್ನು ಹೊಂದಿದನು.

ಲೋಕದಲ್ಲಿ ಸ್ವಲ್ಪ ಹಣವುಳ್ಳವನು ಇದ್ದ ಹಣದಲ್ಲಿ ಶಕ್ತಿಮೀರಿ ದಾನ ಮಾಡಿದರೆ ಮಹಾಫಲವುಂಟಾಗುವುದು. ಆದರೂ ಮಾಡತಕ್ಕವರಲ್ಲಿ ಭಗವಂತನಜ್ಞಾನ ಭಕ್ತ್ಯಾದಿ ಗುಣಗಳಿದ್ದರೆ ಅವರು ಹಣವಂತರಾದರೂ ಅವರು ಮಾಡಿದ ಪುಣ್ಯಕರ್ಮಗಳು ಮಹಾಫಲಕ್ಕೆ ಕಾರಣವಾಗುವುವು. ಅವರು ಮಾಡಿದ ಕರ್ಮದಿಂದ ಸಜ್ಜನರು ಪ್ರೀತಿಯನ್ನು ಹೊಂದುವುದಾದರೆ ಆ ಕರ್ಮವು ಮತ್ತಷ್ಟು ಫಲಕ್ಕೆ ಕಾರಣವಾಗುವುದು. ಸಜ್ಜನರಲ್ಲಿ ಪರಮಾತ್ಮನು ಶ್ರೇಷ್ಠನು. ಅವನು ಪಾಂಡವರು ಮಾಡಿದ ಯಾಗವನ್ನು ನೋಡಿ ಸಂತೋಷವನ್ನು ಹೊಂದಿರುವನು. ಪಾಂಡವರಿಗಿಂತ ಅಧಿಕನಾಗಿಯೋ ಅವರಿಗೆ ಸಮನಾಗಿಯೋ ಪುಣ್ಯಕರ್ಮವನ್ನು ಮಾಡುವ ಪುರುಷನು ಬೇರೊಬ್ಬನು ಇರುವುದಿಲ್ಲ. ಸಜ್ಜನರಲ್ಲಿ ಶ್ರೇಷ್ಠನಾದ ಪರಮಾತ್ಮನು ಸಜ್ಜನರಾದ ಋಷಿಗಳಿಂದ ಕೂಡಿಕೊಂಡು ಪ್ರತ್ಯಕ್ಷವಾಗಿ ಕೂತುಕೊಂಡು ತನಗೆ ಅತ್ಯಂತ ಪ್ರಿಯರಾದ ಪಾಂಡವರಿಂದ ಮಾಡಿಸಿದ ಆ ಯಾಗಕ್ಕೆ ಸಮವಾದ ಪುಣ್ಯಕರ್ಮವು ಬೇರೆಯಾವುದು ಇರುವುದು?

ವಿಷ್ಣುಭಕ್ತಿರಹಿತರು ಮಾಡಿದ ಕರ್ಮವು ಅನಿತ್ಯಫಲಕ್ಕೆ ಕಾರಣವಾಗುವುದು. ವಿಷ್ಣುಭಕ್ತಿಯುಳ್ಳವರು ಮಾಡಿದ ಕರ್ಮವು (ನಿತ್ಯಫಲಕ್ಕೆ) ಅನಂತಫಲಕ್ಕೆ ಕಾರಣವಾಗುವುದು. ವರ್ಣಕ್ರಮದಿಂದ ಫಲವು ಹೆಚ್ಚಾಗುವುದು. ವಿಷ್ಣುಭಕ್ತರಲ್ಲಿಯೂ ಮನುಷ್ಯರು ಮಾಡಿದ ಕರ್ಮಕ್ಕಿಂತಲೂ ಗಂಧರ್ವರು ಮಾಡಿದ ಕರ್ಮವೂ, ಅದಕ್ಕಿಂತ ಪಿತೃಗಳು ಮಾಡಿದ ಕರ್ಮವೂ,. ಅದಕ್ಕಿಂತ ಋಷಿಗಳು ಮಾಡಿದ ಕರ್ಮವೂ, ಆಮೇಲೆ ದೇವತೆಗಳು ಇಂದ್ರದೇವರು ರುದ್ರದೇವರು ಬ್ರಹ್ಮದೇವರು ಮಾಡಿದ ಕರ್ಮಗಳೂ ಕ್ರಮದಿಂದ ನೂರೂಪಾಲು ಅಧಿಕ ಫಲವುಳ್ಳದ್ದಾಗುವುವು. ಬ್ರಹ್ಮದೇವರು ಮಾಡಿದ ಪುಣ್ಯಕರ್ಮಕ್ಕೆ ಸಮಾನವಾದದ್ದು ಮತ್ತೊಂದು ಇರಲಾರದು. ಏಕೆಂದರೆ ಬ್ರಹ್ಮದೇವರಲ್ಲಿ ವಿಷ್ಣುಭಕ್ತಿಯು ಅಧಿಕವಾಗಿರುವುದು. ಪರಮಾತ್ಮನ ಪ್ರೀತಿಯಿಂದಲೇ ಕರ್ಮಗಳಿಗೆ ಅಧಿಕ ಫಲವುಂಟಾಗುವುದು. ಆದುದರಿಂದ ಬ್ರಹ್ಮದೇವರ ಸಮಾನರಾದ ವಾಯುದೇವರ

ಅವತಾರಭೂತರಾದ ಭೀಮಸೇನದೇವರಿಂದ ಸಹಿತರಾದ ಪಾಂಡವರು ಮಾಡಿದ ಯಾಗಕ್ಕೆ ಸಮಾನವಾದದ್ದು ಉಂಛವೃತ್ತಿಯ ಬ್ರಾಹ್ಮಣನು ಮಾಡಿದ ಅತಿಥಿ ಸತ್ಕಾರವು ಎಂದು ಹೇಳಲಿಕ್ಕೆ ಆಗಲಾರದು. ತಾಮಸನಾದ ಕ್ರೋಧಾಭಿಮಾನಿಯು ಪರಮ ಸಾತ್ವಿಕರಾದ ಪಾಂಡವರನ್ನು ನಿಂದಿಸಿ ತಮಸ್ಸಿಗೆ ಹೋದನು. ಧರ್ಮರಾಜನು ಕೇಳಲು ಕೃಷ್ಣಪರಮಾತ್ಮನು ದೇವತೆಗಳು ಬ್ರಾಹ್ಮಣರೂ ಕೂತಿದ್ದ ಸಭೆಯಲ್ಲಿ ಎಲ್ಲವನ್ನೂ ವಿಸ್ತಾರವಾಗಿ ಹೇಳಿದನು. ಅವರೆಲ್ಲರೂ ಎಲ್ಲಾ ಧರ್ಮಗಳನ್ನು ಕೇಳಿ ಪರಮಭಕ್ತಿಯುಳ್ಳವರಾಗಿ ಭಗವಂತನನ್ನು ಪೂಜಿಸುತ್ತಾ ಪರಮಸಂತೋಷವನ್ನು ಹೊಂದಿದರು.



## ದಾನವನ್ನು ಬೇಗನೆ ಮಾಡಬೇಕು [1]

ಪೂರ್ವದಲ್ಲಿ ಧರ್ಮಿಷ್ಠನಾದ ಯುಧಿಷ್ಠಿರನು ನಿತ್ಯವೂ ದಾನವನ್ನು ಮಾಡುತ್ತಿದ್ದನು. ತನ್ನ ಮನೆಯ ಮುಂದಿನ ಭಾಗದಲ್ಲಿ ಒಂದು ನಗಾರಿಯನ್ನು ಇಡಿಸಿದ್ದನು. ಯಾರಾದರೂ ಬಂದು ಆ ನಗಾರಿಯನ್ನು ಬಡಿದರೆ ಅವನನ್ನು ಸಮೀಪಕ್ಕೆ ಕರೆಸಿ ಬೇಕಾದ ಅಭೀಷ್ಟವನ್ನು ಕೊಡುವೆನೆಂದು ಪ್ರಸಿದ್ಧಿಪಡಿಸಿದ್ದನು. ಒಂದುದಿನ ಮಧ್ಯರಾತ್ರಿಯಲ್ಲಿ ಒಬ್ಬ ಬ್ರಾಹ್ಮಣನು ಬಂದು ನಗಾರಿಯನ್ನು ಬಡಿದನು. ಆಭೇರಿಯ ಶಬ್ದವನ್ನು ಕೇಳಿ ಬೇಗನೆ ಧರ್ಮರಾಜನು ದೂತರನ್ನು ಕಳುಹಿಸಿದನು. ದೂತರು ಆ ಬ್ರಾಹ್ಮಣನ ಬಳಿಗೆ ಹೋಗಿ ವಿಚಾರಿಸಿಕೊಂಡು ಬಂದು ಧರ್ಮರಾಜನೊಡನೆ ತಿಳಿಸಿದರು. ಧರ್ಮರಾಜನು ನಾಳೆ ಬೆಳಿಗ್ಗೆ ಬರಲಿ. ಆಗಬೇಕಾದ ಅಭೀಷ್ಟವನ್ನು ಕೊಡುವೆನು. ಹೀಗೆಯೇ ಆ ಬ್ರಾಹ್ಮಣನ ಹತ್ತಿರ ತಿಳಿಸಿರಿ ಎಂದು ದೂತರ ಹತ್ತಿರ ಹೇಳಿ ಕಳುಹಿಸಿದನು. ಆಗಲೇ ಬ್ರಾಹ್ಮಣನು ಅಲ್ಲಿಂದ ಭೀಮಸೇನದೇವರ ಮನೆಗೆ ಹೋಗಿ ಅಲ್ಲಿದ್ದ ನಗಾರಿನ್ನು ಬಡೆದನು. ಅದನ್ನು ಕೇಳಿ ಭೀಮಸೇನದೇವರು ಆಗಲೇ ಬ್ರಾಹ್ಮಣನನ್ನು ಕರೆಸಿ ಬೇಕಾದ ಅಭೀಷ್ಟವನ್ನು ಕೊಟ್ಟರು. ಧರ್ಮರಾಜನು ನಾಳೆ ಕೊಡುವೆನೆಂದು ಹೇಳಿದ್ದನ್ನು ತಿಳಿದು ಸಂತೋಷ ಸೂಚಕವಾದ ನಗಾರಿಯ ಶಬ್ದವನ್ನು ಮಾಡಿದರು. ಅದನ್ನು ಧರ್ಮರಾಜನು ಕೇಳಿ ಈ ರಾತ್ರಿಕಾಲದಲ್ಲಿ ಭೀಮಸೇನನಿಗೆ ಸಂತೋಷಕ್ಕೆ ಕಾರಣವೇನಿರಬಹುದು ಎಂದು ಯೋಚಿಸಿ ಬೇಗನೆ ತನ್ನ ದೂತರನ್ನು

1. ಮ.ತಾ.ನಿ. ಅ-31; ವರಾಹಪುರಾಣ. ಚಾತುರ್ಮಾಸ್ಯ ಮಾಹಾತ್ಮ್ಯ ಅ.23.

ಭೀಮಸೇನ ದೇವರಿದ್ದಲ್ಲಿಗೆ ಕಳುಹಿಸಿದನು. ಭೀಮಸೇನದೇವರು ದೂತರೊಡನೆ 'ಧರ್ಮರಾಜನಿಗೆ ನಾಳೆಯವರೆಗೆ ಬದುಕುವೆನೆಂದು ತನ್ನ ಆಯುಷ್ಯದ ನಿಶ್ಚಯ ವಿದೆಯಷ್ಟೆ! ಆದುದರಿಂದಲೇ ಯಾಚನೆಗೆ ಬಂದ ಬ್ರಾಹ್ಮಣನನ್ನು ನಾಳೆ ಬರ ಬೇಕೆಂದು ಹೇಳಿದನು. ಅದರಿಂದ ನನಗೆ ಬಹಳ ಸಂತೋಷವಾಯಿತು' ಎಂದರು.

ದೂತರು ಈ ವಿಷಯವನ್ನು ಹೋಗಿ ಧರ್ಮರಾಜನೊಡನೆ ತಿಳಿಸಲು ಧರ್ಮರಾಜನು ಪಶ್ಚಾತ್ತಾಪವನ್ನು ಹೊಂದಿದನು. ಭೀಮಸೇನದೇವರ ಮನೆಗೆ ಓಡಿಬಂದನು. ಅಲ್ಲಿಯೇ ಇದ್ದ ಬ್ರಾಹ್ಮಣನಿಗೆ ಬಹಳ ಹಣವನ್ನು ಕೊಟ್ಟನು. ಬ್ರಾಹ್ಮಣನು 'ನನಗೆ ಬೇಕಾದ ಹಣವನ್ನು ಭೀಮಸೇನದೇವರು ಕೊಟ್ಟಾಯಿತು. ಇನ್ನು ನಾನು ಸರ್ವಥಾ ತೆಗೆದುಕೊಳ್ಳಲಾರೆನು. ಹೆಚ್ಚಿಗೆ ಆಸೆಪಡುವುದು ಪುಣ್ಯನಾಶಕ್ಕೆ ಕಾರಣವಾದದ್ದು. ಅವಶ್ಯವಾಗಿ ಬೇಕಾದದ್ದನ್ನು ಮಾತ್ರ ಬ್ರಾಹ್ಮಣನು ಯಾಚಿಸ ಬಹುದು. ಹೆಚ್ಚಾಗಿ ಆಸೆಪಡುವವನು ಕಳ್ಳನು. ಅವನು ಶಿಕ್ಷೆಗೆ ಯೋಗ್ಯನು' ಎಂದನು. ತರುವಾಯ ಧರ್ಮರಾಜನು ಭೀಮಸೇನದೇವರನ್ನು ಆಲಿಂಗನಮಾಡಿ 'ವತ್ಸ! ನೀನು ನನಗೆ ಉತ್ತಮ ಗುರುವು. ಈಲೋಕದಲ್ಲಿಯೂ ಪರಲೋಕದಲ್ಲಿಯೂ ಶ್ರೇಯಸ್ಸಾಗಲಿಕ್ಕೆ ಬೇಕಾದ ಸಾಧನೆಯನ್ನು ಮಾಡಿರುವೆ. ನಾನು ಮೋಸಹೋದೆನು. ನನಗೆ ಧಿಕ್ಕಾರವಿರಲಿ' ಈಪ್ರಕಾರವಾಗಿ ಹೇಳುತ್ತಾ ಭೀಮಸೇನದೇವರನ್ನು ಸ್ತೋತ್ರ ಮಾಡುತ್ತಾ ತುಂಬಾ ದುಃಖವನ್ನು ಹೊಂದಿದನು.

ಆ ಸಮಯದಲ್ಲಿ ಬ್ರಾಹ್ಮಣನ ಸ್ಥಾನದಲ್ಲಿ ಕೃಷ್ಣಪರಮಾತ್ಮನು ನಿಂತಿದ್ದನು. ಅಂದರೆ ಕೃಷ್ಣಪರಮಾತ್ಮನೇ ಧರ್ಮರಾಜನನ್ನು ಪರೀಕ್ಷಿಸಲು ಬ್ರಾಹ್ಮಣರೂಪದಿಂದ ಬಂದಿದ್ದನು. ದುಃಖಯುಕ್ತನಾದ ಧರ್ಮರಾಜನನ್ನು ಕೃಷ್ಣಪರಮಾತ್ಮನು ಸಮಾಧಾನಪಡಿಸಿದನು. 'ಧರ್ಮರಾಜ! ದಾನ ಮೊದಲಾದ ಧರ್ಮಕಾರ್ಯವನ್ನು ಮಾಡುವಾಗ ಸಾವಕಾಶಮಾಡಬಾರದು ಎಂಬುದನ್ನು ನಿನಗೆ ತಿಳಿಸಲಿಕ್ಕೋಸ್ಕರವೇ ನಾನು ಬ್ರಾಹ್ಮಣರೂಪದಿಂದ ನಿನ್ನ ಬಳಿಗೆ ಬಂದಿರುವೆನು. ಧರ್ಮಕಾರ್ಯವನ್ನು ಮಾಡಲಿಕ್ಕೆ ಸಾವಕಾಶಮಾಡಿ ಬಹುಜನರು ಮೋಸಹೋಗಿದ್ದಾರೆ. ಪೂರ್ವದಲ್ಲಿ ಕೃತಯುಗದಲ್ಲಿ ಸಂಜಯ ಎಂಬ ವೈಶ್ಯನಿದ್ದನು. ಅವನು ಮಿಥಿಲಾನಗರದಲ್ಲಿ ಇದ್ದನು. ಬಹಳ ಹಣವಂತನಾಗಿದ್ದನು. ಅವನು ಕಾಶಿಗೆ ಹೋದನು. ಸೂರ್ಯಗ್ರಹಣ ಕಾಲದಲ್ಲಿ ಬ್ರಾಹ್ಮಣರಿಗೆ ದಾನಮಾಡಲಿಕ್ಕೆಂದು ಬಹಳ ಹಣವನ್ನು ತೆಗೆದುಕೊಂಡು ಹೋದನು. ಬಹಳ ದನಗಳನ್ನು ತೆಗೆದುಕೊಂಡು ಹೋದನು. ಗ್ರಹಣವು ಓಡಿಯಿತು. ಸಂಜಯನು ಸ್ನಾನಮಾಡಲಿಕ್ಕೆ ಗಂಗೆಗೆ ಇಳಿದನು. ಆಗಲೇ

ಎಲ್ಲಿಂದಲೋ ಬಂದು ಒಂದು ಮೊಸಳೆಯು ಅವನನ್ನು ಎಳೆದು ಕೊಂಡು ನೀರಿನ ಮಧ್ಯಕ್ಕೆ ಹೋಗಿಬಿಟ್ಟಿತು. ಆಗಲೇ ಸಂಜಯನು ಸತ್ತನು ಎಂದು ಮಹತ್ತಾದ ಹಾಹಾಕಾರವುಂಟಾಯಿತು. ಆಮೇಲೆ ಅವನ ಮಗನಾದ ಸುಧರ್ಮನು ಅವನು ತಂದಿರುವ ಹಣವನ್ನೆಲ್ಲಾ ಬ್ರಾಹ್ಮಣರಿಗೆ ದಾನಮಾಡಿದನು. ಹೀಗೆ ಒಳ್ಳೆಯ ಕೆಲಸಕ್ಕೆ ಹೋದರೆ ಎಂಥವರಿಗೂ ವಿಘ್ನಗಳು ಬರುತ್ತವೆ. ಹೀಗೆ ದಾನ ಮಾಡಲಿಕ್ಕೆ ವಿಲಂಬವನ್ನು ಮಾಡಿ ಬಹುಜನರು ಮೋಸಹೋಗಿರುವರು' ಇತ್ಯಾದಿ ರೀತಿಯಾಗಿ ಅನೇಕ ವಿಧದಿಂದ ಧರ್ಮಗಳನ್ನು ಉಪದೇಶಮಾಡಿ ಹೋದನು.



# ಧೃತರಾಷ್ಟ್ರನು ಕಾಡಿಗೆ ಹೋದದ್ದು [1]

ಶ್ರೀಭಗವಂತನಿಂದ ಸಹಿತರಾಗಿ ಪಾಂಡವರು ಭೂಮಿಯನ್ನು ಆಳುತ್ತಿರಲು ಒಂದು ದಿನದಲ್ಲಿ ರಾತ್ರಿಯಲ್ಲಿ ಒಬ್ಬ ಬ್ರಾಹ್ಮಣನು ಯಾಗವನ್ನು ಮಾಡುವ ಅಭಿಪ್ರಾಯದಿಂದ ಹಣವನ್ನು ಕೇಳಲಿಕ್ಕೆ ಧರ್ಮರಾಜನ ಬಳಿಗೆ ಹೋದನು. ಆಗ ಧರ್ಮರಾಜನು ನಾಳೆ ಬೆಳಿಗ್ಗೆ ಕೊಡುವೆನೆಂದು ಹೇಳಿದನು. ಬ್ರಾಹ್ಮಣನು ಯಜ್ಞವನ್ನು ಮಾಡಲು ಅವಸರವೆಂದು ಭೀಮಸೇನದೇವರ ಬಳಿಗೆ ಹೋಗಿ ಯಾಚನೆ ಮಾಡಿದನು. ಆಗ ಭೀಮಸೇನದೇವರು ಧರ್ಮರಾಜನು ಹೇಳಿದ ಮಾತನ್ನು ಕೇಳಿ ಕೂಡಲೇ ತನ್ನ ಕೈಯ ಆಭರಣವನ್ನು ಅವನಿಗೆ ಕೊಟ್ಟರು. ಅಗ್ನಿಯಂತೆ ಪ್ರಕಾಶಿಸುತ್ತಿರುವ ವಿಚಿತ್ರ ರತ್ನಗಳಿಂದ ಕೂಡಿದ ಆ ಆಭರಣವನ್ನು ಪಡೆದು ಬ್ರಾಹ್ಮಣನು ಕೃತಾರ್ಥನಾಗಿ ಹೊರಟು ಹೋದನು. ಆಗಲೇ ಭೀಮಸೇನದೇವರು ಸಂತೋಷಸೂಚಕವಾದ ವಾದ್ಯಘೋಷ ವನ್ನು ಮಾಡಿಸಿದರು. ಈಕಾಲದಲ್ಲಿ ಉಂಟಾದ ವಾದ್ಯಘೋಷವನ್ನು ಕೇಳಿ ಧರ್ಮರಾಜನು ಕಾರಣವೇನೆಂದು ತಿಳಿಯಲು ದೂತರನ್ನು ಕಳುಹಿಸಿದನು. ಭೀಮಸೇನದೇವರು ಮನುಷ್ಯದೇಹವುಳ್ಳ ಧರ್ಮರಾಜನು ನಾಳೆ ಬೆಳಗ್ಗಿನವರೆಗೆ ಬದುಕಿರುವೆನೆಂದು ನಿಶ್ಚಯವುಳ್ಳವರಾಗಿರುವರು ಎಂಬುದನ್ನು ತಿಳಿದು ನನಗೆ ತುಂಬಾ ಸಂತೋಷವಾಯಿತು ಎಂದು ದೂತನೊಡನೆ ಹೇಳಿದರು. ಅದನ್ನು ಹಾಗೆ ಧರ್ಮರಾಜನೊಡನೆ ತಿಳಿಸಲು ಧರ್ಮರಾಜನು ಧರ್ಮವನ್ನು ಶೀಘ್ರವಾಗಿ ಮಾಡಬೇಕೆಂಬ ಭೀಮಸೇನದೇವರ ಅಭಿಪ್ರಾಯವನ್ನು ಪೂಜಿಸುವವನಾಗಿ 'ಅದು ಸರಿ' ಎಂದನು. ಆಮೇಲೆ ಶೀಘ್ರವಾಗಿಯೇ ಧರ್ಮವನ್ನು ಮಾಡುತ್ತಿದ್ದನು.

1. ಮ.ತಾ.ನಿ. ಅ-31

ತರುವಾಯ ವಿಷಯಗಳಲ್ಲಿ ಆಸಕ್ತನಾದ, ದುಷ್ಟರಾದ ಮಕ್ಕಳ ಸಹವಾಸದಿಂದ ದುಷ್ಟನಾದ, ಬಹುದೋಷಗಳನ್ನು ಮಾಡಿರುವ, ಸಮಸ್ತರಾಜರ ನಾಶಕ್ಕೆ ಕಾರಣನಾದ ಧೃತರಾಷ್ಟ್ರನನ್ನು ನೋಡಿ ಭೀಮಸೇನದೇವರು ಅವನಲ್ಲಿ ದಯೆಯುಳ್ಳವರಾದರು. ಧೃತರಾಷ್ಟ್ರನು ತೀಕ್ಷ್ಣವಾದ ತಪಸ್ಸನ್ನು ಮಾಡದೆ ಹೀಗೆ ಸುಖವನ್ನು ಅನುಭವಿಸುತ್ತಲೇ ಇದ್ದರೆ ಅವನಿಗೆ ತನ್ನ ನಿಜಲೋಕಕ್ಕೆ ಹೋಗಲಿಕ್ಕೆ ಆಗಲಾರದು. ಅವನು ರಾಜ್ಯಸುಖದಲ್ಲಿಯೇ ಆಸಕ್ತನಾಗಿದ್ದು ತಪಸ್ಸು ಮಾಡಲಿಕ್ಕೆ ಇಚ್ಛಿಸುವುದೂ ಇಲ್ಲ. ಆದುದರಿಂದ ಅವನಿಗೆ ವೈರಾಗ್ಯವನ್ನು ಉಂಟುಮಾಡಬೇಕೆಂಬ ಅಭಿಪ್ರಾಯದಿಂದ ಧೃತರಾಷ್ಟ್ರನಿಗೆ ವೈರಾಗ್ಯಬರಲಿಕ್ಕೆ ಕಾರಣಗಳಾದ ಕರ್ಮಗಳನ್ನು ಮಾಡಿದರು. ಭೀಮಸೇನದೇವರು ಧೃತರಾಷ್ಟ್ರನನ್ನು ತನ್ನ ಸಹೋದರರೂ ಹೆಂಗಸರೂ ಅತಿ ಆದರದಿಂದ ಪೂಜಿಸುತ್ತಿದ್ದರೂ ತಾನು ಅವನ ಆಜ್ಞೆಯನ್ನು ಮೀರುತ್ತಿದ್ದನು. ಇನ್ನೊಬ್ಬರಿಂದ ಮೀರುವಂತೆ ಮಾಡುತ್ತಿದ್ದರು. ಆದರೂ ಧೃತರಾಷ್ಟ್ರನು ಇತರರಿಂದ ಸತ್ಕೃತನಾಗಿರುವ ಕಾರಣ ಅವನಿಗೆ ವೈರಾಗ್ಯವು ಬಂದಿಲ್ಲ. ಭೀಮಸೇನದೇವರನ್ನು ಬಿಟ್ಟು ಉಳಿದ ಪಾಂಡವರು ಪತ್ನೀಸಹಿತರಾಗಿ ಅತ್ಯಂತ ಆದರದಿಂದ ಧೃತರಾಷ್ಟ್ರನನ್ನೂ, ಗಾಂಧಾರಿಯನ್ನೂ ಇಬ್ಬರೂ ಮಕ್ಕಳ ದುಃಖವುಳ್ಳವರಾಗಬಾರದೆಂದು ಸೇವಿಸುತ್ತಿದ್ದರು. ದ್ರೌಪದೀದೇವಿಯರೂ ಸೇವೆಯನ್ನು ಮಾಡುತ್ತಿದ್ದರು. ಧೃತರಾಷ್ಟ್ರನು ಅವರಲ್ಲಿ ಅತ್ಯಂತ ಪ್ರೀತಿಯುಳ್ಳವನಾಗಿದ್ದನು. ಭೀಮಸೇನದೇವರು ತನ್ನ ಮಕ್ಕಳನ್ನು ಕೊಂದವರೆಂದು ಸ್ಮರಿಸಿಕೊಂಡು ಅವರ ಪ್ರಭಾವವನ್ನೂ ತಿಳಿದವನಾಗಿ ಅವರ ಮೇಲೆ ಹೆಚ್ಚಾಗಿ ಪ್ರೀತಿಯುಳ್ಳವನಾಗಿಲ್ಲ. ಭೀಮಸೇನದೇವರು ಅವನಿಗೆ ವಿಷಯಗಳಲ್ಲಿ ಆಸಕ್ತಿಯನ್ನು ತನ್ನಲ್ಲಿರುವ ದ್ವೇಷವನ್ನು ಬಿಡಿಸುವುದಕ್ಕಾಗಿ ನಕುಲಸಹದೇವರ ಎದುರಲ್ಲಿ ಬಾಹುಗಳನ್ನು ಬಡಿಯುತ್ತಾ ಧೃತರಾಷ್ಟ್ರನು ಕೇಳುವಂತೆ 'ಗಂಧವನ್ನು ಹಚ್ಚಿಕೊಂಡಿರುವ ಪುಷ್ಪಗಳಾಗಿರುವ ಗುಂಡಿಗೆ ಇರುವ ಈ ನನ್ನ ಭುಜಗಳ ಮಧ್ಯವನ್ನು ಹೊಂದಿ ಈ ಮುದುಕನ ಮಕ್ಕಳೆಲ್ಲರೂ ಸತ್ತರು' ಎಂದು ಹೇಳಿದರು. ಭೀಮಸೇನದೇವರ ಮೇಲಿನ ಸ್ನೇಹದಿಂದಲೂ ಗೌರವದಿಂದಲೂ ನಕುಲ ಸಹದೇವರು ಅದನ್ನು ಅನುಮೋದಿಸಿದರು. ಈ ವಿಷಯವು ದ್ರೌಪದೀ ದೇವಿಯರಿಗಾಗಲೀ ಕುಂತೀದೇವಿಗಾಗಲೀ ಇತರ ಪಾಂಡವರಿಗಾಗಲೀ ತಿಳಿಯಲಿಲ್ಲ.

ಭೀಮಸೇನದೇವರ ಮಾತನ್ನು ಕೇಳಿ ಧೃತರಾಷ್ಟ್ರನಿಗೆ ವೈರಾಗ್ಯವು ಉಂಟಾಗಲು ವಿದುರನು ಆ ವೈರಾಗ್ಯವನ್ನು ಹೆಚ್ಚಾಗುವಂತೆ ಮಾಡುತ್ತಾ 'ರಾಜನೇ! ನಿನಗೆ ಬದುಕಬೇಕೆಂಬ ಆಸೆಯು ಅಧಿಕವಾಗಿದೆ. ಪ್ರಾಣಿಗಳಿಗೆ ಬದುಕಬೇಕೆಂಬ ಆಸೆಯು

ಬಹಳವಾಗಿರುತ್ತದೆ. ಆ ಆಸೆಯಿಂದಲೇ ನೀನು ಭೀಮನು ಹಾಕುವ ಪಿಂಡವನ್ನು ನಾಯಿಯಂತೆ ತಿನ್ನುತ್ತಿರುವಿ. ನಿನಗೆ ಈ ರೀತಿಯಾಗಿ ಹೇಳಿದ ಭೀಮನಲ್ಲಿ ಅಪರಾಧವಿಲ್ಲ. ಆ ಭೀಮಸೇನನಿಗೆ ಅಗ್ನಿಯಿಂದ ಕೊಲ್ಲಲು ಪ್ರಯತ್ನ ಮಾಡಿಸಿದಿ. ವಿಷ ಕೊಡಿಸಿದಿ. ಹೆಂಡತಿಯನ್ನು ಸಭೆಗೆ ಎಳೆದು ತರುವಂತೆ ಮಾಡಿದಿ. ಭೂಮಿಯನ್ನು ಧನವನ್ನೂ ಅಪಹರಿಸಿದಿ. ನಿನಗೆ ಭೀಮನು ಏನು ಮಾಡಿದನು? ವಿಷಯಸುಖದಲ್ಲಿ ಆಸಕ್ತನಾದ ನಿನಗೆ ವೈರಾಗ್ಯವುಂಟಾಗಲಿ ಎಂದು ಹೀಗೆ ಹೇಳಿದನು. ಭೀಮನು ನಿನಗೆ ಉಪಕಾರಮಾಡಲಿಕ್ಕೆ ಹೀಗೆ ಮಾಡಿದನು. ಆದುದರಿಂದ ನೀನು ದ್ವೇಷವನ್ನು ಬಿಟ್ಟುಬಿಡು. ನೀನು ದ್ವೇಷಕಾಮಗಳನ್ನು ಬಿಟ್ಟು ಕಾಡಿಗೆ ಹೋಗಿ ತೀರ್ಥಸೇವೆಯನ್ನು ಮಾಡುತ್ತಾ ತಪಸ್ಸಿನಿಂದ ಪರಮಾತ್ಮನನ್ನು ಆರಾಧಿಸು. ಅದರಿಂದ ಪವಿತ್ರನಾಗುವಿ' ಎಂದು ಹೇಳಿದನು. ಆಗ ಧೃತರಾಷ್ಟ್ರನು ಭೀಮಸೇನದೇವರಲ್ಲಿ ದ್ವೇಷವನ್ನು ಬಿಟ್ಟು ವೈರಾಗ್ಯವನ್ನು ಹೊಂದಿದನು.

ತಪಸ್ಸು ಮಾಡಲಿಕ್ಕೆ ಹೋಗಲು ಧರ್ಮರಾಜನಿಂದ ಅನುಜ್ಞೆಯನ್ನು ಪಡೆಯಲು ಉಪವಾಸ ಮಾಡಿದನು. ಅವನು ಉಪವಾಸ ಮಾಡಿರುವುದನ್ನು ನಾಲ್ಕನೇ ದಿನದಲ್ಲಿ ಧರ್ಮರಾಜನು ತಿಳಿದು ಭೋಜನ ಮಾಡಬೇಕೆಂದು ಪುನಃ ಪುನಃ ಪ್ರಾರ್ಥಿಸಿದನು. ಆಗ ಧೃತರಾಷ್ಟ್ರನು ವನವಾಸಕ್ಕೆ ಹೋಗಲು ನಿನ್ನ ಅನುಜ್ಞೆಯನ್ನು ಪಡೆದು ಭೋಜನ ಮಾಡುವೆನು. ಇಲ್ಲವಾದರೆ ಇಲ್ಲ' ಎಂದು ಹೇಳುತ್ತಾ ಉಪವಾಸ ಮಾಡಿ ಕೃಶನಾಗಿದ್ದ ಕಾರಣ ಶ್ರಮದಿಂದ ಮೂರ್ಛಿತನಾಗಿ ಒಂದು ಕ್ಷಣ ಗಾಂಧಾರಿಯನ್ನು ಆಶ್ರಯಿಸಿದನು. ಆಗ ಧರ್ಮರಾಜನು ಮೆಲ್ಲನೆ ಕೈಯಿಂದ ತಡವರಿಸಿ ಜ್ಞಾನಬರುವಂತೆ ಮಾಡಿದನು. ಆಮೇಲೆ ದುಃಖವುಳ್ಳವನಾಗಿ 'ಯುಯುತ್ಸುವನ್ನು ಮುಂದೆ ಮಾಡಿಕೊಂಡು ನೀವೇ ರಾಜ್ಯಭಾರವನ್ನು ಮಾಡಬೇಕು. ನಾವೇ ಎಲ್ಲರೂ ನಿಮಗಾಗಿ ಕಾಡಿನಲ್ಲಿ ತಪಸ್ಸನ್ನು ಮಾಡುವೆವು' ಎಂದನು. ಅದಕ್ಕೆ ಧೃತರಾಷ್ಟ್ರನು ಅದು ಆಗಲಾರದು ಎಂದನು. ಕೊನೆಯ ಕಾಲದಲ್ಲಿ ವನಕ್ಕೆ ಹೋಗಿ ತಪಸ್ಸನ್ನು ಮಾಡಿ ದೇಹವನ್ನು ಪರಿತ್ಯಾಗ ಮಾಡುವುದು ನಮ್ಮ ಕುಲಧರ್ಮವು. ಆದುದರಿಂದ ನನಗೆ ನೀನು ಅನುಜ್ಞೆಯನ್ನು ಕೊಡಬೇಕು' ಎಂದು ಹೇಳಿದನು. ಈರೀತಿಯಾಗಿ ಧರ್ಮರಾಜನೂ ಧೃತರಾಷ್ಟ್ರನೂ ವಿವಾದ ಮಾಡಿಕೊಳ್ಳುತ್ತಿರಲು ಸರ್ವಜ್ಞರಾದ ವೇದವ್ಯಾಸದೇವರು ಬಂದು ಧರ್ಮರಾಜನೊಡನೆ 'ತಪಸ್ಸು ಮಾಡಿ ಎಲ್ಲಾ ದೋಷಗಳನ್ನು ಪರಿಹರಿಸಿಕೊಳ್ಳಬೇಕೆಂದು ಅಭಿಪ್ರಾಯವುಳ್ಳ ಈ ರಾಜನಿಗೆ ಅನುಜ್ಞೆಯನ್ನು ಕೊಡು. ಇವನ ಧರ್ಮಕ್ಕೆ ವಿಘ್ನವನ್ನು ಮಾಡಬೇಡ. ಸರಿಯಾದ

ಕಾಲದಲ್ಲಿ ವೈರಾಗ್ಯವನ್ನು ಹೊಂದಿರುವನು. ತಪಸ್ಸು ಮಾಡಿ ಪಾಪವನ್ನು ಪರಿಹರಿಸಿಕೊಂಡು ಶುಭಗತಿಯನ್ನು ಹೊಂದುವನು. ತಪಸ್ಸನ್ನು ಮಾಡದಿದ್ದರೆ ಒಳ್ಳೇ ಗತಿಯನ್ನು ಹೊಂದಲಾರನು' ಎಂದು ಹೇಳಿದರು. ತರುವಾಯ ಧರ್ಮರಾಜನು ಅನುಜ್ಞೆಯನ್ನು ಕೊಟ್ಟನು. ಧೃತರಾಷ್ಟ್ರನು ಭೋಜನ ಮಾಡಿದನು. ಆಮೇಲೆ ಧೃತರಾಷ್ಟ್ರನು ಧರ್ಮರಾಜನು ನೀತಿಯನ್ನು ಧರ್ಮಗಳನ್ನು ಚೆನ್ನಾಗಿ ತಿಳಿದವನಾದರೂ ಅವನಿಗೆ ಸ್ನೇಹದಿಂದ ಧರ್ಮಗಳನ್ನು ನೀತಿಯನ್ನು ಹೇಳಿದನು. ಧರ್ಮರಾಜನು ವಿನಯದಿಂದ ಕೇಳಿದನು.

ತರುವಾಯ ಧರ್ಮರಾಜನು ಧೃತರಾಷ್ಟ್ರನ ಅನುಜ್ಞೆಯನ್ನು ಪಡೆದು ಮನೆಗೆ ಹೋಗಲು ಧೃತರಾಷ್ಟ್ರನು ಶ್ರಾದ್ಧವನ್ನು ಮಾಡಲಿಕ್ಕೆ ಹಣವು ಬೇಕೆಂದು ವಿದುರನನ್ನು ಕಳುಹಿಸಿದನು. ವಿದುರನ ಮಾತನ್ನು ಕೇಳಿ ಧರ್ಮರಾಜನು ಭೀಮಸೇನ ದೇವರೊಡನೆ 'ಮಕ್ಕಳು ಮೊಮ್ಮಕ್ಕಳು ಬಂಧುಗಳು ಇವರಿಗೆಲ್ಲಾ ಶ್ರಾದ್ಧಮಾಡ ಬೇಕೆಂದು ಇಚ್ಛೆಯುಳ್ಳ ದೊಡ್ಡ ತಂದೆಗೆ ನಾವೀಗ ಬೇಕಾದಷ್ಟು ಹಣವನ್ನು ಕೊಡಲೇಬೇಕು' ಎಂದು ಹೇಳಿದನು. ಅದಕ್ಕೆ ಭೀಮಸೇನದೇವರು 'ಪರಮಾತ್ಮನ ದ್ವೇಷಿಗಳಾದ ಪಾಪಿಗಳಿಗೆ ಪರಲೋಕದ ಸಹಾಯವನ್ನು ಮಾಡಬಾರದು. ನಾವು ಭೀಷ್ಮಾದಿಗಳ ಶ್ರಾದ್ಧಮಾಡಲಿ ಎಂಬ ಉದ್ದೇಶದಿಂದ ಹಣವನ್ನು ಕೊಟ್ಟರೂ ಅದರಿಂದ ಧೃತರಾಷ್ಟ್ರನು ಮಕ್ಕಳಿಗೆ ಶ್ರಾದ್ಧವನ್ನು ಮಾಡುವನು. ಅದನ್ನು ತಿಳಿದು ಕೊಡುವ ನಮಗೇ ದೋಷವುಂಟಾಗುವುದು. [1]ದುರ್ಯೋಧನಾದಿಗಳು ಅತಿನೀಚವಾದ ಗತಿಯನ್ನು ಹೊಂದಲಿ. ಭೀಷ್ಮಾದಿಗಳಿಗೆ ನಾವೇ ಶ್ರಾದ್ಧವನ್ನು ಮಾಡುವೆವು. ಧೃತರಾಷ್ಟ್ರನು ಯಾಕೆ ಮಾಡಬೇಕು? ಕರ್ಣನು ಕನ್ಯಾವಸ್ಥೆಯಲ್ಲಿ ಹುಟ್ಟಿದ ಕಾರಣ ನಮ್ಮ ತಾಯಿಯಾದ ಕುಂತಿಯೇ ನಮ್ಮಿಂದ ಸಹಿತಳಾಗಿ ಕರ್ಣನ ಶ್ರಾದ್ಧ ಮಾಡಲಿಕ್ಕೆ ಅಧಿಕಾರಿಣಿಯಾಗಿರುವಳು. ಆದುದರಿಂದ ಧೃತರಾಷ್ಟ್ರನಿಗೆ ಏಕೆ ಹಣವನ್ನು ಕೊಡಬೇಕು?' ಎಂದು ಹೇಳಿದರು. ಆಗ ಧರ್ಮರಾಜನೂ ಅರ್ಜುನನೂ 'ವನಕ್ಕೆ ಹೋಗಲು ಹೊರಟಿರುವ ಯಾಚನೆ ಮಾಡುವ ಅವನಿಗೆ ಅವನು ಬಾಹುಬಲದಿಂದ ಸಂಪಾದಿಸಿರುವ ಹಣವನ್ನು ಕೊಡು. ಇನ್ನು ಮುಂದೆ ಅವನು ನಿನ್ನನ್ನು ಕೇಳಲಿಕ್ಕೆ ಬರುತ್ತಾನೆಯೇ?' ಎಂದರು. ಆದರೂ ಭೀಮಸೇನ ದೇವರು ಹಣವನ್ನು ಕೊಡಲು ಸಾಧ್ಯವೇ ಇಲ್ಲವೆಂದರು. ಅದಕ್ಕೆ ಧರ್ಮರಾಜನು ಮನಸ್ಸಿನಲ್ಲಿ ಪ್ರೀತಿಯಿಲ್ಲದೆ 'ಸುಮ್ಮನೆ ಇರು' ಎಂದನು. ಕೋಶದ ಹೊರಗೆ ನನ್ನ [2]ದಾನಭೋಗಾದಿಗಳಿಕ್ಕೆ ಕಾರಣವಾದ ಹಣವನ್ನು ನಾನು ದೊಡ್ಡ ತಂದೆಗೆ

1. ಬದುಕಿದ್ದಾಗ ದುರ್ಯೋಧನಾದಿಗಳು ಮಾಡಿದ ಪಾಪಗಳ ಫಲವಾಗಿ. 2. ದಾನಭೋಗಾದಿಗಳಿಗೆ

ಸಮರ್ಪಿಸಿರುವೆನು ಎಂದನು. ಅರ್ಜುನನೂ ಹೀಗೆಯೇ ಹೇಳಿದನು. ಆಮೇಲೆ ಧರ್ಮರಾಜ ಅರ್ಜುನರು ವಿದುರರೊಡನೆ 'ಮುಖ್ಯಧರ್ಮದಲ್ಲಿ ಆಸಕ್ತನಾದ ಭೀಮಸೇನನಲ್ಲಿ ನಮ್ಮ ದೊಡ್ಡ ತಂದೆಯು ಕೋಪಿಸಿಕೊಳ್ಳಬಾರದು' ಎಂದು ಹೇಳಿದರು.

ಧರ್ಮರಾಜ ಅರ್ಜುನರು ಕೊಟ್ಟ ಹಣವನ್ನು ಹಿಡಿದುಕೊಂಡು ವಿದುರನು ಧೃತರಾಷ್ಟ್ರನಿದ್ದಲ್ಲಿಗೆ ಹೋಗಿ ಅವನೊಡನೆ 'ಧರ್ಮರಾಜ ಅರ್ಜುನರು ನಿನ್ನಲ್ಲಿ ಅತ್ಯಂತ ಭಕ್ತಿಯನ್ನು ತೋರಿಸಿದರು. ನಿನ್ನ ಮಾತನ್ನು ಕೇಳಿ ಭೀಮನಿಗೆ ಮಾತ್ರ ಸಂತೋಷವಾಗಲಿಲ್ಲ. ಆದರೆ ನೀನು ಅವನ ಮೇಲೆ ಕೋಪಿಸಿಕೊಳ್ಳಬೇಡ. ಅವನು ಶುದ್ಧವಾದ ಕ್ಷತ್ರಿಯ ಧರ್ಮದಲ್ಲಿ ಇರುವನು. ಧರ್ಮರಾಜ ಅರ್ಜುನರು ಧರ್ಮದಲ್ಲಿ ಆಸಕ್ತರಾಗಿದ್ದರೂ ಲೋಕದಲ್ಲಿ ಸ್ವಲ್ಪ ಕೃಪೆಯುಳ್ಳವರು' ಎಂದು ಹೇಳಲು ಅದನ್ನು ಕೇಳಿ ಶಾಂತವಾದ ಬುದ್ಧಿಯುಳ್ಳ ಧೃತರಾಷ್ಟ್ರನು ಕೋಪಿಸಿಕೊಳ್ಳಲಿಲ್ಲ. ಅವನು ಎಲ್ಲರಿಗೂ ಶ್ರಾದ್ಧವನ್ನು ಮಾಡಿ ಶುದ್ಧವಾದ ಮನಸ್ಸಿನಿಂದ ಎಲ್ಲಾ ಋಣವೂ ಪರಿಹೃತವಾಗಲಿ ಎಂಬ ಅಭಿಪ್ರಾಯದಿಂದ ಹತ್ತು ದಿವಸಗಳಲ್ಲಿ ಯಾವಾಗಲೂ ಮಹಾದಾನಗಳನ್ನು ಮಾಡಿದನು.

ಅದೆಲ್ಲವನ್ನೂ ಭಗವಂತನಿಗೆ ಸಮರ್ಪಿಸಿ ಕಣ್ಣೀರನ್ನು ಸುರಿಸುತ್ತಾ ಇದ್ದ ಪಾಂಡವರಿಂದಲೂ ಇತರ ಸ್ವಜನರಿಂದಲೂ ಅನುಜ್ಞೆಯನ್ನು ಪಡೆದು ಊರಿನ ಜನರೊಡನೆ 'ನಮ್ಮ ದೊಡ್ಡವರೆಲ್ಲರೂ ನಿಮ್ಮನ್ನು ಚೆನ್ನಾಗಿ ರಕ್ಷಿಸಿದರು. ನಾನು ನಿಮ್ಮನ್ನು ಸರಿಯಾಗಿ ರಕ್ಷಣೆ ಮಾಡದೆ ಇದ್ದರೂ ನೀವು ನನ್ನ ಮೇಲಿನ ಸ್ನೇಹದಿಂದ ಕೃಪಾವುಳ್ಳವರಾಗಿ ನಾನು ಸರಿಯಾಗಿ ರಕ್ಷಿಸಿಲ್ಲವೆಂದು ಒಂದು ಬಾರಿಯೂ ಹೇಳಲಿಲ್ಲ. ನಾನು ನಿಮ್ಮ ಆಶ್ರಯದಿಂದ ಬೇಕಾದ ಯಜ್ಞಗಳನ್ನು ಅನ್ನದಾನಾದಿಗಳನ್ನೂ ಮಾಡಿದೆನು. ನನ್ನ ಮಗನು ಮಾತ್ರ ಮಹಾಪಾಪಿಯು. ಸರ್ವಕ್ಷತ್ರಿಯರನ್ನು ನಾಶಮಾಡಿಸಿದನು. ಎಲ್ಲರ ಮೇಲೆಯೂ ಸಂದೇಹವುಳ್ಳವನು. ಮೂರ್ಖನು ದೊಡ್ಡವರ ಮಾತನ್ನು ಮೀರುವವನು. ಅವನು ಪಾಂಡವರಲ್ಲಿ ಸಹೋದರ ಸ್ನೇಹ ವನ್ನು ಬಿಟ್ಟು ಇನ್ನೊಬ್ಬರು ಯಾರೂ ಮಾಡದಂತಹ ಅನ್ಯಾಯವನ್ನು ಮಾಡಿರುವನು. ದುರ್ಬುದ್ಧಿಯುಳ್ಳ ಅವನು ಕೃಷ್ಣಪರಮಾತ್ಮನಿಗೂ ಅನೇಕ ಅಪ್ರಿಯಗಳನ್ನು ಮಾಡಿರು ವನು. ಅನೇಕವಾಗಿ ಆ ಅಲ್ಪನು ನಿಮಗೂ ಕ್ಷೇಮವನ್ನು ಉಂಟುಮಾಡಿಲ್ಲ. ಅವನ ತಮ್ಮಂದಿರೆಲ್ಲರೂ ಅವನ ಸ್ವಭಾವವನ್ನು ಅನುಸರಿಸಿದವರಾಗಿ ಮಕ್ಕಳು ಬಂಧು ಗಳಿಂದ ಸಹಿತರಾಗಿ ಮೃತರಾದರು. ನನಗೆ ವಯಸ್ಸಾಯಿತು. ಮಕ್ಕಳು ಮಾಡಿದ

ಅಧರ್ಮದಲ್ಲಿ ನಾನೂ ಸ್ವಲ್ಪ ಸಂಬಂಧವುಳ್ಳವನಾಗಿರುವೆನು. ಆದುದರಿಂದ ನಾನು ಪಾಂಡವರ ವಿಷಯದಲ್ಲಿಯೂ ಕೃಷ್ಣಪರಮಾತ್ಮನಲ್ಲಿ ಮಕ್ಕಳ ಸಂಬಂಧದಿಂದಲೋ ನಾನಾಗಿಯೋ ಮಾಡಿರುವ ಪಾಪವನ್ನು ತಪಸ್ಸುಮಾಡಿ ಕಳಕೊಳ್ಳಬೇಕೆಂದು ಅಭಿಪ್ರಾಯವುಳ್ಳವನಾಗಿರುವೆನು. ಆ ವಿಷಯದಲ್ಲಿ ನೀವೆಲ್ಲರೂ ಕೃಪೆಯಿಂದ ಅನುಜ್ಞೆಯನ್ನು ಕೊಡಬೇಕು. ನನಗೆ ಪ್ರೀತಿಯಿಂದಲೂ ಪಾಂಡವರಲ್ಲಿ ನೀವು ಇನ್ನೂ ಸ್ನೇಹವನ್ನು ಮಾಡುತ್ತಿರಬೇಕು. ಮೊದಲೇ ಮಾಡುತ್ತಿರುವ ಸ್ನೇಹವನ್ನು ಇನ್ನೂ ಸ್ಥಿರವಾಗಿ ಮಾಡಬೇಕು. ಆ ಪಾಂಡವರೇ ನನಗೆ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖಕ್ಕೆ ಕಾರಣರಾದ ಮಕ್ಕಳು' ಎಂದು ಹೇಳಿದನು.

ಆಗ ಊರಿನ ಜನರೆಲ್ಲರೂ ಧೃತರಾಷ್ಟ್ರನ ಗುಣಗಳನ್ನು ಹೇಳಿ ಪರಮ ದುಃಖವುಳ್ಳವರಾಗಿ ಕಣ್ಣೀರು ಸುರಿಸುತ್ತಾ ಬಹು ಕಷ್ಟದಿಂದ ಅನುಜ್ಞೆಯನ್ನು ಕೊಟ್ಟರು. ಧೃತರಾಷ್ಟ್ರನು ವನಕ್ಕೆ ಹೋದನು. ಅವನ ಹಿಂದೆಯೇ ಪಾಂಡವರೂ ಬಹುದೂರ ಹೋದರು. ಸಂಜಯನೂ ವಿದುರನೂ ಪತ್ನಿಯಿಂದ ಸಹಿತನಾದ ಧೃತರಾಷ್ಟ್ರನನ್ನು ಅನುಸರಿಸಿ ಹೋದರು. ಕುಂತಿಯೂ ವನವಾಸ ಮಾಡುವ ನಿಶ್ಚಯದಿಂದ ಅವರೊಡನೆ ಹೋದಳು. ಪಾಂಡವರೂ ಅವರ ಪತ್ನಿಯರೂ ಎಷ್ಟು ಪ್ರಾರ್ಥಿಸಿ ಕೊಂಡರೂ ಕುಂತಿಯು ತನ್ನ ನಿಶ್ಚಯವನ್ನು ಬದಲಾಯಿಸಲಿಲ್ಲ. ಬಹುಕಷ್ಟದಿಂದ ಮಕ್ಕಳನ್ನು ಸೊಸೆಯಂದಿರನ್ನು ಸಮಾಧಾನಪಡಿಸಿ ತಾನು ಧೃತರಾಷ್ಟ್ರನ ಹಿಂದೆಯೇ ಹೋದಳು. ಕುಂತಿಯು ಮುಂದೆ ಹೋದಳು. ಗಾಂಧಾರಿಯು ಕಣ್ಣಿಗೆ ವಸ್ತ್ರವನ್ನು ಕಟ್ಟಿಕೊಂಡು ಕುರುಡಳಂತೆ ಇದ್ದ ಕಾರಣ ಕುಂತಿಯ ಹೆಗಲನ್ನು ಹಿಡಿದುಕೊಂಡು ಹೋದಳು. ಧೃತರಾಷ್ಟ್ರನು ಅವಳ ಹೆಗಲನ್ನು ಹಿಡಿದುಕೊಂಡು ಹೋದನು. ವಿದುರ ಸಂಜಯರು ವೈರಾಗ್ಯಮಾರ್ಗವನ್ನು ಧೃತರಾಷ್ಟ್ರನಿಗೆ ಉಪದೇಶಿಸಿದರು. ಅವರಲ್ಲಿಯೂ ವಿದುರನು ವೈರಾಗ್ಯ ಮಾರ್ಗವನ್ನು ಉಪದೇಶಿಸಿದವನು ಸಂಜಯನು ಸಮ್ಮತಿಯನ್ನು ಕೊಟ್ಟನು. ಧೃತರಾಷ್ಟ್ರನ ಹಿಂದೆಯೇ ಹೋದರು. ಅವರೆಲ್ಲರೂ ಕ್ರಮದಿಂದ ಕುರುಕ್ಷೇತ್ರಕ್ಕೆ ಹೋಗಿ ವೇದವ್ಯಾಸದೇವರ ಆಶ್ರಮಕ್ಕೆ ಹೋದರು. ಅಲ್ಲಿ ನಾರದರು ಪತ್ನೀಸಹಿತನಾದ ಧೃತರಾಷ್ಟ್ರನಿಗೆ ಮೂರು ವರ್ಷಗಳಲ್ಲಿ ಸ್ವರ್ಗಲೋಕ ಪ್ರಾಪ್ತಿಯಾಗುವುದೆಂದು ಹೇಳಿದರು.

ಅದನ್ನು ಕೇಳಿ ಧೃತರಾಷ್ಟ್ರನು ತುಂಬಾ ಜಾಗ್ರತೆಯಿಂದ ವೇದವ್ಯಾಸದೇವರು ಉಪದೇಶ ಮಾಡಿದ ರೀತಿಯಿಂದ ಶ್ರೇಷ್ಠವಾದ ತಪಸ್ಸನ್ನು ಮಾಡಿದನು. ಅಲ್ಲಿಯೇ ವಿದುರನಿಂದಲೂ ಗಾಂಧಾರಿಯಿಂದಲೂ ಕುಂತಿಯಿಂದಲೂ ಸಂಜಯನಿಂದಲೂ

ಸಹಿತನಾಗಿ ಧೃತರಾಷ್ಟ್ರನು ತಪಸ್ಸಿನಿಂದ ಭಗವಂತನನ್ನು ಆರಾಧಿಸುತ್ತಿರಲು ಅಲ್ಲಿಗೆ ಪಾಂಡವರು ಒಂದು ದಿನದಲ್ಲಿ ಪತ್ನಿಯರಿಂದಲೂ ಬಂಧುಗಳಿಂದಲೂ ಭೃತ್ಯರಿಂದಲೂ ಸಹಿತರಾಗಿ ನೋಡಲಿಕ್ಕಾಗಿ ಬಂದರು. ಆಗ ವಿದುರನು ಪರಕಾಯ ಪ್ರವೇಶವೆಂಬ ಯೋಗಬಲದಿಂದ ಧರ್ಮರಾಜನ ದೇಹವನ್ನು ಪ್ರವೇಶಿಸಿ ಅವನಿಂದ ಏಕೀಭೂತನಾದನು. ಯಮದೇವರೇ ಪೂರ್ವದಲ್ಲಿ ವಿದುರ ಧರ್ಮರಾಜ ಎಂಬ ರೂಪದಿಂದ ಹುಟ್ಟಿದರು. ಈಗ ಒಂದೇ ರೂಪವುಳ್ಳವರಾದರು. ಅಂದರೆ ಧರ್ಮರಾಜನು ಧೃತರಾಷ್ಟ್ರನೊಡನೆ ವಿದುರನೆಲ್ಲಿ? ಎಂದು ಕೇಳಿದನು. ಅದಕ್ಕೆ ಅವನು ಆಗಾಗ್ಗೆ ಇಲ್ಲಿಗೆ ಬರುತ್ತಿರುವನು ಎಂದು ಧೃತರಾಷ್ಟ್ರನು ಹೇಳಿದನು. ಅಷ್ಟರಲ್ಲಿಯೇ ಧರ್ಮರಾಜನ ಕಣ್ಣಿಗೆ ವಿದುರನು ಕಾಣಿಸಿದನು. ಕೂಡಲೇ ಧರ್ಮರಾಜನು ವಿದುರನಿದ್ದಲ್ಲಿಗೆ ಹೋಗಲು ಅವನು ಓಡಿಹೋದನು. ಆಗ ಧರ್ಮರಾಜನು 'ವಿದುರ! ನಾನು ನಿನಗೆ ತುಂಬಾ ಬೇಕಾದವನು. ಬರುತ್ತಿರುವೆನು' ಎಂದು ಹೇಳುತ್ತಾ ಅವನ ಹಿಂದೆಯೇ ಓಡಿದನು. ಆಗ ವಿದುರನು ಒಂದು ಮರದ ಬುಡದಲ್ಲಿ ನಿಂತುಕೊಂಡು ಸ್ವಲ್ಪ ಹೊತ್ತು ಧರ್ಮರಾಜನನ್ನೇ ನೋಡುತ್ತಿದ್ದನು. ಧರ್ಮರಾಜನು ಹತ್ತಿರ ಹೋಗಿ ನೋಡಲು ವಿದುರನ ದೇಹದಲ್ಲಿ ಜೀವವಿರಲಿಲ್ಲ. ಧರ್ಮರಾಜನಿಗೆ ಬಲ ಇತ್ಯಾದಿಗಳು ಹೆಚ್ಚಾದಂತೆ ಕಂಡುಬಂದಿತು. ವಿದುರನು ತನ್ನಲ್ಲಿ ಪ್ರವೇಶಿಸಿದಂತೆ ತಿಳಿದುಕೊಂಡನು. ಅವನ ದೇಹಕ್ಕೆ ಸಂಸ್ಕಾರವನ್ನು ಮಾಡಬೇಕೆಂದು ಯೋಚಿಸಲು 'ವಿದುರನು ಸನ್ಯಾಸ ಧರ್ಮವುಳ್ಳವನಾಗಿರುವನು. ಅವನ ದೇಹಕ್ಕೆ ಸಂಸ್ಕಾರ ಮಾಡಬಾರದು' ಎಂದು ಅಶರೀರವಾಣಿಯಾಯಿತು. ತರುವಾಯ ಧರ್ಮರಾಜನು ಧೃತರಾಷ್ಟ್ರನಿದ್ದಲ್ಲಿ ಬಂದು ಈ ಆಶ್ಚರ್ಯವನ್ನು ತಿಳಿಸಿದನು.

ತರುವಾಯ ಅಲ್ಲಿಗೆ ವೇದವ್ಯಾಸದೇವರು ಬಂದರು. ಅವರನ್ನು ಎಲ್ಲರೂ ಭಕ್ತಿಯಿಂದ ಪೂಜಿಸಿದರು. ವೇದವ್ಯಾಸದೇವರು ಅಲ್ಲಿ ಕೂತುಕೊಂಡು 'ಯಾರಿಗೆ ಏನು ಅಪೇಕ್ಷೆಯಿದೆಯೋ ಅದನ್ನೆಲ್ಲಾ ಕೇಳಿಕೊಳ್ಳಿರಿ' ಎಂದು ಹೇಳಿದರು. ಆಗ ಪಾಂಡವರೂ ಅವರ ಪತ್ನಿಯರೂ ತಮಗೆ ಭಗವಂತನಲ್ಲಿ ಅಧಿಕವಾದ ಭಕ್ತಿಯುಂಟಾಗಬೇಕೆಂದು ಕೇಳಿಕೊಂಡರು. ಕುಂತೀದೇವಿಯು ಕರ್ಣನು ತನ್ನಲ್ಲಿ ಕನ್ಯಾವಸ್ಥೆಯಲ್ಲಿ ಹುಟ್ಟಿದ್ದರಿಂದ ಅವನ ಸ್ವರೂಪವನ್ನು ತಾನು ಪಾಂಡವರಲ್ಲಿ ತಿಳಿಸದೆ ಇದ್ದಕಾರಣ ಯುದ್ಧದಲ್ಲಿ ಅವನು ಸತ್ತಿದ್ದರಿಂದಲೂ ತನಗೆ ಬಂದ ದೋಷವನ್ನು ಪರಿಹರಿಸಬೇಕೆಂದು ಕೇಳಿಕೊಂಡಳು. ಧೃತರಾಷ್ಟ್ರನು ಗಾಂಧಾರಿಯಿಂದ ಯೋಚನೆ ಮಾಡಿ ಯುದ್ಧದಲ್ಲಿ ಸತ್ತ ಎಲ್ಲರನ್ನೂ ನೋಡಬೇಕೆಂಬ ಆಸೆಯು ತನಗೆ

ಇರುವುದೆಂದು ತಿಳಿಸಿದನು. ತರುವಾಯ ವೇದವ್ಯಾಸದೇವರ ಆಜ್ಞೆಯಿಂದ ಸತ್ತವರೆಲ್ಲರೂ ಸ್ವರ್ಗಲೋಕದಿಂದ ಪೂರ್ವದಂತೆಯೇ ರೂಪವುಳ್ಳವರಾಗಿ ಧೃತರಾಷ್ಟ್ರನಿದ್ದಲ್ಲಿಗೆ ಬಂದರು. ವೇದವ್ಯಾಸದೇವರು ಧೃತರಾಷ್ಟ್ರನಿಗೆ ದಿವ್ಯದೃಷ್ಟಿಯನ್ನು ಕೊಟ್ಟರು. ವೇದವ್ಯಾಸದೇವರು ಆಜ್ಞೆಯಿಂದ ಬಂದವರೆಲ್ಲರೂ ಪೂರ್ವದಂತೆಯೇ ರಾತ್ರಿಯಲ್ಲಿ ತಮ್ಮತಮ್ಮ ಪತ್ನಿಯರೊಡನೆ ವಾಸಮಾಡಿದರು. ಅದನ್ನು ನೋಡಿ ಧೃತರಾಷ್ಟ್ರನು ತೃಪ್ತಿಯನ್ನು ಹೊಂದಿದನು. ಗಾಂಧಾರಿಯೂ ಸಂತೋಷಪಟ್ಟಳು. ಆಮೇಲೆ ವೇದವ್ಯಾಸದೇವರ ಅಪ್ಪಣೆಯಿಂದ ಸ್ವರ್ಗದಿಂದ ಬಂದವರೊಡನೆ ಅವರ ಪತ್ನಿಯರೂ ಹೊರಟುಹೋದರು. ಆಗ ಸ್ವರ್ಗದಿಂದ ಅಭಿಮನ್ಯುವೂ ಬಂದಿದ್ದನು. ಅಭಿಮನ್ಯವು ಉತ್ತರೆಯೊಡನೆ ನೀನು ಮಗುವನ್ನು ನೋಡಿಕೊಂಡು ಇಲ್ಲಿಯೇ ಇರು ಎಂದು ಹೇಳಿದನಾದ ಕಾರಣ ಉತ್ತರೆಯು ಅಭಿಮನ್ಯುವಿನೊಡನೆ ಹೋಗಲಿಲ್ಲ.

ಈ ಭಾರತಕಥೆಯನ್ನು ಜನಮೇಜಯರಾಜನು ಕೇಳುತ್ತಿರುವಾಗ ವೇದವ್ಯಾಸದೇವರೊಡನೆ ನನಗೂ ನನ್ನ ತಂದೆಯನ್ನು ನೋಡುವ ಆಸೆಯಿದೆಯೆಂದು ಕೇಳಿಕೊಂಡನು. ಆಗ ವೇದವ್ಯಾಸದೇವರು ಪರೀಕ್ಷಿದ್ರಾಜನನ್ನು ಸ್ವರ್ಗದಿಂದ ತರಿಸಿದರು. ಜನಮೇಜಯರಾಜನು ನೋಡಿಯಾದ ಮೇಲೆ ಪುನಃ ಸ್ವರ್ಗಕ್ಕೆ ಕಳುಹಿಸಿದರು. ಇದರಿಂದ ಜನಮೇಜಯರಾಜನು ಬಹಳ ಸಂತೋಷವುಳ್ಳವನಾದನು. ವೇದವ್ಯಾಸದೇವರೊಡನೆ ಕ್ಷಮೆಯನ್ನು ಕೇಳಿಕೊಂಡನು. ಅನಂತರದಲ್ಲಿ ಅಲ್ಲಿದ್ದ ಜನರಿಂದ ಕೂಡಿಕೊಂಡು ಭಾರತದಲ್ಲಿ ತುಂಬಾ ವಿಶ್ವಾಸವುಳ್ಳವನಾಗಿದ್ದನು.



## ಧೃತರಾಷ್ಟ್ರಾದಿಗಳ ಮರಣ [1]

ತರುವಾಯ ಪಾಂಡವರು ವನದಿಂದ ತಮ್ಮ ಪಟ್ಟಣಕ್ಕೆ ಬಂದು ಭೂಮಿಯನ್ನು ಪರಿಪಾಲಿಸುತ್ತಾ ಉಚಿತ ಭೋಗಗಳನ್ನು ಅನುಭವಿಸುತ್ತಾ ಇದ್ದರು. ಪರಮಾತ್ಮನಲ್ಲಿ ಆಸಕ್ತರಾಗಿದ್ದರು. ತರುವಾಯ ಮೂರುವರ್ಷಗಳಾದ ಮೇಲೆ ಧೃತರಾಷ್ಟ್ರಾದಿಗಳು ಮೃತರಾದ ವರ್ತಮಾನವನ್ನು ಪಾಂಡವರು ಕೇಳಿದರು. ಅಂದರೆ ಒಂದು ದಿನದಲ್ಲಿ ಪಾಂಡವರ ಬಳಿಗೆ ನಾರದರು ಬಂದರು. ಧರ್ಮರಾಜನು ನಾರದರಿಗೆ ಬೇಕಾದ ಸತ್ಕಾರವನ್ನು ಮಾಡಿ ಕೂತಿರುವ ಅವರೊಡನೆ 'ಬಹುಕಾಲದಿಂದ ತಮ್ಮನ್ನು ನಾನು

1. ಮ.ತಾ.ನಿ. ಅ-31

ನೋಡಲಿಲ್ಲ. ತಾವು ಸೌಖ್ಯದಿಂದ ಇದ್ದೀರಷ್ಟೆ! ತಾವು ಯಾವ ದೇಶಗಳನ್ನು ನೋಡಿಕೊಂಡು ಬಂದಿರಿ? ತಮಗೆ ನನ್ನಿಂದ ಏನಾಗಬೇಕು? ತಾವು ಎಲ್ಲವನ್ನೂ ಹೇಳಬೇಕು. ತಾವು ನಮಗೆ ಪ್ರಿಯ ಅತಿಥಿಗಳಾಗಿರುವಿರಿ' ಎಂದು ಹೇಳಿದನು.

ನಾರದರು 'ಧರ್ಮರಾಜ! ನಿನ್ನನ್ನು ನೋಡಿ ಬಹಳ ಸಮಯವಾಯಿತೆಂದೇ ನಿನ್ನನ್ನು ನೋಡಲಿಕ್ಕಾಗಿಯೇ ಬಂದಿರುವೆನು. ತಪೋವನದಿಂದ ಹೊರಟು ಅನೇಕ ತೀರ್ಥಗಳನ್ನು ನೋಡಿ ಗಂಗೆಯನ್ನು ನೋಡಿಕೊಂಡು ಇಲ್ಲಿಗೆ ಬಂದಿರುವೆನು' ಎಂದರು.

ಧರ್ಮರಾಜನು 'ಗಂಗಾತೀರವಾಸಿಗಳಾದ ಜನರು ನಮ್ಮ ಧೃತರಾಷ್ಟ್ರನು ಗಂಗಾತೀರದಲ್ಲಿ ತಪಸ್ಸನ್ನು ಮಾಡುತ್ತಿರುವನೆಂದು ತಿಳಿಸಿದ್ದರು. ತಾವು ಬರುವಾಗ ಧೃತರಾಷ್ಟ್ರನನ್ನು ನೋಡಿದಿರಾ? ಸೌಖ್ಯವಾಗಿ ಇರುವನೋ? ಗಾಂಧಾರಿಯೂ ನಮ್ಮ ತಾಯಿಯಾದ ಕುಂತೀದೇವಿಯೂ ಮತ್ತು ಸಂಜಯನೂ ಸುಖವಾಗಿ ಇರುವರೋ? ನಮ್ಮ ದೊಡ್ಡ ತಂದೆ ಧೃತರಾಷ್ಟ್ರನು ಈಗ ಹೇಗೆ ಇರುವನು? ನನಗೆ ಈ ವಿಷಯವನ್ನು ಕೇಳಲಿಕ್ಕೆ ತುಂಬಾ ಆಸೆಯಾಗುತ್ತದೆ. ತಾವು ನೋಡಿ ಬಂದಿದ್ದರೆ ತಿಳಿಸಬೇಕು' ಎಂದನು.

ಆಗ ನಾರದರು 'ಧರ್ಮರಾಜನೇ! ಮನಸ್ಸನ್ನು ದೃಢಮಾಡಿಕೊಂಡು ಕೇಳುವವನಾಗು. ನಾನು ನೋಡಿದ ಮತ್ತು ಕೇಳಿದ ವಿಷಯವನ್ನು ಹೇಳುತ್ತೇನೆ. ನೀವೆಲ್ಲರೂ ಧೃತರಾಷ್ಟ್ರನ ಬಳಿಯಿಂದ ಬಂದಮೇಲೆ ಅವನು ಗಾಂಧಾರಿಯಿಂದಲೂ ಕುಂತಿಯಿಂದಲೂ ಸಂಜಯನಿಂದ ಸಹಿತನಾಗಿ ಪುರೋಹಿತರಿಂದಲೂ ಸಹಿತನಾಗಿ ಅಗ್ನಿಹೋತ್ರದ ಅಗ್ನಿಯನ್ನು ಹಿಡಿದುಕೊಂಡು ಗಂಗಾದ್ವಾರಕ್ಕೆ ಹೋದನು. ತರುವಾಯ ಅವನು ಗಾಳಿಮಾತ್ರ ಆಹಾರವುಳ್ಳವನಾಗಿ ವನದಲ್ಲಿ ಎಲ್ಲಾ ಮುನಿಗಳಿಂದಲೂ ಸತ್ಕೃತನಾಗಿ ತಪಸ್ಸು ಮಾಡಿದನು.

ಹಾಗೆಯೇ ಆರು ತಿಂಗಳು ಕಠಿನವಾದ ತಪಸ್ಸನ್ನು ಮಾಡಿದನು. ಅವನ ದೇಹದಲ್ಲಿ ಎಲುಬು ಚರ್ಮ ಮಾತ್ರ ಇದ್ದಿತು. ಗಾಂಧಾರಿಯು ನೀರು ಮಾತ್ರ ಕುಡಿಯುತ್ತಿದ್ದಳು. ಕುಂತೀದೇವಿಯು ಒಂದು ತಿಂಗಳವರೆಗೂ ಉಪವಾಸ ಮಾಡುತ್ತಿದ್ದಳು. ಸಂಜಯನು ಮೂರುದಿವಸಗಳಿಗೊಮ್ಮೆ ರಾತ್ರಿ ಆಹಾರವನ್ನು ಸ್ವೀಕರಿಸುತ್ತಿದ್ದನು. ಪುರೋಹಿತರು ಶಾಸ್ತ್ರದಲ್ಲಿ ಹೇಳಿದಂತೆಯೇ ಅಗ್ನಿಯಲ್ಲಿ ಹೋಮ ಮಾಡುತ್ತಿದ್ದರು. ಧೃತರಾಷ್ಟ್ರನು ಆಮೇಲೆ ತನ್ನನ್ನು ಒಬ್ಬರು ನೋಡಿದರೂ ನೋಡದೆ ಇದ್ದರೂ ಲಕ್ಷ್ಯಮಾಡದೆ ಸಂಚರಿಸುತ್ತಿದ್ದನು. ಒಂದು ಸ್ಥಳದಲ್ಲಿ ನಿಲ್ಲುತ್ತಿರಲಿಲ್ಲ.

ಕುಂತೀಗಾಂಧಾರಿಯರೂ ಸಂಜಯನೂ ಅವನ ಹಿಂದೆಯೇ ಹೋಗುತ್ತಿದ್ದರು. ಎತ್ತರ ತಗ್ಗುಪ್ರದೇಶಗಳಲ್ಲಿ ಸಂಜಯನು ಧೃತರಾಷ್ಟ್ರನ ಕೈಯನ್ನು ಹಿಡಿದುಕೊಂಡು ಹೋಗುತ್ತಿದ್ದನು. ಕಣ್ಣಿಗೆ ವಸ್ತ್ರವನ್ನು ಕಟ್ಟಿಕೊಂಡಿರುವ ಗಾಂಧಾರಿಯ ಕೈಹಿಡಿದುಕೊಂಡು ಕುಂತಿಯು ಹೋಗುತ್ತಿದ್ದಳು.

ಒಂದು ದಿವಸದಲ್ಲಿ ಧೃತರಾಷ್ಟ್ರನು ಗಂಗೆಯಲ್ಲಿ ಸ್ನಾನ ಮಾಡಿ ಆಶ್ರಮಕ್ಕೆ ಎದುರಾಗಿ ಹೋಗುತ್ತಿದ್ದನು. ತರುವಾಯ ದೊಡ್ಡಗಾಳಿಯುಂಟಾಗಿ ಕಾಡಿನಲ್ಲಿ ಬೆಂಕಿಯುಂಟಾಯಿತು. ಕಾಡನ್ನೆಲ್ಲಾ ಸುಟ್ಟಿತು. ಮೃಗಗಳೂ ಹಾವುಗಳೂ ಸುಟ್ಟುಹೋಗುತ್ತಿದ್ದವು. ಕಾಡುಹಂದಿಗಳೆಲ್ಲವೂ ಸರೋವರಗಳನ್ನು ಆಶ್ರಯಿಸುತ್ತಿದ್ದವು. ಈರೀತಿಯಾಗಿ ದೊಡ್ಡ ಬೆಂಕಿಯು ಹತ್ತಿರಕ್ಕೆ ಬರುತ್ತಿರಲು ಧೃತರಾಷ್ಟ್ರನು ಆಹಾರವಿಲ್ಲದ ಕಾರಣ ಸಾಮರ್ಥ್ಯ ರಹಿತನಾದ ಕಾರಣ ಓಡಿಹೋಗಿ ತಪ್ಪಿಸಿಕೊಳ್ಳಲಿಕ್ಕೆ ಸಮರ್ಥನಾಗಿರಲಿಲ್ಲ. ತುಂಬಾ ಕೃಶರಾದ ಕುಂತೀ ಗಾಂಧಾರಿಯರೂ ಹಾಗೆಯೇ. ತರುವಾಯ ಧೃತರಾಷ್ಟ್ರನು ಬೆಂಕಿಯು ತುಂಬಾ ಹತ್ತಿರಕ್ಕೆ ಬಂದದ್ದನ್ನು ನೋಡಿ ಸಂಜಯನೊಡನೆ 'ಸಂಜಯ! ಎಲ್ಲಿ ಹೋದರೆ ನಿನ್ನನ್ನು ಬೆಂಕಿಯು ಸುಡಲಾರದೋ ಅಲ್ಲಿಗೆ ಹೋಗು. ನಾವು ಇಲ್ಲಿಯೇ ಅಗ್ನಿಯ ವಶರಾಗಿ ಉತ್ತಮವಾದ ಗತಿಯನ್ನು ಹೊಂದುವೆವು' ಎಂದು ಹೇಳಿದನು. ಅದಕ್ಕೆ ಸಂಜಯನು 'ರಾಜನೇ! ಈರೀತಿಯಾಗಿ ಬೆಂಕಿಯಲ್ಲಿ ಸಾಯುವುದು ಅನಿಷ್ಟವಲ್ಲವೇ? ಹಾಗೆಂದು ನಿಮ್ಮನ್ನು ಬಿಡಿಸಲಿಕ್ಕೆ ಉಪಾಯವೂ ಕಾಣುವುದಿಲ್ಲವಲ್ಲಾ! ಆದುದರಿಂದ ಇನ್ನು ಏನು ಮಾಡಬೇಕೋ ಅದನ್ನು ಆಜ್ಞಾಪಿಸಬೇಕು' ಎಂದು ಹೇಳಿದನು.

ಅದಕ್ಕೆ ಧೃತರಾಷ್ಟ್ರನು 'ಈ ವಿಧವಾದ ಮರಣವು ಮನೆಯನ್ನು ಬಿಟ್ಟು ಬಂದಿರುವ ನಮಗೆ ಈ ಮರಣವು ಅನಿಷ್ಟವಲ್ಲ. ಇಷ್ಟವೇ. ನೀರು ಅಗ್ನಿ ವಾಯು ಉಪವಾಸ ಮಾಡೋಣ. ಇವುಗಳಿಂದ ಮರಣವು ವಾನಪ್ರಸ್ಥರಾದ ನಮಗೆ ಇಷ್ಟವೇ' ಎಂದು ಹೇಳಿ ಮನಸ್ಸನ್ನು ಸಮಾಧಾನಪಡಿಸಿಕೊಂಡು ಗಾಂಧಾರಿಯಿಂದಲೂ ಕುಂತೀದೇವಿಯಿಂದಲೂ ಸಹಿತನಾಗಿ ಪೂರ್ವಕ್ಕೆ ಮುಖವನ್ನು ಹಾಕಿ ಕೂತುಕೊಂಡನು. ಸಂಜಯನು ಅವನನ್ನು ನೋಡಿ ಅವನಿಗೆ ಪ್ರದಕ್ಷಿಣೆ ಬಂದನು.'ರಾಜನೇ! ಭಗವಂತನನ್ನು ಧ್ಯಾನ ಮಾಡುತ್ತಿರು' ಎಂದು ಹೇಳಿದನು. ವೇದವ್ಯಾಸದೇವರ ಮಗನಾದ ಆ ಧೃತರಾಷ್ಟ್ರನು ಇಂದ್ರಿಯಗಳನ್ನೆಲ್ಲಾ ನಿಗ್ರಹಮಾಡಿ ಕಟ್ಟಿಗೆಯಂತೆ ಇದ್ದನು. ತರುವಾಯ ಮಹಾನುಭಾವಳಾದ ಗಾಂಧಾರಿಯೂ ನಿನ್ನ ತಾಯಿಯೂ ಧೃತರಾಷ್ಟ್ರನೂ ಆ ಕಾಡಿನ ಬೆಂಕಿಯಿಂದ ಸುಟ್ಟುಹೋದರು.

ಜ್ಞಾನಿಯಾದ ಸಂಜಯನು ಮಾತ್ರ ಆ ಬೆಂಕಿಯಿಂದ ತನ್ನನ್ನು ತಪ್ಪಿಸಿಕೊಂಡನು. ಗಂಗಾತೀರದಲ್ಲಿ ಋಷಿಗಳೊಡನೆ ಇದ್ದ ಅವನನ್ನು ನಾನು ನೋಡಿದೆನು. ಅವನು ಋಷಿಗಳೊಡನೆ ಈ ಸಮಸ್ತ ವಿಷಯವನ್ನು ತಿಳಿಸಿ ಅನುಜ್ಞೆಯನ್ನು ಪಡೆದು ಹಿಮವತ್ಪರ್ವತಕ್ಕೆ ಹೋದನು. ರಾಜನೇ! ಈರೀತಿಯಾಗಿ ಧೃತರಾಷ್ಟ್ರನೂ ಗಾಂಧಾರಿಯೂ ಕುಂತೀದೇವಿಯೂ ಮರಣವನ್ನು ಹೊಂದಿದರು. ದೈವೇಚ್ಛೆಯಿಂದ ಅಲ್ಲಿ ಹೋದ ನಾನು ಅವರು ಮೂರು ಜನರ ದೇಹವನ್ನು ನೋಡಿದೆನು. ತರುವಾಯ ಆ ತಪೋವನಕ್ಕೆ ಋಷಿಗಳು ಬಂದರು. ಅವರು ಧೃತರಾಷ್ಟ್ರನ ಗತಿಯನ್ನು ಕೇಳಿ ದುಃಖವನ್ನು ಹೊಂದಲಿಲ್ಲ, ನಾನು ಅಲ್ಲಿಗೆ ಹೋದವನು. ಅವರು ಸುಟ್ಟು ಹೋದ ವಿಷಯವನ್ನು ಕೇಳಿದೆನು. ರಾಜನೇ! ಧೃತರಾಷ್ಟ್ರನು ಸ್ವರ್ಗವನ್ನು ಹೊಂದಿದನು. ಗಾಂಧಾರಿಯೂ ನಿನ್ನ ತಾಯಿಯೂ ಅಗ್ನಿಯ ವಶರಾದರು' ಎಂದು ಹೇಳಿದರು.

ಧೃತರಾಷ್ಟ್ರನ ಮರಣವನ್ನು ಕೇಳಿ ಪಾಂಡವರಿಗೆಲ್ಲರಿಗೂ ಮಹಾದುಃಖ ವುಂಟಾಯಿತು. ಅಂತಃಪುರದವರೂ ಊರಿನ ಜನರೂ ಎಲ್ಲರೂ ದುಃಖವನ್ನು ಹೊಂದಿದರು. ಧರ್ಮರಾಜನು 'ಧಿಕ್ಕಾರ' ಎಂದು ಹೇಳುತ್ತಾ ಅತ್ಯಂತ ದುಃಖವುಳ್ಳವ ನಾಗಿ ತಾಯಿಯನ್ನು ಸ್ಮರಿಸುತ್ತಾ ಅಳುವವನಾದನು. ಭೀಮಸೇನದೇವರೂ ಲೋಕರೀತಿಯಿಂದ ಅಳುವಂತೆ ತೋರಿಸಿದರು. ಅರ್ಜುನಾದಿಗಳೂ ಅಳುವವ ರಾದರು. ಅಳುವ ಶಬ್ದವು ಸ್ವಲ್ಪ ಕಡಿಮೆಯಾದ ಮೇಲೆ ಧರ್ಮರಾಜನು ಧೈರ್ಯದಿಂದ ಕಣ್ಣೀರನ್ನು ತಡೆದುಕೊಂಡು ನಾರದರೊಡನೆ 'ಅಂತಹ ಮಹಾತ್ಮ ನಾದ ಉಗ್ರವಾದ ತಪಸ್ಸನ್ನು ಮಾಡುತ್ತಿದ್ದ ಧೃತರಾಷ್ಟ್ರನಿಗೆ ನಾವೆಲ್ಲರೂ ಬಂಧುಗಳು ಇರುತ್ತಿರಲು ಅನಾಥರಿಗೆ ಮರಣವುಂಟಾಗುವಂತೆ ಮರಣವುಂಟಾಯಿತಲ್ಲಾ! ಜನರ ಗತಿಯನ್ನು ತಿಳಿಯಲಿಕ್ಕೆ ಆಗಲಾರದು. ಧೃತರಾಷ್ಟ್ರನಿಗೆ ಹೀಗೆ ಕಾಡುಬೆಂಕಿಯಿಂದ ಮರಣವು ಏರ್ಪಟ್ಟಿಲ್ಲವಲ್ಲಾ! ಯಾವಾತನಿಗೆ ನೂರು ಜನ ಬಲಿಷ್ಠರಾದ ಮಕ್ಕಳಿದ್ದರು. ತಾನೂ ಹತ್ತು ಸಾವಿರ ಆನೆಗಳ ಬಲವುಳ್ಳವನಾಗಿದ್ದನು. ಅವನು ಕೊನೆಗಾಣುವಾಗ ಕಾಡಿನ ಬೆಂಕಿಯಿಂದ ಸಾಯುವ ಅವಸ್ಥೆಯನ್ನು ಹೊಂದಿದನಲ್ಲಾ! ಗಾಂಧಾರಿಗಾಗಿ ನಾನು ಹೆಚ್ಚಾಗಿ ದುಃಖವನ್ನು ಹೊಂದುವುದಿಲ್ಲ, ಏಕೆಂದರೆ ಅವಳು ಮಕ್ಕಳನ್ನೆಲ್ಲಾ ಕಳಕೊಂಡವಳು. ಪತಿವ್ರತೆಯಾಗಿ ಗಂಡನ ಲೋಕವನ್ನು ಹೊಂದಿದಳು.

ನಮ್ಮ ತಾಯಿಯಾದ ಕುಂತಿಗಾಗಿ ದುಃಖವನ್ನು ಹೊಂದಿರುವೆನು. ನಮ್ಮ ತಾಯಿಯು ಮಕ್ಕಳ ಮಹತ್ತಾದ ಐಶ್ವರ್ಯವನ್ನು ಅನುಭವಿಸದೆ ವನವಾಸವನ್ನೇ

ಅಂಗೀಕರಿಸಿದಳು. ನಮ್ಮ ರಾಜ್ಯ ಬಲ ಪರಾಕ್ರಮಗಳಿಗೆ ಧಿಕ್ಕಾರವಿರಲಿ. ನಾವು ಸತ್ತಪ್ರಾಯರಾಗಿ ಜೀವಿಸುತ್ತಿದ್ದೇವೆ. ಧರ್ಮರಾಜನ ಭೀಮನ ಅರ್ಜುನನ ತಾಯಿಯಾದವಳು ಅನಾಥಳಂತೆ ಬೆಂಕಿಯಿಂದ ಸುಟ್ಟು ಹೇಗೆ ಸತ್ತಳೆಂದು ಯೋಚಿಸುತ್ತಿರುವೆನು. ಅರ್ಜುನನು ವ್ಯರ್ಥವಾಗಿ ಅಗ್ನಿಗೆ ಖಾಂಡವವನವನ್ನು ಕೊಟ್ಟನು. ಅಗ್ನಿಗೆ ಸ್ವಲ್ಪವೂ ಉಪಕಾರ ಸ್ಮರಣೆಯಿಲ್ಲ. ಅರ್ಜುನನ ತಾಯಿಯನ್ನೇ ಸುಟ್ಟುಹಾಕಿದನು. ಬ್ರಾಹ್ಮಣವೇಷ ಹಾಕಿಕೊಂಡು ಅರ್ಜುನನ ಹತ್ತಿರ ಬೇಡಲಿಕ್ಕೆ ಬಂದ ಆ ಅಗ್ನಿಗೆ ಧಿಕ್ಕಾರವಿರಲಿ. ಹಾಗೆಯೇ ಆ ಅರ್ಜುನನ ಸತ್ಯಪ್ರತಿಜ್ಞೆಗೂ ಧಿಕ್ಕಾರವಿರಲಿ. ಧೃತರಾಷ್ಟ್ರನು ವ್ಯರ್ಥವಾಗಿ ಯಾವುದೋ ಒಂದು ಅಗ್ನಿಯಿಂದ ಸುಟ್ಟುಹೋದನಲ್ಲಾ ಎಂದು ನನಗೆ ಬಹಳ ದುಃಖವಾಗುತ್ತದೆ. ಅಷ್ಟು ತಪಸ್ಸು ಮಾಡಿದ, ರಾಜ್ಯವನ್ನು ಪರಿಪಾಲಿಸಿದ ರಾಜರ್ಷಿಯಾದ ಅವನಿಗೆ ಹೇಗೆ ಅಂತಹ ಮರಣವು ಸಂಭವಿಸಿತು? ಮಂತ್ರದಿಂದ ಪವಿತ್ರಗಳಾದ ಅವನ ಅಗ್ನಿಹೋತ್ರದ ಅಗ್ನಿಯಿರುತ್ತಿರಲು ಯಾವುದೋ ಬೆಂಕಿಯಿಂದ ಸುಟ್ಟುಹೋದನಲ್ಲಾ! ನಮ್ಮ ತಾಯಿಯಾದವಳು ಕೊನೆಯಕಾಲದಲ್ಲಿ ಬೆಂಕಿಯನ್ನು ನೋಡಿ ನಡುಗುತ್ತಾ ಹಾ ಧರ್ಮರಾಜ ಎಂದು ಕೂಗಿರಬೇಕು. ಭೀಮ! ನನ್ನನ್ನು ಭಯದಿಂದ ರಕ್ಷಿಸು ಎಂದು ಹೇಳುತ್ತಿರುವಾಗಲೇ ಸುತ್ತಲೂ ಬೆಂಕಿಯು ಬಂದು ಅವಳು ಸತ್ತಿರಬೇಕು. ಅವಳಿಗೆ ಮಕ್ಕಳಲ್ಲಿ ಸಹದೇವನು ಅತ್ಯಂತ ಪ್ರಿಯನಾದವನು. ಅವನೂ ಕೂಡ ತಾಯಿಯನ್ನು ರಕ್ಷಿಸಲಿಲ್ಲ'. ಹೀಗೆ ಹೇಳಿ ಪಾಂಡವರೆಲ್ಲರೂ ಅಳುವವರಾದರು. ಅವರು ಅಳುವ ಶಬ್ದವು ಮನೆಯಲ್ಲಿ ಎಲ್ಲಾ ಸ್ಥಳದಲ್ಲಿಯೂ ವ್ಯಾಪಿಸಿತು.

ನಾರದರು 'ಧೃತರಾಷ್ಟ್ರನು ವ್ಯರ್ಥವಾದ ಅಗ್ನಿಯಿಂದ ಸುಟ್ಟುಹೋಗಿಲ್ಲ. ಹಾಗೆ ನಾನು ಕೇಳಿರುವನೆನು. ಧೃತರಾಷ್ಟ್ರನು ವನಪ್ರವೇಶ ಮಾಡುವಾಗ ಇಷ್ಟಿಯನ್ನೂ ಮಾಡಿಸಿ ಅಗ್ನಿಹೋತ್ರದ ಅಗ್ನಿಯನ್ನು ಬಿಟ್ಟಿದ್ದನು. ಪುರೋಹಿತರೂ ಆ ಅಗ್ನಿಯನ್ನು ವನದಲ್ಲೇ ಬಿಟ್ಟು ಹೊರಟು ಹೋದರು. ಆ ಬೆಂಕಿಯೇ ಅಲ್ಲಿ ದೊಡ್ಡದಾಗಿ ಅದೇ ಕಾಡನ್ನೆಲ್ಲಾ ವ್ಯಾಪಿಸಿಕೊಂಡು ಸುಟ್ಟುಹಾಕಿತು ಎಂದು ನನಗೆ ಮುನಿಗಳು ಹೇಳಿದರು. ಧೃತರಾಷ್ಟ್ರನು ಗಂಗಾತೀರದಲ್ಲಿ ನಾನು ಹೇಳಿದ ರೀತಿಯಿಂದ ಅದೇ ಅಗ್ನಿಯಿಂದ ಸುಟ್ಟುಹೋದನು. ಈರೀತಿಯಾಗಿ ನನ್ನೊಡನೆ ಮುನಿಗಳು ತಿಳಿಸಿದರು. ಈರೀತಿ ಯಾದ ಧೃತರಾಷ್ಟ್ರನು ತನ್ನ ಅಗ್ನಿಹೋತ್ರ ಅಗ್ನಿಯಿಂದಲೇ ಸುಟ್ಟುಹೋದನು. ಅವನಿಗೋಸ್ಕರ ದುಃಖಪಡಬೇಡ. ಅವನು ಉತ್ತಮವಾದ ಗತಿಯನ್ನು ಹೊಂದಿ ದನು. ನೀನು ಸಹೋದರರಿಂದ ಕೂಡಿಕೊಂಡು ನಿನ್ನ ತಾಯಿಗೆ ನೀರನ್ನು ಬಿಡು' ಎಂದು ಹೇಳಿದರು.

ತರುವಾಯ ಧರ್ಮರಾಜನು ಎಲ್ಲಾ ಸಹೋದರರಿಂದಲೂ ಬಂಧುಗಳಿಂದಲೂ ಸಹಿತರಾಗಿ ಊರಿನ ಜನರಿಂದಲೂ ಕೂಡಿದವರಾಗಿ ಒಂದೇ ವಸ್ತ್ರವುಳ್ಳವರಾಗಿ ಗಂಗೆಗೆ ಹೋದರು. ಎಲ್ಲರೂ ಗಂಗೆಯಲ್ಲಿ ಮುಳುಗಿ ಯುಯುತ್ಸುವನ್ನು ಮುಂದೆ ಮಾಡಿಕೊಂಡು ಜಲತರ್ಪಣವನ್ನು ಮಾಡಿದರು. ಗಾಂಧಾರಿಗೂ ಕುಂತೀದೇವಿಗೂ ಜಲವನ್ನು ಕೊಟ್ಟರು. ತರುವಾಯ ಊರಿನ ಹೊರಗೇ ಅಶೌಚವನ್ನು ಅನುಷ್ಠಾನ ಮಾಡುತ್ತಾ ಇದ್ದರು. ತರುವಾಯ ಧರ್ಮರಾಜನು ಆಪ್ತರಾದವರನ್ನು ಗಂಗಾದ್ವಾರಕ್ಕೆ ಕಳುಹಿಸಿ ಅಲ್ಲಿ ಧೃತರಾಷ್ಟ್ರನಿಗಾಗ ಮಾಡಬೇಕಾದ ಎಲ್ಲಾ ಕಾರ್ಯಗಳನ್ನು ಮಾಡುವಂತೆ ಹೇಳಿದನು. ಹದಿನೆರಡನೆಯ ದಿವಸದಲ್ಲಿ ಧರ್ಮರಾಜನು ಅಶೌಚರಹಿತನಾಗಿ ಧೃತರಾಷ್ಟ್ರನನ್ನು ಗಾಂಧಾರಿಯನ್ನು ಕುಂತೀದೇವಿಯನ್ನೂ ಕುರಿತು ಬಂಗಾರ ಬೆಳ್ಳಿ ಹಾಸಿಗೆ ಇತ್ಯಾದಿ ಅನೇಕ ದಾನಗಳನ್ನು ಮಾಡಿದನು. ತರುವಾಯ ಅನೇಕ ಶ್ರಾದ್ಧಗಳನ್ನು ಮಾಡಿ ಹಸ್ತಿನಾವತಿಗೆ ಬಂದನು. ಧರ್ಮರಾಜನನ್ನು ಸಮಾಧಾನಪಡಿಸಿ ನಾರದರೂ ಹೊರಟುಹೋದರು. ಈರೀತಿಯಾಗಿ ಧೃತರಾಷ್ಟ್ರನಿಗೆ ಮಕ್ಕಳು ಸತ್ತಮೇಲೆ ವನದಲ್ಲಿ ಮೂರು ವರ್ಷಗಳೂ ಊರಲ್ಲಿ ಹದಿನೈದು ವರ್ಷಗಳೂ ಕಳೆದುಹೋದವು. ಧರ್ಮರಾಜನು ಮನಸ್ಸಿನಲ್ಲಿ ಅತಿಸಂತೋಷರಹಿತನಾಗಿ ರಾಜ್ಯಭಾರವನ್ನು ಮಾಡಿದನು. ಸತ್ಪುತ್ರರಾದ ಪಾಂಡವರು ಉತ್ತರಕ್ರಿಯೆಯನ್ನು ಮಾಡಿದ ಕಾರಣ ಧೃತರಾಷ್ಟ್ರಾದಿಗಳು ಉತ್ತಮವಾದ ಸುಖವನ್ನು ಹೊಂದಿದರು. ಸಂಜಯನು ವೇದವ್ಯಾಸದೇವರ ಬಳಿಗೆ ಹೋಗಿ ಅವರ ಸೇವೆಯಿಂದ ತನ್ನ ಲೋಕವನ್ನು ಹೊಂದಿದನು. ಹೀಗೆ ಪಾಂಡವರು ಹದಿನೆಂಟು ವರ್ಷ ರಾಜ್ಯಭಾರವನ್ನು ಮಾಡುತ್ತಾ ಕಾಲವನ್ನು ಕಳೆದರು.



## ಪಾಂಡವರ ಸ್ವರ್ಗಾರೋಹಣ [1]

ಶ್ರೀಕೃಷ್ಣಪರಮಾತ್ಮನು ಬಲರಾಮದೇವರೂ ಇತರ ಯಾದವರೂ ತಮ್ಮ ಲೋಕಕ್ಕೆ ತೆರಳಿದ ವಿಷಯವನ್ನು ಅರ್ಜುನನು ಬಂದು ಪಾಂಡವರೊಡನೆ ತಿಳಿಸಿದನು. 'ಪರಮಾತ್ಮನು ಹೊರಟುಹೋದಮೇಲೆ ನಾವೂ ಅವನನ್ನು ಅನುಸರಿಸುವೆವು. ಪರಮಾತ್ಮನಿಂದ ರಹಿತವಾದ ಭೂಮಿಯನ್ನು ನಾವು ಅನುಭವಿಸುವುದೂ ಇಲ್ಲ. ರಕ್ಷಿಸುವುದೂ ಇಲ್ಲ' ಎಂದು ಪಾಂಡವರು ಪ್ರತಿಜ್ಞೆ ಮಾಡಿದ್ದರು. ಅದಕ್ಕೆ

1. ಮ.ತಾ.ನಿ. ಅ-32

ಅನುಸಾರವಾಗಿ ಅವರು ಕೃಷ್ಣಪರಮಾತ್ಮನ ಸ್ತ್ರೀಯರನ್ನು ಅಪಹರಿಸಿಕೊಂಡು ಹೋದ ಮ್ಲೇಂಛರನ್ನು ತಾವು ಸಂಹರಿಸದೆ ಮೊಮ್ಮಗನಾದ ಪರೀಕ್ಷಿತ್‌ರಾಜನೊಡನೆ ಹೇಳಿದರು. ಅವನು ಹಾಗೆಯೇ ಮಾಡಿದನು.

ತರುವಾಯ ಕಾಶಿರಾಜನ ಮಗಳಾದ ಕಾಳೀದೇವಿಯು ಯೋಗಸಾಮರ್ಥ್ಯ ದಿಂದ ದೇಹವನ್ನು ಪರಿತ್ಯಾಗ ಮಾಡಿ ದ್ರೌಪದೀದೇವಿಯರಿಂದ ಐಕ್ಯವನ್ನು ಹೊಂದಿದರು. ಸುಭದ್ರೆಯೇ ಮೊದಲಾದ ಪಾಂಡವರ ಪತ್ನಿಯರೂ, ಯುಯುತ್ಸವೂ ಪರೀಕ್ಷಿದ್ರಾಜನ ಶಿಕ್ಷೆಗಾಗಿ ಪಾಂಡವರ ಆಜ್ಞೆಯಿಂದಲೇ ಹಸ್ತಿನಾವತಿಯಲ್ಲಿಯೇ ಇದ್ದರು. ತರುವಾಯ ಪಾಂಡವರು ದ್ರೌಪದೀದೇವಿಯರಿಂದ ಸಹಿತರಾಗಿ ಪರಮಾತ್ಮನ ಧ್ಯಾನಮಾಡಿ ವೀರಾಧ್ವಾನವನ್ನು ಅಂದರೆ ಈಶಾನ್ಯ ದಿಕ್ಕನ್ನು ಕುರಿತು ಹೋದರು. ಹೋಗುತ್ತಿರುವಾಗ ಅರ್ಜುನನು ಲೋಭದಿಂದ ಧನುಸ್ಸನ್ನು ಬಿಡಲಿಲ್ಲ. ಸಮುದ್ರದ ಬಳಿಯಲ್ಲಿ ಅಗ್ನಿದೇವರು ಬಂದು ಧರ್ಮರಾಜನ ಹತ್ತಿರ ಅರ್ಜುನನ ಧನುಸ್ಸನ್ನು ಕೇಳಿದರು. ತರುವಾಯ ಧರ್ಮರಾಜನ ಮಾತಿನಿಂದ ಅರ್ಜುನನು ಧನುಸ್ಸನ್ನು ಸಮುದ್ರಕ್ಕೆ ಹಾಕಿದನು. ಅಗ್ನಿದೇವರು ವರುಣದೇವರ ಧನುಸ್ಸನ್ನು ವರುಣದೇವರಿಗೆ ಕೊಡಿಸಿ ಕಾಣದೆ ಹೋದರು.

ಪಾಂಡವರು ವೇಗದಿಂದ ಹಾರುತ್ತಾ ಯೋಗಸಾಮರ್ಥ್ಯವುಳ್ಳವರಾಗಿ ಏಳು ದಿವಸಗಳಲ್ಲಿ ಏಳು ಸಮುದ್ರಗಳನ್ನು ದಾಟಿ ಭೂಮಿಗೆ ಪ್ರದಕ್ಷಿಣೆ ಬಂದು ಎಲ್ಲಿಯೂ ನಿಲ್ಲದೆ ಗಂಧಮಾದನ ಪರ್ವತಕ್ಕೆ ಹೋದರು. ಆ ನಾರಾಯಣ ಕ್ಷೇತ್ರದಲ್ಲಿ ದ್ರೌಪದೀದೇವಿಯರನ್ನು ಆರಂಭಿಸಿ ಸಹದೇವಾದಿಗಳ ದೇಹಗಳು ಕ್ರಮದಿಂದ ಬಿದ್ದವು. ಅವರು ದೇಹಸಹಿತವಾಗಿ ಸ್ವರ್ಗವನ್ನು ಹೊಂದಲು ಇಚ್ಛೆಯಿಲ್ಲದವರಾದ ಕಾರಣವೇ ಅವರ ದೇಹವು ಬಿದ್ದು ಹೋಯಿತು ಎಂಬ ಸತ್ಯವಾದ ವಿಷಯವನ್ನು ತಿಳಿದವರಾದರೂ ಭೀಮಸೇನ ದೇವರು 'ಯಾವ ಯಾವ ದೋಷದಿಂದ ಇವರ ದೇಹಗಳು ಬಿದ್ದವು' ಎಂದು ಕೇಳಿದರು. ಮರಣಕಾಲದಲ್ಲಿ ಯಾರು ಮೃತನ ದೋಷವನ್ನು ಹೇಳುವನೋ ಅವನಿಗೆ ಮೃತನಾದವನ ಋಣವು ಪರಿಹೃತವಾಗುವುದೆಂದು ಶಾಸ್ತ್ರವಿರುವ ಕಾರಣ ಭೀಮಸೇನದೇವರು ಧರ್ಮರಾಜನೊಡನೆ ಋಣವನ್ನು ಪರಿಹರಿಸುವುದಕ್ಕಾಗಿ ದೋಷಗಳನ್ನು ಹೇಳಿಸಿದರು. ಧರ್ಮರಾಜನು ಪಾಂಡವರ ದೇಹಗಳು ಅವರ ಇಚ್ಛೆಯಿಂದಲೇ ಬಿದ್ದುಹೋಗಿವೆಯೆಂಬ ವಿಷಯವನ್ನು ತಿಳಿಯದೆ 'ಒಂದು ಕಾರ್ಯವು ಕಾರಣವಿಲ್ಲದೆ ಆಗಲಾರದು. ಆದುದರಿಂದ ಇವರ ದೇಹ ಪರಿತ್ಯಾಗವು ದೋಷದಿಂದ ಇರಬಹುದು' ಎಂದು

ಊಹಿಸಿ ಒಂದೊಂದು ದೋಷವನ್ನು ಹೇಳಿದನು. ಆದರೆ **'ದ್ರೌಪದೀ ದೇವಿಯರೇ ಮೊದಲಾದವರು ತಮ್ಮ ಇಚ್ಛೆಯಿಂದಲೇ ದೇಹವನ್ನು ಬಿಟ್ಟು ಹೊರಟುಹೋದರು'** ಎಂದು **ಶ್ರುತಿಯಲ್ಲಿಯೇ** ಹೇಳಿರುವ ಕಾರಣ ಪಾಂಡವರು ದೋಷದಿಂದ ದೇಹವನ್ನು ಪರಿತ್ಯಜಿಸಿದರು ಎಂದು ತಿಳಿಯಬಾರದು. ಭೀಮಸೇನದೇವರು ಧರ್ಮರಾಜನ ಬಾಯಿಯಿಂದ ತಮ್ಮವರ ದೋಷವನ್ನು ಹೇಳಿಸಿ ಋಣವನ್ನು ಬಿಡಿಸಿ ತಾನೂ ದೇಹವನ್ನು ಪರಿತ್ಯಜಿಸಿ ಉತ್ತಮವಾದ ಸ್ಥಾನವನ್ನು ಹೊಂದಿದರು. ಈರೀತಿಯಾಗಿ **ಸ್ಕಾಂದಪುರಾಣದಲ್ಲಿ** ಋಷಿಗಳೊಡನೆ ವೇದವ್ಯಾಸದೇವರು ಹೇಳಿದಂತೆ ಇದೆ.

ಆದುದರಿಂದ ದ್ರೌಪದೀದೇವಿಯರೇ ಮೊದಲಾದವರು ದೇಹದಿಂದ ಸಹಿತವಾಗಿ ಸ್ವರ್ಗಲೋಕಕ್ಕೆ ಹೋಗಲಿಕ್ಕೆ ಇಚ್ಛೆಯಿಲ್ಲದ ಕಾರಣ ತಮ್ಮ ಇಚ್ಛೆಯಿಂದಲೇ ದೇಹವನ್ನು ಪರಿತ್ಯಾಗ ಮಾಡಿದರಲ್ಲದೆ ದೋಷದಿಂದ ಅಲ್ಲ. ಧರ್ಮರಾಜನು ಮಾತ್ರ ಭೀಮಸೇನದೇವರು ಮಾಡಿದ ಗದಾಯುದ್ಧವು ಅಧರ್ಮಯುದ್ಧವೆಂದು ತಿಳಿದುಕೊಂಡಂತೆ ಇವರು ದೇಹಗಳೂ ಒಂದೊಂದು [1]ದೋಷಗಳಿಂದ ಹೋಗಿರಬಹುದೆಂದು ಊಹಿಸಿ ಹೇಳಿದನು. ಆದರೆ ಅವನು ಹೇಳಿದ ಕಾರಣವು ಸರಿಯಲ್ಲ. ಅವರು ತಮ್ಮ ಇಚ್ಛೆಯಿಂದಲೇ ದೇಹವನ್ನು ಪರಿತ್ಯಜಿಸಿದರು. ಮಾತ್ರವಲ್ಲದೆ ಧರ್ಮರಾಜನು ಒಬ್ಬೊಬ್ಬರಲ್ಲಿ ಹೇಳಿದ ದೋಷಗಳು ಸರಿಯಾದುವೇ ಅಲ್ಲ.

ದ್ರೌಪದೀದೇವಿಯರ ದೇಹವು ಬೀಳಲು ಭೀಮಸೇನದೇವರು 'ಯಾವ ದೋಷದಿಂದ ದ್ರೌಪದೀದೇವಿಯ ದೇಹವು ಬಿದ್ದುಹೋಯಿತು' ಎಂದು ಕೇಳಲು ಧರ್ಮರಾಜನು 'ಇವಳಿಗೆ ಅರ್ಜುನನಲ್ಲಿ ವಿಶೇಷವಾದ ಸ್ನೇಹವಿದ್ದಿತು. ಅದರ ಫಲವನ್ನು ಅನುಭವಿಸಿದಳು' ಎಂದು ಹೇಳಿ ಮುಂದೆ ಹೋದನು. ಭೀಮಸೇನ ದೇವರನ್ನು ಬಿಟ್ಟು ಉಳಿದ ನಾಲ್ಕು ಜನರಲ್ಲಿ ಅರ್ಜುನನೇ ಸ್ವರೂಪದಿಂದ ಉತ್ತಮ ನಾದ ಕಾರಣ ಅವನಲ್ಲಿ ದ್ರೌಪದೀದೇವಿಯರು ಇತರರಿಗಿಂತ ಹೆಚ್ಚಿಗೆ ಸ್ನೇಹವನ್ನು ಮಾಡಿದ್ದು ಗುಣವಲ್ಲದೆ ದೋಷವಾಗಲಾರದು. ಧರ್ಮರಾಜನು ಮಾತ್ರ ಅದನ್ನು ದೋಷವೆಂದು ತಪ್ಪಾಗಿ ತಿಳಿದುಕೊಂಡನು.

ಆಮೇಲೆ ಧರ್ಮರಾಜನು ಭೀಮಸೇನದೇವರೊಡನೆ ಸಹದೇವನು ತನಗೆ ಸಮಾನನಾದ ಬುದ್ಧಿವಂತರೇ ಇಲ್ಲವೆಂದು ಅಹಂಕಾರವುಳ್ಳವನಾಗಿದ್ದನು. ಆದುದ ರಿಂದ ಅವನ ದೇಹವು ಬಿದ್ದುಹೋಯಿತೆಂದು, ನಕುಲನಿಗೂ ತಾನು ರೂಪದಿಂದ

1. ದೋಷದಿಂದ

ಎಲ್ಲರಿಗಿಂತಲೂ ಅಧಿಕನೆಂದು ಅಹಂಕಾರವಿದ್ದ ಕಾರಣ ಅವನ ದೇಹವೂ ಬಿದ್ದುಹೋಯಿತೆಂದೂ, ಅರ್ಜುನನು ತಾನೊಬ್ಬನೇ ಎಲ್ಲ ಶತ್ರುಗಳನ್ನು ಸಂಹರಿಸುವೆನು ಎಂದು ಹೇಳಿದನು. ಆದರೆ ಹಾಗೆ ಮಾಡಲಿಲ್ಲ. ಆದಕಾರಣ ಅವನ ದೇಹವು ಬಿದ್ದುಹೋಯಿತೆಂದೂ ಹೇಳಿ ಭೀಮಸೇನದೇವರೇ ಕೆಳಗೆ ಬಿದ್ದು ನಾನು ಯಾವ ದೋಷದಿಂದ ಕೆಳಗೆ ಬಿದ್ದಿರುವೆನೆಂದು ಕೇಳಲು ಧರ್ಮರಾಜನು 'ನೀನು ತುಂಬಾ ಊಟ ಮಾಡುತ್ತಿದ್ದಿ. ಮಹಾಬಲಿಷ್ಠನೆಂದು ಅಹಂಕಾರ ಪಡುತ್ತಿದ್ದಿ. ಆದುದರಿಂದ ನೀನೂ ಬಿದ್ದಿರುವಿ' ಎಂದು ಹೇಳುತ್ತಾ ಮುಂದೆ ಹೊರಟುಹೋದನು.

ಈರೀತಿಯಿಂದ ಧರ್ಮರಾಜನು ಹೇಳಿದ ಕಾರಣಗಳೊಂದೂ ಸರಿಯಲ್ಲ. ಭೀಮಸೇನದೇವರು ವಾಯುದೇವರ ಅವತಾರಭೂತರು. ವಾಯುದೇವರು ಸರ್ವಪ್ರಾಣಿಚೇಷ್ಟಕರಾಗಿ ಸರ್ವಪ್ರಾಣಿಗಳ ದೇಹದಲ್ಲಿ ಇದ್ದುಕೊಂಡು ಜನರು ಭೋಜನ ಮಾಡುವಾಗ 'ಪ್ರಾಣಾಯಸ್ವಾಹಾ' ಇತ್ಯಾದಿ ರೀತಿಯಾಗಿ ಕೊಡುವ ಐದು ಆಹುತಿಗಳನ್ನು ಸ್ವೀಕರಿಸುವವರು. ಲೋಕದಲ್ಲಿ ಒಬ್ಬೊಬ್ಬರು ಕೊಡುವ ಪಂಚಾಹುತಿಗಳ ಅನ್ನವನ್ನು ಒಟ್ಟಿಗೆ ಸೇರಿಸಿದರೆ ಮೇರುಪರ್ವತಕ್ಕಿಂತಲೂ ಅಧಿಕ ವಾಗಬಹುದು. ಪ್ರತಿನಿತ್ಯವೂ ಎರಡು ಹೊತ್ತೋ ಮೂರು ಹೊತ್ತೋ ಅಷ್ಟು ಅನ್ನವನ್ನು ಊಟಮಾಡುವ ವಾಯುದೇವರ ಅವತಾರಭೂತರಾದ ಭೀಮಸೇನ ದೇವರಿಗೆ ಸಾವಿರಪಡಿ ಅಕ್ಕಿಯ ಅನ್ನ ಇತ್ಯಾದಿ ಅಧಿಕವಾದ ಅನ್ನವನ್ನು ಊಟ ಮಾಡುವುದು ದೋಷವೇ ಅಲ್ಲ. ಮತ್ತು ಅವರು ಎಲ್ಲ ಶತ್ರುಗಳನ್ನೂ ಸಂಹರಿಸುವ ಮಹಾಬಲವುಳ್ಳವರು. ಆದುದರಿಂದ ತಾನು ಬಲವುಳ್ಳವನೆಂದು ಇದ್ದ ವಿಷಯವನ್ನು ಹೇಳಿಕೊಂಡರೆ ದೋಷವಾಗಲಾರದು. ತನ್ನಲ್ಲಿ ಇಲ್ಲದಿದ್ದನ್ನು ಹೇಳಿಕೊಂಡರೆ ದೋಷವಾಗುವುದಲ್ಲದೆ ಇದ್ದದ್ದನ್ನು ಹೇಳಿಕಂಡರೆ ದೋಷವಾಗಲಾರದು. ಹಾಗೆ ದೋಷವಾಗುವುದಾದರೆ ಗೀತೆಯಲ್ಲಿ ಶ್ರೀಕೃಷ್ಣನು 'ಮತ್ತಃ ಪರತರಂ ನಾನ್ಯತ್ ಕಿಂಚಿದಸ್ತಿ ಧನಂಜಯ' ಎಂದು ತನಗಿಂತ ಉತ್ತಮರು ಇನ್ನೊಬ್ಬರು ಇಲ್ಲವೆಂದು ಹೇಳಿದಕಾರಣ ಅವನಿಗೂ ದೋಷವಾಗಬೇಕಾದೀತು. ಭಗವಂತನು ತನ್ನಲ್ಲಿ ಇದ್ದದ್ದನ್ನೇ ತಿಳಿದುಕೊಂಡ ಪ್ರಯುಕ್ತ ದೋಷವಲ್ಲವೆನ್ನುವುದಾದರೆ ವಾಯುದೇವರ ಅವತಾರಭೂತರಾದ ಭೀಮಸೇನದೇವರಿಗೂ ಇದ್ದದ್ದನ್ನೇ ತಿಳಿದುಕೊಂಡ ಪ್ರಯುಕ್ತ ದೋಷವಾಗುವುದಿಲ್ಲ.

ಹಾಗೆಯೇ ಅರ್ಜುನನು ತನ್ನನ್ನು ವೀರನೆಂದು ತಿಳಿದುಕೊಂಡದ್ದೂ ನಕುಲನು ತಾನು ರೂಪವಂತನೆಂದು ತಿಳಿದುಕೊಂಡದ್ದೂ ಸಹದೇವನು ತಾನು ನೀತಿಯನ್ನು

ತಿಳಿದವನೆಂದು ತಿಳಿದುಕೊಂಡದ್ದು ತಮ್ಮಲ್ಲಿ ಇದ್ದ ಧರ್ಮವನ್ನೇ ತಿಳಿದುಕೊಂಡುದ್ದಾದ ಕಾರಣ ಅವರಿಗೂ ದೋಷವಾಗಲಾರದು.

ಯದ್ಯಪಿ ಅರ್ಜುನ ನಕುಲ ಸಹದೇವರು ಕೆಲವು ಸಮಯದಲ್ಲಿ ಕಲ್ಯಾದಿ ಅಸುರರ ಆವೇಶದಿಂದ ತಮ್ಮ ಯೋಗ್ಯತೆಗಿಂತ ಹೆಚ್ಚಾಗಿಯೂ ತಿಳಿದುಕೊಳ್ಳುತ್ತಾರೆ. ಆದರೆ ಅದು ಅವರಿಗೆ ಆಗ ದೇಹವು ಬಿದ್ದುಹೋಗಲಿಕ್ಕೆ ಕಾರಣವಾಗಲಾರದು. ತಮಗಿಂತ ವಸ್ತುತಃ ಚಿಕ್ಕವರಾದವರಿಂದ ತಾನು ದೊಡ್ಡವನೆಂದು ತಿಳಿದುಕೊಂಡರೆ ಅವರೋಕ್ಷಜ್ಞಾನಿಗಳಿಗೆ ಅದು ದೋಷವೇ ಆಗುವುದಿಲ್ಲ. ತನಗಿಂತ ಸ್ವರೂಪದಿಂದ ಉತ್ತಮರಾದವರಿಗಿಂತ ತಾನು ಉತ್ತಮನೆಂದು ತಿಳಿದುಕೊಂಡುದಾದರೆ ಅಪರೋಕ್ಷ ಜ್ಞಾನಿಗಳಾದ ಮನುಷ್ಯರಿಗೆ ಮೋಕ್ಷದಲ್ಲಿ ಆನಂದವು ಸ್ವಲ್ಪ ಕಡಿಮೆಯಾಗುವುದು. ದೇವತೆಗಳಿಗಾದರೆ ಅತಿಹೆಚ್ಚಾದ ಪುಣ್ಯವನ್ನು ಮಾಡಿ ಆ ಮಾಡಿದ ಪುಣ್ಯಕ್ಕೆ ಫಲವಿಲ್ಲದೆ ಈ ದೋಷದ ಪರಿಹಾರವಾಗುವುದು. ದೇಹವು ಬಿದ್ದುಹೋಗುವುದು ಆದರ ಫಲವಲ್ಲವೇ ಅಲ್ಲ. ಮನುಷ್ಯರಿಗೂ ಕೂಡ ಅಪರೋಕ್ಷಜ್ಞಾನವು ಬಂದಮೇಲೆ ಮಾಡಿದ ಗುಣದೋಷಗಳು ಹೆಚ್ಚಿಗೆ ಕಡಿಮೆಯಾಗುವುದಕ್ಕೆ ಸಂಸಾರದಲ್ಲಿ ಇರುವ ದೇಹವು ಬಿದ್ದುಹೋಗುವುದು ಫಲವಲ್ಲ. ಮೋಕ್ಷದಲ್ಲಿ ಆನಂದವು ಹೆಚ್ಚು, ಕಡಿಮೆಯಾಗುವುದೇ ಫಲವು. ಹೀಗಿರುವಾಗ ಉತ್ತಮ ಜ್ಞಾನಿಗಳಾದ ದೇವತೆಗಳಿಗೆ ಸಂಸಾರದಲ್ಲಿ ದೇಹಬಿದ್ದು ಹೋಗುವುದು, ಫಲವಲ್ಲವೆಂದು ಹೇಳಬೇಕಾದದೇ ಇಲ್ಲ. ದೇಹವು ಇರಲಿಕ್ಕೆ ಬೇಕಾದ ಪ್ರಾರಬ್ಧಕರ್ಮವು ಮುಗಿದ ಮೇಲೆ ಎಲ್ಲರ ದೇಹವೂ ಬಿದ್ದು ಹೋಗುವುದು. ಆದುದರಿಂದ ಪಾಂಡವರ ದೇಹವು ಒಂದೊಂದು ದೋಷದಿಂದ ಬಿದ್ದುಹೋಯಿತೆಂದು ಧರ್ಮರಾಜನು ಹೇಳಿದ್ದು ಸ್ವಬುದ್ಧಿಯಿಂದಲೇ ಹೇಳಿದ್ದಲ್ಲದೆ ಅದು ಶಾಸ್ತ್ರಕ್ಕೆ ಸಮ್ಮತವಲ್ಲ.

ಧರ್ಮರಾಜನೂ ಆ ದೇಹದಿಂದ ಸ್ವರ್ಗವನ್ನು ಅನುಭವಿಸಲಿಲ್ಲ. ಸ್ವರ್ಗಕ್ಕೆ ಹೋದಮೇಲೆ ಅಲ್ಲಿ ಗಂಗೆಯಲ್ಲಿ ಮುಳುಗಿ ಆ ದೇಹವನ್ನು ಬಿಟ್ಟು ಬೇರೆ ದೇಹದಿಂದಲೇ ಸ್ವರ್ಗವನ್ನು ಅನುಭವಿಸಿದನು. ಭೀಮಸೇನದೇವರಿಗಂತೂ ಅಹಂಕಾರಾದಿ ದೋಷಗಳು ಇಲ್ಲವೇ ಇಲ್ಲ. ಅನಾದಿಕಾಲದಿಂದ ಸರ್ವದೋಷರಹಿತ ರಾದ ಅಧಿಕ ಗುಣವುಳ್ಳವರಾದ ಋಜುಗಳೆಂಬ ದೇವತೆಗಳೇ ವಾಯುದೇವರ ಪದವಿಗೆ ಬರುವವರು. ಆ ವಾಯುದೇವರೇ ಭೀಮಸೇನದೇವರು. ಅವರಿಗೆ ಹೇಗೆ ಅಹಂಕಾರ ಬರುವುದು? ಆದುದರಿಂದ ಧರ್ಮರಾಜನು ಭೀಮಸೇನದೇವರ ಗದಾಯುದ್ಧವನ್ನು ಅಧರ್ಮ ವೆಂದು ತಿಳಿದುಕೊಂಡಂತೆ ಪಾಂಡವರ ದೇಹತ್ಯಾಗವೂ

ದೋಷದಿಂದ ಎಂದು ತಿಳಿದುಕೊಂಡನಲ್ಲದೆ ಅವನು ತಿಳಿದುದು ಶಾಸ್ತ್ರಸಮ್ಮತವಲ್ಲ. ತಮಗಿಂತ ಪೂಜ್ಯರಾದವರಿಗಿಂತ ಮೊದಲು ತಮ್ಮ ದೇಹವು ಬೀಳಲಿ ಎಂದು ಅವರ ಇಚ್ಛೆಯಿಂದಲೇ ಅವರ ದೇಹವು ಬಿದ್ದಿತು. ಮೋಕ್ಷಕ್ಕೆ ಹೋಗುವಾಗ ದೇವತೆಗಳಿಗೆ ಉತ್ತಮದೇವತೆಗಳಿಗಿಂತ ಮೊದಲೇ ದೇಹವು ಲಯವನ್ನು ಹೊಂದುವುದು. ಅದು ಪಾಪದಿಂದ ಅಲ್ಲ. ಅವರ ಕರ್ಮಕ್ಷಯದಿಂದ ಇಚ್ಛೆಯಿಂದಲೇ. ಅದೇ ರೀತಿಯಾಗಿ ಪಾಂಡವರ ದೇಹತ್ಯಾಗವೂ ಆಯಿತು.

ಭೀಮಸೇನದೇವರ ದೇಹವೂ ಬೀಳಲು ಧರ್ಮರಾಜನು ಹಿಂದೆ ತಿರುಗಿಯೂ ಕೂಡ ನೋಡದೆ ತನ್ನೊಡನೆ ಅಷ್ಟರವರೆಗೂ ಬರುತ್ತಿದ್ದ ನಾಯಿಯೊಡನೆ ಮುಂದೆ ಹೋದನು. ಆಗ ದೇವರಥವು ಬಂದಿತು. ದೇವದೂತರು ರಥದಲ್ಲಿ ಕೂತು ಕೊಳ್ಳಲಿಕ್ಕೆ ಹೇಳಿದರು. ಧರ್ಮರಾಜನು 'ನಾಯಿಯನ್ನು ರಥದಲ್ಲಿ ಹತ್ತಿಸದೆ ನಾನು ಹತ್ತಲಾರೆನು' ಎಂದನು. ದೇವದೂತನು ನಾಯಿಯನ್ನು ರಥದಲ್ಲಿ ಹತ್ತಿಸುವುದು ಯುಕ್ತವಲ್ಲವೆಂದನು. ಹಾಗಾದರೆ 'ನಾನು ರಥವನ್ನು ಹತ್ತಲಾರೆನು' ಎಂದು ಧರ್ಮರಾಜನು ಹೇಳಿದನು. ಆಗ ನಾಯಿಯ ಸ್ಥಾನದಲ್ಲಿ ಯಮದೇವರು ಕಾಣಿಸಿಕೊಂಡರು. ಅಂದರೆ ಧರ್ಮರಾಜನಿಗೆ ಕೀರ್ತಿಯನ್ನು ಉಂಟುಮಾಡುವುದ ಕ್ಕಾಗಿ ಯಮದೇವರೇ ನಾಯಿರೂಪದಿಂದ ಬಂದಿದ್ದರು. ತರುವಾಯ ಧರ್ಮ ರಾಜನನ್ನು ಯಮದೇವರು ಹೊಗಳಿದರು. ದೇವರಥವನ್ನು ಏರಿ ಧರ್ಮರಾಜನು ಮೇಲಿನ ಲೋಕಗಳಿಗೆ ಹೋದನು. ಎಲ್ಲಾ ರಾಜರನ್ನೂ ದಾಟಿಹೋದನು. ಎಲ್ಲಾ ಲೋಕಗಳಿಗಿಂತಲೂ ಮೇಲಿರುವ ಇಂದ್ರದೇವರ ಲೋಕಕ್ಕೆ ಹೋದಮೇಲೆ ಇದೇ ನಿನಗೆ ಸ್ಥಾನವೆಂದು ಹೇಳಿದರು. ಅಲ್ಲಿ ಸಹೋದರರಿಂದ ಸಹಿತನಾಗಿ ಎಲ್ಲರಿಂದಲೂ ಮೇಲೆ ಕೂತುಕೊಂಡು ಜ್ವಲಿಸುತ್ತಿದ್ದ ದುರ್ಯೋಧನನನ್ನು ನೋಡಿದನು. ಅವನನ್ನು ನೋಡಿ ಧರ್ಮರಾಜನಿಗೆ ಕೋಪವು ಬಂದಿತು. ಕೋಪದಿಂದ ಕಣ್ಣುಗಳನ್ನು ಮುಚ್ಚಿಕೊಂಡನು. 'ನನ್ನ ಸಹೋದರರೂ ದ್ರೌಪದಿಯೂ ಎಲ್ಲಿರುವರು? ಕರ್ಣಾದಿ ಬಂಧುಗಳು ಎಲ್ಲಿ? ಧೃಷ್ಟದ್ಯುಮ್ನಾದಿಗಳು ಎಲ್ಲಿ? ಘಟೋತ್ಕಚನೇ ಮೊದಲಾದ ಮಕ್ಕಳು ಎಲ್ಲಿ? ಯಾದವರು ಎಲ್ಲಿ?' ಎಂದು ಧರ್ಮರಾಜನು ದೇವತೆಗಳೊಡನೆ ಕೇಳಿದರು.

ಅದಕ್ಕೆ ಅವರು 'ಅವರನ್ನು ಯಾಕೆ ವಿಚಾರಿಸುವಿ. ಇಲ್ಲಿ ಅವರವರು ಮಾಡಿದ ಕರ್ಮದ ಫಲವನ್ನು ಅವರವರು ಅನುಭವಿಸುವರು' ಎಂದು ಹೇಳಿದರು. ಅದಕ್ಕೆ ಧರ್ಮರಾಜನು 'ಈ ದುರ್ಯೋಧನನು ಮಹಾಪಾಪಿಯು. ಭೂಮಿಯ ನಾಶಕ್ಕೇ

ಕಾರಣನಾಗಿರುವನು. ಎಲ್ಲರ ಮೇಲೆಯೂ ಸಂದೇಹಪಡುವವನು. ಮಿತ್ರದ್ರೋಹಿಯು. ಪರಮಾತ್ಮನಿಗೆ ಪರಾಙ್ಮುಖನು. ನಾಸ್ತಿಕನು. ವಂಚಕನು. ಪರಮಾತ್ಮನನ್ನು ಪರಮಾತ್ಮನ ಭಕ್ತರನ್ನು ದ್ವೇಷಿಸುವವನು. ಇವನು ಹೇಗೆ ಈ ಸ್ಥಾನವನ್ನು ಹೊಂದಿದನು? ಸರ್ವಧರ್ಮವನ್ನು ತಿಳಿದವರಾದ ಪರಮಾತ್ಮನ ಭಕ್ತರಾದ ಪರಮಧರ್ಮಿಷ್ಠರಾದ ನನಗೆ ಬೇಕಾದವರಾದ ಯಾರೂ ಇಲ್ಲಿ ಏಕೆ ಕಾಣಿಸುವುದಿಲ್ಲ? ಎಲ್ಲಿ ಸಜ್ಜನರು ಇರುವರೋ ಅಲ್ಲಿಯೇ ನಾನು ಇರಬೇಕು. ಅದು ನರಕವಾದರೂ ಆಗಲಿ. ಈ ಪಾಪಿಯೊಡನೆ ಇಲ್ಲಿ ನಾನಿರಲಾರೆನು' ಎಂದು ಹೇಳಿದನು. ಆಮೇಲೆ ತನ್ನವರನ್ನು ನೋಡಬೇಕೆಂದು ಆಸೆಪಡುವ ಧರ್ಮರಾಜನಿಗೆ ದೇವತೆಗಳು ದೂತನನ್ನು ಕಳುಹಿಸಿದರು.

ದೂತನು ತೋರಿಸಿದ ಮಾರ್ಗದಿಂದ ಧರ್ಮರಾಜನು ಮುಂದೆ ಹೋದನು. ದಾರಿಯಲ್ಲಿ ತುಂಬಾ ದುರ್ವಾಸನೆಯು ಬರುತ್ತಿತ್ತು. ತುಂಬಾ ಕತ್ತಲೆಯಾಗಿದ್ದಿತು. ಸ್ವಲ್ಪ ದೂರ ಹೋದಮೇಲೆ ಧರ್ಮರಾಜನಿಗೆ ಆ ದುರ್ವಾಸನೆಯನ್ನು (ಕಂಪನ್ನು) ಸಹಿಸಲಿಕ್ಕೆ ಸಾಧ್ಯವಾಗದೆ ಹಿಂದಿರುಗಿ ಬರಲಿಕ್ಕೆ ಇಚ್ಛಿಸಿದನು. ಅಲ್ಲಿ ತನ್ನವರು ಮಾತಾಡುವಂತೆ ಕೇಳಿಸಿತು. 'ರಾಜನೇ! ಒಂದು ಕ್ಷಣ ಇಲ್ಲಿಯೇ ನಿಲ್ಲು. ನಿನ್ನ ಸನ್ನಿಧಾನದಿಂದ ನಮಗೆ ಸ್ವಲ್ಪ 'ಕಡಿಮೆಯಾಗಿದೆ' ಎಂಬ ಮಾತು ಕೇಳಿಸಿತು. ತುಂಬಾ ದುಃಖದಿಂದ ಹೇಳಿದ ಮಾತಿನಂತೆ ಇದ್ದ ಕಾರಣ ಯಾರ ಮಾತು ಎಂದು ಧರ್ಮರಾಜನಿಗೆ ತಿಳಿಯಲಿಲ್ಲ. ಆದರಿಂದ ಅವನು 'ನೀವು ಯಾರು?' ಎಂದು ಕೇಳಿದನು. ಆಗ 'ನಾನು ಭೀಮನು. ನಾನು ಅರ್ಜುನನು, ನಾನು ಕರ್ಣನು' ಇತ್ಯಾದಿ ಹೇಳಿದಂತೆ ಕೇಳಿಸಿತು. ಅದನ್ನು ಕೇಳಿ ಧರ್ಮರಾಜನಿಗೆ ಕೃಪೆಯುಂಟಾಯಿತು. ಕೋಪವೂ ಬಂದಿತು. ದೇವದೂತನೊಡನೆ 'ನೀನು ಇಚ್ಛಾನುಸಾರವಾಗಿ ಹೋಗು. ನಾನು ಇಲ್ಲಿಂದ ಬರುವುದೇ ಇಲ್ಲ. ಇಂತಹ ಸ್ವಕೀಯ ಜನರೆಲ್ಲರನ್ನೂ ಬಿಟ್ಟು ನನಗೆ ಸ್ವರ್ಗದಿಂದ ಏನೂ ಆಗಬೇಕಾಗಿಲ್ಲ' ಎಂದು ಹೇಳಲು ದೂತನು ಹಾಗೆಯೇ ಆಗಲಿ ಎಂದು ಹೇಳಿ ಹೊರಟುಹೋದನು.

ಧರ್ಮರಾಜನು ಸ್ನೇಹದಿಂದ ಅಲ್ಲಿಗೆ ಬಂದನು. ಅವನು ಬರಲು ಅದೀನವಾದ ಮಾತೂ ಕೇಳಿಸಲಿಲ್ಲ. ದುರ್ವಾಸನೆಯೂ ಬರಲಿಲ್ಲ. ಆ ಪ್ರದೇಶವನ್ನು ಉತ್ತಮವಾದ ಸ್ವರ್ಗಪ್ರದೇಶವನ್ನಾಗಿ ಕಂಡನು. ಆಗ ಯಮದೇವರು ಪುನಃ ತನ್ನ ಕೀರ್ತಿಯನ್ನು ಪ್ರಕಾಶಗೊಳಿಸುತ್ತಾ ಧರ್ಮರಾಜನೊಡನೆ 'ದಯೆಯು ಎಲ್ಲಾ

1. ದುಃಖ

ಧರ್ಮಗಳಲ್ಲಿಯೂ ಶ್ರೇಷ್ಠವು. ಮೂರು ಸಲ ಅಂದರೆ ಯಕ್ಷಪ್ರಶ್ನೆಯ ಸಮಯದಲ್ಲಿ, ಇನ್ನೊಂದು ಸ್ವರ್ಗಕ್ಕೆ ಬರುವಾಗ, ನಾಯಿಯಾಗಿ ಬಂದು, ಮತ್ತೊಂದು ಹೀಗೆ ಮೂರು ಬಾರಿ ನಿನ್ನ ದಯಾಸ್ವಭಾವವನ್ನು ನಾನು ನೋಡಿದೆನು ಎಂದು ಹೇಳಿದರು. ಆಗ ಇಂದ್ರದೇವರು 'ಕೃಷ್ಣಪರಮಾತ್ಮನು ನಿನ್ನೊಡನೆ 'ಅಶ್ವತ್ಥಾಮನು ಸತ್ತನು' ಎಂದು ದ್ರೋಣಾಚಾರ್ಯರ ಬಳಿಯಲ್ಲಿ ಹೇಳು ಎಂದು ಹೇಳಿದಾಗ ನೀನು ಬದುಕಿರುವ ಅಶ್ವತ್ಥಾಮಾಚಾರ್ಯ ರನ್ನು ಸತ್ತರೆಂದು ಸುಳ್ಳು ಹೇಗೆ ಹೇಳಲಿ? ಎಂದು ಸಂಕಟಪಟ್ಟು ಆನೆಯು ಎಂದು ಪದವನ್ನು ಮೆಲ್ಲಗೆ ಹೇಳಿದಿ. ಅಂದರೆ ನಿನಗೆ ಕೃಷ್ಣಪರಮಾತ್ಮನ ಮಾತಿನಲ್ಲಿ ವಿಶ್ವಾಸವುಂಟಾಗಲಿಲ್ಲ. ಭಗವಂತನ ಆಜ್ಞೆಯಿಂದ ಯಾವ ಅಧರ್ಮವನ್ನು ಮಾಡಿದರೂ ಪಾಪವು ಬರಲಾರದು. ಭೀಮಸೇನದೇವರೇ ಮೊದಲಾದವರು ದೇವತೆಗಳಿಂದ ಸತ್ಕೃತರಾಗಿ ಸುಖವಾಗಿ ಇರುವುದನ್ನು ನೋಡು. ಪರಬ್ರಹ್ಮಜ್ಞಾನಿಗಳಾದ ಶುದ್ಧಸತ್ಕರ್ಮವನ್ನು ಮಾಡಿ ಭಗವಧ್ಯಾನದಿಂದ ದೇಹಪರಿತ್ಯಾಗ ಮಾಡಿದ ಅವರಿಗೆ ದುಃಖವು ಏಕೆ ಬರಬೇಕು? ಇವರೆಲ್ಲರೂ ದೇವಶ್ರೇಷ್ಠರು. ಭೂಮಿಯ ಭಾರವನ್ನು ಪರಿಹಾರ ಮಾಡುವುದಕ್ಕೆ ಭೂಮಿಯಲ್ಲಿ ಹುಟ್ಟಿ ಪರಮಾತ್ಮನನ್ನು ಸಂತೋಷಪಡಿಸಿ ಇಲ್ಲಿಗೆ ಪುನಃ ಬಂದು ಸೇರಿದ್ದಾರೆ.

ಧರ್ಮರಾಜ! ನಿನಗೆ ಮನುಷ್ಯ ಸ್ವಭಾವ ಬಿಟ್ಟು ಹೋಗಿಲ್ಲ. ಆದುದರಿಂದ ದುರ್ಯೋಧನಾದಿಗಳಲ್ಲಿ ದ್ವೇಷಿಸುತ್ತಿರುವಿ. ಆದುದರಿಂದ ಈ ಗಂಗೆಯಲ್ಲಿ ಮುಳುಗಿ ದೇಹವನ್ನು ಪರಿತ್ಯಾಗ ಮಾಡಿ ದೇವಸ್ವಭಾವವನ್ನು ಹೊಂದು. ದುರ್ಯೋಧನಾದಿ ಪಾಪಿಗಳು ಈಗ ಪ್ರಾರಬ್ಧಪುಣ್ಯದ ಫಲವನ್ನು ಅನುಭವಿಸುತ್ತಿದ್ದು ಆಮೇಲೆ ಹಿಂದೆ ತಿರುಗಿ ಬರಲಿಕ್ಕೆ ಆಗದಿದ್ದ ಅಂಧಂತಮಸ್ಸಿಗೆ ಹೋಗುವರು. ದೇವಾಂಶದವರಾದ ರಾಜರೆಲ್ಲರೂ ತಮ್ಮ ಮೂಲರೂಪವನ್ನು ಹೊಂದಿ ಕಾಲಕ್ರಮದಿಂದ ಮೋಕ್ಷವನ್ನು ಹೊಂದುವರು' ಎಂದು ಹೇಳಿದರು. ಆಗ ಧರ್ಮರಾಜನು ಬೇಗನೇ ಗಂಗೆಯಲ್ಲಿ ಮುಳುಗಿ ದೇಹವನ್ನು ಬಿಟ್ಟು ಆಗಲೇ ದೇವತಾದೇಹವನ್ನು ಹೊಂದಿ ಪ್ರಕಾಶಿಸಿದನು.

(ಧರ್ಮರಾಜನು ಅಶ್ವತ್ಥಾಮನು ಸತ್ತನೆಂದು ಹೇಳು ಎಂಬ ಮಾತನ್ನು ಧರ್ಮರಾಜನೊಡನೆ ಹೇಳಲು ಧರ್ಮರಾಜನು ಪರಮಾತ್ಮನ ಮಾತಿನಲ್ಲಿ ಶ್ರದ್ಧೆಯಿಲ್ಲದೆ ಅವನು ಬದುಕಿರುವಾಗ ನಾನು ಹೇಗೆ ಸುಳ್ಳುಹೇಳಲಿ ಎಂದು ಕೇಳಿದನು. ಆಮೇಲೆ ಹಾಗಾದರೆ ಭೀಮಸೇನದೇವರು ಕೊಂದಿರುವ ಒಂದು ಆನೆಯನ್ನು ತೋರಿಸಿ ಈ ಆನೆಗೆ ಅಶ್ವತ್ಥಾಮ ಎಂದು ಹೆಸರು. ಆದುದರಿಂದ ಅಶ್ವತ್ಥಾಮ ಎಂದು ಹೆಸರುಳ್ಳ ಆನೆಯು ಸತ್ತಿತು ಎಂಬ ಅರ್ಥದಿಂದ ''ಅಶ್ವತ್ಥಾಮಾ ಹತಃ

ಕುಂಜರಃ'' ಎಂದು ಹೇಳು ಎನ್ನಲು ಧರ್ಮರಾಜನು ಹಾಗೆಯೇ ಅಶ್ವತ್ಥಾಮಾಹತಃ ಎಂದು ಹೇಳಿ ಮೆಲ್ಲನೆ ಕುಂಜರಃ ಎಂದು ಹೇಳಿದನು. ಏವಂಚ ಅವನಿಗೆ ದೇವರ ಮಾತಿನಲ್ಲಿ ವಿಶ್ವಾಸವಿರಲಿಲ್ಲ. ಇದರಿಂದ ಅವನಿಗೆ ಸ್ವರ್ಗದಲ್ಲಿಯೇ ದುರ್ವಾಸನೆಯನ್ನೂ ಕತ್ತಲೆಯನ್ನೂ ಸೃಷ್ಟಿಮಾಡಿ ತೋರಿಸಿದರು. ಸ್ವಭಾವತಃ ಸ್ವರ್ಗದಲ್ಲಿ ದುರ್ವಾಸನೆ ಕತ್ತಲೆ ಮೊದಲಾದವು ಇಲ್ಲ. ಧರ್ಮರಾಜನಿಗೆ ಪರಮಾತ್ಮನ ಮಾತಿನಮೇಲೆ ವಿಶ್ವಾಸವಿಡದೆ ಇದ್ದದ್ದಕ್ಕೆ ಶಿಕ್ಷೆಯಾಗಬೇಕು. ದೇವತೆಗಳಿಗೆಲ್ಲ ನರಕವಿಲ್ಲ. ಆದುದರಿಂದ ಧರ್ಮರಾಜನೂ ದೇವತೆಯ ಅವತಾರವಾದ ಕಾರಣ ನರಕಾನುಭವವಿರಲಾರದು. ಆದಕಾರಣ ಸ್ವಾಪ್ನ ಪದಾರ್ಥದಂತೆ ಆಕಾಲದಲ್ಲಿಯೇ ಕತ್ತಲೆಯನ್ನು ದುರ್ವಾಸನೆಯನ್ನೂ ಸೃಷ್ಟಿ ಮಾಡಿತೋರಿಸಿದರು. ಧರ್ಮರಾಜನು ಭ್ರಾಂತಿಯಿಂದ ಅದೇ ಸಾಕ್ಷಾತ್ ನರಕವೆಂದು ತಿಳಿದುಕೊಂಡನು. ಹಾಗೆಯೇ ಸ್ವಪ್ನದಲ್ಲಿ ಹುಲಿ ಇತ್ಯಾದಿ ಜೀವರನ್ನು ಭಗವಂತನು ಸೃಷ್ಟಿಮಾಡಿ ತೋರಿಸುವಂತೆ ಕೆಲವು ಜೀವರನ್ನು ಭೀಮಾದಿರೂಪದಿಂದ ಸೃಷ್ಟಿಮಾಡಿ ಅವರ ಮುಖದಿಂದ ಆರ್ತಧ್ವನಿಯನ್ನು ಉಂಟುಮಾಡಿಸಿದ್ದು. ಆದುದರಿಂದ ಧರ್ಮರಾಜನು ತಮ್ಮವರ ಮಾತಿನಂತೆ ಕೇಳಿದನು. ನಾನು ಭೀಮ, ನಾನು ಅರ್ಜುನ ಎಂದು ಹೇಳಿದಂತೆ ಕೇಳಿದನು. ಇತ್ಯಾದಿರೀತಿಯಾಗಿ ಹೇಳಿದ್ದು. ದುರ್ಯೋಧನನನ್ನು ನೋಡಿ ಸ್ವಲ್ಪದೂರಕ್ಕೆ ಹೋದಮೇಲೆ ಕತ್ತಲೆ ಇತ್ಯಾದಿಗಳನ್ನು ನೋಡಿದನು. ಆಮೇಲೆ ಅದೇ ಸ್ಥಳದಲ್ಲಿ ಭೀಮಸೇನದೇವರೇ ಮೊದಲಾದವರನ್ನು ನೋಡಿದನು ಎಂದು ಹೇಳಿದ್ದುದರಿಂದ ದುರ್ಯೋಧನನು ಇದ್ದ ಸ್ಥಳವು ಸರಿಯಾದ ಸ್ವರ್ಗವಲ್ಲ. ಅದು ಸ್ವರ್ಗವನ್ನು ಹೊಂದಲಿಕ್ಕೆ ಅನರ್ಹರಾದವರಿಗೆ ಪ್ರಾರಬ್ಧಕರ್ಮದ ಸುಖವನ್ನು ಅನುಭವಿಸುವಂತೆ ಮಾಡುವ ಉಪಸ್ವರ್ಗವೆಂದು ಬೇರೆಯೇ ಸ್ಥಳವು. ಆದಕ್ಕೇ ಸಾಂಕಲ್ಪಿತ ಸ್ವರ್ಗ ಎಂದು ಹೇಳುವರು ಇತ್ಯಾದಿ ರಹಸ್ಯವನ್ನು ತಿಳಿದುಕೊಳ್ಳಬೇಕಲ್ಲದೆ ಭೀಮಸೇನ ಅರ್ಜುನ ಇತ್ಯಾದಿಗಳು ನರಕದಲ್ಲಿ ಇದ್ದರು. ಆರ್ತಧ್ವನಿಯನ್ನು ಮಾಡದರು. ಇಂದ್ರಾದಿಗಳು ಬಂದಮೇಲೆ ಅವರಿಗೆ ನರಕದುಃಖವು ಹೋಯಿತು' ಇತ್ಯಾದಿರೀತಿಯಾಗಿ ಸರ್ವಥಾ ತಿಳಿಯಬಾರದು. ಏಕೆಂದರೆ 'ದೇವಾನಾಂ ನಿರಯೋ ನಾಸ್ತಿ ತಮಶ್ಚಾಪಿ ಕಥಂಚನ' ಎಂದು ಪ್ರಮಾಣವಿರುವುದರಿಂದ ದೇವತೆಗಳಿಗೇ ನರಕವಿಲ್ಲವೆಂದಿರುವಾಗ ದೇವೋತ್ತಮರಾದ ವಾಯುದೇವ ಅವತಾರಭೂತರಾದ ಭೀಮಸೇನದೇವರಿಗೆ ನರಕವೆಲ್ಲಿಂದ ಬರಬೇಕು? ಆದುದರಿಂದ ಹಾಗೆಲ್ಲಾ ಸರ್ವಥಾ ತಿಳಿದುಕೊಳ್ಳಬಾರದು.)

ಧರ್ಮರಾಜನಿಗೆ ದೇವತಾದೇಹವು ಬಂದ ಮೇಲೆ ಪೂರ್ವದಲ್ಲಿ ಇದ್ದ ರೋಷಾದಿಗಳು ಹೊರಟುಹೋದವು. ಅವನು ಸ್ವಕೀಯರನ್ನೆಲ್ಲಾ ನೋಡುತ್ತಾ ಮಹತ್ತುಗಳ ಮಧ್ಯದಲ್ಲಿ ಜ್ವಲಿಸುತ್ತಿದ್ದ ಭೀಮಸೇನದೇವರನ್ನು ಅವರ ಬಳಿಯಲ್ಲಿ ಪ್ರಕಾಶಿಸುತ್ತಿದ್ದ ದ್ರೌಪದೀದೇವಿಯರನ್ನು ನೋಡಿದನು. ಧರ್ಮರಾಜನು ಪೂರ್ವಸಂಸ್ಕಾರದಿಂದ ದ್ರೌಪದೀದೇವಿಯರನ್ನು ಮುಟ್ಟಲಿಕ್ಕೆ ಹೋದನು. ಆಗ ಇಂದ್ರದೇವರು ಅವನನ್ನು ನಿಷೇಧಿಸಿ 'ಇವರು ಸಾಕ್ಷಾತ್ ವಾಯುದೇವರ ಪತ್ನಿಯರು. ಇವರಿಗೆ ಸುಖರೂಪಿಯಾದ ವಾಯುದೇವರಲ್ಲಿ ರಮಿಸುವ ಕಾರಣ ಶ್ರೀ ಎಂದು ಹೆಸರಿದೆ. ನಿಮ್ಮ ನಾಲ್ಕು ಜನರ ದೇಹದಲ್ಲಿ ಇದ್ದ ವಾಯುದೇವರ ಮತ್ತು ಭೀಮಸೇನದೇವರ ಭೋಗಕ್ಕಾಗಿ ಸೃಷ್ಟರಾಗಿದ್ದರು. ನಿಮ್ಮ ಪತ್ನಿಯರಿಂದ ಸಹಿತರಾಗಿ ಹುಟ್ಟಿದ್ದರು. ಆದುದರಿಂದಲೇ ಇವರಿಗೆ ಭೀಮಸೇನದೇವರಲ್ಲಿ ಅಧಿಕವಾದ ಪ್ರೀತಿಯೂ ಅನಂತರದಲ್ಲಿ ಅರ್ಜುನನಲ್ಲಿಯೂ ಆಮೇಲೆ ನಿಮ್ಮಲ್ಲಿಯೂ ಕ್ರಮದಿಂದ ಪ್ರೀತಿಯು ಇದ್ದಿತು. ನಿಮ್ಮಲ್ಲಿ ವಾಯುದೇವರು ಯಾರ್‍ಯಾರಲ್ಲಿ ಎಷ್ಟು ಎಷ್ಟು ಹೆಚ್ಚಿಗೆ ಇತ್ತೋ ಅಷ್ಟಷ್ಟು ಹೆಚ್ಚಾಗಿ ಇವರ ಪ್ರೀತಿಯೂ ಇದ್ದಿತು. ಈಗ ಇವರ ದೇಹದಲ್ಲಿ ನಿಮ್ಮ ಪತ್ನಿಯರು ಇಲ್ಲ. ನಿಮ್ಮಲ್ಲಿಯೂ ಪೂರ್ವದಂತೆ ವಾಯುದೇವರ ವಿಶೇಷ ಆವೇಶವು ಇಲ್ಲ ಆದುದರಿಂದ ಈಗಲೋ ಇನ್ನು ಮೇಲೆಯೋ ಈ ವಾಯುದೇವರ ಪತ್ನಿಯನ್ನು ಮುಟ್ಟಲಿಕ್ಕೆ ನಿಮಗೆ ಯೋಗ್ಯತೆ ಇರುವುದಿಲ್ಲ' ಎಂದು ಹೇಳಿದರು. ತರುವಾಯ ಧರ್ಮರಾಜನು ಹಿಂದೆ ತಿರುಗಿದನು. ತರುವಾಯ ಪರಮಾತ್ಮನ ಬಲಸ್ತನದಿಂದ ಹುಟ್ಟಿದ್ದ ಧರ್ಮ ಎಂದು ಹೆಸರುಳ್ಳ ಯಮದೇವರು ಧರ್ಮರಾಜನ ಮಾನುಷ ಸಂಸ್ಕಾರವನ್ನು ನಾಶಮಾಡುವುದಕ್ಕಾಗಿ ತಾನು ಆಲಿಂಗನ ಮಾಡಿದರು. ಆಗ ಧರ್ಮರಾಜನು ಮನುಷ್ಯ ವಾಸನೆಯಿಂದ ರಹಿತನಾಗಿ ಆ ಯಮದೇವರಿಗೆ ಸಮಾನನಾದನು.

ತರುವಾಯ ಎಲ್ಲಾ ಪಾಂಡವರೂ ತಮ್ಮ ಮೂಲರೂಪದಿಂದ ಐಕ್ಯವನ್ನು ಹೊಂದಲಿಲ್ಲ. ಬೇರೆಯಾಗಿಯೇ ಒಟ್ಟಿಗೆ ಆಸನದಲ್ಲಿ ಕೂತುಕೊಂಡರಷ್ಟೆ. ತಮ್ಮ ಸ್ಥಾನಗಳಲ್ಲಿ ತಮ್ಮ ಪತ್ನಿಯರಿಂದ ಸಹಿತರಾಗಿ ಭೋಗಗಳನ್ನು ಅನುಭವಿಸುತ್ತಾ ಇದ್ದರು. ಅಲ್ಲಿಯೂ ಅವರಿಗೆ ಕೃಷ್ಣನ ಸಮಾಗಮವಾಗುತ್ತಿತ್ತು. ಕೃಷ್ಣಪರಮಾತ್ಮನು ಪಾಂಡವರಿಂದ ಕೂಡಿಕೊಂಡು ಕ್ರೀಡಾ ಮಾಡುತ್ತಿದ್ದನು. ಪೂರ್ವದಂತೆ ಅರ್ಜುನನಿಂದ ಕೂಡಿಕೊಂಡು ರಥದಲ್ಲಿ ಕೂತುಕೊಂಡು ವಿಹರಿಸುತ್ತಿದ್ದನು. ಇತರ ದೇವಾಂಶದ ರಾಜರೆಲ್ಲರೂ ತಮ್ಮ ಮೂಲರೂಪದಿಂದ ಐಕ್ಯವನ್ನು ಹೊಂದಿದರು.

ದೈತ್ಯರು ಉಪಸ್ವರ್ಗಕ್ಕೆ ಬಂದವರು ತಮ್ಮ ಪುಣ್ಯಕ್ಷಯವಾದ ಮೇಲೆ ಭೂಮಿಯಲ್ಲಿ ಹುಟ್ಟಿದರು. ಅವರು ಕಲಿಯುಗದಲ್ಲಿ ನಾಲ್ಕು ಸಾವಿರದ ಮುನ್ನೂರು ವರ್ಷ ಸ್ವರ್ಗಸುಖವನ್ನು ಅನುಭವಿಸಿ ಆಮೇಲೆ ಭೂಮಿಯಲ್ಲಿ ಮನುಷ್ಯರಾಗಿ ಹುಟ್ಟಿ ತಾನೇ ಪರಬ್ರಹ್ಮನೆಂದೂ ಜಗತ್ತು ಸುಳ್ಳೆಂದೂ ತಿಳಿಯುತ್ತಾ ಅಂಧಂತಮಸ್ಸಿಗೆ ಹೋದರು. ದೈತ್ಯರ ದುಃಖದಲ್ಲಿಯೂ ತಾರತಮ್ಯವಿದೆ. ಬ್ರಹ್ಮದೇವರಿಗೆ ಹೇಗೆ ಎಲ್ಲರಿಗಿಂತಲೂ ಹೆಚ್ಚಿಗೆ ಸುಖವಿರುವುದೋ ಹಾಗೆಯೇ ಕಲಿಗೆ ಎಲ್ಲರಿಗಿಂತಲೂ ಹೆಚ್ಚಿಗೆ ದುಃಖವಿರುವುದು. ಕೆಲವು ಅಸುರರು ಪಿಶಾಚ ರಾಕ್ಷಸ ಇತ್ಯಾದಿ ರೂಪದಿಂದ ಹುಟ್ಟಿ ಪರಮಾತ್ಮನ ಮತ್ತೂ ಪರಮಾತ್ಮನ ಭಕ್ತರ ದ್ವೇಷವನ್ನು ಮಾಡಿ ಅಂಧಂತಮಸ್ಸನ್ನು ಹೊಂದಿದರು.

ದೇವತೆಗಳು ತಮಗೆ ಯೋಗ್ಯವಾದ ಕಾಲದಲ್ಲಿ ಮೋಕ್ಷವನ್ನು ಹೊಂದಿದರು. ಕಲಿಯುಗದಲ್ಲಿ ನಾಲ್ಕು ಸಾವಿರ ಮುನ್ನೂರು ವರ್ಷಗಳಾದ ಮೇಲೆ ಮೂಲರೂಪ ದಿಂದ ಐಕ್ಯವನ್ನು ಹೊಂದದೆ ಇದ್ದ ಭೀಮಸೇನದೇವರೇ ಶ್ರೀಮದಾನಂದತೀರ್ಥಾ ಚಾರ್ಯರಾಗಿ ಅವತರಿಸಿ ಜೀವೇಶ್ವರೈಕ್ಯವನ್ನು ಹೇಳತಕ್ಕವರಿಂದ ಮರೆಯಾದ ಬ್ರಹ್ಮತತ್ವವನ್ನು ಸರಿಯಾಗಿ ಉಪದೇಶಿಸಿದರು. ಅರ್ಜುನಾದಿಗಳೂ ಭಗವಂತನನ್ನು ಸಂತೋಷಪಡಿಸುವುದಕ್ಕಾಗಿ ಅವತರಿಸಿದರು. ತರುವಾಯ ಅವರು ತಮ್ಮ ಮೂಲ ಸ್ಥಾನವನ್ನು ಹೊಂದಿ ಬ್ರಹ್ಮದೇವರ ನೂರುವರ್ಷ ಮುಗಿದಮೇಲೆ ಮೋಕ್ಷಕ್ಕೆ ಹೋಗುವರು. ಹನುಮಂತದೇವರೆಂಬ ಅಂಶವೂ ಶ್ರೀಮದಾನಂದತೀರ್ಥರಾಗಿ ಅವತರಿಸಿದ ಭೀಮ ಎಂಬ ಅಂಶವೂ ಮೂಲರೂಪವಾದ ವಾಯುರೂಪದಿಂದ ಐಕ್ಯವನ್ನು ಹೊಂದಿ ಆಮೇಲೆ ಆ ವಾಯುದೇವರು ಬ್ರಹ್ಮಪದವಿಯನ್ನು ಹೊಂದಿ ಸರಸ್ವತೀದೇವಿಯ ಪದವಿಯನ್ನು ಹೊಂದಿದ ದ್ರೌಪದೀದೇವಿಯರಿಂದ ಕೂಡಿಕೊಂಡು ಎಲ್ಲರಿಂದಲೂ ಉತ್ತಮವಾದ ಮೋಕ್ಷವನ್ನು ಹೊಂದುವರು. ಅವರು ಯಾವಾಗಲೂ ಪರಮಾತ್ಮನನ್ನು ಅತ್ಯಧಿಕವಾಗಿ ಸಂತೋಷಪಡಿಸುತ್ತಾ ಇರುವರು.



# ಜನಮೇಜಯ ರಾಜನ ಅಶ್ವಮೇಧ ಯಾಗವು [1]

ಜನಮೇಜಯರಾಜನು ಸರ್ಪಸತ್ರವು ಮುಗಿದ ಮೇಲೆ ಅಶ್ವಮೇಧಯಾಗವನ್ನು ಮಾಡಬೇಕೆಂದು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಮಾಡಿದನು. ಋತ್ವಿಕ್ ಗಳನ್ನು, ಪುರೋಹಿತರನ್ನು, ಆಚಾರ್ಯರನ್ನು ಕೂಗಿ ನಾನು ಅಶ್ವಮೇಧಯಾಗವನ್ನು ಮಾಡುವೆನು. ಕುದುರೆಯನ್ನು ಬಿಡಿರಿ ಎಂದು ಹೇಳಿದನು. ತರುವಾಯ ಅವನ ಅಭಿಪ್ರಾಯವನ್ನು ತಿಳಿದು ಆ ಜನಮೇಜಯರಾಜನನ್ನು ನೋಡಲಿಕ್ಕೆ ಸರ್ವಜ್ಞರಾದ ವೇದವ್ಯಾಸದೇವರು ಬಂದರು. ರಾಜನು ಬಂದಿರುವ ವೇದವ್ಯಾಸದೇವರನ್ನು ನೋಡಿ ಶಾಸ್ತ್ರದಲ್ಲಿ ಹೇಳಿದಂತೆ ಅರ್ಘ್ಯಪಾದ್ಯಾದಿಗಳಿಂದ ಪೂಜೆಯನ್ನು ಮಾಡಿದನು. ಅವರ ಸುತ್ತಲೂ ಸಭಿಕರು ಕೂತಿದ್ದರು. ಅನೇಕ ವಿಧಗಳಾದ ವಿಚಿತ್ರಗಳಾದ ವೇದದಲ್ಲಿ ಹೇಳಿರುವ ಕಥೆಗಳನ್ನು ಹೇಳಿದರು. ಕೊನೆಗೆ ಜನಮೇಜಯರಾಜನು ವೇದವ್ಯಾಸದೇವರೊಡನೆ 'ಬಹು ಅರ್ಥವುಳ್ಳ ಮಹಾಭಾರತವನ್ನು ಬಹುಸುಖವಾಗಿ ಕೇಳಿದೆನು. ಒಂದು ನಿಮಿಷದಂತೆ ಕಾಲವು ಕಳೆದುಹೋಯಿತು.

ಈ ಭಾರತವನ್ನು ಕೇಳಿದ ಮೇಲೆ ಇನ್ನು ಇನ್ನೂ ಕೇಳಬೇಕೆಂದೆನಿಸುತ್ತದೆ. ನಾನೊಂದು ವಿಷಯವನ್ನು ತಮ್ಮೊಡನೆ ಕೇಳುತ್ತೇನೆ. ಕುರುವಂಶದವರ ನಾಶಕ್ಕೆ ರಾಜಸೂಯಯಾಗವು ಕಾರಣವೆಂದು ನನ್ನ ಅಭಿಪ್ರಾಯವಿದೆ. ರಾಜಸೂಯ ಯಾಗವು ನಡೆದಾಗೆಲ್ಲಾ ಒಂದೊಂದು ಭಯಂಕರವಾದ ಯುದ್ಧವು ನಡೆದಿದೆ. ಚಂದ್ರನು ರಾಜಸೂಯಯಾಗವನ್ನು ಮಾಡಿರುವನೆಂದು ಕೇಳಿರುವೆವು. ಆ ರಾಜಸೂಯಯಾಗವಾದಮೇಲೆ ತಾರಕಮಯ ಎಂಬ ಯುದ್ಧವು ನಡೆಯಿತು. ವರುಣದೇವರು ರಾಜಸೂಯಯಾಗವನ್ನು ಮಾಡಿದರು. ಆಗಲೂ ಭಯಂಕರವಾದ ದೇವಾಸುರರ ಯುದ್ಧವು ನಡೆಯಿತು. ಹರಿಶ್ಚಂದ್ರನು ರಾಜಸೂಯಯಾಗವನ್ನು ಮಾಡಿದನು. ಆಗಲೂ ವಸಿಷ್ಠರು ಆಡೀ ಎಂಬ ನೀರಿನಲ್ಲಿ ವಾಸಿಸುವ ಪಕ್ಷಿ ವಿಶೇಷದ ರೂಪವನ್ನು ಧರಿಸಿಯೂ ವಿಶ್ವಾಮಿತ್ರರು ಬಕ ಪಕ್ಷಿಯ ರೂಪವನ್ನು ಧರಿಸಿಯೂ ಯುದ್ಧಮಾಡಿಕೊಂಡರು. ಅವರಿಬ್ಬರ ಪಕ್ಷದಲ್ಲಿ ಕ್ಷತ್ರಿಯರು ಸೇರಿಕೊಂಡು ಯುದ್ಧಮಾಡಿ ಅನೇಕರು ಸತ್ತರು. ಇದಕ್ಕೆ ಆಡೀಬಕ ಯುದ್ಧವೆಂದು ಹೆಸರು. ಈ ಪ್ರಕಾರವಾಗಿ ಒಂದೊಂದು ರಾಜಸೂಯಯಾಗವು ನಡೆದ ಮೇಲೆ ಮಹಾಯುದ್ಧವು ನಡೆಯಿತು. ಆಮೇಲೆ ಧರ್ಮರಾಜರು ರಾಜಸೂಯಯಾಗವನ್ನು ಮಾಡಿದರು.

---

1. **ಆಶ್ರ.ಪ.ಅ.35.** (Puranic Encyclopedia-1993. p.346)

ಮಹಾಭಾರತ ಯುದ್ಧವು ನಡೆಯಿತು. ಈರೀತಿಯಾಗಿ ರಾಜಸೂಯಯಾಗವು ಲೋಕನಾಶಕ್ಕೆ ಕಾರಣವಾಗಿರುವಾಗ ತಾವು ಹೋಗಿ ಆ ಯಾಗವನ್ನು ಯಾಕೆ ನಿಲ್ಲಿಸಿರಬಾರದು? ರಾಜಸೂಯಯಾಗದ ಅಂಗಗಳನ್ನೆಲ್ಲಾ ಸರಿಯಾಗಿ ಮಾಡುವುದು ಶ್ರಮಸಾಧ್ಯವಾದದ್ದು. ಸರಿಯಾಗಿ ನಡೆಯದೆ ಇದ್ದರೆ ನಿಶ್ಚಯವಾಗಿಯೂ ಪ್ರಜೆಗಳ ನಾಶವು ಏರ್ಪಡುತ್ತದೆ. ನಮಗೆಲ್ಲಾ ಪಿತಾಮಹರಾದ ಅತೀತ ಅನಾಗತ ಸಮಸ್ತವನ್ನು ತಿಳಿದ ನೀವಾದರೂ ಯಾಕೆ ಹೇಳಲಿಲ್ಲ' ಎಂದು ಕೇಳಿದನು.

ಅದಕ್ಕೆ ವೇದವ್ಯಾಸದೇವರು 'ಕಾಲನಾಮಕ ಪರಮಾತ್ಮನ ಇಚ್ಛೆಯಿಂದ ನಿನ್ನ ಪೂರ್ವಪಿತಾಮಹರಾದ ಪಾಂಡವರು ನನ್ನೊಡನೆ ಭವಿಷ್ಯವನ್ನು ಕೇಳಲಿಲ್ಲ. ನಾನು ಹೇಳಲಿಲ್ಲ. ಒಬ್ಬರು ಕೇಳದೆ ನಾನು ಹೇಳಲಾರೆನು. ಭಗವದಿಚ್ಛೆಯಿಂದ ನಡೆಯತಕ್ಕದ್ದನ್ನು ನಿಲ್ಲಿಸಲಿಕ್ಕೆ ಆಗಲಾರದು. ನೀನು ಕೇಳಿದ್ದಕ್ಕೆ ನಾನೊಂದು ಹೇಳುವೆನು. ಅದರಿಂದ ಕಾಲನಾಮಕ ಪರಮಾತ್ಮನ ಇಚ್ಛೆಯೇ ಪ್ರಬಲವೆಂದು ತಿಳಿಯುವಿ. ಭಯದಿಂದಲೋ ಉತ್ಸಾಹದಿಂದಲೋ ಮುಂದೆ ನಡೆಯುವುದನ್ನು ನೀನೂ ನಿಲ್ಲಿಸಲಾಗದು. ಕ್ಷತ್ರಿಯರಿಗೆ ಪ್ರಸಿದ್ಧವಾದ ಅಶ್ವಮೇಧಯಾಗವನ್ನು ನೀನು ಮಾಡುವಿ. ಆಗ ಇಂದ್ರದೇವರು ಬುದ್ಧಿಪೂರ್ವಕ ದ್ವೇಷದಿಂದ ಕೆಡಿಸುವರು. ದೈವೇಚ್ಛೆಯನ್ನು ಪುರುಷಪ್ರಯತ್ನದಿಂದ ಮೀರಲಿಕ್ಕೆ ಸಾಧ್ಯವಾಗುವ ಪಕ್ಷದಲ್ಲಿ ನೀನು ಆ ಯಾಗವನ್ನು ಮಾಡದೆ ಇರು. ನೋಡೋಣ. ಇಂದ್ರನ ಅಪರಾಧವೂ ಅಲ್ಲ, ಉಪಾಧ್ಯಾಯರ ಅಪರಾಧವೂ ಅಲ್ಲ, ನಿನ್ನ ಅಪರಾಧವೂ ಇಲ್ಲ, ಕಾಲನಾಮಕ ಪರಮಾತ್ಮನ ಇಚ್ಛೆಯನ್ನು ಒಬ್ಬರಿಂದಲೂ ಮೀರಲಿಕ್ಕೆ ಆಗಲಾರದು. ಕಾಲನಾಮಕ ಪರಮಾತ್ಮನ ಇಚ್ಛೆಯಿಂದಲೇ ಅಶ್ವಮೇಧಯಾಗವು ನಿಂತುಹೋಗುವುದು' ಎಂದು ಹೇಳಿದರು. ಅದಕ್ಕೆ ಜನಮೇಜಯರಾಜನು 'ಅಶ್ವಮೇಧಯಾಗವು ನಿಂತು ಹೋಗಲು ಕಾರಣವೇನು ಏರ್ಪಡುವುದು. ನಾನು ಅದನ್ನು ಕೇಳಿ ಹಾಗೆ ನಡೆಯ ದಂತೆ ಮಾಡುವೆನು' ಎಂದನು. ವೇದವ್ಯಾಸದೇವರು 'ಬ್ರಾಹ್ಮಣರ ಕೋಪವೇ ಕಾರಣವಾಗುತ್ತದ. ನೀನು ಅದನ್ನು ಪರಿಹರಿಸಲಿಕ್ಕೆ ಪ್ರಯತ್ನಮಾಡು. ನಿನಗೆ ಮಂಗಳವಾಗಲಿ. ನೀನು ನಿಲ್ಲಿಸಿದ ಅಶ್ವಮೇಧಯಾಗವನ್ನು ಆಮೇಲೆ ಭೂಮಿ ಯಿರುವವರೆಗೂ ಕ್ಷತ್ರಿಯರು ಮಾಡುವುದಿಲ್ಲ' ಎಂದರು. ಜನಮೇಜಯರಾಜನು 'ಬ್ರಾಹ್ಮಣರ ಶಾಪದಿಂದ ಅಶ್ವಮೇಧಯಾಗವು ನಿಂತುಹೋಗಲಿಕ್ಕೆ ನಾನು ಕಾರಣನಾಗುವೆನೆಂದು ಕೇಳಿ ನನಗೆ ತುಂಬಾ ಭಯವಾಗುತ್ತದೆ. ನನ್ನಂತಹ ಉತ್ತಮ ಪುರುಷನು ಹೇಗೆ ಅಪಕೀರ್ತಿಯನ್ನು ಹೊಂದಿ ಇರಲಾಗುತ್ತದೆ? ಆಮೇಲೆ ಪುನಃ

# ಜನಮೇಜಯ ರಾಜನ ಅಶ್ವಮೇಧ ಯಾಗವು [1]

ಜನಮೇಜಯರಾಜನು ಸರ್ಪಸತ್ರವು ಮುಗಿದ ಮೇಲೆ ಅಶ್ವಮೇಧಯಾಗವನ್ನು ಮಾಡಬೇಕೆಂದು ಅದಕ್ಕೆ ಬೇಕಾದ ಸಾಮಗ್ರಿಗಳನ್ನು ಸಂಗ್ರಹಮಾಡಿದನು. ಋತ್ವಿಕ್ ಗಳನ್ನು, ಪುರೋಹಿತರನ್ನು, ಆಚಾರ್ಯರನ್ನು ಕೂಗಿ ನಾನು ಅಶ್ವಮೇಧಯಾಗವನ್ನು ಮಾಡುವೆನು. ಕುದುರೆಯನ್ನು ಬಿಡಿರಿ ಎಂದು ಹೇಳಿದನು. ತರುವಾಯ ಅವನ ಅಭಿಪ್ರಾಯವನ್ನು ತಿಳಿದು ಆ ಜನಮೇಜಯರಾಜನನ್ನು ನೋಡಲಿಕ್ಕೆ ಸರ್ವಜ್ಞರಾದ ವೇದವ್ಯಾಸದೇವರು ಬಂದರು. ರಾಜನು ಬಂದಿರುವ ವೇದವ್ಯಾಸದೇವರನ್ನು ನೋಡಿ ಶಾಸ್ತ್ರದಲ್ಲಿ ಹೇಳಿದಂತೆ ಅರ್ಘ್ಯಪಾದ್ಯಾದಿಗಳಿಂದ ಪೂಜೆಯನ್ನು ಮಾಡಿದನು. ಅವರ ಸುತ್ತಲೂ ಸಭಿಕರು ಕೂತಿದ್ದರು. ಅನೇಕ ವಿಧಗಳಾದ ವಿಚಿತ್ರಗಳಾದ ವೇದದಲ್ಲಿ ಹೇಳಿರುವ ಕಥೆಗಳನ್ನು ಹೇಳಿದರು. ಕೊನೆಗೆ ಜನಮೇಜಯರಾಜನು ವೇದವ್ಯಾಸದೇವರೊಡನೆ 'ಬಹು ಅರ್ಥವುಳ್ಳ ಮಹಾಭಾರತವನ್ನು ಬಹುಸುಖವಾಗಿ ಕೇಳಿದೆನು. ಒಂದು ನಿಮಿಷದಂತೆ ಕಾಲವು ಕಳೆದುಹೋಯಿತು.

ಈ ಭಾರತವನ್ನು ಕೇಳಿದ ಮೇಲೆ ಇನ್ನು ಇನ್ನೂ ಕೇಳಬೇಕೆಂದೆನಿಸುತ್ತದೆ. ನಾನೊಂದು ವಿಷಯವನ್ನು ತಮ್ಮೊಡನೆ ಕೇಳುತ್ತೇನೆ. ಕುರುವಂಶದವರ ನಾಶಕ್ಕೆ ರಾಜಸೂಯಯಾಗವು ಕಾರಣವೆಂದು ನನ್ನ ಅಭಿಪ್ರಾಯವಿದೆ. ರಾಜಸೂಯ ಯಾಗವು ನಡೆದಾಗೆಲ್ಲಾ ಒಂದೊಂದು ಭಯಂಕರವಾದ ಯುದ್ಧವು ನಡೆದಿದೆ. ಚಂದ್ರನು ರಾಜಸೂಯಯಾಗವನ್ನು ಮಾಡಿರುವನೆಂದು ಕೇಳಿರುವೆವು. ಆ ರಾಜಸೂಯಯಾಗವಾದಮೇಲೆ ತಾರಕಮಯ ಎಂಬ ಯುದ್ಧವು ನಡೆಯಿತು. ವರುಣದೇವರು ರಾಜಸೂಯಯಾಗವನ್ನು ಮಾಡಿದರು. ಆಗಲೂ ಭಯಂಕರವಾದ ದೇವಾಸುರರ ಯುದ್ಧವು ನಡೆಯಿತು. ಹರಿಶ್ಚಂದ್ರನು ರಾಜಸೂಯಯಾಗವನ್ನು ಮಾಡಿದನು. ಆಗಲೂ ವಸಿಷ್ಠರು ಆಡೀ ಎಂಬ ನೀರಿನಲ್ಲಿ ವಾಸಿಸುವ ಪಕ್ಷಿ ವಿಶೇಷದ ರೂಪವನ್ನು ಧರಿಸಿಯೂ ವಿಶ್ವಾಮಿತ್ರರು ಬಕ ಪಕ್ಷಿಯ ರೂಪವನ್ನು ಧರಿಸಿಯೂ ಯುದ್ಧಮಾಡಿಕೊಂಡರು. ಅವರಿಬ್ಬರ ಪಕ್ಷದಲ್ಲಿ ಕ್ಷತ್ರಿಯರು ಸೇರಿಕೊಂಡು ಯುದ್ಧಮಾಡಿ ಅನೇಕರು ಸತ್ತರು. ಇದಕ್ಕೆ ಆಡೀಬಕ ಯುದ್ಧವೆಂದು ಹೆಸರು. ಈ ಪ್ರಕಾರವಾಗಿ ಒಂದೊಂದು ರಾಜಸೂಯಯಾಗವು ನಡೆದ ಮೇಲೆ ಮಹಾಯುದ್ಧವು ನಡೆಯಿತು. ಆಮೇಲೆ ಧರ್ಮರಾಜರು ರಾಜಸೂಯಯಾಗವನ್ನು ಮಾಡಿದರು.

---

1. **ಆಶ್ರ.ಪ.ಅ.35.** (Puranic Encyclopedia-1993. p.346)

ಮಹಾಭಾರತ ಯುದ್ಧವು ನಡೆಯಿತು. ಈರೀತಿಯಾಗಿ ರಾಜಸೂಯಯಾಗವು ಲೋಕನಾಶಕ್ಕೆ ಕಾರಣವಾಗಿರುವಾಗ ತಾವು ಹೋಗಿ ಆ ಯಾಗವನ್ನು ಯಾಕೆ ನಿಲ್ಲಿಸಿರಬಾರದು? ರಾಜಸೂಯಯಾಗದ ಅಂಗಗಳನ್ನೆಲ್ಲಾ ಸರಿಯಾಗಿ ಮಾಡುವುದು ಶ್ರಮಸಾಧ್ಯವಾದದ್ದು. ಸರಿಯಾಗಿ ನಡೆಯದೆ ಇದ್ದರೆ ನಿಶ್ಚಯವಾಗಿಯೂ ಪ್ರಜೆಗಳ ನಾಶವು ಏರ್ಪಡುತ್ತದೆ. ನಮಗೆಲ್ಲಾ ಪಿತಾಮಹರಾದ ಅತೀತ ಅನಾಗತ ಸಮಸ್ತವನ್ನು ತಿಳಿದ ನೀವಾದರೂ ಯಾಕೆ ಹೇಳಲಿಲ್ಲ' ಎಂದು ಕೇಳಿದನು.

ಅದಕ್ಕೆ ವೇದವ್ಯಾಸದೇವರು 'ಕಾಲನಾಮಕ ಪರಮಾತ್ಮನ ಇಚ್ಛೆಯಿಂದ ನಿನ್ನ ಪೂರ್ವಪಿತಾಮಹರಾದ ಪಾಂಡವರು ನನ್ನೊಡನೆ ಭವಿಷ್ಯವನ್ನು ಕೇಳಲಿಲ್ಲ. ನಾನು ಹೇಳಲಿಲ್ಲ. ಒಬ್ಬರು ಕೇಳದೆ ನಾನು ಹೇಳಲಾರೆನು. ಭಗವದಿಚ್ಛೆಯಿಂದ ನಡೆಯತಕ್ಕದ್ದನ್ನು ನಿಲ್ಲಿಸಲಿಕ್ಕೆ ಆಗಲಾರದು. ನೀನು ಕೇಳಿದ್ದಕ್ಕೆ ನಾನೊಂದು ಹೇಳುವೆನು. ಅದರಿಂದ ಕಾಲನಾಮಕ ಪರಮಾತ್ಮನ ಇಚ್ಛೆಯೇ ಪ್ರಬಲವೆಂದು ತಿಳಿಯುವಿ. ಭಯದಿಂದಲೋ ಉತ್ಸಾಹದಿಂದಲೋ ಮುಂದೆ ನಡೆಯುವುದನ್ನು ನೀನೂ ನಿಲ್ಲಿಸಲಾಗದು. ಕ್ಷತ್ರಿಯರಿಗೆ ಪ್ರಸಿದ್ಧವಾದ ಅಶ್ವಮೇಧಯಾಗವನ್ನು ನೀನು ಮಾಡುವಿ. ಆಗ ಇಂದ್ರದೇವರು ಬುದ್ಧಿಪೂರ್ವಕ ದ್ವೇಷದಿಂದ ಕೆಡಿಸುವರು. ದೈವೇಚ್ಛೆಯನ್ನು ಪುರುಷಪ್ರಯತ್ನದಿಂದ ಮೀರಲಿಕ್ಕೆ ಸಾಧ್ಯವಾಗುವ ಪಕ್ಷದಲ್ಲಿ ನೀನು ಆ ಯಾಗವನ್ನು ಮಾಡದೆ ಇರು. ನೋಡೋಣ. ಇಂದ್ರನ ಅಪರಾಧವೂ ಅಲ್ಲ, ಉಪಾಧ್ಯಾಯರ ಅಪರಾಧವೂ ಅಲ್ಲ, ನಿನ್ನ ಅಪರಾಧವೂ ಇಲ್ಲ, ಕಾಲನಾಮಕ ಪರಮಾತ್ಮನ ಇಚ್ಛೆಯನ್ನು ಒಬ್ಬರಿಂದಲೂ ಮೀರಲಿಕ್ಕೆ ಆಗಲಾರದು. ಕಾಲನಾಮಕ ಪರಮಾತ್ಮನ ಇಚ್ಛೆಯಿಂದಲೇ ಅಶ್ವಮೇಧಯಾಗವು ನಿಂತುಹೋಗುವುದು' ಎಂದು ಹೇಳಿದರು. ಅದಕ್ಕೆ ಜನಮೇಜಯರಾಜನು 'ಅಶ್ವಮೇಧಯಾಗವು ನಿಂತು ಹೋಗಲು ಕಾರಣವೇನು ಏರ್ಪಡುವುದು. ನಾನು ಅದನ್ನು ಕೇಳಿ ಹಾಗೆ ನಡೆಯ ದಂತೆ ಮಾಡುವೆನು' ಎಂದನು. ವೇದವ್ಯಾಸದೇವರು 'ಬ್ರಾಹ್ಮಣರ ಕೋಪವೇ ಕಾರಣವಾಗುತ್ತದ. ನೀನು ಅದನ್ನು ಪರಿಹರಿಸಲಿಕ್ಕೆ ಪ್ರಯತ್ನಮಾಡು. ನಿನಗೆ ಮಂಗಳವಾಗಲಿ. ನೀನು ನಿಲ್ಲಿಸಿದ ಅಶ್ವಮೇಧಯಾಗವನ್ನು ಆಮೇಲೆ ಭೂಮಿ ಯಿರುವವರೆಗೂ ಕ್ಷತ್ರಿಯರು ಮಾಡುವುದಿಲ್ಲ' ಎಂದರು. ಜನಮೇಜಯರಾಜನು 'ಬ್ರಾಹ್ಮಣರ ಶಾಪದಿಂದ ಅಶ್ವಮೇಧಯಾಗವು ನಿಂತುಹೋಗಲಿಕ್ಕೆ ನಾನು ಕಾರಣನಾಗುವೆನೆಂದು ಕೇಳಿ ನನಗೆ ತುಂಬಾ ಭಯವಾಗುತ್ತದೆ. ನನ್ನಂತಹ ಉತ್ತಮ ಪುರುಷನು ಹೇಗೆ ಅಪಕೀರ್ತಿಯನ್ನು ಹೊಂದಿ ಇರಲಾಗುತ್ತದೆ? ಆಮೇಲೆ ಪುನಃ

ಯಾರಾದರೂ ಅಶ್ವಮೇಧಯಾಗವನ್ನು ಮಾಡುವವರಿರುವರೋ ಹೇಳಿರಿ' ಎಂದು ಹೇಳಿದನು. ವೇದವ್ಯಾಸದೇವರು 'ಭೂಮಿಯ ಬಿಲದಲ್ಲಿ ಇರುತ್ತಿರುವ ಕಾಶ್ಯಪರೆಂಬ ಬ್ರಾಹ್ಮಣರು ಭೂಮಿಯನ್ನು ತೋಡುವಾಗ ಮೇಲೆ ಬರುವವರಾಗಿ ಕಲಿಯುಗದಲ್ಲಿ ಪುನಃ ಅಶ್ವಮೇಧಯಾಗವನ್ನು ಮಾಡುವರು. ಆಮೇಲೆ ಅವರ ವಂಶದವರೊಬ್ಬರು ರಾಜಸೂಯಯಾಗವನ್ನು ಮಾಡುವರು' ಎಂದು ಹೇಳಿ ಕಲಿಯ ಧರ್ಮವನ್ನೆಲ್ಲಾ ಹೇಳಿದರು. ಅಮೃತಕ್ಕೆ ಸಮಾನವಾದ ವೇದವ್ಯಾಸದೇವರು ಹೇಳಿದ ಮಾತನ್ನೆಲ್ಲಾ ಸಭೆಯಲ್ಲಿ ಇದ್ದ ಎಲ್ಲರೂ ಕೇಳಿದರು. ಕೇಳಿ ಕೆಲವರು ಕಣ್ಣೀರು ಸುರಿಸಿದರು. ಇನ್ನು ಕೆಲವರು ಅದನ್ನೇ ಧ್ಯಾನಮಾಡುತ್ತಾ ಕುಳಿತರು. ವೇದವ್ಯಾಸದೇವರು ಸಭಿಕರೊಡನೆ ಹೋಗಿ ಬರುತ್ತೇನೆ ಎಂದು ಹೇಳಿ ಸಭೆಗೆ ಪ್ರದಕ್ಷಿಣೆ ಬಂದು ಪುನಃ ನೋಡುವೆವು ಎಂದು ಹೇಳಿ ಹೊರಟುಹೋದರು. ಉತ್ತಮರಾದ ತಪಸ್ವಿಗಳು ವೇದವ್ಯಾಸ ದೇವರನ್ನು ಅನುಸರಿಸಿ ಹೋದರು. ಆಮೇಲೆ ಋತ್ವಿಕ್‌ಗಳೂ ಬ್ರಾಹ್ಮಣರೂ ಬಂದಂತೆಯೇ ಹೊರಟುಹೋದರು. ತಕ್ಷಕನನ್ನು ರಕ್ಷಿಸಿ ಆಸ್ತೀಕಮುನಿಗಳು ಆಶ್ರಮಕ್ಕೆ ಹೋದರು. ಜನಮೇಜಯರಾಜನು ಸರ್ಪಗಳ ಮೇಲಿನ ರೋಷವನ್ನು ಬಿಟ್ಟು ಸ್ವಕೀಯರಿಂದ ಸಹಿತನಾಗಿ ಹಸ್ತಿನಾವತಿಗೆ ಹೋದನು. ಪ್ರಜೆಗಳನ್ನು ರಕ್ಷಿಸುತ್ತಾ ಇದ್ದನು.

ಸ್ವಲ್ಪ ಸಮಯವಾದ ಮೇಲೆ ಜನಮೇಜಯರಾಜನು ಅಶ್ವಮೇಧಯಾಗವನ್ನು ಮಾಡಲಿಕ್ಕೆ ದೀಕ್ಷಿತನಾದನು. ಅಶ್ವಮೇಧಯಾಗವನ್ನು ಮಾಡುವಾಗ ಒಂದುದಿನ ರಾತ್ರಿಯಲ್ಲಿ ಕುದುರೆಯನ್ನು ಕೊಂದು ಸತ್ತಕುದುರೆಯನ್ನು ಆಲಂಗಿಸಿಕೊಂಡು ರಾತ್ರಿಯೆಲ್ಲಾ ಯಾಗಪತ್ನಿಯು ಇರಬೇಕೆಂದು ಶಾಸ್ತ್ರದಲ್ಲಿ ಹೇಳಿದ ವಿಧಿಯು. ಹಾಗೆಯೇ ಜನಮೇಜಯರಾಜನ ಹೆಂಡತಿಯಾದ ವಪುಷ್ಟಮೆಯು ರಾತ್ರಿಯಲ್ಲಿ ಸತ್ತ ಕುದುರೆಯನ್ನು ಆಲಿಂಗನ ಮಾಡಿಕೊಂಡಿದ್ದಳು. ಆಗ ಇಂದ್ರದೇವರು ಆ ಸತ್ತ ಕುದುರೆಯಲ್ಲಿ ಪ್ರವೇಶಿಸಿ ವಪುಷ್ಟಮೆಯೊಡನೆ ಸಂಭೋಗವನ್ನು ಮಾಡಿದರು. ಇದನ್ನು ಜನಮೇಜಯ ರಾಜನು ತಿಳಿದವನಾಗಿ ಅಧ್ವರ್ಯುವನ್ನು ನೋಡಿ 'ನೀನು ಕುದುರೆಯನ್ನು ಕೊಲ್ಲಲಿಲ್ಲ, ಹಾಳಾಗಿ ಹೋಗು' ಎಂದನು. ಆಗ ಜ್ಞಾನಿಯಾದ ಅಧ್ವರ್ಯುವು ಜನಮೇಜಯರಾಜನೊಡನೆ 'ನಾನು ಸರಿಯಾಗಿ ಕುದುರೆಯನ್ನು ಕೊಂದಿರುವೆನು. ಇಂದ್ರದೇವರು ಸತ್ತ ಕುದುರೆಯಲ್ಲಿ ಪ್ರವೇಶಿಸಿ ಈ ಅನ್ಯಾಯವನ್ನು ಮಾಡಿದರು' ಎಂದು ಹೇಳಿದನು. ಆಗ ಜನಮೇಜಯರಾಜನು 'ನಾನು ಯಜ್ಞ ಮಾಡಿದ ಫಲವು, ತಪಸ್ಸು ಮಾಡಿದ ಫಲವು, ಪ್ರಜೆಗಳನ್ನು ರಕ್ಷಣೆ ಮಾಡಿದ ಫಲವು ಇರುವುದಾದರೆ ಇನ್ನು ಮುಂದೆ ಅಜಿತೇಂದ್ರಿಯನಾದ ಇಂದ್ರನನ್ನು ಕ್ಷತ್ರಿಯರು

ಅಶ್ವಮೇಧಯಾಗದಿಂದ ಪೂಜಿಸುವುದಿಲ್ಲ' ಎಂದು ಹೇಳಿದನು. ಮತ್ತು ಋತ್ವಿಕ್ಕುಗಳ ಮೇಲೆ ಕೋಪಿಸಿಕೊಂಡು ಈರೀತಿಯಾಗಿ ಅನ್ಯಾಯವು ನಡೆಯಲಿಕ್ಕೆ ನಿಮ್ಮ ದುರ್ಬಲತೆಯೇ ಕಾರಣವು. ಆದುದರಿಂದ ನೀವೊಬ್ಬರೂ ನಮ್ಮ ರಾಜ್ಯದಲ್ಲಿ ವಾಸಮಾಡಬಾರದು. ಬಂಧುಗಳಿಂದ ಸಹಿತರಾಗಿ ಹೊರಟುಹೋಗಿರಿ' ಎಂದನು. ಈರೀತಿಯಾಗಿ ಹೇಳಲು ಅವರೂ ಕೋಪಿಸಿಕೊಂಡು ರಾಜನನ್ನು ಬಿಟ್ಟು ಹೊರಟುಹೋದರು. ಆಮೇಲೆ ಜನಮೇಜಯರಾಜನು ಪತ್ನೀಶಾಲೆಯಲ್ಲಿ ಇರುವ ಹೆಂಗಸರೊಡನೆ 'ಅಯೋಗ್ಯಳಾದ ವಪುಷ್ಟಮೆಯನ್ನು ನನ್ನ ಮನೆಯಿಂದ ಹೊರಗೆ ತಳ್ಳಿರಿ. ಅವಳು ನನ್ನ ತಲೆಯನ್ನು ಮೆಟ್ಟಿದಳು. ಅವಳಿಂದ ನನ್ನ ಕೀರ್ತಿಯು ಹೋಯಿತು. ಅವಳನ್ನು ನಾನು ಇನ್ನು ಮುಂದೆ ನೋಡಲಿಕ್ಕೇ ಇಚ್ಛಿಸುವುದಿಲ್ಲ. ಪರಪುರುಷ ಸಂಗಮಾಡಿದ ಹೆಂಡತಿಯನ್ನು ಇಟ್ಟುಕೊಂಡ ಪುರುಷನಿಗೆ ಸುಖವಾಗಿ ರಾತ್ರಿಯಲ್ಲಿ ನಿದ್ರೆಯು ಬರಲಾರದು. ನಾಲಿಗೆಗೆ ರುಚಿಯು ಗೊತ್ತಾಗಲಾರದು' ಇತ್ಯಾದಿ ರೀತಿಯಾಗಿ ಗಟ್ಟಿಯಾಗಿ ಹೇಳಿದನು.

ಆಗ ವಿಶ್ವಾವಸು ಎಂಬ ಗಂಧರ್ವರಾಜನು 'ನೂರು ಯಾಗಗಳನ್ನು ಮಾಡಲು ಉದ್ಯುಕ್ತನಾದ ನಿನ್ನನ್ನು ನೋಡಿ ಇಂದ್ರದೇವರು ಸಹಿಸಲಿಲ್ಲ. ಆದುದರಿಂದ ಅಪ್ಸರಸ್ತ್ರೀಯನ್ನು ನಿನಗೆ ಪತ್ನಿಯನ್ನಾಗಿ ಕಳುಹಿಸಿದರು. ಅಂದರೆ ರಂಭಾ ಎಂಬ ಅಪ್ಸರಸ್ತ್ರೀಯೇ ವಪುಷ್ಟಮೆಯೆಂಬ ಹೆಸರಿನಿಂದ ಕಾಶೀರಾಜನ ಮಗಳಾದಳು. ಅವಳನ್ನು ನೀನು ಮದುವೆಯಾಗಿರುವಿ. ಸ್ವರ್ಗಲೋಕದ ಅಪ್ಸರಸ್ತ್ರೀಯಾದ ಆ ವಪುಷ್ಟಮೆಗೆ ಯಾವ ದೋಷವೂ ಇಲ್ಲ. ನೀನು ಅವಳನ್ನು ಸ್ವೀಕರಿಸು. ಇಂದ್ರದೇವರು ನಿನ್ನ ಯಜ್ಞವನ್ನು ಕೆಡಿಸಬೇಕೆಂದು ಹೀಗೆ ಮಾಡಿದರು. ನೀನು ತನ್ನನ್ನು ಮೀರುವಿ ಎಂದು ಇಂದ್ರದೇವರು ಹೀಗೆ ಮಾಡಿದರು. ಯಜ್ಞವನ್ನು ಕೆಡಿಸಬೇಕೆಂದೇ ಇಂದ್ರದೇವರು ಮೃತವಾದ ಕುದುರೆಯಲ್ಲಿ ಪ್ರವೇಶಿಸಿ ರಂಭೆಯ ಸಂಭೋಗವನ್ನು ಮಾಡಿದರು. ರಂಭೆಯೇ ವಪುಷ್ಟಮೆಯಾಗಿ ಹುಟ್ಟಿದ್ದು. ನೀನು ಋತ್ವಿಕ್‌ಗಳಿಗೂ ಶಾಪಕೊಟ್ಟೆ. ಇಂದ್ರದೇವರು ನೀನೂ ಬ್ರಾಹ್ಮಣರೂ ತನ್ನನ್ನು ಮೀರುವರು ಎಂದು ಈ ಕಾರ್ಯವನ್ನು ಮಾಡಿದರು. ನೀನು ಇಂದ್ರದೇವರ ಮೇಲೆಯೇ ಗುರುಗಳ ಮೇಲೆಯೇ ನಿನ್ನ ಮೇಲೆಯೇ ವಪುಷ್ಟಮೆಯ ಮೇಲೋ ದೋಷವನ್ನು ತಿಳಿಯಬೇಡ. ಕಾಲನಾಮಕ ಪರಮಾತ್ಮನ ಇಚ್ಛೆಯನ್ನು ಯಾರಿಂದಲೂ ಮೀರಲಿಕ್ಕೆ ಆಗಲಾರದು. ಸುಖದಿಂದ ಇರಬೇಕೆಂದು ಇಚ್ಛಿಸುವವರು ದೇವತೆಗಳಿಗೆ ಅನುಕೂಲರಾಗಿ ಇರಬೇಕು. ವಪುಷ್ಟಮೆಯು ಸ್ವರ್ಗದ ಅಪ್ಸರಸ್ತ್ರೀಯಾದ ರಂಭೆಯಾದ ಕಾರಣ ಅವಳಿಗೆ ದೋಷವಿಲ್ಲ. ನೀನು ಅವಳನ್ನು ಸ್ವೀಕಾರಮಾಡು'

ಎಂದು ಸಮಾಧಾನಪಡಿಸಿದನು. ತರುವಾಯ ಜನಮೇಜಯರಾಜನು ಮನಸ್ಸಮಾಧಾನವನ್ನು ಹೊಂದಿ ಯಜ್ಞವನ್ನು ಅಲ್ಲಿಯೇ ನಿಲ್ಲಿಸಿ ರಾಜ್ಯಪರಿಪಾಲನೆಯನ್ನು ಮಾಡುತ್ತಾ ವಪುಷ್ಟಮೆಯಿಂದ ಕೂಡಿಕೊಂಡು ಸಂತೋಷದಿಂದ ಇದ್ದನು.



# ವಿರಾಟಪರ್ವ-ವಿಶೇಷ

## ಧರ್ಮರಾಜನು ಮಾಡಿದ ದುರ್ಗಾಸ್ತೋತ್ರ [1]

[ಯಕ್ಷರೂಪಿ 'ಧರ್ಮ'ನಿಂದ ವರಗಳನ್ನು ಪಡೆದು ಅನುಗ್ರಹಿತನಾದ ಧರ್ಮರಾಜನು ಎಲ್ಲ ಸೋದರರೊಡನೆ ಅಜ್ಞಾತವಾಸಕ್ಕೋಸ್ಕರ ವಿಚಾರ ಮಾಡಿದನು. ತಾನು ಕಂಕನೆಂಬ ದ್ವಿಜನಾಗಿ ಅಕ್ಷ ಕೋವಿದನಾಗಿ, ಸನ್ಯಾಸಿ ವೇಷಧರಿಸಿ ಇರುವುದಾಗಿ ಹೇಳಿದನು. ಭೀಮನು ಅಡುಗೆಯವ ವೇಷ (ಸೂದವೇಷ) ಧರಿಸಿ ವಿರಾಟರಾಜನ ಪಾಕಗೃಹಾಧ್ಯಕ್ಷನಾಗಿರುವೆನೆಂದೂ, ಅರ್ಜುನನು ಊರ್ವಶಿಯ ಶಾಪಾನುಸಾರವಾಗಿ ಬೃಹನ್ನಳೆಯಾಗಿದ್ದುಕೊಂಡು ಉತ್ತರೆಗೆ ನರ್ತನಾದಿಗಳನ್ನು ಮಾಡಿಸುತ್ತಾ ಅಂತಃಪುರದಲ್ಲಿರುವೆನೆಂದೂ, ನಕುಲನು ಅಶ್ವಶಾಲೆಯನ್ನು ನೋಡಿಕೊಳ್ಳಲು ಗ್ರಂಥಿಕನಾಗಿಯೂ, ಸಹದೇವನು 'ತಂತಿಪಾಲ'ನೆಂಬ ಹೆಸರಿನಿಂದ 'ಗೋಸಂಖ್ಯಾತ'ನಾಗಿರುವೆನೆಂದೂ (ಗೋವುಗಳ ಯೋಗಕ್ಷೇಮಪಾಲಕನಾಗಿ); ದ್ರೌಪದೀದೇವಿಯು ಗಂಧಕತ್ರಿಯಾಗಿ ಸೈರಂಧ್ರಿ ಎಂದು, ವಿರಾಟನ ರಾಣಿಯೊಡನೆ ಇರುವುದಾಗಿ ಪರಸ್ಪರ ಹೇಳಿಕೊಂಡರು.

ನಂತರ ಪಾಂಡವರ ಅಪೇಕ್ಷೆಯ ಮೇರೆಗೆ ಪಾಂಡವರೊಡನೆ ಇಲ್ಲಿಯವರೆಗೂ ಇದ್ದ ಧೌಮ್ಯಾದಿ ಬ್ರಾಹ್ಮಣರು ಪಾಂಡವರಿಗೆ ಹರಸಿ ದ್ವೈತವನದಿಂದ ಬೀಳ್ಕೊಟ್ಟರು.

ನಂತರ ಪಾಂಡವರೆಲ್ಲರೂ ವಿರಾಟನಗರದ ಸಮೀಪಕ್ಕೆ ಬಂದು ಅಲ್ಲಿನ ಸ್ಮಶಾನದಲ್ಲಿ ಶಮೀವೃಕ್ಷದ ಮೇಲೆ ತಮ್ಮ ಅಸ್ತ್ರಶಸ್ತ್ರಗಳನ್ನು ನಕುಲನಿಂದ ಸ್ಥಾಪಿಸಿದರು. (ಇರಿಸಿದರು) ವಿರಾಟನಗರಕ್ಕೆ ಹೋಗುವ ಮುನ್ನ ಧರ್ಮರಾಜನು ಯಶೋದೆಯಲ್ಲಿ ಜನಿಸಿದ ದುರ್ಗಾದೇವಿಯನ್ನು ಸ್ತುತಿಸಿದನು. ದುರ್ಗಾದೇವಿಯ ಸ್ಮರಣೆ ಸ್ತೋತ್ರದಿಂದ ಮುಂದೆ ಯಾವುದೇ ವಿಘ್ನಗಳು ಬಂದರೂ ತಮ್ಮ ಅಜ್ಞಾತವಾಸಕ್ಕೆ ತೊಂದರೆಯಾಗಬಾರದೆಂದು ಸ್ತೋತ್ರ ಮಾಡಿದನು.

---

1. ಭಾ.ವಿ.ಪ ಅ-7

''ನಮೋऽಸ್ತು ವರದೇ ಕೃಷ್ಣೇ ಕುಮಾರಿ ಬ್ರಹ್ಮಚಾರಿಣಿ ।
ಬಾಲಾರ್ಕಸದೃಶಾಕಾರೇ ಪೂರ್ಣಚಂದ್ರನಿಭಾನನೇ''।
ಭಾಸಿ ದೇವಿ ಯಥಾ ಪದ್ಮಾ ನಾರಾಯಣಪರಿಗ್ರಹಃ ।
ಕೌಮಾರಂ ವ್ರತಮಾಸ್ಥಾಯ ತ್ರಿದಿವಂ ಪಾವಿತಂ ತ್ವಯಾ ।
ತ್ರೈಲೋಕ್ಯ ರಕ್ಷಣಾರ್ಥಾಯ ಮಹಿಷಾಸುರಮರ್ದಿನಿ ।
ಜಯಾ ತ್ವಂ ವಿಜಯಾ ಚೈವ ಸಂಗ್ರಾಮೇ ಚ ಜಯಪ್ರದಾ ।
ಮಮಾಪಿ ವಿಜಯಂ ದೇಹಿ ವರದಾ ತ್ವಂ ಚ ಸಾಂಪ್ರತಂ ॥
ದುರ್ಗಾತ್ ತಾರಯಸೇ ದುರ್ಗೇ ತತ್‌ತ್ವಂ ದುರ್ಗಾ ಸ್ಮೃತಾ ಜನೈಃ ।
ನೃಣಾಂ ಚ ಬಂಧನಂ ಮೋಹಂ ಪುತ್ರನಾಶಂ ಧನಕ್ಷಯಮ್ ।
ಸೋऽಹಂ ರಾಜ್ಯಾತ್ ಪರಿಭ್ರಷ್ಟಃ ಶರಣಂ ತ್ವಾಂ ಪ್ರಪನ್ನವಾನ್ ।
ತ್ರಾಹಿ ಮಾಂ ಪದ್ಮ ಪತ್ರಾಕ್ಷಿ ಸತ್ಯ ಸತ್ಯಾ ಭವಸ್ವ ನಃ ॥

ಬ್ರಹ್ಮಚಾರಿಯಾದ, ಕುಮಾರಿಯಾದ, ಕಪ್ಪುಬಣ್ಣದವಳೇ, ಕೃಷ್ಣೇ, ಬಾಲಸೂರ್ಯನಂತಿರುವಳೇ! ಪೂರ್ಣಚಂದ್ರನಂತಿರುವಳೇ! ನೀನು ನಾರಾಯಣನ ಪತ್ನಿ, ಕಮಲೆ! ನೀನು ಕೌಮಾರವ್ರತವನ್ನು ಆಚರಿಸಿ ಸ್ವರ್ಗವನ್ನು ಪವಿತ್ರಮಾಡಿದ್ದಿ.

ನೀನು ಯುದ್ಧದಲ್ಲಿ ಜಯಪ್ರದಳು, ವಿಜಯ ನಾಮಕಳು, ನನಗೂ ವಿಜಯ ವನ್ನು ನೀಡು, ನೀನು ವರ ನೀಡುವವಳು! ಸಂಕಟದಿಂದ ಪಾರುಮಾಡುವವಳಾದ್ದ ರಿಂದ ನೀನು ದುರ್ಗಾ ಎಂದು ಕರೆಯಲ್ಪಡುತ್ತೀ. ದುಷ್ಟ ಜನರಿಗೆ ಬಂಧನ, ಮೋಹ, ಪುತ್ರನಾಶ, ಧನಕ್ಷಯ ಮಾಡುವವಳು. ನಾನು ರಾಜ್ಯ ಭ್ರಷ್ಟನಾಗಿ ನಿನ್ನನ್ನು ಶರಣು ಹೊಂದಿದ್ದೇನೆ. ಪದ್ಮದಂತಹ ಕಣ್ಣುಳ್ಳವಳೇ ! ನನ್ನನ್ನು ರಕ್ಷಿಸು. ನನ್ನ ಪಾಲಿಗೆ ನೀನು ಸತ್ಯಳಾಗು. (ನಿನ್ನ ಸ್ತೋತ್ರಫಲ ಸತ್ಯವಾಗಲಿ). ಇತ್ಯಾದಿಯಾಗಿ ಧರ್ಮರಾಜನು ಸ್ತೋತ್ರ ಮಾಡಿದಾಗ ಧರ್ಮರಾಜನಿಗೆ ಪ್ರತ್ಯಕ್ಷಳಾಗಿ ಹೀಗೆ ದುರ್ಗೆ ನುಡಿದಳು].

'ಮಹಾಬಾಹುಬಲಶಾಲಿಯಾದ ರಾಜನೇ! ನಾನು ಹೇಳುವ ಮಾತನ್ನು ಕೇಳು. ಬೇಗನೇ ಯುದ್ಧದಲ್ಲಿ ನಿನಗೆ ಜಯವುಂಟಾಗುವುದು. ನನ್ನ ಅನುಗ್ರಹದಿಂದ ಕೌರವರ ಸೈನ್ಯವನ್ನು ಸಂಹರಿಸಿ ಶತ್ರುರಹಿತವಾದ ರಾಜ್ಯವನ್ನು ಹೊಂದಿ ಭೂಮಿಯನ್ನು ಅನುಭವಿಸುವಿ. ಸಹೋದರರಿಂದ ಸಹಿತನಾಗಿ ಸಂತೋಷವನ್ನು ಅನುಭವಿಸುವಿ. ನನ್ನ ಅನುಗ್ರಹದಿಂದ ನಿನಗೆ ಸೌಭಾಗ್ಯವೂ ಆರೋಗ್ಯವೂ ಉಂಟಾಗುವುದು. ಯಾರು ಅಸೂಯಾದಿದೋಷರಹಿತರಾಗಿ ಭಕ್ತಿಯಿಂದ ನನ್ನನ್ನು

ಕೀರ್ತನ ಮಾಡುವರೋ ಅವರಿಗೆ ಸಂತುಷ್ಟಳಾಗಿ ಆಯುಷ್ಯವನ್ನು, ಕೀರ್ತಿಯನ್ನು, ದೇಹಸೌಖ್ಯವನ್ನು, ಮಕ್ಕಳನ್ನೂ ಹೊಂದುವರು. ಪರದೇಶದಲ್ಲಿಯೋ ನಗರದಲ್ಲಿಯೋ ಯುದ್ಧದಲ್ಲಿಯೋ ಕಾಡಿನಲ್ಲಿಯೋ ಬೆಟ್ಟದಲ್ಲಿಯೋ ಯಾರು ನನ್ನನ್ನು ಸ್ಮರಿಸುವರೋ ಅವರಿಗೆ ಈ ಲೋಕದಲ್ಲಿ ಯಾವುದೂ ದುರ್ಲಭವಾದುದಲ್ಲ. ಈ ಶ್ರೇಷ್ಠವಾದ ಸ್ತೋತ್ರವನ್ನು ಯಾರು ಭಕ್ತಿಯಿಂದ ಕೇಳುವರೋ ಅಥವಾ ಹೇಳುವರೋ ಅವರಿಗೆ ಎಲ್ಲಾ ಕಾರ್ಯಗಳೂ ಸಿದ್ಧಿಯನ್ನು ಹೊಂದುವುವು. ನನ್ನ ಅನುಗ್ರಹದಿಂದ ವಿರಾಟನಗರದಲ್ಲಿ ಅಜ್ಞಾತವಾಸವನ್ನು ಮಾಡುತ್ತಿರುವ ನಿಮ್ಮನ್ನು ಕೌರವರಾಗಲೀ ಅಲ್ಲಿರುವ ಜನರಾಗಲೀ ತಿಳಿಯುವುದಿಲ್ಲ. ಈ ಪ್ರಕಾರವಾಗಿ ವರಪ್ರದರಾದ ದುರ್ಗಾದೇವಿಯರು ಧರ್ಮರಾಜನೊಡನೆ ಹೇಳಿ ಪಾಂಡವರಿಗೆ ರಕ್ಷೆಯನ್ನು ಮಾಡಿ ಅಲ್ಲಿಯೇ ಅಂತರ್ಧಾನವನ್ನು ಹೊಂದಿದರು.



## ಧರ್ಮರಾಜನು ವಿರಾಟರಾಜನ ಸಭೆಯನ್ನು ಪ್ರವೇಶಿಸಿದ್ದು[1]

ತರುವಾಯ ಪಾಂಡವರು ಮಹರ್ಷಿಗಂಧರ್ವರಿಂದ ಸೇವಿತವಾದ ಜಲವುಳ್ಳ ಮೂರುಲೋಕಗಳಲ್ಲಿ ಮನೋಹರವಾದ ಗಂಗೆಯಲ್ಲಿ ಇಳಿದು ದೇವರ್ಷಿ ಪಿತೃತರ್ಪಣ ವನ್ನು ಮಾಡಿದರು. ಧರ್ಮರಾಜನು ಯಮದೇವರು ಕೊಟ್ಟಿರುವ ವರವನ್ನು ಸ್ಮರಿಸಿಕೊಂಡು ಅಗ್ನಿಹೋತ್ರವನ್ನು ಮಾಡಿ ಮಂಗಲಕರವಾದ ಮಂತ್ರವನ್ನು ಜಪಿಸಿ ಪೂರ್ವದಿಕ್ಕಿಗೆ ಅಭಿಮುಖವಾಗಿ ನಿಂತುಕೊಂಡು ಕೈಮುಗಿದುಕೊಂಡು ಯಮದೇವರನ್ನು ಮೆಲ್ಲನೆ ಆಹ್ವಾನ ಮಾಡಿದರು. 'ನನ್ನ ತಂದೆಯಾದ ವರಪ್ರದರಾದ ಯಮದೇವರು ಪ್ರಸನ್ನವಾದ ಮನಸುಳ್ಳವರಾಗಿ ನನಗೆ ವರವನ್ನು ಕೊಟ್ಟರು. ಅಂದರೆ ನಾನು ನೀರಡಿಕೆಯುಳ್ಳವನಾಗಿ ನೀರನ್ನು ತರಲಿಕ್ಕೆ ಸಹೋದರರನ್ನು ಕಳುಹಿಸಿದಾಗ ಅವರು ಒಂದು ಸರೋವರಕ್ಕೆ ಹೋದವರಾಗಿ ಅಲ್ಲಿ ಯಕ್ಷರೂಪಿಯಾದ ಯಮದೇವರಿಂದ ಮೂರ್ಛಿತರಾಗಿ ಬೀಳಿಸಲ್ಪಟ್ಟರು. ತರುವಾಯ ನಾನು ಅಲ್ಲಿಗೆ ಹೋಗಿ ಅವರು ಕೇಳಿದ ಪ್ರಶ್ನೆಗಳಿಗೆ ಉತ್ತರವನ್ನು ಕೊಟ್ಟು ಸಂತೋಷಪಡಿಸಿದೆನು. ತರುವಾಯ ಪೂಜ್ಯರಾದ ಯಮದೇವರು ಸಂತುಷ್ಟರಾಗಿ ಸ್ನೇಹದಿಂದ ನನ್ನನ್ನು

---

1. ಭಾ.ವಿ.ಪ ಅ-7. ಈ ಕಥೆಯಿಂದ ಉತ್ತರಕಲ್ಯಾಣದವರೆಗಿನ ಕಥೆಗಳು ಮ.ತಾ.ನಿ. ಅಧ್ಯಾಯ 23ರಲ್ಲಿ ಸಂಗ್ರಹೀತವಾಗಿವೆ.

ಆಲಿಂಗಿಸಿದವರಾಗಿ ಅಂತರಿಕ್ಷದಲ್ಲಿ ಇದ್ದುಕೊಂಡು 'ಪಾಂಡುಪುತ್ರ! ನಾನು ವರವನ್ನು ಕೊಡುವವನು. ನನ್ನನ್ನು ನೋಡು. ನೀನು ಯಾವುದನ್ನು ಅಪೇಕ್ಷಿಸುವಿಯೋ ಅದನ್ನು ಕೇಳು' ಎಂದು ಹೇಳಿದರು. ಆಗ ನಾನು 'ನನಗೆ ಯಾವಾಗಲೂ ಧರ್ಮದಲ್ಲಿಯೇ ಬುದ್ಧಿಯು ಉಂಟಾಗಲಿ. ನನ್ನ ತಮ್ಮಂದಿರೆಲ್ಲರೂ ಜೀವಿಸಲಿ. ನಾವು ವಯಸ್ಸನ್ನು ರೂಪವನ್ನು ಬಲವನ್ನೂ ಹೊಂದಬೇಕು. ಕ್ಷಮಾಗುಣವೂ ಕೀರ್ತಿಯೂ ಉಂಟಾಗಬೇಕು. ನಮ್ಮ ವ್ರತವು ಸಂಪೂರ್ಣವಾಗಬೇಕು' ಎಂದು ಕೇಳಿಕೊಂಡನು. ಯಮದೇವರು 'ಹಾಗೆಯೇ ಆಗಲಿ' ಎಂದು ಹೇಳಿದರು.

ಅವರು ಹೇಳಿದ ಮಾತು ಸುಳ್ಳಾಗಲಾರದು' ಈರೀತಿಯಾಗಿ ಹೇಳಿ ಯಮದೇವರನ್ನು ಸ್ಮರಿಸಿ ಅವರ ಅನುಗ್ರಹದಿಂದ ಆಗಲೇ ಸನ್ಯಾಸಿಯ ರೂಪವನ್ನು ಧರಿಸಿದನು. ಕೈಯಲ್ಲಿ ಮೂರು ದಂಡವನ್ನು ಧರಿಸಿದನು. ಕಮಂಡಲುವನ್ನು ಧರಿಸಿದನು. ತಲೆಗೆ ರುಮಾಲನ್ನು ಧರಿಸಿದನು. ಅತಿ ಕೆಂಪಾದ ಕಾವಿವಸ್ತ್ರವನ್ನು ಧರಿಸಿ ತಲೆಯಲ್ಲಿ ಜುಟ್ಟುಉಳ್ಳವನಾಗಿ, ಕೈಯಲ್ಲಿ ಪವಿತ್ರವುಳ್ಳವನಾಗಿ, ಆಗ ಅದ್ಭುತವಾಗಿ ಕಾಣಿಸಿದನು. ಅದೇ ರೀತಿಯಾಗಿ ಅವನ ಸಹೋದರರೂ ಕೂಡ ಅದೇ ಕ್ಷಣದಲ್ಲಿ ತಮ್ಮ ವೇಷಕ್ಕೆ ಉಚಿತವಾದ ಆಭರಣ ವಸ್ತ್ರ ಪುಷ್ಪಾದಿಗಳು ಉಳ್ಳವರಾದರು. ಧರ್ಮರಾಜನು ಯತಿವೇಷವುಳ್ಳವ ನಾಗಿ ಬಂಗಾರಕಟ್ಟಿದ ವೈಡೂರ್ಯಮಣಿಯ ಪಗಡೆಕಾಳುಗಳನ್ನು ವಸ್ತ್ರದಲ್ಲಿ ಸುತ್ತಿಕೊಂಡು ಹೋಗಿ ಸಭೆಯಲ್ಲಿ ವಿಚಿತ್ರ ನಾನಾವಿಧ ಶಸ್ತ್ರಧಾರಿಗಳಾದ ಕೈಮುಗಿದುಕೊಂಡು ಇರುವ ಜನರಿಂದ ಯುಕ್ತನಾದ ಮಹಾತೇಜಸ್ವಿಯಾಗಿ ಕೂತಿದ್ದ ವಿರಾಟರಾಜನನ್ನು ದೂರದಲ್ಲಿ ನೋಡಿದನು. ಅಲ್ಲಿ ಅನೇಕ ಜನರು ಕಾಣಿಕೆಯನ್ನು ಹಿಡಿದುಕೊಂಡು ಪ್ರವೇಶಿಸುತ್ತಿದ್ದರು. ಬ್ರಾಹ್ಮಣರು ಮಂತ್ರವನ್ನು ತಿಳಿದವರು ಅನೇಕರು ಇದ್ದವರು. ಆನೆಗಳೂ ಕುದುರೆಗಳೂ ಬೇಕಾದಷ್ಟು ಇದ್ದವು. ಬೆನ್ನುಬಗ್ಗಿದವರು ಬಹಳ ಜನರಿದ್ದರು. ವಿರಾಟರಾಜನು ಬಿಳಿದಾದ ಎತ್ತರವಾದ ರುಮಾಲೆಯನ್ನು ಧರಿಸಿ ಅದರಿಂದ ತಲೆಕೂದಲನ್ನು ಮರೆಮಾಡಿಕೊಂಡಿದ್ದನು. ವಿಚಿತ್ರವಾದ ವೈಡೂರ್ಯಮಣಿಯಿಂದ ಮಾಡಿದ ಕಡುಕನ್ನು ಧರಿಸಿದ್ದನು. ಅಂತಹ ವಿರಾಟರಾಜನ ಬಳಿಗೆ ಧರ್ಮರಾಜನು ಸ್ವರ್ಗದಲ್ಲಿ ಇಂದ್ರದೇವರ ಬಳಿಗೆ ಬೃಹಸ್ಪತ್ಯಾಚಾರ್ಯರು ಹೋಗುವಂತೆ ಹೋಗುವವನಾದನು.

ವಿರಾಟರಾಜನು ತನ್ನ ಬಳಿಗೆ ಬರುತ್ತಿದ್ದ ಯತಿವೇಷಧಾರಿಯಾದ ಧರ್ಮರಾಜ ನನ್ನು ನೋಡಿ ಸಂತೋಷವುಳ್ಳವನಾಗಿ ಸಭೆಯಲ್ಲಿ ಕೂತಿದ್ದ ಬ್ರಾಹ್ಮಣರೊಡನೆ ಅವನ ವಿಷಯವಾಗಿ ಕೇಳಿದನು. 'ನನ್ನ ಸಭೆಗೆ ಬರುತ್ತಿರುವ ಈ ಯುವಕನನ್ನು ನೀವು

ಯಾರಾದರೂ ಪೂರ್ವದಲ್ಲಿ ನೋಡಿರುವಿರಾ? ಶ್ರೇಷ್ಠವಾದ ರೂಪದಿಂದ ಭೂಮಿಯನ್ನು ಪ್ರಕಾಶಗೊಳಿಸುತ್ತಿರುವನು. ಕಾಂತಿಯಿಂದ ಕುಬೇರನಂತೆ ಇರುವನು. ಸಿಂಹದಂತೆಯೂ ಆನೆಯಂತೆಯೂ ಶೋಭಿಸುತ್ತಿರುವನು. ಬಂಗಾರದ ಪರ್ವತ ದಂತೆ ಪ್ರಕಾಶಿಸುತ್ತಿರುವನು. ಅಗ್ನಿಯಂತೆಯೂ ಸೂರ್ಯನಂತೆಯೂ ಚಂದ್ರ ನಂತೆಯೂ ನಕ್ಷತ್ರದಂತೆಯೂ ಶೋಭಿಸುತ್ತಿರುವನು. ಇವನ ಹತ್ತಿರ ಒಬ್ಬರೂ ಸೇವಕರು ಕಾಣಿಸುವುದಿಲ್ಲ. ವಾಹನವಾಗಿ ಆನೆಯೂ ಕಾಣಿಸುವುದಿಲ್ಲ. ಛತ್ರವೂ ಕಾಣಿಸುವುದಿಲ್ಲ. ಕಿವಿಯಲ್ಲಿ ಕಡುಕು ಇರುವುದಿಲ್ಲ. ಕೈಯಲ್ಲಿ ವಂಕಿಯಿಲ್ಲ. ಹೂವನ್ನು ಧರಿಸಿಕೊಂಡು ಇಲ್ಲ. ವಿಚಿತ್ರವಾದ ನಾಲ್ಕು ಕುದುರೆಗಳು ಸೆಳೆಯುವ ರಥವೂ ಕಾಣಿಸುವುದಿಲ್ಲ. ಆನೆಯಂತೆಯೂ ಹರಿಯಂತೆಯೂ ಮಹಾವೃಷಭದಂತೆಯೂ ಕಾಣಿಸುವ ಇವನು ಸ್ಪಷ್ಟವಾದ ಕ್ಷತ್ರಿಯ ತೇಜಸ್ಸನ್ನು ಧರಿಸಿರುವನು. ಅಲಂಕಾರ ಮಾಡಿಕೊಳ್ಳದೆ ಇದ್ದರೂ ಕೂಡ ಅತ್ಯಂತ ಪ್ರಕಾಶಿಸುತ್ತಿರುವನು. ಉದಯಿಸಿಕೊಂಡು ಬಂದಿರುವ ಸೂರ್ಯನಂತೆ ಕಾಣಿಸುವನು. ಇವನು ನಿಶ್ಚಯವಾಗಿಯೂ ಕ್ಷತ್ರಿಯನಾಗಿ ಇರುವಂತೆಯೇ ತೋರುತ್ತದೆ. ಇವನು ಇಂದ್ರನಂತೆ ಇರುವನು ಸಮುದ್ರ ಪರ್ಯಂತವಾದ ಭೂಮಿಯನ್ನು ಆಳಲಿಕ್ಕೆ ಅರ್ಹನಾಗಿರುವನು. 'ಇವನು ನಿಶ್ಚಯ ವಾಗಿಯೇ ಕ್ಷತ್ರಿಯನಾಗಿಯೇ ಇರುವನು. ಪಟ್ಟಾಭಿಷಿಕ್ತನಾದ ಮಹಾರಾಜನೆಂದು ಕಾಣಿಸುತ್ತಾನೆ. ಇವನು ಯಾವುದನ್ನು ಅಪೇಕ್ಷಿಸುತ್ತಾನೋ ಅದೆಲ್ಲವನ್ನೂ ಇವನಿಗೆ ಕೊಟ್ಟು ಬಿಡಬೇಕು. ಇಂತಹ ಜನರನ್ನು ಕಂಡರೆ ನನಗೆ ಬಹಳ ಸಂತೋಷ ವಾಗುವುದು. ಇವನು ಯಾವ ವಿಷಯದಲ್ಲಿಯೂ ಇಚ್ಛಾನುಸಾರವಾಗಿ ಇರಲಿ' ಎಂದು ಹೇಳಿದನು.

ಅಷ್ಟರಲ್ಲಿ ಧರ್ಮರಾಜನು ಹತ್ತಿರಕ್ಕೆ ಬಂದುಬಿಟ್ಟನು. ಕೂಡಲೇ ವಿರಾಟರಾಜನು ಎದ್ದುನಿಂತನು. ಸಭೆಯೆಲ್ಲವೂ ಎದ್ದು ನಿಂತಿತು. ಧರ್ಮರಾಜನು ವಿರಾಟರಾಜನೊಡನೆ ಜಯವಾಗಲಿ ಎಂದು ಹೇಳಿದನು. ವಿರಾಟರಾಜನು ಅವನಿಗೆ ನಮಸ್ಕರಿಸಿದನು. ತರುವಾಯ ಕೈಮುಗಿದುಕೊಂಡು ವಿರಾಟನು 'ಪೂಜ್ಯನೇ! ನೀನು ಎಲ್ಲಿಂದ ಬಂದಿರುವಿ? ಯಾವುದನ್ನು ಅಪೇಕ್ಷಿಸುವಿ? ಎಲ್ಲಿಗೆ ಹೋಗುವಿ? ನಿನಗೆ ನಾನು ಏನು ಮಾಡಲಿ? ನಿನ್ನ ಸ್ವಭಾವ ಕುಲಗೋತ್ರ ಇತ್ಯಾದಿಗಳೆಲ್ಲವನ್ನು ನನಗೆ ಹೇಳು ಯತಿಗಳಾದ ಬ್ರಾಹ್ಮಣರು ವಿಶೇಷವಾಗಿ ಸತ್ಯವಾದ ಮಾತನ್ನು ಆಡುವರು. ನಿನ್ನಲ್ಲಿ ಉಚಿತವಾಗಿ ನಾನು ನಡೆದುಕೊಳ್ಳುವೆನು. ನಿನ್ನನ್ನು ಇಲ್ಲಿ ಒಬ್ಬರೂ ಅವಮಾನ ಮಾಡಲಾರರು. ನಿನ್ನ ಮಾತನ್ನು ಅವಮಾನ ಮಾಡಲಾರರು. ಬ್ರಾಹ್ಮಣರು ಬೆಂಕಿಗೆ

ಸಮಾನರು ಅವರನ್ನು ಪೂಜಿಸದೆ ಇದ್ದರೆ ಸುಟ್ಟುಹಾಕುವರು. ವಂಶವನ್ನೇ ನಾಶಮಾಡುವರು. ನಾನು ನಿನಗೆ ಸಂಪೂರ್ಣವಾದ ಭೂಮಿಯನ್ನೇ ಕೊಡಲಿಕ್ಕೆ ಉತ್ಸಾಹಿಯಾಗಿರುವೆನು. ನೀನು ಯಾವ ರಾಜನ ದೇಶದಿಂದ ಬರುತ್ತಿರುವಿ? ಇಲ್ಲಿ ಯಾವ ಕಾರ್ಯವನ್ನು ಮಾಡುವಿ?' ಎಂದು ಕೇಳಿದನು.

ಆಗ ಧರ್ಮರಾಜನು 'ರಾಜನೇ! ಸತ್ಯವನ್ನೇ ಹೇಳಲಿಕ್ಕೆ ಯಾರು ಉತ್ಸಾಹಿ ಯಾಗಿರುವರು? ನಾನು ಪ್ರತಿಜ್ಞಾ ಮಾಡಿದಂತೆ ಹೇಳುವುದನ್ನು ಕೇಳು. ಕುಲಗೋತ್ರಾದಿಗಳನ್ನು ಕೇಳು. ಗುರೂಪದೇಶದಿಂದಲೂ ನಿಯಮದಿಂದಲೂ ಕುಲಕ್ರಮಕ್ಕಾಗಿ ಪಿತೃಗಳಿಂದ ನನಗೆ ವ್ರತವು ಆಜ್ಞಪ್ತವಾಗಿದೆ. ಪಂಚೇಂದ್ರಿಯಗಳಿಂದ ಕೂಡಿರುವ ಈ ನನ್ನ ದೇಹಕ್ಕೆ ಪಂಚಪಿತೃಗಳೆಂದು ಹೇಳುವರು. ನಾನು ಕಂಕ ಎಂದು ಹೆಸರುಳ್ಳುವನು. ಸ್ವಕರ್ಮದಿಂದ ವ್ರತವುಳ್ಳ ಬ್ರಾಹ್ಮಣನು. ನಿನ್ನ ದೇಶಕ್ಕೆ ಬಂದಿರುವೆನು. ನಾನು ಪಗಡೆ ಆಟದಿಂದ ಹಣವೆಲ್ಲವನ್ನು ಕಳೆದುಕೊಂಡಿರುವೆನು. ಸತ್ಯಪ್ರತಿಜ್ಞೆಯುಳ್ಳ ನಾವು ವ್ರತಯುಕ್ತರಾಗಿ ಸಂಚರಿಸುತ್ತಿರುವೆವು. ಪೂರ್ವದಲ್ಲಿ ನಾನು ಧರ್ಮರಾಜನಿಗೆ ಮಿತ್ರನಾಗಿದ್ದೆನು. ಅವನ ಮನೆಯಲ್ಲಿ ಪ್ರವೇಶ ಮಾಡಿಕೊಂಡು ಇದ್ದೆನು. ಅವನ ಶರೀರವನ್ನೇ ಪ್ರವೇಶಿಸುತ್ತಿದ್ದೆನು ಎಂದೂ ಹೇಳಬಹುದು. ಅವನ ಮನೆಯಲ್ಲಿ ನಾನು ಸುಖವಾಗಿ ವಾಸಮಾಡಿಕೊಂಡು ಇದ್ದೆನು. ಅಲ್ಲಿ ನಾನು ರಾಜನಾಗಿಯೇ ಇದ್ದೆನು. ಅಲ್ಲಿ ನನ್ನ ಆಜ್ಞೆಯಂತೆ ಹೆಂಗಸರೂ ಇದ್ದರು. ಕುದುರೆಗಳೂ ನನ್ನ ಪ್ರಿಯಕ್ಕೆ ಕಾರಣವಾಗಿದ್ದವು. ನಾನು ಮಾಡಿದ್ದನ್ನು ಒಬ್ಬರು ಬೇರೆ ವಿಧವಾಗಿ ಮಾಡುತ್ತಿರಲಿಲ್ಲ. ನಾನು ಧರ್ಮರಾಜನಿಗೆ ಸಮಾನವಯಸ್ಕನಾದ ಮಿತ್ರನು. ನಾನು ದುಃಖದಿಂದ ಎಲ್ಲಾ ಭೂಮಿಯನ್ನೂ ಸಂಚರಿಸಿದೆನು. ಎಲ್ಲಿಯೂ ಮನಸ್ಸಿಗೆ ಶಾಂತಿಯು ಉಂಟಾಗಲಿಲ್ಲ. ನಾನು ವೈಯಾಘ್ರಪದ್ಯಗೋತ್ರದವನು. ನಾವು ಪೂರ್ವದ ಸುಖವನ್ನು ಹುಡುಕುತ್ತಿರುವೆವು. ಈ ಯತ್ಯಾಶ್ರಮವನ್ನು ಹೊಂದಿರುವ ನನಗೆ ಧರ್ಮರಾಜನು ಸಮಾನಗುಣವುಳ್ಳವನು. ನೀನೂ ಹಾಗೆಯೇ. ನನಗೆ ತಂದೆ ತಾಯಿ ಬಂಧುಗಳೂ ಒಬ್ಬರೂ ಇಲ್ಲ. ನನಗೆ ರೂಪವಿಲ್ಲ. ಸಂತತಿಯಿಲ್ಲ. ನನಗೀಗ ಸುಖದುಃಖಗಳು ಸಮಾನವಾಗಿರುವುವು. ನಾನು ಕಾಮದಿಂದಲೂ ಧನದಿಂದಲೂ ಮುಕ್ತನಾಗಿರುವೆನು. ಈಗ ನಿನ್ನ ಆಶ್ರಯದಲ್ಲಿ ವಾಸಮಾಡಬೇಕೆಂದು ಬಂದಿರುವೆನು. ನನಗೆ ಈ ಒಂದು ವರ್ಷದಲ್ಲಿ ವ್ರತವು ಮುಗಿಯುವುದು. ಆಮೇಲೆ ನಿನ್ನನ್ನು ಕರ್ಮಗಳಿಂದ ಸಂತೋಷಪಡಿಸಿ ಬೇಕಾದಲ್ಲಿಗೆ ಹೊರಟುಹೋಗುವೆನು. ನನಗೆ ಪಗಡೆ ಆಡಲಿಕ್ಕೆ ತಿಳಿಯುವುದು. ನಾನು ಸೋತು ಹೋದವನಾಗಿ ಪಕ್ಷಿಗಳ,

ಮೃಗಗಳ, ಧ್ವನಿರೂಪವಾದ ಶಕುನಗಳನ್ನು ಯೋಚಿಸುತ್ತಾ ಆಶ್ರಯಹೀನನಾಗಿ ಸನ್ಯಾಸಿಯಾಗಿ ಭಿಕ್ಷುಕನಾಗಿರುವೆನು' ಎಂದು ಹೇಳಿದನು.

ಈರೀತಿಯಾಗಿ ಧರ್ಮರಾಜನು ಹೇಳಲು ವಿರಾಟರಾಜನು ಅವನಿಗೆ ಕೈಮುಗಿದು ಸಂತೋಷಯುಕ್ತವಾದ ಮನಸ್ಸುಳ್ಳವನಾಗಿ 'ನಿನಗೆ ನಾನು ಬೇಕಾದ ವರವನ್ನು ಕೊಡುವೆನು. ನಿನಗೆ ಅಭಿಪ್ರಾಯವಿದ್ದರೆ ಮತ್ಸ್ಯದೇಶವನ್ನೇ ಆಳುವವ ನಾಗು. ಪಗಡೆ ಆಟ ಆಡುವವರನ್ನು ಕಂಡರೆ ನನಗೆ ಪರಮಪ್ರೀತಿಯು. ನೀನು ನನ್ನ ರಾಜ್ಯಕ್ಕೆಯೇ ಅರ್ಹನಾಗಿರುವಿ. ಚಕ್ರವರ್ತಿಯಂತೆ ಇರುವ ನೀನು ನನಗೆ ಸಮಾನವಾದ ವಾಹನ ಆಸನ ಭೋಜನಾದಿಗಳನ್ನು ಹೊಂದು. ನಿನ್ನನ್ನು ಯಾವಾಗಲೂ ನೋಡುತ್ತಿರುವುದೇ ನನಗೆ ಪ್ರಿಯವಾಗಿರುವುದು. ಯಾರಾದರೂ ಬ್ರಾಹ್ಮಣರೋ ಇತರರೋ ಕಾರ್ಯಕ್ಕಾಗಿ ನಿನ್ನ ಬಳಿಗೆ ಬಂದರೆ ನಿನ್ನಿಂದ ಪ್ರಾರ್ಥಿತನಾಗಿ ನಾನು ಮಾಡಿಕೊಡುವೆನು. ನನ್ನ ಬಳಿಯಲ್ಲಿ ನಿನಗೆ ಯಾರು ಅಪ್ರಿಯವನ್ನು ಮಾಡುವರೋ ಅವನನ್ನು ಊರಿನಿಂದ ಓಡಿಸುವೆನು. ನನ್ನ ಬಳಿಯಲ್ಲಿರುವ ಎಲ್ಲಾ ಧನಕ್ಕೂ ನೀನು ಪ್ರಭುವು. ನೀನು ಇಲ್ಲಿ ಸ್ವತಂತ್ರವಾಗಿ ವಾಸಮಾಡುವವನಾಗು' ಎಂದು ಹೇಳಿದನು. ಅದಕ್ಕೆ ಧರ್ಮರಾಜನು 'ನನಗೆ ಹೆಚ್ಚಿಗೆ ಆಸೆಯೊಂದೂ ಇರುವುದಿಲ್ಲ. ಪಗಡೆಯಾಟದಲ್ಲಿ ಜೈಸಿದ ಹಣವನ್ನು ಅಪೇಕ್ಷಿಸುವುದಿಲ್ಲ. ವಿಶೇಷವಾದ ಭೋಜನವನ್ನು ಅಪೇಕ್ಷಿಸುವುದಿಲ್ಲ. ಹವಿಷ್ಯಾನ್ನ ವನ್ನು ಭೋಜನ ಮಾಡುವೆನು. ರಾತ್ರಿಯಲ್ಲಿ ನೆಲದ ಮೇಲೆ ಮಲಗುವೆನು. ವ್ರತದಿಂದ ನಾನು ಬ್ರಹ್ಮಚರ್ಯವುಳ್ಳವನಾಗಿರುವೆನು. ನಾನು ಯಾರ ಮೇಲೆಯೂ ಕೋಪಿಸಿಕೊಳ್ಳಬಾರದು. ಈಪ್ರಕಾರವಾಗಿ ನಿನ್ನ ಬಳಿಯಲ್ಲಿ ವಾಸಮಾಡುವ ಬುದ್ಧಿಯು ಉಂಟಾಗಿರುವುದು. ಈರೀತಿಯಾಗಿ ನೀನು ನನ್ನನ್ನು ವಾಸಮಾಡಿಸಿದರೆ ಅದರಿಂದ ನಾನು ಕೃತಾರ್ಥನಾಗುವೆನು' ಎಂದನು. ತರುವಾಯ ಧರ್ಮರಾಜನು ವಿರಾಟರಾಜ ನಿಂದ ಸತ್ಕೃತನಾಗಿ ಅಲ್ಲಿಯೇ ವಾಸಮಾಡುವವನಾದನು. ಅವನ ನಿಜವಾದ ವಿಷಯವನ್ನು ಅಲ್ಲಿರುವ ಒಬ್ಬರೂ ತಿಳಿಯಲಿಲ್ಲ.



# ಭೀಮಸೇನದೇವರು ವಿರಾಟನ ಬಳಿಗೆ ಬಂದುದು [1]

ತರುವಾಯ ಮತ್ತೊಂದು ದಿಕ್ಕಿನಲ್ಲಿ ಅಡಿಗೆಯವರ ವೇಷವನ್ನು ಧರಿಸಿಕೊಂಡು ಭೀಮಸೇನದೇವರು ಕಾಣಿಸಿಕೊಂಡರು. ಕೈಯಲ್ಲಿ ಸಟ್ಟುಗ, ಸೌಟು, ಗೋಚರ್ಮ ವನ್ನು, ಕೈಕೊಡಲಿಯನ್ನು ಹಿಡಿದುಕೊಂಡು ಕಪ್ಪಾದ ವಸ್ತ್ರವುಳ್ಳವರಾಗಿ ವಿರಾಟರಾಜನ ಸಭೆಗೆ ಬಂದರು. ಉದಯಿಸಿಕೊಂಡು ಬರುವ ಸೂರ್ಯನಂತೆ ಇರುವ, ದೊಡ್ಡ ಆನೆಯಂತೆ ಇರುವ, ಬರುತ್ತಿರುವ ಭೀಮಸೇನದೇವರನ್ನು ನೋಡಿ ವಿರಾಟರಾಜನು ಅಂಜಿಹೋದನು. ಎಲ್ಲಾ ದಿಕ್ಕುಗಳನ್ನು ಪುನಃ ಪುನಃ ನೋಡಿದನು. ಒಂದೇ ವಸ್ತ್ರವನ್ನು ಧರಿಸಿದ್ದ ಶತ್ರುಸೈನ್ಯವನ್ನು ತಡೆಯುವ ಸಾಮರ್ಥ್ಯವುಳ್ಳ ಭೀಮಸೇನದೇವರನ್ನು ವಿರಾಟರಾಜನು ಭಯಪಟ್ಟದ್ದು ಮಾತ್ರವಲ್ಲದೆ ಸಭೆಯಲ್ಲಿ ಇದ್ದ ಜನರೂ ಭಯದಿಂದ ದೂರಕ್ಕೆ ಸರಿಯಲು ಆರಂಭಿಸಿದರು. ತರುವಾಯ ವಿರಾಟರಾಜನು ದೀರ್ಘಶ್ವಾಸವನ್ನು ಬಿಡುವವನಾಗಿ 'ಆನೆಯಂತಿರುವ ಈ ನಮ್ಮ ಸಭೆಗೆ ಬರುತ್ತಿರುವವನೂ ಯಾರಾಗಿರಬಹುದು? ನಮ್ಮಲ್ಲಿ ಯಾರು ಇವನನ್ನು ಪೂರ್ವದಲ್ಲಿ ನೋಡಿರುವರು? ಇವನು ಸಿಂಹದಂತೆ ಪ್ರಕಾಶಿಸುತ್ತಿರುವನು. ರಾಜಕಾಂತಿಯಿಂದ ರಾಜನಂತೆ ಪ್ರಕಾಶಿಸುತ್ತಾ ಇರುವನು. ಇವನು ಕ್ಷತ್ರಿಯನಲ್ಲವೆಂದು ಹೇಳಲಿಕ್ಕೆ ಆಗಲಾರದು. ಇವನು ಇಂದ್ರದೇವರಂತೆ ಇರುವನು. ಇಂದ್ರದೇವರಂತೆ ಇವನು ಸಮಸ್ತಭೂಮಿಯನ್ನು ಪರಿಪಾಲಿಸುವನು. ಇವನು ರಾಜನಾಗದೆ ಇರಲಾರನೆಂದೇ ನನಗೆ ತೋರುತ್ತದೆ. ಸ್ವರ್ಗದಿಂದ ತಪ್ಪಿಬಂದ ಯಯಾತಿರಾಜನಂತೆ ಇರುವನು' ಎಂದು ಹೇಳಿದನು.

ಅಷ್ಟರಲ್ಲಿಯೇ ಭೀಮಸೇನದೇವರು ಸಭೆಗೆ ಬಂದು ಜಯವಾಗಲಿ ಎಂದುಹೇಳಿ ರಾಜನನ್ನು ಜನರನ್ನು ಸಂತೋಷಪಡಿಸಿದರು. ತರುವಾಯ ವಿರಾಟರಾಜನೊಡನೆ 'ರಾಜನೇ! ನಿನ್ನ ಬಳಿಯಲ್ಲಿ ಬದುಕಲಿಕ್ಕೆ ನಾನು ಬಂದಿರುವೆನು. ನೀನೇ ಲೋಕದಲ್ಲಿ ಉತ್ತಮವಾದ ಆಶ್ರಯನಾಗಿರುವಿ. ರಾಜನೇ! ನಾನು ನಾಲ್ಕನೇ ಜಾತಿಯಾದ ಶೂದ್ರನು. ಗುರೂಪದೇಶದಿಂದ ಪರಿಚರ್ಯೆಯನ್ನು ಮಾಡುವೆನು. ನಾನು ಚೆನ್ನಾಗಿ ತೋವೆಗಳನ್ನು ಮಾಡಲಿಕ್ಕೆ ಇತರ ವ್ಯಂಜನಗಳನ್ನು ಮಾಡಲಿಕ್ಕೂ ತಿಳಿದಿರುವೆನು. ಮಾಂಸವನ್ನು ಪಕ್ವಮಾಡುವೆನು. ಅಪ್ಪ ಮೊದಲಾದ ಭಕ್ಷ್ಯಗಳನ್ನು ಚೆನ್ನಾಗಿ ಮಾಡಲಿಕ್ಕೆ ತಿಳಿದಿರುವೆನು. ಅನೇಕ ವಿಧಗಳಾದ ಹಣ್ಣುಗಳ ರಸಾಯನ

---

1. ಭಾ.ವಿ.ಪ ಅ-8

ಗಳನ್ನು ಮಾಡುವ ರೀತಿಯನ್ನು ತಿಳಿದಿರುವೆನು. ನನ್ನಂತೆ ತೊವ್ವೆಯನ್ನ ಮಾಡುವವನು ಯಾರೂ ಇರುವುದಿಲ್ಲ' ಎಂದು ಹೇಳಿದರು.

ಆಗ ವಿರಾಟರಾಜನು ಸಂತೋಷವುಳ್ಳವನಾಗಿ 'ಕುಬೇರ ಚಂದ್ರ ಇಂದ್ರ ಸೂರ್ಯರಂತೆ ಕಾಂತಿಯುಳ್ಳ ಮಹಾನುಭಾವನೇ! ನಿನ್ನ ಶೂದ್ರರ ಲಕ್ಷಣವೊಂದೂ ಕಾಣಸುವುದಿಲ್ಲವಲ್ಲಾ! ಅಗ್ನಿಯಂತೆಯೂ ಹಾದಿನಂತೆಯೂ ತೇಜಸ್ಸುಳ್ಳ ನಿನಗೆ ಅಡಿಗೆಮನೆಯಲ್ಲಿ ಇದ್ದುಕೊಂಡು ಅಡಿಗೆ ಮಾಡುವುದು ಉಚಿತವಾಗಿಲ್ಲವಲ್ಲಾ! ನೀನು ತೊವ್ವೆ ಮಾಡಲಿಕ್ಕೆ ಅರ್ಹನಲ್ಲ, ಧ್ವಜರಥಗಳುಳ್ಳವನಾಗಿ ಸೇನಾನಾಯಕ ನಾಗು. ಆನೆಗಳ ಸೈನ್ಯಕ್ಕೆ ನಿಯಾಮಕನಾಗು. ನೀನು ನೀಚವಾದ ಕರ್ಮವನ್ನು ಮಾಡಲಿಕ್ಕೆ ಅರ್ಹನಲ್ಲ, ಈ ಭೂಮಿಯನ್ನೇ ಆಳಲಿಕ್ಕೆ ಅರ್ಹನಾಗಿರುವಿ' ಎಂದು ಹೇಳಿದನು.

ಆಗ ಭೀಮಸೇನದೇವರು 'ಉಗ್ರಶಾಸನವುಳ್ಳ ಮಹಾರಾಜನೇ! ನಾನು ನಾಲ್ಕನೇ ಜಾತಿಯವನು. ನಾನು ಇಂತಹ ಪದವಿಯನ್ನು ನಿನ್ನಿಂದ ಅಪೇಕ್ಷಿಸುವುದಿಲ್ಲ. ನಾನು ಪೂರ್ವದಲ್ಲಿ ಧರ್ಮರಾಜನ ಅಡಿಗೆಮನೆಯಲ್ಲಿ ಯಜಮಾನನಾಗಿದ್ದೆನು. ಅನ್ನಪಾನಗಳನ್ನು ಮಾಡಿಕೊಡುತ್ತಿದ್ದೆನು. ಹಾಗಿದ್ದರೂ ನೀನು ನನಗೆ ಅಡಿಗೆಯ ವಿಷಯವಾಗಿ ಕೆಲಸವನ್ನು ಕೊಡದಿದ್ದರೆ ಬಂದಂತೆಯೇ ಇಲ್ಲಿಂದ ಹೊರಟು ಹೋಗುವೆನು. ಅಡಿಗೆಯ ವಿಷಯದಲ್ಲಿ ನನಗೆ ಆಜ್ಞೆಯನ್ನು ಮಾಡು. ನಿನಗೆ ಒಳ್ಳೆ ತೊವ್ವೆಯನ್ನ ಮಾಡಿಹಾಕುವೆನು. ಬಲದಲ್ಲಿಯೂ ನನಗೆ ಸಮಾನವಾದವನು ಬೇರೊಬ್ಬನು ಇರುವುದಿಲ್ಲ. ನನಗೆ ಯಾವಾಗಲೂ ಮಲ್ಲಯುದ್ಧವನ್ನು ಮಾಡುವ ಸ್ವಭಾವವಿರುವುದು. ಆನೆಗಳೊಡನೆಯೂ ಸಿಂಹಗಳೊಡನೆಯೂ ಯುದ್ಧವನ್ನು ಮಾಡಿ ನಾನು ನಿನಗೆ ಸಂತೋಷವನ್ನು ಉಂಟುಮಾಡುವೆನು. ನನ್ನಂತೆ ನೀಚಕರ್ಮ ವುಳ್ಳವನು ಸೇನಾನಾಯಕನಾಗಬಾರದು. ನಾವೆಲ್ಲರೂ ನಮ್ಮ ನಮ್ಮ ಕರ್ಮಗಳಿಂದ ಸಂತುಷ್ಟರಾಗಿರುವೆವು. ನಿನಗೆ ಇಚ್ಛೆಯಿದ್ದರೆ ಅಡಿಗೆಕಾರ್ಯದಲ್ಲಿ ನನ್ನನ್ನು ಆಜ್ಞಾಪಿಸು. ನಿನ್ನಲ್ಲಿ ಬಲಿಷ್ಠರೆಂದು ಪ್ರಸಿದ್ಧರಾದ ಯಾವ ಮಲ್ಲರು ಇರುವರೋ ಅವರೊಡನೆ ನಿನ್ನನ್ನು ಸಂತೋಷಪಡಿಸುತ್ತಾ ದ್ವಂದ್ವಯುದ್ಧವನ್ನು ಮಾಡುವೆನು' ಎಂದು ಹೇಳಿದರು.

ಅದನ್ನು ಕೇಳಿ ವಿರಾಟರಾಜನು ಸಂತೋಷವುಳ್ಳವನಾಗಿ 'ಅಡಿಗೆ ಮಾಡು ವುದು. ನಿನಗೆ ಯೋಗ್ಯವೆಂದು ನನಗೆ ತೋರುವುದಿಲ್ಲ. ಸಮುದ್ರಪರ್ಯಂತವಾದ ಭೂಮಿಯನ್ನು ಆಳಲಿಕ್ಕೆ ಅರ್ಹನಾಗಿರುವಿ. ಇಂದ್ರದೇವರಂತೆಯೂ ಶ್ರೀಭಗವಂತ

ನಂತೆಯೂ ಪ್ರಕಾಶಿಸುತ್ತಾ ಇರುವಿ. ಆದರೂ ನಿನ್ನ ಅಭಿಪ್ರಾಯವು ಹೇಗೆ ಇದೆಯೋ ಹಾಗೆಯೇ ಆಗಲಿ. ಅಡಿಗೆಮನೆಯಲ್ಲಿ ಯಜಮಾನನಾಗಿರು. ಅಡಿಗೆಮನೆಯಲ್ಲಿ ಅನೇಕ ಅಡಿಗೆಯವರನ್ನು ಸತ್ಕರಿಸಿ ಇಟ್ಟುಕೊಂಡಿರುವೆನು. ಅವರಿಗೆಲ್ಲರಿಗೂ ನಿನ್ನನ್ನು ಅಧಿಪತಿಯನ್ನಾಗಿ ಮಾಡಿರುವೆನು' ಎಂದು ಹೇಳಿದನು.

ತರುವಾಯ ಭೀಮಸೇನದೇವರು ವಿರಾಟರಾಜರ ಅಡಿಗೆಮನೆಯಲ್ಲಿ ರಾಜನಿಗೆ ಪ್ರಿಯರಾಗಿ ಅಡಿಗೆ ಮಾಡುತ್ತಾ ಇದ್ದರು. ಅವರು ಭೀಮಸೇನದೇವರು ಎಂಬ ವಿಷಯವನ್ನು ಮಾತ್ರ ಯಾರೊಬ್ಬರೂ ತಿಳಿಯಲಿಲ್ಲ.



## ಅರ್ಜುನನು ವಿರಾಟನ ಬಳಿಗೆ ಬಂದುದು[1]

ತರುವಾಯ ಸ್ತ್ರೀವೇಷಧಾರಿಯಾದ ಒಬ್ಬ ಯುವಕನು ಕಾಣಿಸಿಕೊಂಡನು. ಅವನು ವಿಚಿತ್ರವಾದ ಹವಳದಿಂದ ಮಾಡಿದ ಕುಂಡಲಗಳನ್ನು ಧರಿಸಿದ್ದನು. ಕೈಗೆ ಬಳೆಗಳನ್ನು ಧರಿಸಿದ್ದನು. ಕಪ್ಪಾದ ಮತ್ತು ಕೆಂಪಾದ ವಸ್ತ್ರಗಳನ್ನು ಧರಿಸಿದ್ದನು. ಉದ್ದವಾದ ಅನೇಕ ಕೂದಲುಗಳನ್ನು ಬಿಚ್ಚಿಕೊಂಡಿದ್ದನು. ಆ ಸ್ತ್ರೀವೇಷದಿಂದ ಅವನು ರಾಹುಗ್ರಸ್ತನಾದ ಚಂದ್ರನಂತೆ ಶೋಭಿಸುತ್ತಲೂ ಶೋಭಿಸದೆಯೂ ಇರುತ್ತಿದ್ದನು. ಈರೀತಿಯಾದ ವೇಷದಿಂದ ಅರ್ಜುನನು ತನ್ನ ಹೆಜ್ಜೆಯಿಂದ ಭೂಮಿಯನ್ನು ನಡುಗಿಸುತ್ತಾ ವಿರಾಟ ರಾಜನ ಸಭೆಯ ಸಮೀಪಕ್ಕೆ ಬರುವವನಾದನು. ವಿರಾಟರಾಜನು ದೇವೇಂದ್ರನಂತೆ ಶೋಭಿಸುತ್ತಿರುವ ಗಜೇಂದ್ರನಂತೆ ವಿಕ್ರಮಶಾಲಿಯಾದ ಅವನನ್ನು ನೋಡಿ ಹತ್ತಿರ ಇರುವ ಎಲ್ಲಾ ಜನರೊಡನೆ 'ಇವನು ಎಲ್ಲಿಂದ ಬರುತ್ತಿರುವನು? ಇವನನ್ನು ಇಷ್ಟರವರೆಗೆ ನಾನು ಕೇಳಿದ್ದೇ ಇಲ್ಲವಲ್ಲಾ!' ಎಂದು ಕೇಳಿದನ್ನು. ಅದಕ್ಕೆ ತಮಗೆ ತಿಳಿದಂತೆ ಹೇಳಲಿಲ್ಲ. ಆಮೇಲೆ ಆಶ್ಚರ್ಯವುಳ್ಳವನಾಗಿ 'ಇವನು ಗಜೇಂದ್ರನಂತೆ ಲೀಲೆಯುಳ್ಳವನಾಗಿರುವನು. ಮೃಗೇಂದ್ರನಂತೆ ನಡೆದು ಬರುತ್ತಿರುವೆನು. ವೃಷಭ ದಂತೆ ಕಣ್ಣುಳ್ಳವನಾಗಿರುವನು. ದೇವಪುತ್ರನಂತೆ ಉಗ್ರತೇಜಸ್ಸುಳ್ಳವನಾಗಿರುವನು. ಬಂಗಾರದಂತೆ ಹೊಳೆಯುತ್ತಿರುವನು. ಈರೀತಿಯಾಗಿ ನನ್ನ ನಗರಕ್ಕೆ ಪ್ರವೇಶಿಸಿದ ಇವರು ಯಾರಿರಬಹುದು? ಇವನು ಇಂದ್ರದೇವರ ಮಗನಾಗಿರಬಹುದೇ? ಬ್ರಹ್ಮದೇವರ ಮಗನಾಗಿರಬಹುದೇ? ಅಥವಾ ಬ್ರಹ್ಮದೇವರೇ ಆಗಿರಬಹುದೇ?

1. ಭಾ.ವಿ.ಪ ಅ-11

ಪಾರ್ವತೀಪುತ್ರನಾಗಿರಬಹುದೇ? ಕುಬೇರನ ಮಗನಾಗಿರಬಹುದೇ? ಇವನನ್ನು ನೋಡುವಾಗ ನನಗೆ ಹೀಗೆಲ್ಲಾ ಸಂದೇಹವು ಬರುತ್ತಿರುವುದು' ಎಂದು ಹೇಳಿದನು.

ಅಷ್ಟರಲ್ಲಿ ಸಭೆಯಲ್ಲಿ ಇರುವ ಎಲ್ಲಾ ಜನರೂ ನೋಡುತ್ತಿರಲು ಅರ್ಜುನನು ವಿರಾಟನ ಬಳಿಗೆ ಬಂದು 'ರಾಜನೇ! ನರ್ತನ ಮಾಡಿಸಲಿಕ್ಕೆ ತಿಳಿದವಳಾದ ಬೃಹನ್ನಳೆಯು ನಾನು ಚೆನ್ನಾಗಿ ಜಡೆಯನ್ನು ಹಾಕುವೆನು. ಒಳ್ಳೇ ಕುಂಡಲಗಳನ್ನು ಮಾಡುವೆನು. ಹೂವುಗಳನ್ನು ಕಟ್ಟುವೆನು. ಹೊದ್ದುಕೊಳ್ಳುವ ವಸ್ತ್ರಗಳಲ್ಲಿ ಕಸೂತಿ ಯನ್ನು ಹಾಕುವೆನು. ಸ್ನಾನ ಮಾಡಿಸುವೆನು. ಕನ್ನಡಿಯನ್ನು ಶುದ್ಧಮಾಡಿ ಇಡುವೆನು. ಇಂತಹ ಕಾರ್ಯಗಳಲ್ಲಿ ನನಗೆ ಚಾತುರ್ಯವಿರುವುದು. ನಪುಂಸಕರನ್ನು ಹುಡುಗ ರನ್ನು ನರ್ತನ ಮಾಡಿಸುವುದರಲ್ಲಿ ಉಪದೇಶ ಮಾಡುವುದರಲ್ಲಿಯೂ ನನಗೆ ಯೋಗ್ಯತೆಯಿರುವುದು. ನಾತಾಳೆ ಹೂ ಇತ್ಯಾದಿ ಹೂವನ್ನು ಇಟ್ಟು ಜಡೆಹಾಕುವೆನು. ನನಗಿಂತ ಚಾತುರ್ಯದಿಂದ ಕೆಲಸ ಮಾಡುವ ಹೆಂಗಸರಿಲ್ಲ' ಎಂದು ಹೇಳಿ ನಿಂತುಕೊಂಡನು.

ಅವನನ್ನು ನೋಡಿ ಆಶ್ಚರ್ಯವನ್ನು ಹೊಂದಿದ ವಿರಾಟರಾಜನು 'ರಾಜಸಿಂಹನೇ! ನಿನಗೆ ಈ ನಪುಂಸಕವೇಷವು ಉಚಿತವಾಗಿಲ್ಲವಲ್ಲಾ! ನೀನು ಶುಭಭೂಷಣಗಳಿಂದ ಅಲಂಕರಿಸಿಕೊಳ್ಳಬೇಕು. ಆಕಾಶದಲ್ಲಿ ಮೋಡಗಳಿಂದ ಮರೆಯಾದ ಸೂರ್ಯನ ಕಾಂತಿಯಂತೆ ನಿನ್ನ ಕಾಂತಿಯು ಕಾಣುತ್ತಿರುವುದು. ಧನುಸ್ಸು ನಿನ್ನ ಭುಜಗಳನ್ನು ಶೋಭಿಸುವುದು ಎಂದು ತಿಳಿಯುತ್ತೇನೆ. ನಿನಗೆ ಉಚಿತವಾದ ಧನುಸ್ಸನ್ನು ಹಿಡಿದುಕೊಂಡು ನನ್ನ ರಾಜ್ಯವನ್ನು ಆಳುವವನಾಗು. ಬೃಹನ್ನಳೆಯೇ! ನಾನು ಮುದುಕನಾಗಿರುವೆನು. ನೀನು ನನ್ನ ಮಗನಂತೆ ಇರುವವನಾಗು. ನಿನಗೆ ಬೇಕಾದ ಹಣವನ್ನು ಕೊಡುವೆನು. ಸಮಸ್ತವಾದ ಈ ನಗರವನ್ನು ರಕ್ಷಿಸು. ನಿನ್ನಲ್ಲಿ ಒಂದೂ ನಪುಂಸಕಲಕ್ಷಣವು ಕಾಣುವುದಿಲ್ಲವಲ್ಲಾ! ಮತ್ಸ್ಯದೇಶವನ್ನು ಅಭಿವೃದ್ಧಿ ಪಡಿಸುತ್ತಾ ಆಳುವವನಾಗು. ನಿನಗೆ ನಾನು ರಾಜ್ಯವನ್ನು ಕೊಡುವೆನು. ನಾನು ಸತ್ಯವನ್ನೇ ಹೇಳುವವನು' ಎಂದನು.

ವಿರಾಟರಾಜನು ಇಷ್ಟು ಹೇಳಿದ್ದು ಮಾತ್ರವಲ್ಲದೆ ಅರ್ಜುನನು ಏನು ಮಾಡುವವನೆಂದು ಪರೀಕ್ಷಿಸಬೇಕೆಂದು ಉದ್ದವಾಗಿರುವ ನಾನಾ ಬಣ್ಣದ ತನ್ನ ಧನುಸ್ಸುಗಳನ್ನು ತರಿಸಿಕೊಟ್ಟನು. ಅವುಗಳನ್ನು ನೋಡಿ ಅರ್ಜುನನು ನಪುಂಸಕ ಭಾವವನ್ನು ತೋರ್ಪಡಿಸುತ್ತಾ 'ರಾಜನೇ! ನಾನು ಇಂತಹ ಧನುಸ್ಸುಗಳನ್ನು ಧರಿಸಲೇ ಇಲ್ಲ. ಇಂತಹ ಧನುಸ್ಸನ್ನು ನಾನು ಎಲ್ಲಿಯೂ ನೋಡಿದ್ದೂ ಇಲ್ಲ. ನನ್ನಂತೆ ಇರುವವರು

ಧನುರ್ಧಾರಿಗಳು ಲೋಕದಲ್ಲಿ ಇಲ್ಲವೂ ಇಲ್ಲ. ನಾನು ಕುಣಿಯುವೆನು. ಹಾಡು ಹೇಳುವೆನು. ವಾದ್ಯವನ್ನಾ ಬಾರಿಸುವೆನು. ಇನ್ನೊಬ್ಬರಿಗೆ ನರ್ತನ ಅಭ್ಯಾಸ ಮಾಡಿಸಲಿಕ್ಕೂ ನನಗೆ ಚಾತುರ್ಯವಿರುವುದು. ಆದುದರಿಂದ ನಿನ್ನ ಮಗಳಾದ ಉತ್ತರೆಗೆ ನರ್ತನವನ್ನು ಹೇಳಿಕೊಡಲಿಕ್ಕೆ ಆಜ್ಞಾಪಿಸು' ಎಂದು ಹೇಳಿದನು.

ಆಗ ವಿರಾಟರಾಜನು 'ಬೃಹನ್ನಳೆಯೇ! ನಿನಗೆ ಹಾಗೆಯೇ ವರವನ್ನು ಕೊಡುವೆನು. ನನ್ನ ಮಗಳಿಗೂ ಅವಳಂತೆ ಇರುವ ಹುಡುಗಿಯರಿಗೂ ನರ್ತನವನ್ನು ಹೇಳಿಕೊಡು' ಎಂದು ಹೇಳಿ ಪರಮಸುಂದರಿಯಾದ ತನ್ನ ಮಗಳನ್ನು ಅಲ್ಲಿಗೆ ಕರೆಸಿದನು. ಅವಳೊಡನೆ ಸಂತೋಷಯುಕ್ತವಾದ ಮನಸ್ಸಿನಿಂದ 'ಸುಂದರಿ! ಬೃಹನ್ನಳೆ ಎಂದು ಹೆಸರುಳ್ಳ ಇವಳು ನಿನಗೆ ಪ್ರಾಣಕ್ಕೆ ಸಮಾನಳಾದ ಸಖಿಯಾಗಿರಲಿ. ಇವಳು ಬೇಕಾದ ಭಕ್ಷ್ಯ ಆಭರಣ ಸೀರೆಗಳುಳ್ಳವಳಾಗಿ ಎಲ್ಲಿಬೇಕಾದರೂ ತಡೆಯಿಲ್ಲದೆ ಸಂಚರಿಸುತ್ತಿರಲಿ. ದುಷ್ಟವಂಶದಲ್ಲಿ ಹುಟ್ಟಿದವರಿಗೆ ಇಂತಹ ಆಕೃತಿಯಿರಲಾರದು. ಇಂತಹ ಜನರು ದುರಾಚಾರವುಳ್ಳವರಾಗಲಾರರು' ಎಂದು ಹೇಳಿದನು.

ಆಮೇಲೆ ವಿರಾಟರಾಜನು ನಾನಾ ಮಂತ್ರಿಗಳಿಂದ ಯೋಚನೆ ಮಾಡಿ ಸ್ತ್ರೀಯರಿಂದ ಅವನನ್ನು ಪರೀಕ್ಷಾ ಮಾಡಿಸಿ ಅವನು ಸರಿಯಾದ ನಪುಂಸಕನೆಂದೇ ನಿಶ್ಚಯಿಸಿ (ಊರ್ವಶಿಯ ಶಾಪದಿಂದ ಅರ್ಜುನನು ಆ ಸಮಯದಲ್ಲಿ ಸರಿಯಾದ ನಪುಂಸಕನೇ ಆಗಿದ್ದನು) ಕುಮಾರಿಯರು ಇರುವ ಅಂತಃಪುರಕ್ಕೆ ಅವನನ್ನು ಕಳುಹಿಸಿದನು. ಅಲ್ಲಿ ಅರ್ಜುನನು ಉತ್ತರೆಗೂ ಅವಳ ಸಖಿಯರಿಗೂ ನರ್ತನವನ್ನು ವಾದ್ಯವನ್ನೂ ಗಾಯನವನ್ನೂ ಹೇಳಿಕೊಡುತ್ತಿದ್ದನು. ಎಲ್ಲರಿಗೂ ಪ್ರೀತಿಪಾತ್ರನಾಗಿದ್ದನು. ಅವನನ್ನು ಅಲ್ಲಿ ಯಾರೊಬ್ಬರೂ ಅರ್ಜುನನೆಂದು ತಿಳಿಯಲೇ ಇಲ್ಲ.



## ವಿರಾಟನ ಬಳಿಗೆ ನಕುಲನು ಬಂದುದು [1]

ತರುವಾಯ ವಿರಾಟರಾಜನು ನೋಡುತ್ತಿರುವಂತೆ ನಕುಲನು ಕಾಣಿಸಿಕೊಂಡನು. ಮೇಘಮಂಡಲದಿಂದ ಹೊರಗೆ ಬರುವ ಚಂದ್ರನನ್ನು ನೋಡುವಂತೆ ಅಲ್ಲಿದ್ದ ಜನರೆಲ್ಲರೂ ಅವನನ್ನು ನೋಡಿದರು. ಅವನು ಅಲ್ಲಿ ಇಲ್ಲಿ ಕುದುರೆಗಳನ್ನು ಪರೀಕ್ಷಿಸುತ್ತಾ ಇದ್ದನು. ಅವನನ್ನು ನೋಡಿ ವಿರಾಟರಾಜನು ಎಲ್ಲಾ ಸಭಿಕರೊಡನೆ 'ಇವನನ್ನು ಯಾರು ಪೂರ್ವದಲ್ಲಿ ನೋಡಿರುವಿರಿ? ಯಾವ ಈ ಯುವಕನು ನನ್ನ

1. ಭಾ.ವಿ.ಪ ಅ-12

ಸಭೆಗೆ ಬರುತ್ತಿರುವನು? ಇವನು ನೋಡಲಿಕ್ಕೆ ತುಂಬಾ ಸುಂದರನಾಗಿರುವನು. ಯಾರಾದರೂ ಇಷ್ಟರವರೆಗೆ ಇವನನ್ನು ನೋಡಿದ್ದಿದ್ದರೆ ಹೇಳಬೇಕು. ಇವನು ಪುನಃಪುನಃ ನನ್ನ ಕುದುರೆಗಳನ್ನು ನೋಡುತ್ತಿರುವನು. ಇವನು ನಿಶ್ಚಯವಾಗಿಯೂ ಕುದುರೆಗಳ ಶಾಸ್ತ್ರವನ್ನು ತಿಳಿದಿರುವನಾಗಿರಬೇಕು. ಇವನನ್ನು ನನ್ನ ಬಳಿಗೆ ಬೇಗನೇ ಪ್ರವೇಶ ಮಾಡಿಸಿರಿ. ಎಂದು ಹೇಳಿದನು. ಅಷ್ಟರಲ್ಲಿ ನಕುಲನು ಸಭೆಗೆ ಬಂದನು. ವಿರಾಟರಾಜನಿಗೆ ನಮಸ್ಕರಿಸಿ 'ರಾಜನೇ! ಸಂಬಳದಿಂದ ಬದುಕಬೇಕೆಂದು ಈಗ ನಾನು ನಿನ್ನ ರಾಜ್ಯಕ್ಕೆ ಬಂದಿರುವೆನು. ನಾನು ನಿನ್ನ ಕುದುರೆಗಳನ್ನು ಚೆನ್ನಾಗಿ ನೋಡಿಕೊಳ್ಳುವೆನು. ನಿನಗೆ ಅಭಿಪ್ರಾಯವಿರುವುದಾದರೆ ನನ್ನನ್ನು ಕುದುರೆಗಳಿಗೆ ರಕ್ಷಕನನ್ನಾಗಿ ಮಾಡು' ಎಂದು ಹೇಳಿದನು.

ಅದಕ್ಕೆ ವಿರಾಟರಾಜನು 'ನಿನಗೆ ವಾಹನಗಳನ್ನು ಕೊಡುವೆನು. ಹಣಗಳನ್ನು ಕೊಡುವೆನು. ಸಂಬಳವನ್ನು ಕೊಡುವೆನು. ನೀನು ಕುದುರೆಗಳನ್ನು ನೋಡಿಕೊಳ್ಳುವವನಾಗಲಿಕ್ಕೆ ಅರ್ಹನಾಗಿ ತೋರುವುದಿಲ್ಲ. ನೀನು ಎಲ್ಲಿಂದ ಬಂದಿರುವಿ? ಯಾರಿಗೆ ಸೇರಿದವನು? ಹೇಗೆ ಬಂದಿರುವಿ? ನಿನಗೆ ಯಾವ ಕೆಲಸವು ತಿಳಿಯುವುದು?' ಎಂದು ಕೇಳಿದನು.

ಅದಕ್ಕೆ ನಕುಲನು 'ಐದು ಜನ ಪಾಂಡವರಲ್ಲಿ ಜ್ಯೇಷ್ಠನಾದ ಧರ್ಮರಾಜನು ನನಗೆ ಕುದುರೆಗಳ ವಿಷಯವಾಗಿ ಅಧಿಕಾರವನ್ನು ಕೊಟ್ಟಿದ್ದನು. ನಾನು ಕುದುರೆಗಳ ಸ್ವಭಾವವನ್ನು ತಿಳಿದಿರುವೆನು. ಅವುಗಳಿಗೆ ವಿನಯವನ್ನು ಉಂಟುಮಾಡಲಿಕ್ಕೂ ತಿಳಿದಿರುವೆನು. ದುಷ್ಟಕುದುರೆಗಳನ್ನು ಸಾಧುಗಳನ್ನಾಗಿ ಮಾಡಲಿಕ್ಕೂ, ಕುದುರೆಗಳ ಸರ್ವಚಿಕಿತ್ಸೆಯನ್ನು ಮಾಡಲಿಕ್ಕೂ ತಿಳಿದಿರುವೆನು. ನಾನು ಬೆಳೆಸಿದ ಕುದುರೆಗೆ ಭಯವಿರಲಾರದು. ನಾನು ಸಾಕಿದ ಹೆಣ್ಣುಕುದುರೆಯೇ ದುಷ್ಟವಾಗಲಾರದು. ಗಂಡುಕುದುರೆಯನ್ನು ಹೇಳಬೇಕಾಗಿಯೇ ಇಲ್ಲ. ಇದನ್ನೆಲ್ಲವನ್ನೂ ತಿಳಿದು ಧರ್ಮರಾಜನು ನನ್ನನ್ನು ಗ್ರಂಥಿಕನೆಂದು ಕೂಗಿತ್ತಿದ್ದನು. ಇಂದ್ರದೇವರ ಕುದುರೆಗಳನ್ನು ಸುಮಂತ್ರನು ನೋಡಿಕೊಂಡಂತೆಯೂ, ಪರಶುರಾಮದೇವರ ಕುದುರೆಗಳನ್ನು ಸಮೂಹನು ನೋಡಿಕೊಂಡಂತೆಯೂ, ನಿನ್ನ ಕುದುರೆಗಳನ್ನು ನಾನು ನೋಡಿಕೊಳ್ಳುವೆನು. ಮಹಾರಾಜನೇ! ನಾನು ಧರ್ಮರಾಜನ ಆಜ್ಞೆಯಿಂದ ಸಾವಿರಕೋಟಿ ಕುದುರೆಗಳನ್ನು ರಕ್ಷಿಸಿಕೊಂಡು ಇದ್ದೆನು' ಎಂದು ಹೇಳಿದನು.

ಆಗ ವಿರಾಟರಾಜನು 'ನನ್ನ ಬಳಿಯಲ್ಲಿ ಇರುವ ಕುದುರೆಗಳೆಲ್ಲವೂ ನಿನ್ನ ವಶವಾಗಿರಲಿ. ನಿನ್ನ ಸಮೀಪದಲ್ಲಿ ಕುದುರೆ ಸವಾರರೂ ಸಾರಥಿಗಳೂ ನಿನ್ನನ್ನು

ಆಶ್ರಯಿಸಿಕೊಂಡು ಇರಲಿ. ಈರೀತಿಯಾಗಿ ನಿನ್ನ ಇಷ್ಟದಂತೆ ಮಾಡಿರುವೆನು. ಆದರೆ ನಿನಗೆ ಕುದುರೆಗಳ ಯಾಜಮಾನ್ಯವು ಉಚಿತವಾಗಿ ಕಾಣಿಸುವುದಿಲ್ಲ. ನೀನು ರಾಜನಂತೆ ಪ್ರಕಾಶಿಸುತ್ತಿರುವಿ. ನಿನ್ನನ್ನು ನೋಡಿದ್ದರಿಂದ ಧರ್ಮರಾಜನನ್ನೇ ನೋಡಿದಂತೆ ಆಯಿತು. ಆ ಧರ್ಮರಾಜನು ಭೃತ್ಯರಿಂದ ರಹಿತನಾಗಿ ಹೇಗೆ ವನದಲ್ಲಿ ಸಂಚರಿಸುತ್ತಿರುವನೋ? ಹೇಗೆ ಸಂತೋಷಪಡುವನೋ?' ಎಂದು ಹೇಳಿದನು.

ಆರೀತಿಯಾಗಿ ಸಂತೋಷಯುಕ್ತನಾದ ವಿರಾಟರಾಜನಿಂದ ಸತ್ಕೃತನಾದ ನಕುಲನು ಅಲ್ಲಿಯೇ ವಾಸಮಾಡುವವನಾದನು. ಅವನನ್ನೂ ಒಬ್ಬರೂ ನಕುಲನೆಂದು ತಿಳಿಯಲಿಲ್ಲ.



## ಸಹದೇವನು ವಿರಾಟನ ಬಳಿಗೆ ಬಂದುದು [1]

ತೆರುವಾಯ ಸಹದೇವನು ಅಲ್ಲಿಗೆ ಬಂದನು. ಮಹಾತೇಜಸ್ವಿಯಾದ ಅವನನ್ನು ವಿರಾಟರಾಜನೂ ಸಭೆಯಲ್ಲಿ ಕೂತಿದ್ದ ಜನರೂ ನೋಡಿದರು. ಅವನು ಕೈಯಲ್ಲಿ ಒಂದು ದೊಡ್ಡಕೋಲನ್ನು, ಚಿಕ್ಕಹಗ್ಗಗಳನ್ನೂ ದೊಡ್ಡ ಹಗ್ಗಗಳನ್ನು ಹಿಡಿದು ಕೊಂಡಿದ್ದನು. ಅವನು ರಾಜನ ಬಳಿಗೆ ಬಂದು 'ರಾಜನೇ! ನನಗೆ ಗೋವುಗಳಲ್ಲಿ ಅಧಿ ಕಾರವನ್ನು ಕೊಡು. ನಾನು ಗೋವುಗಳನ್ನು ಚೆನ್ನಾಗಿ ನೋಡಿಕೊಳ್ಳುವೆನು. ನನ್ನಿಂದ ರಕ್ಷಿತಗಳಾದ ಗೋವುಗಳು ಚೆನ್ನಾಗಿ ನಿದ್ರೆಯನ್ನು ಮಾಡುವುವು. ಅವುಗಳಿಗೆ ದುಷ್ಟಮೃಗಗಳಿಂದಾಗಲಿ, ರೋಗಗಳಿಂದಾಗಲಿ, ಕಾಡುಬೆಂಕಿಯಿಂದಾಗಲಿ, ಕಳ್ಳ ರಿಂದಾಗಲಿ ಭಯವುಂಟಾಗಲಾರದು. ಅವುಗಳು ತುಂಬಾ ಹಾಲನ್ನು ಕೊಡುವುವು. ಆರೋಗ್ಯದಿಂದ ಇರುವುವು' ಎಂದು ಹೇಳಿದನು.

ರಾಜನು ಸಹದೇವನು ಹೇಳಿದ ಮಾತುಗಳನ್ನು ಕೇಳಿ ಅವನನ್ನು ನೋಡಿಯೂ ಸಂತೋಷವನ್ನು ಹೊಂದಿದನು. 'ನೀನು ಗೋಪಾಲನಂತೆ ಕಾಣಿಸುವುದಿಲ್ಲ. ಧೈರ್ಯದಿಂದ ನೀನು ಕ್ಷತ್ರಿಯನಂತೆ ತೋರಿಸುವಿ. ಕುರುವಂಶದಲ್ಲಿ ಹುಟ್ಟಿದವನಂತೆ ಕಾಣಿಸುವಿ. ನೀನು ಪಂಡಿತನಂತೆ ಕಾಣಿಸುವಿ. ನನ್ನ ರಾಜ್ಯದಲ್ಲಿ ಆಲೋಚನೆಯನ್ನು ಹೇಳುತ್ತಾ ಇರು. ಮತ್ಸ್ಯದೇಶವನ್ನು ಆಳುತ್ತಾ ಇರು. ನನ್ನ ಸೈನ್ಯವನ್ನು ರಕ್ಷಿಸುತ್ತಿರು. ಖಡ್ಗವನ್ನೂ ನಿನಗೆ ಉಚಿತವಾದುದನ್ನು ಸ್ವೀಕರಿಸು. ನೀನು ನನ್ನ ಸೇನಾನಾಯಕ ನಾಗು. ಧನುಸ್ಸನ್ನು ಸ್ವೀಕರಿಸು. ನೀನು ಪ್ರಭುವಾಗಿರು' ಎಂದು ಹೇಳಿದನು.

1. ಭಾ.ವಿ.ಪ ಅ-10

ಆದನ್ನು ಕೇಳಿ ಸಹದೇವನು ರಾಜನನ್ನು ಪ್ರಶಂಸಿಸಿ ನಮಸ್ಕರಿಸಿ 'ರಾಜನೇ! ನನ್ನ ಮಾತನ್ನು ಕೇಳಬೇಕು. ನಾನು ಬಾಲಕನು ಹೀನಜಾತಿಯವನು. ನನಗೆ ಆಲೋಚನೆ ಹೇಳಲಿಕ್ಕೆ ನೀತಿಶಾಸ್ತ್ರವು ತಿಳಿದಿರುವುದೇ? ನಾವು ನಮ್ಮ ಕಾರ್ಯದಿಂದ ತುಷ್ಟರಾದವರು. ಆದುದರಿಂದ ನನ್ನನ್ನು ಗೋವುಗಳ ರಕ್ಷಣೆ ಮಾಡುವುದರಲ್ಲಿಯೇ ಆಜ್ಞಾಪಿಸು. ನಾನು ವೈಶ್ಯಜಾತಿಯವನು. ನನ್ನ ಹೆಸರು ಅರಿಷ್ಟನೇಮಿಯೆಂದು. ಪಾಂಡವರ ಮನೆಯಲ್ಲಿ ಗೋವುಗಳಿಗೆ ಯಜಮಾನನಾಗಿದ್ದೆನು. ಈಗ ನಿನ್ನಲ್ಲಿ ಬದುಕಿರಲಿಕ್ಕೆ ಅಭಿಲಾಷೆಯುಳ್ಳವನಾಗಿರುವೆನು. ಆ ಪಾಂಡವರು ಈಗ ಎಲ್ಲಿ ಇರುವರು ಎಂದು ತಿಳಿಯಲಿಲ್ಲ. ಬೇರೆ ಕೆಲಸಮಾಡಿ ನನಗೆ ಜೀವಿಸಲಿಕ್ಕೆ ತಿಳಿಯಲಾರದು. ನಿನ್ನನ್ನು ಬಿಟ್ಟು ಇನ್ನೊಬ್ಬರ ಮನೆಯಲ್ಲಿ ಇರಲಿಕ್ಕೂ ನನಗೆ ಇಷ್ಟವಿಲ್ಲ' ಎಂದು ಹೇಳಿದನು.

ಆಗ ವಿರಾಟನು 'ನೀನು ಬ್ರಾಹ್ಮಣನೋ ಅಥವಾ ರಾಜನೋ ಆಗಿರಬೇಕು. ಸಮುದ್ರದವರೆಗೆ ಭೂಮಿಯ ರಾಜನಂತೆ ರೂಪವುಳ್ಳವನಾಗಿರುವಿ. ಸತ್ಯವನ್ನು ಹೇಳು. ನಿನ್ನಲ್ಲಿ ಗೋಪಾಲರ ಲಕ್ಷಣವೊಂದೂ ಕಾಣಿಸುವುದಿಲ್ಲ. ನೀನು ಈಗ ಯಾವ ರಾಜನ ದೇಶದಿಂದ ಬಂದಿರುವಿ? ನನಗೆ ಯಾವ ಕೆಲಸವನ್ನು ಮಾಡಲಿಕ್ಕೆ ತಿಳಿಯುವುದು? ಇಲ್ಲಿ ನೀನು ಹೇಗೆ ವಾಸಮಾಡುವಿ? ನಿನಗೆ ಎಷ್ಟು ಸಂಬಳವನ್ನು ಕೊಡಬೇಕು? ಹೇಳು' ಎಂದು ಹೇಳಿದನು.

ಆದಕ್ಕೆ ಸಹದೇವನು 'ಪಂಚಪಾಂಡವರ ಮಧ್ಯದಲ್ಲಿ ಧರ್ಮರಾಜನು ಜ್ಯೇಷ್ಠನು. ಅವನ ಬಳಿಯಲ್ಲಿ ನೂರುನೂರು ಗೋವುಗಳ ಗುಂಪು ಎಂಟುನೂರು ಸಾವಿರವಿದ್ದವು. ಬೇರೆ ಹತ್ತು ಸಾವಿರಗಳೂ ಮತ್ತು ಇಪ್ಪತ್ತು ಸಾವಿರಗಳೂ ಇದ್ದವು. ಅವುಗಳೆಲ್ಲವನ್ನೂ ನಾನು ಎಣಿಸಿ ನೋಡಿಕೊಳ್ಳುತ್ತಿದ್ದೆನು. ನನ್ನನ್ನು ತಂತ್ರೀಪಾಲನೆಂದು ಕೂಗುತ್ತಿದ್ದರು. ಗೋವುಗಳ ವಿಷಯದಲ್ಲಿ ಎಲ್ಲವೂ ನನಗೆ ತಿಳಿಯುವುದು. ನೂರುಮೈಲು ದೂರ ಇರುವ ಗೋವುಗಳ ವಿಷಯವೆಲ್ಲವನ್ನೂ ನಾನು ತಿಳಿಯುತ್ತಿದ್ದೆನು. ನಾನು ಆ ಧರ್ಮರಾಜನ ಗುಣಗಳನ್ನು ತಿಳಿದಿದ್ದೆನು. ಧರ್ಮರಾಜನು ನನ್ನಿಂದ ಸಂತೋಷಪಡುತ್ತಿದ್ದನು. ನಾನು ಸಾಕಿದ ಗೋವುಗಳು ಬಹುಹಾಲು ಕೊಡುತ್ತಿದ್ದವು. ಅನೇಕ ಕರುಗಳನ್ನು ಹಾಕುತ್ತಿದ್ದವು. ಬೇಗನೇ ಗೋವುಗಳು ಹೆಚ್ಚಿಗೆ ಆಗುತ್ತಿದ್ದವು. ಅವುಗಳಿಗೆ ಯಾವ ರೋಗಗಳೂ ಬರಲಾರವು. ಗೋವುಗಳ ವಿಷಯವು ನನಗೆಲ್ಲವೂ ತಿಳಿದಿರುವುದು. ಒಳ್ಳೇ ಲಕ್ಷಣಗಳುಳ್ಳ ಎತ್ತುಗಳ ವಿಷಯವನ್ನೂ ತಿಳಿದಿರುವೆನು. ಅವುಗಳ ಮೂತ್ರವನ್ನು ಮೂಸಿ ನೋಡಿಯೇ ಅಷ್ಟರವರೆಗೆ ಕರುಹಾಕದ ದನಗಳು ಕರುಹಾಕುವುವು' ಎಂದು ಹೇಳಿದನು.

ಆಗಲೂ ವಿರಾಟರಾಜನು 'ನೀನು ಇಂತಹ ನಿಂದ್ಯವಾದ ಕರ್ಮವನ್ನು ಮಾಡಲಿಕ್ಕೆ ನನಗೆ ಇಷ್ಟವಿಲ್ಲ. ನೀನು ಸಂಪೂರ್ಣವಾದ ಭೂಮಿಯನ್ನು ಆಳಲಿಕ್ಕೆ ಯೋಗ್ಯನಾಗಿರುವಿ. ಆದರೂ ನಿನಗೆ ಗೋವುಗಳನ್ನು ನೋಡಿಕೊಳ್ಳುವುದೇ ಇಷ್ಟವಾಗಿದ್ದರೆ ಹಾಗೆಯೇ ಮಾಡು. ಇಚ್ಛಾನುಸಾರವಾಗಿ ನನ್ನ ಗೋವುಗಳನ್ನು ನೋಡಿಕೊ. ನನ್ನ ಗೋವುಗಳೆಲ್ಲವೂ ನಿನ್ನ ಅಧೀನವಾಗಿರಲಿ. ಗೋವುಗಳನ್ನು ಗೋಪಾಲಕರನ್ನೂ ನಿನ್ನ ಅಧೀನದಲ್ಲಿ ಕೊಡುವೆನು. ನನ್ನ ಬಳಿಯಲ್ಲಿ ನೂರು ಸಾವಿರ ಗೋವುಗಳ ಗುಂಪುಗಳು ಇರುತ್ತವೆ. ಅವುಗಳನ್ನು ನಿನ್ನ ವಶಮಾಡುತ್ತೇನೆ. ನಿನಗೆ ಬೇಕಾದ ವರವನ್ನು ಕೊಡುತ್ತೇನೆ' ಎಂದು ಹೇಳಿದನು.

ಈರೀತಿಯಾಗಿ ಸಹದೇವನು ವಿರಾಟನಿಂದ ಆಜ್ಞಪ್ತನಾಗಿ ಅವನ ಬಳಿಯಲ್ಲಿಯೇ ಅಜ್ಞಾತವಾಸವನ್ನು ಮಾಡಿದನು. ಅವನನ್ನು ಸಹದೇವನೆಂದು ಯಾರೊಬ್ಬರೂ ತಿಳಿಯಲಿಲ್ಲ.



## ದ್ರೌಪದಿದೇವಿಯರು ವಿರಾಟನಗರಕ್ಕೆ ಬಂದುದು [1]

ತರುವಾಯ ಪರಮಸುಂದರಿಯಾದ ದ್ರೌಪದೀದೇವಿಯರು ತಲೆಕೂದಲುಗಳನ್ನು ಮೇಲೆ ಮಾಡಿಕೊಂಡು ಬಲಪಾರ್ಶ್ವದಲ್ಲಿ ಕಟ್ಟಿಕೊಂಡರು. ಮಲಿನವಾದ ವಸ್ತ್ರವನ್ನು ಧರಿಸಿದರು. ಸೈರಂಧ್ರಿಯೆಂಬ ಶೂದ್ರಸ್ತ್ರೀಯ ವೇಷವನ್ನು ಧರಿಸಿದರು. ಆವೇಷದಿಂದ ನಗರವನ್ನು ಪ್ರವೇಶಿಸಿದರು. ಅವರನ್ನು ನೋಡಿ ಊರಿನ ಹೆಂಗಸರೂ ಗಂಡಸರೂ ಓಡಿಬಂದರು. ದ್ರೌಪದೀದೇವಿಯರೊಡನೆ 'ನೀನು ಯಾರಮ್ಮ! ಯಾವ ಕಾರಣ ನೀನು ಬರುವ ಅಭಿಪ್ರಾಯವುಳ್ಳವರಾಗಿರುವಿ?' ಎಂದು ಕೇಳಿದರು. ಅದಕ್ಕೆ ದ್ರೌಪದೀದೇವಿಯರು 'ನಾನು ಸೈರಂಧ್ರಿಯು. ನಾನು ಯಾರು ರಕ್ಷಿಸುವರೋ ಅವರ ಕೆಲಸವನ್ನು ಮಾಡಲಿಕ್ಕೆ ಇಚ್ಛಿಸುವೆನು' ಎಂದು ಹೇಳಿದರು. ಅವರ ರೂಪದಿಂದಲೂ ವೇಷದಿಂದಲೂ ಮೃದುವಾದ ವಾಣಿಯಿಂದಲೂ ದ್ರೌಪದೀದೇವಿಯರು ಬದುಕಲಿಕ್ಕಾಗಿ ಬಂದಿರುವರೆಂಬುದನ್ನು ನಂಬಲಿಲ್ಲ. ಆ ಸಮಯದಲ್ಲಿ ವಿರಾಟರಾಜನ ಹೆಂಡತಿಯಾದ ಸುದೇಷ್ಣೆಯು ಮಾಳಿಗೆ ಮನೆಯಲ್ಲಿ ಕೂತುಕೊಂಡು ನೋಡುತ್ತಾ ಇದ್ದಳು. ಪರಮಸುಂದರಿಯಾದ ಒಂದು ಸೀರೆಯನ್ನು ಧರಿಸಿದ್ದ ಸುತ್ತಲೂ

1. ಭಾ.ವಿ.ಪ ಅ-9

ಗಂಡಸರಿಂದಲೂ ಹೆಂಗಸರಿಂದಲೂ ಸಹಿತರಾಗಿ ಬರುತ್ತಿದ್ದ ದ್ರೌಪದೀದೇವಿಯರನ್ನು ನೋಡಿದಳು. ನೋಡಿ ಅವಳಿಗೆ ದಯೆಯುಂಟಾಯಿತು. ಹತ್ತಿರವಿದ್ದ ವೃದ್ಧಸ್ತ್ರೀಯರೊಡನೆ 'ಆ ಹೆಂಗಸಿನ ಸುತ್ತಲೂ ಇರುವ ಜನರನ್ನು ದೂರಮಾಡಿ ಅವಳನ್ನು ನನ್ನ ಬಳಿಗೆ ಕರಕೊಂಡು ಬನ್ನಿರಿ. ಅವಳನ್ನು ನೋಡಿದಾಗಲೇ ನನ್ನ ಮನಸ್ಸು ಕರುಣೆಯುಳ್ಳದ್ದಾಗಿದೆ' ಎಂದು ಹೇಳಿದಳು.

ಕೂಡಲೇ ಆ ವೃದ್ಧಸ್ತ್ರೀಯರು ದ್ರೌಪದೀದೇವಿಯರ ಬಳಿಗೆ ಹೋಗಿ 'ಸುಂದರಿ! ಮಾಳಿಗೆಯಲ್ಲಿ ರಾಣಿಯಾದ ಸುದೇಷ್ಣೆಯು ನಿನ್ನನ್ನು ನೋಡಲಿಕ್ಕೆ ಇಚ್ಛಿಸುವವಳಾಗಿ ನಿನ್ನನ್ನು ಕರೆದುಕೊಂಡು ಬರಬೇಕೆಂದು ನಮ್ಮನ್ನು ಕಳಿಹಿಸಿರುವಳು. ನೀನು ಅವಳನ್ನು ನೋಡಲಿಕ್ಕೆ ಇಚ್ಛಿಸುವಿಯಾದರೆ ನಮ್ಮಿಂದ ರಕ್ಷಿತಳಾಗಿ ನಮ್ಮೊಡನೆ ಬರುವವಳಾಗು' ಎಂದು ಹೇಳಿದರು. ಅವರ ಆ ಮಾತನ್ನು ಕೇಳಿ ದ್ರೌಪದೀದೇವಿಯರು ತನ್ನ ಇಷ್ಟವು ಸಿದ್ಧಿಸಿದುದರಿಂದ ಸಂತೋಷವುಳ್ಳವರಾಗಿ ರಾಜನ ಮನೆಗೆ ಪ್ರವೇಶಿಸಿ ಸುದೇಷ್ಣೆಯು ಕೂತಿದ್ದ ಸ್ಥಳಕ್ಕೆ ಬಂದರು. ಲಜ್ಜಾಯುಕ್ತರಾದ ಲತೆಯಂತೆ ನಡುಗುತ್ತಿದ್ದ ದ್ರೌಪದೀದೇವಿಯರು ವಿರಾಟನ ಅಂತಃಪುರದ ಒಳಗೆ ಬಂದು ರತ್ನಖಚಿತವಾದ ಬಂಗಾರದ ಪೀಠದಲ್ಲಿ ಕೂತಿದ್ದ ಸುದೇಷ್ಣೆಯನ್ನು ನೋಡಿದರು. ಸರ್ವಾಂಲಂಕಾರಭೂಷಿತಳಾದ ನೂರಾರು ರಾಜಪುತ್ರಿಯರಿಂದ ಸುತ್ತಲೂ ಯುಕ್ತಳಾಗಿದ್ದ ಕಾಂತಿ ಸಂಪನ್ನಳಾದ ಸುದೇಷ್ಣೆಯನ್ನು ನೋಡಿದರು. ಆ ರಾಜಪುತ್ರಿಯರೆಲ್ಲರೂ ದ್ರೌಪದೀದೇವಿಯರನ್ನು ನೋಡಿ ಕೂಡಲೇ ತಮ್ಮ ಆಸನದಿಂದ ಎದ್ದು ಆ ದ್ರೌಪದೀದೇವಿಯನ್ನೇ ನೋಡುತ್ತಾ ಅವರ ಸುತ್ತಲೂ ನಿಂತುಕೊಂಡರು. ಆ ಸುಂದರಿಯಾದ ದ್ರೌಪದೀದೇವಿಯರೊಡನೆ ಸುದೇಷ್ಣೆಯು ಆಶ್ಚರ್ಯದಿಂದ ಅರಳಿದ ಕಣ್ಣುಳ್ಳವಳಾಗಿ 'ಸರ್ವಾಂಗ ಸುಂದರಿ! ನೀನು ಎಲ್ಲಿಂದ ಬರುತ್ತಿರುವಿ? ನೀನು ಯಾರಿಗೆ ಸೇರಿದವಳು? ನಿನಗೆ ನಾನು ಏನು ಸಹಾಯವನ್ನು ಮಾಡಬೇಕು? ನೀನು ದೇವತಾಸ್ತ್ರೀಯರಂತೆ ಕಾಣಿಸುವಿ. ಯಾವ ದೇವತಾಸ್ತ್ರೀಯಾಗಿರುವಿ? ಆಭರಣಗಳಿಲ್ಲದಿದ್ದರೂ ನಿನ್ನ ರೂಪವು ಅತಿಮನೋಹರವಾಗಿರುವುದು. ಹೆಂಗಸರನ್ನೂ ಕೂಡ ಮೋಹಗೊಳಿಸುವಿ. ಯಾವ ಗಂಡಸರು ನಿನ್ನನ್ನು ನೋಡಿ ಮೋಹಿತರಾಗದೆ ಇರುವರು? ವನದೇವತೆಗಳೂ ನಿನ್ನ ರೂಪಸಂಪತ್ತಿನಿಂದ ಆಶ್ಚರ್ಯವುಳ್ಳವರಾಗಿ ನಿನ್ನನ್ನೇ ನೋಡುತ್ತಿರುವರು. ಅಂತಃಪುರದಲ್ಲಿ ಇರುವ ಹೆಂಗಸರೂ ಮೃಗಗಳೂ ಪಕ್ಷಿಗಳೂ ಎಲ್ಲರೂ ಆಶ್ಚರ್ಯದಿಂದ ನಿನ್ನನ್ನೇ ನೋಡುತ್ತಿರುವರು. ನಿನ್ನಂತೆ ಇರುವ ಸುಂದರಿಯನ್ನು ಮೂರುಲೋಕಗಳಲ್ಲಿಯೂ ನೋಡಿದ್ದೂ ಇಲ್ಲ, ಕೇಳಿದ್ದೂ ಇಲ್ಲ' ಎಂದು ಹೇಳಿದಳು.

ಆಗ ದ್ರೌಪದೀದೇವಿಯರು 'ನಾನು ದೇವತಾಸ್ತ್ರೀಯಲ್ಲ. ಗಂಧರ್ವ ಸ್ತ್ರೀಯೂ ಅಲ್ಲ. ಯಕ್ಷಸ್ತ್ರೀಯೂ ಅಲ್ಲ. ಕಿನ್ನರ ಸ್ತ್ರೀಯು ಅಲ್ಲ. ನಾನು ಸೈರಂಧ್ರಿ. ಜಾತಿಯ ಶೂದ್ರಸ್ತ್ರೀಯು. ಗೆಡ್ಡೆಹಣ್ಣುಗಳನ್ನು ತಿನ್ನುವವಳು. ನನ್ನ ಪತಿಗಳು ನೋಡುತ್ತಿರುವಾಗ ಕಾರಣಾಂತರದಿಂದ ನನ್ನ ತಲೆಕೂದಲುಗಳನ್ನು ಹಿಡಿದು ಸೆಳೆದರು. ಅದರಿಂದ ಭಯಪಟ್ಟು ವನಕ್ಕೆ ಬಂದಿರುವೆನು. ನಾನು ಕಾಡಿನಲ್ಲಿ ಅಲ್ಲಿಯೇ ಸಿಗುವ ಗೆಡ್ಡೆಹಣ್ಣುಗಳನ್ನು ತಿನ್ನುತ್ತಾ ಹನ್ನೆರಡು ವರ್ಷಗಳನ್ನು ಕಳೆದೆನು. ಮನೆಯಿಲ್ಲದೆ ತಿರುಗಿತ್ತಿದ್ದೆನು. ಅಂತಹವಳು ನಿಮ್ಮ ಬಳಿಗೆ ಬಂದಿರುವೆನು. ನನಗೆ ಚೆನ್ನಾಗಿ ಜಡೆಹಾಕಲಿಕ್ಕೆ ತಿಳಿಯುವುದು, ವಿಚಿತ್ರವಾಗಿ ಮಣಿಗಳನ್ನು ಪೋಣಿಸುವೆನು. ಮಲ್ಲಿಗೆ ಹೂ, ಉತ್ಪಲಪುಷ್ಪ, ತಾವರೆಹೂ ಇವುಗಳ ಮಾಲೆಯನ್ನು ಕಟ್ಟಲಿಕ್ಕೂ ನನಗೆ ತಿಳಿಯುವುದು. ನಾನು ಸತ್ಯಭಾಮಾದೇವಿಯರನ್ನು ಪಾಂಡವರ ಪತ್ನಿಯಾದ ದ್ರೌಪದೀದೇವಿಯರನ್ನು ಆರಾಧಿಸಿರುವೆನು. ದ್ರೌಪದೀದೇವಿಯು ನನಗೆ ಪ್ರಾಣಕ್ಕೆ ಸಮಾನಳಾದ ಸಖಿಯು. ನನಗೆ ಅವಳು ಮಾಲಿನೀ ಎಂದು ಹೆಸರನ್ನು ಇಟ್ಟಿದ್ದಳು. ನಾನು ಎಲ್ಲಿಯೂ ಬಹಳ ಸಮಯ ವಾಸಮಾಡಲಿಕ್ಕೆ ಇಚ್ಛಿಸುವುದಿಲ್ಲ. ಇದು ನಮ್ಮ ಕುಲಧರ್ಮವು. ವ್ರತವು. ಯಾರಾದರೂ ನಮ್ಮ ದ್ರವ್ಯವನ್ನೋ ದೇಶವನ್ನೋ ಅಥವಾ ವಸ್ತ್ರವನ್ನೋ ಅಪಹರಿಸಿದರೂ ನಾವು ಅವನ ಮೇಲೆ ಕೋಪಿಸಿಕೊಳ್ಳಬಾರದು. ನಮ್ಮ ಗುರುವಿಗೆ ಕೋಪವೇ ಇರುವುದಿಲ್ಲ. ನಾನು ಪತಿಗಳ ಶೋಕದಿಂದ ಶೋಕವುಳ್ಳವ ಳಾಗಿ ಪತಿಗಳಂತೆ ವ್ರತವುಳ್ಳವಳಾಗಿ ಎಲ್ಲಿ ಸಾಯಂಕಾಲವಾಗುತ್ತದೋ ಅಲ್ಲಿ ವಾಸಮಾಡುತ್ತಾ ವನಗಳಲ್ಲಿಯೂ ದುರ್ಗಗಳಲ್ಲಿಯೂ ತೀರ್ಥಗಳಲ್ಲಿಯೂ ಸರೋವರಗಳಲ್ಲಿಯೂ ಪರ್ವತಗಳಲ್ಲಿಯೂ ನದೀತೀರಗಳಲ್ಲಿಯೂ ಸಂಚರಿಸು ತ್ತಿದ್ದೆನು. ವೀರಪತ್ನಿಯಾದ ನಾನು ಪತಿಗಳೊಡನೆ ಗಂಧಮಾದನಪರ್ವತದಲ್ಲಿ ಸಂಚರಿಸುತ್ತಿದ್ದಾಗ ನಿನ್ನ ಉತ್ತಮ ಸ್ವಭಾವವನ್ನು ಕೇಳಿರುವೆನು. ಬ್ರಾಹ್ಮಣರ ಮುಖದಿಂದ ನಿನ್ನ ಮಹಿಮೆಯನ್ನು ಕೇಳಿ ನಿನ್ನನ್ನು ಸೇವಿಸಿಕೊಂಡು ಇರಬೇಕೆಂದು ಬಂದಿರುವೆನು. ನನಗೆ ಯಮದೇವರೂ ವಾಯುದೇವರೂ ಇಂದ್ರದೇವರೂ ಅಶ್ವಿನೀದೇವತೆಗಳೂ ಗುರುಗಳಾಗಿರುವರು. ಅವರ ಅನುಗ್ರಹದಿಂದ ನನ್ನನ್ನು ಒಬ್ಬ ಪುರುಷನೂ ಬಲಾತ್ಕಾರ ಮಾಡಲಿಕ್ಕೆ ಆಗಲಾರದು' ಈರೀತಿಯಾಗಿ ಹೇಳಿ ಕೈಮುಗಿದುಕೊಂಡು ನಿಂತುಕೊಂಡರು.

ಆಗ ಸುದೇಷ್ಣೆಯು ಆಶ್ಚರ್ಯವುಳ್ಳವಳಾಗಿ ಉತ್ತಮಸ್ತ್ರೀಯಾದ ದ್ರೌಪದೀ ದೇವಿಯರೊಡನ 'ಮಂಗಳೇ! ನಿನ್ನನ್ನು ನಾನು ಮನೆಯಲ್ಲಿ ಇಟ್ಟುಕೊಳ್ಳಲಾರೆನು.

ನನಗೆ ಸಂಶಯವಿದೆ. ರಾಜರು ನಿನ್ನನ್ನು ನೋಡಿ ದುಷ್ಟ ಅಭಿಪ್ರಾಯವುಳ್ಳವರಾಗುವರು. ಆದುದರಿಂದ ನೀನು ನಮ್ಮ ಮನೆಯಲ್ಲಿ ವಾಸಿಸುವುದು ಉಚಿತವಲ್ಲವೆಂದು ತಿಳಿಯುವೆನು. ಇದೊಂದು ಮಹಾದೋಷವಿದೆ. ನಿನಗೆ ಹೇಗೆ ತೋರುತ್ತದೆ? ನನ್ನ ಮನೆಯಲ್ಲಿರುವ ಎಲ್ಲಾ ಹೆಂಗಸರೂ ನಿನ್ನನ್ನೇ ನೋಡುತ್ತಾ ಇರುವರು. ನಿನ್ನ ಸೌಂದರ್ಯದಿಂದ ಅಶ್ಚರ್ಯಪಡುತ್ತಿರುವರು. ನನ್ನ ಮನೆಯಲ್ಲಿ ಇರುವ ಮರಗಳೂ ಕೂಡ ನಿನ್ನ ಸೌಂದರ್ಯಕ್ಕೆ ತಲೆಬಾಗಿಸುತ್ತಿರುವುವು. ಹೀಗಿರುವಾಗ ಯಾವ ಪುರುಷರನ್ನು ಮೋಹಗೊಳಿಸದೆ ಇರುವಿ? ಪಶುಪಕ್ಷ್ಯಾದಿಗಳೂ ಕೂಡ ಆಶ್ಚರ್ಯದಿಂದ ನಿನ್ನನ್ನೇ ನೋಡುತ್ತಿರುವುವು. ಮನುಷ್ಯರನ್ನು ಏನು ಹೇಳಬೇಕು. ವಿರಾಟ ಮಹಾರಾಜರು ನಿನ್ನ ಸುಂದರವಾದ ರೂಪವನ್ನು ನೋಡಿ ನನ್ನನ್ನು ಪರಿತ್ಯಜಿಸಿ ನಿನ್ನನ್ನೇ ಅಂಗೀಕರಿಸುವರು. ಹೇ ಸುಂದರಿ! ನೀನು ಯಾವ ಪುರುಷನನ್ನು ಪ್ರಸನ್ನಳಾಗಿ ನೋಡುವಿಯೋ ಅವನು ಕಾಮವಶನಾಗುವನು. ನೀನು ಅಲಂಕಾರಮಾಡಿಕೊಂಡು ಯಾವ ಮನುಷ್ಯನನ್ನು ನೋಡುವಿಯೋ ಅವನಿಗೆ ದುಃಖವೋ ಆಲಸ್ಯವೋ ಪರಾಜಯವೋ ಒಂದೂ ಉಂಟಾಗಲಾರದು. ನೀನು ಅಲಂಕಾರ ಮಾಡಿಕೊಂಡು ಯಾವ ಪುರುಷನ್ನು ಹೊಂದುವಿಯೋ ಅವನಿಗೆ ಕೋಪವಾಗಲೀ ಸಂತಾಪವಾಗಲೀ ಉಂಟಾಗಲಾರದು. ಸತ್ಯವನ್ನೇ ಹೇಳುತ್ತೇನೆ. ನೀನು ಯಾವಾತನ ವಶಳಾಗಿ ತೊಡೆಯಮೇಲೆ ಕೂತುಕೊಳ್ಳುವಿಯೋ ಆ ಪುರುಷನಿಗೆ ರೋಗವಾಗಲೀ ಮುದಿತನವಾಗಲೀ ಆಸೆಯಾಗಲೀ ಹಸಿವೆಯಾಗಲೀ ಉಂಟಾಗಲಾರದು. ನೀನು ಸತ್ತವನಾದರೂ ಆಲಿಂಗಿಸಿದರೆ ಅವನು ಬದುಕಿ ಬರುವನೆಂದು ನಾನು ತಿಳಿಯುವೆನು. ಯಾರಿಗೆ ನೀನು ಹೆಂಡತಿಯಾಗಿರುವಿಯೋ ಯಾರನ್ನು ನೀನು ಸಂತೋಷದಿಂದ ಆಲಿಂಗಿಸುವಿಯೋ ಅವನು ದೇವತೆಗಳ ಮಧ್ಯದಲ್ಲಿ ಇಂದ್ರದೇವರಂತೆ ಶ್ರೇಷ್ಠವಾಗಿ ಜೀವಿಸುವನು. ನಿನ್ನನ್ನು ನಾನು ಮನೆಯಲ್ಲಿ ಇಟ್ಟುಕೊಂಡರೆ ಮರದ ಮೇಲೆ ಕೂತುಕೊಂಡು ಮರದ ಬುಡವನ್ನು ಕತ್ತರಿಸಿದಂತೆ ಆಗುವುದು. ಜೇಡಿಯೆಂಬ ಪ್ರಾಣಿಯು ಗರ್ಭವನ್ನು ಧರಿಸಿ ಕೂಸುಗಳು ಹುಟ್ಟುವಾಗ ಸಾಯುವುದು. ಆ ಪ್ರಾಣಿಯು ಹೇಗೆ ತನ್ನ ಮೃತ್ಯುವಿಗಾಗಿ ಗರ್ಭವನ್ನು ಧರಿಸುವುದೋ ಹಾಗೆಯೇ ನಿನ್ನನ್ನು ನಾನು ಮನೆಯಲ್ಲಿ ಇಟ್ಟುಕೊಳ್ಳುವುದು ನನ್ನ ಅನರ್ಥಕ್ಕೆ ಕಾರಣವಾಗುವುದು. ಸೈರಂಧ್ರಿ! ನಿನಗೆ ನಾನು ಬಹುಮಾನವನ್ನೇ ಮಾಡುತ್ತೇನೆ. ಅವಮಾನವನ್ನು ಮಾಡುವುದಿಲ್ಲ. ಆದರೆ ನನ್ನ ಗಂಡನ ಸ್ವಭಾವದಿಂದ ಅಂಜಿದವಳಾಗಿ ನೀನು ನನ್ನ ಮನೆಯಲ್ಲಿ ವಾಸಮಾಡುವುದನ್ನು ಅಂಗೀಕರಿಸುವುದಿಲ್ಲ' ಎಂದು ಹೇಳಿದಳು.

ಅದಕ್ಕೆ ದ್ರೌಪದೀದೇವಿಯರು 'ನನ್ನನ್ನು ವಿರಾಟರಾಜನಾಗಲೀ ಬೇರೆ ಯಾರೇ ಆಗಲೀ ದೇವಗಂಧರ್ವಯಕ್ಷರಾಗಲೀ ದುಷ್ಟವಾದ ಮನಸ್ಸಿನಿಂದ ನನ್ನನ್ನು ನೋಡಲಿಕ್ಕೇ ಆಗಲಾರದು. ಒಳ್ಳೇ ವಂಶದಲ್ಲಿ ಹುಟ್ಟಿರುವ ದೇವಾದಿದೇವತೆಗಳ ಮಕ್ಕಳಾದ ಸೂರ್ಯಾಗ್ನಿಗಳಂತೆ ತೇಜಸ್ವಿಗಳಾದ ಐದು ಜನ ಗಂಧರ್ವರು ನನ್ನನ್ನು ರಕ್ಷಿಸುತ್ತಿರುವರು. ಯಾರಾದರೂ ಪುರುಷನು ದುಷ್ಟಮನಸ್ಸಿನಿಂದ ಕೈಯಿಂದ ನನ್ನನ್ನು ಮುಟ್ಟಿದರೆ ಸಾಕು ಆ ರಾತ್ರಿಯೇ ಅವನನ್ನು ಆ ಗಂಧರ್ವರು ಬಂದು ಒನಕೆಯಿಂದ ಬಡಿದು ಕೊಂದುಹಾಕುವರು. ಯಾರಿಗೆ ನೂರೋ ಸಾವಿರವೋ ಕೋಟಿಯೋ ಬಂಧುಗಳಿರುವರೋ ಅವನೂ ನನ್ನೊಡನೆ ದುಷ್ಟ ಅಭಿಪ್ರಾಯದಿಂದ ಮಾತಾಡಿದರೂ ಕೂಡ ನಿನ್ನ ಮುಂಭಾಗದಲ್ಲಿಯೇ ಬದುಕಿರಲಾರನು. ಅವನನ್ನು ದೇವತೆಗಳೋ ಅಸುರರೋ ಸರ್ಪಗಳೋ ಗಂಧರ್ವರಾಜರಿಂದ ರಕ್ಷಿಸಲಿಕ್ಕೆ ಸಮರ್ಥರಾಗಲಾರರು. ಅಮ್ಮ ಸುದುಷ್ಣೆ! ನನ್ನ ಮೇಲೆ ನಂಬಿಕೆಯುಳ್ಳವಳಾಗು. ನನ್ನನ್ನು ಹಾಗೆ ಒಬ್ಬ ಗಂಡಸೂ ನೋಡಲಿಕ್ಕೆ ಆಗಲಾರದು. ನಾನು ಅಂತಹ ದುಷ್ಟಸ್ವಭಾವದವಳಲ್ಲ. ನನಗೆ ಒಬ್ಬರೂ ಎಂಜಲನ್ನು ಹಾಕಬಾರದು. ನನ್ನೊಡನೆ (ನನಗೆ) ಕಾಲುತೊಳೆಯಲಿಕ್ಕೆ ಹೇಳಬಾರದು. ಹೀಗೆ ವಾಸಮಾಡಿಸಿದರೆ ಅವರಲ್ಲಿ ನನ್ನ ಪತಿಗಳಾದ ಗಂಧರ್ವರು ಪ್ರೀತಿಯನ್ನು ಮಾಡುವರು. ಇತರ ಪಾಮರ ಸ್ತ್ರೀಯರನ್ನು ಅಪೇಕ್ಷಿಸುವಂತೆ ನನ್ನನ್ನು ಯಾವ ಪುರುಷನಾದರೂ ಅಪೇಕ್ಷಿಸಿದವ ನಾದರೆ ಅದೇ ರಾತ್ರಿಯಲ್ಲಿಯೇ ಅವನು ಬೇರೆ ದೇಹವನ್ನು ಹೊಂದುವನು. ನನ್ನ ಮನಸ್ಸನ್ನು ಬೇರೆ ವಿಧವಾಗಿ ಮಾಡಲಿಕ್ಕೆ ಯಾರಿಂದಲೂ ಆಗಲಾರದು. ಬಲಿಷ್ಠರಾದ ನನ್ನ ಪತಿಗಳಾದ ಗಂಧರ್ವರು ರಕ್ಷಿಸುತ್ತಿರುವರು. ಹೀಗೆ ನಾನು ವಾಸಮಾಡುತ್ತಿರಲು ನಿನಗೆ ಯಾವ ಭಯವೂ ಬರಲಾರದು' ಎಂದು ಹೇಳಿದರು.

ಆಗ ಸುದುಷ್ಣೆಯು 'ಸುಂದರಿ! ನಿನ್ನ ನಡತೆಯು ಹೀಗೆ ಇರುವುದಾದರೆ ನೀನು ಇಲ್ಲಿಯೇ ವಾಸಮಾಡು. ಯಾವ ಗಂಡಸೂ ನಿನಗೆ ಎಂಜಲನ್ನು ಕೊಡಲಿಕ್ಕೆ ಅರ್ಹನಾಗುವನು? ಲಕ್ಷ್ಮೀದೇವಿಯಂತೆ ಇರುವ ನಿನ್ನನ್ನು ನೋಡಿ ಯಾವಾತನು ತನ್ನ ಕಾಲನ್ನು ತೊಳೆಯಲಿಕ್ಕೆ ಹೇಳುವನು? ಕಲ್ಯಾಣಿ! ದೇವತೆಯಂತೆ ಪೂಜಿತಳಾಗಿ ನೀನು ನನ್ನ ಬಳಿಯಲ್ಲಿಯೇ ವಾಸಮಾಡು. ನಿನ್ನಲ್ಲಿ ನನಗೆ ಬಹಳ ಪ್ರೀತಿಯಿದೆ. ಸರ್ವಭೋಗ ವುಳ್ಳವಳಾಗಿ ಯಾವ ಅಂಜಿಕೆಯೂ ಇಲ್ಲದೆ ಸಂತೋಷದಿಂದ ಇರುವವಳಾಗು' ಎಂದು ಹೇಳಿದಳು.

ಈರೀತಿಯಾಗಿ ಸುದೇಷ್ಣೆಯು ಹೇಳಲು ದ್ರೌಪದೀದೇವಿಯರು ಸಂತೋಷ

ನನಗೆ ಸಂಶಯವಿದೆ. ರಾಜರು ನಿನ್ನನ್ನು ನೋಡಿ ದುಷ್ಟ ಅಭಿಪ್ರಾಯವುಳ್ಳವರಾಗುವರು. ಆದುದರಿಂದ ನೀನು ನಮ್ಮ ಮನೆಯಲ್ಲಿ ವಾಸಿಸುವುದು ಉಚಿತವಲ್ಲವೆಂದು ತಿಳಿಯುವೆನು. ಇದೊಂದು ಮಹಾದೋಷವಿದೆ. ನಿನಗೆ ಹೇಗೆ ತೋರುತ್ತದೆ? ನನ್ನ ಮನೆಯಲ್ಲಿರುವ ಎಲ್ಲಾ ಹೆಂಗಸರೂ ನಿನ್ನನ್ನೇ ನೋಡುತ್ತಾ ಇರುವರು. ನಿನ್ನ ಸೌಂದರ್ಯದಿಂದ ಆಶ್ಚರ್ಯಪಡುತ್ತಿರುವರು. ನನ್ನ ಮನೆಯಲ್ಲಿ ಇರುವ ಮರಗಳೂ ಕೂಡ ನಿನ್ನ ಸೌಂದರ್ಯಕ್ಕೆ ತಲೆಬಾಗಿಸುತ್ತಿರುವುವು. ಹೀಗಿರುವಾಗ ಯಾವ ಪುರುಷರನ್ನು ಮೋಹಗೊಳಿಸದೆ ಇರುವಿ? ಪಶುಪಕ್ಷ್ಯಾದಿಗಳೂ ಕೂಡ ಆಶ್ಚರ್ಯದಿಂದ ನಿನ್ನನ್ನೇ ನೋಡುತ್ತಿರುವುವು. ಮನುಷ್ಯರನ್ನು ಏನು ಹೇಳಬೇಕು. ವಿರಾಟ ಮಹಾರಾಜರು ನಿನ್ನ ಸುಂದರವಾದ ರೂಪವನ್ನು ನೋಡಿ ನನ್ನನ್ನು ಪರಿತ್ಯಜಿಸಿ ನಿನ್ನನ್ನೇ ಅಂಗೀಕರಿಸುವರು. ಹೇ ಸುಂದರಿ! ನೀನು ಯಾವ ಪುರುಷನನ್ನು ಪ್ರಸನ್ನಳಾಗಿ ನೋಡುವಿಯೋ ಅವನು ಕಾಮವಶನಾಗುವನು. ನೀನು ಅಲಂಕಾರಮಾಡಿಕೊಂಡು ಯಾವ ಮನುಷ್ಯನನ್ನು ನೋಡುವಿಯೋ ಅವನಿಗೆ ದುಃಖವೋ ಆಲಸ್ಯವೋ ಪರಾಜಯವೋ ಒಂದೂ ಉಂಟಾಗಲಾರದು. ನೀನು ಅಲಂಕಾರ ಮಾಡಿಕೊಂಡು ಯಾವ ಪುರುಷನ್ನು ಹೊಂದುವಿಯೋ ಅವನಿಗೆ ಕೋಪವಾಗಲೀ ಸಂತಾಪವಾಗಲೀ ಉಂಟಾಗಲಾರದು. ಸತ್ಯವನ್ನೇ ಹೇಳುತ್ತೇನೆ. ನೀನು ಯಾವಾತನ ವಶಳಾಗಿ ತೊಡೆಯಮೇಲೆ ಕೂತುಕೊಳ್ಳುವಿಯೋ ಆ ಪುರುಷನಿಗೆ ರೋಗವಾಗಲೀ ಮುದಿತನವಾಗಲೀ ಆಸೆಯಾಗಲೀ ಹಸಿವೆಯಾಗಲೀ ಉಂಟಾಗಲಾರದು. ನೀನು ಸತ್ತವನಾದರೂ ಆಲಿಂಗಿಸಿದರೆ ಅವನು ಬದುಕಿ ಬರುವನೆಂದು ನಾನು ತಿಳಿಯುವೆನು. ಯಾರಿಗೆ ನೀನು ಹೆಂಡತಿಯಾಗಿರುವಿಯೋ ಯಾರನ್ನು ನೀನು ಸಂತೋಷದಿಂದ ಆಲಿಂಗಿಸುವಿಯೋ ಅವನು ದೇವತೆಗಳ ಮಧ್ಯದಲ್ಲಿ ಇಂದ್ರದೇವರಂತೆ ಶ್ರೇಷ್ಠವಾಗಿ ಜೀವಿಸುವನು. ನಿನ್ನನ್ನು ನಾನು ಮನೆಯಲ್ಲಿ ಇಟ್ಟುಕೊಂಡರೆ ಮರದ ಮೇಲೆ ಕೂತುಕೊಂಡು ಮರದ ಬುಡವನ್ನು ಕತ್ತರಿಸಿದಂತೆ ಆಗುವುದು. ಜೇಡಿಯೆಂಬ ಪ್ರಾಣಿಯು ಗರ್ಭವನ್ನು ಧರಿಸಿ ಕೂಸುಗಳು ಹುಟ್ಟುವಾಗ ಸಾಯುವುದು. ಆ ಪ್ರಾಣಿಯು ಹೇಗೆ ತನ್ನ ಮೃತ್ಯುವಿಗಾಗಿ ಗರ್ಭವನ್ನು ಧರಿಸುವುದೋ ಹಾಗೆಯೇ ನಿನ್ನನ್ನು ನಾನು ಮನೆಯಲ್ಲಿ ಇಟ್ಟುಕೊಳ್ಳುವುದು ನನ್ನ ಅನರ್ಥಕ್ಕೆ ಕಾರಣವಾಗುವುದು. ಸೈರಂಧ್ರಿ! ನಿನಗೆ ನಾನು ಬಹುಮಾನವನ್ನೇ ಮಾಡುತ್ತೇನೆ. ಅವಮಾನವನ್ನು ಮಾಡುವುದಿಲ್ಲ. ಆದರೆ ನನ್ನ ಗಂಡನ ಸ್ವಭಾವದಿಂದ ಅಂಜಿದವಳಾಗಿ ನೀನು ನನ್ನ ಮನೆಯಲ್ಲಿ ವಾಸಮಾಡುವುದನ್ನು ಅಂಗೀಕರಿಸುವುದಿಲ್ಲ' ಎಂದು ಹೇಳಿದಳು.

ಅದಕ್ಕೆ ದ್ರೌಪದೀದೇವಿಯರು 'ನನ್ನನ್ನು ವಿರಾಟರಾಜನಾಗಲೀ ಬೇರೆ ಯಾರೇ ಆಗಲೀ ದೇವಗಂಧರ್ವಯಕ್ಷರಾಗಲೀ ದುಷ್ಟವಾದ ಮನಸ್ಸಿನಿಂದ ನನ್ನನ್ನು ನೋಡಲಿಕ್ಕೇ ಆಗಲಾರದು. ಒಳ್ಳೇ ವಂಶದಲ್ಲಿ ಹುಟ್ಟಿರುವ ದೇವಾದಿದೇವತೆಗಳ ಮಕ್ಕಳಾದ ಸೂರ್ಯಾಗ್ನಿಗಳಂತೆ ತೇಜಸ್ವಿಗಳಾದ ಐದು ಜನ ಗಂಧರ್ವರು ನನ್ನನ್ನು ರಕ್ಷಿಸುತ್ತಿರುವರು. ಯಾರಾದರೂ ಪುರುಷನು ದುಷ್ಟಮನಸ್ಸಿನಿಂದ ಕೈಯಿಂದ ನನ್ನನ್ನು ಮುಟ್ಟಿದರೆ ಸಾಕು ಆ ರಾತ್ರಿಯೇ ಅವನನ್ನು ಆ ಗಂಧರ್ವರು ಬಂದು ಒನಕೆಯಿಂದ ಬಡಿದು ಕೊಂದುಹಾಕುವರು. ಯಾರಿಗೆ ನೂರೋ ಸಾವಿರವೋ ಕೋಟಿಯೋ ಬಂಧುಗಳಿರುವರೋ ಅವನೂ ನನ್ನೊಡನೆ ದುಷ್ಟ ಅಭಿಪ್ರಾಯದಿಂದ ಮಾತಾಡಿದರೂ ಕೂಡ ನಿನ್ನ ಮುಂಭಾಗದಲ್ಲಿಯೇ ಬದುಕಿರಲಾರನು. ಅವನನ್ನು ದೇವತೆಗಳೋ ಅಸುರರೋ ಸರ್ಪಗಳೋ ಗಂಧರ್ವರಾಜರಿಂದ ರಕ್ಷಿಸಲಿಕ್ಕೆ ಸಮರ್ಥರಾಗಲಾರರು. ಅಮ್ಮ ಸುದುಷ್ಣೆ! ನನ್ನ ಮೇಲೆ ನಂಬಿಕೆಯುಳ್ಳವಳಾಗು. ನನ್ನನ್ನು ಹಾಗೆ ಒಬ್ಬ ಗಂಡಸೂ ನೋಡಲಿಕ್ಕೆ ಆಗಲಾರದು. ನಾನು ಅಂತಹ ದುಷ್ಟಸ್ವಭಾವದವಳಲ್ಲ. ನನಗೆ ಒಬ್ಬರೂ ಎಂಜಲನ್ನು ಹಾಕಬಾರದು. ನನ್ನೊಡನೆ (ನನಗೆ) ಕಾಲುತೊಳೆಯಲಿಕ್ಕೆ ಹೇಳಬಾರದು. ಹೀಗೆ ವಾಸಮಾಡಿಸಿದರೆ ಅವರಲ್ಲಿ ನನ್ನ ಪತಿಗಳಾದ ಗಂಧರ್ವರು ಪ್ರೀತಿಯನ್ನು ಮಾಡುವರು. ಇತರ ಪಾಮರ ಸ್ತ್ರೀಯರನ್ನು ಅಪೇಕ್ಷಿಸುವಂತೆ ನನ್ನನ್ನು ಯಾವ ಪುರುಷನಾದರೂ ಅಪೇಕ್ಷಿಸಿದವ ನಾದರೆ ಅದೇ ರಾತ್ರಿಯಲ್ಲಿಯೇ ಅವನು ಬೇರೆ ದೇಹವನ್ನು ಹೊಂದುವನು. ನನ್ನ ಮನಸ್ಸನ್ನು ಬೇರೆ ವಿಧವಾಗಿ ಮಾಡಲಿಕ್ಕೆ ಯಾರಿಂದಲೂ ಆಗಲಾರದು. ಬಲಿಷ್ಠರಾದ ನನ್ನ ಪತಿಗಳಾದ ಗಂಧರ್ವರು ರಕ್ಷಿಸುತ್ತಿರುವರು. ಹೀಗೆ ನಾನು ವಾಸಮಾಡುತ್ತಿರಲು ನಿನಗೆ ಯಾವ ಭಯವೂ ಬರಲಾರದು' ಎಂದು ಹೇಳಿದರು.

ಆಗ ಸುದುಷ್ಣೆಯು 'ಸುಂದರಿ! ನಿನ್ನ ನಡತೆಯು ಹೀಗೆ ಇರುವುದಾದರೆ ನೀನು ಇಲ್ಲಿಯೇ ವಾಸಮಾಡು. ಯಾವ ಗಂಡಸೂ ನಿನಗೆ ಎಂಜಲನ್ನು ಕೊಡಲಿಕ್ಕೆ ಅರ್ಹನಾಗುವನು? ಲಕ್ಷ್ಮೀದೇವಿಯಂತೆ ಇರುವ ನಿನ್ನನ್ನು ನೋಡಿ ಯಾವಾತನು ತನ್ನ ಕಾಲನ್ನು ತೊಳೆಯಲಿಕ್ಕೆ ಹೇಳುವನು? ಕಲ್ಯಾಣಿ! ದೇವತೆಯಂತೆ ಪೂಜಿತಳಾಗಿ ನೀನು ನನ್ನ ಬಳಿಯಲ್ಲಿಯೇ ವಾಸಮಾಡು. ನಿನ್ನಲ್ಲಿ ನನಗೆ ಬಹಳ ಪ್ರೀತಿಯಿದೆ. ಸರ್ವಭೋಗ ವುಳ್ಳವಳಾಗಿ ಯಾವ ಅಂಜಿಕೆಯೂ ಇಲ್ಲದೆ ಸಂತೋಷದಿಂದ ಇರುವವಳಾಗು' ಎಂದು ಹೇಳಿದಳು.

ಈರೀತಿಯಾಗಿ ಸುದೇಷ್ಣೆಯು ಹೇಳಲು ದ್ರೌಪದೀದೇವಿಯರು ಸಂತೋಷ

ವುಳ್ಳವರಾಗಿ ಸಂದೇಹವಿಲ್ಲದೆ ಅಂತಃಪುರವನ್ನು ಪ್ರವೇಶಿಸಿದರು. ಎಲ್ಲರಿಂದಲೂ ಸೇವಾಮಾಡಕೊಳ್ಳಲಿಕ್ಕೆ ಅರ್ಹರಾದ ದ್ರೌಪದೀದೇವಿಯರು ಲೋಕರೀತಿಯಿಂದ ದುಃಖವನ್ನು ತೋರಿಸುತ್ತಾ ಸುದೇಷ್ಣೆಯನ್ನು ಸೇವಿಸುತ್ತಾ ಇದ್ದರು.



## ಜೀಮೂತನೆಂಬ ಮಲ್ಲನ ಸಂಹಾರವು [1]

ಪಾಂಡವರು ವಿರಾಟನಗರದಲ್ಲಿ ಅಜ್ಞಾತವಾಸವನ್ನು ಮಾಡುತ್ತಿದ್ದರು. ಧರ್ಮರಾಜನು ಯತಿವೇಷಧಾರಿಯಾಗಿ ಸಭೆಯಲ್ಲಿ ಕೂತುಕೊಂಡು ಸಭಿಕರಿಗೆ ಪ್ರಿಯನಾಗಿದ್ದನು. ವಿರಾಟರಾಜನಿಗೂ ಅವನ ಮಗನಿಗೂ ಪ್ರಿಯನಾಗಿದ್ದನು. ಪಗಡೆ ಆಟವನ್ನು ಆಡಿ ಅದರಲ್ಲಿ ಜಯಿಸಿ ಬಂದ ಹಣವನ್ನು ವಿರಾಟರಾಜನಿಗೆ ತಿಳಿಯದಂತೆ ಸಹೋದರರಿಗೆ ಕೊಡುತ್ತಿದ್ದನು. ಭೀಮಸೇನದೇವರೂ ಭಕ್ಷ್ಯಗಳನ್ನೂ ಮಾಂಸ ಗಳನ್ನೂ ವಿರಾಟರಾಜನು ತನಗೆ ಕೊಟ್ಟದ್ದನ್ನು ಬೆಲೆಗೆ ಮಾರುವಂತೆ ಸಹೋದರರಿಗೆ ಕೊಡುತ್ತಿದ್ದರು. ಅರ್ಜುನನು ಅಂತಃಪುರದಲ್ಲಿ ಸಿಕ್ಕಿದ ಜೀರ್ಣವಸ್ತ್ರಗಳನ್ನು ಸಹೋದರರಿಗೆ ಬೆಲೆಗೆ ಮಾರುವಂತೆ ಕೊಡುತ್ತಿದ್ದನು. ನಕುಲನು ಕುದುರೆಗಳ ಕಾರ್ಯವನ್ನು ಮಾಡಿ ವಿರಾಟರಾಜನು ಅದನ್ನು ನೋಡಿ ಸಂತೋಷಪಟ್ಟು ಕೊಟ್ಟ ಹಣವನ್ನು ಮೆಲ್ಲನೆ ಸಹೋದರರಿಗೆ ಕೊಡುತ್ತಿದ್ದನು. ಸಹದೇವನೂ ಗೋಪಾಲರ ವೇಷವುಳ್ಳವನಾಗಿ ಮೊಸರನ್ನು ಹಾಲನ್ನೂ ತುಪ್ಪವನ್ನು ಪಾಂಡವರಿಗೆ ಕೊಡುತ್ತಿದ್ದನು. ದ್ರೌಪದೀದೇವಿಯರು ಇವರೆಲ್ಲರನ್ನೂ ನೋಡುತ್ತಾ ಒಬ್ಬರಿಗೂ ತಿಳಿಯದಂತೆ ಇರುತ್ತಿದ್ದರು. ಈರೀತಿಯಾಗಿ ಮಹಾರಥಿಕರಾದ ಪಾಂಡವರು ಒಬ್ಬರಿಗೊಬ್ಬರು ಸಹಾಯವನ್ನು ಮಾಡಿಕೊಂಡು ಗರ್ಭವಾಸವನ್ನು ಮಾಡುವಂತೆ ವಿರಾಟನಗರದಲ್ಲಿ ವಾಸಮಾಡುತ್ತಿದ್ದರು. ದುರ್ಯೋಧನಾದಿಗಳಿಗೆ ತಿಳಿದುಹೋಗುತ್ತದೋ ಎಂಬ ಭಯವುಳ್ಳವರಾಗಿ ದ್ರೌಪದೀದೇವಿಯರನ್ನು ನೋಡಿಕೊಂಡು ಅಜ್ಞಾತವಾಸ ಮಾಡುತ್ತಿದ್ದರು.

ಹೀಗೆ ವಿರಾಟನಗರದಲ್ಲಿ ಪಾಂಡವರು ವಾಸಮಾಡುತ್ತಿರಲು ನಾಲ್ಕನೇ ತಿಂಗಳಲ್ಲಿ ಅಲ್ಲಿ ಒಂದು ರುದ್ರದೇವರ ಗುಡಿಯಲ್ಲಿ ದೊಡ್ಡ ಉತ್ಸವವು ನಡೆಯಿತು. ಆ ಪ್ರಸಿದ್ಧ ಉತ್ಸವಕ್ಕೆ ಅನೇಕ ದಿಕ್ಕುಗಳಿಂದ ಅನೇಕ ಪರಾಕ್ರಮಶಾಲಿಗಳಾದ ಮಲ್ಲರು

1. ಭಾ.ವಿ.ಪ ಅ-13

ಬಂದರು. ಅವರು ಕಾಲಕೇಯ ಅಸುರರಂತೆ ಇರುತ್ತಿದ್ದರು. ಅವರಲ್ಲಿ ಜೀಮೂತ ಎಂಬ ಹೆಸರುಳ್ಳ ಮಹಾಬಲಿಷ್ಠನಾದ ಪ್ರಸಿದ್ಧನಾದ ಮಲ್ಲನಿದ್ದನು. ಅವನನ್ನು ನೋಡಿ ವಿರಾಟನಗರದಲ್ಲಿ ಇದ್ದ ಮಲ್ಲರೆಲ್ಲರೂ ಭಯವುಳ್ಳವರಾದರು. ಮುಖವನ್ನು ತಗ್ಗಿಸಿಕೊಂಡರು. ತಮ್ಮ ಪ್ರಾಣವೇ ಹೋಗಲಿ ಎಂದು ಕೆಲವು ಯೋಚಿಸುತ್ತಿದ್ದರು. ಇನ್ನು ಕೆಲವರು ಭೂಮಿಯ ಒಳಗೆ ಪ್ರವೇಶಿಸಲಿಕ್ಕೆ, ಇನ್ನು ಕೆಲವು ಆಕಾಶಕ್ಕೆ ಹಾರಿಹೋಗಲಿಕ್ಕೆ ಅಪೇಕ್ಷಿಸುತ್ತಿದ್ದರು. ಜೀಮೂತನು ಬಂದು ಬಡಿದರೂ ಅವರೆಲ್ಲರೂ ಭಯದಿಂದ ಒಂದನ್ನೂ ಮಾತಾಡುತ್ತಿದ್ದಿಲ್ಲ.

ಈರೀತಿಯಾಗಿ ಭಯಪಟ್ಟಿರುವ ಎಲ್ಲಾ ಮಲ್ಲರನ್ನೂ ನೋಡಿ ಆ ಜೀಮೂತನು 'ನಾನು ಸಮಸ್ತ ಭೂಮಂಡಲದಲ್ಲಿರುವ ಮಲ್ಲರೆಲ್ಲರಿಗೂ ರಾಜನಾಗಿರುವೆನು. ನಾನು ಸಿಂಹಹುಲಿಗಳ ಸಮೂಹಗಳೊಡನೆ ಆಡುವೆನು' ಎಂದು ವಿರಾಟರಾಜನೊಡನೆ ಹೇಳಿದನು. ವಿರಾಟರಾಜನು ಬಲದರ್ಪಯುಕ್ತವಾದ ಅವನ ಮಾತನ್ನು ಕೇಳಿ ಭಯಗ್ರಸ್ತರಾದ ತನ್ನ ಮಲ್ಲರನ್ನು ನೋಡಿ 'ನಿಮ್ಮಲ್ಲಿ ಯಾರು ಈ ಮಲ್ಲನೊಡನೆ ಯುದ್ಧಮಾಡಲಿಕ್ಕೆ ಸಮರ್ಥನಾಗಿರುವನು?' ಎಂದು ಕೇಳಿದನು. ಆಗ ಒಬ್ಬರೂ ಪ್ರತ್ಯುತ್ತರವನ್ನು ಕೊಡಲಿಲ್ಲ. ಆಗ ವಿರಾಟರಾಜನಿಗೆ ಕೋಪವು ಬಂದಿತು. ಈ ಮಲ್ಲರಿಗೆ ಕೊಡುವ ಸಂಬಳವನ್ನು ನಿಲ್ಲಿಸಿಬಿಡುತ್ತೇನೆ ಎಂದು ಹೇಳಿದನು. ವಿರಾಟರಾಜನು ಹೇಳಿದ ಮಾತನ್ನು ಕೇಳಿ ಧರ್ಮರಾಜನು 'ರಾಜನೇ! ಈ ಮಲ್ಲ ನೊಡನೆ ಯುದ್ಧಮಾಡಲಿಕ್ಕೆ ಸಮರ್ಥನಾಗಿರುವ ಮಲ್ಲನನ್ನು ನಾನು ಧರ್ಮರಾಜನ ಮನೆಯಲ್ಲಿ ನೋಡಿದ್ದೆನು. ಧರ್ಮರಾಜನ ಮನೆಯಲ್ಲಿ ನಾನು ನೋಡಿದ್ದ ಆ ಮಲ್ಲನು ಈಗ ನಿನ್ನ ಅಡಿಗೆಮನೆಯಲ್ಲಿ ಇರುವನು' ಎಂದು ಹೇಳಿದನು. ಧರ್ಮರಾಜನ ಮಾತನ್ನು ಕೇಳಿ ವಿರಾಟರಾಜನು ಸ್ಪಷ್ಟವಾಗಿ ಹೇಳು ಎಂದನು. ಅವನನ್ನು ಬೇಗನೇ ಈ ಮಲ್ಲನೊಡನೆ ಯುದ್ಧವನ್ನು ಮಾಡಲಿಕ್ಕೆ ಕೂಗಿರಿ ಎಂದು ಹೇಳಿದನು.

ತರುವಾಯ ವಿರಾಟರಾಜನ ಆಜ್ಞೆಯಂತೆ ಭೀಮಸೇನದೇವರು ಮಲ್ಲಯುದ್ಧ ಕ್ಕಾಗಿ ಬಂದರು. 'ರಾಜೇಂದ್ರನೇ! ನಿನ್ನ ಪ್ರಭಾವದಿಂದ ಈ ಮಲ್ಲನೊಡನೆ ಯುದ್ಧ ಮಾಡಲಿಕ್ಕೆ ನಾನು ಸಮರ್ಥನಾಗುವೆನು(ಗಿರುವೆನು). ಯುಧಿಷ್ಠಿರನ ಅನುಗ್ರಹ ದಿಂದಲೂ ನಿನ್ನ ಪ್ರಭಾವದಿಂದ ಮಹಾದೇವನಲ್ಲಿ ಇರುವ ಭಕ್ತಿಯಿಂದಲೂ ಈ ಮಲ್ಲನನ್ನು ನಾನು ಬೀಳಿಸುವೆನು' ಎಂದು ಹೇಳಿದರು. (ಇಲ್ಲಿ ಭೀಮಸೇನದೇವರು ನಿನ್ನ ಪ್ರಭಾವದಿಂದ ಅಂದರೆ ನೀನು ಎಂದು ಹೆಸರುಳ್ಳ ನಿನ್ನಲ್ಲಿರುವ ಪರಮಾತ್ಮನ ಪ್ರಭಾವದಿಂದ ಎಂದೂ ಯುಧಿಷ್ಠಿರನ ಅನುಗ್ರಹದಿಂದ ಅಂದರೆ ಯುಧಿಷ್ಠಿರನಲ್ಲಿ

ಇರುವ ಯುಧಿಷ್ಠಿರನಾಮಕ ಪರಮಾತ್ಮನ ಅನುಗ್ರಹದಿಂದ ಎಂದು, ಮಹಾದೇವನಲ್ಲಿರುವ ಭಕ್ತಿಯಿಂದ ಎಂದರೆ ಉತ್ತಮದೇವತೆಯಾದ ಕಾರಣವೂ ಸರ್ವಶಬ್ದವಾಚ್ಯನಾದ ಪ್ರಯುಕ್ತವೂ ಮಹಾದೇವ ಎಂದು ಹೆಸರುಳ್ಳ ಪರಮಾತ್ಮನಲ್ಲಿರುವ ಭಕ್ತಿಯಿಂದ ಎಂದೂ ಅಭಿಪ್ರಾಯದಿಂದ ಹೇಳಿರುವರು. ಏಕಾಂತಭಕ್ತಾಗ್ರೇಸರರಾದ ಅವರು ಇನ್ನೊಬ್ಬರ ಅನುಗ್ರಹವನ್ನು ಅಪೇಕ್ಷಿಸುವವರಲ್ಲ ಎಂದು ತಿಳಿದುಕೊಳ್ಳಬೇಕು.)

ತರುವಾಯ ಭೀಮಸೇನದೇವರು ಯುದ್ಧರಂಗದಲ್ಲಿ ಆ ಜೀಮೂತ ಎಂಬ ಮಲ್ಲನನ್ನು ಯುದ್ಧಕ್ಕೆ ಕೂಗಿ ಕೈಗಳಿಗೆ ಧೂಳಿಯನ್ನು ಹಚ್ಚಿಕೊಂಡು ನಿಂತುಕೊಂಡರು. ವಿರಾಟರಾಜನು ಆ ಮಲ್ಲನೊಡನೆ ಭೀಮಸೇನದೇವರನ್ನು ಯುದ್ಧಮಾಡಲಿಕ್ಕೆ ಹೇಳಿದನು. ತರುವಾಯ ಭೀಮಸೇನದೇವರು ನಾನಾವಿಧವಾಗಿ ಮಲ್ಲರು ಯುದ್ಧ ಮಾಡುವ ಕ್ರಮದಿಂದಲೇ ಯುದ್ಧವನ್ನು ಮಾಡಿದರು. ತರುವಾಯ ಆ ಜೀಮೂತನನ್ನು ಕೈಯಲ್ಲಿ ಎತ್ತಿ ತಿರುಗಿಸಿದರು. ಅದನ್ನು ನೋಡಿ ಎಲ್ಲಾ ಮಲ್ಲರೂ ವಿರಾಟರಾಜನೂ ಅತ್ಯಂತ ಆಶ್ಚರ್ಯವನ್ನು ಹೊಂದಿದರು. ಭೀಮಸೇನದೇವರು ಅವನನ್ನು ನೂರು ಸುತ್ತಿ ತಿರುಗಿಸಿ ಬಲಹೀನನಾದ ಜ್ಞಾನಶೂನ್ಯನಾದ ಅವನನ್ನು ನೆಲದಲ್ಲಿ ಅಪ್ಪಳಿಸಿ ಸಂಹರಿಸಿದರು. ಲೋಕಪ್ರಸಿದ್ಧನಾದ ವೀರನಾದ ಆ ಮಲ್ಲನು ಮರಣವನ್ನು ಹೊಂದಲು ಬಾಂಧವರಿಂದ ಸಹಿತನಾದ ವಿರಾಟರಾಜನು ಬಹಳ ಸಂತೋಷವನ್ನು ಹೊಂದಿದನು. ಮಹಾಮನಸ್ವಿಯಾದ ರಾಜನು ಸಂತೋಷದಿಂದ ಆ ರಂಗಸ್ಥಳದಲ್ಲಿ ಕುಬೇರನಂತೆ ಭೀಮಸೇನದೇವರಿಗೆ ಬಹುಹಣವನ್ನು ಕೊಡುವವನಾದನು.

ಇದೇ ರೀತಿಯಾಗಿ ಭೀಮಸೇನದೇವರು ಬಹುಮಲ್ಲರನ್ನು ಕೊಂದು ವಿರಾಟರಾಜನಿಗೆ ಬಹಳ ಪ್ರೀತಿಯನ್ನು ಉಂಟುಮಾಡಿದರು. ಅವರಿಗೆ ಸಮಾನವಾಗಿ ಯುದ್ಧವನ್ನು ಮಾಡುವ ಒಬ್ಬ ಪುರುಷನೂ ಸಿಗದೆ ಇರಲು ಹುಲಿಗಳಿಂದಲೂ, ಸಿಂಹಗಳಿಂದಲೂ, ಆನೆಗಳಿಂದಲೂ, ಯುದ್ಧವನ್ನು ಮಾಡುತ್ತಿದ್ದರು. ವಿರಾಟರಾಜನು ತನಗೆ ಕೊಟ್ಟ ನಾನಾವಿಧ ದ್ರವ್ಯಗಳನ್ನು ಅಲ್ಲಿಯೇ ಸಭೆಯಲ್ಲಿ ಇದ್ದ ಜನರಿಗೆ ಭೀಮಸೇನದೇವರು ಕೊಟ್ಟು ಹೊರಟುಹೋದರು. ಮತ್ತು ಅವರು ಅಂತಃಪುರದಲ್ಲಿ ಸ್ತ್ರೀಯ ಮಧ್ಯದಲ್ಲಿ ವಿರಾಟರಾಜನು ಬಲಿಷ್ಠಗಳಾದ ಆನೆಗಳೊಡನೆಯೂ ಸಿಂಹಗಳೊಡನೆಯೂ ಯುದ್ಧ ಮಾಡುತ್ತಿದ್ದರು. ಅರ್ಜುನನೂ ನರ್ತನದಿಂದಲೂ, ಗಾಯನದಿಂದಲೂ, ವಿರಾಟರಾಜನನ್ನು ಎಲ್ಲಾ ಅಂತಃಪುರದಲ್ಲಿ ಇದ್ದ ಸ್ತ್ರೀಯರನ್ನು ಸಂತೋಷಪಡಿಸಿದನು. ನಕುಲನೂ ಕುದುರೆಗಳನ್ನು ವಿನಯವುಳ್ಳವನ್ನಾಗಿ ಮಾಡಿ

ರಾಜನಿಗೆ ಸಂತೋಷಪಡಿಸುತ್ತಿದ್ದನು. ಅವನಿಗೂ ರಾಜನು ಬಹಳ ಸಂಬಳವನ್ನು ಕೊಡುತ್ತಿದ್ದನು. ವಿನಯವುಳ್ಳ ಎತ್ತುಗಳನ್ನು ನೋಡಿ ಸಹದೇವನಿಗೂ ಹಣವನ್ನು ಕೊಡುತ್ತಿದ್ದನು. ದ್ರೌಪದೀದೇವಿಯರು ಲೋಕರೀತಿಯಿಂದ ಕ್ಲೇಶಪಡುತ್ತಿದ್ದ ಅವರನ್ನು ನೋಡಿ ತಾನೂ ಅತಿಪ್ರೀತಿರಹಿತರಾಗಿ ದೀರ್ಘಶ್ವಾಸವನ್ನು ಬಿಡುತ್ತಾ ಇದ್ದರು. ಈರೀತಿಯಾಗಿ ಪಾಂಡವರು ವಿರಾಟರಾಜನ ಕರ್ಮಗಳನ್ನು ಮಾಡುತ್ತಾ ವಿರಾಟನಗರದಲ್ಲಿ ಮರೆಯಾಗಿ ವಾಸಮಾಡುತ್ತಿದ್ದರು.



## ಕೀಚಕನು ದ್ರೌಪದೀದೇವಿಯನ್ನು ನೋಡಿದ್ದು [1]

ಈರೀತಿಯಾಗಿ ಮಹಾರಥಿಕರಾದ ಪಾಂಡವರು ವಿರಾಟನಗರದಲ್ಲಿ ವಾಸ ಮಾಡುತ್ತಾ ಹತ್ತು ತಿಂಗಳುಗಳನ್ನು ಕಳೆದರು. ಇನ್ನೊಬ್ಬರಿಂದ ಸೇವೆ ಮಾಡಿಸಿ ಕೊಳ್ಳಲಿಕ್ಕೆ ಅರ್ಹರಾದ ದ್ರೌಪದೀದೇವಿಯರು ಸುದೇಷ್ಣೆಯ ಸೇವೆಯನ್ನು ಮಾಡುತ್ತಾ ಅಲ್ಲಿ ಸುದೇಷ್ಣೆಯನ್ನೂ ಹಾಗೆಯೇ ಇತರ ಅಂತಃಪುರದಲ್ಲಿ ಇರುವ ಸ್ತ್ರೀಯರನ್ನು ಸಂತೋಷಪಡಿಸುತ್ತಾ ಇದ್ದರು. ಆ ವರ್ಷವು ಮುಗಿಯುತ್ತಾ ಬರುತ್ತಿರಲು ವಿರಾಟರಾಜನ ಸೇನಾಧಿಪತಿಯಾದ ಮಹಾಬಲಿಷ್ಠನಾದ ಕೀಚಕನು ದ್ರೌಪದೀದೇವಿಯರನ್ನು ನೋಡಿದನು. ನೀಚನಾದ ಕೀಚಕನು ದೇವತಾಸ್ತ್ರೀಯಂತೆ ಸಂಚರಿಸುತ್ತಿದ್ದ ದ್ರೌಪದೀದೇವಿಯರನ್ನು ನೋಡಿ ಕಾಮಬಾಣವಶನಾದನು.

ಅವನು ಕಾಮಾಗ್ನಿಯಿಂದ ಸಂತಪ್ತನಾಗಿ ಸುದೇಷ್ಣೆಯ ಬಳಿಗೆ ಬಂದು ನಗುತ್ತಾ 'ನಾನು ಇಷ್ಟರವರೆಗೆ ಇವಳನ್ನು ನೋಡಲೇ ಇಲ್ಲ. ತನ್ನ ರೂಪದಿಂದ ನನ್ನನ್ನು ತುಂಬಾ ಮೋಹಗೊಳಿಸುತ್ತಿರುವಳು. ದೇವತೆಯಂತೆ ಮನೋಹರಳಾದವಳು ಇವಳು ಯಾರು? ಯಾರಿಗೆ ಸೇರಿದವಳು? ಎಲ್ಲಿಂದ ಬಂದಳು? ನನ್ನ ಮನಸ್ಸನ್ನು ಮಥನ ಮಾಡಿ ವಶಮಾಡಿಕೊಂಡಿರುವಳು. ಈ ವಿಷಯದಲ್ಲಿ ಬೇರೆ ಔಷಧವೇ ಇಲ್ಲವಲ್ಲಾ! ನಿನ್ನ ಪರಿಚಾರಿಕೆಯು ಅತಿಸುಂದರಿಯಾಗಿ ನನಗೆ ಕಾಣಿಸುತ್ತಿರುವಳು. ಅವಳು ನಿನ್ನ ಸೇವೆಯನ್ನು ಮಾಡುವುದು ಯುಕ್ತವಲ್ಲ. ಅವಳು ನನಗೂ ನನ್ನಲ್ಲಿ ಇರುವ ಸಮಸ್ತ ಸೊತ್ತಿಗೂ ಆಜ್ಞಾಮಾಡುವವಳಾಗಲಿ. ಬೇಕಾದ ಆನೆ ಕುದುರೆಗಳಿಂದ ಕೂಡಿರುವ ಬೇಕಾದ ಜನರಿಂದ ತುಂಬಿರುವ ಸಮೃದ್ಧಿಯುಳ್ಳ ಬಂಗಾರದ ವಿಚಿತ್ರ ಆಭರಣ ಗಳಿಂದ ಯುಕ್ತವಾಗಿರುವ ಮನೋಹರವಾದ ಮಹತ್ತಾದ ನನ್ನ ಮನೆಯನ್ನು ಇವಳು ಅಲಂಕರಿಸಲಿ' ಎಂದು ಹೇಳುವವನಾಗಿ ಸುದೇಷ್ಣೆಯೊಡನೆ ಹೋಗಿಬರುತ್ತೇನೆ

1. ಭಾ.ವಿ.ಪ ಅ-14

ಎಂದು ಹೇಳಿಕೊಂಡು ಬಂದು ದ್ರೌಪದೀದೇವಿಯರ ಬಳಿಗೆ ಬಂದು ಕಾಡಿನಲ್ಲಿ ನರಿಯು ಹೆಣ್ಣುಸಿಂಹವನ್ನು ಮಾತಾಡಿಸುವಂತೆ ಮಾತಾಡಿಸಿದನು.

'ಕಲ್ಯಾಣಿ! ನೀನು ಯಾರು? ವಿರಾಟನಗರಕ್ಕೆ ಎಲ್ಲಿಂದ ಬಂದಿರುವಿ? ನಿನ್ನ ದೇಹದಲ್ಲಿ ಅತ್ಯಂತ ಕಾಂತಿಯಿರುವುದು. ಅತ್ಯಂತ ಸೌಕುಮಾರ್ಯವಿರುವುದು. ನಿನ್ನ ಮುಖವು ಚಂದ್ರನಂತೆ ನಿರ್ಮಲವಾಗಿರುವುದು. ನೀನು ಸರ್ವಾಂಗಸುಂದರಿ ಯಾಗಿರುವಿ. ನಿನ್ನಂತೆ ಇರುವ ಬೇರೆ ಯಾವ ಸ್ತ್ರೀಯನ್ನು ನಾನು ಈ ಭೂಮಿಯಲ್ಲಿ ನೋಡಿರುವು ದಿಲ್ಲ. ನಿನ್ನ ಮುಖವನ್ನ ನೋಡಿ ಯಾರು ಕಾಮವಶವಾಗದೆ ಇರುವನು? ನಿನ್ನನ್ನು ನೋಡಿ ನಾನು ಮೋಹವನ್ನು ಹೊಂದಿರುವೆನು. ನೀನು ನನ್ನನ್ನು ಉದ್ಧಾರ ಮಾಡಬೇಕು. ಸುಖದಿಂದ ಇರಲಿಕ್ಕೆ ಅರ್ಹಳಾದ ನೀನು ಈ ಪ್ರಕಾರವಾಗಿ ಇಲ್ಲಿ ದುಃಖದಿಂದ ವಾಸಮಾಡುವುದು ಸರಿಯಲ್ಲ. ನನ್ನಿಂದ ನೀನು ಬೇಕಾದ ಸುಖವನ್ನು ಅನುಭವಿಸು. ಮದ್ಯವನ್ನು ಪಾನಮಾಡುತ್ತಾ ಬೇಕಾದ ಭೋಗಗಳನ್ನು ಅನುಭವಿಸು. ನಿನಗೋಸ್ಕರ ನಾನು ನನ್ನ ಮೊದಲಿದ್ದ ಹೆಂಡತಿಯರೆಲ್ಲರನ್ನೂ ಬಿಟ್ಟುಬಿಡುವೆನು. ಅವರೆಲ್ಲರೂ ನಿನ್ನ ದಾಸಿಯರಾಗಿರಲಿ. ನಾನೂ ನಿನಗೆ ದಾಸನಂತೆ ಇರುವೆನು. ಯಾವಾಗಲೂ ನಿನ್ನ ವಶನಾಗಿರುವೆನು' ಎಂದು ಹೇಳಿದನು.



## ದ್ರೌಪದೀದೇವಿಯರು ಕೀಚಕನನ್ನು ನಿರಾಕರಿಸಿದ್ದು [1]

ನೀಚನಾದ ಕೀಚಕನ ಈಪ್ರಕಾರವಾದ ವಚನವನ್ನು ಸೈರಂಧ್ರೀವೇಷವನ್ನು ಧರಿಸಿದ್ದ ದ್ರೌಪದೀದೇವಿಯರು ಕೇಳಿ 'ಸೂತಪುತ್ರ! ಪ್ರಾರ್ಥನೆಗೆ ಅನರ್ಹಳಾದ ಹೀನಜಾತಿಯವಳಾದ ನಿಂದ್ಯಳಾದ ಸೈರಂಧ್ರಿಯಾದ ನನ್ನನ್ನು ನೀನು ಅಪೇಕ್ಷಿಸುವಿ. ನಾನು ಪರಸ್ತ್ರೀಯಾಗಿರುವೆನು. ನನ್ನನ್ನು ಅಪೇಕ್ಷಿಸುವುದು ಸರಿಯಲ್ಲ. ನೀನು ಕ್ಷೇಮದಿಂದ ಇರು. ಎಲ್ಲರಿಗೂ ಅವರವರ ಹೆಂಡತಿಯರು ಪ್ರಿಯರಾಗಿರುವರು. ನೀನು ಧರ್ಮವನ್ನು ಯೋಚಿಸು. ನೀನು ಎಷ್ಟು ಮಾತ್ರಕ್ಕೂ ಪರಸ್ತ್ರೀಯರಲ್ಲಿ ಮನಸ್ಸನ್ನು ಇಡಬಾರದು. ಅಯೋಗ್ಯಕಾರ್ಯವನ್ನು ಪರಿತ್ಯಾಗ ಮಾಡುವುದು ಸತ್ಪುರುಷರ ಲಕ್ಷಣವಾಗಿರುವುದು. ವ್ಯರ್ಥವಾಗಿ ಪರಸ್ತ್ರೀಯರನ್ನು ಅಪೇಕ್ಷಿಸುವ ಪಾಪಿಯಾದ ಪುರುಷನು ಘೋರವಾದ ಅಪಕೀರ್ತಿಯನ್ನು ಹೊಂದುವನು. ಮಹತ್ತಾದ ಭಯವನ್ನು ಹೊಂದುವನು' ಎಂದು ಹೇಳಿದರು.

1. ಭಾ.ವಿ.ಪ ಅ-14

ಈರೀತಿಯಾಗಿ ಹೇಳಿದ ಮಾತುಗಳನ್ನು ಕೇಳಿದ ಕಾಮಮೋಹಿತನಾದ ಕೀಚಕನು, ಪರಸ್ತ್ರೀಯರನ್ನು ಬಲಾತ್ಕರಿಸುವುದರಿಂದ ಪ್ರಾಣನಾಶಕಗಳಾದ ಬಹು ದೋಷಗಳನ್ನು ತಿಳಿದವನಾದರೂ, ಇಂದ್ರಿಯಪರವಶನಾಗಿ ದ್ರೌಪದೀದೇವಿಯ ರೊಡನೆ 'ಸುಂದರಿ! ನೀನು ಹೀಗೆ ನನ್ನನ್ನು ನಿರಾಕರಿಸುವುದು ಸರಿಯಲ್ಲ. ನಿನ್ನ ನಿಮಿತ್ತವಾಗಿ ಮನ್ಮಥಬಾಣಪೀಡಿತನಾದ, ನಿನಗೆ ವಶನಾಗಿ ಬಂದಿರುವ, ಪ್ರಿಯವಾಗಿ ಮಾತಾಡುವ ನನ್ನನ್ನು ಈಗ ನಿರಾಕರಿಸಿ ಆಮೇಲೆ ಪಶ್ಚಾತ್ತಾಪಡುವಿ. ಸುಂದರಿ! ನಾನು ಈ ಸಂಪೂರ್ಣರಾಜ್ಯಕ್ಕೆ ಯಜಮಾನನು. ಪರಾಕ್ರಮವಿಷಯದಲ್ಲಿ ನನಗೆ ಸುಮಾರು ಭೂಮಿಯಲ್ಲಿಯೇ ಒಬ್ಬರೂ ಇರುವುದಿಲ್ಲ. ನನ್ನ ಮನೆಯಲ್ಲಿ ಒಂದು ಭೋಗಕ್ಕೂ ಕಡಿಮೆಯಿಲ್ಲ. ಹೀಗಿರುವಾಗ ನೀನು ಇಲ್ಲಿ ದಾಸ್ಯವನ್ನು ಮಾಡುತ್ತಾ ಯಾಕೆ ಕಷ್ಟಪಡುತ್ತಿರುವಿ? ನಾನು ನಿನಗೆ ಈ ರಾಜ್ಯವನ್ನು ಕೊಡುವೆನು. ನೀನು ಯಜಮಾನಿ ಯಾಗಿರುವಿ. ಸುಂದರಿ! ನನ್ನನ್ನು ಹೊಂದು. ಉತ್ತಮಭೋಗಗಳನ್ನು ಅನುಭವಿಸು' ಎಂದು ಹೇಳಿದನು.

ದ್ರೌಪದೀದೇವಿಯರು ಅವನ ಮಾತುಗಳನ್ನು ಕೇಳಿ 'ಸೂತಪುತ್ರ! ವ್ಯರ್ಥವಾಗಿ ಮೋಹವನ್ನು ಹೊಂದಬೇಡ. ಪ್ರಾಣಗಳನ್ನು ಕಳೆದುಕೊಳ್ಳಬೇಡ. ನಾನು ಯಾವಾಗಲೂ ಐದು ಘೋರಪುರುಷರಿಂದ ರಕ್ಷಿತಳಾಗಿರುವೆನೆಂದು ತಿಳಿದಿರು. ನಿನಗೆ ನಾನು ಸಿಗುವವಳಲ್ಲ. ನನಗೆ ಐದು ಜನ ಗಂಧರ್ವರು ಪತಿಗಳು ಇರುವರು. ಅವರು ಕೋಪಿಸಿಕೊಂಡು ನಿನ್ನನ್ನು ಸಂಹರಿಸುವರು. ಸಾಯಬೇಡ. ಬುದ್ಧಿಯಿಲ್ಲದ ಬಾಲಕನು ದೊಡ್ಡದಾದ ನದಿಯ ಮತ್ತೊಂದು ತೀರವನ್ನು ತಾನಾಗಿಯೇ ಹೋಗಲಿಕ್ಕೆ ಇಚ್ಛಿಸುವಂತೆ ನಿನ್ನ ವ್ಯಾಪಾರವಾಗಿರುವುದು. ಭೂಮಿಯ ಒಳಗೆ ಹೋಗು. ಮೇಲಕ್ಕೆ ಹಾರಿಹೋಗು. ಸಮುದ್ರದ ಆಚೆಯ ತೀರಕ್ಕೆ ಓಡು. ಏನು ಮಾಡಿದರೂ ಆ ಗಂಧರ್ವರಿಂದ ನಿನಗೆ ಬಿಡಿಸಿಕೊಳ್ಳಲಿಕ್ಕೆ ಆಗಲಾರದು. ಅವರು ಆಕಾಶದಲ್ಲಿ ಸಂಚರಿಸುವ ದೇವಪುತ್ರರು. ಮಹಾಬಲಿಷ್ಠರು. ರೋಗಿಷ್ಠನಾದ ಪುರುಷನು ಮೃತ್ಯುವನ್ನು ಅಪೇಕ್ಷಿಸುವಂತೆ ನೀನು ನನ್ನನ್ನು ಅಪೇಕ್ಷಿಸುತ್ತಿರುವಿ. ತಾಯಿಯ ತೊಡೆಯಲ್ಲಿ ಮಲಗಿರುವ ಮಗುವು ಚಂದ್ರನನ್ನು ಅಪೇಕ್ಷಿಸುವಂತೆ ನನ್ನನ್ನು ನೀನು ತಿಳಿದುಕೊಂಡಿರುವಿ. ಗಂಧರ್ವರ ಪ್ರಿಯೆಯಾದ ನನ್ನನ್ನು ಅಪೇಕ್ಷಿಸುವ ನಿನಗೆ ಭೂಮಿಯಲ್ಲಿಯೋ ಸ್ವರ್ಗದಲ್ಲಿಯೋ ಎಲ್ಲಿ ಹೋದರೂ ರಕ್ಷಕರು ಸಿಗಲಾರರು. ಇಂತಹ ಅಯೋಗ್ಯ ಇಚ್ಛೆಯನ್ನು ಬಿಟ್ಟುಬಿಡುವವನಾಗು. ಇಲ್ಲದಿದ್ದರೆ ಪ್ರಾಣಕಳಕೊಳ್ಳುವಿ' ಎಂದು ಹೇಳಿದರು.



# ಸುದೇಷ್ಣೆಯು ದ್ರೌಪದೀದೇವಿಯರನ್ನು ಕೀಚಕನ ಮನೆಗೆ ಕಳುಹಿಸಿದ್ದು [1]

ದ್ರೌಪದೀದೇವಿಯರಿಂದ ನಿರಾಕೃತನಾದ ನೀಚನಾದ ಕೀಚಕನು ಕಾಮಮೋಹಿತನಾಗಿ ರಾಜಗೃಹದ ಒಳಗೆ ಹೋಗಿ ಸಹೋದರಿಯಾದ ಸುದೇಷ್ಣೆಯ ಮುಂದೆ ಹೋಗಿ ನಿಂತನು. ಕಾಮಬಾಣ ಮೋಹಿತನಾದ ಆ ಕೀಚಕನು ಸಹೋದರಿಗೆ ಎರಡು ಕೈಗಳನ್ನು ಮುಗಿದುಕೊಂಡು ಪರಮದುಃಖದಿಂದ ದೀರ್ಘಶ್ವಾಸವನ್ನು ಬಿಡುತ್ತಾ 'ಸುದೇಷ್ಣೆ! ಹೇಗಾದರೂ ಮಾಡಿ ಸೈರಂಧ್ರಿಯು ಸಕಾಮಳಾಗಿ ನನ್ನನ್ನು ಸೇರುವಂತೆ ಮಾಡು. ಬೇಗನೇ ಮಾಡು. ಇಲ್ಲದಿದ್ದರೆ ನನ್ನ ಪ್ರಾಣವು ಹೋಗುವುದು. ಆ ಸುಂದರಿಯು ಈಗಲೂ ನನ್ನನ್ನು ಇಚ್ಛಿಸುವುದಿಲ್ಲ. ನಾನು ನಿಶ್ಚಯವಾಗಿಯೂ ಯಮಲೋಕವನ್ನು ಹೊಂದುವೆನು' ಎಂದನು.

ಅದನ್ನು ಕೇಳಿ ಸುದೇಷ್ಣೆಯು ಸಹೋದರನನ್ನು ಆಲಿಂಗಿಸಿ ಅವನು ಬದುಕಿರಬೇಕೆಂದು ಸಮಾಧಾನಪಡಿಸಿ ಹೇಳಿದರು. 'ಸೈರಂಧ್ರಿಯು ನನ್ನನ್ನು ಮರೆ ಹೊಂದಿರುವಳು. ನಾನು ಅವಳಿಗೆ ಅಭಯಪ್ರದಾನವನ್ನು ಮಾಡಿರುವೆನು. ಅವಳು ಉತ್ತಮ ಆಚಾರವಂತಳು. ಅವಳೊಡನೆ ಇಂತಹ ಕೆಟ್ಟ ಮಾತುಗಳನ್ನು ನಾನು ಆಡಲಾರೆನು. ಅವಳನ್ನು ಯಾರೂ ಪಾಪಬುದ್ಧಿಯಿಂದ ಮುಟ್ಟಲಿಕ್ಕೆ ಆಗಲಾರದು. ಅವಳನ್ನು ಐದುಜನ ಗಂಧರ್ವರು ರಕ್ಷಿಸುತ್ತಿರುವರು. ಸಂತೋಷಪಡಿಸುತ್ತಿರುವರು. ಈರೀತಿಯಾಗಿ ಅವಳು ಇಲ್ಲಿಗೆ ಬಂದು ಸೇರಿದ ಮೊದಲೇ ತಿಳಿಸಿರುತ್ತಾಳೆ. ಅವಳು ಸತ್ಯವನ್ನೇ ಹೇಳಿರುವಳು. ಆ ಮಹಾನುಭಾವರು ಕೋಪಿಸಿಕೊಂಡರೆ ಕೊಂದುಹಾಕಿ ಬಿಡುವರು. ವಿರಾಟ ಮಹಾರಾಜರೂ ಅವಳನ್ನು ನೋಡಿ ಮೋಹಿತರಾದರು. ತರುವಾಯ ನಾನು ಅವರ ಹತ್ತಿರ ವಿಷಯವನ್ನು ತಿಳಿಸಿ ಸಮಾಧಾನಪಡಿಸಿದೆನು. ಅವರು ಆಮೇಲೆ ಗಂಧರ್ವರ ಭಯದಿಂದ ಅವಳನ್ನು ನೋಡಿ ಮನಸ್ಸಿನಲ್ಲಿ ಮಾತ್ರ ಸಂತೋಷಪಡುತ್ತಿರುತ್ತಾರೆ. ಆಮೇಲೆ ಈಗ ಆ ಗಂಧರ್ವರ ಭಯದಿಂದ ಮನಸ್ಸಿನಲ್ಲಿಯೂ ಯೋಚನೆ ಮಾಡುವುದಿಲ್ಲ. ಆ ಗಂಧರ್ವರು ಕೋಪಿಸಿಕೊಂಡರೆ ಎಂತವರನ್ನು ಕೊಂದು ಹಾಕುವರಂತೆ. ಹಾಗೆ ನನ್ನೊಡನೆ ಸೈರಂಧ್ರಿಯೇ ಹೇಳಿರುವಳು. ಈ ರಹಸ್ಯವನ್ನು ನಾನು ನಿನ್ನ ಮೇಲಿನ ಸ್ನೇಹದಿಂದ ಹೇಳುತ್ತಿರುವೆನು. ನೀನು ಸೈರಂಧ್ರಿಯನ್ನು ಅಪೇಕ್ಷಿಸಿದರೆ ಮಹತ್ತಾದ ಆಪತ್ತನ್ನು ಹೊಂದುವಿ.

1. ಭಾ.ವಿ.ಪ ಅ-15

ಗಂಧರ್ವರು ನಿನ್ನ ವಂಶವನ್ನು ನಿನ್ನ ಧನವನ್ನು ನಾಶಮಾಡುವರು. ಆದುದರಿಂದ ನಿನಗೆ ನಿನ್ನ ಪ್ರಾಣದಲ್ಲಿ ಪ್ರೀತಿಯಿರುವುದಾದರೆ ನನಗೆ ಪ್ರಿಯನ್ನು ಮಾಡಬೇಕೆಂದು ಇಚ್ಛೆಯಿರುವುದಾದರೆ ಸೈರಂಧ್ರಿಯಲ್ಲಿ ಮನಸ್ಸನ್ನು ಇಡಬೇಡ' ಎಂದು ಹೇಳಿದಳು.

ಅದಕ್ಕೆ ಕೀಚಕನು 'ಗಂಧರ್ವರು ನೂರು ಜನರೋ ಸಾವಿರ ಜನರೋ ಬಂದರೂ ನಾನು ಕೊಂದುಹಾಕುವೆನು. ಐದು ಜನ ಗಂಧರ್ವರು ನನ್ನನ್ನು ಏನು ಮಾಡುವರು? ಹೆಂಗಸರ ರಹಸ್ಯವಾದ ವಿಷಯವು ನಿನಗೆ ತಿಳಿಯಲಾರದು. ಮಗನನ್ನೋ ಮೊಮ್ಮಗನನ್ನೋ ಸಹೋದರನನ್ನೋ ಏಕಾಂತದಲ್ಲಿ ನಾನಾ ಅಲಂಕಾರಗಳಿಂದ ಭೂಷಿತನಾಗಿರುವುದನ್ನು ನೋಡಿದರೆ ಅವರ ಮನಸ್ಸು ವಿಕಾರವನ್ನು ಹೊಂದಿಯೇ ಹೊಂದುವುದು. ನಾನು ಗಂಧವನ್ನು ಹಚ್ಚಿಕೊಂಡು ಆಭರಣಗಳಿಂದ ಅಲಂಕಾರ ಮಾಡಿಕೊಂಡರೆ ನನ್ನನ್ನು ನೋಡಿ ಸೈರಂಧ್ರಿಯು ಕಾಮಮೋಹಿತಳಾಗಿ ನನ್ನ ವಶವಾಗುವಳು. ನಾನು ಬದುಕಿರಬೇಕೆಂದು ಆಸೆಯಿದ್ದರೆ ನೀನೂ ಸ್ವಲ್ಪ ಅವಳೊಡನೆ ಹೇಳು' ಎಂದನು.

ಈರೀತಿಯಾಗಿ ಕೀಚಕನು ಹೇಳಿದ ಮಾತನ್ನು ಕೇಳಿ ಸುದೇಷ್ಣೆಯು ಶೋಕದಿಂದ ಅಳುವವಳಾದಳು. 'ಇವನು ಹೋಗಿ ಪಾತಾಳದಲ್ಲಿ ವಡವಾಗ್ನಿಯ ಬಾಯಿಗೆ ಬೀಳುವನು. ನಿನ್ನಿಂದಾಗಿ ನನ್ನ ಎಲ್ಲಾ ಸಹೋದರರೂ ಮಿತ್ರರೂ ಸಾಯುವರು. ನೀನು ಈಪ್ರಕಾರವಾಗಿ ಮಾಡಿದರೆ ನಾನು ಏನು ಮಾಡಲಿಕ್ಕೆ ಆಗುವುದು? ನೀನು ಶ್ರೇಯಸ್ಸನ್ನೇ ತಿಳಿಯುವುದಿಲ್ಲ. ಕಾಮವನ್ನೇ ಅನುಸರಿಸುತ್ತಿರುವಿಯಲ್ಲಾ! ನಿನ್ನ ಆಯುಷ್ಯವು ನಿಶ್ಚಯವಾಗಿಯೂ ಮುಗಿಯಿತು. ಆದುದರಿಂದಲೇ ಈರೀತಿಯಾಗಿ ಕಾಮಮೋಹಿತನಾಗಿರುವಿ. 'ಒಬ್ಬನು ಪಾಪವನ್ನು ಮಾಡುವುದು. ಅದರಿಂದ ಅವನ ಜಾತಿಯವರೆಲ್ಲರೂ ಸಾಯುವರು ಎಂದು ದೊಡ್ಡವರು ಹೇಳಿರುವರು. ನೀನು ನಿಶ್ಚಯವಾಗಿಯೂ ಯಮಲೋಕಕ್ಕೆ ಹೋಗಿಯಾಯಿತು. ನಿರಪರಾಧಿಗಳಾದ ಸ್ವಕೀಯರನ್ನು ಯಮಲೋಕಕ್ಕೆ ಕಳುಹಿಸುವಿ. ಸಹೋದರನಾದ ನಿನ್ನ ಮೇಲಿನ ಸ್ನೇಹದಿಂದ ನಾನು ತಿಳಿದವಳಾಗಿಯೇ ಇಂತಹ ಅಯೋಗ್ಯವಾದ ಕಾರ್ಯವನ್ನು ಮಾಡಬೇಕಾಗಿದೆಯೆಂದು ತುಂಬಾ ದುಃಖಪಡುವೆನು. ಕುಲನಾಶದಿಂದ ನಿನಗೆ ತೃಪ್ತಿಯಾಗಲಿ. ನೀನು ಬೇಗನೇ ಇಲ್ಲಿಂದ ಮನಗೆ ಹೋಗು. ಏನೋ ಒಂದು ಕಾರ್ಯವನ್ನು ಉದ್ದೇಶಿಸಿ ಮದ್ಯವನ್ನು ಅನ್ನವನ್ನು ಮಾಡಿಸು. ಆದಮೇಲೆ ನನ್ನ ಬಳಿಗೆ ಯಾರನ್ನಾದರೂ ಕಳುಹಿಸು. ತರುವಾಯ ನಾನು ಮದ್ಯವನ್ನು ಅನ್ನವನ್ನು ನನಗಾಗಿ ತರಲಿಕ್ಕಾಗಿ ಸೈರಂಧ್ರಿಯನ್ನು ನಿನ್ನ ಮನೆಗೆ ಕಳುಹಿಸುವೆನು. ಆಗ ನೀನು ಒಬ್ಬರೂ

ಇಲ್ಲದೆ ಇರುವ ಸ್ಥಳದಲ್ಲಿ ಅವಳು ಅಂಗೀಕರ ಮಾಡಿದರೆ ನ್ಯಾಯದಿಂದ ಅವಳನ್ನು ಸಮಾಧಾನಪಡಿಸು. ಸದ್ಯ ಹೀಗೆ ಮಾಡು. ಆಮೇಲೆ ಬರುವ ಆಪತ್ತನ್ನು ನೀನೇ ಯೋಚನೆ ಮಾಡಿಕೊ' ಎಂದು ಹೇಳಿದಳು.

ಕೂಡಲೇ ಕೀಚಕನು ಮನೆಗೆ ಹೋಗಿ ಸುದೇಷ್ಣೆಯು ಹೇಳಿದಂತೆ ಬೇಕಾದ ಅಡಿಗೆಯನ್ನು ಮಾಡಿಸಿ ಮದ್ಯವನ್ನು ಸಿದ್ಧಪಡಿಸಿ ಸುದೇಷ್ಣೆಯ ಬಳಿಗೆ ಓಡಿ ಬಂದು 'ಸುದುಷ್ಣೆ! ಬೇಕಾದ ಅಡಿಗೆಯನ್ನು ಮಾಡಿಸಿರುವೆನು. ಬೇಗನೆ ಸೈರಂಧ್ರಿಯನ್ನು ಮನೆಗೆ ಕಳುಹಿಸು. ಬೇಗನೇ ನನ್ನ ಪ್ರಿಯವನ್ನು ಮಾಡು. ನಾನು 'ಒಂದೋ ನನಗೆ ಸೈರಂಧ್ರಿಯ ಸಮಾಗಮವನ್ನು ಕೊಡು. ಒಂದೋ ಮರಣವನ್ನು ಕೊಡು' ಎಂದು ರುದ್ರದೇವರನ್ನು ಮರೆಹೊಂದಿರುವೆನು' ಎಂದು ಹೇಳಿದನು.

ಅದಕ್ಕೆ ಸುದುಷ್ಣೆಯು 'ನೀನು ನಿನ್ನ ಮನೆಗೆ ಹೋಗು. ನಾನು ಬೇಗನೇ ಸೈರಂಧ್ರಿಯನ್ನು ಕಳುಹಿಸುವೆನು' ಎಂದಳು. ಅದನ್ನು ಕೇಳಿ ಪಾಪಿಯಾದ ಕೀಚಕನು ಸೈರಂಧ್ರಿಯನ್ನು ಯೋಚಿಸುತ್ತಾ ಬೇಗನೇ ತನ್ನ ಮನೆಗೆ ಹೋದನು. ತರುವಾಯ ಸುದೇಷ್ಣೆಯು ಸೈರಂಧ್ರಿಯನ್ನು ಕರೆದು 'ಸೈರಂಧ್ರಿ! ನೀನು ನ್ನ ಪ್ರೀತಿಗಾಗಿ ಕೀಚಕನ ಮನೆಗೆ ಹೋಗಿ ಒಂದಷ್ಟು ಮಧ್ಯವನ್ನು ತರುವವಳಾಗು ನನಗೆ ತುಂಬಾ ನೀರಡಿಕೆಯಾಗುತ್ತಿರುವುದು' ಎಂದು ಹೇಳಿದಳು.

ಆಗ ದ್ರೌಪದಿಯು ಸ್ವತಃ ಭಯರಹಿತರಾಗಿದ್ದರೂ ಲೋಕರೀತಿಯಿಂದ ಭಯವುಳ್ಳವರಾಗಿ ದೀರ್ಘಶ್ವಾಸವನ್ನು ಬಿಡುತ್ತಾ 'ಕಾಮುಕನಾದ ಆ ಸೂತಪುತ್ರನು ನನ್ನಲ್ಲಿ ಅಭಿಲಾಷೆಯುಳ್ಳವನಾಗಿರುವನು. ರಾಜಪುತ್ರಿ! ನಾನು ಅವನ ಮನೆಗೆ ಹೋಗಲಾರೆನು. ಅವನು ಲಜ್ಜಾಹೀನನೆಂದು ನಿನಗೇ ತಿಳಿದಿರುವುದು. ನಾನು ಮೊದಲು ಬಂದು ಸೇರಿದಾಗಲೇ ನೀನು ನನ್ನನ್ನು ರಕ್ಷಿಸುವೆನೆಂದು ಪ್ರತಿಜ್ಞೆಯನ್ನು ಮಾಡಿರುವಿ. ನಾನು ಹಾಗೆಯೇ ಇಲ್ಲಿ ವಾಸಮಾಡಿರುವೆನು. ಮೂಢನಾದ ಕೀಚಕನು ನಾನು ಇಲ್ಲಿ ಇರುವಾಗಲೇ ನಾನು ನೋಡಿ ಕುಚೇಷ್ಟೆಯನ್ನು ಮಾಡುತ್ತಿರುವನು. ಅವನ ಮನೆಗೇ ನಾನು ಹೋದರೆ ಅವನು ನನ್ನನ್ನು ಹೇಗೆ ಬಿಡುವನು? ನಿನಗೆ ಎಷ್ಟೋ ಜನ ಪ್ರಿಯದಾಸಿಯರು ಇರುವರು. ಬೇರೆ ಯಾರನ್ನಾದರೂ ಮದ್ಯವನ್ನು ತರಲಿಕ್ಕೆ ಕಳುಹಿಸು. ನನ್ನನ್ನು ಇಲ್ಲಿಯೇ ರಕ್ಷಿಸು' ಎಂದು ಹೇಳಿದರು. ನಾನು ಅಂಜಿಕೆಯಿಂದ ಕೀಚಕನ ಮನೆಗೆ ಹೋಗಲಾರೆನು. ಇಲ್ಲಿಯೇ ಇದ್ದುಕೊಂಡು ಬೇರೆ ಯಾವ ಕೆಲಸವನ್ನು ಬೇಕಾದರೂ ಮಾಡುವೆನು' ಎಂದು ಹೇಳಿದರು. ಆಗ ದೈವೇಚ್ಛೆಯಿಂದ ಸುದೇಷ್ಣೆಯು ಕೋಪಿಸಿಕೊಳ್ಳುವವಳಾಗಿ 'ನೀನು ಕೀಚಕನ ಮನೆಗೆ

ಹೋಗಿಯೇ ಆಗಬೇಕು. ನನಗೆ ನಿನ್ನಂತೆ ಪ್ರಿಯಳಾದವಳು ಮತ್ತೊಬ್ಬಳು ಇರುವುದಿಲ್ಲ. ಆದುದರಿಂದ ಬೇಗನೇ ಹೋಗು. ಅವಶ್ಯವಾಗಿ ಹೋಗಲೇಬೇಕು. ಯಾಕೆ ಎದುರುಮಾತಾಡುವಿ? ಬೇಗನೇ ಹೋಗು. ನನ್ನ ಪ್ರಿಯಕಾರ್ಯವನ್ನು ಮಾಡು. ನನ್ನ ಸಹೋದರನಾದ ಕೀಚಕನು ಅಂತಹ ಅಯೋಗ್ಯನಲ್ಲ. ಯಾಕೆ ನೀನು ಅವನ ಮೇಲೆ ಸಂದೇಹಪಡುವಿ? ಎಂದು ಹೇಳಿ ಬಂಗಾರದ ಪಾತ್ರೆಯನ್ನು ಕೊಟ್ಟು ಬಲಾತ್ಕಾರದಿಂದ ಕಳುಹಿಸಿದಳು. ವಾಸನೆಯುಳ್ಳ ಮದ್ಯವನ್ನು ಬೇಗನೇ ತೆಗೆದುಕೊಂಡು ಬಾ' ಎಂದು ಹೇಳಿದಳು.

ತರುವಾಯ ದ್ರೌಪದೀದೇವಿಯರು ಲೋಕರೀತಿಯಿಂದ ಭಯಪಡುತ್ತಾ ನಡುಗುತ್ತಾ ಅಳುತ್ತಾ [1]ದೇವತೆಗಳಿಗೆ ನಮಸ್ಕರಿಸಿ 'ನಾನು ಪಾಂಡವರಿಂದ ಇತರ ಪುರುಷರನ್ನು ಮನಸ್ಸಿನಲ್ಲಿಯೂ ಅಂಗೀಕರಿಸಲಿಲ್ಲ. ಆ ಸತ್ಯದಿಂದ ಕೀಚಕನು ನನ್ನನ್ನು ವಶಪಡಿಸಿಕೊಳ್ಳಬಾರದು. ನಾನು ಪಾಂಡವರ (ಹೊಂದದ) ಹೊರತು ಇನ್ನೊಬ್ಬರನ್ನು ಹೊಂದಲಿಲ್ಲವೋ ಆ ಸತ್ಯದಿಂದ ಕೀಚಕನು ನನ್ನನ್ನು ನೋಡಿ ವಶಪಡಿಸದೇ ಇರಲಿ' ಎಂದು ಹೇಳುತ್ತಾ ಹೋದರು.



## ದ್ರೌಪದೀದೇವಿಯರು ಕೀಚಕನ ಮನೆಗೆ ಹೋದದ್ದು [2]

ದ್ರೌಪದೀದೇವಿಯರು ಲೋಕರೀತಿಯಿಂದ ಭಯಪಡುತ್ತಾ ನಾನಾ ದೇವತೆಗಳನ್ನು ಸ್ಮರಿಸಿದರು. ಸೂರ್ಯಾಂತರರ್ಯಾಮಿ ಭಗವಂತನನ್ನು ಸ್ವಲ್ಪಹೊತ್ತು ಧ್ಯಾನಮಾಡಿದರು. ಇದರಿಂದ ಸೂರ್ಯಾಂತರ್ಯಾಮಿ ಪರಮಾತ್ಮನು ಒಬ್ಬ ರಾಕ್ಷಸನನ್ನು ಕೊಟ್ಟು ಕಳುಹಿಸಿದನು. ಆ ರಾಕ್ಷಸನು ಮರೆಯಾಗಿ ದ್ರೌಪದೀದೇವಿಯರ ಹಿಂದೆಯೇ ಬಂದನು. ದ್ರೌಪದೀದೇವಿಯರು ಲೋಕರೀತಿಯಿಂದ ಭಯಪಡುತ್ತಾ

1. ಅಕೀರ್ತಯತ ಸುಶ್ರೋಣೀ ಧರ್ಮಂ ಶಕ್ರಂ ದಿವಾಕರಂ ।
ಮಾರುತಂ ಚಾಶ್ವಿನೌ ದೇವೌ ಕುಬೇರಂ ವರುಣಂ ಯಮಮ್ ।
ರುದ್ರಮಗ್ನಿಂ ಭಗಂ ವಿಷ್ಣುಂ ಸ್ಕಂದಂ ಪೂಷಣಮೇವ ಚ ।
ಸಾವಿತ್ರೀಸಹಿತಂ ಚಾಪಿ ಬ್ರಹ್ಮಾಣಂ ಪರ್ಯಕೀರ್ತಯತ್ ।
ಉಪಾತಿಷ್ಠತ ಸಾ ಸೂರ್ಯಂ ಮುಹೂರ್ತಮಬಲಾ ತದಾ ।
ಸೂರ್ಯೋ ಅವಬುದ್ಧವಾನ್ ।
ಅಂತರ್ಹಿತಂ ತತಸ್ತಸ್ಯಾ ರಕ್ಷೋ ರಕ್ಷಾರ್ಥಮಾದಿಶತ್ ॥ (ವಿ.ಪ. ಅ.19-1 ರಿಂದ 5)

2. ಭಾ.ವಿ.ಪ. ಅ.16. 3. ಮ.ತಾ.ನಿ. ಅ.23.

ಮೆಲ್ಲನೆ ಕೀಚಕನ ಮನೆಗೆ ಹೋದರು. ಜಿಂಕೆಯಂತೆ ಭಯಪಡುತ್ತಾ ಮನೆಗೆ ಬಂದಿರುವ ಸೈರಂಧ್ರಿಯನ್ನು ನೋಡಿ ನೀಚನಾದ ಕೀಚಕನು ಕೂಡಲೇ ಆಸನವನ್ನು ಬಿಟ್ಟು ಎದ್ದನು. ಕಾಮಮೋಹಿತನಾಗಿ 'ಸುಂದರಿ! ಬರಬೇಕು. ಈರಾತ್ರಿಯು ನನಗೆ ಶುಭವಾಯಿತು. ಬಹುದಿವಸದ ಮೇಲೆ ಕಾಮಿನಿಯಾದ ನೀನು ನನ್ನ ಮನೆಗೆ ಬಂದಿರುವಿ. ನನ್ನಲ್ಲಿ ಪ್ರೀತಿಯನ್ನು ಮಾಡು. ನನ್ನನ್ನು ವಶಮಾಡಿಕೊ. ನಿನಗಾಗಿ ಕಲ್ಪಿಸಿರುವ ಭೋಗಗಳನ್ನು ಅನುಭವಿಸುವವಳಾಗು. ರತ್ನದ ಮಾಲೆಯನ್ನು ಬಂಗಾರದ ತೋಡನ್ನು ಒಳ್ಳೇ ಸೀರೆಯನ್ನು ಗಂಧವನ್ನು ಪುಷ್ಪವನ್ನು ಧೂಪದಿಂದ ಶುದ್ಧವಾದ ಮದ್ಯವನ್ನು ಸ್ವೀಕರಿಸು. ನನ್ನಲ್ಲಿ ಪ್ರೀತಿಯಿಂದ ಅನುಗ್ರಹ ಮಾಡು. ಉತ್ತಮವಾದ ಹಾಸಿಗೆಯನ್ನು ಹಾಸಿ ಇರುತ್ತದೆ. ಆದರಲ್ಲಿ ನನ್ನೊಡನೆ ಕೂತುಕೊಂಡು ಮದ್ಯಪಾನವನ್ನು ಮಾಡು. ನಾನು ನಿನಗೆ ಯೋಗ್ಯನಾದ ಗಂಡನಾಗಿರುವೆನು' ಎಂದು ಹೇಳಿದನು.

ಈರೀತಿಯಾಗಿ ಅಯೋಗ್ಯನಾದ ಕೀಚಕನು ಹೇಳಲು ದ್ರೌಪದೀದೇವಿಯರು 'ನೀನು ಈರೀತಿಯಿಂದ ಮಾತನ್ನು ಹೇಳಬಾರದು. ಚಂಡಾಲನು ಬ್ರಾಹ್ಮಣಸ್ತ್ರೀಯನ್ನು ಹೇಗೋ ಹಾಗೆ ನೀನು ನನ್ನನ್ನು ಸ್ಪರ್ಶ ಮಾಡಲು ಆಗಲಾರದು. ದುರ್ಬುದ್ಧಿಯುಳ್ಳವನೇ! ದುರ್ಗತಿಯನ್ನು ಹೊಂದಬೇಕೆಂದು ಇಚ್ಛಿಸುತ್ತಿರುವಿ. ಬಹಳ ಜನ ಪರಸ್ತ್ರೀಯರನ್ನು ಅಪಹಾರ ಮಾಡಿದವರು ಹೋದ ದುರ್ಗತಿಗೆ ನೀನೂ ಹೋಗುವಿ. ನಿನ್ನ ಸಹೋದರಿಯಾದ ಸುದೇಷ್ಣೆಯು (ನಿನ್ನನ್ನು) ನಿನ್ನ ಮನೆಯಿಂದ ಮದ್ಯವನ್ನು ತರಲು ಕಳುಹಿಸಿರುವಳು. ಅವಳಿಗೆ ನೀರಡಿಕೆಯಾಗಿರುವುದು. ಬೇಗನೇ ಆ ಮದ್ಯವನ್ನು ಕೊಡು. ನಾನು ಹೋಗುವೆನು' ಎಂದು ಹೇಳಿದರು.

ಅದಕ್ಕೆ ಕೀಚಕನು 'ಸುಂದರಿ! ಮದ್ಯವನ್ನು ಬೇರೆ ಯಾರಾದರೂ ತೆಗೆದುಕೊಂಡು ಹೋಗಿ ಕೊಡುವರು. ನನಗಾಗಿ ಬಂದಿರುವ ನೀನು ಯಾಕೆ ಹೋಗುವಿ?' ಎಂದನು.

ನೀಚನು ಹೀಗೆ ಹೇಳಿ ಸೈರಂಧ್ರಿಯ ಕೈಯಲ್ಲಿ ಹಿಡಿದುಬಿಟ್ಟನು. ಕೂಡಲೇ ಸೈರಂಧ್ರಿವೇಷದ ದ್ರೌಪದೀದೇವಿಯರು ಕೈಯಲ್ಲಿ ಇದ್ದ ಪಾತ್ರೆಯನ್ನು ಅಲ್ಲಿಯೇ ಬಿಸಾಡಿ ಧರ್ಮರಾಜನು ಕೂತಿದ್ದ ವಿರಾಟರಾಜನ ಸಭೆಗೆ ಓಡಿಬಂದರು. ಆಗ ಕೀಚಕನೂ ಬಂದು ಸಭೆಯಲ್ಲಿ ಕೂತಿದ್ದ ವಿರಾಟರಾಜನೂ ಬ್ರಾಹ್ಮಣರೂ ಇತರ ಕ್ಷತ್ರಿಯರೂ ನೋಡುತ್ತಿರುವಂತೆ ದ್ರೌಪದೀದೇವಿಯರ ತಲೆ ಕೂದಲನ್ನು ಹಿಡಿದು ಸೆಳೆದು ನೆಲದಮೇಲೆ ಬೀಳಿಸಿ ಕಾಲಿನಿಂದ ಒದೆಯುವವನಾದನು. ಆಗ

ಲೋಕದೃಷ್ಟಿಯಿಂದ ದ್ರೌಪದೀದೇವಿಯರ ಬಾಯಿಯಿಂದ ರಕ್ತವು ಸುರಿಯುವು ದಾಯಿತು. ಆಗ ಸೂರ್ಯಾಂತರ್ಯಾಮಿ ಭಗವಂತನು ಕಳುಹಿಸಿದ್ದ ರಾಕ್ಷಸನು ವಾಯುದೇವರ ಆವೇಶದ ಬಲದಿಂದ ವಾಯುವೇಗದಿಂದ ಕೀಚಕನನ್ನು ಒದ್ದು ಕೆಳಗೆ ಬೀಳಿಸಿದನು. ಕೀಚಕನು ಅವನ ಬಲದಿಂದ ಸತ್ತವನಂತೆ ವ್ಯಾಪಾರಹೀನನಾಗಿ ಕೆಳಗೆ ಬಿದ್ದುಬಿಟ್ಟನು. ದ್ರೌಪದೀದೇವಿಯರನ್ನು ನೋಡಿ ಸಭೆಯಲ್ಲಿ ಕೂತಿದ್ದವ ರೆಲ್ಲರೂ ಹಾಹಾಕಾರವನ್ನು ಮಾಡಿದರು. 'ಸೂತಪುತ್ರ! ಕೀಚಕ! ನೀನು ಮಾಡುವುದು ಸರಿಯಲ್ಲ' ಎಂದರು. 'ಈ ಹೆಂಗಸನ್ನು ಯಾಕೆ ಒದೆಯುವಿ?' ಎಂದರು. ಆಗ ಪಾಂಡವರು ಸಭೆಯಲ್ಲಿ ಇದ್ದರು. ಅದನ್ನು ನೋಡಿ ಅವರು ಸಹಿಸದಾದರು. ದ್ರೌಪದೀದೇವಿಯರನ್ನು ನೋಡಿ ಭೀಮಸೇನದೇವರಿಗೆ ಕೋಪದಿಂದ ಬೆವರು ಬಂತು. ಕಣ್ಣಿನಲ್ಲಿ ಹೊಗೆಯು ಬಂದಿತು. ಭೀಮಸೇನದೇವರು ದುರಾತ್ಮನಾದ ಕೀಚಕನನ್ನು ಕೊಂದು ಹಾಕಬೇಕೆಂದು ಕೋಪದಿಂದ ಹಲ್ಲುಗಳನ್ನು ಕಡಿದರು. ಕೋಪದಿಂದ ಆಸನದಿಂದ ಎದ್ದು ದೊಡ್ಡ ಮರವನ್ನು ನೋಡಿದರು. ಧರ್ಮರಾಜ ನನ್ನು ನೋಡಿದರು. ಕೀಚಕನನ್ನು ಸಂಹರಿಸಲು ಉದ್ಯುಕ್ತರಾದ ಭೀಮಸೇನ ದೇವರನ್ನು ಧರ್ಮರಾಜನು ಸಂಜ್ಞೆಯಿಂದಲೇ ನಿಷೇಧಮಾಡಿದನು. ಕಂಕ ಎಂದು ಹೆಸರುಳ್ಳ ಧರ್ಮರಾಜನು 'ಅಡಿಗೆಯವರೇ! ಸಾಹಸಕಾರ್ಯವನ್ನು ಮಾಡಬೇಡಿರಿ. ಈ ಮರದಲ್ಲಿ ಫಲಗಳು ಇರುವುವು. ಇದರಲ್ಲಿ ಒಣಗಿದ ಕಟ್ಟಿಗೆಗಳು ಇರುವುದಿಲ್ಲ. ನಿಮಗೆ ಕಟ್ಟಿಗೆಯು ಬೇಕಾಗಿದ್ದರೆ ಊರಿನ ಹೊರಗೆ ಹೋಗಿ ಮೂಲಸಹಿತವಾಗಿ ಮರವನ್ನು ಕಿತ್ತಿರಿ. ಶ್ರಮವಾಗಲಾರದು. ಆ ಮರವು ಹಸಿಯಾಗಿರುವುದು. ಇದರ ತಣ್ಣಗಿರುವ ನೆರಳಲ್ಲಿ ಆಶ್ರಯಿಸಿಕೊಂಡಿರುವರು. ಪೂರ್ವವೃತ್ತಾಂತವನ್ನು ಸ್ಮರಿಸಿಕೊಂಡು ಇದರ ಎಲೆಯ ವಿಷಯದಲ್ಲಿ ದ್ರೋಹಮಾಡಬೇಡಿರಿ. ನೀವು ಕೋಪಿಸಿಕೊಳ್ಳುವ ಸಮಯವು ಇದಲ್ಲ. ಚಾಪಲವನ್ನು ಮಾಡಬೇಡಿರಿ. ಇದು ಅಪೂರ್ಣವಾಗಿದೆ. ಎರಡು ಪಕ್ಷಗಳಿಂದ ಹೀನವಾಗಿದೆ. ಇದೊಂದು ಬಲಿಷ್ಠರಿಗೆ ಮಹಾಕಾರ್ಯವಲ್ಲ' ಎಂದು ಹೇಳಿದನು. ಇನ್ನೂ ಹೆಚ್ಚಿಗೆ ಹೇಳಿದರೆ ವಿರಾಟರಾಜನಿಗೆ ತಿಳಿಯುವುದೆಂಬ ಭಯದಿಂದ ಹೆಬ್ಬೆಟ್ಟನ್ನು ಹೆಬ್ಬೆಟ್ಟಿನಿಂದ ತಿಕ್ಕಿ ನಿಷೇಧ ಮಾಡಿದನು. ಭೀಮಸೇನದೇವರು ಧರ್ಮರಾಜನ ಮಾತನ್ನು ಕೇಳಿ ತನಗೆ ಬಂದ ಕೋಪವನ್ನು ಅಡಗಿಸಿಕೊಂಡು ಸುಮ್ಮನೆ ಆದರು.



# ಸೈರಂಧ್ರಿಯ ವಿಲಾಪವು [1]

ಭೀಮಸೇನದೇವರ ಕೋಪವನ್ನು ಧರ್ಮರಾಜನು ಮಾಡಿದ ವ್ಯಾಪಾರವನ್ನು ನೋಡಿ ದ್ರೌಪದೀದೇವಿಯರು ಅಧಿಕವಾದ ಕೋಪದಿಂದ ಪುನಃಪುನಃ ಅಳುವವರಾದರು. ಕೀಚಕನು ತನ್ನನ್ನು ಅಟ್ಟಿಸಿಕೊಂಡು ಬಂದುದರಿಂದ ಕೆಂಪಾದ ಕಣ್ಣುಳ್ಳವರಾಗಿ ದ್ರೌಪದೀದೇವಿಯರು ಅಳುತ್ತಾ ಸಭಾದ್ವಾರಕ್ಕೆ ಬಂದು ಅಲ್ಲಿ ಕೂತಿದ್ದ ದೈನ್ಯಯುಕ್ತವಾದ ಮನಸ್ಸುಳ್ಳ ಪತಿಗಳನ್ನು ನೋಡುವವರಾಗಿ ವಿರಾಟರಾಜನೊಡನೆ 'ಪ್ರಜಾರಕ್ಷಣೆ ಮಾಡುವ ತೇಜಸ್ವಿಗಳಾದ ರಾಜರು ಅನಾಥರನ್ನು ರಕ್ಷಿಸಬೇಕು. ನಿತ್ಯವೂ ಧರ್ಮದಲ್ಲಿಯೂ ಸತ್ಯದಲ್ಲಿಯೂ ಆಸಕ್ತರಾಗಿರಬೇಕು. ಪ್ರಜೆಗಳಲ್ಲಿಯೂ ತಮ್ಮ ಮಕ್ಕಳಲ್ಲಿಯೂ ಒಂದೇ ರೀತಿಯಾಗಿ ಇರಬೇಕು. ಯಾವ ಧರ್ಮಾಸನದಲ್ಲಿರುವ ರಾಜನು ವಿವಾದವು ಬಂದಾಗ ಪಕ್ಷಪಾತವಿಲ್ಲದೆ ವಿಚಾರವನ್ನು ಮಾಡುವನೋ ಅವನು ಈಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವನ್ನು ಹೊಂದುವನು. ರಾಜನೇ! ನೀನು ಧರ್ಮಾಸನದಲ್ಲಿ ಕೂತಿರುವಿ. ನಿರಪರಾಧಿನಿಯಾದ ನನ್ನನ್ನು ರಕ್ಷಿಸುವನಾಗು. ನಾನೊಂದು ಅಪರಾಧವನ್ನು ಮಾಡಿದವಳಲ್ಲ. ದುರಾತ್ಮನಾದ ಕೀಚಕನು ಬಂದು ನೀನು ನೋಡುತ್ತಿರುವಂತೆಯೇ ದಾಸಿಯನ್ನು ಒದೆಯುವಂತೆ ಕಾಲಿನಿಂದ ಒದೆಯುವವನಾದನು. ನಿನ್ನ ಎದುರಲ್ಲಿಯೇ ನೆಲದ ಮೇಲೆ ಬೀಳಿಸಿದನು. ನಿರಪರಾಧಿನಿಯಾದ ಕೃಪಾರ್ಹಳಾದ ಹೆಂಗಸಾದ ನನ್ನನ್ನು ರಕ್ಷಿಸು. ಕೀಚಕನಿಂದ ಭಯಪಟ್ಟಿರುವ ನನ್ನನ್ನು ಪರಿಪಾಲಿಸು. ಧರ್ಮವನ್ನು ರಕ್ಷಿಸು. ಪ್ರಜೆಗಳನ್ನು ತಂದೆಯು ಮಕ್ಕಳನ್ನು ರಕ್ಷಿಸುವಂತೆ ರಕ್ಷಿಸು.

ಯಾವ ರಾಜನು ಅಧರ್ಮದಿಂದ ಕಾರ್ಯವನ್ನು ಮಾಡುವನೋ ಆ ದುರಾತ್ಮನನ್ನು ಬೇಗನೇ ಶತ್ರುಗಳು ವಶಮಾಡಿಕೊಳ್ಳುವರು. ನೀನು ಮತ್ಸ್ಯವಂಶದಲ್ಲಿ ಜನಿಸಿರುವಿ. ಸತ್ಯದಲ್ಲಿ ಆಸಕ್ತರಾದವರ ಧರ್ಮಯುಕ್ತವಾದ ವಂಶದಲ್ಲಿ ಈಪ್ರಕಾರವಾಗಿ ಇರುವ ನೀನು ಹುಟ್ಟಿರುವಿ. ಅದಕ್ಕಾಗಿ ನಾನು ನಿನ್ನೊಡನೆ ಕೂಗಿಕೊಳ್ಳುತ್ತಿರುವೆನು. ರಾಜೇಂದ್ರನೇ! ಆ ಪಾಪಿಯಾದ ಕೀಚಕನಿಂದ ನನ್ನನ್ನು ರಕ್ಷಿಸು. ಆ ಪುರುಷಾಧಮನಾದ ಕೀಚಕನು ನನ್ನನ್ನು ಅನಾಥಳೆಂದು ತಿಳಿದುಕೊಂಡು ಬಡೆಯುವನು. ಧರ್ಮವನ್ನು ನೋಡಲಾರನು. ಯಾವ ರಾಜರು ಅಕಾರ್ಯವನ್ನು

---

1. ಭಾ.ವಿ.ಪ ಅ-16

ಮಾಡದೆ ಕಾರ್ಯಗಳನ್ನು ಮಾಡುತ್ತಾ ಪ್ರಜೆಗಳ ವಿಷಯದಲ್ಲಿ ಸರಿಯಾಗಿ ಇರುತ್ತಾರೋ ಅವರು ಸ್ವರ್ಗವನ್ನು ಹೊಂದುವರು. ಪ್ರಜೆಗಳಲ್ಲಿ ಅಪರಾಧವನ್ನು ಮಾಡಿದವರು ನರಕಕ್ಕೆ ಹೋಗುವರು. ರಾಜರು ಸರಿಯಾಗಿ ತಮ್ಮ ಕರ್ತವ್ಯವನ್ನು ಮಾಡುವುದರಿಂದ ಹೊಂದುವ ಪುಣ್ಯವನ್ನು ಯಜ್ಞಗಳಿಂದಲೋ ದಾನಗಳಿಂದಲೋ ಗುರುಗಳ ಸೇವೆಯಿಂದಲೋ ಹೊಂದಲಾರರು' ಇತ್ಯಾದಿ ರೀತಿಯಾಗಿ ವಿಲಾಪವನ್ನು ಮಾಡಿದರು.

ಈರೀತಿಯಾಗಿ ದ್ರೌಪದೀದೇವಿಯರು ವಿಲಾಪವನ್ನು ಮಾಡಲು ವಿರಾಟರಾಜನು ಅಹಂಕಾರಿಯಾದ ಕೀಚಕನನ್ನು ಶಿಕ್ಷಾಮಾಡಲಿಕ್ಕೆ ಅಸಮರ್ಥನಾಗಿ ಸಮಾಧಾನ ಮಾತಿನಿಂದಲೇ ಕೊಟ್ಟು ಕಳುಹಿಸಿದನು. ಅಪರಾಧಿಯಾದ ಕೀಚಕನಿಗೆ ವಿರಾಟನ ಅಪರಾಧಕ್ಕೆ ಅನುಸಾರವಾಗಿ ಶಿಕ್ಷೆಯನ್ನು ಮಾಡದೆ ಇರುವುದನ್ನು ನೋಡಿ ದ್ರೌಪದೀದೇವಿಯರು ವಿರಾಟರಾಜನೊಡನೆ 'ರಾಜನೇ! ನೀನು ಕೀಚಕನಲ್ಲಿ ರಾಜನಂತೆ ನಡಕೊಳ್ಳಲಿಲ್ಲವಲ್ಲಾ! ನಿನ್ನಲ್ಲಿ ಧರ್ಮವೇ ಇಲ್ಲವಲ್ಲಾ! ಕೀಚಕನೂ ತನ್ನ ಧರ್ಮದಲ್ಲಿ ಇಲ್ಲ. ವಿರಾಟರಾಜನೂ ಧರ್ಮದಲ್ಲಿ ಇಲ್ಲ. ಇವನನ್ನು ಆಶ್ರಯಿಸಿರುವ ಸಭಿಕರೂ ಧರ್ಮವನ್ನು ತಿಳಿದವರಲ್ಲ. ಕೀಚಕನೂ ಧರ್ಮವನ್ನು ತಿಳಿದವನಲ್ಲ. ಅವನ ಭೃತ್ಯರೂ ತಿಳಿದವರಲ್ಲ. ಅಪರಾಧ ಮಾಡಿದ ಕೀಚಕನೊಡನೆ ರಾಜನು ವಿನಯದಿಂದ ಮಾತಾಡುತ್ತಿರುವನು. ಮಂತ್ರಿಗಳಿಗೂ ಧರ್ಮವು ತಿಳಿಯಲಾರದು. ಸಭೆಯಲ್ಲಿ ರಾಜನನ್ನೇ ನಾನು ನಿಂದಿಸುವೆನು. ರಾಜ! ನಿನ್ನ ಎದುರಲ್ಲಿಯೇ ಕೀಚಕನು ಈರೀತಿಯಾಗಿ ನನ್ನನ್ನು ಒದೆಯುವುದು ಸರಿಯಲ್ಲ. ಸಭಿಕರೆಲ್ಲರೂ ಧರ್ಮವನ್ನು ಮೀರಿರುವ ಕೀಚಕನನ್ನು ನೋಡಬೇಕು. ರಾಜನೇ! ನಿರಪರಾಧಿನಿಯಾದ ನನ್ನನ್ನು ನೋಡು. ದುಷ್ಟರ ವಿಷಯದಲ್ಲಿ ಸಮಾಧಾನವು ಉಪಯೋಗವಿಲ್ಲ. ದುಷ್ಟರಿಗೆ ಶಿಕ್ಷೆಯನ್ನೇ ಮಾಡಬೇಕು. ಯಾರನ್ನು ಶಿಕ್ಷಿಸಬಾರದೋ ಅವರನ್ನು ಶಿಕ್ಷಿಸುವವನೋ ಯಾರನ್ನು ಶಿಕ್ಷಿಸಬೇಕೋ ಅವರನ್ನು ಶಿಕ್ಷಿಸದೆ ಇರುವವನು ರಾಜನೇ ಆಗಲಾರನು. ಅಂಗಹೀನರನ್ನು ಬಾಲವೃದ್ಧರನ್ನೂ ಸ್ತ್ರೀಯರನ್ನೂ ಇನ್ನೊಬ್ಬರಿಂದ ಪೀಡಿತರಾದವ ರನ್ನು ರಾಜನು ರಕ್ಷಿಸಬೇಕು. ರಾಜನು ಅನಾಥರಿಗೆ ನಾಥನಾಗಬೇಕು. ರಕ್ಷಕರು ಇಲ್ಲದವರಿಗೆ ರಕ್ಷಕನಾಗಬೇಕು. ತಾಯಿಯಿಲ್ಲದವರಿಗೆ ತಾಯಿಯಂತೆ ಆಗಬೇಕು. ಗತಿಹೀನರಿಗೆ ಗತಿಯಾಗಬೇಕು. ವಿಶೇಷವಾಗಿ ದುಷ್ಟರಿಂದ ಪೀಡಿತಳಾದ ಪತಿವ್ರತೆ ಯರ ಅನಾಥಳಾದ ಸ್ತ್ರೀಯನ್ನು ರಾಜನು ತನ್ನ ಮಗಳನ್ನು ರಕ್ಷಿಸುವಂತೆ ರಕ್ಷಿಸಬೇಕು. ಇಷ್ಟರವರೆಗೆ ನಿನ್ನ ಮನೆಯಲ್ಲಿ ವಾಸಮಾಡಿಕೊಂಡಿರುವ ನಿನ್ನ ಮಗಳಿಗಿಂತಲೂ ಹೆಚ್ಚಾಗಿರುವ ನನ್ನನ್ನು ಕೀಚಕನು ಒದೆದನ್ನು ನೋಡು' ಎಂದು ಹೇಳಿದರು.

ಅದಕ್ಕೆ ವಿರಾಟರಾಜನು 'ನಿಮಗೆ ಮರೆಯಾಗಿ ಏನು ಜಗಳವಿದೆಯೋ ನನಗೆ ತಿಳಿಯಲಾರದು. ಸರಿಯಾದ ವಿಷಯವನ್ನು ತಿಳಿಯದೆ ನಾನು ಏನು ಮಾಡಲಿಕ್ಕೆ ಆಗುವುದು' ಎಂದು ಹೇಳಿಬಿಟ್ಟನು.



## ದ್ರೌಪದೀದೇವಿಯರನ್ನು ಸಮಾಧಾನಪಡಿಸಿದ್ದು [1]

ವಿರಾಟರಾಜನ ಮಾತನ್ನು ಕೇಳಿ ದ್ರೌಪದೀದೇವಿಯರು 'ಯಾವ ಗಂಧರ್ವರ ವೈರಿಯು ಪಾಪದಿಂದ ಭೂಮಿಯನ್ನು ಮುಟ್ಟಿಕೊಂಡು ಮಲಗಲಾರನೋ ಅಂತಹ ಗಂಧರ್ವರ ಪತ್ನಿಯಾದ ನನ್ನನ್ನು ಸೂತಪುತ್ರನು ಕಾಲಿನಿಂದ ಒದೆದನು. ಯಾವ ಗಂಧರ್ವರು ದಾನಮಾಡುವರು, ಯಾಚನೆ ಮಾಡಲಾರರು. ಬ್ರಾಹ್ಮಣರಲ್ಲಿ ಪ್ರೀತಿಯುಳ್ಳವರು. ಸತ್ಯವಚನವುಳ್ಳವರು. ಯಾರ ಧನುಸ್ಸಿನ ಹಗ್ಗದ ಶಬ್ದವು ನಗಾರಿಯ ಶಬ್ದದಂತೆ ಕೇಳಿಸುವುದು. ಅವರ ಪ್ರಿಯಪತ್ನಿಯಾದ ನನ್ನನ್ನು ಸೂತಪುತ್ರನು ಕಾಲಿನಿಂದ ಒದೆಯುವನಾದನು. ಯಾವ ಮಹಾಬಲಿಷ್ಠರಾದ ಗಂಧರ್ವರು ಕೋಪಿಸಿಕೊಂಡರೆ ಸರ್ವಲೋಕಗಳನ್ನು ನಾಶಮಾಡುವರೋ ಯಾರಿಗೆ ವೀರ್ಯದಲ್ಲಿಯೂ ಬಲದಲ್ಲಿಯೂ ಸತ್ಯದಲ್ಲಿಯೂ ಇಂದ್ರಯನಿಗ್ರಹದಲ್ಲಿಯೂ ಸಮಾನರಾದವರು ಇರುವುದಿಲ್ಲವೋ ಧನಾದಿಗಳಿಂದಲೂ ಯಾರಿಗೆ ಸಮಾನರಾದವರು ಭೂಮಿಯಲ್ಲಿ ಇಲ್ಲವೋ ಆ ಗಂಧರ್ವರ ಪ್ರಿಯಪತ್ನಿಯಾದ ನನ್ನನ್ನು ಸೂತಪುತ್ರನು ಕಾಲಿನಿಂದ ಒದೆಯುವವನಾದನು. ಪ್ರಜೆಗಳ ಹಿತೈಷಿಯಾದ ನಿನ್ನ ಎದುರಲ್ಲಿಯೇ ನೀನು ನೋಡುತ್ತಾ ಇರುವಾಗಲೇ ಒದೆಯುವವನಾದನು. ಯಾವ ಗಂಧರ್ವರು ತಮ್ಮನ್ನು ಮೊರೆಹೊಂದಿದವರನ್ನು ರಕ್ಷಿಸುತ್ತಿದ್ದರೋ ಆ ಮಹಾಬಲಿಷ್ಠರಾದ ಗಂಧರ್ವರು ಈಗ ಎಲ್ಲಿ ಮರೆಯಾಗಿ ಇರುವರು? ಆ ಬಲಿಷ್ಠರಾದ ಗಂಧರ್ವರು ತಮ್ಮ ಹೆಂಡತಿಯನ್ನು ಸೂತ್ರಪುತ್ರನು ಒದೆಯುವುದನ್ನು ನೋಡಿಯೂ ಕೂಡ ಹೇಗೆ ನಪುಂಸಕರಂತೆ ಸುಮ್ಮನೆ ಇರುವರು? ಅವರ ಕೋಪವೂ ವೀರ್ಯವೂ ಬಲವೂ ಎಲ್ಲಿಹೋಯಿತು? ವಿರಾಟರಾಜನು ಧರ್ಮವನ್ನು ಬಿಡುತ್ತಿರಲು ನಾನೇ ಮಾಡಲಿ? ಯಾವ ರಾಜನು ನಿರಪರಾಧಿನಿಯಾದ ನನ್ನನ್ನು ಸೂತಪುತ್ರನು ಒದೆಯುವುದನ್ನು ನೋಡಿಯೂ ಸುಮ್ಮನೆ ಇದ್ದಾನಲ್ಲಾ! ಧರ್ಮಕ್ಕೆ ಹಾನಿ ಬಂದಾಗ ಸಭಿಕರು ಅದನ್ನು

1. ಭಾ.ವಿ.ಪ ಅ-16

ಸರಿಪಡಿಸದಿದ್ದರೆ ಅವರೂ ಅಧರ್ಮವುಳ್ಳವರಾಗುವರು. ಎಲ್ಲಿ ಧರ್ಮವು ಅಧರ್ಮದಿಂದಲೂ ಸತ್ಯವು ಅಪದ್ಧಮಾತಿನಿಂದಲೂ ಕೆಟ್ಟುಹೋಗುತ್ತದೋ ಅಲ್ಲಿ ಅದನ್ನು ನೋಡುತ್ತಾ ಇರುವ ಸಭಿಕರೂ ಅನರ್ಥವನ್ನು ಹೊಂದುವರು' ಎಂದು ಹೇಳಿದರು.

ದ್ರೌಪದೀದೇವಿಯರು ಹೇಳಿದ ಮಾತುಗಳನ್ನು ಕೇಳಿ ಸಭಿಕರೆಲ್ಲರೂ ದ್ರೌಪದೀದೇವಿಯರನ್ನು ಪೂಜಿಸಿದರು. ಸಾಧು, ಸಾಧು ಎಂದು ಹೇಳಿದರು. ಕೀಚಕನನ್ನು ನಿಂದಿಸಿದರು. ಕೆಲವರು ದ್ರೌಪದೀದೇವಿಯರನ್ನು ಸ್ತೋತ್ರಮಾಡಿದರು. ಕೆಲವರು ಕೀಚಕನನ್ನು ನಿಂದಿಸಿದರು. ಕೆಲವರು ರಾಜನನ್ನು ನಿಂದಿಸಿದರು.

ಸಭಿಕರು 'ಈ ಪರಮಸುಂದರಿಯು ಯಾರಿಗೆ ಪತ್ನಿಯಾಗುವಳೋ ಅವನಿಗೆ ಉತ್ತಮ ಲೋಭವು. ಅವನು ಯಾವಾಗಲೂ ದುಃಖಪಡಲಾರನು' ಎಂದು ಹೇಳಿ ದ್ರೌಪದೀದೇವಿಯರ ಸರ್ವಾಂಗವನ್ನು ವರ್ಣಿಸಿದರು. ದ್ರೌಪದೀದೇವಿಯರನ್ನು ಪೂಜಿಸಿದರು.

ದ್ರೌಪದೀದೇವಿಯರು ಧರ್ಮರಾಜನು ಮಾತಾಡಲಿಕ್ಕೆ ಉದ್ಯುಕ್ತನಾಗಿರುವುದನ್ನು ನೋಡಿ ದೀರ್ಘಶ್ವಾಸವನ್ನು ಬಿಡುತ್ತಾ ಮುಖವನ್ನು ತಗ್ಗಿಸಿಕೊಂಡು ಸುಮ್ಮನೆ ಇದ್ದರು. ಧರ್ಮರಾಜನಿಗೆ ಕೋಪದಿಂದ ಹಣೆಯಲ್ಲಿ ಬೆವರು ಸುರಿಯಿತು. ಸನ್ಯಾಸಿಯ ವೇಷವುಳ್ಳ ಆ ಧರ್ಮರಾಜನು ವಿರಾಟರಾಜನ ಬಳಿಯಲ್ಲಿ ದ್ರೌಪದೀದೇವಿಯರೊಡನೆ 'ಸೈರಂಧ್ರಿ! ನೀನು ಸುದೇಷ್ಣೆಯ ಮನೆಗೆ ಹೋಗು. ಭಯ ಪಡಬೇಡ. ಈ ವಿರಾಟಮಹಾರಾಜನು ಧರ್ಮಶೀಲನು. ಪರಲೋಕ ಭಯವುಳ್ಳವನು. ಆದುದರಿಂದ ಸತ್ಯದಲ್ಲಿಯೂ ಧರ್ಮಮಾರ್ಗದಲ್ಲಿಯೂ ಇರುವ ಇವನು ನಿನ್ನನ್ನು ರಕ್ಷಿಸದೆ ಇರುವನು. ಪತಿಗಳನ್ನು ಅನುಸರಿಸಿರುವ ವೀರಪತ್ನಿಯರು ಎಷ್ಟೋ ಕ್ಲೇಶಗಳನ್ನು ಸಹಿಸಬೇಕಾಗುವುದು. ಅವರು ಅದರಿಂದ ಪತಿಲೋಕವನ್ನು ಹೊಂದುವರು. ನನ್ನ ಪತಿಗಳು ಇದು ಕೋಪಗೊಳ್ಳುವ ಸಮಯವಲ್ಲವೆಂದು ತಿಳಿದುರುವರೆಂದು ನಾನು ಭಾವಿಸುವೆನು. ಅದರಿಂದಲೇ ಆ ಗಂಧರ್ವರು ಈಗ ನಿನ್ನನ್ನು ರಕ್ಷಿಸದೆ ಇರುವರು.

ಕುಲಸ್ತ್ರೀಯರ ಧರ್ಮವನ್ನು ಕೇಳು. ಸ್ತ್ರೀಯಾದವಳು ಯಜ್ಞಾದಿಯಾವ ಧರ್ಮಗಳನ್ನೂ ಮಾಡಬೇಕಾಗಿಲ್ಲ. ಕೇವಲ ಪತಿಯ ಸೇವೆಯಿಂದಲೇ ಸ್ತ್ರೀಯು ಸ್ವರ್ಗವನ್ನು ಹೊಂದುವಳು. ಸ್ತ್ರೀಯನ್ನು ಬಾಲ್ಯದಲ್ಲಿ ತಂದೆಯು ರಕ್ಷಿಸುವನು. ಯೌವನದಲ್ಲಿ ಗಂಡನು ರಕ್ಷಿಸುವನು. ಮುದಿತನದಲ್ಲಿ ಮಗನು ರಕ್ಷಿಸುವನು. ಸ್ತ್ರೀಗೆ

ಯಾವಾಗಲೂ ಸ್ವಾತಂತ್ರ್ಯವಿರುವುದಿಲ್ಲ. ಸ್ತ್ರೀಯರು ಶತ್ರುಗಳಿಂದ ಬಹಳ ಕ್ಲೇಶವನ್ನು ಹೊಂದಿದರು. ಪತಿಗಳ ಭಯದಿಂದ ಕೋಪಿಸಿಕೊಳ್ಳುವುದಿಲ್ಲ. ಅಂತವರು ಸ್ವರ್ಗಲೋಕವನ್ನು ಹೊಂದುವರು. ನನ್ನ ಪತಿಗಳು ನಿಶ್ಚಯವಾಗಿಯೂ ಇದು ಕೋಪಿಸಿಕೊಳ್ಳುವ ಸಮಯವಲ್ಲವೆಂದು ತಿಳಿದುಕೊಂಡಿರುವರು. ಅವರು ಕೋಪಿಸಿಗೊಂಡರೆ ಅವರನ್ನು ಇಂದ್ರದೇವರೂ ಕೂಡ ಎದುರಿಸಲಿಕ್ಕೆ ಆಗಲಾರದು. ಆದುದರಿಂದ ನನ್ನ ಪತಿಗಳಾದ ಗಂಧರ್ವರು ಈಗ ಬಾರದೆ ಇರುವರು. ನೀನು ಪೂರ್ವದಲ್ಲಿ ಏನಾದರೂ ಸಂಕೇತವನ್ನು ಮಾಡಿದ್ದಿದ್ದರೆ ಸ್ಮರಿಸಿಕೊ. ಕ್ಷಮೆಯು ಉತ್ತಮವಾದ ಧರ್ಮವು. ಕ್ಷಮೆಯುಳ್ಳವರಿಗೇ ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಸುಖವಿರುವುದು. ಎರಡು (ಉತ್ತರಾಯಣ ದಕ್ಷಿಣಾಯನ ಎಂಬ) ಅಂಶಗಳುಳ್ಳ ಹನ್ನೆರಡು (ಮಾಸಗಳೆಂಬ) ಅಂಗಗಳುಳ್ಳ ಇಪ್ಪತ್ತನಾಲ್ಕು (ಪಕ್ಷಿಗಳೆಂಬ) ಪರ್ವಗಳುಳ್ಳ ಮುನ್ನೂರ ಅರವತ್ತು (ದಿನಗಳೆಂಬ) ಅರಗಳುಳ್ಳ ಕಾಲದಲ್ಲಿ ಒಂದು ಮಾಸ ಬಾಕಿಯಾಗಿರುವಾಗ ಯಾರು ಸಹಿಸದೆ ಇರುವನು? ಸೈರಂಧ್ರಿ! ಹೊರಟುಹೋಗು. ಗಂಧರ್ವರು ನಿನಗೆ ಪ್ರಿಯವನ್ನು ಮಾಡುವರು. ನಿನ್ನ ದುಃಖವನ್ನು ಪರಿಹರಿಸುವರು' ಎಂದು ಹೇಳಿದನು. ಮತ್ತು ಅಲ್ಲೇ ಇಂತಿದ್ದ ದ್ರೌಪದೀದೇವಿಯರನ್ನು ನೋಡಿ 'ಸುಂದರಿ! ಹೊರಟುಹೋಗು. ಸಭೆಯಲ್ಲಿ ಪಗಡೆ ಆಟವಾಡುವವರಿಗೆ ವಿಘ್ನವನ್ನು ಮಾಡುತ್ತಿರುವಿ. ಅದರಿಂದ ನೀನೂ ಒಬ್ಬಳು ನರ್ತಕಿಯಂತೆ ಕಾಣಿಸುವಿ' ಎಂದು ಹೇಳಿದರು.

ಅದನ್ನು ಕೇಳಿ ದ್ರೌಪದಿದೇವಿಯರು ಧರ್ಮರಾಜನನ್ನು ನೋಡಿ 'ನೀವು ಹೇಳಿದ ಮಾತು ಸತ್ಯವೇ! ನಾನೂ ಒಬ್ಬ ನರ್ತಕಿಯೇ! ನರ್ತನ ಮಾಡುಸುವವನ ಹೆಂಡತಿಯು ನರ್ತಕಿಯೇ! ಅವರಿಗೆಲ್ಲಾ ಅಣ್ಣನಾದವನು ಪಗಡೆ ಆಟವಾಡುವವನು' ಎಂದು ಹೇಳಿ ಮುಖವನ್ನು ವರಿಸಿಕೊಂಡು ರಕ್ತದಿಂದ ಕೂಡಿದ ಕೂದಲುಗಳನ್ನು ಕಟ್ಟಿಕೊಂಡು ಮೈಯೆಲ್ಲ ಧೂಳಿಯುಳ್ಳವರಾಗಿ ಸುದೇಷ್ಣೆಯ ಮನೆಯ ಒಳಗೆ ಪ್ರವೇಶಿಸಿ ಸುದೇಷ್ಣೆಯ ಮುಂದೆ ಹೋಗಿ ನಿಂತರು. ಆಗ ಸುದೇಷ್ಣೆಯು ಒಂದನ್ನು ತಿಳಿಯದವಳಂತೆ ನಟಿಸುತ್ತಾ 'ಯಾಕಮ್ಮ ಕಣ್ಣೀರನ್ನು ಸುರಿಸುವಿ. ಯಾಕೆ ಅಳುತ್ತಿರುವಿ. ಯಾರು ಹೆಂಡತಿ ಮಕ್ಕಳ ವಿಯೋಗವನ್ನು ಹೊಂದಲಿ? ಮಹಾರಾಜರು ಯಾರ ಸಂಹಾರವನ್ನು ಆಜ್ಞಾಪಿಸಲಿ? ನಿನಗೆ ಪ್ರಿಯವಾಗಿ ಏನು ಮಾಡಬೇಕು? ಯಾರನ್ನು ಪರಿತ್ಯಜಸಲಿ? ಯಾರನ್ನು ಕೊಲ್ಲಿಸಲಿ?' ಎಂದು ಕೇಳಿದಳು.

ಆಗ ದ್ರೌಪದೀದೇವಿಯರು ಲೋಕರೀತಿಯಿಂದ ದೀರ್ಘಶ್ವಾಸವನ್ನು

ಬಿಡುವವರಾಗಿ 'ಅಮ್ಮ! ಎಲ್ಲವನ್ನು ತಿಳಿದುಕೊಂಡೇ ಕೇಳುತ್ತಿರುವಿ? ನೀನೇ ನನ್ನನ್ನು ಕೀಚಕನ ಮನೆಗೆ ಕಳುಹಿಸಿ ಈಗ ಏಕೆ ಹೀಗೆಲ್ಲಾ ಕೇಳುತ್ತಿರುವಿ? ಮದ್ಯವನ್ನು ತರಲಿಕ್ಕೆ ಹೋಗಿರುವ ನನ್ನನ್ನು ಅವನು ಮಹಾರಾಜರ ಎದುರಲ್ಲಿಯೇ ಕಾಲಿನಿಂದ ಒದೆದನು' ಎಂದರು.

ಸುದೇಷ್ಣೆಯು 'ನಿನಗೆ ಅಭಿಪ್ರಾಯವಿದ್ದರೆ ಆ ಕೀಚಕನನ್ನು ಕೊಲ್ಲಿಸುವೆನು. ನನ್ನ ಸಹೋದರನು ಹೀಗೆ ಮಾಡಿದನೇ? ಅವನು ತುಂಬಾ ಧರ್ಮವನ್ನು ಮೀರಿರುವನು. ಕಾಮುಕನಾಗಿ ದುರ್ಲಭಳಾದ ನಿನ್ನನ್ನು ಅಪೇಕ್ಷಿಸುವನು' ಎಂದಳು.

ದ್ರೌಪದೀದೇವಿಯರು 'ಅವನು ಯಾವ ಗಂಧರ್ವರಿಗೆ ಅಪರಾಧವನ್ನು ಮಾಡಿರುವನೋ ಆ ಗಂಧರ್ವರೇ ಅವನನ್ನು ಈ ದಿವಸವೇ ಕೊಂದು ಹಾಕುವರು. ಅವನು ಈ ದಿನವೆಯೋ ಅಥವಾ ನಾಳೆಯೋ ಪರಲೋಕವನ್ನು ಹೊಂದುವನೆಂದು ಭಾವಿಸುವೆನು. ನಿನ್ನ ಸಹೋದರನಿಗೆ ಬದುಕಿರುವಾಗಲೇ ಬೇಗನೇ ಶ್ರಾದ್ಧವನ್ನು ಮಾಡಿಬಿಡು. ಅವನಿಗೆ ಬೇಕಾದಂತೆ ತೃಪ್ತಿಪಡಿಸು. ಅವನು ಪ್ರಾಣಗಳನ್ನು ಧರಿಸಿಕೊಂಡು ಇರುವುದಿಲ್ಲ. ನನ್ನ ಐದು ಜನ ಪತಿಗಳಲ್ಲಿ ಒಬ್ಬರು ಮಹಾಬಲಿಷ್ಠರು. ಅವರು ಕೋಪಿಸಿಕೊಂಡರೆ ಈ ರಾತ್ರಿಯಲ್ಲಿಯೇ ಲೋಕದಲ್ಲಿ ಒಬ್ಬ ಮನುಷ್ಯನೂ ಇಲ್ಲದಂತೆ ಮಾಡುವರು. ಅವರು ಇಚ್ಛಾನುಸಾರವಾಗಿ ರೂಪದಿಂದ ಇರುವವರು. ಅವರು ಈಗ ಕೋಪಿಸಿಕೊಂಡಿಲ್ಲ. ಕೀಚಕನು ನನ್ನನ್ನು ಕಾಲಿನಿಂದ ಒದೆದದ್ದು ಅವರಿಗೆ ನಿಶ್ಚಯವಾಗಿಯೂ ತಿಳಿಯುವುದು. ಕೂಡಲೇ ಪಾಪಕರ್ಮವನ್ನು ಮಾಡಿದ ಕೀಚಕನು ಮಕ್ಕಳಿಂದಲೂ ಬಂಧುಗಳಿಂದಲೂ ಸಹಿತನಾಗಿ ಸಾಯುವನು. ಒಬ್ಬನು ಪಾಪವನ್ನು ಮಾಡುವುದು. ಅವನ ಅಪರಾಧದಿಂದ ಕುಲವೇ ನಾಶವನ್ನು ಹೊಂದುವುದು' ಎಂದು ಹೇಳಿದರು.

ದ್ರೌಪದೀದೇವಿಯರು ಸುದೇಷ್ಣೆಯೊಡನ ಇಷ್ಟು ಹೇಳುವವರಾಗಿ ಲೋಕ ರೀತಿಯಿಂದ ದುಃಖಮೋಹಿತರಾಗಿ ಕೀಚಕನ ಸಂಹಾರಕ್ಕಾಗಿ ವ್ರತದೀಕ್ಷೆಯನ್ನು ಧರಿಸಿದರು. ಹೆಂಗಸರೆಲ್ಲರೂ ಪ್ರಾರ್ಥಿಸಿದರೂ ಸುದೇಷ್ಣೆಯು ಸತ್ಕರಿಸಿದರೂ ಸ್ನಾನವನ್ನು ಮಾಡಲಿಲ್ಲ. ಭೋಜನವನ್ನೂ ಮಾಡಲಿಲ್ಲ. ಮೈಯಧೂಳಿಯನ್ನು ಒರೆಸಿಕೊಳ್ಳಲಿಲ್ಲ. ಹಾಗೆಯೇ ರಕ್ತಯುಕ್ತವಾದ ಮುಖವುಳ್ಳವರಾಗಿದ್ದರು. ಹೀಗೆ ಶೋಕಸಂತಪ್ತರಾಗಿ ಅಳುತ್ತಾ ಇದ್ದ ಸೈರಂಧ್ರಿಯನ್ನು ನೋಡಿ ಸ್ತ್ರೀಯರೆಲ್ಲರೂ ಮನಸ್ಸಿನಲ್ಲಿಯೇ ನಿಶ್ಚಯವಾಗಿಯೂ ಕೀಚಕನು ಸಾಯುವನು ಎಂದು ಭಾವಿಸಿದರು.



# ಕೀಚಕನ ಚರಿತ್ರೆಯು [1]

ಬ್ರಾಹ್ಮಣಸ್ತ್ರೀಯಲ್ಲಿ ಕ್ಷತ್ರಿಯಪುರುಷನಿಂದ ಹುಟ್ಟಿದ ಜಾತಿಗೆ ಸೂತಜಾತಿಯೆಂದು ಹೆಸರು. ಅಧಮ ಜಾತಿಯ ಸ್ತ್ರೀಯಲ್ಲಿ ಉತ್ತಮಜಾತಿಯ ಪುರುಷನಿಂದ ಹುಟ್ಟಿದ ಜಾತಿಗೆ ಅನುಲೋಮಸಂಕರಜಾತಿಯೆಂದೂ, ಉತ್ತಮಜಾತಿಯ ಸ್ತ್ರೀಯಲ್ಲಿ ಅಧಮ ಜಾತಿಯ ಪುರುಷನಿಂದ ಹುಟ್ಟಿದ ಜಾತಿಗೆ ಪ್ರತಿಲೋಮಸಂಕರಜಾತಿಯೆಂದೂ ಹೆಸರು. ಪ್ರತಿಲೋಮಸಂಕರಜಾತಿಯವರಲ್ಲಿ ಸೂತನಿಗೆ ಮಾತ್ರ ಉಪನಯನ ಸಂಸ್ಕಾರವಿರುವುದು. ಅವನಿಗೆ ರಥಕಾರನೆಂದೂ ಹೆಸರು. ಅವನು ದ್ವಿಜಕರ್ಮ ವುಳ್ಳವನು. ಅವನು ಕ್ಷತ್ರಿಯನಿಂದ ಅಧಮನೆಂದೂ, ವೈಶ್ಯನಿಂದ ಉತ್ತಮನೆಂದೂ ಹೇಳುವರು. ಪೂರ್ವದಲ್ಲಿ ರಾಜರು ಸೂತಜಾತಿಯೊಡನೆ ಸಂಬಂಧವನ್ನು ಮಾಡಿದ್ದರು. ಆದರೆ ಸೂತರು ಪ್ರತಿಲೋಮಸಂಕರಜಾತಿಯವರಾದ ಕಾರಣ ಅವರಿಗೆ ರಾಜ ಎಂದೂ ಹೆಸರು ಇರುವುದಿಲ್ಲ.

ರಾಜಕನ್ಯೆಯಲ್ಲಿ ಹುಟ್ಟಿದ ಕೇಕಯ ಎಂಬ ಹೆಸರುಳ್ಳವನು ಸೂತರಿಗೆಲ್ಲಾ ಅಧಿ ಪತಿಯಾಗಿದ್ದನು. ಅವನು ಸಾರಥ್ಯದಲ್ಲಿ ಅಸದೃಶನಾಗಿದ್ದನು. ಆ ಕೇಕಯನಿಗೆ ಮಾಲವೀ ಎಂಬ ತನ್ನ ಹೆಂಡತಿಯಲ್ಲಿ ಕೀಚಕ ಎಂದು ಪ್ರಸಿದ್ಧರಾದ ನೂರ ಆರು ಜನ ಮಕ್ಕಳು ಹುಟ್ಟಿದರು. ಅವರಲ್ಲಿ ಜ್ಯೇಷ್ಠನಾದ ಕೀಚಕನು ಮಹಾಬಲಿಷ್ಠನಾಗಿದ್ದನು. ಎಲ್ಲರನ್ನೂ ಜಯಿಸಿದ್ದನು. ಮಾಲವಿಗೆ ಒಬ್ಬಳು ತಂಗಿಯಿದ್ದಳು. ಅವಳನ್ನು ಕೇಕಯನು ಮದುವೆಯಾಗಿದ್ದನು. ವಿರಾಟರಾಜನಿಗೆ ಮೊದಲು ಸುರಥೆಯೆಂಬ ಹೆಂಡತಿಯಿದ್ದಳು. ಅವಳಲ್ಲಿ ವಿರಾಟನಿಗೆ ಶ್ವೇತ, ಶಂಖ ಎಂಬ ಇಬ್ಬರು ಮಕ್ಕಳು ಹುಟ್ಟಿದ್ದರು. ತರುವಾಯ ಕೆಲವು ಸಮಯದ ಮೇಲೆ ಸುರಥೆಯು ಮೃತಳಾದಳು. ಶ್ವೇತವೆಂಬ ಮಗನೂ ಮೃತನಾದನು. ಶಂಖ ಎಂಬ ಮಗನು ತನ್ನ ಸೋದರಮಾವನ ಮನೆಗೆ ಹೋಗಿ ಅಲ್ಲಿ ಬೆಳೆಯುತ್ತಿದ್ದನು.

ತರುವಾಯ ವಿರಾಟರಾಜನು ಸುದೇಷ್ಣೆಯನ್ನು ಮದುವೆಯಾಗಿ ಪತ್ನೀ ವಿಯೋಗ ದುಃಖವನ್ನು ಪರಿಹರಿಸಿಕೊಂಡನು. ತರುವಾಯ ಸುದೇಷ್ಣೆಯು ವಿರಾಟನಿಂದ ಉತ್ತರ ಎಂಬ ಗಂಡುಮಗುವನ್ನು ಉತ್ತರೆಯೆಂಬ ಹೆಣ್ಣು ಮಗುವನ್ನೂ ಹಡೆದಳು. ಕೀಚಕನು ತನ್ನ ಚಿಕ್ಕಮ್ಮನ ಮಗಳಾದ ಸುದೇಷ್ಣೆಯ ಮೇಲೆ ಪ್ರೀತಿಯಿಂದ ವಿರಾಟನಗರದಲ್ಲಿಯೇ ಸುಖವಾಗಿ ವಾಸಮಾಡುತ್ತಿದ್ದನು. ಪರಾಕ್ರಮಶಾಲಿಗಳಾದ

1. ಭಾ.ವಿ.ಪ ಅ-17

ಅವನ ತಮ್ಮಂದಿರೂ ಸಂತೋಷದಿಂದ ಆ ಜ್ಯೇಷ್ಠನಾದ ಕೀಚಕನನ್ನೇ ಅನುಸರಿಸುತ್ತಾ ವಿರಾಟರಾಜನ ಬಲವನ್ನು ಕೋಶವನ್ನು ಅಭಿವೃದ್ಧಿಗೊಳಿಸುತ್ತಿದ್ದರು. ಬಾಣಾಸುರನೇ ಆಜ್ಯೇಷ್ಠ ಕೀಚಕನಾಗಿದ್ದನು. ಕಾಲೇಯ ಎಂದು ಹೆಸರುಳ್ಳ ದಾನವರು ನೂರ ಐದು ಕೀಚಕರಾಗಿ ಹುಟ್ಟಿದ್ದರು.

ಜ್ಯೇಷ್ಠನಾದ ಕೀಚಕನು ಸರ್ವಾಸ್ತ್ರಗಳನ್ನೂ ತಿಳಿದವ ನಾಗಿದ್ದನು. ಬಲಿಷ್ಠನು ಭಯಂಕರ ಪರಾಕ್ರಮವುಳ್ಳವನು. ಧರ್ಮಮರ್ಯಾದೆಯನ್ನು ಮೀರಿದವನಾಗಿ ಜನರಿಗೆ ಭಯವನ್ನು ಉಂಟುಮಾಡುತ್ತಿದ್ದನು. ವಿರಾಟರಾಜನು ಆ ಬಲಿಷ್ಠನ ಸಹಾಯದಿಂದ ಎಲ್ಲಾ ಶತ್ರುಗಳನ್ನು ಜಯಿಸಿದ್ದನು. ಶೂರರಾದ ರಾಜರೆಲ್ಲರೂ ಯುದ್ಧದಲ್ಲಿ ಕೀಚಕನೊಡನೆ ಸೋತು ದಿಕ್ಕುದಿಕ್ಕುಗಳಿಗೆ ಓಡುತ್ತಿದ್ದರು. ಈ ಪ್ರಕಾರವಾಗಿ ಪರಾಕ್ರಮಶಾಲಿಯಾದ ಹತ್ತುಸಾವಿರ ಆನೆಗಳ ಬಲವುಳ್ಳ ಆ ಕೀಚಕನನ್ನು ತನ್ನ ಸೇನಾನಾಯಕನನ್ನಾಗಿ ಮಾಡಿಕೊಂಡನು. ವಿರಾಟನಿಗೂ ಹತ್ತು ಜನ ತಮ್ಮಂದಿರು ಇದ್ದರು. ಅವರೂ ಕೀಚಕರನ್ನು ಅನುಸರಿಸುತ್ತಿದ್ದರು. ಈರೀತಿಯಾಗಿ ಬಲವುಳ್ಳ ಭಯಂಕರವಾದ ಕೀಚಕನೂ ಅವನ ತಮ್ಮಂದಿರೂ ವಿರಾಟರಾಜನಿಗೇ ಹಿತೈಷಿಗಳಾಗಿ ಇದ್ದರು. ಮಹಾಬಾಹುಬಲಶಾಲಿಯಾದ ಭೀಮಸೇನದೇವರು ಆ ಕೀಚಕನನ್ನು ಸಂಹರಿಸಬೇಕೆಂದು ಯೋಚಿಸಿ ಧರ್ಮರಾಜನಿಂದ ತಡೆಯಲ್ಪಟ್ಟವರಾಗಿ ಮನಸ್ಸಿನಲ್ಲಿಯೇ ರೋಷವನ್ನು ಇಟ್ಟುಕೊಂಡು ಅಡಿಗೆ ಮನೆಗೆ ಹೋಗಿ ಆ ರಾತ್ರಿಯಲ್ಲಿ ಮಲಗಿಕೊಂಡರು.



## ದ್ರೌಪದೀದೇವಿಯರು ಭೀಮಸೇನ ದೇವರನ್ನು ಎಬ್ಬಿಸಿದ್ದು[1]

ಸೂತಪುತ್ರನಿಂದ ಬಡೆಯಲ್ಪಟ್ಟ ದ್ರೌಪದೀದೇವಿಯರು ಲೋಕರೀತಿಯಿಂದ ದುಃಖಪಡುತ್ತಾ ಆ ಪಾಪಿಯನ್ನು ಕೊಲ್ಲಿಸಬೇಕೆಂದು ಯೋಚಿಸಿದರು. ವಸ್ತ್ರವನ್ನು ಮೈಯನ್ನು ನೀರಿನಿಂದ ತೊಳೆದುಕೊಂಡರು. ನಾನು ಎಲ್ಲಿಗೆ ಹೋಗಲಿ'. ಏನನ್ನು ಮಾಡಲಿ? ನನ್ನ ಕಾರ್ಯವು ಹೇಗೆ ಕೈಗೂಡುವುದು? ಈರೀತಿಯಾಗಿ ಲೋಕ ರೀತಿಯಾಗಿ ಯೋಚಿಸುತ್ತಾ ಭೀಮಸೇನದೇವರನ್ನೇ ಮನಸ್ಸಿನಲ್ಲಿ ಹೊಂದಿದರು. ಭೀಮಸೇನದೇವರನ್ನು ಬಿಟ್ಟು ಮತ್ತೆ ಯಾರೊಬ್ಬರೂ ತನ್ನ ಕಾರ್ಯವನ್ನು

1. ಭಾ.ವಿ.ಪ ಅ-17

ಮಾಡುವವರಿಲ್ಲ ಎಂದುಕೊಂಡರು. ತರುವಾಯ ಅವರು ರಾತ್ರಿಯಲ್ಲಿ ತನ್ನ ಹಾಸಿಗೆಯಿಂದ ಎದ್ದು ಅಡಿಗೆಯ ಮನೆಗೆ ಹೋಗಿ 'ಭೀಮಸೇನ! ಏಳಿರಿ. ಏಳಿರಿ ಮೃತರಾದವರಂತೆ ಯಾಕೆ ಮಲಗಿರುವಿರಿ? ನಿಮ್ಮ ಪತ್ನಿಯನ್ನು ಪೀಡಿಸಿದ ಆ ಪಾಪಿಷ್ಠನು ಸಾಯಲಿಲ್ಲ. ಪಾಪಿಷ್ಠನಾದ ನನ್ನ ದ್ವೇಷಿಯಾದ ಆ ಪಾಪಕಾರ್ಯವನ್ನು ಮಾಡಿದ ಸೇನಾಧಿಪತಿಯು ಬದುಕಿರುವಾಗ ನೀವು ಹೇಗೆ ನಿದ್ರೆಯನ್ನು ಮಾಡುವಿರಿ?' ಎಂದು ಹೇಳಿದರು.

ಸುಖವಾಗಿ ಅಡಿಗೆಮನೆಯಲ್ಲಿ ಮಲಗಿದ್ದ ಭೀಮಸೇನದೇವರು ಆ ಶಬ್ದವನ್ನು ಕೇಳಿ ಹಾಸಿಗೆಯಿಂದ ಎದ್ದರು. ದ್ರೌಪದೀದೇವಿಯರನ್ನು ಮಂಚದಲ್ಲಿ ಕೂತುಕೊಳ್ಳಿಸಿ 'ಯಾವ ಪ್ರಯೋಜನಕ್ಕಾಗಿ ಅವಸರದಿಂದ ನನ್ನ ಬಳಿಗೆ ಬಂದಿರುವಿ? ನಿನ್ನ ಮೈಯ ಬಣ್ಣವು ಪೂರ್ವದಂತೆ ಇರುವುದಿಲ್ಲ. ಕೃಶಳಾಗಿ ಕಾಣಿಸುವಿ. ಪ್ರಸಿದ್ಧವಾದ ವಿಷಯವೋ, ರಹಸ್ಯವಾದ ವಿಷಯವೋ ಏನಿದ್ದರೂ ತಿಳಿಸುವವಳಾಗು. ಎಲ್ಲವನ್ನೂ ನನಗೆ ತಿಳಿಯುವಂತೆ ಹೇಳು. ಅಶಕ್ಯವಾದ ಕಾರ್ಯವನ್ನಾದರೂ ನಾನು ಮಾಡಿಯಾಯಿತೆಂದು (ಮಾಡಿದೆ ಎಂದು) ಭಾವಿಸುವವಳಾಗು. ಕೃಷ್ಣೆಯೇ! ಸರ್ವಕಾರ್ಯಗಳಲ್ಲಿಯೂ ನಾನೇ ನಿನಗೆ ವಿಶ್ವಾಸಕ್ಕೆ ಅರ್ಹನಾದವನು. ನಾನು ನಿನ್ನನ್ನು ಪುನಃ ಪುನಃ ಆಪತ್ತು ಬಂದಾಗೆಲ್ಲಾ ಬಿಡಿಸಿದವನು. ಆದುದರಿಂದ ನೀನು ಬೇಗನೇ ಆಗಬೇಕಾದ ಕಾರ್ಯವನ್ನು ತಿಳಿಸಿ ಹೊರಟುಹೋಗುವವಳಾಗು. ಇನ್ನೊಬ್ಬರು ಏಳುವ ಮೊದಲೇ ನಿನ್ನ ಹಾಸಿಗೆಯ ಬಳಿಗೇ ಹೋಗು' ಎಂದು ಹೇಳಿದರು.

ಆಗ ದ್ರೌಪದೀದೇವಿಯರು ಲಜ್ಜೆಯುಳ್ಳವರಾಗಿ ಭಯವುಳ್ಳವರಾಗಿ ಮುಖವನ್ನು ತಗ್ಗಿಸಿಕೊಂಡು ಕಣ್ಣಿನಲ್ಲಿ ನೀರನ್ನು ತುಂಬಿಕೊಂಡು ಒಂದು ಮಾತನ್ನೂ ಆಡಲಿಲ್ಲ. ತರುವಾಯ ಭಯಂಕರಪರಾಕ್ರಮವುಳ್ಳ ಭೀಮಸೇನದೇವರು ಸುಂದರಿ! ಪ್ರಿಯೆ! ನಿನಗೆ ಯಾವ ಪ್ರಿಯಕಾರ್ಯವನ್ನು ಮಾಡಬೇಕು' ಎಂದು ಕೇಳಿದರು.

'ಯಾರಿಗೆ ಧರ್ಮರಾಜನು ಗಂಡನಾಗಿರುವನೋ ಅವಳು ದುಃಖಪಡದೆ ಏನು ಮಾಡಲಿ? ಭೀಮ! ನನ್ನ ಎಲ್ಲಾ ದುಃಖಗಳನ್ನು ತಿಳಿದುಕೊಂಡೇ ಕೇಳುತ್ತಿರುವಿರಿ. ಪೂರ್ವದಲ್ಲಿ ಪ್ರಾತಿಕಾಮಿಯೆಂಬುವನು ನನ್ನ ದಾಸಿಯೆಂದು ಹೇಳಿ ಪಗಡೆ ಆಟದ ಸಭೆಗೆ ಬರಬೇಕೆಂದು ಕೂಗಿದನು. ಅದೇ ನನ್ನ ಮರ್ಮಸ್ಥಾನಗಳನ್ನು ಭೇದಿಸುತ್ತಾ ಇದೆ. ಹಸ್ತಿನಾವತಿಯಲ್ಲಿ ರಾಜರು ಕೂತಿದ್ದ ಸಭೆಯಲ್ಲಿ ದುಃಶಾಸನನು ರಜಸ್ವಲೆಯಾದ ನನ್ನ ತಲೆಕೂದಲನ್ನು ಹಿಡಿದು ಸೆಳೆದುಕೊಂಡು ಬಂದನು. ಅಲ್ಲಿ ಇದ್ದ ಕ್ಷತ್ರಿಯರೂ,

ಕರ್ಣನೇ ಮೊದಲಾದವರೂ ದುರ್ಯೋಧನನೂ, ಮಾವಂದಿರೂ, ಭೀಷ್ಮಾ ಚಾರ್ಯರೂ, ವಿದುರನೂ, ದ್ರೋಣಾಚಾರ್ಯರೂ, ಕೃಪಾಚಾರ್ಯರೂ ಎಲ್ಲರೂ ನೋಡುತ್ತಲೇ ಇದ್ದರು. ನೀವು ಬದುಕಿರುವಾಗ ನಾನು ಮಾವಂದಿರ ಮಧ್ಯದಲ್ಲಿ ಸಹೋದರರ ಮಧ್ಯದಲ್ಲಿ ಕೂದಲಲ್ಲಿ ಹಿಡಿದು ಸಭೆಗೆ ಸೆಳಕೊಂಡು ಬರಲ್ಪಟ್ಟೆನು. ತರುವಾಯ ನಾನು ರಾಜ್ಯದಿಂದ ವನಕ್ಕೆ ಬಂದಾಗ ಅಲ್ಲಿಯೂ ಜಟಾಸುರನ ಉಪದ್ರವನ್ನು ಹೊಂದಿದೆನು. ನನ್ನಂತೆ ಇರುವ ಯಾವ ರಾಜಪುತ್ರಿಯು, ಈ ದ್ರೌಪದಿಯನ್ನು ಹೊರತುಪಡಿಸಿ, ಅತ್ಯಂತ ದುಃಖವನ್ನು ಅನುಭವಿಸಿ ಜೀವಿಸುವಳು? ವನವಾಸದಲ್ಲಿ ಇರುವಾಗ ನನ್ನನ್ನು ಪಾಪಿಯಾದ ಸೈಂಧವನು ಸೆಳೆದುಕೊಂಡು ಹೋದನು. ಇದನ್ನೆಲ್ಲಾ ಯಾರು ಸಹಿಸುವರು? ತರುವಾಯ ನೀವು ಬದುಕಿರುವಾಗ ಹನ್ನೆರಡು ವರ್ಷ ಸಮಯ ಕಾಡಿನಲ್ಲಿ ಗೆಡ್ಡೆ ಹಣ್ಣುಗಳನ್ನು ತಿನ್ನುತ್ತಾ ದುರ್ಗಪ್ರದೇಶಗಳಲ್ಲಿ ಸಂಚರಿಸಿದೆನು. ಆಮೇಲೆ ಇಲ್ಲಿಗೆ ಬಂದು ಸುದೇಷ್ಣೆಯ ಪರಿಚಾರಿಕೆಯಾಗಿರುವೆನು. ಇನ್ನೊಬ್ಬ ಹೆಂಗಸನ್ನು ಸೇವಿಸುತ್ತಿರುವೆನು. ನೀವು ಬದುಕಿರುವಾಗ ನಿತ್ಯವೂ ವಿರಾಟರಾಜನಿಗಾಗಿ ಗಂಧವನ್ನು ತೇಯುತ್ತಿರುವೆನು. ವಿರಾಟರಾಜನ ಎದುರಲ್ಲಿಯೇ ಆತನು ನೋಡುತ್ತಿರುವಂತೆ ಕೀಚಕನಿಂದ ನಾನು ಪಾದದಿಂದ ಒದೆಯಲ್ಪಟ್ಟ ನನ್ನಂತೆ ಇರುವ ಇನ್ನೊಬ್ಬ ಹೆಂಗಸು ಯಾರು ತಾನೇ ಬದುಕಿರುವಳು? ಈರೀತಿಯಾಗಿ ನಾನಾ ವಿಧ ದುಃಖಗಳಿಂದ ಪೀಡಿತಳಾಗಿರುವೆನು. ಇದು ನಿಮಗೆ ತಿಳಿಯದೆ ಹೋಯಿತೇ? ನಾನು ಬದುಕಿ ಏನು ಪ್ರಯೋಜನವಿದೆ? ನಾನು ಸಾಮಾನ್ಯ ಸ್ತ್ರೀಯಲ್ಲ. ದ್ರುಪದರಾಜನ ಮಗಳಾಗಿರುವೆನು. ದೃಷ್ಟದ್ಯುಮ್ನನ ತಂಗಿಯು. ಅಗ್ನಿಕುಂಡದಿಂದ ಹುಟ್ಟಿರುವೆನು.

ನೀವು ಕೀಚಕನನ್ನು ಕೊಲ್ಲದೆ ಹೋದರೆ ಕುತ್ತಿಗೆಗೆ ಕಲ್ಲುಕಟ್ಟಿಕೊಂಡು ನೀರಿನಲ್ಲಿ ಹಾರುವೆನು. ಅಥವಾ ವಿಷವನ್ನು ಪಾನಮಾಡುವೆನು. ಅಥವಾ ಬೆಂಕಿಯಲ್ಲಿ ಪ್ರವೇಶಮಾಡುವೆನು. ಮರಕ್ಕೆ ಹತ್ತಿ ಕೆಳಗೆ ಹಾರಿಯೋ ಶಸ್ತ್ರದಿಂದ ಕುಕ್ಕಿಕೊಂಡೋ ದೇಹವನ್ನು ಪರಿತ್ಯಜಿಸುವೆನು. ನಾನು ಬದುಕಿ ಏನು ಪ್ರಯೋಜನವಿದೆ? ವಿರಾಟರಾಜನ ಸೇನಾಧಿಪತಿಯಾದ ಭಾವಮೈದುನನಾದ ಪರಮದುರ್ಬುದ್ಧಿಯುಳ್ಳ ಕೀಚಕನು ಸೈರಂಧ್ರಿ ವೇಷದಿಂದ ರಾಜನ ಮನೆಯಲ್ಲಿ ವಾಸಮಾಡುತ್ತಿರುವ ನನ್ನನ್ನು ನೋಡಿ ನಿತ್ಯವೂ ಹೆಂಡತಿಯಾಗು ಎಂದು ಹೇಳುತ್ತಿರುವನು. ಹೀಗೆ ಅಯೋಗ್ಯನು ಹೇಳುತ್ತಿರುವಾಗ ನನ್ನ ಎದೆಯು ಸೀಳಿಹೋಗುವುದು. ನೀವೇ ನನಗೆ ರಕ್ಷಕರಾಗ ಬೇಕು. ನಾನು ಧರ್ಮರಾಜರ ಬಳಿಗೆ ಹೋಗಲಾರೆನು. ನಿರುದ್ಯೋಗಿಯಾದ

ಸ್ವಲ್ಪವೂ ಕೋಪವಿಲ್ಲದಿರುವ ಪರಾಕ್ರಮವಿಲ್ಲದಿರುವ ಇಂತಹ ಮಗನನ್ನು (ಧರ್ಮರಾಜನನ್ನು) ಯಾವ ಹೆಂಗಸೂ ಹಡೆಯಲಾರಳು. ನಿಮ್ಮ ಕೋಪವನ್ನೂ ಬಲವನ್ನೂ ಪರಾಕ್ರಮವನ್ನೂ ತಿಳಿದಿರುವೆನು. ಆದುದರಿಂದ ನಿಮ್ಮ ಮುಂಭಾಗದಲ್ಲಿ ಕೂಗಿಕೊಳ್ಳುತ್ತಿರುವೆನು. ಅರವತ್ತುವರ್ಷದ ಯೌವನವುಳ್ಳ ಆನೆಯು ಭೂಮಿಯಲ್ಲಿ ಬಿದ್ದಿರುವ ಬಿಲ್ವಫಲವನ್ನು ಕಾಲಿನಿಂದ ಮೆಟ್ಟಿ ಪೀಡಿಸುವಂತೆ ಕೀಚಕನ ತಲೆಯನ್ನು ಕೆಳಗೆ ಹಾಕಿ ಎಡಪಾದದಿಂದ ಮೆಟ್ಟಬೇಕು. ಆ ಕೀಚಕನು ಈ ರಾತ್ರಿಯನ್ನು ಕಳೆದು ನಾಳೆ ಸೂರ್ಯೋದಯವನ್ನು ನೋಡುವವ ನಾದರೆ ನಾನು ಬದುಕಿರಲಾರೆನು. ನನ್ನ ಪ್ರಾಣದ ಆಣೆಯಿಟ್ಟು ಹೇಳುವೆನು. ಹಾಗೆಯೇ ಅರ್ಜುನನ ಪುಣ್ಯದ ಆಣೆಯನ್ನು, ಧರ್ಮರಾಜನ ಪಾದದ ಆಣೆಯನ್ನು, ನಕುಲಸಹದೇವರ ಜೀವಿತದ ಆಣೆಯನ್ನು ಇಟ್ಟುಹೇಳುತ್ತೇನೆ. ನೀವೀಗ ಕೀಚಕನ ಸಂಹಾರವನ್ನು ಪ್ರತಿಜ್ಞಾಮಾಡದೆ ಇದ್ದರೆ ನಾನು ಬದುಕಲಾರೆನು. ದುಷ್ಟವಾದ ದ್ಯೂತವನ್ನು ಆಡಿದ ನಿಮ್ಮ ಅಣ್ಣನನ್ನು ನಿಂದಿಸಿರಿ. ಅವರ ಕರ್ಮದಿಂದ ನಾನು ಇಂತಹ ಅನಂತದುಃಖವನ್ನು ಹೊಂದಿರುವೆನು. ಯಾವ ನಿಮ್ಮ ಮುಖ್ಯರಾದ ಅಣ್ಣನು ಕುಲಹಾಳು ಮಾಡುವವರಾಗಿರುವರು. ನೀವೂ ಒಳ್ಳೇ ಬುದ್ಧಿಯುಳ್ಳವರೂ ಅವರನ್ನು ಅನುಸರಿಸಿರುವಿರಿ. ಮಹಾರಾಜ್ಯವನ್ನು ಬಿಟ್ಟು ಕೃಷ್ಣಾಜಿನವನ್ನು ಧರಿಸಿಕೊಂಡು ವನವಾಸ ಮಾಡಿದಿರಿ. ಒಂದೊಂದು ಆಟದಲ್ಲಿ ಹತ್ತುಸಾವಿರ ಬಂಗಾರದ ನಾಣ್ಯಗಳನ್ನು ಪಂಥವಾಗಿ ರಾತ್ರಿಹಗಲೂ ಆಡುತ್ತಾ ಬಂದರೆ ಹತ್ತು ಸಾವಿರ ವರ್ಷವಾದರೂ ವೆಚ್ಚವಾಗದೆ ಇರುವ ಬಂಗಾರವಸ್ತ್ರವಾಹನ ಇತ್ಯಾದಿಗಳು ಇದ್ದವು. ಅಷ್ಟನ್ನೂ ಪಗಡೆ ಆಟದಲ್ಲಿ ಬೇಗನೆ ಕಳೆದುಕೊಂಡರು. ಪಗಡೆ ಆಟದಿಂದ ಎಲ್ಲವನ್ನೂ ಕಳೆದುಕೊಂಡು ಈಗ ತಾನು ಮಾಡಿದ್ದನ್ನು ಯೋಚಿಸುತ್ತಾ ಕೂತಿರುವರು.

ಯಾವ ಧರ್ಮರಾಜರು ಎಲ್ಲಿಗಾದರೂ ಹೋಗುವಾಗ ಅವರ ಹತ್ತು ಸಾವಿರ ಆನೆಗಳೂ ಹತ್ತುಸಾವಿರ ಕುದುರೆಗಳೂ ಹೋಗುತ್ತಾ ಇದ್ದವು. ಅವರೀಗ ಪಗಡೆ ಆಟವಾಡುತ್ತಾ ಜೀವಿಸುತ್ತಿರುವರು. ಇಂದ್ರಪ್ರಸ್ಥದಲ್ಲಿ ಇರುವಾಗ ಯಾವ ಧರ್ಮರಾಜರನ್ನು ನೂರು ಸಾವಿರ ಸುಂದರಿಯರಾದ ಸ್ತ್ರೀಯರು ಸೇವಿಸುತ್ತಿದ್ದರು. ನೂರಾರು ಸಾವಿರ ದಾಸಿಯರು ಅಡಿಗೆಮನೆಯಲ್ಲಿ ರಾತ್ರಿಹಗಲೂ ಅತಿಥಿಗಳನ್ನು ಭೋಜನ ಮಾಡಿಸುತ್ತಾ ಇದ್ದರು. ಪ್ರತಿನಿತ್ಯವೂ ಬೆಳಿಗ್ಗೆ ಸಾವಿರಬಂಗಾರದ ನಾಣ್ಯಗಳನ್ನು ದಾನ ಮಾಡುತ್ತಿದ್ದರು. ಅವರೀಗ ಇಂತಹ ಮಹಾ ಅನರ್ಥವನ್ನು ಹೊಂದಿರುವರು. ಯಾವ ಧರ್ಮರಾಜರು ಇಂದ್ರಪ್ರಸ್ಥದಲ್ಲಿ ಇರುವಾಗ ನಾನಾವಿಧ

ಬ್ರಾಹ್ಮಣರಿಗೆ ಅನ್ನವನ್ನು ಹಾಕುತ್ತಿದ್ದರೋ ಅವರು ಈಗ ವಿರಾಟರಾಜನ ಪರಿಚರ್ಯೆಯನ್ನು ಮಾಡುತ್ತಿರುವರು. ಇಂದ್ರಪ್ರಸ್ಥದಲ್ಲಿ ವಾಸಿಸುವಾಗ ಯಾರಿಗೆ ಎಲ್ಲಾ ರಾಜರೂ ಕಪ್ಪವನ್ನು ಕೊಡುತ್ತಿದ್ದರೋ ಅವರು ಈಗ ಇನ್ನೊಬ್ಬರ ಸಂಬಳದಿಂದ ಜೀವಿಸುತ್ತಿರುವರು. ಎಲ್ಲಾ ರಾಜರೂ ಪೂರ್ವದಲ್ಲಿ ಯಾರ ವಶರಾಗಿದ್ದರೋ ಅವರು ಈಗ ಇನ್ನೊಬ್ಬರ ವಶದಲ್ಲಿ ಇದ್ದಾರೆ. ಪೂರ್ವದಲ್ಲಿ ಸಂಪೂರ್ಣವಾದ ಭೂಮಿಯನ್ನು ಹೊಂದಿ ಈಗ ಇನ್ನೊಬ್ಬರ ಸಭಿಕರಾಗಿ ಕೂತಿರುವರು. ಯಾರು ಸಭೆಯಲ್ಲಿ ಕೂತಿರುವಾಗ ಸುತ್ತಲೂ ಋಷಿಗಳು ಕೂತಿದ್ದರೋ ಅವರು ವಿರಾಟರಾಜನ ಬಳಿಯಲ್ಲಿ ಕೂತಿರುವುದನ್ನು ನೋಡಿರಿ. ಅಂತಹ ಧರ್ಮರಾಜರನ್ನು ನೋಡಿ ಯಾರಿಗೆ ದುಃಖವುಂಟಾಗಲಾರದು? ಭೀಮ! ಈರೀತಿಯಾಗಿ ನಾನಾವಿಧದುಃಖ ಗಳಿಂದ ಪೀಡಿತಳಾದ ದುಃಖಸಮುದ್ರದಲ್ಲಿಯೂ ಮುಳುಗಿರುವ ನನ್ನನ್ನು ತಿಳಿಯಲಿಲ್ಲವೇ? ಇದೊಂದು ನನಗೆ ಮಹಾದುಃಖಕರವಾಗಿದೆ. ಹೇಳುವೆನು. ನನ್ನ ಮೇಲೆ ಅಸೂಯಾಪಡಬಾರದು. ನಾನು ದುಃಖದಿಂದ ಹೇಳುತ್ತೇನಷ್ಟೇ! ನನ್ನ (ಪರಿಸ್ಥಿತಿಯನ್ನು) ಭಾವವನ್ನು ನೋಡಿ ಅಂತಃಪುರದಲ್ಲಿ ಹೆಂಗಸರೆಲ್ಲರೂ ನಗುವವರಾದರು(ನಗುತ್ತಿದ್ದಾರೆ). ಆಗ ಸುದೇಷ್ಣೆಯು ಎಲ್ಲಾ ಸ್ತ್ರೀಯರೊಡನೆ ನನ್ನನ್ನು ನೋಡಿ 'ಇವಳು ಸಹವಾಸದಿಂದ ಉಂಟಾದ ಸ್ನೇಹದಿಂದ ಯುದ್ಧಮಾಡುತ್ತಿರುವ ವಲಲನನ್ನು ನೋಡಿ ದುಃಖಪಡುತ್ತಿರುವಳು. ಸೈರಂಧ್ರಿಯು ಚೆಂದಾಗಿ ಇರುವಳು. ವಲಲನೂ ಸುಂದರನಾಗಿರುವನು. ಹೆಂಗಸರ ಮನಸ್ಸನ್ನು ಕಂಡುಹಿಡಿಯಲಿಕ್ಕೆ ಆಗಲಾರದು. ಇಬ್ಬರೂ ಅನ್ಯೋನ್ಯಯುಕ್ತರಾಗಿರುವರು. ನಮ್ಮ ಮನೆಗೂ ಇಬ್ಬರೂ ಒಂದೇ ಸಮಯದಲ್ಲಿ ಬಂದು ಸೇರಿದರು' ಎಂದು ಹೇಳಿದಳು. ಅದನ್ನು ಕೇಳಿ ನಾನು ಕೋಪಿಸಿಕೊಂಡುದನ್ನು ನೋಡಿ ನನ್ನನ್ನು ನಿಮ್ಮ ವಿಷಯದಲ್ಲಿ ಸಂದೇಹಪಟ್ಟಳು.

ಈರೀತಿಯಾಗಿ ದ್ರೌಪದೀದೇವಿಯರು ಹೇಳುತ್ತಿರಲು ಭೀಮಸೇನದೇವರು ಒಂದು ಮಾತನ್ನು ಆಡಲಿಲ್ಲ. ಕೋಪದಿಂದ ಕಣ್ಣುಗಳನ್ನು ಕೆಂಪುಮಾಡಿಕೊಂಡರು. ಭೀಮಸೇನದೇವರು ರೋಷವುಳ್ಳವರಾಗಿರುವರು ಎಂದು ತಿಳಿದು ಪುನಃ ದ್ರೌಪದೀದೇವಿಯರು ಹೇಳಿದರು.

ಧರ್ಮರಾಜರ ನಿಮಿತ್ತದಿಂದ ಬಂದಿರುವ ಶೋಕದಲ್ಲಿ ಮುಳುಗಿರುವ ನಾನು ಜೀವಿಸಲಿಕ್ಕೆ ಇಚ್ಛಿಸುವುದಿಲ್ಲ. ಯಾವ ಅರ್ಜುನರು ಒಬ್ಬರೇ ದೇವತೆಗಳನ್ನು ಮನುಷ್ಯ ರನ್ನೂ ಜಯಿಸಿರುವರೋ ಅವರು ವಿರಾಟರಾಜರ ಹೆಣ್ಣುಮಕ್ಕಳಿಗೆ ಕುಣಿಯಲಿಕ್ಕೆ ಹೇಳಿಕೊಡುತ್ತಿರುವರು. ವೇಷಮರೆಮಾಡಿಕೊಂಡು ಹೆಣ್ಣುಮಕ್ಕಳ ಪರಿಚಾರವನ್ನು

ಮಾಡುತ್ತಿರುವರು. ಯಾರು ಖಾಂಡವವನದಲ್ಲಿ ಅಗ್ನಿದೇವರಿಗೆ ಸಂತೋಷಪಡಿಸಿ ರುವರೋ ಅವರು ಅಂತಃಪುರದಲ್ಲಿ ಬಾವಿಯಲ್ಲಿರುವ ಬೆಂಕಿಯಂತೆ ಮರೆಯಾಗಿ ಇರುವರು. ಯಾರಿಂದ ಶತ್ರುಗಳಿಗೆ ನಿತ್ಯವೂ ಭಯವಿದ್ದಿತೋ ಆ ಅರ್ಜುನರು ಈಗ ಲೋಕದಲ್ಲಿ ನಿಂದ್ಯವಾದ ನಪುಂಸಕ ವೇಷದಿಂದ ಇರುವರು. ಯಾರ ಧನುಸ್ಸಿನ ಹಗ್ಗದ ಶಬ್ದದಿಂದ ಶತ್ರುಗಳು ಭಯಪಡುತ್ತಿದ್ದರೋ ಆ ಅರ್ಜುನರು ಈಗ ನಪುಂಸಕವೇಷವನ್ನು ಧರಿಸಿಕೊಂಡು ಗಾಯನವನ್ನು ನರ್ತನವನ್ನು ಹೇಳಿಕೊಡುವು ದನ್ನು ನೋಡಿ ನನ್ನ ಮನಸ್ಸು ಸ್ವಸ್ಥವಾಗಿ ಇರುವುದಿಲ್ಲ. ಹೆಂಗಸರು ಅವರ ಗಾಯನಸ್ವರವನ್ನು ಕೇಳಿ ಸಂತೋಷದಿಂದ ಸೇವಿಸುತ್ತಾರೆ. ಯಾರ ತಲೆಯಲ್ಲಿ ಸೂರ್ಯನಂತೆ ಪ್ರಕಾಶಮಾನವಾದ ಕಿರೀಟವು ಶೋಭಿಸುತ್ತಾ ಇತ್ತೋ ಅವರು ಈಗ ಜಡೆಯನ್ನು ಧರಿಸಿಕೊಂಡು ಇರುವರು. ಯಾವ ಮಹಾನುಭಾವರಲ್ಲಿ ದಿವ್ಯಅಸ್ತ್ರಗಳು ಇದ್ದವೋ ಯಾರು ಸರ್ವವಿದ್ಯೆಗಳಿಗೆ ಆಧಾರಭೂತರೋ ಯಾರನ್ನು ಯುದ್ಧದಲ್ಲಿ ಸಾವಿರಾರು ರಾಜರೂ ಅತಿಕ್ರಮಿಸುವುದಿಲ್ಲವೋ ಆ ಅರ್ಜುನರು ಈಗ ವೇಷ ಮರೆಮಾಡಿಕೊಂಡು ವಿರಾಟರಾಜನ ಹೆಣ್ಣುಮಕ್ಕಳಿಗೆ ನರ್ತನವನ್ನು ಹೇಳಿಕೊಡು ತ್ತಿರುವರು. ಯಾರ ರಥದ ಶಬ್ದದಿಂದ ಸಂಪೂರ್ಣವಾದ ಭೂಮಿಯೂ ನಡುಗುತ್ತಿತ್ತೋ ಯಾರು ಹುಟ್ಟಲು ಕುಂತೀದೇವಿಗೆ ಪ್ರೀತಿಯು ಹೆಚ್ಚಾಯಿತೋ ಆ ನಿಮ್ಮ ತಮ್ಮಂದಿರಾದ ಅರ್ಜುನರು ನನಗಾಗಿ ಸ್ವಲ್ಪವೂ ದುಃಖವನ್ನು ಹೊಂದುವು ದಿಲ್ಲ. ಜೋಲುವ ತೋಡುಗಳನ್ನು ಕಿವಿಗಳಲ್ಲಿ ಹಾಕಿಕೊಂಡು ಕೈಗಳಲ್ಲಿ ಬಳೆಗಳನ್ನು ಧರಿಸಿಕೊಂಡು ತಲೆಯಲ್ಲಿ ಜಡೆ ಹಾಕಿಕೊಂಡು ಸುತ್ತಲೂ ಕನ್ಯೆಯರಿಂದ ಸಹಿತರಾಗಿ ಇರುವ ಅರ್ಜುನರನ್ನು ನೋಡಿದಾಗ ನನ್ನ ಮನಸ್ಸು ತುಂಬಾ ದುಃಖಪಡುವುದು. ಹೆಣ್ಣು ಆನೆಗಳ ಮಧ್ಯದಲ್ಲಿ ಇರುವ ಗಂಡು ಆನೆಯಂತೆ ಸುತ್ತಲೂ ಕನ್ಯೆಯರಿಂದ ಕೂಡಿಕೊಂಡು ವಿರಾಟರಾಜನನ್ನು ಸ್ತೋತ್ರ ಮಾಡುತ್ತಾ ಸೇವಿಸುತ್ತಿರುವ ವಾದ್ಯಗಳ ಮಧ್ಯದಲ್ಲಿ ಇರುವ ಅರ್ಜುನರನ್ನು ನೋಡಿ ನನ್ನ ಮನಸ್ಸು ಮೋಹಿತವಾಗುವುದು. ಪೂಜ್ಯರಾದ ಕುಂತೀದೇವಿಯರು ಈರೀತಿಯಾಗಿ ಆಪತ್ತನ್ನು ಹೊಂದಿರುವ ಅರ್ಜುನರನ್ನು ತಿಳಿದಿಲ್ಲ ಎಂದು ಭಾವಿಸುವೆನು. ಯಾವ ಅರ್ಜುನರು ಅಗ್ನಿದೇವರಿಗೆ ಖಾಂಡವವನವನ್ನು ಭಕ್ಷಿಸಲಿಕ್ಕೆ ಕೊಟ್ಟು ಆಗ ಯುದ್ಧಕ್ಕೆ ಬಂದ ದೇವತೆಗಳನ್ನು ಎಲ್ಲರನ್ನೂ ಐಂದ್ರವರುಣಾದಿ ಅಸ್ತ್ರಗಳಿಂದ ಜಯಿಸಿದರೋ ಅಂತಹ ಅರ್ಜುನರು ನಿವಾತಕವಚರೆಂಬ ದೈತ್ಯರನ್ನು ಜಯಿಸಿದರೋ ಮಹಾತಪಸ್ಸನ್ನು ಮಾಡಿ ಯುದ್ಧದಿಂದ ರುದ್ರದೇವರನ್ನು ಜಯಿಸಿದರೋ ಅಂತಹ ಅರ್ಜುನರು ಸ್ತ್ರೀವೇಷ

ವನ್ನು ಹಾಕಿಕೊಂಡು ಇರುವುದನ್ನು ನೋಡಿದಾಗ ನನ್ನ ಮನಸ್ಸು ಕುಂತೀದೇವಿಯ ರನ್ನು ಸ್ಮರಿಸುವುದು.

ಕುದುರೆಯ ಕೆಲಸವನ್ನು ಮಾಡುತ್ತಿರುವ ನಕುಲನನ್ನು, ಗೋವುಗಳ ಕೆಲಸವನ್ನು ಮಾಡುತ್ತಿರುವ ಸಹದೇವನನ್ನು ನೋಡಿಯೂ ನನ್ನ ಮನಸ್ಸಿಗೆ ತುಂಬಾ ಸಂತಾಪವಾಗುವುದು. ಅತ್ತೆಯಾದ ಕುಂತೀದೇವಿಯರು ವನಕ್ಕೆ ಬರುವಾಗ ನನ್ನೊಡನೆ 'ಸಹದೇವನನ್ನು ಚೆನ್ನಾಗಿ ನೋಡಿಕೊಳ್ಳಬೇಕೆಂದು ಅಳುತ್ತಾ ಹೇಳಿದ್ದರು. ಅಂತಹ ಸಹದೇವನು ಗೋವುಗಳ ಕೆಲಸವನ್ನು ಮಾಡುತ್ತಿರುವುದನ್ನು ನೋಡಿ ನಾನು ಬದುಕಿಕೊಂಡು ಇರುವೆನೇ? ಈರೀತಿಯಾಗಿ ಧರ್ಮರಾಜರಿಂದಾಗ ನೂರಾರು ದುಃಖವನ್ನು ಹೊಂದಿರುವೆನು. ಒಬ್ಬ ಗಂಡನುಳ್ಳ ಹೆಂಗಸು ಸುಖವಾಗಿ ಇರುವಳು. ನನಗೆ ಐದು ಜನ ಪತಿಗಳು ಇದ್ದರೂ ಅನಂತ ದುಃಖಗಳಿರುವುವು' ಎಂದು ಲೋಕರೀತಿಯಿಂದ ದ್ರೌಪದೀದೇವಿಯರು ಹೇಳುವವರಾದರು.



## ದ್ರೌಪದೀದೇವಿಯರು ಕೀಚಕನನ್ನು ಸಂಹರಿಸಲಿಕ್ಕೆ ಹೇಳಿದ್ದು [1]

ಪಗಡೆ ಆಟದಲ್ಲಿ ಆಸಕ್ತರಾದ ಆ ಧರ್ಮರಾಜರ ಕಾರಣದಿಂದ ನಾನು ಸೈರಂಧ್ರಿ ವೇಷದಿಂದ ರಾಜಮನೆಯಲ್ಲಿ ವಾಸಮಾಡುತ್ತಾ ಸುದೇಷ್ಣೆಯ ಪರಿಚಾರಿಕೆಯಾಗಿರು ವೆನು. ರಾಜಪುತ್ರಿಯಾದ ನನಗೆ ಬಂದಿರುವ ನನ್ನ ತೀವ್ರವಾದ ದುಃಖವನ್ನು ನೋಡಬೇಕು. ಸರ್ವದುಃಖವನ್ನೂ ಸಹಿಸಿಕೊಂಡು ಸರ್ವಕಾಲದಲ್ಲಿಯೂ ಸೇವೆಯನ್ನು ಮಾಡುತ್ತಿರುವೆನು. ಲೋಕದಲ್ಲಿ ಆಪತ್ತುಗಳೂ ವಿಪತ್ತುಗಳೂ ಕ್ರಮದಿಂದ ಬರುವವೆಂದು ತಿಳಿದುಕೊಂಡು ಪತಿಗಳ ಅಭ್ಯುದಯವು ಯಾವಾಗ ಬರುವುದೆಂದು ನಿರೀಕ್ಷಿಸಿಕೊಂಡು ಇರುವೆನು. ಎಷ್ಟೋ ಜನರು ಮೊದಲೂ ದಾನಮಾಡುತ್ತಿದ್ದವರು ಒಂದು ಸಮಯದಲ್ಲಿ ಯಾಚನೆ ಮಾಡುವರು. ಎಷ್ಟೋ ಜನರನ್ನು ಕೊಂದವರು ತಾವು ಸಾಯುವರು. ಎಷ್ಟೋ ಶತ್ರುಗಳನ್ನು ಬೀಳಿಸಿದವರು, ತಾವು ಶತ್ರುಗಳಿಂದ ಬೀಳುವರು. ಎಲ್ಲವೂ ದೈವದ ಅಧೀನವೆಂದು ನಿರೀಕ್ಷಿಸುತ್ತಿರು ವೆನು. ನಾನು ಎಷ್ಟು ದುಃಖವನ್ನು ಅನುಭವಿಸುತ್ತಿರುವೆನೆಂದು ಕೇಳಿರಿ. ನೀವು ಕೇಳದಿದ್ದರೂ ನಾನು ಹೇಳುವೆನು. ಪಾಂಡವರ ಪತ್ನಿಯಾದವಳು ದ್ರುಪದರಾಜನ

1. ಭಾ.ವಿ.ಪ ಅ-18, 19, 20

ಮಗಳಾದವಳು ಈ ಅವಸ್ಥೆಯನ್ನು ಹೊಂದಿದವಳು. ನಾನು ಹೊರತು ಇನ್ನೊಬ್ಬರು ಯಾರು ಜೀವಿಸುವರು? ಎಲ್ಲರನ್ನೂ ಬಿಟ್ಟು ನನಗೆ ಮಹಾದುಃಖವು ಬಂದು ಸೇರಿರುವುದು. ಸಹೋದರರಿಂದ ಮಾವಂದಿರಿಂದ ಮಕ್ಕಳಿಂದ ಕೂಡಿದ ಯಾವ ಹೆಂಗಸು ಹೀಗೆ ದುಃಖವನ್ನು ಹೊಂದುವಳು? ನಾನು ಚಿಕ್ಕತನದಲ್ಲಿ ಬಹಳ ಪಾಪವನನು ಮಾಡಿರಬೇಕು. ಆದರಿಂದ ನನಗೆ ಈರೀತಿಯಾಗಿ ದುಃಖವು ಬಂದಿರುವುದು. ನನ್ನ ಮೈಯಬಣ್ಣವನ್ನು ವಿಕಾರವನ್ನು ನೋಡಿರಿ. ನನಗೆ ಪೂರ್ವದಲ್ಲಿ ಎಂತಹ ಆಪತ್ತಿನಲ್ಲಿಯೂ ಹೀಗೆ ಆಗಿತ್ತೇ? (ಆಗಿತ್ತಿತ್ತೇ?)

ನನಗೆ ಪೂರ್ವದಲ್ಲಿ ಯಾವ ವಿಧವಾದ ಸುಖವಿತ್ತೆಂದು ನೀವೇ ತಿಳಿದಿರುವಿರಿ. ಅಂತಹ ನಾನು ಈಗ ದಾಸೀತ್ವವನ್ನು ಹೊಂದುವವಳಾಗಿ ಮನಸ್ಸಿಗೆ ಶಾಂತಿಯನ್ನು ಹೊಂದುವುದಿಲ್ಲ. ಅರ್ಜುನರೂ ಕೂಡ ರಂಗಸ್ಥಳದಲ್ಲಿ ಶಾಂತವಾದ ಅಗ್ನಿಯಂತೆ ಇರುವರು. ಇದು ದೈವೇಚ್ಛೆಯೆಂದು ತಿಳಿಯುವೆನು. ಪ್ರಾಣಿಗಳಿಗೆ ಏನೇನು ಅವಸ್ಥೆಗಳು ಬರುವುವೆಂದು ಹೇಳಲಿಕ್ಕೆ ಆಗಲಾರದು. ನಿಮಗೆ ಯೋಚನೆ ಮಾಡದೆ ಇದ್ದ ಈ ಆಪತ್ತು ಬಂದದ್ದನ್ನು ನೋಡಿರಿ. ಇಂದ್ರದೇವರಿಗೆ ಸಮಾನರಾದ ನೀವು ಯಾವ ನನ್ನ ಮುಖವನ್ನು ನೋಡುತ್ತಾ ಇದ್ದಿರೋ ಅಂತಹ ನಾನು ಇನ್ನೊಬ್ಬರ ಮುಖವನ್ನು ನೋಡುತ್ತಾ ಇರುವೆನು. ನನ್ನ ಅವಸ್ಥೆಯನ್ನು ನೋಡಬೇಕು. ನನಗೆ ಇಂತಹ ಅವಸ್ಥೆಯು ಬರಬಾರದಿತ್ತು. ಸಮುದ್ರಪರ್ಯಂತವಾದ ಭೂಮಿಯು ಯಾರ ವಶವಾಗಿದ್ದಿತೋ ಅಂತಹ ಈ ದ್ರೌಪದಿಯು ಈಗ ಸುದೇಷ್ಣೆಯ ವಶವಾಗಿರುವಳು. ಯಾವ ನನ್ನ ಹಿಂದೆಯೂ ಮುಂದೆಯೂ ಜನರು ಬರುತ್ತಿದ್ದರೋ ಆ ನಾನು ಈಗ ಸುದೇಷ್ಣೆಯ ಹಿಂದೆಯೂ ಮುಂದೆಯೂ ಹೋಗುತ್ತಿದ್ದೇನೆ. ನನಗೆ ಇದೊಂದು ಮಹಾದುಃಖವು ಬಂದಿರುವುದು. ಯಾವ ನಾನು ಪೂರ್ವದಲ್ಲಿ ಕುಂತೀದೇವಿಯರೊಬ್ಬರಿಗೆ ಹೊರತು ನನಗಾಗಿಯೂ ಕೂಡ ಗಂಧವನ್ನು ತೇಯುತ್ತಿರಲಿಲ್ಲ. ಈಗ ಗಂಧವನ್ನು ತೇದಿತೇದಿ ನನ್ನ ಕೈಯಲ್ಲಿ ಎಲ್ಲಾ ಗಾಯವಾಗಿದೆ. ನನ್ನ ಕೈಗಳಲ್ಲಿ ಪೂರ್ವದಲ್ಲಿ ಹೀಗೆ ಇದಿಲ್ಲವೇ ಇಲ್ಲ(ಇದ್ದಿಲ್ಲ)' ಎಂದು ತನ್ನ ಕೈಗಳನ್ನು ತೋರಿಸಿದರು. ಯಾವ ನಾನು ಪೂರ್ವದಲ್ಲಿ ಯಾವಾಗಲೂ ಕುಂತೀದೇವಿಗಾಗಲೀ ನಿಮಗಾಗಲೀ ನಿಮ್ಮೆಲ್ಲರ ವಿಶೇಷ ಆದರದಿಂದ ಭಯಪಡುತ್ತಿದ್ದಿಲ್ಲವೋ ಅಂತಹ ನಾನು ಈಗ ವಿರಾಟರಾಜನ ಬಳಿಯಲ್ಲಿ ನಾನು ತೇದಿದ ಗಂಧವನ್ನು ನೋಡಿ ಸರಿಯಾಗಿದೆ ಎಂದು ಹೇಳುವನೋ ಇಲ್ಲವೋ ಎಂದು ಭಯಪಡುತ್ತಾ ನಿಂತಿರುವೆನು. ವಿರಾಟನಿಗೆ ನಾನು ಹೊರತು ಇನ್ನೊಬ್ಬರು ತೇದಿದ ಗಂಧವು

ಇಷ್ಟವಾಗುವುದಿಲ್ಲ' ಎಂದು ಹೇಳುತ್ತಾ ಸರ್ವಥಾ ದುಃಖಶೂನ್ಯರಾದ ಪರಶುಕ್ಲತ್ರಯರಲ್ಲಿ ಸೇರಿದ ಭಾರತೀದೇವಿಯರ ಅವತಾರಭೂತರಾದ ದ್ರೌಪದೀದೇವಿಯರು, ಅಸುರಜನರನ್ನು ಮೋಹಗೊಳಿಸುತ್ತಾ ಲೋಕರೀತಿಯಿಂದ ಭೀಮಸೇನದೇವರ ಎದೆಯನ್ನು ಆಶ್ರಯಿಸಿದವರಾಗಿ ಮೆಲ್ಲನೆ ಅಳುವಂತೆ ತೋರಿಸಿದರು. ಅವರು ಲೋಕರೀತಿಯಿಂದ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಭೀಮಸೇನದೇವರ ಎದೆಯನ್ನು ಆಶ್ರಯಿಸಿ 'ಭೀಮಸೇನದೇವರೇ! ನಾನು ದೇವತೆಗಳಿಗೆ ಸ್ವಲ್ಪ ಅಪರಾಧವನ್ನು ಮಾಡಿದ್ದಲ್ಲ. ಆದುದರಿಂದ ನಿರ್ಭಾಗ್ಯಳಾದ ನನಗೆ ಸಾಯಬೇಕಾದ ಇಂತಹ ಸಮಯದಲ್ಲಿ ಸಾವೂ ಬರುವುದಿಲ್ಲ. ನನ್ನ ಆಣೆಯಿಟ್ಟು ಹೇಳುತ್ತೇನೆ. ನೀವು ಕೀಚಕನನ್ನು ಸಂಹರಿಸದೆ ಇದ್ದರೆ ನಿರ್ಭಾಗ್ಯಳಾದ ವಿಷವನ್ನು ಕುಡಿದೋ ಬೆಂಕಿಯಲ್ಲಿ ಹಾರಿಯೋ ಪ್ರಾಣವನ್ನು ತೆಗೆದುಕೊಳ್ಳುತ್ತೇನೆ. ನಾನು ಬದುಕಿಯೇನು ಪ್ರಯೋಜನವಿದೆ?' ಎಂದು ಹೇಳಿ ಹಳೆಯ ಗಾಯಗಳಿರುವ ತನ್ನ ಕೈಯನ್ನು ತೋರಿಸಿದರು. ಭೀಮಸೇನದೇವರೂ ಸರ್ವಜ್ಞರು ಸರ್ವದುಃಖ ರಹಿತರಾದವರು. ಲೋಕವಿಡಂಬನೆಯನ್ನು ಮಾಡುತ್ತಾ ನಡುಗುತ್ತಿರುವ ದ್ರೌಪದೀದೇವಿಯರ ಕೈಗಳನ್ನು ಮುಖದ ಹತ್ತಿರ ಇಟ್ಟು ಕಣ್ಣೀರು ಸುರಿಸಿದರು. ತುಂಬಾ ದುಃಖವುಳ್ಳವರಂತೆ ತೋರಿಸುತ್ತಾ ಮಾತಾಡಿದರು.



## ಭೀಮಸೇನದೇವರು ದ್ರೌಪದೀದೇವಿಯನ್ನು ಸಮಾಧಾನಪಡಿಸಿದ್ದು [1]

ಭೀಮಸೇನದೇವರು ಲೋಕದ ಜನರನ್ನು ಅನುಸರಿಸಿ ದ್ರೌಪದೀದೇವಿಯರನ್ನು ಸಮಾಧಾನಪಡಿಸುತ್ತಾ ಹೇಳಿದರು. 'ಭದ್ರೇ! ನಾನು ಹೇಳುವ ಮಾತನ್ನು ನೀನು ಕೇಳು. ನಾನು ಕೋಪದಿಂದ ಮೊದಲೇ ಯೋಚನೆ ಮಾಡಿದ್ದನ್ನು ಕೇಳು. ನೀನು ಸಭೆಗೆ ಬಂದದ್ದನ್ನು ನೋಡಿ ಮತ್ಸ್ಯದೇಶದವರೊಡನೆಯೇ ದೊಡ್ಡ ಜಗಳವನ್ನು ಮಾಡಬೇಕೆಂಬ ಅಭಿಪ್ರಾಯದಿಂದ ದೊಡ್ಡ ಮರವನ್ನು ನೋಡಿದೆನು. ಆಗ ಧರ್ಮರಾಜರು ಕಟಾಕ್ಷದಿಂದ ನನ್ನನ್ನು ತಡೆದರು. ಅದನ್ನು ತಿಳಿದು ಮುಖವನ್ನು ತಗ್ಗಿಸಿಕೊಂಡು ಸುಮ್ಮನೆ ಆದವನಾಗಿ ಅಡಿಗೆಮನೆಗೆ ಹೋದೆನು. ನಾನು ಹೇಳುವ

1. ಭಾ.ವಿ.ಪ ಅ-21, 22

ಮಗಳಾದವಳು ಈ ಅವಸ್ಥೆಯನ್ನು ಹೊಂದಿದವಳು. ನಾನು ಹೊರತು ಇನ್ನೊಬ್ಬರು ಯಾರು ಜೀವಿಸುವರು? ಎಲ್ಲರನ್ನೂ ಬಿಟ್ಟು ನನಗೆ ಮಹಾದುಃಖವು ಬಂದು ಸೇರಿರುವುದು. ಸಹೋದರರಿಂದ ಮಾವಂದಿರಿಂದ ಮಕ್ಕಳಿಂದ ಕೂಡಿದ ಯಾವ ಹೆಂಗಸು ಹೀಗೆ ದುಃಖವನ್ನು ಹೊಂದುವಳು? ನಾನು ಚಿಕ್ಕತನದಲ್ಲಿ ಬಹಳ ಪಾಪವನನು ಮಾಡಿರಬೇಕು. ಆದರಿಂದ ನನಗೆ ಈರೀತಿಯಾಗಿ ದುಃಖವು ಬಂದಿರುವುದು. ನನ್ನ ಮೈಯಬಣ್ಣವನ್ನು ವಿಕಾರವನ್ನು ನೋಡಿರಿ. ನನಗೆ ಪೂರ್ವದಲ್ಲಿ ಎಂತಹ ಆಪತ್ತಿನಲ್ಲಿಯೂ ಹೀಗೆ ಆಗಿತ್ತೇ? (ಆಗಿತ್ತಿತ್ತೇ?)

ನನಗೆ ಪೂರ್ವದಲ್ಲಿ ಯಾವ ವಿಧವಾದ ಸುಖವಿತ್ತೆಂದು ನೀವೇ ತಿಳಿದಿರುವಿರಿ. ಅಂತಹ ನಾನು ಈಗ ದಾಸೀತ್ವವನ್ನು ಹೊಂದುವವಳಾಗಿ ಮನಸ್ಸಿಗೆ ಶಾಂತಿಯನ್ನು ಹೊಂದುವುದಿಲ್ಲ. ಅರ್ಜುನರೂ ಕೂಡ ರಂಗಸ್ಥಳದಲ್ಲಿ ಶಾಂತವಾದ ಅಗ್ನಿಯಂತೆ ಇರುವರು. ಇದು ದೈವೇಚ್ಛೆಯೆಂದು ತಿಳಿಯುವೆನು. ಪ್ರಾಣಿಗಳಿಗೆ ಏನೇನು ಅವಸ್ಥೆಗಳು ಬರುವುವೆಂದು ಹೇಳಲಿಕ್ಕೆ ಆಗಲಾರದು. ನಿಮಗೆ ಯೋಚನೆ ಮಾಡದೆ ಇದ್ದ ಈ ಆಪತ್ತು ಬಂದದ್ದನ್ನು ನೋಡಿರಿ. ಇಂದ್ರದೇವರಿಗೆ ಸಮಾನರಾದ ನೀವು ಯಾವ ನನ್ನ ಮುಖವನ್ನು ನೋಡುತ್ತಾ ಇದ್ದಿರೋ ಅಂತಹ ನಾನು ಇನ್ನೊಬ್ಬರ ಮುಖವನ್ನು ನೋಡುತ್ತಾ ಇರುವೆನು. ನನ್ನ ಅವಸ್ಥೆಯನ್ನು ನೋಡಬೇಕು. ನನಗೆ ಇಂತಹ ಅವಸ್ಥೆಯು ಬರಬಾರದಿತ್ತು. ಸಮುದ್ರಪರ್ಯಂತವಾದ ಭೂಮಿಯು ಯಾರ ವಶವಾಗಿದ್ದಿತೋ ಅಂತಹ ಈ ದ್ರೌಪದಿಯು ಈಗ ಸುದೇಷ್ಣೆಯ ವಶವಾಗಿರುವಳು. ಯಾವ ನನ್ನ ಹಿಂದೆಯೂ ಮುಂದೆಯೂ ಜನರು ಬರುತ್ತಿದ್ದರೋ ಆ ನಾನು ಈಗ ಸುದೇಷ್ಣೆಯ ಹಿಂದೆಯೂ ಮುಂದೆಯೂ ಹೋಗುತ್ತಿದ್ದೇನೆ. ನನಗೆ ಇದೊಂದು ಮಹಾದುಃಖವು ಬಂದಿರುವುದು. ಯಾವ ನಾನು ಪೂರ್ವದಲ್ಲಿ ಕುಂತೀದೇವಿಯರೊಬ್ಬರಿಗೆ ಹೊರತು ನನಗಾಗಿಯೂ ಕೂಡ ಗಂಧವನ್ನು ತೇಯುತ್ತಿರಲಿಲ್ಲ. ಈಗ ಗಂಧವನ್ನು ತೇದಿತೇದಿ ನನ್ನ ಕೈಯಲ್ಲಿ ಎಲ್ಲಾ ಗಾಯವಾಗಿದೆ. ನನ್ನ ಕೈಗಳಲ್ಲಿ ಪೂರ್ವದಲ್ಲಿ ಹೀಗೆ ಇದಿಲ್ಲವೇ ಇಲ್ಲ(ಇದ್ದಿಲ್ಲ)' ಎಂದು ತನ್ನ ಕೈಗಳನ್ನು ತೋರಿಸಿದರು. ಯಾವ ನಾನು ಪೂರ್ವದಲ್ಲಿ ಯಾವಾಗಲೂ ಕುಂತೀದೇವಿಗಾಗಲೀ ನಿಮಗಾಗಲೀ ನಿಮ್ಮೆಲ್ಲರ ವಿಶೇಷ ಆದರದಿಂದ ಭಯಪಡುತ್ತಿದ್ದಿಲ್ಲವೋ ಅಂತಹ ನಾನು ಈಗ ವಿರಾಟರಾಜನ ಬಳಿಯಲ್ಲಿ ನಾನು ತೇದಿದ ಗಂಧವನ್ನು ನೋಡಿ ಸರಿಯಾಗಿದೆ ಎಂದು ಹೇಳುವನೋ ಇಲ್ಲವೋ ಎಂದು ಭಯಪಡುತ್ತಾ ನಿಂತಿರುವೆನು. ವಿರಾಟನಿಗೆ ನಾನು ಹೊರತು ಇನ್ನೊಬ್ಬರು ತೇದಿದ ಗಂಧವು

ಇಷ್ಟವಾಗುವುದಿಲ್ಲ' ಎಂದು ಹೇಳುತ್ತಾ ಸರ್ವಥಾ ದುಃಖಶೂನ್ಯರಾದ ಪರಶುಕ್ಲತ್ರಯರಲ್ಲಿ ಸೇರಿದ ಭಾರತೀದೇವಿಯರ ಅವತಾರಭೂತರಾದ ದ್ರೌಪದೀದೇವಿಯರು, ಅಸುರಜನರನ್ನು ಮೋಹಗೊಳಿಸುತ್ತಾ ಲೋಕರೀತಿಯಿಂದ ಭೀಮಸೇನದೇವರ ಎದೆಯನ್ನು ಆಶ್ರಯಿಸಿದವರಾಗಿ ಮೆಲ್ಲನೆ ಅಳುವಂತೆ ತೋರಿಸಿದರು. ಅವರು ಲೋಕರೀತಿಯಿಂದ ಕಣ್ಣುಗಳಲ್ಲಿ ನೀರನ್ನು ಸುರಿಸುತ್ತಾ ಭೀಮಸೇನದೇವರ ಎದೆಯನ್ನು ಆಶ್ರಯಿಸಿ 'ಭೀಮಸೇನದೇವರೇ! ನಾನು ದೇವತೆಗಳಿಗೆ ಸ್ವಲ್ಪ ಅಪರಾಧವನ್ನು ಮಾಡಿದ್ದಲ್ಲ, ಆದುದರಿಂದ ನಿರ್ಭಾಗ್ಯಳಾದ ನನಗೆ ಸಾಯಬೇಕಾದ ಇಂತಹ ಸಮಯದಲ್ಲಿ ಸಾವೂ ಬರುವುದಿಲ್ಲ, ನನ್ನ ಆಣೆಯಿಟ್ಟು ಹೇಳುತ್ತೇನೆ. ನೀವು ಕೀಚಕನನ್ನು ಸಂಹರಿಸದೆ ಇದ್ದರೆ ನಿರ್ಭಾಗ್ಯಳಾದ ವಿಷವನ್ನು ಕುಡಿದೋ ಬೆಂಕಿಯಲ್ಲಿ ಹಾರಿಯೋ ಪ್ರಾಣವನ್ನು ತೆಗೆದುಕೊಳ್ಳುತ್ತೇನೆ. ನಾನು ಬದುಕಿಯೇನು ಪ್ರಯೋಜನವಿದೆ?' ಎಂದು ಹೇಳಿ ಹಳೆಯ ಗಾಯಗಳಿರುವ ತನ್ನ ಕೈಯನ್ನು ತೋರಿಸಿದರು. ಭೀಮಸೇನದೇವರೂ ಸರ್ವಜ್ಞರು ಸರ್ವದುಃಖ ರಹಿತರಾದವರು. ಲೋಕವಿಡಂಬನೆಯನ್ನು ಮಾಡುತ್ತಾ ನಡುಗುತ್ತಿರುವ ದ್ರೌಪದೀದೇವಿಯರ ಕೈಗಳನ್ನು ಮುಖದ ಹತ್ತಿರ ಇಟ್ಟು ಕಣ್ಣೀರು ಸುರಿಸಿದರು. ತುಂಬಾ ದುಃಖವುಳ್ಳವರಂತೆ ತೋರಿಸುತ್ತಾ ಮಾತಾಡಿದರು.



## ಭೀಮಸೇನದೇವರು ದ್ರೌಪದೀದೇವಿಯನ್ನು ಸಮಾಧಾನಪಡಿಸಿದ್ದು [1]

ಭೀಮಸೇನದೇವರು ಲೋಕದ ಜನರನ್ನು ಅನುಸರಿಸಿ ದ್ರೌಪದೀದೇವಿಯರನ್ನು ಸಮಾಧಾನಪಡಿಸುತ್ತಾ ಹೇಳಿದರು. 'ಭದ್ರೇ! ನಾನು ಹೇಳುವ ಮಾತನ್ನು ನೀನು ಕೇಳು. ನಾನು ಕೋಪದಿಂದ ಮೊದಲೇ ಯೋಚನೆ ಮಾಡಿದ್ದನ್ನು ಕೇಳು. ನೀನು ಸಭೆಗೆ ಬಂದದ್ದನ್ನು ನೋಡಿ ಮತ್ಸ್ಯದೇಶದವರೊಡನೆಯೇ ದೊಡ್ಡ ಜಗಳವನ್ನು ಮಾಡಬೇಕೆಂಬ ಅಭಿಪ್ರಾಯದಿಂದ ದೊಡ್ಡ ಮರವನ್ನು ನೋಡಿದೆನು. ಆಗ ಧರ್ಮರಾಜರು ಕಟಾಕ್ಷದಿಂದ ನನ್ನನ್ನು ತಡೆದರು. ಅದನ್ನು ತಿಳಿದು ಮುಖವನ್ನು ತಗ್ಗಿಸಿಕೊಂಡು ಸುಮ್ಮನೆ ಆದವನಾಗಿ ಅಡಿಗೆಮನೆಗೆ ಹೋದೆನು. ನಾನು ಹೇಳುವ

1. ಭಾ.ವಿ.ಪ ಅ-21, 22

ಇನ್ನೊಂದು ಮಾತನ್ನು ಕೇಳು. ನನ್ನ ಬಾಹು ಬಲಕ್ಕೆ ಧಿಕ್ಕಾರವಿರಲಿ. ಅರ್ಜುನನ ಗಾಂಡೀವಕ್ಕೂ ಧಿಕ್ಕಾರವಿರಲಿ. ಯಾವ ನಿನ್ನ ಮೊದಲು ಕೆಂಪಾಗಿ ಇದ್ದ ಕೈಗಳು ಈಗ ಗಾಯಹೊಂದಿ ಕಪ್ಪಾಗಿವೆ. ಈಗ ನನಗೆ ಮೊದಲು ವಿರಾಟನ ಸಭೆಯಲ್ಲಿ ಜಗಳವೇಕೆ ಆಡಲಿಲ್ಲ ಎಂದು ಅನ್ನಿಸುತ್ತದೆ. ನಾನು ಆಗ ಜಗಳವಾಡದಿರಲಿಕ್ಕೆ ಧರ್ಮರಾಜರೇ ಕಾರಣರು. ಅವರ ಅಭಿಪ್ರಾಯದಂತೆ ಅವರ ಆಜ್ಞೆಯ ವಶನಾಗಿ ಇದ್ದೆನು. ರಾಜ್ಯವನ್ನು ಬಿಟ್ಟು ಬಂದದ್ದು, ಕೌರವರನ್ನು ಪಗಡೆಸಭೆಯಲ್ಲಿ ಕೊಂದು ಹಾಕದೆ ಇದ್ದದ್ದು, ಸುಯೋಧನ, ಕರ್ಣ, ಶಕುನಿ, ದುಃಶಾಸನರ ತಲೆಯನ್ನು ಕಡಿದುಹಾಕದೆ ಇದ್ದದ್ದು ಇವೆಲ್ಲವೂ ಈಗ ನನಗೆ ಎದೆಗೆ ಆಣಿ ಬಡಿದಂತೆ ದುಃಖವನ್ನು ಉಂಟುಮಾಡುತ್ತಿವೆ. ಮತ್ತು ಇನ್ನೊಂದು ಮಾತು ನಿನಗೆ ಜ್ಞಾಪಕವಿರಬಹುದು.

ಪವಿತ್ರವಾದ ಸರಸ್ವತೀತೀರದಲ್ಲಿ ನಾವೆಲ್ಲರೂ ಇದ್ದೆವು. ಆಗ ನಾನು ಎಲ್ಲಾ ಕ್ಲೇಶಗಳನ್ನೂ ಸ್ಮರಿಸಿಕೊಂಡು 'ನಾನು ಧರ್ಮರಾಜರನ್ನೋ, ಅರ್ಜುನನನ್ನೋ, ನಕುಲಸಹದೇವರನ್ನೋ, ಅನುಸರಿಸಿ ಬರಲಾರೆನೆಂದು ಬುದ್ಧಿಯನ್ನು ಧರಿಸಿ ಧರ್ಮರಾಜರನ್ನು ನಿಂದಿಸಿದೆನು. ನಾನು ಹೇಳಿದ ಕಠಿಣ ಮಾತುಗಳನ್ನು ಕೇಳಿ ಧರ್ಮರಾಜರು ಲಜ್ಜಾಯುಳ್ಳವರಾಗಿ ಧೌಮ್ಯಾಚಾರ್ಯರು ನೋಡುವಂತೆ ಒಳ್ಳೇ ಮಾತುಗಳನ್ನು ಆಡಿ ನಮ್ಮೆಲ್ಲರನ್ನೂ ಸಮಾಧಾನಪಡಿಸಿದರು. ನಮ್ಮನ್ನು ಸಮಾಧಾನ ಪಡಿಸಿ ನಿನ್ನನ್ನೂ ಸಮಾಧಾನಪಡಿಸಿದರು. ನೀನೂ ಧರ್ಮವನ್ನು ಬಿಡಬೇಡ. ಕ್ರೋಧವನ್ನು ಬಿಡು. ನೀನು ಇಷ್ಟರವರೆಗೆ ಮಾಡಿದ ನಿಂದಾವಚನಗಳನ್ನು ಕೇಳಿದರೆ ನಿಶ್ಚಯವಾಗಿಯೂ ಧರ್ಮರಾಜರು ಪ್ರಾಣಗಳನ್ನು ಬಿಡುವರು. ಅರ್ಜುನನೂ, ನಕುಲ ಸಹದೇವರೂ ಪ್ರಾಣಬಿಡುವರು. ಅವರು ಲೋಕಾಂತರವನ್ನು ಹೊಂದಿದಾಗ ನಾನೂ ಕೂಡ ಬದುಕಿರಲಿಕ್ಕೆ ಆಗಲಾರದು. ಪಾಂಚಾಲಿ! ನಾನು ಹೇಳುವ ಮಾತನ್ನು ಕೇಳು ನೀನೂ ಕೇಳಿರಬಹುದು.

ಪೂರ್ವದಲ್ಲಿ ವಿದೇಹರಾಜನ ಪುತ್ರಿಯಾದ ರಾಮದೇವರ ಪತ್ನಿಯಾದ ಜಾನಕೀದೇವಿಯು ರಾಮದೇವರೊಡನೆ ಅರಣ್ಯವಾಸ ಮಾಡಿದರು. ರಾವಣನು ಅವರನ್ನು ಅಪಹಾರ ಮಾಡಿಕೊಂಡು ಹೋದನು. ಅಲ್ಲಿ ರಾಕ್ಷಸಿಯರು ಅವರನ್ನು ಬೆದರಿಸಿದರು. ಆದರೂ ಕೊನೆಗೆ ರಾಮದೇವರನ್ನು ಹೊಂದಿದರು. ಲೋಪಾ ಮುದ್ರೆಯು ತನ್ನ ಗಂಡನಾದ ಅಗಸ್ತ್ಯರನ್ನು ಅನುಸರಿಸಿಕೊಂಡು ಕಾಡಿಗೇ ಬಂದು ಬಿಟ್ಟರು. ಶರ್ಯಾತಿಯ ಮಗಳಾದ ಸುಕನ್ಯೆಯು ತನ್ನ ಗಂಡನಾದ ಚ್ಯವನಋಷಿ ಗಳನ್ನು ಸೇವಿಸುತ್ತಾ ಇದ್ದಳು. ಹೀಗೆಯೇ ಅನೇಕರಾದ ಪತಿವ್ರತೆಯರು ತಮ್ಮ

ಪತಿಗಳನ್ನು ಅನುಸರಿಸಿಕೊಂಡು ಇದ್ದರು. ಹಾಗೆಯೇ ನೀನೂ ಕೂಡ ಪೂರ್ವದಲ್ಲಿ ಅನುಸರಿಸಿಕೊಂಡು ಇದ್ದವಳೇ. ನೀನೂ ಎಲ್ಲಾ ಗುಣಗಳಿಂದ ಯುಕ್ತಳಾದವಳೇ. ಇನ್ನು ಮೂವತ್ತು ರಾತ್ರಿಯವರೆಗೆ ಸಹಿಸುವವಳಾಗು. ಆಮೇಲೆ ನೀನು ಎಲ್ಲಾ ರಾಜರಿಗೂ ನಿಯಾಮಕಳಾದ ರಾಣಿಯಾಗುವಿ. ಬೇರೆ ವಿಧವಾಗಿ ಆಗುವುದಿಲ್ಲ ವೆಂದು ನಾನು ಆಣೆಯಿಟ್ಟು ಹೇಳುವೆನು. ಎಲ್ಲಾ ರಾಜರ ತಲೆಯ ಮೇಲೆ ವಾಸ ಮಾಡುವಿ. ಬೇಕಾದ ದುರ್ಲಭಭೋಗಗಳನ್ನು ಅನುಭವಿಸುವಿ ಎಂದು ಹೇಳಿದರು.

ಅದಕ್ಕೆ ದ್ರೌಪದೀದೇವಿಯರು ಲೋಕರೀತಿಯಿಂದ ಮಾತಾಡಿದರು. 'ನಾನು ದುಃಖದಿಂದ ಹೇಳುವ ಮಾತಲ್ಲದೆ ರಾಜರನ್ನು ನಿಂದಿಸುವುದಿಲ್ಲ. ದುಃಖವನ್ನು ತಡೆಯಲಾರದೆ ಕಣ್ಣೀರನ್ನು ಸುರಿಸುತ್ತಿರುವೆನು. ಇದೊಂದು ದುಃಖವು ನನಗೆ ಸಹಿಸಲಿಕ್ಕೆ ಆಗಲಾರದೆ ಇರುವುದು. ವಿರಾಟರಾಜನ ಭಾವನಾದ ಸೂತಪುತ್ರನಾದ ಕೀಚಕನು ಧರ್ಮಹೀನನಾಗಿರುವನು. ಕ್ರೂರನು ಸರ್ವವಿಷಯದಲ್ಲಿಯೂ ರಾಜನಿಗೆ ಬೇಕಾದವನಾಗಿರುವನು. ಆ ದುಷ್ಟನು ನಿತ್ಯವೂ ಬಂದು ನಾನು ಅನಾಥಳೆಂದು ತಿಳಿದುಕೊಂಡು ಹೆಂಡತಿಯಾಗು ಎಂದು ಹೇಳುತ್ತಿರುವನು. ಹೆಚ್ಚಿಗೆ ಹೇಳಿ ಉಪಯೋಗವಿಲ್ಲ. ಸಮಯೋಚಿತವಾದ ಕಾರ್ಯವನ್ನು ನಾವು ಮಾಡಲಿಕ್ಕೆ ಸಿದ್ಧರಾಗಿರಬೇಕು. ಸುದೇಷ್ಣೆಯು ನನ್ನ ಸೌಂದರ್ಯದಿಂದ ಭಯವುಳ್ಳವರಾಗಿ ವಿರಾಟರಾಜನು ಇವಳನ್ನು ಹೊಂದದೆ ಇರಬೇಕಲ್ಲಾ ಎಂದು ಯೋಚಿಸುತ್ತಲೇ ಇರುವಳು. ಅವಳ ಅಭಿಪ್ರಾಯವನ್ನು ತಿಳಿದು ದುಷ್ಟನಾದ ಕೀಚಕನು ನನ್ನ ಬಳಿಗೆ ಬಂದು ಪ್ರಾರ್ಥಿಸುತ್ತಲೇ ಇರುತ್ತಾನೆ.

ನನಗೆ ಅವನ ಮಾತನ್ನು ಕೇಳಿ ತುಂಬಾ ಕೋಪವು ಬಂದಿತು. ಆಮೇಲೆ ಕೋಪವನ್ನು ಅಡಗಿಸಿಕೊಂಡು 'ಕೀಚಕ! ನೀನು ನಿನ್ನನ್ನು ರಕ್ಷಿಸಿಕೊ. ನಾನು ಐದುಜನ ಗಂಧರ್ವರ ಪ್ರೀತಿಪಾತ್ರಳಾದ ಹೆಂಡತಿಯು. ಅವರು ಮಹಾಪರಾಕ್ರಮಶಾಲಿಗಳು. ನಿನ್ನನ್ನು ಕೊಂದೇ ಬಿಡುವರು' ಎಂದು ಹೇಳಿದೆನು. ಅದಕ್ಕೆ ಆ ನೀಚನು 'ಸುಂದರಿ! ಸೈರಂಧ್ರಿ! ನಾನು ಗಂಧರ್ವರಿಗೆ ಭಯಪಡುವುದಿಲ್ಲ. ನೂರು ಜನರೋ ಸಾವಿರ ಜನರೋ ಗಂಧರ್ವರು ಬಂದರೂ ನಾನು ಅವರನ್ನು ಕೊಂದು ಹಾಕುವೆನು. ನೀನು ನನಗೆ ಸಂತೋಷವನ್ನು ಉಂಟುಮಾಡು' ಎಂದು ಹೇಳುತ್ತಿರುವನು. ಅದಕ್ಕೆ ನಾನು ಅವನೊಡನೆ 'ನೀನು ಕೀರ್ತಿವಂತರಾದ ಆ ಗಂಧರ್ವರಿಗೆ ಪ್ರತಿಭಟನಲ್ಲ. ನಾನು ಧರ್ಮದಲ್ಲಿ ಇರುವವಳು. ಕುಲಶೀಲವತಿಯು. ನಾನು ನಿನ್ನನ್ನು ಸಂಹರಿಸಲು ಇಚ್ಛಿಸಲಿಲ್ಲ. ಅದರಿಂದ ಬದುಕಿರುವಿ' ಎಂದು ಹೇಳಿದೆನು.

ಅದನ್ನು ಕೇಳಿ ಕೀಚಕನು ಗಟ್ಟಿಯಾಗಿ ನಗುವವನಾದನು. ಆ ಪಾಪಿಯು ಸರಿಯಾದ ಮಾರ್ಗದಲ್ಲಿ ನಿಲ್ಲುವುದಿಲ್ಲ. ಧರ್ಮವನ್ನು ತಿಳಿಯುವುದಿಲ್ಲ. ಆ ಪಾಪಿಯು ಕಾಮವಶನಾಗಿ ನನ್ನನ್ನು ನೋಡಿದಾಗಲೆಲ್ಲಾ ಕಾಲಿನಿಂದ ಒದೆಯುವುದಾದರೆ ನನಗೆ ಬದುಕಿರಲಾರದು. ಧರ್ಮದಲ್ಲಿ ಪ್ರಯತ್ನಮಾಡುವ ನಿಮಗೆ ಮಹಾಧರ್ಮವು ನಷ್ಟವಾಗುವುದು. ಸಮಯವನ್ನು ರಕ್ಷಿಸುವ ನಿಮಗೆ ಹೆಂಡತಿಯಿಲ್ಲವೆಂದಾಗುವಳು. ಹೆಂಡತಿಯನ್ನು ರಕ್ಷಣೆ ಮಾಡಿದರೆ ಪ್ರಜೆಯನ್ನು ರಕ್ಷಿಸಿದಂತೆ ಆಗುವುದು. ಪ್ರಜೆಯನ್ನು ರಕ್ಷಿಸಿದರೆ ತನ್ನನ್ನು ರಕ್ಷಿಸಿದಂತೆ ಆಗುವುದು. ನಾನು ಬ್ರಾಹ್ಮಣರ ಮುಖದಿಂದ ಕೇಳಿರುವೆನು. ಕ್ಷತ್ರಿಯನಾದವನಿಗೆ ದುಷ್ಟರ ನಿಗ್ರಹಕ್ಕಿಂತ ಹೆಚ್ಚಾದ ಧರ್ಮವು ಬೇರೊಂದು ಇರುವುದಿಲ್ಲ. ಧರ್ಮರಾಜರು ನೋಡುತ್ತಿರುವಂತೆ ನಿಮ್ಮ ಎದುರಲ್ಲೇ ಕೀಚಕನು ನನ್ನನ್ನು ಅಟ್ಟಿಸಿಕೊಂಡು ಬಂದನಲ್ಲಾ! ನೀವು ಪೂರ್ವದಲ್ಲಿ ನನ್ನನ್ನು ಜಟಾಸುರನಿಂದ ರಕ್ಷಿಸಿದಿರಿ. ಜಯದ್ರಥನನ್ನು ಜಯಿಸಿದಿರಿ. ಅದೇರೀತಿಯಿಂದ ನನ್ನನ್ನು ಅವಮಾನ ಮಾಡಿರುವ ಈ ಪಾಪಿಯನ್ನು ಕೊಲ್ಲಿರಿ. ಗಡಿಗೆಯನ್ನು ಒಡೆಯುವಂತೆ ಅವನ ತಲೆಯನ್ನು ಒಡೆಯಿರಿ. ಯಾವ ಕೀಚಕನು ನನ್ನ ಬಹು ಅನರ್ಥಗಳಿಗೆ ಕಾರಣ ನಾಗಿರುವನೋ ಆ ಪಾಪಿಯು ಬದುಕಿದ್ದು ನಾಳೆ ಸೂರ್ಯೋದಯವಾಗುವು ದಾದರೆ ನಾನು ವಿಷವನ್ನು ಕುಡಿದು ಸಾಯುವೆನು. ಆ ಕೀಚಕನ ವಶಳಾಗಲಾರೆನು. ನಿಮ್ಮ ಮುಂಭಾಗದಲ್ಲಿ ನಾನು ಸಾಯುವುದೇ ಲೇಸು' ಎಂದು ಹೇಳುತ್ತಾ ಭೀಮಸೇನದೇವರ ಎದೆಯನ್ನು ಆಶ್ರಯಿಸಿ ಲೋಕರೀತಿಯಿಂದ ಅಳುವವರಾದರು.

ಆಗ ಭೀಮಸೇನದೇವರು ದ್ರೌಪದೀದೇವಿಯರನ್ನು ಆಲಿಂಗಿಸಿ ಸಮಾಧಾನಪಡಿಸಿ ಕೀಚಕನನ್ನು ಕೊಲ್ಲುವೆನೆಂದು ಒಪ್ಪಿಕೊಂಡರು. ನಾಲಿಗೆಯಿಂದ ತುಟಿಗಳನ್ನು ನೆಕ್ಕಿಕೊಂಡು ಕೀಚಕನನ್ನೇ ಮನಸ್ಸಿನಲ್ಲಿ ಯೋಚಿಸಿದರು. ದ್ರೌಪದೀದೇವಿಯರ ಮುಖವನ್ನು ವರಸಿ ಮಾತಾಡಿದರು.



# ಕೀಚಕನನ್ನು ನರ್ತನಾಗಾರಕ್ಕೆ ಬರಲಿಕ್ಕೆ ಹೇಳಿದ್ದು [1]

ಭೀಮಸೇನದೇವರು ಹೇಳಿದರು 'ಭದ್ರೆ! ನೀನು ಹೇಳಿದಂತೆಯೇ ಮಾಡುತ್ತೇನೆ. ಈದಿವಸವೇ ಬಂಧುಗಳಿಂದ ಸಹಿತನಾದ ಕೀಚಕನನ್ನು ಸಂಹರಿಸುತ್ತೇನೆ. ನೀನು ದುಃಖವನ್ನು ಬಿಟ್ಟು ಈದಿನ ಸಾಯಂಕಾಲದಲ್ಲಿ ಆ ಕೀಚಕನೊಡನೆ ಮಾತಾಡು. ಯಾವುದೊಂದು ವಿರಾಟರಾಜನು ಮಾಡಿಸಿರುವ ನರ್ತನಶಾಲೆಯಿರುವುದು. ಅದರಲ್ಲಿ ಹಗಲಲ್ಲಿ ಕನ್ಯೆಯರು ಕುಣಿಯುತ್ತಿರುವರು. ರಾತ್ರಿಯಲ್ಲಿ ಮನೆಗೆ ಹೋಗುತ್ತಿರುವರು. ಅಲ್ಲಿ ದೃಢವಾದ ಮಂಚವಿರುವುದು. ಅಲ್ಲಿ ಕೀಚಕನಿಗೆ ಅವನ ಪೂರ್ವದಲ್ಲಿ ಮೃತರಾದ ಪಿತಾಮಹರನ್ನು ತೋರಿಸುವೆನು. ಅಲ್ಲಿಗೆ ಅವನನ್ನು ಬರಹೇಳು. ನೀನು ಅವನೊಡನೆ ಮಾತಾಡುತ್ತಿರುವುದು ಒಬ್ಬರಿಗೂ ತಿಳಿಯ ಬಾರದು. ನೀನೀಗ ನನ್ನ ಬಳಿಗೆ ಬಂದು ಮಾತಾಡಿಹೋದ ವಿಷಯವೂ ಒಬ್ಬರಿಗೂ ತಿಳಿಯದಂತೆ ನೋಡಿಕೊ' ಎಂದು ಹೇಳಿದರು.

ಅವರಿಬ್ಬರೂ ದುಃಖರಹಿತರಾದವರು ಮಹಾಸಮರ್ಥರಾದವರು ಅಸುರ ಜನರನ್ನು ಮೋಹಗೊಳಿಸುವವರಾಗಿ ಕಣ್ಣೀರನ್ನು ಸುರಿಸುತ್ತಾ ದುಃಖಪಟ್ಟಂತೆ ತೋರಿಸಿದರು. ರಾತ್ರಿಶೇಷವನ್ನು ಕಳೆದರು. ಭೀಮಸೇನದೇವರು ಕೀಚಕನನ್ನು ಸಂಹರಿಸುವೆನೆಂದು ಪ್ರತಿಜ್ಞಾಮಾಡಿದ ಮೇಲೆ ದ್ರೌಪದೀದೇವಿಯರು ಪುನಃ ಸುದೇಷ್ಣೆಯ ಮನೆಯ ಒಳಗೆ ಪ್ರವೇಶ ಮಾಡಿದರು. ಆರಾತ್ರಿಯು ಕಳೆದು ಬೆಳಗಾಗಲು ಕೀಚಕನು ಪುನಃ ದ್ರೌಪದೀದೇವಿಯರ ಬಳಿಗೆ ಓಡಿಬಂದನು. 'ಸೈರಂಧ್ರಿ! ರಾಜನು ನೋಡುತ್ತಾ ಇರುವಾಗಲೇ ನಾನು ನಿನ್ನನ್ನು ಕೆಳಗೆ ಬೀಳಿಸಿ ಕಾಲಿನಿಂದ ಒದೆದೆನು. ಆಗ ನಿನ್ನನ್ನು ಯಾರಾದರೂ ಬಿಡಿಸಲಿಕ್ಕೆ ಬಂದರೇ? ನಾನು ಮಹಾಬಲಿಷ್ಠನು. ವಿರಾಟನು ಮತ್ಸ್ಯದೇಶಕ್ಕೆ ಹೆಸರಿಗೆ ಮಾತ್ರ ರಾಜನು. ಸೇನಾಪತಿಯಾದ ನಾನೇ ಮುಖ್ಯವಾದ ರಾಜನು. ಆದುದರಿಂದ ಸುಂದರಿ! ನೀನು ಸುಖವನ್ನು ಹೊಂದು ನಾನು ನಿನ್ನ ದಾಸನಾಗುವೆನು. ನಾನು ನೀನಿಲ್ಲದೆ ಬಹುಕಾಲ ಬದುಕಿರಲಾರೆನು. ನಿನಗೆ ನಾನು ಪ್ರತಿನಿತ್ಯವೂ ನೂರು ಬಂಗಾರದ ನಾಣ್ಯಗಳನ್ನು ಕೊಡುವೆನು. ನಿನಗೆ ನೂರು ದಾಸಿಯರನ್ನು ನೂರು ದಾಸರನ್ನು ಕೊಡುವೆನು. ರಥಗಳನ್ನು ಕೊಡುವೆನು. ರಾಜಾರ್ಹಸೀರೆಗಳನ್ನು ಕೊಡುವೆನು. ಬೇಕಾದದ್ದನ್ನು ಕೊಡುವೆನು' ಎಂದು ಹೇಳಿದನು.

---

1. ಭಾ.ವಿ.ಪ ಅ-22

ಅದಕ್ಕೆ ದ್ರೌಪದೀದೇವಿಯರು 'ಕೀಚಕ! ಇದು ನನ್ನ ಮಾತು ಸತ್ಯವೆಂದೇ ತಿಳಿ. ಆದರೆ ನಿನ್ನ ಮಿತ್ರನಾಗಲೀ ನಿನ್ನ ತಮ್ಮನಾಗಲೀ ನಾವಿಬ್ಬರು ಸೇರಿದ್ದನ್ನು ತಿಳಿಯಬಾರದು. ನನಗೆ ಅಪವಾದದಿಂದ ಭಯವು ಮತ್ತು ಗಂಧರ್ವರಿಗೆ ತಿಳಿದುಬಿಟ್ಟರೆ ಬಹಳ ಅನರ್ಥವುಂಟಾಗುವುದು. ಅಪಕೀರ್ತಿಯೂ ಉಂಟಾಗುವುದು. ಹಾಗೆ ನೀನು ಪ್ರತಿಜ್ಞೆಯನ್ನು ಮಾಡು. ಅನಂತರದಲ್ಲಿ ನಾನು ನಿನ್ನ ವಶಳಾಗುವೆನು' ಎಂದು ಹೇಳಿದರು.

ಅದಕ್ಕೆ ಕೀಚಕನು 'ಸುಂದರಿ! ನೀನು ಹೇಳಿದಂತೆಯೇ ಮಾಡುತ್ತೇನೆ. ಆ ಶೂನ್ಯವಾದ ಪ್ರದೇಶಕ್ಕೆ ನಾನೊಬ್ಬನೇ ಬರುವೆನು. ನಿನ್ನನ್ನು ಗಂಧರ್ವರು ನೋಡದಂತೆಯೇ ನಾನು ನಿನ್ನ ಸಮಾಗಮಕ್ಕಾಗಿ ಬರುವೆನು' ಎಂದನು.

ದ್ರೌಪದೀದೇವಿಯರು 'ವಿರಾಟರಾಜನು ಮಾಡಿಸಿರುವ ನರ್ತನಶಾಲೆಯಿರುವುದಲ್ಲಾ! ಅಲ್ಲಿ ಹಗಲಲ್ಲಿ ಹುಡುಗಿಯರು ಕುಣಿಯುತ್ತಾ ಇರುತ್ತಾರೆ. ರಾತ್ರಿಯಾಗಲು ಎಲ್ಲರೂ ಮನೆಗೆ ಹೋಗಿಬಿಡುತ್ತಾರೆ. ಅಲ್ಲಿಗೆ ನೀನು ಬಾ. ಗಂಧರ್ವರಿಗೆ ತಿಳಿಯಲಾರದು. ಅಲ್ಲಿ ನಾನು ನಿನ್ನ ವಶಳಾಗುವೆನು' ಎಂದರು.

ಕೀಚಕನು 'ಸುಂದರಿ! ನೀನು ಹೇಳಿದ ಹಾಗೆಯೇ ಮಾಡುತ್ತೇನೆ. ಆ ನರ್ತನಶಾಲೆಗೆ ನಾನು ಬರುತ್ತೇನೆ. ನನ್ನ ಪುಣ್ಯದ ಆಣೆಯಿಟ್ಟು ಹೇಳುತ್ತೇನೆ. ಗಂಧರ್ವರು ತಿಳಿಯರು. ನಾನು ಪ್ರತಿಜ್ಞಾ ಮಾಡಿ ಹೇಳುತ್ತೇನೆ. ನಿನಗೆ ಗಂಧರ್ವರಿಂದ ಭಯವಿಲ್ಲ. ನಿನಗೆ ಬೇಕಾದ ಒಳ್ಳೆ ಒಳ್ಳೆ ಸೀರಗಳನ್ನು ಕಳುಹಿಸುವೆನು. ಇನ್ನು ಮುಂದೆ ನಾನು ನಿನ್ನನ್ನು ಬಿಡದಂತೆ ರಮಿಸುವೆನು' ಎಂದನು.

ಅದಕ್ಕೆ ದ್ರೌಪದೀದೇವಿಯರು 'ಹಾಗಾದರೆ ಕೀಚಕ! ನಾನು ಕೂಡ ನೀನು ಹುಟ್ಟಿದ ಮೇಲೆ ಇಷ್ಟರವರೆಗೆ ಅನುಭವಿಸದೆ ಇರುವ ಸುಖವನ್ನು ತೋರಿಸುವೆನು' ಎಂದು ಹೇಳಿದರು. ಈರೀತಿಯಾಗಿ ಆ ನೀಚನೊಡನೆ ಮಾತಾಡುವಾಗ ದ್ರೌಪದೀ ದೇವಿಯರಿಗೆ ಒಂದು ಕ್ಷಣವು ಒಂದು ಮಾಸಕ್ಕೆ ಸಮವಾಯಿತು. ತರುವಾಯ ಕೀಚಕನು ಬಹು ಸಂತೋಷದಿಂದ ಮನೆಗೆ ಹೋದನು. ಆಕೆ ಸೈರಂಧ್ರಿರೂಪವಾದ ಮೃತ್ಯುವನ್ನು ತಿಳಿಯಲಿಲ್ಲ. ಕಾಮಮೋಹಿತನಾಗಿ ಪುಷ್ಪಾದಿಗಳಿಂದ ತನ್ನನ್ನು ಬಹಳವಾಗಿ ಅಲಂಕರಿಸಿಕೊಂಡನು. ಹಾಗೆ ಮಾಡಿಕೊಂಡು ಸೈರಂಧ್ರಿಯನ್ನೇ ಯೋಚನೆ ಮಾಡುತ್ತಿದ್ದ ಅವನಿಗೆ ಸ್ವಲ್ಪ ಸಮಯವೂ ಬಹಳ ಸಮಯದಂತೆ ಕಾಣಿಸುತ್ತಿತ್ತು. ಸಾವು ಸಮೀಪಿಸಿದ ಅವನ ದೇಹದಲ್ಲಿಯೂ ವಿಶೇಷವಾದ ಕಾಂತಿಯುಂಟಾಗಿದ್ದಿತು.

ತರುವಾಯ ದ್ರೌಪದೀದೇವಿಯರು ಅಡಿಗೆಮನೆಯಲ್ಲಿ ಇದ್ದ ಭೀಮಸೇನ ದೇವರ ಬಳಿಗೆ ಹೋದರು. 'ನೀವು ಹೇಳಿದಂತೆ ಆ ನೀಚನು ನರ್ತನಾಗಾರಕ್ಕೆ ಬರುವಂತೆ ಹೇಳಿರುವೆನು. ಕಾಲಬದ್ಧವಾಗಿ ಕಾಮದಿಂದ ಪ್ರೇರಿತನಾಗಿ ಆ ಶೂನ್ಯವಾದ ಸ್ಥಳಕ್ಕೆ ಅವನೊಬ್ಬನೇ ರಾತ್ರಿಯಲ್ಲಿ ಬರುವನು. ಮದವುಳ್ಳವನಾದ ಆ ಕೀಚಕನನ್ನು ಕೊಂದು ಹಾಕಿರಿ. ಆ ಸೂತಪುತ್ರನು ಗಂಧರ್ವರನ್ನು ಅವಮಾನ ಮಾಡುತ್ತಾನೆ. ನಿಮ್ಮ ಪರಾಕ್ರಮವನ್ನು ತೋರಿಸಿರಿ' ಎಂದು ಹೇಳಿದರು.

ಆಗ ಭೀಮಸೇನದೇವರು 'ಸುಂದರಿ! ಪರಮಸಂತೋಷವಾಯಿತು. ನನಗೆ ಪ್ರಿಯವಾದ ವರ್ತಮಾನವನ್ನು ತಿಳಿಸಿದಿ. ಹಿಡಿಂಬಾಸುರನನ್ನು ಸಂಹರಿಸಿ ಯಾವ ಪ್ರೀತಿಯು ಉಂಟಾಯಿತೋ ಆ ಪ್ರೀತಿಯು ಕೀಚಕನು ಅಲ್ಲಿಗೆ ಬರುವನೆಂದು ಕೇಳಿ ನನಗೆ ಆಯಿತು. ಸತ್ಯವನ್ನೂ ಸಹೋದರರನ್ನೂ ಮಕ್ಕಳನ್ನೂ ಆಣೆಯಿಟ್ಟು ಹೇಳುತ್ತೇನೆ. ಇಂದ್ರನು ವೃತ್ರಾಸುರನನ್ನು ಕೊಂದಂತೆ ಆ ಕೀಚಕನನ್ನು ಸಂಹರಿಸುವೆನು. ಎಲ್ಲರಿಗೂ ತಿಳಿಯದಂತೆಯೇ ತಿಳಿಯುವಂತೆಯೂ ಅವನನ್ನು ಕೊಲ್ಲುವೆನು. ಯಾರಾದರೂ ನಾನು ಕೀಚಕನನ್ನು ಕೊಂದದ್ದನ್ನು ತಿಳಿದ ಪಕ್ಷದಲ್ಲಿ ಈ ವಿರಾಟನಗರದಲ್ಲಿ ಒಬ್ಬ ಮನುಷ್ಯನೂ ಇಲ್ಲದಂತೆ ಮಾಡಿಬಿಡುತ್ತೇನೆ. ನಾನು ಮತ್ಸ್ಯದೇಶದವರನ್ನು ಕೊಂದದ್ದನ್ನು ದುರ್ಯೋಧನನು ತಿಳಿದರೆ ಈಗಲೇ ಹೋಗಿ ಸಪರಿವಾರನಾದ ಆ ದುರ್ಯೋಧನನನ್ನು ಕೊಂದುಹಾಕುವೆನು. ಕೌರವರ ರಾಜ್ಯವೆಲ್ಲವನ್ನೂ ಹೊಂದುವೆನು. ನಾನಿನ್ನು ಧರ್ಮರಾಜನನ್ನು ಅನುಸರಿಸಿಕೊಂಡು ಇರಲು ಆಗಲಾರದು. ಅವನು ಸತ್ಯವನ್ನೇ ನಂಬಿಕೊಂಡು ಇರಲಿ. ಅವನನ್ನು ಇತರ ತಮ್ಮಂದಿರು ಇಚ್ಛಾನುಸಾರವಾಗಿ ಅನುಸರಿಸಿಕೊಂಡು ಇರಲಿ. ನೀನು ಹೀಗೆ ದುಃಖಪಡುವುದನ್ನು ನೋಡಿ ನಾನು ಸಹಿಸಲಾರೆನು. ನಾನು ಕೀಚಕನನ್ನು ಸಂಹರಿಸುವೆನು. ನೀನು ಸುಖದಿಂದ ಇರುವವಳಾಗು' ಎಂದು ಹೇಳಿದರು.

ಆಗ ದ್ರೌಪದೀದೇವಿಯರು 'ನೀವು ಕೀಚಕನನ್ನು ಸಂಹರಿಸಿದ್ದು ಊರಿನ ಜನರಿಗೆ ತಿಳಿಯುವುದಾದರೆ ನಾನು ಬದುಕಿರಲಾರೆನು. ನನ್ನ ನಿಮಿತ್ತವಾಗಿ ಧರ್ಮರಾಜರು ಸತ್ಯದಿಂದ ತಪ್ಪಬಾರದು. ಒಬ್ಬರಿಗೂ ತಿಳಿಯದಂತೆ ರಾತ್ರಿಯಲ್ಲಿ ಕೀಚಕನನ್ನು ಸಂಹರಿಸಿರಿ. ಜನರಿಗೆ ತಿಳಿದುಬಿಟ್ಟರೆ ಧರ್ಮರಾಜರು ಸಹೋದರರಿಂದ ಸಹಿತರಾಗಿ ಪುನಃ ಅರಣ್ಯಕ್ಕೆ ಹೋಗುವರು. ಧರ್ಮಿಷ್ಠರಾದ ಅಣ್ಣನಾದ ಅವರನ್ನು ಯಾರೂ ಅತಿಕ್ರಮಿಸಲಾರರು. ಆದುದರಿಂದ ಯಾರಿಗಾದರೂ ತಿಳಿಯುವುದೋ ಏನೋ ಎಂದು ಭಯಪಡುವೆನು. ಒಬ್ಬರೂ ತಿಳಿಯದಂತೆ ನೀವು ಆ ಕೀಚಕನನ್ನು

ಸಂಹರಿಸಬೇಕು' ಎಂದು ಹೇಳಿಕೊಂಡರು. ಅದಕ್ಕೆ ಭೀಮಸೇನದೇವರು 'ಸುಂದರಿ! ನೀನು ಹೇಳಿದಂತೆಯೇ ಒಬ್ಬರಿಗೂ ತಿಳಿಯದಂತೆಯೇ ಕೀಚಕನನ್ನು ಕೊಲ್ಲುವೆನು. ಅಲಭ್ಯಳಾದ ನಿನ್ನನ್ನು ಅಪೇಕ್ಷಿಸಿದ ಆ ನೀಚನ ತಲೆಯನ್ನು ಒಡೆದುಹಾಕುವೆನು. ಧರ್ಮರಾಜರ ವಿಷಯದಲ್ಲಿ ನಾನು ಸುಮ್ಮನೆ ಕೋಪದಿಂದ ಹೇಳಿದೆನಷ್ಟೆ. ಆ ಧರ್ಮಿಷ್ಠರನ್ನು ಯಾರು ಅನುಸರಿಸದೆ ಇರುತ್ತಾರೆ' ಎಂದು ಹೇಳಿದರು.



## ಕೀಚಕನ ಸಂಹಾರವು [1]

ತೆರುವಾಯ ಮಹಾಬಾಹುಬಲಶಾಲಿಯಾದ ಭೀಮಸೇನದೇವರು ಮೃದುವಾದ ಬೆಳ್ಳಗಿರುವ ವಸ್ತ್ರವನ್ನು ಹೊದ್ದುಕೊಂಡು ದ್ರೌಪದೀದೇವಿಯರನ್ನು ಹಿಂದೆ ಮಾಡಿಕೊಂಡು ಮಧ್ಯರಾತ್ರಿಕಾಲದಲ್ಲಿ ನರ್ತನಶಾಲೆಗೆ ಹೊರಟುಹೋದರು. ನರ್ತನಶಾಲೆಯ ಬಳಿಗೆ ಹೋಗಿ ಸಿಂಹವು ಮೃಗವನ್ನು ಎದುರುನೋಡುವಂತೆ ಕತ್ತಲೆಯಲ್ಲಿ ಕೀಚಕನನ್ನು ಎದುರುನೋಡುತ್ತಾ ಕೂತುಕೊಂಡಿದ್ದರು. ಅಷ್ಟರಲ್ಲಿ ಕೀಚಕನು ರಾತ್ರಿಯಲ್ಲಿ ತಲೆಗೆ ಸ್ನಾನಮಾಡಿ ಅಲಂಕಾರ ಮಾಡಿಕೊಂಡು ಬೇಗನೆ ಶೂನ್ಯವಾದ ಆ ನರ್ತನಶಾಲೆಗೆ ಬಂದನು. ಸೈರಂಧ್ರಿಯು ಅಲ್ಲಿಗೆ ಬಂದಿರುವಳೆಂದು ಕಾಮಮೋಹಿತನಾಗಿ ಒಳಗೆ ಪ್ರವೇಶ ಮಾಡಿ ಮೊದಲೇ ಬಂದು ಮಂಚದಮೇಲೆ ಮಲಗಿದ್ದ ತನ್ನ ಮೃತ್ಯುವಾದ ಭೀಮಸೇನದೇವರನ್ನು ಮುಟ್ಟಿದನು. ಆಗ ಭೀಮಸೇನದೇವರು ಈ ನೀಚನು ದ್ರೌಪದಿಯನ್ನು ಒದ್ದನೆಂದು ಕೋಪದಿಂದ ಜ್ವಲಿಸುತ್ತಾ ಇದ್ದರು. ಮರಣಕಾಲ ಸಮೀಪಿಸಿದ ಕೀಚಕನು ಏಕಾಂತದಲ್ಲಿ ಭೀಮಸೇನದೇವರ ಬಳಿಗೆ ಬಂದು ಸಂತೋಷದಿಂದ ಪರವಶವಾದ ಮನಸ್ಸುಳ್ಳವನಾಗಿ ಮಂದಹಾಸವನ್ನು ಮಾಡುತ್ತಾ 'ಸುಂದರಿ! ನಿನಗೆ ನಾನು ಬಹಳ ಹಣವನ್ನು ಕಳುಹಿಸಿರುವೆನು. ಅದೆಲ್ಲಾ ನಿನ್ನಲ್ಲಿಯೇ ಇರಲಿ. ನೀನು ಹೇಳಿದ ಮಾತಿನಂತೆಯೇ ಬಂದಿರುವಿಯಲ್ಲಾ? ಈ ದಿನದಲ್ಲಿ ನನ್ನ ಮನೆಯಲ್ಲಿ ಹೆಂಗಸರೆಲ್ಲರೂ ನಿಷ್ಕಾರಣವಾಗಿ ನನ್ನನ್ನು ಹೊಗಳುತ್ತಿದ್ದರು. 'ನೀನು ಬಲಿಷ್ಠನೂ ಸುಂದರನು. ನಿನಗೆ ಸಮಾನನಾದ ಪುರುಷನೇ ಇಲ್ಲ' ಎಂದು ಹೇಳುತ್ತಿದ್ದರು. ಸುಂದರಿ! ನಾನು ರೂಪವಂತನು. ಸ್ನಾನಮಾಡಿ ಅಲಂಕಾರ ಮಾಡಿಕೊಂಡು

1. ಭಾ.ವಿ.ಪ ಅ-22

ಬಂದಿರುತ್ತೇನೆ. ನಾನು ಯಾವಾಗಲೂ ಸ್ತ್ರೀಯರಿಗೆ ಪ್ರಿಯನಾಗಿರುವವನು. ಸುಂದರಿ! ಈಗ ನನ್ನ ರೂಪದ ಫಲವನ್ನು ಹೊಂದಿದೆನು' ಎಂದು ಹೇಳಿದನು.

ಆಗ ಕತ್ತಲೆಯಲ್ಲಿಯೇ ಭೀಮಸೇನದೇವರು 'ನೀನು ದೈವೇಚ್ಛೆಯಿಂದ ಸುಂದರನಾಗಿರುವಿ. ನಿನ್ನನ್ನು ಹೊಗಳಿಕೊಳ್ಳುವಿ. ನೀನೂ ಇಂತಹ ಗುಣವುಳ್ಳ ರೂಪಶೀಲವತಿಯಿಂದ ಸ್ತ್ರೀಯನ್ನು ಇಷ್ಟರವರೆಗೆ ಹೊಂದಿರಲಿಕ್ಕಿಲ್ಲ. ಒಂದು ಮುಹೂರ್ತದಲ್ಲಿ ಈ ಸ್ತ್ರೀಯು ಎಂತಹ ಗುಣವುಳ್ಳವಳು ಎಂದು ತಿಳಿಯುವಿ. ಇಚ್ಛಾನುಸಾರವಾಗಿ ಕ್ರೀಡಾಮಾಡುವಿ. ನನ್ನ ಸ್ಪರ್ಶ ಮಾಡು. ಇಂತಹ ಸ್ಪರ್ಶವನ್ನು ನೀನು ಇಷ್ಟರವರೆಗೆ ತಿಳಿದಿರಲಾರೆ. ನಿನಗೆ ಸಮಾನ ಪುರುಷರೇ ಇಲ್ಲ'.

ಈ ಪ್ರಕಾರವಾಗಿ ಭೀಮಸೇನದೇವರು ಮೇಲೆ ಹಾರಿ ನಗುತ್ತಾ ಹೇಳಿದರು. 'ಈಗ ಆನೆಯನ್ನು ಸಿಂಹವು ಸೆಳೆಯುವಂತೆ ನೀನು ನಾನು ಸೆಳೆಯುತ್ತಿರುವುದನ್ನು ನಿನ್ನ ಸಹೋದರಿ ಸುದೇಷ್ಣೆಯು ನೋಡುವಳು. ನೀನು ಸತ್ತಮೇಲೆ ಸೈರಂಧ್ರಿಯು ಅಂಜಿಕೆಯಿಲ್ಲದೆ ಸಂಚರಿಸುವಳು. ಸೈರಂಧ್ರಿಯ ಪತಿಗಳೂ ಸುಖವಾಗಿ ಸಂಚರಿಸುವರು' ಎಂದು ಹೂಮುಡಿದುಕೊಂಡಿದ್ದ ಕೀಚಕನ ತಲೆ ಕೂದಲಿನಲ್ಲಿ ಹಿಡಿದರು. ಕೀಚಕನು ವೇಗದಿಂದ ಕೂದಲನ್ನು ತಪ್ಪಿಸಿಕೊಂಡು ಭೀಮಸೇನದೇವರ ಕೈಯಲ್ಲಿ(ನ್ನು) ಹಿಡಿದನು. ಇಬ್ಬರಿಗೂ ಭಯಂಕರವಾದ ಯುದ್ಧವು ನಡೆಯಿತು. ಮೊದಲು ಕೀಚಕನು ಸರಿಸರಿಯಾಗಿ ಯುದ್ಧವನ್ನು ಮಾಡಿದನು. ಕೊನೆಗಾದಾಗ ಅವನ ಸಾಮರ್ಥ್ಯವು ಕಡಿಮೆಯಾಗುತ್ತಾ ಬಂದಿತು. ಭೀಮಸೇನದೇವರು ಅವನ ತಲೆಗೆ ಮುಷ್ಟಿಯಿಂದ ಒಡೆದರು. ಕೀಚಕನು ಕಣ್ಣು ಸುತ್ತಿ ಪ್ರಾಣರಹಿತನಾಗಿ ಕೆಳಗೆ ಬಿದ್ದನು. ಅವನ ಕೈಕಾಲುಗಳನ್ನು ಕುತ್ತಿಗೆಯನ್ನೂ ತಲೆಯನ್ನೂ ಗುದ್ದಿಗುದ್ದಿ ದೇಹದೊಳಗೆ ಮಾಡಿದರು. ಬರೇ ಒಂದು ಮಾಂಸದ ಗೆಡ್ಡೆಯಂತೆ ಮಾಡಿದರು. ತರುವಾಯ ಕೈಯನ್ನು ತಿಕ್ಕಿ ಅದರಿಂದ ಬೆಂಕಿಯನ್ನು ಉಂಟುಮಾಡಿ ಅವನನ್ನು ದ್ರೌಪದೀದೇವಿಯರಿಗೆ ತೋರಿಸಿದರು. 'ಸುಂದರಿ! ನಿನ್ನನ್ನು ಯಾರು ಅಪೇಕ್ಷಿಸು ವರೋ ಅವರು ಇದೇ ಅವಸ್ಥೆಯನ್ನು ಹೊಂದುವರು' ಎಂದರು. ಆಮೇಲೆ ಕೀಚಕನು ಗಂಧರ್ವರಿಂದ ಸತ್ತನೆಂದು ಜನರಿಗೆ ತಿಳಿಯುವುದು. ತಾನು ಬೇಗನೇ ಅಲ್ಲಿಂದ ಅಡಿಗೆಮನೆಗೆ ಹೋದರು. ಸ್ನಾನಮಾಡಿ ಗಂಧ ಹಚ್ಚಿಕೊಂಡು ಸುಖವಾಗಿ ಹಾಸಿಗೆಯಲ್ಲಿ ಕೂತುಕೊಂಡರು.

ಭೀಮಸೇನದೇವರು ಅಡಿಗೆಮನೆಗೆ ಹೋಗಿ ಸೇರಿದರು ಎಂದು ತಿಳಿದ ಮೇಲೆ ದ್ರೌಪದೀದೇವಿಯರು ಭಯವಿಲ್ಲದೆ ಅಲ್ಲಿ ಕಾವಲಿದ್ದ ಜನರೊಡನೆ 'ಕೀಚಕನು

ಗಂಧರ್ವರಿಂದ ಸತ್ತುಬಿದ್ದಿರುವನು ಎಲ್ಲರೂ ಬಂದು ನೋಡಿರಿ' ಎಂದು ಕೂಗಿಕೊಂಡರು. ಆ ದ್ರೌಪದೀದೇವಿಯರ ಮಾತನ್ನು ಕೇಳಿ ಆ ನರ್ತನಶಾಲೆಗೆ ಕಾವಲಿದ್ದ ಜನರು ಬೇಗನೇ ಎಲ್ಲರೂ ಬೆಂಕಿಯಕೊಳ್ಳಿಯನ್ನು ಹಿಡಿದುಕೊಂಡು ಓಡಿಬಂದರು. ತರುವಾಯ ಈ ವರ್ತಮಾನವನ್ನು ತಿಳಿದು ಕೀಚಕನ ತಮ್ಮಂದಿರಾದ ನೂರಐದು ಜನ ಉಪಕೀಚಕರೂ ಅಲ್ಲಿಗೆ ಬಂದು ಸತ್ತು ಬಿದ್ದಿದ್ದ ಕೀಚಕನನ್ನು ನೋಡಿದರು. ತಲೆಕೈಕಾಲು ಒಂದೂ ಕಾಣದ ಅವನನ್ನು ನೋಡಿ ಆಶ್ಚರ್ಯಪಟ್ಟರು. 'ಎಲ್ಲಿ ಇವನ ಕುತ್ತಿಗೆ? ಎಲ್ಲಿ ಕಾಲುಗಳು? ಎಲ್ಲಿ ಕೈಗಳು? ಎಲ್ಲಿ ತಲೆ? ಎಂದು ಪರೀಕ್ಷಿಸಿದರು. ಗಂಧರ್ವನು ಸಂಹರಿಸಿದನು ಎಂದು ತಿಳಿದುಕೊಂಡರು. ಮನುಷ್ಯರಿಗೆ ಮಾಡಲಿಕ್ಕೆ ಅಶಕ್ಯವಾದ ಆ ಕಾರ್ಯವನ್ನು ನೋಡಿ ಎಲ್ಲರೂ ಆಶ್ಚರ್ಯದಿಂದ ನೋಡಿದರು.



## ಉಪಕೀಚಕರ ಸಂಹಾರವು [1]

ಉಪಕೀಚಕರು ಕೀಚಕನ ಸುತ್ತಲೂ ಕೂತುಕೊಂಡು ಅಳುವವರಾದರು. ಕಾಲುಗಳನ್ನು ಒಳಗೆ ಸೆಳೆದುಕೊಂಡಿರುವ ಆಮೆಯಂತೆ ಕೈಕಾಲುಗಳು ಹೊಟ್ಟೆಯೊಳಗೆ ಹೋಗಿರುವ ಕೀಚಕನನ್ನು ನೋಡಿ ರೋಮಾಂಚಿತಗಾತ್ರರಾಗಿ ಭಯಗ್ರಸ್ತರಾದರು. ಅವನು ಗಂಧರ್ವರಿಂದ ಮೃತನಾದನು ಎಂದು ತಿಳಿದುಕೊಂಡು ಅವನಿಗೆ ಸಂಸ್ಕಾರವನ್ನು ಮಾಡಬೇಕೆಂಬ ಅಭಿಪ್ರಾಯವುಳ್ಳವರಾಗಿ ದೇಹವನ್ನು ಹೊರಗೆ ತೆಗೆದುಕೊಂಡು ಹೋಗಲಿಕ್ಕೆ ಪ್ರಯತ್ನಮಾಡಿದರು. ಅಷ್ಟರಲ್ಲಿ ಹತ್ತಿರದಲ್ಲಿಯೇ ಒಂದು ಕಂಬವನ್ನು ಹಿಡಿದುಕೊಂಡು ನಿಂತಿದ್ದ ದ್ರೌಪದೀದೇವಿಯರನ್ನು ನೋಡಿದರು. ಒಬ್ಬ ಉಪಕೀಚಕನು ಅವರನ್ನು ನೋಡಿ ಇತರ ಉಪಕೀಚಕರೊಡನೆ ನಗುತ್ತಾ ದ್ರೌಪದೀದೇವಿಯನ್ನು ಕೋಪದಿಂದ ಸುಡುವಂತೆ ಕಣ್ಣುಕೆಂಪಗೆ ಮಾಡಿ ನೋಡುತ್ತಾ 'ಈ ಅಯೋಗ್ಯಳನ್ನು ಬೇಗನೇ ಕೊಲ್ಲಿರಿ. ಇವಳಿಂದಾಗಿ ಕೀಚಕನು ಸತ್ತನು. ಅಥವಾ ಹಾಗೆಯೇ ಇವಳನ್ನು ಕೊಲ್ಲಬಾರದು. ಕಾಮಿಯೊಡನೆ ಸುಟ್ಟುಹಾಕುವ ಇವಳು ದುಷ್ಟಚರಿತ್ರೆಯುಳ್ಳವಳು. ನಮ್ಮ ಅಣ್ಣನಿಗೆ ಶತ್ರುವಾದವಳು. ಇವಳಿಂದಾಗಿ ನಮ್ಮ ಅಣ್ಣನು ಮೃತನಾದನು. ಅದರಿಂದ ಇವಳು ಬದುಕಿರುವುದು

1. ಭಾ.ವಿ.ಪ ಅ-23

ಸರಿಯಲ್ಲ. ಆದುದರಿಂದ ರಾಜನಿಂದ ಕೇಳಿಕೊಂಡು ಬಂದು ಇವಳನ್ನು ನಮ್ಮ ಅಣ್ಣನೊಡನೆ ಸುಟ್ಟುಹಾಕಬೇಕು. ಹಾಗೆ ಮಾಡಿದರೆ ಗಂಧರ್ವರಿಂದ ಮೃತನಾದ ಕೀಚಕನಿಗೆ ಪ್ರಿಯವಾಗುವುದು' ಎಂದು ಹೇಳಿದನು.

ತರುವಾಯ ಎಲ್ಲಾ ಉಪಕೀಚಕರು ವಿರಾಟರಾಜನ ಬಳಿಗೆ ಹೋಗಿ 'ಕಾಮರೂಪಿಗಳಾದ ಗಂಧರ್ವರಿಂದ ಕೀಚಕನು ಸತ್ತು ಬಿದ್ದಿರುವನು. ರಾತ್ರಿಯಲ್ಲಿ ಸೈರಂಧ್ರಿಯಿಂದ ಸಂಹಾರ ಮಾಡಿಸಲ್ಪಟ್ಟನು. ಆದುದರಿಂದ ಅವನನ್ನು ಸೈರಂಧ್ರಿಯಿಂದ ಸಹಿತವಾಗಿಯೇ ಸುಟ್ಟುಹಾಕುವೆವು. ಇಷ್ಟರವರೆಗೆ ನೀನು ನಮಗೆ ಬಹುಮಾನವನ್ನು ಮಾಡುತ್ತಿದ್ದಿ. ಹಾಗೆಯೇ ಈ ಮಾತನ್ನು ಅಂಗೀಕರಿಸಬೇಕು' ಎಂದು ಹೇಳಿದರು. ವಿರಾಟರಾಜನು ಅವರ ಪರಾಕ್ರಮವನ್ನು ತಿಳಿದು ಹಾಗೆಯೇ ಆಗಲಿ ಎಂದು ಹೇಳಿದನು.

ತರುವಾಯ ರಾಜಾಜ್ಞೆಯನ್ನು ಪಡೆದು ಉಪಕೀಚಕರು ಕೀಚಕನ ಹೆಣದ ಒಟ್ಟಿಗೆ ದ್ರೌಪದೀದೇವಿಯರನ್ನು ಕಟ್ಟಿದರು. ಯದ್ಯಪಿ ಜೀವೋತ್ತಮರಾದ ವಾಯುದೇವರ ಪತ್ನಿಯಾದ ಅವರನ್ನು ಮುಟ್ಟಲಿಕ್ಕೇ ಆ ದುಷ್ಟರಿಂದ ಆಗಲಾರದು. ಆದರೂ ಅವರ ತಮಸ್ಸಿಗೆ ಹೋಗಲಿಕ್ಕೆ ಸಾಧನೆಯಾಗುವುದಕ್ಕಾಗಿ ದ್ರೌಪದೀ ಸುಮ್ಮನಿದ್ದು ಲೋಕರೀತಿಯಿಂದ ಕಟ್ಟಿಸಿಕೊಂಡರು.

ಉಪಕೀಚಕರು ಕೀಚಕನ ಹೆಣದ ಒಟ್ಟಿಗೆ ದ್ರೌಪದೀದೇವಿಯರನ್ನೂ ಕಟ್ಟಿ ಸ್ಮಶಾನಕ್ಕೆ ತೆಗೆದುಕೊಂಡು ಹೋಗುತ್ತಿದ್ದರು. ಆಗ ದ್ರೌಪದೀದೇವಿಯರು ಲೋಕರೀತಿಯಿಂದ ದುಃಖವನ್ನು ತೋರಿಸುವವರಾಗಿ 'ಜಯ ಜಯೇಶ ವಿಜಯ ಜಯತ್ಸೇನ ಜಯದ್ಬಲ ಇವರು ನನ್ನ ಮಾತನ್ನು ಕೇಳಬೇಕು. ಸೂತ್ರಪುತ್ರರು ನನ್ನನ್ನು ಸೆಳೆದುಕೊಂಡು ಹೋಗುತ್ತಿದ್ದಾರೆ. ಯಾರ ಧನುಸ್ಸಿನ ಶಬ್ದವು ದುಂದುಭಿಯ ಶಬ್ದದಂತೆ ಕೇಳಿಸುತ್ತಿತ್ತೋ ಅವರು ಕೇಳಬೇಕು. ನನ್ನನ್ನು ಸೂತ್ರಪುತ್ರರು ಕರೆದುಕೊಂಡು ಹೋಗುತ್ತಿದ್ದಾರೆ' ಇತ್ಯಾದಿ ರೀತಿಯಿಂದ ಕೂಗಿಕೊಂಡರು.

ದ್ರೌಪದೀದೇವಿಯರ ದೈನ್ಯಸೂಚಕ ವಚನಗಳನ್ನು ಕೇಳಿ ಶಯನದಿಂದ ಎದ್ದ ಭೀಮಸೇನದೇವರು 'ಸೈರಂಧ್ರಿ! ನೀನು ಹೇಳಿದ ಮಾತುಗಳನ್ನು ನಾನು ಕೇಳುತ್ತಿದ್ದೇನೆ. ನಿನಗೆ ಸೂತ್ರಪುತ್ರರ ಭಯವು ಯಾವಾಗಲೂ ಇರುವುದಿಲ್ಲ' ಎಂದರು. ಈರೀತಿಯಾಗಿ ಹೇಳಿ ಭೀಮಸೇನದೇವರು ಉಪಕೀಚಕರನ್ನು ಸಂಹರಿಸಲು ಹೊರಟರು. ವಸ್ತ್ರವನ್ನು ಸೊಂಟಕ್ಕೆ ಚೆನ್ನಾಗಿ ಕಟ್ಟಿಕೊಂಡರು. ಬಾಗಿಲನ್ನು ಬಿಟ್ಟು ಗೋಡೆ ಹಾರಿಕೊಂಡು ಹೊರಗೆ ಬಂದರು. ವೇಗದಿಂದ ಉಪಕೀಚಕರ

ಮುಂದೆ ಹೋದರು. ಮೇಲೆ ಒಣಗಿದ್ದ ದೊಡ್ಡ ಒಂದು ಮರವನ್ನು ಎರಡು ಕೈಗಳಿಂದ ಆಲಿಂಗಿಸಿ ಕಿತ್ತಿದರು. ಅದರ ಎಲೆಯನ್ನು ಉದುರಿಸಿದರು. ತರುವಾಯ ಆ ಮರವನ್ನು ಎತ್ತಿಕೊಂಡು ತಿರುಗಿಸುತ್ತಾ ವೇಗದಿಂದ ಉಪಕೀಚಕರಿದ್ದಲ್ಲಿಗೆ ದಂಡವನ್ನು ಹಿಡಿದುಕೊಂಡು ಯಮದೇವರು ಬರುವಂತೆ ಬಂದರು. ಬರುವಾಗ ಅವರ ತೊಡೆಯವೇಗದಿಂದ ಆಲದ ಮರಗಳೂ ಅಶ್ವತ್ಥಮರಗಳೂ ಬೀಳುತ್ತಿದ್ದವು. ಸಿಂಹದಂತೆ ಕೋಪಿಸಿಕೊಂಡು ಬರುತ್ತಿದ್ದ ಅವರನ್ನು ನೋಡಿ ಗಂಧರ್ವನೇ ಬರುತ್ತಿರುವನೆಂದು ತಿಳಿದು ಉಪಕೀಚಕರೆಲ್ಲರೂ ಭಯಪಟ್ಟರು. ವಿಷಾದವನ್ನು ಹೊಂದಿದರು. 'ಬಲಿಷ್ಠನಾದ ಗಂಧರ್ವನು ಮರವನ್ನು ಎತ್ತಿಕೊಂಡು ಕೋಪಿಸಿ ಕೊಂಡು ಬರುತ್ತಿರುವನು. ಗಂಧರ್ವರಿಗೆ ನಮ್ಮ ವಿಷಯವು ತಿಳಿದುಹೋಯಿತು. ಸೈರಂಧ್ರಿಯನ್ನು ಬಿಟ್ಟುಬಿಡುವ. ನಮಗೆ ಮಹಾಭಯವು ಬಂದು ಬಿಟ್ಟಿತು' ಎಂದು ಪರಸ್ಪರವಾಗಿ ಮಾತಾಡಿಕೊಂಡವರಾಗಿ ದ್ರೌಪದೀದೇವಿಯರನ್ನು ಬಿಟ್ಟು ತಾವು ನಗರಕ್ಕೆ ಹೋಗಲಿಕ್ಕೆ ಓಡಿದರು. ಆಗ ಭೀಮಸೇನದೇವರು ಹಾರಿಹೋಗಿ ಓಡುತ್ತಿದ್ದ ಅವರ ಮುಂಭಾಗದಲ್ಲಿಯೇ ನಿಂತರು.

ಅವರು ಭೀಮಸೇನದೇವರನ್ನು ನೋಡಿ ಭಯಗ್ರಸ್ತರಾಗಿ ಓಡಲಿಕ್ಕೆ ಕಾಲುಬಾರದೆ ಹಾಗೆಯೇ ಸುಮ್ಮನೆ ನಿಂತುಬಿಟ್ಟರು. ಭೀಮಸೇನದೇವರು ಒಂದೊಂದು ಪಟ್ಟಿಗೆ ಹತ್ತು ಏಳು ಇಪ್ಪತ್ತು ಹದಿನೆಂಟು ಐವತ್ತು ಜನರನ್ನು ಬಡೆದು ಹೀಗೆ ನೂರ ಐದು ಜನ ಉಪಕೀಚಕರನ್ನು ಕೊಂದು ಹಾಕಿದರು. ತರುವಾಯ ದ್ರೌಪದೀದೇವಿಯರನ್ನು ಬಂಧನದಿಂದ ಬಿಡಿಸಿ ಲೋಕರೀತಿಯಿಂದ ಸಮಾಧಾನ ಪಡಿಸಿದರು. ಲೋಕರೀತಿಯಿಂದ ಕಣ್ಣೀರು ಸುರಿಸುತ್ತಿದ್ದ ದ್ರೌಪದೀ ದೇವಿಯರನ್ನು ಎಬ್ಬಿಸಿ 'ಯಾಜ್ಞಸೇನಿ! ಪತಿವ್ರತೆಯಾದ ನೀನು ಖೇದವನ್ನು ಹೊಂದಬೇಡ. ಸ್ತ್ರೀಯು ತನ್ನ ಪಾತಿವ್ರತ್ಯವನ್ನು ಯಾವಾಗಲೂ ರಕ್ಷಿಸಿಕೊಳ್ಳಬೇಕು. ಪೂರ್ವದಲ್ಲಿ ದೇವರಾತ ಎಂಬುವನ ಪತ್ನಿಯನ್ನು ಒಬ್ಬ ರಾಕ್ಷಸನು ಗಂಡನ ರೂಪದಿಂದ ಅಪಹರಿಸಿಕೊಂಡು ಹೋದನು. ತರುವಾಯ ಒಂದು ಸರೋವರದ ತೀರದಲ್ಲಿ ಗಂಡನ ರೂಪವನ್ನು ಬಿಟ್ಟು ತನ್ನ ನಿಜರೂಪವನ್ನು ಧರಿಸಿ ತನ್ನ ವಶಳಾಗಬೇಕೆಂದು ಆ ರಾಕ್ಷಸನು ಆ ಸ್ತ್ರೀಯೊಡನೆ ನಾನಾವಿಧವಾಗಿ ಕೇಳಿಕೊಂಡನು. ಆದರೆ ಅವಳು ಕೇಳಲೇ ಇಲ್ಲ. ಕೊನೆಗೆ ಆ ರಾಕ್ಷಸನು ಅವಳನ್ನು ಬೀಳಿಸಿ ಬಲಾತ್ಕಾರ ಮಾಡಲಿಕ್ಕೆ ಆರಂಭಿಸಿದನು. ಆಗಲೂ ಆ ಸ್ತ್ರೀಯು ಧೈರ್ಯವನ್ನು ತಂದುಕೊಂಡು ಅವಕಾಶವನ್ನು ಕೊಡಲಿಲ್ಲ. ತರುವಾಯ ರಾಕ್ಷಸನು ಕತ್ತಿಯನ್ನು ತೆಗೆದು ಭಯಪಡಿಸಿದನು. ಆಗಲೂ ಅವಳು

ಪ್ರಾಣದ ಆಸೆಯನ್ನು ಬಿಡುವವಳಾಗಿ 'ನಾನು ಪತಿಯನ್ನು ಆರಾಧನೆ ಮಾಡಿದ್ದರೆ ನನ್ನ ನಾಭಿಯ ಕೆಳಗೆ ತೊಡೆಯ ಮೇಲಿನ ಭಾಗವು ಕಲ್ಲಾಗಲಿ' ಎಂದು ಹೇಳಿಕೊಂಡಳು. ಕೂಡಲೇ ಹಾಗೆಯೇ ಆಯಿತು. ತರುವಾಯ ಆ ರಾಕ್ಷಸನು ಅವಳ ತಲೆಯನ್ನು ಕಡಿದುಬಿಟ್ಟನು.

ತರುವಾಯ ಮೃತಳಾದ ಅವಳು ಜಯಾ ಎಂದು ಹೆಸರುಳ್ಳವಳಾಗಿ ಪಾರ್ವತೀ ದೇವಿಗೆ ಅತ್ಯಂತ ಪ್ರಿಯಳಾದ ಸಖಿಯಾದಳು. ಆದುದರಿಂದ ಪತಿವ್ರತೆಯಾದ ಸ್ತ್ರೀಗೆ ದುಃಖವು ಸ್ವಲ್ಪ. ಸುಖವು ಬಹಳ. ಯಾರು ನಿನ್ನನ್ನು ಹಿಂಸಿಸುವರೋ ಅವರು ಹೀಗೆಯೇ ಸಾಯುವರು. ನೀನು ಬೇರೊಂದು ಮಾರ್ಗದಿಂದ ಸುದೇಷ್ಣೆಯ ಮನೆಗೆ ಹೋಗು. ನಾನು ಬೇರೊಂದು ಮಾರ್ಗದಿಂದ ಅಡಿಗೆಯಮನೆಗೆ ಹೋಗುವೆನು. ಜನರೊಬ್ಬರಿಗೂ ತಿಳಿಯದೆ ಇರಲಿ' ಎಂದು ಹೇಳಿ ಹೊರಟುಹೋದರು. ದ್ರೌಪದೀದೇವಿಯರೂ ಹೊರಟುಹೋದರು.



## ದ್ರೌಪದೀದೇವಿಯರು ಸುದೇಷ್ಣೆಯ ಮನೆಗೆ ಬಂದುದು[1]

ಈರೀತಿಯಾಗಿ ಭೀಮಸೇನದೇವರು ನೂರ ಆರು ಕೀಚಕರನ್ನು ಕೊಂದು ತೀರಿಸಿದರು. ಅವರ ಬಂಧುಗಳೆಲ್ಲರೂ ಗಂಧರ್ವರ ಭಯದಿಂದ ಒಂದು ಮಾತನ್ನು ಆಡಲಿಕ್ಕೆ ಸಮರ್ಥರಾಗಲಿಲ್ಲ. ಊರಿನ ಜರೆಲ್ಲರೂ ಹೆಂಗಸರೂ ಗಂಡಸರೂ ಬೆಳಗಾಗಲು ಬಂದು ಸತ್ತುಬಿದ್ದಿದ್ದ ನೂರ ಆರು ಜನರನ್ನು ನೋಡಿದರು. ಎಲ್ಲರೂ ಆಶ್ಚರ್ಯವನ್ನು ಹೊಂದಿ ಒಬ್ಬರೂ ಒಂದು ಮಾತನ್ನು ಆಡಲಿಲ್ಲ. ತರುವಾಯ ಊರ ಜನರೆಲ್ಲರೂ ರಾಜನ ಬಳಿಗೆ ಹೋಗಿ 'ರಾಜರೇ! ನೂರ ಆರು ಸೂತಪುತ್ರರೂ ಗಂಧರ್ವನಿಂದ ಸತ್ತು ಬಿದ್ದಿರುವರು. ಸೈರಂಧ್ರಿಯು ಬಿಡಿಸಲ್ಪಟ್ಟಳು. ಅವಳು ಪುನಃ ನಿನ್ನ ಮನೆಗೆ ಬಂದರೆ ನಿನ್ನ ನಗರವೇ ಸಂಶಯಗ್ರಸ್ತವಾಗುತ್ತದೆ. ಸೈರಂಧ್ರಿಯು ಅಷ್ಟು ಸುಂದರಿಯಾಗಿರುವಳು. ಗಂಧರ್ವರು ಅತ್ಯಂತ ಬಲಿಷ್ಠರಾಗಿರುವರು. ಪುರುಷ ರಾದವರು ಸುಂದರಿಯಾದ ಸ್ತ್ರೀಯನ್ನು ನೋಡಿದರೆ ಆಸೆಪಡುವರು. ಆ ಸೈರಂಧ್ರಿಯ ದೋಷದಿಂದ ನಿನ್ನ ನಗರವೇ ಬೇಗನೇ ನಾಶವನ್ನು ಹೊಂದದಂತೆ ಮಾಡುವವ ನಾಗು. ಸರ್ವಾಂಗಸುಂದರಿಯಾದವಳನ್ನು ಜನರು ನೋಡದೆ ಇರುವರೇ! ಕಣ್ಣಿಗೂ

1. ಭಾ.ವಿ.ಪ ಅ-24

ಮನಸ್ಸಿಗೂ ಪ್ರತಿಬಂಧವಿಲ್ಲವಷ್ಟೆ! ಆದುದರಿಂದ ಪರಮಸುಂದರಿಯಾದ ಸೈರಂಧ್ರಿಯನ್ನು ಯಾರು ನೋಡುವನೋ ಅವನು ಕಾಮವಶನಾಗುತ್ತಾನೆ. ಕೂಡಲೇ ಅವನನ್ನು ಗಂಧರ್ವನು ಬಂದು ಕೊಂದು ಹಾಕುವನು. ಆದುದರಿಂದ ಸೈರಂಧ್ರಿಯನ್ನು ನಿನ್ನ ಮನೆಯಿಂದಲೂ ಊರಿನಿಂದಲೂ ಹೊರಗೆ ಮಾಡು. ಸೈರಂಧ್ರಿಯಲ್ಲಿ ಯಮನು ಪ್ರವೇಶಿಸಿ ಊರನ್ನೇ ನಾಶಮಾಡುತ್ತಿರುವನು' ಎಂದು ಹೇಳಿದರು.

ಅವರ ಮಾತನ್ನು ಕೇಳಿ ವಿರಾಟರಾಜನು 'ಎಲ್ಲಾ ಸೂತರಿಗೂ ಉತ್ತರಕ್ರಿಯೆಯು ನಡೆಯಲಿ. ಎಲ್ಲರನ್ನೂ ಒಂದೇ ಚಿತೆಯಲ್ಲಿ ಇಟ್ಟು ಸುಡಲಿ' ಎಂದು ಹೇಳಿ ಪರಮದುಃಖವುಳ್ಳವನಾಗಿ ಅಂತಃಪುರವನ್ನು ಪ್ರವೇಶಿಸಿ ಅತ್ಯಂತ ಭಯವುಳ್ಳವನಾಗಿ ಸುದೇಷ್ಣೆಯೊಡನೆ ''ಸೈರಂಧ್ರಿಯು ಬಂದಾಗ ಅವಳೊಡನೆ ನನ್ನ ಮಾತಿನಿಂದ 'ಸೈರಂಧ್ರಿ! ನಿನಗೆ ಮಂಗಳವಾಗಲಿ. ನೀನೀಗ ಎಲ್ಲಿಗಾದರೂ ಬೇರೆ ಸ್ಥಳಕ್ಕೆ ಹೋಗು. ರಾಜರು ಗಂಧರ್ವರಿಂದ ಭಯಪಡುತ್ತಿರುವರು' ಎಂದು ಹೇಳಿಬಿಡು. ಸ್ವಯಂ ಗಂಧರ್ವರಿಂದ ರಕ್ಷಿತಳಾದ ಅವಳೊಡನೆ ನಾನು ಹೀಗೆ ಹೇಳಲಿಕ್ಕೆ ಆಗಲಾರದು. ನೀನು ಹೆಂಗಸಾದ ಕಾರಣ ಹೇಳಬಹುದು. ಆದುದರಿಂದ ನಿನ್ನ ಹತ್ತಿರ ಹೇಳಲಿಕ್ಕೆ ಹೇಳುತ್ತಿರುವೆನು'' ಎಂದನು.

ತರುವಾಯ ಜನರು ಒಂದೇ ಬೆಂಕಿಯಲ್ಲಿ ನೂರ ಆರು ಕೀಚಕರನ್ನು ಸುಟ್ಟು ಹಾಕಿದರು. ಅನಂತರದಲ್ಲಿ ಭೀಮಸೇನದೇವರಿಂದ ಬಿಡಿಸಲ್ಪಟ್ಟ ದ್ರೌಪದೀ ದೇವಿಯರು ಊರ ಒಳಗೆ ಬಂದರು. ಅವರು ಮೈತೊಳೆದುಕೊಂಡು ವಸ್ತ್ರವನ್ನು ನೆನೆಸಿಕೊಂಡು ಬಂದರು. ಅವರನ್ನು ನೋಡಿ ಪುರುಷರೆಲ್ಲರೂ ಗಂಧರ್ವರ ಭಯದಿಂದ ಹತ್ತುದಿಕ್ಕಿಗೆ ಓಡಿದರು. ಕೆಲವರು ಹಾಗೆಯೇ ಅಂಜಿಕೊಂಡವರಾಗಿ ಕಣ್ಣುಗಳೆರಡನ್ನೂ ಮುಚ್ಚಿಕೊಂಡರು. ಇನ್ನು ಕೆಲವರು ಕಣ್ಣಿಗೆ ಕೈಹಿಡಿದುಕೊಂಡು ಓಡಿದರು. 'ಅವಳನ್ನು ನೋಡಬೇಡಿರಿ. ನೋಡಬೇಡಿರಿ' ಎಂದು ಕೂಗಿಕೊಂಡರು. 'ಯಾರು ರೂಪವತಿಯಾದ ಅವಳನ್ನು ನೋಡುವನೋ ಅವನು ಕೀಚಕನಂತೆ ಸತ್ತು ಮಲಗುವನು' ಎಂದು ಹೇಳುತ್ತಾ ಎಲ್ಲರೂ ಗಂಧರ್ವರ ಭಯದಿಂದ ಮೋಹಿತರಾದರು. ತರುವಾಯ ದ್ರೌಪದೀದೇವಿಯರು ಮುಂದೆ ಬರುತ್ತಿರಲು ಅಡಿಗೆಯ ಮನೆಯ ಬಾಗಿಲಲ್ಲಿ ಭೀಮಸೇನದೇವರು ಮದಭರಿತವಾದ ಆನೆಯಂತೆ ನಿಂತಿದ್ದರು. 'ನನ್ನನ್ನು ಬಿಡಿಸಿದ ಗಂಧರ್ವರಾಜನಿಗೆ ನಮಸ್ಕಾರವು. ಅನಾಥಳಾಗಿ ಮನೆಯಲ್ಲಿ ವಾಸಮಾಡುತ್ತಿರುವ ನಿರ್ದೋಷಳಾದ ನನ್ನನ್ನು ಕೀಚಕರಿಂದ ರಕ್ಷಿಸಿದ ಗಂಧರ್ವರಾಜನಿಗೆ ನಮಸ್ಕಾರವು' ಎಂದು ಹೇಳಿದರು. ಅದಕ್ಕೆ ಭೀಮಸೇನದೇವರು

'ಯಾರು ಯಾವಾತಳ ವಶವರ್ತಿಗಳಾಗಿ ಇಲ್ಲಿ ಸಂಚರಿಸುತ್ತಿರುವರೋ ನೀನು ಅವರ ವಶಳಾಗಿ ಇಚ್ಛಾನುಸಾರವಾಗಿ ಸಂಚರಿಸುತ್ತಿರು. ಯಾವ ಪುರುಷರು ಪೂರ್ವದಲ್ಲಿ ಏಕವರ್ತಿಗಳಾಗಿ ಇಲ್ಲಿ ಸಂಚರಿಸುವರೋ ಅವರು ನಿನ್ನ ಮಾತನ್ನು ಕೇಳಿ ಋಣರಹಿತರಾಗಿ ವಿಹಾರ ಮಾಡುತ್ತಿರಲಿ' ಎಂದು ಹೇಳಿದರು. ಅವರ ಮಾತನ್ನು ಕೇಳಿ ಜನರಿಗೆ ಒಂದು ಅರ್ಥವೂ ಆಗಲಿಲ್ಲ. ತರುವಾಯ ದ್ರೌಪದೀದೇವಿಯರು ನರ್ತನಶಾಲೆಯಲ್ಲಿ ವಿರಾಟರಾಜನ ಕನ್ಯೆಯರಿಗೆ ನರ್ತನವನ್ನು ಹೇಳಿಕೊಡುತ್ತಿದ್ದ ಅರ್ಜುನನನ್ನು ನೋಡಿದರು. ತರುವಾಯ ರಾಜಕನ್ಯೆಯರು ಅರ್ಜುನನಿಂದ ಸಹಿತರಾಗಿ ನರ್ತನಶಾಲೆಯಿಂದ ಹೊರಗೆ ಬಂದವರಾಗಿ ಬರುತ್ತಿದ್ದ ದ್ರೌಪದೀದೇವಿಯರನ್ನು ನೋಡಿದರು. ಕನ್ಯೆಯರು ದ್ರೌಪದೀದೇವಿಯರೊಡನೆ 'ಸೈರಂಧ್ರಿ! ನೀನು ದೈವೇಚ್ಛೆಯಿಂದಲೇ ತಪ್ಪಿಸಿಕೊಂಡು ಬರುತ್ತಿರುವಿ. ದೈವೇಚ್ಛೆ ಯಿಂದ ಪುನಃ ಬರುತ್ತಿರುವಿ. ನಿರಪರಾಧಿನಿಯಾದ ನಿನ್ನನ್ನು ಪೀಡಿಸಿದ ಸೂತರು ದೈವೇಚ್ಛೆಯಿಂದ ಮೃತರಾದರು' ಎಂದು ಹೇಳಿದರು.

ಆಗ ಬೃಹನ್ನಲಾ ಎಂದು ಹೆಸರುಳ್ಳ ಅರ್ಜುನನು 'ಸೈರಂಧ್ರಿ! ನೀನು ಹೇಗೆ ಬಿಡುಗಡೆಯನ್ನು ಹೊಂದಿರುವಿ? ಹೇಗೆ ಆ ಪಾಪಿಗಳು ಸತ್ತರು? ಆ ನಿನ್ನ ಕಥೆಯನ್ನು ಕೇಳಬೇಕೆಂದು ಇಚ್ಛೆಯಿಂದ ಇರುವೆನು. ಸತ್ಯವನ್ನು ಹೇಳು' ಎಂದನು.

ಆಗ ದ್ರೌಪದೀದೇವಿಯರು 'ಬೃಹನ್ನಲೆಯೇ! ನಿನಗೀಗ ಈ ಸೈರಂಧ್ರಿಯಿಂದ ಆಗುವ ಕಾರ್ಯವೇನಿದೆ? ನೀನು ಯಾವಾಗಲೂ ಕನ್ಯಾಪುರದಲ್ಲಿ ಸುಖವಾಗಿ ವಿಹರಿಸುತ್ತಿರುವಿ. ಸೈರಂಧ್ರಿಯು ಹೊಂದಿದ ದುಃಖವನ್ನು ನೀನು ಹೊಂದಿಲ್ಲವಲ್ಲಾ! ಆದುದರಿಂದಲೇ ದುಃಖಿತಳಾದ ನನ್ನೊಡನೆ ನಗುತ್ತಾ ಕೇಳುತ್ತಿರುವಿ' ಎಂದು ಹೇಳಿದರು.

ಅದಕ್ಕೆ ಅರ್ಜುನನು 'ಈ ಬೃಹನ್ನಲೆಯೂ ತಿರ್ಯಗ್ಯೋನಿಯನ್ನು ಹೊಂದಿ ದಂತೆ ಅನಂತದುಃಖವನ್ನು ಅನುಭವಿಸುತ್ತಿರುವಳು. ನಿನಗೆ ಮಾತ್ರ ಅದು ತಿಳಿಯಲಾರದು. ನಿನ್ನೊಡನೆ ನಾನು ವಾಸಮಾಡಿದ್ದೇನೆ. ಎಲ್ಲರೊಡನೆ ನೀನೂ ವಾಸಮಾಡುವಿ. ನಿನಗಿಂತ ಹೆಚ್ಚಾಗಿ ಕಷ್ಟದಿಂದ ನಾನು ವಾಸಮಾಡುತ್ತಿರುವೆನು. ಸುಂದರಿ! ನೀನು ದುಃಖಪಡುತ್ತಿರುವಾಗ ಯಾರು ತಾನೆ ದುಃಖವನ್ನು ಚಿಂತಿಸದೆ ಇರುವನು? ಯಾರಿಗೂ ಒಬ್ಬನ ಮನಸ್ಸನ್ನು ತಿಳಿಯಲಿಕ್ಕೆ ಆಗಲಾರದು. ಆದುದರಿಂದ ನೀನು ನನ್ನನ್ನು ತಿಳಿಯದೆ ಇರುವಿ' ಎಂದು ಹೇಳಿದನು.

ತರುವಾಯ ಆ ರಾಜಕನ್ಯೆಯರಿಂದ ಸಹಿತರಾಗಿಯೇ ದ್ರೌಪದೀದೇವಿಯರು

ರಾಜಗೃಹವನ್ನು ಪ್ರವೇಶಿಸಿ ಸುದೇಷ್ಣೆಯ ಬಳಿಗೆ ಹೋದರು. ಆಗ ರಾಜಪತ್ನಿಯಾದ ಸುದೇಷ್ಣೆಯು ದ್ರೌಪದೀದೇವಿಯರೊಡನೆ 'ಸೈರಂಧ್ರಿ! ನೀನು ಇಲ್ಲಿಂದ ಬೇಗನೇ ಬೇಕಾದ ಸ್ಥಳಕ್ಕೆ ಹೋಗು. ಮಹಾರಾಜರು ಗಂಧರ್ವರಿಂದ ಭಯಪಡುತ್ತಿರುವರು. ನೀನು ಒಳ್ಳೇ ಯೌವನವತಿಯಾಗಿರುವಿ. ಪರಮಸುಂದರಿಯಾಗಿರುವಿ. ಜನರ ಮನಸ್ಸು ಸುಖದಲ್ಲಿ ಹೋಗಿಯೇ ಹೋಗುವುದು. ಆದುದರಿಂದ ನಿನ್ನಿಂದಾಗಿ ನಮ್ಮ ರಾಜ್ಯಕ್ಕೆ ನಗರಕ್ಕೆ ಭಯವುಂಟಾಗಿದೆ. ಆದುದರಿಂದ ಈಗಲೇ ಈ ನಗರವನ್ನು ಬಿಟ್ಟು ನಿನಗೆ ಬೇಕಾದಲ್ಲಿಗೆ ಹೊರಟುಹೋಗು. ನಿನ್ನ ನಿಮಿತ್ತವಾಗಿ ನನ್ನ ಬಂಧುಗಳೆಲ್ಲರೂ ಸತ್ತು ಹೋದರು. ನಿನ್ನ ಬುದ್ಧಿಯು ತುಂಬಾ ಕ್ರೂರವಾದದ್ದು. ನನ್ನ ಸಹೋದರರೆಲ್ಲರನ್ನೂ ಕೊಲ್ಲಿಸಿದಿ. ಆದುದರಿಂದ ಗಂಧರ್ವರಾಜರಿಂದ ನಮಗೀಗ ಭಯವಿದೆ. ಇಲ್ಲಿ ಕ್ಷೇಮವುಂಟಾಗುವಂತೆ ನೀನು ಇಚ್ಛಾನುಸಾರವಾಗಿ ಹೋಗುವವಳಾಗು' ಎಂದು ಹೇಳಿದಳು.

ಸುದೇಷ್ಣೆಯ ಮಾತನ್ನು ಕೇಳಿ ದ್ರೌಪದೀದೇವಿಯರು 'ಸುಂದರಿ! ಇನ್ನು ಹದಿಮೂರು ದಿವಸ ರಾಜರು ಕ್ಷಮಿಸಲಿ. ಆಗ ಆ ಗಂಧರ್ವರು ಕೃತಾರ್ಥರಾಗು ವರು. ತರುವಾಯ ಅವರು ನನ್ನನ್ನು ಕರೆದುಕೊಂಡು ಹೋಗುತ್ತಾರೆ. ನಿನಗೆ ಪ್ರಿಯವನ್ನು ಉಂಟುಮಾಡುತ್ತಾರೆ. ರಾಜರಿಗೆ ನಿಶ್ಚಯವಾಗಿಯೂ ಶ್ರೇಯಸ್ಸನ್ನು ಉಂಟುಮಾಡುವರು. ಅವರು ರಾಜರಿಂದ ಉಪಕೃತರಾಗುವರು. ಅವರು ಉಪಕಾರಸ್ಮರಣೆಯುಳ್ಳವರು. ಬಲಿಷ್ಠರು. ಸಜ್ಜನರು ಒಬ್ಬರು ಮಾಡಿದ ಉಪಕಾರಕ್ಕೆ ಪ್ರತ್ಯುಪಕಾರವನ್ನು ಮಾಡುವವರು. ಕಾರ್ಯವಾಗಬೇಕೆಂದು ನಾನು ಏನೋ ಏನೋ ಹೇಳುತ್ತೇನೆಂದು ತಿಳಿಯಬೇಡ. ನಾನು ಹೇಳಿದಷ್ಟು ದಿವಸ ಮಾತ್ರ ನನ್ನನ್ನು ರಕ್ಷಿಸು. ಆದರಿಂದ ನಿನಗೆ ಶ್ರೇಯಸ್ಸಾಗುವುದು' ಎಂದು ಹೇಳಿದರು.

ದ್ರೌಪದೀದೇವಿಯರ ಮಾತನ್ನು ಕೇಳಿ ಸುದೇಷ್ಣೆಯು ದುಃಖಮೋಹಿತಳಾಗಿ ಸಹೋದರರ ದುಃಖವುಳ್ಳವಳಾಗಿ 'ಭದ್ರೆ! ನೀನು ಇಚ್ಛಾನುಸಾರವಾಗಿ ವಾಸಮಾಡು. ನಿನ್ನನ್ನು ನಾನು ಮರೆಹೊಂದಿರುವೆನು. ನನ್ನ ಗಂಡನನ್ನು ಮಕ್ಕಳನ್ನು ರಕ್ಷಿಸುವಳಾಗು' ಎಂದು ಹೇಳಿ ವಿರಾಟರಾಜನೊಡನೆ ಈ ವಿಷಯವನ್ನು ಹೇಳಿದಳು. 'ಗಂಧರ್ವರ ಭಯದಿಂದ ಮೂವತ್ತು ರಾತ್ರಿ ಇವಳನ್ನು ವಾಸಮಾಡಿಸುವೆನೆಂ'ದು ಹೇಳಿದಳು.



## ದೂತರು ದುರ್ಯೋಧನನೊಡನೆ ಕೀಚಕವಧವನ್ನು ತಿಳಿಸಿದ್ದು [1]

ಕೀಚಕನು ಮೃತನಾದ ಮೇಲೆ ವಿರಾಟನು ಮಂತ್ರಿಗಳಿಂದ ಸಹಿತನಾಗಿ ಬಹಳ ದುಃಖವನ್ನು ಹೊಂದಿದನು. ಕೀಚಕನ ಮತ್ತು ಅವನ ತಮ್ಮಂದಿರ ಸಂಹಾರವನ್ನು ಕೇಳಿ ಸಾಮಾನ್ಯಜನರೆಲ್ಲರೂ ಆಶ್ಚರ್ಯವನ್ನು ಹೊಂದಿದರು. ಆ ಊರಲ್ಲಿ ಸರ್ವಸ್ಥಳಗಳಲ್ಲಿ ಜನರು 'ಕೀಚಕನು ಪರಾಕ್ರಮಶಾಲಿಯಾಗಿದ್ದರು. ರಾಜನಿಗೆ ಬೇಕಾದವನಾಗಿದ್ದನು. ದರ್ಪವುಳ್ಳವನಾಗಿದ್ದನು. ಬಲಿಷ್ಠನಾಗಿದ್ದನು. ಒಬ್ಬರಿಂದಲೂ ಪರಾಜಯಹೀನನಾಗಿದ್ದನು. ಶತ್ರುಗಳೆಲ್ಲರನ್ನೂ ಜಯಿಸುತ್ತಿದ್ದನು. ದುರ್ಬುದ್ಧಿಯುಳ್ಳವನಾಗಿ ಹೆಂಗಸರನ್ನು ಸೆಳೆಯುತ್ತಿದ್ದನು. ಇಂಥವನು ಸೈರಂಧ್ರಿ ನಿಮಿತ್ತವಾಗಿ ರಾತ್ರಿಯಲ್ಲಿ ಗಂಧರ್ವರಿಂದ ಸತ್ತನು' ಎಂದು ಹೇಳುತ್ತಿದ್ದರು. ಬೇರೆಬೇರೆ ದೇಶಗಳಲ್ಲಿಯೂ ಕೀಚಕನ ಮರಣವನ್ನು ಜನರು ಆಶ್ಚರ್ಯಪಟ್ಟು ಹೇಳುತ್ತಿದ್ದರು.

ಅಜ್ಞಾತವಾಸಮಾಡುತ್ತಿರುವ ಪಾಂಡವರನ್ನು ಕಂಡುಹಿಡಿಯಬೇಕೆಂದು ದುರ್ಯೋಧನನ್ನು ಕಳುಹಿಸಿದ ದೂತರು ಅನೇಕ ದೇಶಗ್ರಾಮನಗರಗಳಲ್ಲಿ ಹುಡುಕುವವರಾಗಿ ಎಲ್ಲಿಯೂ ವರ್ತಮಾನವನ್ನು ತಿಳಿಯದೆ ಹಿಂದೆ ತಿರುಗಿ ಹಸ್ತಿನಾವತಿಗೆ ಬಂದು ಅಲ್ಲಿ ರಾಜನಾದ ದುರ್ಯೋಧನನನ್ನು ನೋಡಿ ಭೀಷ್ಮಾದಿಗಳಿಂದ ಸಹಿತನಾಗಿದ್ದ ಅವನಿಗೆ ನಮಸ್ಕರಿಸಿ ಸಭಾಮಧ್ಯದಲ್ಲಿ ಬಂಗಾರದ ಸೂರ್ಯನಂತೆ ಪ್ರಕಾಶಮಾನವಾಗಿರುವ ಆಸನದಲ್ಲಿ ಕೂತಿದ್ದ ದುರ್ಯೋಧನನೊಡನೆ 'ನಾವು ನಾನಾ ಪ್ರದೇಶಗಳಲ್ಲಿ ಪಾಂಡವರನ್ನು ಹುಡುಕಿದೆವು. ಎಲ್ಲಿಯೂ ಅವರ ವರ್ತಮಾನವೇ ಸಿಗಲಿಲ್ಲ. ಅವರ ಸಾರಥಿಯರು ಮಾತ್ರ ದ್ವಾರಕಾಪಟ್ಟಣಕ್ಕೆ ಹೋಗಿರುವರೆಂಬ ವೃತ್ತಾಂತವು ತಿಳಿಯಿತು. ಅವರ ವಿಷಯವೇ ತಿಳಿಯಲಿಲ್ಲ. ಎಲ್ಲಿಯೂ ಅವರ ವೃತ್ತಾಂತವು ತಿಳಿಯದೆ ಹೋದ ಕಾರಣ ಅವರು ನಷ್ಟರಾದರು. ನೀನು ಸ್ವಸ್ಥನಾಗಿರು. ನಿನಗೆ ನಮಸ್ಕಾರವು. ಎಲ್ಲಾ ಭೂಮಿಯಲ್ಲಿಯೂ ನಾವು ಹುಡುಕಿಯಾಯಿತು. ಪಾಂಡವರು ಸಿಗಲೇ ಇಲ್ಲ. ಇನ್ನು ಮೇಲೆ ಪಾಂಡವರನ್ನು ಹುಡುಕಲು ನಾವು ಏನು ಮಾಡಲಿ? ಇದೊಂದು ಪ್ರಿಯವಾದ ಮಂಗಳಕರವಾದ ಮಾತನ್ನು ಕೇಳಬೇಕು. ಯಾವ ಬಲಿಷ್ಠನಾದ ಕೀಚಕನಿಂದ ಅನೇಕ ಬಾರಿ ತ್ರಿಗರ್ತದೇಶದವರು ಪೀಡಿಸಲ್ಪಟ್ಟರೋ ಆ ವಿರಾಟರಾಜನ ಭಾವಮೈದುನನಾದ ಸೇನಾಪತಿಯಾದ ಸುದೇಷ್ಣೆಯ ಸಹೋದರನಾದ ಕ್ರೂರನಾದ ಶೂರನಾದ ಭಯ

1. ಭಾ.ವಿ.ಪ ಅ-25

ರಹಿತನಾದ ಉತ್ಸಾಹಿಯಾದ ಪರಾಕ್ರಮಶಾಲಿಯಾದ ಯುದ್ಧವನ್ನು ತಿಳಿದವನಾದ ಶತ್ರುವೀರ್ಯವನ್ನು ನಾಶಮಾಡುವವನಾದ ಸಿಂಹದಂತೆ ಪರಾಕ್ರಮಶಾಲಿಯಾದ ಪ್ರಜಾರಕ್ಷಣೆಯಲ್ಲಿ ಸಮರ್ಥನಾದ ಶತ್ರುಗಳನ್ನು ಹಿಡಿಯುವ ಶಕ್ತಿಯುಳ್ಳವನಾದ ಮಹಾಯುದ್ಧದಲ್ಲಿ ಶತ್ರುಗಳನ್ನು ಜಯಿಸಿದವನಾದ ಯುದ್ಧದಲ್ಲಿ ಪ್ರಿಯವುಳ್ಳವನಾದ ಕೀಚಕನು ಸ್ತ್ರೀನಿಮಿತ್ತವಾಗಿ ಮಧ್ಯರಾತ್ರಿ ಸಮಯದಲ್ಲಿ ಗಂಧರ್ವರಿಂದ ಸಂಹರಿಸಲ್ಪಟ್ಟರು. ಅವನ ಸಹೋದರರೂ ಗಂಧರ್ವರಿಂದಲೇ ಮೃತರಾದರು. ವಿರಾಟನಗರದಲ್ಲಿ ಗಂಧರ್ವರ ಹೆಂಡತಿಯಾದ ಒಬ್ಬಳು ಸುಂದರಿಯಾದ ಸ್ತ್ರೀಯು ಇರುವಳು. ಅವಳ ಹೆಸರು ಸೈರಂಧ್ರಿಯೆಂದು. ಆ ದುಷ್ಟನಾದ ಕೀಚಕನು ಆ ಸ್ತ್ರೀಯನ್ನು ಕಾಮಿಸಿದನು. ಆದರಿಂದ ಅವನು ರಾತ್ರಿಯಲ್ಲಿ ಗಂಧರ್ವರಿಂದ ಕೊಲ್ಲಲ್ಪಟ್ಟನು. ಈಪ್ರಕಾರವಾದ ವೃತ್ತಾಂತವನ್ನು ನಾವು ಕೇಳಿದೆವು. ಇನ್ನು ಮೇಲೆ ಪಾಂಡವರನ್ನು ಹುಡುಕಲಿಕ್ಕೆ ಸರ್ವತ್ರ ಚಾರರನ್ನು ಕಳುಹಿಸು. ದುಷ್ಟನಾದ ಕೀಚಕನು ಗಂಧರ್ವರಿಂದ ಮೃತನಾದನು ಎಂಬ ಇಷ್ಟು ಅಂಶವನ್ನು ನಾವು ಕೇಳಿರುವೆವು. ನಿನಗೆ ಮಂಗಳವಾಗಲಿ ನಿನಗೆ ಪ್ರಿಯವಾದ ಶತ್ರುಗಳ ಪರಾಭವವನ್ನು ಕೇಳಿ ಕೃತಾರ್ಥನಾಗಿ ಇನ್ನು ಮೇಲೆ ಮಾಡಬೇಕಾದುದನ್ನು ಮಾಡು' ಎಂದು ಹೇಳಿದರು.



## ದುರ್ಯೋಧನಾದಿಗಳು ಪಾಂಡವರನ್ನು ಹುಡುಕಲಿಕ್ಕೆ ಯೋಚಿಸಿದ್ದು [1]

ದುರ್ಯೋಧನನು ದೂತರ ಮಾತನ್ನು ಕೇಳಿ ಬಹಳಹೊತ್ತು ಯೋಚನೆ ಮಾಡುತ್ತಿದ್ದು ಆಮೇಲೆ ಸಭಿಕರೊಡನೆ ಹೇಳಿದನು. 'ಕಾರ್ಯಗತಿಯನ್ನು ಸರಿಯಾಗಿ ತಿಳಿಯುವುದು ಕಠಿಣವಾಗಿದೆ. ಆದುದರಿಂದ ಪಾಂಡವರು ಎಲ್ಲಿರಬಹುದೆಂದು ನೀವೆಲ್ಲರೂ ಯೋಚಿಸಿಬೇಕು. ಅಜ್ಞಾತವಾಸದ ಸಮಯವು ಸ್ವಲ್ಪ ಮಾತ್ರ ಉಳಿದಿದೆ. ಬಹುಅಂಶವು ಕಳೆದುಹೋಯಿತು. ಹೀಗೆಯೇ ಅವರು ಉಳಿದ ಸಮಯವನ್ನು ಕಳೆದುಬಿಡುವರೋ ಏನೋ. ತಮ್ಮ ಪ್ರತಿಜ್ಞೆಯನ್ನು ಪೂರೈಸಿದ ಮೇಲೆ ಅವರು ಇಷ್ಟರವರೆಗೆ ಅನುಭವಿಸಿದ ದುಃಖದಿಂದ ಕೌರವರ ಮೇಲೆ ಬಹಳ ಕೋಪವುಳ್ಳವರಾಗುವರು. ಆದುದರಿಂದ ಪುನಃ ಯೋಗ್ಯರಾದ ದೂತರಿಂದ ಆ

1. ಭಾ.ವಿ.ಪ ಅ-26

ಪಾಂಡವರನ್ನು ಹುಡುಕಿಸಬೇಕು. ಅವರು ಪುನಃ ವನಕ್ಕೆ ಪ್ರವೇಶಿಸುವಂತೆ ಮಾಡಬೇಕು. ಹಾಗೆ ಮಾಡಿದರೆ ನಮಗೆ ಶತ್ರುಹೀನವಾದ ರಾಜ್ಯವು ಬಹುಕಾಲದವರೆಗೆ ಇರುವುದು' ಎಂದು ಹೇಳಿದನು.

ದುರ್ಯೋಧನನು ಅತ್ಯಂತ ದುಃಖಿಸಿಕೊಂಡ. ಹೀಗೆ ಹೇಳಲು ಕರ್ಣನು 'ಹೋದವರೇ ಪುನಃ ಹೋಗುವುದು ಬೇಡ. ಬೇರೆ ಬೇರೆ ಜನರು ಆ ಪಾಂಡವರನ್ನು ಹುಡುಕಲಿಕ್ಕೆ ಹೋಗಲಿ. ನಾನಾ ದೇಶಗಳಲ್ಲಿ ಹುಡುಕಲಿ. ಬ್ರಾಹ್ಮಣ ವೇಷವನ್ನು ಧರಿಸಿಕೊಂಡು ನಾನಾ ಸಭೆಗಳಲ್ಲಿ ಹುಡುಕಲಿ. ತೀರ್ಥಗಳಲ್ಲಿಯೂ ಬಂಗಾರವನ್ನು ತೆಗೆಯುವ ಸ್ಥಳಗಳಲ್ಲಿಯೂ ನದೀತೀರಗಳಲ್ಲಿಯೂ ಗ್ರಾಮ ಗಳಲ್ಲಿಯೂ ಆಶ್ರಮಗಳಲ್ಲಿಯೂ ಪರ್ವತಗಳಲ್ಲಿಯೂ ಗುಹೆಗಳಲ್ಲಿಯೂ ಚೆನ್ನಾಗಿ ಪಾಂಡವರನ್ನು ಹುಡುಕಬೇಕು' ಎಂದು ಹೇಳಿದನು.

ತರುವಾಯ ದುರ್ಯೋಧನನ ಪ್ರಿಯ ಸಹೋದರನಾದ ದುಃಶಾಸನನು ದುರ್ಯೋಧನನೊಡನೆ 'ನಮಗೆ ನಂಬಿಕೆಗೆ ಪಾತ್ರರಾದ ದೂತರಿಗೆ ಬೇಕಾದ ಹಣವನ್ನು ಕೊಟ್ಟು ಕಳುಹಿಸುವ. ಅವರು ಹೋಗಿ ಹುಡುಕಿಕೊಂಡು ಬರಲಿ. ಕರ್ಣ ಹೇಳಿದ ಸ್ಥಳಗಳಲ್ಲಿ ಭೃತ್ಯರು ಹೋಗಿ ಹುಡುಕಲಿ. ಪಶುಗಳು ಮೂಗಿನಿಂದ ತಿಳಿಯುವುವು. ಬ್ರಾಹ್ಮಣರು ವೇದಗಳಿಂದ ತಿಳಿಯುವರು. ರಾಜರು ದೂತರಿಂದ ನೋಡುವರು. ಇತರರು ಕಣ್ಣಿನಿಂದ ನೋಡುವರು. ಪಾಂಡವರು ಇರುವ ಸ್ಥಳವಾಗಲೀ ಅವರ ವಿಷಯವಾಗಲೀ ಒಂದೂ ತಿಳಿಯಲಿಲ್ಲವಲ್ಲಾ! ಅವರು ಅತ್ಯಂತವಾಗಿ ಅಡಗಿಕೂತುಕೊಂಡಿರುವರೋ? ಸಮುದ್ರದ ಆಚೆ ತೀರಕ್ಕೆ ಹೊರಟುಹೋದರೋ? ಅಥವಾ ಕಾಡಿನಲ್ಲಿ ದುಷ್ಟಮೃಗಗಳಿಂದ ಭಕ್ಷಿತರಾದರೋ? ದರ್ಪಹೀನರಾಗಿ ಆಶಾಹೀನರಾಗಿ ರಾಕ್ಷಸರಿಂದ ಭಕ್ಷಿಸಲ್ಪಟ್ಟರೋ? ಅಥವಾ ಆಪತ್ತನ್ನು ಹೊಂದಿ ನಾಶವನ್ನೇ ಹೊಂದಿದರೋ? ಆದುದರಿಂದ ನಿನ್ನ ಮನಸ್ಸನ್ನು ಸರಿಪಡಿಸಿಕೊಂಡು ನಿನ್ನ ಅಭಿಪ್ರಾಯಬಂದಂತೆ ಮಹೋತ್ಸಾಹವನ್ನು ಮಾಡು' ಎಂದು ಹೇಳಿದನು.



## ದ್ರೋಣಾಚಾರ್ಯರು ಪಾಂಡವರ ವಿಷಯವಾಗಿ ಹೇಳಿದ್ದು [1]

ತರುವಾಯ ಸಭಾಮಧ್ಯದಲ್ಲಿ ದ್ರೋಣಾಚಾರ್ಯರು 'ಶೂರರಾದ ವಿದ್ಯಾವಂತರಾದ ಬುದ್ಧಿವಂತರಾದ ಜಿತೇಂದ್ರಿಯರಾದ ಸತ್ಯಪ್ರತಿಜ್ಞೆಯುಳ್ಳವರಾದ ಧರ್ಮರಾಜನನ್ನು ಅನುಸರಿಸಿದವರಾದ ಅಂತಹ ಪಾಂಡವರು ಯಾವಾಗಲೂ ನಾಶವನ್ನು ಹೊಂದಲಾರರು. ಅಂತಹ ವಿನಯೋಪೇತರಾದ ಮಹಾತ್ಮರಾದ ಪಾಂಡವರಿಗೆ ಭಗವಂತನು ಏಕೆ ಕ್ಷೇಮವನ್ನು ಉಂಟುಮಾಡದೆ ಇರುವನು? ಆದುದರಿಂದ ಪ್ರಯತ್ನಪೂರ್ವಕವಾಗಿ ಹುಡುಕಿರಿ. ಇನ್ನೂ ಅಜ್ಞಾತವಾಸದ ಸಮಯವು ಮುಗಿದಿಲ್ಲ. ಅವರು ನಾಶವನ್ನು ಹೊಂದಿರಲಾರರೆಂದು ನನಗೆ ನಿಶ್ಚಯವಿದೆ. ಮಾಡಬೇಕಾದ ಕಾರ್ಯವನ್ನು ಬೇಗನೇ ಮಾಡಬೇಕು. ಸರಿಯಾಗಿ ಯೋಚನೆ ಮಾಡಿ ಪಾಂಡವರು ಇರುವ ಸ್ಥಳವನ್ನು ಕಂಡುಹಿಡಿಯಬೇಕು. ಪಾಂಡವರ ಪ್ರವೃತ್ತಿಯು ತಿಳಿಯುವಂತೆ ನೀತಿಯನ್ನು ಮಾಡಿರಿ. ಸರ್ವೋಪಾಯಗಳಿಂದ ಪಾಂಡವರನ್ನು ಕಂಡುಹಿಡಿಯುವಂತೆ ಪ್ರಯತ್ನಮಾಡು. ಅವರು ಯಾವಾಗಲೂ ದೇವತೆಗಳಿಂದ ರಕ್ಷಿತರಾದವರು. ಅವರನ್ನು ಕಂಡುಹಿಡಿಯುವುದು, ಶ್ರಮಸಾಧ್ಯವಾದದ್ದು. ಆದುದರಿಂದ ಪ್ರಯತ್ನಮಾಡಿರಿ. ಬ್ರಾಹ್ಮಣರನ್ನು ಇತರ ದೂತರನ್ನು ಕಳುಹಿಸಿ ಹುಡುಕಿಸಿರಿ' ಎಂದು ಹೇಳಿದರು.



## ಭೀಷ್ಮಾಚಾರ್ಯರು ಪಾಂಡವರ ವಿಷಯವಾಗಿ ಹೇಳಿದ್ದು [2]

ತರುವಾಯ ಭೀಷ್ಮಾಚಾರ್ಯರು ಮಾತಾಡಿದರು 'ಸರ್ವಧರ್ಮಗಳನ್ನೂ ತಿಳಿದವರಾದ ನಮ್ಮ ದ್ರೋಣಾಚಾರ್ಯರು ಸತ್ಯವನ್ನೇ ಹೇಳಿದರು. ಅಂತಹ ಸದಾಚಾರ ಸಂಪನ್ನರಾದ ಪಾಂಡವರು ನಾಶವನ್ನು ಹೊಂದಲಾರರು. ಅವರು ಸರ್ವಲಕ್ಷಣ ಸಂಪನ್ನರು. ದೊಡ್ಡವರ ಆಜ್ಞೆಯನ್ನು ಪರಿಪಾಲಿಸುವವರು. ಸತ್ಯಧರ್ಮ ಪರಾಯಣರು. ಅವರು ಸಮಯವನ್ನು ತಿಳಿದವರು. ಸಮಯವನ್ನು ಪರಿಪಾಲಿಸುತ್ತಾ ಇರುವರು. ವಿಷಾದವನ್ನು ಹೊಂದಲಾರರು. ತಪಸ್ಸಿನಿಂದಲೂ ಪರಾಕ್ರಮದಿಂದಲೂ ರಕ್ಷಿತರಾದ ಅವರು ನಾಶವನ್ನು ಹೊಂದಿರಲಾರರೆಂದು ನನಗೆ ದೃಢವಾದ

1. ಭಾ.ವಿ.ಪ ಅ-27

2. ಭಾ.ವಿ.ಪ ಅ-28

ನಿಶ್ಚಯವಿದೆ. ಅವರನ್ನು ಹುಡುಕುವ ವಿಷಯವನ್ನು ಬುದ್ಧಿಯನ್ನು ಹೇಳುವೆನು. ನಮ್ಮಿಂದ ಸಾಧ್ಯವಾದಷ್ಟು ಯೋಚಿಸಿ ಬುದ್ಧಿಯಿಂದ ಅವರನ್ನು ಕಂಡುಹಿಡಿಯಲಿಕ್ಕೆ ನೀತಿಯನ್ನು ಹೇಳುವೆನು. ನಾನು ಈ ರೀತಿಯಾಗಿ ಪಾಂಡವರನ್ನು ಕಂಡುಹಿಡಿಯುವ ಉಪಾಯವನ್ನು ಹೇಳಬಾರದು. ನನಗೆ ಪಾಂಡವರೂ ಕೌರವರೂ ಸಮಾನರೇ. ಆದರೂ ಅವರು ಇರುವ ಸ್ಥಳವನ್ನು ಯೋಚಿಸಿ ಹೇಳುವೆನು.

ಸಭೆಯಲ್ಲಿ ಮಾತಾಡಲಿಕ್ಕೆ ಹೊರಟವನು ಅವಶ್ಯವಾಗಿ ಸತ್ಯವಾದ ಮಾತನ್ನೇ ಆಡಬೇಕು. ದಾನಶೀಲನಾದ ಅಕಾರ್ಯದಲ್ಲಿ ಲಜ್ಜಾಉಳ್ಳವನಾದ ಧರ್ಮಶೀಲನಾದ ಧರ್ಮರಾಜನು ಎಲ್ಲಿ ವಾಸಮಾಡುತ್ತಿರುವನೋ ದೇಶದ ಜನರೂ ಹಾಗೆಯೇ ಇರುವರು. ಯಾವ ಸ್ಥಳದಲ್ಲಿ ಧರ್ಮರಾಜನು ವಾಸಮಾಡುವನೋ ಅಲ್ಲಿಯ ಜನರು ಸಂತೋಷವುಳ್ಳವರಾಗಿಯೂ ಪುಷ್ಟರಾಗಿಯೂ ಸಮರ್ಥರಾಗಿಯೂ ಅಸೂಯಾ ರಹಿತರಾಗಿಯೂ ಅಭಿಮಾನರಹಿತರಾಗಿಯೂ ಮಾತ್ಸರ್ಯರಹಿತರಾಗಿಯೂ ಇರುವರು. ಅಲ್ಲಿ ಯಾವಾಗಲೂ ವೇದಘೋಷಗಳೂ ಪುಣ್ಯಶಬ್ದಗಳೂ ಕೇಳಿಸುತ್ತಿರು ವುವು. ಬಹುದಕ್ಷಿಣೆಯನ್ನು ಕೊಟ್ಟು ಯಜ್ಞಗಳು ನಡೆಯುತ್ತಿರುವುವು. ಕಾಲಕ್ಕೆ ಸರಿಯಾಗಿ ಬೇಕಾದಷ್ಟು ಮಳೆಯು ಬರುವುದು. ಭೂಮಿಯಲ್ಲಿ ಬೇಕಾದಷ್ಟು ಬೆಳೆಸಾಗುವುದು. ಧಾನ್ಯಗಳು ರಸವತ್ತಾಗಿ ಇರುವುವು. ಹಣ್ಣುಗಳು ಚೆನ್ನಾಗಿ ಇರುವುವು. ಹೂಗಳಲ್ಲಿ ಒಳ್ಳೇ ವಾಸನೆಯು ಇರುವುದು. ಒಳ್ಳೇ ಮಾತುಗಳೇ ಕಿವಿಗೆ ಬೀಳುತ್ತಿರುವುವು. ಸುಖವಾಗುವಂತೆ ಗಾಳಿಯು ಬೀಸುತ್ತಿರುವುದು. ಅಲ್ಲಿ ಒಂದು ರೋಗವೂ ಇರಲಾರದು. ಒಬ್ಬರನ್ನು ಕೊಲ್ಲುವುದು ಬಂಧಿಸುವುದೂ ಇರಲಾರದು. ಅಲ್ಲಿ ಕಳ್ಳರು ಇರಲಾರರು. ಒಂದು ಪೀಡೆಯೂ ಇರಲಾರದು. ಅಲ್ಲಿ ಅಶಕ್ತರಾದ ಜನರು ಇರಲಾರರು. ದುಷ್ಟರಾದ ಜನರೂ ಇರಲಾರರು. ಅಲ್ಲಿ ಭಯವೇ ಇರಲಾರದು. ಗೋವುಗಳು ಬೇಕಾದಷ್ಟು ಹಾಲನ್ನು ಕೊಡುವುವು. ಅಲ್ಲಿ ಹಾಲು ಮೊಸರು ತುಪ್ಪಗಳು ರುಚಿಕರಗಳಾಗಿಯೂ ಹಿತಕರಗಳಾಗಿಯೂ ಇರುವುವು. ನೀರೂ ನಿರ್ಮಲವಾಗಿ ಇರುವುದು. ಭೋಜ್ಯಗಳೂ ಪಾನೀಯಗಳೂ ಚೆನ್ನಾಗಿ ಇರುವುವು. ರಸ ಸ್ಪರ್ಶ ಗಂಧ ಶಬ್ದಗಳೆಲ್ಲವೂ ಮನೋಹರವಾಗಿಯೇ ಇರುವುವು. ಅಲ್ಲಿ ಎಲ್ಲರೂ ಧರ್ಮದಿಂದ ಇರುವರು. ಅಲ್ಲಿ ಎಲ್ಲಾ ಜನರೂ ಪ್ರೀತಿಯಿಂದ ಇರುವರು. ದೇವತಾ ಅತಿಥಿಸತ್ಕಾರ ಮಾಡುತ್ತಿರುವರು. ಪ್ರಾಣಿಗಳಲ್ಲಿ ಅನುರಾಗವುಳ್ಳವರಾಗಿರುವರು. ಬೇಕಾದ ದಾನ ಮಾಡುವುದರಲ್ಲಿ ಉತ್ಸಾಹವುಳ್ಳವ ರಾಗಿರುವರು. ಇತ್ಯಾದಿ ರೀತಿಯಾಗಿ ಇರುವ ದೇಶದಲ್ಲಿ ಪಾಂಡವರು ಇರುವರೆಂದು

ನಿಶ್ಚಯಿಸಬಹುದು. ಇದನ್ನೆಲ್ಲಾ ಯೋಚನೆಮಾಡಿ ಬೇಗನೇ ಮಾಡಬೇಕಾದ ಕಾರ್ಯವನ್ನು ಮಾಡುವವನಾಗು' ಎಂದು ಹೇಳಿದರು.



## ದುರ್ಯೋಧನನು ನಿಶ್ಚಯ ಮಾಡಿದ್ದು [1]

ಅನಂತರದಲ್ಲಿ ಹಾಗೆಯೇ ಕೃಪಾಚಾರ್ಯರೂ 'ಪಾಂಡವರು ನಾಶಹೊಂದಿರಲಿಕ್ಕಿಲ್ಲ. ಬೇಗನೇ ಅವರನ್ನು ಹುಡುಕಬೇಕು' ಎಂದು ಹೇಳಿದರು. ಎಲ್ಲರ ಮಾತೂ ಮುಗಿದ ಮೇಲೆ ದುರ್ಯೋಧನನು ಯೋಚನೆ ಮಾಡಿ ಮಂತ್ರಿಗಳೊಡನೆ ಹೇಳಿದನು. 'ನಾನು ಪೂರ್ವದಲ್ಲಿ ಜನರ ಸಭೆಯಲ್ಲಿ ಜನರು ಹೀಗೆ ಹೇಳುವುದನ್ನು ಕೇಳಿದ್ದೇನೆ. ಹೇಗೆಂದರೆ (ಏನೆಂದರೆ) ಪರಾಕ್ರಮಶಾಲಿಗಳಾದ ಶಸ್ತ್ರವನ್ನು ತಿಳಿದವರಾದ ಜ್ಞಾನಿಗಳಾದ ಸಮರ್ಥರಾದ ಜನರ ಮಧ್ಯದಲ್ಲಿ ದೈತ್ಯಮನುಷ್ಯ ರಾಕ್ಷಸರಿಂದ ಕೂಡಿದ ಲೋಕದಲ್ಲಿ ಧೈರ್ಯದಲ್ಲಿಯೂ ಬಾಹುಬಲದಲ್ಲಿಯೂ ಬಲದಲ್ಲಿಯೂ ದೇಹದಾರ್ಢ್ಯದಲ್ಲಿಯೂ ನಾಲ್ಕು ಜನರು ಉತ್ತಮರಾದವರು. ಅವರಿಗೆ ಸಮಾನವಾದ ಬಲವುಳ್ಳವನು ಮತ್ತೊಬ್ಬನು ಇಲ್ಲವೇ ಇಲ್ಲ. ಮೊದಲು ಮೊದಲು ಹೇಳಿದವರಿಗಿಂತ ಆಮೇಲೆ ಹೇಳಿದವರು ಕಡಿಮೆ ಬಲವುಳ್ಳವರು. ಅವರು ಯಾರು ಎಂದರೆ ಭೀಮ, ಬಲರಾಮ, ಶಲ್ಯ, ಕೀಚಕ ಇವರು. ಐದನೆಯವನನ್ನು ಕೇಳಲೇ ಇಲ್ಲ. ಇದರಿಂದ ನಾನು ವಿರಾಟನಗರದಲ್ಲಿ ಭೀಮನು ಇರುವನೆಂದು ತಿಳಿಯುವೆನು. ನಿಶ್ಚಯವಾಗಿಯೂ ಪಾಂಡವರು ಜೀವಿಸಿಕೊಂಡು ಇರುವರು. ಭೀಮಸೇನನೇ ಕೀಚಕನನ್ನು ಕೊಂದನೆಂದು ತಿಳಿಯುವೆನು. ಸೈರಂಧ್ರಿಯು ದ್ರೌಪದಿಯೇ. ಈ ವಿಷಯದಲ್ಲಿ ವಿಚಾರಮಾಡಬೇಕಾಗಿಲ್ಲ. ದ್ರೌಪದಿಯ ನಿಮಿತ್ತವಾಗಿ ಭೀಮಸೇನನು ಕೀಚಕನನ್ನು ಗಂಧರ್ವರ ಹೆಸರನ್ನು ಹೇಳಿ ಸಂಹರಿಸಿರುವನು. ಶಸ್ತ್ರವಿಲ್ಲದೆ ಬಾಹುಬಲದಿಂದ ಆ ಕೀಚಕನನ್ನು ಕೊಲ್ಲಲು ಭೀಮಸೇನನನ್ನು ಬಿಟ್ಟು ಮತ್ತೆ ಯಾರಿಂದ ಸಾಧ್ಯವಾಗುವುದು? ಹಾಗೆ ದೇಹವನ್ನೆಲ್ಲ ಮರ್ದನ ಮಾಡಲಿಕ್ಕೂ ಯಾರಿಂದ ಸಾಧ್ಯವಾಗುವುದು? ಆದುದರಿಂದ ಭೀಮನೇ ಬೇರೆ ರೂಪವನ್ನು ಧರಿಸಿಕೊಂಡು ಈ ಕಾರ್ಯವನ್ನು ಮಾಡಿರುವನು. ನಿಶ್ಚಯವಾಗಿಯೂ ದ್ರೌಪದಿಯ ನಿಮಿತ್ತದಿಂದ ರಾತ್ರಿಯಲ್ಲಿ ಗಂಧರ್ವರ ಹೆಸರಿನಿಂದ ಭೀಮಸೇನನಿಂದಲೇ ಎಲ್ಲಾ ಕೀಚಕರೂ ಸಂಹರಿಸಲ್ಪಟ್ಟಿರುವರು.

1. ಭಾ.ವಿ.ಪ ಅ-29

ತಾತಂದಿರಾದ ಭೀಷ್ಮಾಚಾರ್ಯರು ಹೇಳಿದ ದೇಶದ ಗುಣಗಳೂ ವಿರಾಟನಗರದಲ್ಲಿ ಇರುವುದೆಂದು ನಾನು ಬಹಳವಾಗಿ ಕೇಳಿರುವೆನು. ಆದುದರಿಂದ ಮನೋಹರವಾದ ವಿರಾಟನಗರದಲ್ಲಿ ಪಾಂಡವರು ಅಜ್ಞಾತವಾಸವನ್ನು ಮಾಡುತ್ತಿರುವರು. ಅಲ್ಲಿಗೆ ಪ್ರಯಾಣವನ್ನು ಮಾಡಬೇಕು. ಆ ಮತ್ಸ್ಯದೇಶಕ್ಕೆ ಹೋಗೋಣ. ಅಲ್ಲಿಯ ಗೋವುಗಳನ್ನು ಅಪಹರಿಸೋಣ. ಆಗ ನಿಶ್ಚಯವಾಗಿಯೂ ಪಾಂಡವರು ಯುದ್ಧಕ್ಕೆ ಬರುವರು. ಸಂಪೂರ್ಣ ಸಮಯದ ಒಳಗೆ ನಾವು ಪಾಂಡವರನ್ನು ನೋಡಿದರೆ ಅವರು ಪುನಃ ವನಕ್ಕೆ ಹೋಗುವರು. ಹನ್ನೆರಡು ವರ್ಷ ವನವಾಸ ಮಾಡುವರು. ಹೇಗೆ ಇದ್ದರೂ ನಮಗೆ ಲಾಭವಿದೆ. ಪಾಂಡವರು ಯುದ್ಧಕ್ಕೆ ಬರದಿದ್ದರೆ ನಮಗೆ ಶತ್ರುಸಂಹಾರವಾಗುವುದು. ಧನವೃದ್ಧಿಯಾಗುವುದು. ಪಾಂಡವರು ಯುದ್ಧಕ್ಕೆ ಬಂದರೆ ಆಮೇಲೆ ವನವಾಸಕ್ಕೆ ಹೋಗುವರು. ಆದುದರಿಂದ ನಾವು ಅವಶ್ಯವಾಗಿ ವಿರಾಟನಗರಕ್ಕೆ ಹೋಗಬೇಕು. ನಿಮ್ಮೆಲ್ಲರ ಮನಸ್ಸಿಗೆ ಬಂದರೆ ಹೀಗೆ ಮಾಡುವುದೇ ಉಚಿತವೆಂದು ನನಗೆ ತೋರುತ್ತದೆ' ಎಂದು ಹೇಳಿದನು.

ತರುವಾಯ ತ್ರಿಗರ್ತದೇಶದ ರಾಜನಾದ ಸುಶರ್ಮನು ಮೊದಲು ಕರ್ಣನೊಡನೆಯೂ ದುಃಶಾಸನನೊಡನೆಯೂ ಮಾತಾಡಿ ಬೇಗನೇ ಬಂದು ಕಾಲೋಚಿತವಾದ ಮಾತನ್ನು ಆಡಿದನು. ಅವನು ಅನೇಕ ಬಾರಿ ಕೀಚಕನಿಂದ ಪೀಡಿತನಾಗಿದ್ದನು. ಅವನು ಕರ್ಣನ ಮುಖವನ್ನು ನೋಡುತ್ತಾ ದುರ್ಯೋಧನ ನೊಡನೆ ಮಾತನಾಡಿದನು. 'ವಿರಾಟರಾಜನು ಅನೇಕಬಾರಿ ನನ್ನ ದೇಶವನ್ನು ಪೀಡಿಸಿರುವನು. ಅವನಿಗೆ ಸಹಾಯಕನಾಗಿ ಪೂರ್ವದಲ್ಲಿ ಬಲಿಷ್ಠನಾದ ಕೀಚಕ ನಿದ್ದನು. ಆ ಕೀಚಕನು ಬಹುಕೋಪವುಳ್ಳವನು. ಅವನನ್ನು ಒಬ್ಬರೂ ಜಯಿಸಲಿಕ್ಕೆ ಆಗಲಾರದು. ಅವನು ಎಲ್ಲರನ್ನೂ ಜಯಿಸುತ್ತಿದ್ದನು. ಪ್ರಸಿದ್ಧವಾದ ಬಲಪೌರುಷ ವುಳ್ಳವನಾಗಿದ್ದನು. ಆ ಪಾಪಿಯು ಗಂಧರ್ವರಿಂದ ಸತ್ತಿರುವನು. ಅವನು ಸತ್ತಮೇಲೆ ವಿರಾಟರಾಜನು ಹೀನ ಬಲನಾಗಿರುವನು. ಆಶ್ರಯಹೀನನಾಗಿರುವನು. ಉತ್ಸಾಹ ರಹಿತನಾಗಿರುವನು ಎಂದು ನನ್ನ ಅಭಿಪ್ರಾಯವು. ನಿನ್ನ ಮನಸ್ಸಿಗೆ ಬಂದರೆ ಹಾಗೆಯೇ ಎಲ್ಲ ಕೌರವರಿಗೂ ಮಹಾನುಭಾವನಾದ ಕರ್ಣನಿಗೂ ಮನಸ್ಸಿಗೆ ಬಂದರೆ ಅಲ್ಲಿಗೆ ಪ್ರಯಾಣ ಮಾಡಬೇಕೆಂದು ನನಗೂ ತೋರುತ್ತೆ. ಧನಧಾನ್ಯದಿಂದ ತುಂಬಿರುವ ಅವನ ದೇಶಕ್ಕೆ ಹೋಗೋಣ. ಅವನ ರತ್ನಗಳನ್ನೂ ನಾನಾ ವಿಧ ಧನಗಳನ್ನೂ ಗ್ರಾಮಗಳನ್ನೂ ರಾಷ್ಟ್ರಗಳನ್ನೂ ವಿಭಾಗಮಾಡಿ ಅಪಹರಿಸುವ ಅಥವಾ ಬಲಾತ್ಕಾರಮಾಡಿ ಸಾವಿರಾರು ಗೋವುಗಳನ್ನು ಅಪಹರಿಸುವ ಕೌರವರಿಂದಲೂ

ತ್ರಿಗರ್ತದೇಶದವರಿಂದಲೂ ಸಹಿತರಾಗಿ ಗೋವುಗಳನ್ನು ಅಪಹರಿಸುವ ಅಥವಾ ಅವನೊಡನೆ ಸಂಧಿಯನ್ನು ಮಾಡಿ ಅವನ ಪೌರುಷವನ್ನು ನಾಶಮಾಡುವ, ಅವನ ಸೈನ್ಯವನ್ನು ನಾಶಮಾಡಿ ಅವನನ್ನು ನ್ಯಾಯದಿಂದ ವಶಪಡಿಸಿಕೊಡು ಸುಖವಾಗಿ ಇರುವ ನಿಮಗೂ ಇದರಿಂದ ಬಲವೃದ್ಧಿಯುಂಟಾಗುವುದು' ಎಂದು ಹೇಳಿದನು.

ಆ ಮಾತನ್ನು ಕೇಳಿ ಕರ್ಣನು ದುರ್ಯೋಧನನೊಡನೆ 'ಸುಶರ್ಮನು ಹೇಳಿದ ಮಾತು ಯುಕ್ತಿಯುಕ್ತವಾಗಿದೆ. ಕಾಲೋಚಿತವಾಗಿದೆ. ಆದುದರಿಂದ ಬೇಗನೆ ಸೇನೆಯನ್ನು ಸಿದ್ಧಪಡಿಸಿಕೊಂಡು ಹೋಗುವ. ನಿನಗೆ ಇಷ್ಟವಾದರೆ ನನಗೂ ಇಷ್ಟವು. ನಿನ್ನ ಅಭಿಪ್ರಾಯವು ಹೇಗೆ ಇದೆ? ಬುದ್ಧಿವಂತನಾದ ಕುಲವೃದ್ಧರಾದ ನಮಗೆಲ್ಲರಿಗೂ ತಾತಂದಿರಾದ ಭೀಷ್ಮಾಚಾರ್ಯರೂ ದ್ರೋಣಾಚಾರ್ಯರೂ ಕೃಪಾಚಾರ್ಯರೂ ವಿದ್ವಾಂಸನಾದ ಶಕುನಿಯೂ ಎಲ್ಲರೂ ಅಭಿಪ್ರಾಯಪಡುವ ಹಾಗಿದ್ದರೆ ಬೇಗನೇ ವಿರಾಟನಗರಕ್ಕೆ ಪ್ರಯಾಣವನ್ನು ಮಾಡುವ. ಎಲ್ಲರೂ ಯೋಚನೆ ಮಾಡಿ ಬೇಗನೇ ಕಾರ್ಯಸಿದ್ಧಿಗಾಗಿ ಹೋಗುವ. ಅರ್ಥಬಲಪೌರುಷಹೀನರಾದ ಪಾಂಡವರಿಂದ ನಮಗೆ ಏನಾಗುತ್ತದೆ? ಎಲ್ಲಿಯೂ ಅವರ ವರ್ತಮಾನವೇ ಇಲ್ಲ. ಆದುದರಿಂದ ಅವರು ಯಮಲೋಕವನ್ನು ಹೊಂದಿರಬಹುದು. ಆದುದರಿಂದ ನೀನು ಮಹತ್ತಾದ ಚತುರಂಗಸೈನ್ಯದಿಂದ ಸಹಿತನಾಗಿ ವಿರಾಟನಗರಕ್ಕೆ ಹೋಗಬೇಕು. ಆ ವಿರಾಟನ ನಾನಾ ಗೋವುಗಳನ್ನು ಅಪಹರಿಸುವ' ಎಂದು ಹೇಳಿದನು.

ತರುವಾಯ ದುರ್ಯೋಧನನು ಕರ್ಣನ ಮಾತನ್ನು ಕೇಳಿ ದುಃಶಾಸನನಿಗೆ ಬೇಗನೇ ಆಜ್ಞಾಪಿಸಿದನು. 'ದುಃಶಾಸನ! ನೀನು ದೊಡ್ಡವರಿಂದ ಬೇಗನೇ ಯೋಚನೆಯನ್ನು ಮಾಡಿ ಸೈನ್ಯವನ್ನು ಸೇರಿಸು. ನಾವೆಲ್ಲರೂ ಹೊರಟುಹೋಗುವ ಸುಶರ್ಮನೂ ಹೇಳಿದಂತೆ ತ್ರಿಗರ್ತದೇಶದವರಿಂದ ಕೂಡಿಕೊಂಡು ಮೊದಲೇ ವಿರಾಟನಗರಕ್ಕೆ ಹೋಗಲಿ. ಆಮೇಲೆ ಮರುದಿವಸದಲ್ಲಿ ನಾವು ಹೋಗುವ. ಸುಶರ್ಮನು ಹೋಗಿ ವಿರಾಟರಾಜನ ಗೋವುಗಳನ್ನು ಅಪಹರಿಸಲು ವಿರಾಟರಾಜನು ಸೈನ್ಯಸಹಿತನಾಗಿ ತ್ರಿಗರ್ತದೇಶದವರೊಡನೆ ಯುದ್ಧವನ್ನು ಮಾಡುವನು. ಮರುದಿವಸದಲ್ಲಿ ನಾವು ಹೋಗಿ ಗೋವುಗಳನ್ನು ಅಪಹರಿಸುವ. ಆಗ ಗೋವುಗಳಿಗಾಗಿ ಪಾಂಡವರು ಕೌರವರೊಡನೆ ಯುದ್ಧಮಾಡುವರು. ಆದುದರಿಂದ ನಾವು ನಮ್ಮ ಉದ್ದೇಶದಂತೆ ಸೈನ್ಯವನ್ನು ಎರಡು ಭಾಗ ಮಾಡಿಕೊಂಡು ಹೋಗಿ ವಿರಾಟರಾಜನ ನೂರು ಸಾವಿರ ಗೋವುಗನ್ನು ಅಪಹರಿಸುವ' ಎಂದು ಹೇಳಿದನು.

ಹೀಗೆ ಯೋಚನೆ ಮಾಡಿಕೊಂಡು ಎಲ್ಲರೂ ವಿರಾಟನಗರಕ್ಕೆ ಹೋದರು.

ಸುಶರ್ಮನು ಹೋಗಿ ಕೃಷ್ಣಪಕ್ಷದ ಅಷ್ಟಮೀ ದಿನದಲ್ಲಿ ಗೋವುಗಳನ್ನು ಅಪಹರಿಸಿದನು. ಮರುದಿವಸ ನವಮೀದಿನದಲ್ಲಿ ಕೌರವರು ಗೋವುಗಳನ್ನು ಅಪಹರಿಸಿದರು.



## ವಿರಾಟರಾಜನು ತ್ರಿಗರ್ತದೇಶದವರೊಡನೆ ಯುದ್ಧಕ್ಕೆ ಹೋದದ್ದು [1]

ಪಾಂಡವರು ವಿರಾಟನಗರದಲ್ಲಿ ವಾಸಮಾಡುತ್ತಾ ಸಂಪೂರ್ಣ ಒಂದುವರ್ಷವನ್ನೂ ಕಳೆದರು. ಕೀಚಕನು ಮೃತನಾದ ಮೇಲೆ ವಿರಾಟನು ಧರ್ಮರಾಜನಿಗೆ ಬಹಳ ಬಹುಮಾನವನ್ನು ಮಾಡಿದನು. ಪಾಂಡವರಿಗೆ ಹದಿಮೂರನೇ ವರ್ಷವು ಸಂಪೂರ್ಣವಾಗಿ ಮುಗಿದ ಮೇಲೆ ಸುಶರ್ಮನು ಹೋಗಿ ವಿರಾಟನ ಗೋವುಗಳನ್ನು ಅಪಹರಿಸಿದನು. ಅಲ್ಲಿ ಬಹಳ ಶಬ್ದವಾಯಿತು. ಧೂಳಿಯು ಆಕಾಶಕ್ಕೆ ಹೋಯಿತು. ಶಂಖನಗಾರಿಗಳ ಶಬ್ದವು ಉಂಟಾಯಿತು. ಗೋವುಗಳ ಕುದುರೆಗಳ ರಥಗಳ ಮತ್ತು ಪದಾತಿಗಳ ಶಬ್ದವೂ ಉಂಟಾಯಿತು. ಈರೀತಿಯಾಗಿ ಸೈನ್ಯ ಸಹಿತರಾಗಿ ತ್ರಿಗರ್ತದೇಶದವರು ಗೋವುಗಳನ್ನು ಅಪಹರಿಸಲು ಗೋಪಾಲರು ತಡೆಯುವವರಾದರು. ತರುವಾಯ ತ್ರಿಗರ್ತದೇಶದವರು ಗೋವುಗಳನ್ನು ಅಪಹರಿಸಿ ಕುದುರೆಗಳಿಂದಲೂ ರಥಗಳಿಂದಲೂ ಸುತ್ತಲೂ ನಿಂತುಕೊಂಡು ಜಯಿಸುವ ಅಭಿಲಾಷೆಯಿಂದ ಯುದ್ಧವನ್ನು ಮಾಡಿದರು. ಪ್ರಾಸ, ತೋಮರ ಮೊದಲಾದ ಆಯುಧಗಳನ್ನು ಹಿಡಿದ ತ್ರಿಗರ್ತದೇಶದವರು ಬಡೆಯುತ್ತಿದ್ದರೂ ಗೋವುಗಳಲ್ಲಿ ಭಕ್ತರಾದ ಗೋಪಾಲರು ಸಾಮರ್ಥ್ಯದಿಂದ ಅವರನ್ನು ತಡೆದರು. ಅವರೂ ಕೊಡಲಿಗಳನ್ನು ಒನಕೆಗಳನ್ನು ಭಿಂಡಿಪಾಲ ಮುದ್ಗರ ಇತ್ಯಾದಿ ಆಯುಧಗಳನ್ನು ಹಿಡಿದುಕೊಂಡು ಬಡೆದರು. ಯಂತ್ರದಿಂದ ಕಲ್ಲನ್ನು ಹಾಕಿ ಕುದುರೆಗಳನ್ನು ಬಡೆದರು. ಇದರಿಂದ ತ್ರಿಗರ್ತದೇಶದವರು ರಥದಲ್ಲಿ ಯುದ್ಧಮಾಡುತ್ತಿರುವವರು ಕೋಪಿಸಿಕೊಂಡು ಬಾಣಗಳ ಮಳೆಯನ್ನು ಸುರಿಸಿ ಬಲಾತ್ಕಾರದಿಂದ ಗೋಪಾಲರನ್ನು ಓಡಿಸಿದರು.

ತರುವಾಯ ಗೋಪಾಲರು ಭಯಗ್ರಸ್ತರಾಗಿ ಓಡುತ್ತಾ ನಗರಕ್ಕೆ ಬಂದರು. ಸಭೆಯಲ್ಲಿ ಪಾಂಡವರಿಂದ ಸಹಿತನಾಗಿ ಕೂತಿದ್ದ ವಿರಾಟರಾಜನೊಡನೆ 'ತ್ರಿಗರ್ತದೇಶದವರು ಯುದ್ಧದಲ್ಲಿ ನಮ್ಮೆಲ್ಲರನ್ನು ಜಯಿಸಿ ಅರವತ್ತು ಸಾವಿರ

1. ಭಾ.ವಿ.ಪ ಅ-30, 31, 32

ಗೋವುಗಳನ್ನು ಅಪಹರಿಸಿಕೊಂಡು ಹೋಗುತ್ತಿರುವರು. ಮಹಾರಾಜರೇ! ಅವುಗಳನ್ನು ನೀವು ಬೇಗನೇ ಹಿಂದೆ ತಿರುಗಿಸಿಕೊಂಡು ಬನ್ನಿರಿ' ಎಂದು ಹೇಳಿದರು.

ಅವರ ಮಾತನ್ನು ಕೇಳಿ ವಿರಾಟರಾಜನು ಮಹತ್ತಾದ ಸೇನೆಯನ್ನು ಸೇರಿಸಿದನು. ಆನೆ ಕುದುರೆ ರಥಪದಾತಿಗಳನ್ನು ಸಿದ್ಧಪಡಿಸಿದನು. ಅನೇಕ ರಾಜರೂ ರಾಜಪುತ್ರರೂ ಕವಚಗಳನ್ನು ಧರಿಸಿದರು. ರಥಗಳಿಗೆ ಕುದುರೆಗಳನ್ನು ಕಟ್ಟಿದರು. ಧನುಸ್ಸುಗಳಿಗೆ ಹಗ್ಗಗಳನ್ನು ಬಿಗಿದರು. ವಿರಾಟರಾಜನ ತಮ್ಮನಾದ ಶತಾನೀಕನೂ, ಅವನ ತಮ್ಮನಾದ ಮದಿರಾಕ್ಷನೂ, ಸೂರ್ಯದತ್ತನೆಂಬವನೂ, ಶಂಖನೆಂಬ ವಿರಾಟರಾಜನ ಮಗನೂ, ವಿರಾಟರಾಜನೂ, ನಾನಾವಿಧ ಕವಚಗಳನ್ನು ಧರಿಸಿದರು. ಎಲ್ಲಾ ಸೈನಿಕರೂ ನಾನಾ ವಿಧ ಕವಚಗಳನ್ನು ಧರಿಸಿದರು. ಎಲ್ಲರೂ ತಮ್ಮತಮ್ಮ ರಥಗಳಲ್ಲಿ ನಾನಾವಿಧ ಧ್ವಜಗಳನ್ನು ಇಟ್ಟುಕೊಂಡರು. ಈರೀತಿಯಾಗಿ ಎಲ್ಲರೂ ರಥಗಳನ್ನು ಸಿದ್ಧಪಡಿಸುತ್ತಿರಲು ಕಂಕ ಎಂದು ಹೆಸರುಳ್ಳ ಧರ್ಮರಾಜನು 'ನಾನೂ ರಥದಲ್ಲಿ ಕೂತುಕೊಂಡು ಯುದ್ಧಕ್ಕೆ ಬರುವೆನು. ಈ ಶೂರನಾದ ವಲಲನೂ ಯುದ್ಧಕ್ಕೆ ಬರುವನು. ದಾಮಗ್ರಂಥಿ ತಂತ್ರಿಪಾಲರಿಗೂ ರಥವನ್ನು ಕೊಡು. ಅವರೂ ಗೋವುಗಳಿಗಾಗಿ ಯುದ್ಧಮಾಡದೆ ಇರಲಾರರು ಎಂದು ನನ್ನ ಅಭಿಪ್ರಾಯವು' ಎಂದು ಹೇಳಿದನು. ತರುವಾಯ ವಿರಾಟನು ತಮ್ಮನಾದ ಶತಾನೀಕನೊಡನೆ ಎಲ್ಲರಿಗೂ ರಥಗಳನ್ನು ಕೊಡಲಿಕ್ಕೆ ಹೇಳಿದನು. ಹಾಗೆಯೇ ಅವನು ಪಾಂಡವರಿಗೆ ರಥವನ್ನು ಕೊಟ್ಟನು. ಅರ್ಜುನನೊಬ್ಬನನ್ನು ಬಿಟ್ಟು ನಾಲ್ಕು ಜನರೂ ರಥವನ್ನು ಸ್ವೀಕರಿಸಿದರು. ವಿರಾಟರಾಜನು ಕೊಟ್ಟ ಕವಚಗಳನ್ನು ಧರಿಸಿದರು. ವಿರಾಟರಾಜನು ಯುದ್ಧಕ್ಕಾಗಿ ಮುಂದಕ್ಕೆ ಹೋಗಲು ಅವನ ಹಿಂದೆಯೇ ನಾಲ್ಕು ಜನರೂ ರಥದಲ್ಲಿ ಕೂತುಕೊಂಡು ಆಯುಧಧಾರಿಗಳಾಗಿ ಹೋದರು. ಅನೇಕ ಸೈನಿಕರೂ ಹೋದರು. ಇಪ್ಪತ್ತುಸಾವಿರ ಪದಾತಿಗಳೂ ಎಂಟುಸಾವಿರ ರಥಿಕರೂ ಸಾವಿರ ಆನೆಗಳೂ ಇಪ್ಪತ್ತುಸಾವಿರ ಕುದುರೆಗಳೂ ವೇಗದಿಂದ ಯುದ್ಧಕ್ಕೆ ಹೋದರು.



# ಯುದ್ಧದಲ್ಲಿ ಸುಶರ್ಮನ ಕೈಗೆ ಸಿಕ್ಕಿದ ವಿರಾಟನನ್ನು ಭೀಮಸೇನದೇವರು ಬಿಡಿಸಿದ್ದು [1]

ತರುವಾಯ ತ್ರಿಗರ್ತದೇಶದವರಿಗೂ ವಿರಾಟರಾಜನ ಸೈನಿಕರಿಗೂ ಭಯಂಕರವಾದ ಯುದ್ಧವು ನಡೆಯಿತು. ಅನೇಕರು ಮೃತರಾದರು. ರಕ್ತದಿಂದಲೇ ಧೂಳಿಯೆಲ್ಲವೂ ಶಾಂತವಾಯಿತು. ಧರ್ಮರಾಜನು ಸಾವಿರಜನರನ್ನು ಸಂಹರಿಸಿದನು. ಭೀಮಸೇನ ದೇವರು ಕೋಪಿಸಿಕೊಂಡು ಎರಡು ಸಾವಿರ ರಥಿಕರನ್ನು ಸಂಹರಿಸಿದರು. ನಕುಲನು ಮುನ್ನೂರು ರಥಿಕರನ್ನು ಸಂಹರಿಸಿದನು. ಸಹದೇವನು ನಾಲ್ನೂರು ರಥಿಕರನ್ನು ಸಂಹರಿಸಿದನು. ಶತಾನೀಕನು ನೂರು ಜನರನ್ನೂ ಮದಿರಾಶ್ವನು ನಾಲ್ನೂರು ಜನರನ್ನು ಸಂಹಾರ ಮಾಡಿದನು. ವಿರಾಟರಾಜನೂ ಐನೂರು ಜನರನ್ನು ಸಂಹರಿಸಿ ದನು. ಪರಸ್ಪರವಾಗಿ ಭಯಂಕರವಾಗಿ ಯುದ್ಧವು ನಡೆಯಿತು. ವಿರಾಟರಾಜನೂ ಸುಶರ್ಮನೂ ಭಯಂಕರವಾಗಿ ಬಹುಹೊತ್ತು ಯುದ್ಧವನ್ನು ಮಾಡಿಕೊಂಡರು. ತರುವಾಯ ಕತ್ತಲೆಯಾಯಿತು. ಆಮೇಲೆ ಚಂದ್ರೋದಯವಾಗಿ ಬೆಳಕು ಉಂಟಾ ಯಿತು. ಪುನಃ ಘೋರವಾದ ಯುದ್ಧವು ನಡೆಯಿತು. ಸುಶರ್ಮನೂ ವಿರಾಟನೂ ಭಯಂಕರ ಯುದ್ಧ ಮಾಡಿಕೊಂಡರು. ಕೊನೆಗೆ ಸುಶರ್ಮನು ವಿರಾಟನ ರಥವನ್ನು ಮುರಿದು ಹಾಕಿ ವಿರಾಟನನ್ನು ಹಿಡಿದುಬಿಟ್ಟನು. ಅವನನ್ನು ಹಿಡಿದು ಸೆಳೆದುಕೊಂಡು ಬಂದು ತನ್ನ ರಥದಲ್ಲಿ ಹಾಕಿಕೊಂಡು ಹೊರಟುಹೋಗಿ ಬಿಟ್ಟನು. ಈರೀತಿಯಾಗಿ ವಿರಾಟರಾಜನನ್ನು ಹಿಡಿದುಕೊಂಡು ಹೋಗಲು ಸೇನೆಯು ಉತ್ಸಾಹಹೀನವಾಯಿತು. ತ್ರಿಗರ್ತದೇಶದವರಿಂದ ಪೀಡಿತರಾಗಿ ಸೈನಿಕರೆಲ್ಲರೂ ಭಗ್ನರಾಗಿ ದಿಕ್ಕುದಿಕ್ಕುಗಳಿಗೆ ಓಡತೊಡಗಿದರು.

ಆಗ ಧರ್ಮರಾಜನು ಭೀಮಸೇನದೇವರೊಡನೆ 'ಮಹಾಬಾಹೋ! ವಿರಾಟ ರಾಜನು ಸುಶರ್ಮನಿಂದ ಅಪಹೃತನಾಗಿರುವನು. ಅವನನ್ನು ಬಿಡಿಸು. ಅವನು ಶತ್ರುವಶನಾಗಬಾರದು. ನಮ್ಮ ಪ್ರೀತಿಪಾತ್ರನಾಗಿರುವನು. ನಾವು ಅವನ ಮನೆಯಲ್ಲಿ ಸುಖವಾಗಿ ವಾಸಮಾಡಿದೆವು. ಆದಕ್ಕೆ ನೀನು ಪ್ರತ್ಯುಪಕಾರವನ್ನು ಮಾಡಬೇಕು' ಎಂದು ಹೇಳಿದರು.

ಅದನ್ನು ಕೇಳಿ ಭೀಮಸೇನದೇವರು ಧರ್ಮರಾಜನೊಡನೆ 'ನಿಮ್ಮ ಆಜ್ಞೆಯಂತೆ ನಾನು ಅವನನ್ನು ಬಿಡಿಸುವೆನು. ನಾನು ಯುದ್ಧವನ್ನು ಮಾಡುವುದನ್ನು ನೋಡಿರಿ.

1. ಭಾ.ವಿ.ಪ ಅ-33

ಸಹೋದರರಿಂದ ಕೂಡಿಕೊಂಡು ನೀವು ಸುಮ್ಮನೆ ಒಂದು ಸ್ಥಳದಲ್ಲಿ ನಿಂತುಕೊಂಡು ನೋಡಿರಿ. ಇಲ್ಲಿಯೇ ದೊಡ್ಡಮರವೊಂದು ಕಾಣಿಸುತ್ತಿರುವುದು. ಇದನ್ನೇ ಮುರಿದು ಇದರಿಂದ ಶತ್ರುಗಳನ್ನು ಬಡಿಯುವೆನು' ಎಂದು ಹೇಳಿದರು.

ಹೀಗೆ ಹೇಳಿ ಮದಭರಿತವಾದ ಆನೆಯಂತೆ ಆ ಮರವನ್ನೇ ನೋಡುತ್ತಿದ್ದ ಭೀಮಸೇನದೇವರನ್ನು ನೋಡಿ ಧರ್ಮರಾಜನು 'ಭೀಮ ನೀನು ಈ ಸಾಹಸಕಾರ್ಯವನ್ನು ಮಾತ್ರ ಮಾಡಬೇಡ. ಈ ಮರವು ಹೀಗೆಯೇ ಇರಲಿ. ನೀನು ಮರವನ್ನು ಕಿತ್ತಿ ಬಡೆಯಲಿಕ್ಕೆ ಆರಂಭಿಸಿದರೆ ನಿನ್ನನ್ನು ಜನರು ಭೀಮನೆಂದು ತಿಳಿಯುವರು. ಆದುದರಿಂದ ನೀನು ಈ ಮರವನ್ನು ಕೀಳಬೇಡ. ಸಿಂಹಗರ್ಜನೆಯನ್ನು ಮಾಡಬೇಡ. ಬೇರೆ ಯಾವುದಾದರೂ ಆಯುಧವನ್ನು ಅಂದರೆ ಧನುಸ್ಸನ್ನೋ ಶಕ್ತಿಯನ್ನೋ ಖಡ್ಗವನ್ನೋ ಹಿಡಿದುಕೊಂಡು ಯುದ್ಧಮಾಡು. ಇತರ ಮನುಷ್ಯರು ಮಾಡುವಂತೆಯೇ ಯುದ್ಧವನ್ನು ಮಾಡು. ವಿರಾಟರಾಜನನ್ನು ಬಿಡಿಸಲು ಹೋಗುವ ನಿನಗೆ ನಕುಲಸಹದೇವರು ಚಕ್ರರಕ್ಷಕರಾಗಿರಲಿ' ಎಂದು ಹೇಳಿದನು.

ಅಣ್ಣನ ಮಾತನ್ನು ಕೇಳಿ ಭೀಮಸೇನದೇವರು ಧನುಸ್ಸನ್ನು ಧರಿಸಿ ರಥದಲ್ಲಿ ಕೂತುಕೊಂಡು ಬಾಣಗಳನ್ನು ಬಿಡುತ್ತಾ ಹೋದರು. ಸುಶರ್ಮನನ್ನು ಅಟ್ಟಿಸಿಕೊಂಡು ಹೋದರು. ನಿಲ್ಲು ನಿಲ್ಲು ಎನ್ನುತ್ತಾ ಹೋದರು. ಸುಶರ್ಮನು ತನ್ನ ಹಿಂದಿನಿಂದ ಬರುತ್ತಿದ್ದ ನಿಲ್ಲು ನಿಲ್ಲು ಎಂದು ಹೇಳುತ್ತಿದ್ದ ಅವರನ್ನು ನೋಡಿ ಪ್ರಲಯಕಾಲದ ಯಮದೇವರು ಬರುತ್ತಿರುವರೆಂದು ತಿಳಿದನು. ಅಷ್ಟರಲ್ಲಿಯೇ ಮಹಾಯುದ್ಧವು ಆರಂಭವಾಯಿತು. ಒಂದೇ ನಿಮಿಷದಲ್ಲಿ ಭೀಮಸೇನದೇವರಿಂದ ಸಾವಿರಾರು ರಥಿಕರೂ ಆನೆಗಳೂ ಕುದುರೆಗಳೂ ಭೀಮಸೇನದೇವರಿಂದ ಸತ್ತುಬಿದ್ದವು. ಭೀಮಸೇನದೇವರು ಗದೆಯನ್ನು ಹಿಡಿದುಕೊಂಡು ಅನೇಕ ಪದಾತಿಗಳನ್ನು ಕೊಂದು ಹಾಕಿದರು. ಯುದ್ಧದಲ್ಲಿ ದುರಹಂಕಾರಿಯಾದ ಸುಶರ್ಮನು ಹೀಗೆ ಯುದ್ಧವಾದರೆ ತನ್ನ ಸೇನೆಯಲ್ಲಿ ಏನು ಉಳಿಯುವುದು ಎಂದು ಯೋಚಿಸಿದನು. ತರುವಾಯ ಭಯಂಕರವಾದ ಯುದ್ಧವು ನಡೆಯಿತು. ಕೊನೆಗೆ ಭೀಮಸೇನದೇವರು ಸುಶರ್ಮನ ಕುದುರೆಗಳನ್ನು ಕೊಂದು ಹಾಕಿದರು. ಹಿಂದಿನ ಪಾರ್ಶ್ವದಲ್ಲಿ ರಕ್ಷಣೆ ಮಾಡುವವರನ್ನು ಬಾಣಗಳಿಂದ ಕೊಂದು ಹಾಕಿದರು. ಕೋಪದಿಂದ ಸಾರಥಿಯನ್ನು ರಥದಿಂದ ಕೆಳಗೆ ಬೀಳಿಸಿದರು. ಚಕ್ರರಕ್ಷೆಯನ್ನು ಮಾಡುತ್ತಿದ್ದ ಶೋಣಾಶ್ವನೆಂಬುವನು ರಥಹೀನನಾದ ಸುಶರ್ಮನನ್ನು ನೋಡಿ ಭಯದಿಂದ ಬಿಟ್ಟುಓಡಿದನು.

ತರುವಾಯ ವಿರಾಟರಾಜನು ಸುಶರ್ಮನ ರಥದಿಂದ ಕೆಳಗೆ ಹಾರಿ ಅವನ ಗದೆಯನ್ನು ಸೆಳೆದುಕೊಂಡು ಅವನನ್ನೇ ಬಡೆದನು. ಆ ಗದೆಯನ್ನು ಹಿಡಿದುಕೊಂಡು

ತರುಣನಂತೆ ಯುದ್ಧದಲ್ಲಿ ಸಂಚರಿಸಿದನು. ಪರಾಕ್ರಮಶಾಲಿಯಾದ ಭೀಮಸೇನ ದೇವರು ರಥದಿಂದ ಕೆಳಗೆ ಹಾರಿ ವೇಗದಿಂದ ಸುಶರ್ಮನ ರಥದ ಮೇಲೆ ಹಾರಿ ಸಮಾಧಾನ ಮಾಡಿಕೊಂಡು ಯುದ್ಧ ಮಾಡುತ್ತಿದ್ದ ಸುಶರ್ಮನ ಜುಟ್ಟನ್ನು ಹಿಡಿದರು. ಬೆಕ್ಕು ಮೇಲಕ್ಕೆ ಹಾರಿ ಇಲಿಯನ್ನು ತಲೆಯಲ್ಲಿ ಹಿಡಿಯುವಂತೆ ಭೀಮಸೇನದೇವರು ಸುಶರ್ಮನ ತಲೆಯಲ್ಲಿ ಹಿಡಿದು ರೋಷದಿಂದ ನೆಲಕ್ಕೆ ಎಳೆದು ಹಾಕಿದರು. ವಿಲಾಪವನ್ನು ಮಾಡುತ್ತಿದ್ದ ಅವನ ತಲೆಗೆ ಬಡೆದರು. ಮೊಳಕಾಲಿನಿಂದ ಬೀಳಿಸಿದರು. ಬಡೆದರು. ಸುಶರ್ಮನು ಪೆಟ್ಟಿನಿಂದ ಮೂರ್ಛಿತನಾದನು. ಈರೀತಿಯಾಗಿ ಭೀಮಸೇನದೇವರು ಸುಶರ್ಮನನ್ನು ಹಿಡಿಯಲು ತ್ರಿಗರ್ತದೇಶದ ಸೈನ್ಯವೆಲ್ಲವೂ ಭಯದಿಂದ ಭಗ್ನವಾಯಿತು. ಪಾಂಡವರು ಸುಶರ್ಮನನ್ನು ಜಯಿಸಿ ಗೋವುಗಳನ್ನು ಹಿಂದೆ ತಿರುಗಿಸಿ ಧನವನ್ನು ಸ್ವೀಕರಿಸಿ ವಿರಾಟರಾಜನ ಕ್ಲೇಶವನ್ನು ಪರಿಹರಿಸಿದರು.

ಭೀಮಸೇನದೇವರು 'ಈ ಪಾಪಿಯು ನನ್ನಿಂದ ಬದುಕಲಿಕ್ಕೆ ಅರ್ಹನಾಗಿಲ್ಲ. ಏನು ಮಾಡಲಿಕ್ಕೆ ರಾಜನು ಯಾವಾಗಲೂ ದಯೆಯುಳ್ಳವನು' ಎಂದು ಹೇಳುತ್ತಾ ಪರವಶನಾದ ಸುಶರ್ಮನನ್ನು ಕುತ್ತಿಗೆ ಹಿಡಿದು ತಳ್ಳಿಕೊಂಡು ಬಂದು ಜ್ಞಾನಶೂನ್ಯನಾದ ಹೊರಳಾಡುತ್ತಿದ್ದ ಅವನನ್ನು ಕಟ್ಟಿ ರಥದಲ್ಲಿ ಹಾಕಿದರು. ಯುದ್ಧರಂಗ ಮಧ್ಯದಲ್ಲಿ ಇದ್ದ ಧರ್ಮರಾಜನ ಬಳಿಗೆ ಬಂದು ಸುಶರ್ಮನನ್ನು ತೋರಿಸಿದನು. ಧರ್ಮರಾಜನು ಅವನನ್ನು ನೋಡಿ ನಗುವವನಾದನು. ಈ ಮನುಷ್ಯಾಧಮನನ್ನು ಬಿಟ್ಟು ಬಿಡು ಎಂದು ಹೇಳಿದನು. ಆಗ ಭೀಮಸೇನದೇವರು ಸುಶರ್ಮನೊಡನೆ 'ಮೂರ್ಖನೇ! ನೀನು ಬದುಕಲಿಕ್ಕೆ ಇಚ್ಛಿಸುವಿಯಾದರೆ ನಾನು ಹೇಳಿದಂತೆ ಮಾಡಬೇಕು. ಕೇಳು. ನೀನು ಎಲ್ಲಾ ಸೇನೆಗಳಲ್ಲಿ ನಾನು ದಾಸನಾಗಿರುವೆನೆಂದು ಹೇಳಬೇಕು. ಹಾಗೆ ಮಾಡಿದರೆ ನಿನ್ನ ಪ್ರಾಣವನ್ನು ಬಿಡುವೆನು. ಯುದ್ಧದಲ್ಲಿ ಸೋತುಹೋದವರಿಗೆ ಹೀಗೆ ಮಾಡುವುದೇ ಸಂಪ್ರದಾಯವು' ಎಂದು ಹೇಳಿದರು. ತರುವಾಯ ಧರ್ಮರಾಜನು ಪ್ರೇಮದಿಂದ ಭೀಮಸೇನದೇವರೊಡನೆ ನಾವು ಪ್ರಮಾಣವಾಗಿದ್ದರೆ ಈ ಅಧಮಾಚಾರನನ್ನು ಬಿಟ್ಟುಬಿಡು. ಇವನು ವಿರಾಟರಾಜನ ದಾಸತ್ವವನ್ನು ಹೊಂದಿರುವನು. 'ಎಲೋ ನೀನು ಅದಾಸನಾಗಿರುವಿ. ನಿನ್ನನ್ನು ಬಿಟ್ಟಿರುವೆವು. ಹೊರಟುಹೋಗು. ಇನ್ನು ಮೇಲೆ ಹೀಗೆ ಮಾಡಬೇಡ' ಎಂದು ಹೇಳಿ ಬಿಡಿಸಿದನು. ತರುವಾಯ ಸುಶರ್ಮನು ರಾಜನಿಗೆ ನಮಸ್ಕಾರ ಮಾಡಿ ಹೊರಟುಹೋದನು. ಸ್ವಬಾಹುಬಲ ಸಂಪನ್ನರಾದ ಪಾಂಡವರು ಸುಶರ್ಮನನ್ನು ಜಯಿಸಿ ಆರಾತ್ರಿಯನ್ನು ಯುದ್ಧರಂಗದ ಮಧ್ಯದಲ್ಲಿಯೇ ಸುಖವಾಗಿ ಕಳೆದರು.



# ನಗರದಲ್ಲಿ ವಿರಾಟನ ಜಯವನ್ನು ತಿಳಿಸಿದ್ದು [1]

ತೆರುವಾಯ ವಿರಾಟರಾಜನು ಅಮಾನುಷ ಪರಾಕ್ರಮವುಳ್ಳ ಪಾಂಡವರನ್ನು ಸಂತೋಷವುಳ್ಳವನಾಗಿ ಹಣದಿಂದಲೂ ಬಹುಮಾನದಿಂದಲೂ ಸಮಾಧಾನ ಮಾತಿನಿಂದಲೂ ಸ್ನೇಹದಿಂದ ಸತ್ಕರಿಸಿದನು. ವಿರಾಟರಾಜನು 'ರತ್ನಗಳೆಲ್ಲವೂ ನನಗೆ ಸೇರಿರುವಂತೆ ನಿಮಗೂ ಸೇರಿದವು. ಇವುಗಳಿಂದ ಬೇಕಾದ ಕಾರ್ಯವನ್ನು ಮಾಡಿರಿ. ನಿಮಗೆ ಅಲಂಕೃತರಾದ ಕನ್ಯೆಯರನ್ನೂ ಬೇಕಾದ ಹಣಗಳನ್ನು ನಿಮಗೆ ಮನಸ್ಸಿಗೆ ಬೇಕಾದ ವಸ್ತುಗಳನ್ನು ಕೊಡುವೆನು. ನಿಮ್ಮ ಪರಾಕ್ರಮದಿಂದ ನಾನು ಈದಿನ ಶತ್ರುಗಳಿಂದ ತಪ್ಪಿಸಿಕೊಂಡು ಕ್ಷೇಮದಿಂದ ಇರುವೆನು. ಆದುದರಿಂದ ನೀವೆಲ್ಲರೂ ಮತ್ಸ್ಯದೇಶಕ್ಕೆ ಅಧಿಪತಿಗಳಾದವರು' ಎಂದು ಹೇಳಿದನು.

ಅದನ್ನು ಕೇಳಿ ಪಾಂಡವರೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಅವನನ್ನು ಸಂತೋಷಪಡಿಸಿದರು. 'ರಾಜನೇ! ನಿನ್ನ ಮಾತನ್ನು ಕೇಳಿ ಸಂತೋಷವಾಯಿತು. ನೀನು ಶತ್ರುಗಳಿಂದ ಬಿಡಲ್ಪಟ್ಟೆಯಷ್ಟೆ! ಇದೇ ನಮಗೆ ಹಿತಕರವಾದದ್ದು. ನಮಗೆ ಮತ್ತೊಂದು ಕಾರ್ಯವೂ ಆಗಬೇಕಾಗಿಲ್ಲ. ನಾವು ಹಣವನ್ನು ಅಪೇಕ್ಷಿಸುವುದಿಲ್ಲ' ಎಂದು ಹೇಳಿದರು. ಆದರೂ ವಿರಾಟರಾಜನು ತನ್ನನ್ನು ಶತ್ರುಗಳ ಕೈಯಿಂದ ಬಿಡಿಸಿದ್ದರಿಂದ ಬಹಳ ಸಂತೋಷವುಳ್ಳವನಾಗಿ ಮತ್ತು ಧರ್ಮರಾಜನೊಡನೆ 'ನಿನಗೆ ನಾನು ಪಟ್ಟಾಭಿಷೇಕವನ್ನು ಮಾಡುತ್ತೇನೆ. ನೀನೇ ಮತ್ಸ್ಯದೇಶಕ್ಕೆ ರಾಜನಾಗು. ನಿನಗೆ ಮನಸ್ಸಿನಲ್ಲಿ ಏನು ಬೇಕು ಎಂದು ಆಸೆಯಿಂದೆಯೋ ಅದನ್ನು ನಾನು ಕೊಡುತ್ತೇನೆ. ರತ್ನಗಳನ್ನೋ ಗೋವುಗಳನ್ನೋ ಬಂಗಾರವನ್ನೋ ಮುತ್ತುಗಳನ್ನೋ ಯಾವುದನ್ನು ಬೇಕಾದರೂ ಕೊಡುತ್ತೇನೆ. ವೈಯಾಘ್ರ ಪದ್ಯಗೋತ್ರದವನೇ! ಸರ್ವಥಾ ನಿನಗೆ ನಮಸ್ಕಾರವು. ನಿನ್ನ ಅನುಗ್ರಹದಿಂದಲೇ ನಾನೀಗ ರಾಜ್ಯವನ್ನು ನೋಡುತ್ತೇನೆ. ಯಾವ ಶತ್ರುವಿನಿಂದ ಪರಾಜಯವುಂಟಾಯಿತು. ಆ ಶತ್ರುವೂ ನಿನ್ನ ಅನುಗ್ರಹ ದಿಂದಲೇ ನನ್ನ ವಶನಾದನು' ಎಂದು ಹೇಳಿದನು.

ಆಗ ಧರ್ಮರಾಜನು 'ರಾಜನೇ! ನಿನ್ನ ಮನೋಹರವಾದ ಮಾತನ್ನು ಪುನಃ ಕೇಳಿ ಬಹಳ ಸಂತೋಷಪಡುತ್ತೇನೆ. ನಿತ್ಯವೂ ಉಪಕಾರ ಸ್ಮರಣೆಯುಳ್ಳವನಾಗಿರುವಿ. ಯಾವಾಗಲೂ ಸುಮುಖಿನಾಗಿಯೇ ಇರುವಿ' ಎಂದು ಹೇಳಿದನು.

ಪುನಃ ವಿರಾಟರಾಜನು ಧರ್ಮರಾಜನೊಡನೆ 'ಶೂದ್ರನಾದ ವಲಲನು

---

1. ಭಾ.ವಿ.ಪ ಅ-34

ಮಾಡಿದ ಕರ್ಮಗಳು ಆಶ್ಚರ್ಯಕರಗಳಾಗಿರುವುವು. ನಾನು ಯುದ್ಧದಲ್ಲಿ ಆ ಶೂದ್ರನಿಂದಲೇ ರಕ್ಷಿತನಾಗಿರುವೆನು. ಇದೆಲ್ಲವೂ ನಿನ್ನ ಅನುಗ್ರಹದಿಂದ ಆದದ್ದು. ನೀನು ಬೇಕಾದ ವರವನ್ನು ಕೇಳು. ನಿನಗೆ ಮಂಗಳವಾಗಲಿ! ನಾನು ಏನು ಮಾಡಲಿ? ನಿನಗೆ ನಾನು ಮಹಾಪ್ರೀತಿಯಿಂದ ಉತ್ತಮಾಧಮರತ್ನಗಳನ್ನು ಹಾಸಿಗೆಯನ್ನು ಆಸನವನ್ನು ವಾಹನಗಳನ್ನು ಅಲಂಕೃತರಾದ ಕನ್ಯೆಯರನ್ನೂ ಆನೆ ಕುದುರೆ ರಥಗಳನ್ನು ನಾನಾ ರಾಜ್ಯಗಳನ್ನು ಕೊಡುವೆನು. ನನ್ನ ಮೇಲಿನ ಪ್ರೀತಿಯಿಂದ ಇವುಗಳೆಲ್ಲವನ್ನೂ ಸ್ವೀಕರಿಸುವನಾಗು' ಎಂದು ಹೇಳಿದನು.

ಆಗ ಧರ್ಮರಾಜನು 'ನಿನಗೆ ಶತ್ರುವಿನಿಂದ ಬಿಡುಗಡೆಯಾದದ್ದೇ ನಮಗೆ ಬಹಳ ಪ್ರೀತಿಕರವಾದದ್ದು. ಈಗ ಸಂತೋಷದಿಂದ ರಾಜ್ಯವನ್ನು ಪ್ರವೇಶಿಸಿ ಹೆಂಡತಿಮಕ್ಕಳನ್ನು ಸೇರಿ ಸಂತೋಷಪಡು. ಅದೇ ನಮಗೆಲ್ಲಾ ಸಂತೋಷಕರ ವಾದದ್ದು. ಸುಶರ್ಮನನ್ನು ಮಾತ್ರ ಸಪರಿವಾರನನ್ನಾಗಿ ಬಿಟ್ಟುಬಿಡು. ಇದೇ ನಾನು ನಿನ್ನೊಡನೆ ಕೇಳುವ ವರವು' ಎಂದು ಹೇಳಿದನು.

ವಿರಾಟರಾಜನು 'ಸುಶರ್ಮನು ಇಚ್ಛಾನುಸಾರವಾಗಿ ಹೋಗಲಿ' ಎಂದನು.

ಧರ್ಮರಾಜನು 'ರಾಜನೇ! ನಿನ್ನ ದೂತರು ಬೇಗನೇ ಊರಿನ ಒಳಗೆ ಹೋಗಿ ನಿನಗೆ ಜಯವಾಯಿತೆಂದು ಪ್ರಸಿದ್ಧಿಪಡಿಸಲಿ' ಎಂದು ಹೇಳಿದನು. ಅವನ ಮಾತಿನಂತೆ ವಿರಾಟರಾಜನು ಊರೊಳಗೆ ಹೋಗಿ ತನಗೆ ಜಯವಾಯಿತೆಂದು ತಿಳಿಸಲಿಕ್ಕೆ ದೂತರನ್ನು ಕಳುಹಿಸಿದನು. 'ಕುಮಾರಿಯರು ಅಲಂಕಾರ ಮಾಡಿಕೊಂಡು ನನ್ನನ್ನು ಎದುರುಗೊಂಡು ಕರೆದುಕೊಂಡು ಹೋಗುವುದಕ್ಕಾಗಿ ಊರಿನಿಂದ ಬರಲಿ. ಬೇಗನೇ ಊರಿನ ಜರೆಲ್ಲರೂ ಬರಲಿ. ವಾದ್ಯಗಳು ಬರಲಿ. ಅಲಂಕಾರ ಮಾಡಿಕೊಂಡು ನಾನಾವೇಶ್ಯೆಯರೂ ಬರಲಿ' ಎಂದು ವಿರಾಟನು ದೂತರೊಡನೆ ತಿಳಿಸಿದನು. ಅವರು ಹಾಗೆಯೇ ಊರಿನ ಒಳಗೆ ಹೋಗಿ ಈ ಶುಭವರ್ತಮಾನವನ್ನು ತಿಳಿಸಿದರು.



# ಭೀಷ್ಮಾದಿಗಳು ವಿರಾಟನ ಗೋವುಗಳನ್ನು ಅಪಹರಿಸಿದ್ದು[1]

ವಿರಾಟರಾಜನು ಗೋವುಗಳನ್ನು ಬಿಡಿಸುವುದಕ್ಕಾಗಿ ತ್ರಿಗರ್ತದೇಶದವರೊಡನೆ ಯುದ್ಧಮಾಡಲಿಕ್ಕೆ ಹೋಗಿರಲು ದುರ್ಯೋಧನನು ಭೀಷ್ಮಾದಿಗಳಿಂದ ಸಹಿತನಾಗಿ ವಿರಾಟನಗರಕ್ಕೆ ಹೋದನು. ಭೀಷ್ಮಾಚಾರ್ಯರೂ, ದ್ರೋಣಾಚಾರ್ಯರೂ, ಕರ್ಣನೂ, ಕೃಪಾಚಾರ್ಯರೂ, ಅಶ್ವತ್ಥಾಮಾಚಾರ್ಯರೂ, ಶಕುನಿಯೂ, ದುಃಶಾಸನನೂ, ಶಲನೂ, ವಿವಿಂಶತಿ, ವಿಕರ್ಣ, ಚಿತ್ರಸೇನ, ದುಃಸಹ, ದುರ್ಮುಖ ಇನ್ನು ಅನೇಕ ಮಹಾರಥಿಕರು ಮತ್ಸ್ಯದೇಶಕ್ಕೆ ಬಂದು ತಮ್ಮ ಸಾಮರ್ಥ್ಯದಿಂದ ಗೋಪಾಲರನ್ನು ಓಡಿಸಿ ಗೋವುಗಳನ್ನು ಅಪಹರಿಸಿದರು. ನೂರು ಸಾವಿರ ಗೋವುಗಳನ್ನು ಅಪಹರಿಸಿದರು. ಮಹಾರಥಿಕರು ಗೋಪಾಲರನ್ನು ಬಡೆದರು. ಆಗ ಮಹಾಶಬ್ದವುಂಟಾಯಿತು. ಗೋವುಗಳ ಯಜಮಾನನು ಭಯವುಳ್ಳವನಾಗಿ ಬೇಗನೇ ರಥವನ್ನು ಏರುವವನಾಗಿ ಕೂಗುತ್ತಾ ಊರಿಗೆ ಓಡಿದನು. ಊರನ್ನು ಪ್ರವೇಶಿಸಿ ಬೇಗನೇ ರಥದಿಂದ ಕೆಳಗೆ ಇಳಿದು ಈ ವಿಷಯವನ್ನು ತಿಳಿಸಲು ರಾಜನ ಮನೆಗೆ ಪ್ರವೇಶಿಸಿದನು. ಅಲ್ಲಿ ವಿರಾಟರಾಜನು ಯುದ್ಧಕ್ಕೆ ಹೋಗಿದ್ದ ಕಾರಣ ಇರಲಿಲ್ಲ. ಅಲ್ಲಿ ಭೂಮಿಂಜಯ ಅಥವಾ ಉತ್ತರ ಎಂದು ಹೆಸರುಳ್ಳ ಅವನ ಮಗನಿದ್ದನು. ಗೋಪಾಲನು ಬಂದವನು ಅವನೊಡನೆ ಎಲ್ಲಾ ವಿಷಯವನ್ನು ತಿಳಿಸಿದನು. 'ರಾಜಪುತ್ರ! ನೂರಾರು ಗೋವುಗಳನ್ನು ಶತ್ರುಗಳು ಅಪಹರಿಸುತ್ತಿರುವರು. ಆ ಗೋವುಗಳನ್ನು ತಿರಿಗಿಸಿಕೊಂಡುಬರುವುದಕ್ಕಾಗಿ ಏಳು. ರಾಜಪುತ್ರನೇ! ಹಿತವನ್ನು ಬಯಸುವವನಾಗಿ ಬೇಗನೆ ನೀನೇ ಹೊರಟುಹೋಗು. ಮಹಾರಾಜರು ನಿನ್ನನ್ನು ಒಬ್ಬರು ಇಲ್ಲದಿರುವ ಈ ರಾಜ್ಯಕ್ಕೆ ರಕ್ಷಕನನ್ನಾಗಿ ಮಾಡಿ ಹೊರಟುಹೋಗಿರುವರು. ಅವರು ಸಭಾಮಧ್ಯದಲ್ಲಿ 'ನನ್ನ ಮಗನು ನನ್ನಂತೆಯೇ ಮಹಾಪರಾಕ್ರಮಶಾಲಿಯಾಗಿರುವನು. ಧನುರ್ವಿದ್ಯೆಯಲ್ಲಿ ಪಂಡಿತನಾಗಿರುವನು. ಮಹಾಪರಾಕ್ರಮದಿಂದ ಯಾವಾಗಲೂ ಯುದ್ಧ ಮಾಡುವವನು. ಕೌರವರ ಹತ್ತಿರವೂ ಯುದ್ಧಮಾಡಲಿಕ್ಕೆ ಸಮರ್ಥನಾಗಿರುವನು' ಎಂದು ನಿನ್ನನ್ನು ಹೊಗಳುತ್ತಿದ್ದರು. ಅವರ ಮಾತು ಸತ್ಯವೇ ಆಗಲಿ. ನೀನು ಯುದ್ಧಕ್ಕೆ ಹೋದರೆ ನಿನಗೆ ನಿಶ್ಚಯವಾಗಿಯೂ ಜಯವು ಸಿಗುವುದು. ನಿಶ್ಚಯವಾಗಿಯೂ ಕೌರವರು ಸತ್ತರು. ರುದ್ರದೇವರು ಪಶುಗಳನ್ನು ಜಯಿಸಿದಂತೆ ಶತ್ರುಗಳನ್ನು ಜಯಿಸಿ ಗೋವುಗಳನ್ನು

---

1. ಭಾ.ವಿ.ಪ ಅ-35

ಹಿಂದೆ ತಿರುಗಿಸು. ಭಯಂಕರವಾದ ಬಾಣದ ತೇಜಸ್ಸಿನಿಂದ ಅವರ ಸೈನ್ಯಗಳನ್ನು ಸುಟ್ಟುಹಾಕುವವನಾಗು. ರಾಜಪುತ್ರನೇ! ಯಾಕೆ ಸುಮ್ಮನೆ ಕೂತಿರುವಿ. ಬೇಗನೇ ಯುದ್ಧಮಾಡಲಿಕ್ಕೆ ಹೋಗು. ಬಂಗಾರದ ಸಾಮಗ್ರಿಯಿಂದ ಯುಕ್ತವಾದ ಬಿಳಿ ಕುದುರೆಗಳನ್ನು ನಿನ್ನ ರಥಕ್ಕೆ ಕಟ್ಟಲಿ. ಬಂಗಾರಮಯವಾದ ಸಿಂಹಧ್ವಜವನ್ನು ನಿನ್ನ ರಥದಲ್ಲಿ ಏರಿಸು. ಕೈಚಾತುರ್ಯವುಳ್ಳ ನಿನ್ನಿಂದ ಬಿಡಲ್ಪಟ್ಟ ಪ್ರಸನ್ನವಾದ ಅಗ್ರವುಳ್ಳ ಬಂಗಾರದ ಪುಂಖವುಳ್ಳ ರಾಜರ ಆಯುಷ್ಯವನ್ನು ಅಪಹರಿಸುವ ನಿನ್ನ ಬಾಣಗಳು ಸೂರ್ಯನನ್ನು ಮರೆಮಾಡಲಿ. ಇಂದ್ರದೇವರು ಅಸುರರನ್ನು ಜಯಿಸುವಂತೆ ಯುದ್ಧದಲ್ಲಿ ಎಲ್ಲಾ ಕೌರವರನ್ನು ಜಯಿಸಿ ಮಹಾಕೀರ್ತಿಯನ್ನು ಹೊಂದಿ ಈ ಊರನ್ನು ಪ್ರವೇಶಿಸುವವನಾಗು. ನೀನು ಮತ್ಸ್ಯದೇಶಕ್ಕೆ ಉತ್ತಮಗತಿಯಾಗಿರುವಿ. ಜಯವಂತರಲ್ಲಿ ಶ್ರೇಷ್ಠನಾದ ಅರ್ಜುನನು ಹೇಗೆ ಪಾಂಡವರಿಗೆ ಆಶ್ರಯನೊ ಹಾಗೆಯೇ ನೀನು ಈ ದೇಶದ ಎಲ್ಲಾ ಜನರಿಗೂ ಆಶ್ರಯನಾಗಿರುವಿ' ಎಂದು ಹೇಳಿದನು.



# ಉತ್ತರನು ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧಕ್ಕೆ ಹೋದದ್ದು [1]

ಮಹಾಜನರ ಎದುರಲ್ಲಿ ಅದರಲ್ಲಿಯೂ ವಿಶೇಷವಾಗಿ ಸ್ತ್ರೀಜನರ ಮಧ್ಯದಲ್ಲಿ ಈರೀತಿಯಾಗಿ ಗೋವುಗಳ ಯಜಮಾನನು ಹೇಳಲು ಅಂತಃಪುರದಲ್ಲಿ ಆ ಉತ್ಸಾಹಜನಕವಾದ ಮಾತನ್ನು ಕೇಳಿ ತನ್ನನ್ನು ಹೊಗಳಿಕೊಂಡು 'ಕುದುರೆಗಳನ್ನು ಓಡಿಸುವುದರಲ್ಲಿ ಸಮರ್ಥನಾದ ಒಬ್ಬ ಸಾರಥಿಯು ಇರುತ್ತಿದ್ದರೆ ದೃಢ ಧರ್ಮಧಾರಿಯಾದ ನಾನು ಈಗಲೇ ಗೋವುಗಳನ್ನು ಅನುಸರಿಸಿಕೊಂಡು ಹೋಗುತ್ತಿದ್ದೆನು. ನನಗೆ ಸರಿಯಾದ ಸಾರಥಿಯನ್ನೇ ಕಾಣೆನಲ್ಲಾ! ಯುದ್ಧಕ್ಕೆ ಹೋಗುವ ನನಗೆ ಸರಿಯಾದ ಸಾರಥಿಯು ಎಲ್ಲಿಯಾದರೂ ಇರುವನೋ ಎಂದು ನೋಡಿರಿ. ಇಪ್ಪತ್ತೆಂಟು ರಾತ್ರಿಗಳಲ್ಲಿಯೋ ಅಥವಾ ಒಂದು ತಿಂಗಳಲ್ಲಿಯೋ ನಡೆದ ಮಹಾಯುದ್ಧದಲ್ಲಿ ಕೊನೆಗೆ ನನ್ನ ಸಾರಥಿಯು ಸಿಗುವ ಪಕ್ಷದಲ್ಲಿ ಈಗಲೇ ಬೇಗನೇ ಧ್ವಜವನ್ನು ಏರಿಸಿಕೊಂಡು ಯುದ್ಧಕ್ಕೆ ಹೋಗುತ್ತಿದ್ದೆನು. ಆನೆ ಕುದುರೆ ರಥಗಳಿಂದ

1. ಭಾ.ವಿ.ಪ ಅ-35, 36, 37

ಕೂಡಿದ ಶತ್ರುಸೈನ್ಯವನ್ನು ಪ್ರವೇಶಿಸಿ ಶಸ್ತ್ರಪ್ರತಾಪದಿಂದ ಪರಾಕ್ರಮಹೀನರಾದ ಕೌರವರನ್ನು ಜಯಿಸಿ ಗೋವುಗಳನ್ನು ಹಿಂದೆ ತರುವೆನು. ಇಂದ್ರದೇವರು ದಾನವರನ್ನು ಓಡಿಸುವಂತೆ ದುರ್ಯೋಧನ ವಿಕರ್ಣ ಸೂರ್ಯಪುತ್ರನಾದ ಕರ್ಣ ದ್ರೋಣ ಅಶ್ವತ್ಥಾಮರನ್ನು ಇನ್ನು ಯುದ್ಧಕ್ಕೆ ಬಂದಿರುವ ಮಹಾಧನುರ್ಧಾರಿಗಳನ್ನು ಯುದ್ಧರಂಗದಲ್ಲಿ ಓಡಿಸಿ ಇದೇ ಮುಹೂರ್ತದಲ್ಲಿಯೇ ಗೋವುಗಳನ್ನು ಹಿಂದೆ ತಿರುಗಿಸಿ ಕರಕೊಂಡು ಬರುತ್ತಿದ್ದೆನು. ಇಲ್ಲಿ ಯಾರೂ ಇಲ್ಲವೆಂದು ತಿಳಿದುಕೊಂಡು ಕೌರವರನ್ನು ಗೋವುಗಳನ್ನು ಅಪಹರಿಸಿಕೊಂಡು ಹೋಗುತ್ತಿದ್ದಾರೆ. ನಾನು ಅಲ್ಲಿ ಇರದಿದ್ದ ಕಾರಣ ಅವರು ಏನು ಬೇಕಾದರೂ ಮಾಡುವರು. ಬಂದಿರುವ ಕೌರವರು ಈಗ ನನ್ನ ಪರಾಕ್ರಮವನ್ನು ನೋಡಿ ಸಾಕ್ಷಾತ್ ಅರ್ಜುನನೇ ಬಂದಿರುವನೋ ಎಂದು ತಿಳಿಯುವರು' ಎಂದು ಹೇಳಿದನು.

ಹೆಂಗಸರ ಮಧ್ಯದಲ್ಲಿ ಉತ್ತರನು ತನ್ನನ್ನು ಹೊಗಳಿಕೊಂಡು ಹೇಳಿದ ಮಾತನ್ನು ಕೇಳಿ ದ್ರೌಪದೀದೇವಿಯರಿಗೆ ಸಹಿಸಲಿಲ್ಲ. ಅದರಲ್ಲಿಯೂ ಅರ್ಜುನನ ಹೆಸರನ್ನು ಹೇಳಿದ್ದನ್ನು ಸಹಿಸಲಿಲ್ಲ. ಉತ್ತರನು ಹೇಳಿದ ಮಾತನ್ನು ಅರ್ಜುನನೂ ಕೇಳಿದನು. ಆಸಮಯದಲ್ಲಿ ಅವರು ಪಗಡೆ ಆಟದ ಸಭೆಯಲ್ಲಿ ಪ್ರತಿಜ್ಞೆ ಮಾಡಿದಂತೆ ಮಾಡಿದ **ಅಜ್ಞಾತವಾಸದ ಹದಿಮೂರನೇ ವರ್ಷವು ಸಂಪೂರ್ಣವಾಗಿ ಚಾಂದ್ರಮಾನ ರೀತಿಯಿಂದ ಮುಗಿದಿತ್ತು.** ಅದರಿಂದ ಏಕಾಂತದಲ್ಲಿ ಅವನು ಪ್ರೀತಿಯಿಂದ ದ್ರೌಪದೀದೇವಿಯೊಡನೆ ''ಪಾಂಚಾಲಿ! ನೀನು ಬೇಗನೇ ಉತ್ತರೆಯ ಬಳಿಗೆ ಹೋಗಿ 'ಅರ್ಜುನನು ಖಾಂಡವವನವನ್ನು ಸುಡುವಾಗ ಯುದ್ಧಮಾಡುವ ಸಮಯದಲ್ಲಿ ಅರ್ಜುನನಿಗೆ ಬೃಹನ್ನಳೆಯು ಸಾರಥ್ಯವನ್ನು ಮಾಡಿದ್ದಳು. ಆದುದರಿಂದ ಬೃಹನ್ನಳೆಯು ಸಾರಥಿಯಾಗುವುದಾದರೆ ನಿಶ್ಚಯವಾಗಿಯೂ ಜಯವಾಗುವುದು' ಎಂದು ಹೇಳು' ಎಂದು ನುಡಿದನು. ತರುವಾಯ ದ್ರೌಪದೀದೇವಿಯರು ಉತ್ತರೆಯು ಇರುವ ಮನೆಯೊಳಗೆ ಪ್ರವೇಶಿಸಿ ಸಖಿಯರ ಮಧ್ಯದಲ್ಲಿ ಪ್ರಕಾಶಿಸುತ್ತಿದ್ದ ಅವಳೊಡನೆ 'ಬೃಹನ್ನಳೆಯು ಪೂರ್ವದಲ್ಲಿ ಧನುರ್ಧಾರಿಗಳಿಗೆ ಶ್ರೇಷ್ಠವಾದ ಅರ್ಜುನನಿಗೆ ಸಾರಥ್ಯವನ್ನು ಮಾಡಿದ್ದನು. ಅರ್ಜುನನು ಈ ಸಾರಥಿಯಿಂದಾಗಿ ದೇವಗಂಧರ್ವ ಮಹಾಸುರ ಉರಗದಿಂದ ಕೂಡಿದ ಸಮಸ್ತರನ್ನು ಜಯಿಸಿ ಅಗ್ನಿದೇವರಿಗೆ ಖಾಂಡವ ವನವನ್ನು ಸುಡುವಂತೆ ಮಾಡಿ ತೃಪ್ತಿಪಡಿಸಿರುವನು. ಯುದ್ಧರಂಗದಲ್ಲಿ ಆ ಬೃಹನ್ನಳೆಯ ವೀರ್ಯವನ್ನು ನಾನು ತಿಳಿದಿರುವೆನು. ಬೃಹನ್ನಳೆಯು ಉತ್ತರನಿಗೆ ಸಾರಥಿಯಾಗುವುದಾದರೆ ಸರ್ವಭೂತಗಳೋ

ದೇವದಾನವರೋ ಕೌರವರೋ ಯಾರೊಬ್ಬರೂ ನಿನ್ನ ಗೋವುಗಳನ್ನು ಅಪಹರಿಸಲಾರರು. ಬೃಹನ್ನಳೆಯು ಅರ್ಜುನನಿಗೆ ಶಿಷ್ಯನಾಗಿ ಧನುರ್ವಿದ್ಯೆಯಲ್ಲಿ ಅರ್ಜುನನಿಗೆ ಕಡಿಮೆಯಾಗಿರಲಿಲ್ಲ. ನಾನು ಪಾಂಡವರ ಮನೆಯಲ್ಲಿ ಇರುವಾಗ ನೋಡಿರುವೆನು. ಆ ಸಾರಥಿಯಿಂದ ಅರ್ಜುನನು ಇಂದ್ರಪ್ರಸ್ಥದಲ್ಲಿ ಇರುವಾಗ ಎಲ್ಲರನ್ನೂ ಜಯಿಸಿರುವನು. ಬೃಹನ್ನಳೆಯಂತೆ ಇರುವ ಸಾರಥಿಯೇ ಇರುವುದಿಲ್ಲ' ಎಂದು ಹೇಳಿದರು.

ತರುವಾಯ ದ್ರೌಪದೀದೇವಿಯರಿಂದ ಸಹಿತಳಾಗಿ ಉತ್ತರೆಯು ಅಣ್ಣನಾದ ಉತ್ತರನೊಡನೆ 'ವೀರನೇ! ಬೇಗನೇ ಸಾರಥ್ಯದ ವಿಷಯದಲ್ಲಿ ಬೃಹನ್ನಳೆಯನ್ನು ಪ್ರಾರ್ಥಿಸು. ಬೃಹನ್ನಳೆಯು ಸಾರಥ್ಯದಲ್ಲಿಯೂ ನರ್ತನದಲ್ಲಿ ಗಾಯನದಲ್ಲಿಯೂ ವಾದ್ಯಬಾರಿಸುವುದರಲ್ಲಿಯೂ ಶಿಕ್ಷಿತಳಾಗಿರುವಳು. ಬೃಹನ್ನಳೆಯನ್ನು ತಿಳಿದವಳಾದ ಸೈರಂಧ್ರಿಯು ಅವಳನ್ನು ಸ್ತೋತ್ರಮಾಡುತ್ತಾ ಹೇಳಿದಳು' ಎಂದಳು.

ಅದಕ್ಕೆ ಉತ್ತರನು 'ಸೈರಂಧ್ರಿ! ನಿನಗೆ ನನ್ನ ವ್ರತವು ತಿಳಿದೇ ಇರುವುದು. ನಾನು ನಪುಂಸಕರೊಡನೆ ಮಾತಾಡುವುದಿಲ್ಲ. ಆದುದರಿಂದ ನಾನು ಬೃಹನ್ನಳೆಯೊಡನೆ ಕುದುರೆಗಳನ್ನು ಓಡಿಸು ಎಂದು ಹೇಳಲಾರೆನಲ್ಲಾ'' ಎಂದನು.

ಅದಕ್ಕೆ ದ್ರೌಪದೀದೇವಿಯರು 'ಆಪತ್ತಿನ ಸಮಯದಲ್ಲಿ ವ್ರತವೋ ಅವ್ರತವೋ ಎಂದು ನೋಡಬಾರದು. ಯಾವುದನ್ನು ಮಾಡಿದರೆ ಆಪತ್ತಿನ ಪರಿಹಾರವಾಗು ವುದೋ ಆ ವ್ರತವನ್ನು ಮಾಡಬೇಕು. ಈರೀತಿಯಾಗಿ ಧರ್ಮವನ್ನು ತಿಳಿದವರು ಹೇಳುತ್ತಿರುವರು. ಆದುದರಿಂದ ನೀನೇ ಬೃಹನ್ನಳೆಯೊಡನೆ ಹೇಳಬಹುದು. ನಿನ್ನ ತಂಗಿಯು ಹೋಗಿ ಹೇಳಿದರೆ ನಿಶ್ಚಯವಾಗಿಯೂ ಬೃಹನ್ನಳೆಯು ಸಾರಥ್ಯವನ್ನು ಮಾಡುವಳು. ಅವಳು ಸಾರಥಿಯಾದರೆ ನೀನು ನಿಶ್ಚಯವಾಗಿಯೂ ಎಲ್ಲಾ ಕೌರವರನ್ನು ಜಯಿಸಿ ಗೋವುಗಳನ್ನು ಕರೆದುಕೊಂಡು ಬರುವಿ' ಎಂದು ಹೇಳಿದರು.

ಉತ್ತರನು ಉತ್ತರೆಯೊಡನೆ 'ಸುಂದರಿ! ನೀನು ಬೇಗನೆ ಹೋಗಿ ಬೃಹನ್ನಳೆಯನ್ನು ಕರೆದುಕೊಂಡು ಬಾ' ಎಂದನು. ಕೂಡಲೇ ಅವಳು ಬೃಹನ್ನಳೆಯು ಇದ್ದ ನರ್ತನಗೃಹಕ್ಕೆ ಹೋಗಿ ಅರ್ಜುನನು ಬಳಿಗೆ ಹೋಗಿ ನಿಂತಳು. ಆಗ ಅರ್ಜುನನು ಅವಳೊಡನೆ 'ಸುಂದರಿ! ಇಷ್ಟು ಅವಸರದಿಂದ ಯಾಕೆ ಬಂದಿರುವಿ? ನಿನ್ನ ಮುಖವು ಏಕೆ ಬಾಡಿಹೋಗಿರುವುದು? ನನ್ನೊಡನೆ ತಿಳಿಸು' ಎಂದು ಕೇಳಿದನು.

ಉತ್ತರೆಯು 'ಬೃಹನ್ನಳೆಯೇ! ನನ್ನ ತಂದೆಯ ನೂರುಸಾವಿರ ಗೋವುಗಳನ್ನು ಕೌರವರು ಅಪಹರಿಸುತ್ತಿರುವರು. ಗೋವುಗಳು ಬಹುದೂರ ಹೋಗುವ

ಮೊದಲೇ ನನ್ನ ಅಣ್ಣನ ರಥದ ಕುದುರೆಗಳನ್ನು ಓಡಿಸು. ನೀನು ಸಾರಥ್ಯವನ್ನು ಮಾಡಲಿಕ್ಕೆ ಸುಶಿಕ್ಷಿತಳಾಗಿರುವೆಯೆಂದು ಸೈರಂಧ್ರಿಯು ಹೇಳಿರುವಳು. ನಾನು ಕೇಳಿಕೊಂಡರೂ ನೀನು ಸಾರಥ್ಯವನ್ನು ಮಾಡಲಿಕ್ಕೆ ಅಣ್ಣನ ಬಳಿಗೆ ಹೋಗದಿದ್ದರೆ ಇಲ್ಲಿಯೇ ನಿಶ್ಚಯವಾಗಿಯೂ ಪ್ರಾಣಗಳನ್ನು ಬಿಡುವೆನು' ಎಂದು ಹೇಳಿದಳು.

ಆಗ ಅರ್ಜುನನು ಪ್ರೀತಿಯಿಂದ 'ಸುಂದರಿ! ನಿನ್ನ ಇಚ್ಛೆಯಂತೆ ಹೋಗುವೆನು. ಜ್ವಲಿಸುವ ಅಗ್ನಿಗೆ ಬೇಕಾದರೂ ನಾನು ಪ್ರವೇಶಿಸುವೆನು. ಸುಂದರಿ! ನೀನು ಬದುಕಿರಬೇಕೆಂದು ಬಯಸುವೆನು. ನನ್ನ ನಿಮಿತ್ತವಾಗಿ ನೀನು ಭಯಂಕರವಾದ ಯಮನಗರವನ್ನು ನೋಡುವುದು ಬೇಡ' ಎಂದು ಉತ್ತರೆಯೊಡನೆ ಹೇಳಿ ಉತ್ತರನ ಬಳಿಗೆ ಹೋದನು. ಆಭರಣಗಳನ್ನು ಧರಿಸಿದ ಅರ್ಜುನನು ಬರುತ್ತಿರುವುದನ್ನು ಉತ್ತರಕುಮಾರನು ನೋಡಿದನು. ಗೋವುಗಳನ್ನು ತರಬೇಕೆಂಬ ಕುತೂಹಲದಿಂದ ಬೃಹನ್ನಳೆಯನ್ನು ಕೂಗಿ ಮಾತಾಡಿದನು. ದೂರದಲ್ಲಿಯೇ ಅವನನ್ನು ನೋಡಿ ''ನಿನ್ನನ್ನೇ ಸಾರಥಿಯನ್ನಾಗಿ ಮಾಡಿ ಅರ್ಜುನನು ಖಾಂಡವವನದಲ್ಲಿ ಅಗ್ನಿಗೆ ತೃಪ್ತಿಪಡಿಸಿದನಂತೆ. ಭೂಮಿಯೆಲ್ಲವನ್ನು ಜಯಿಸಿದನಂತೆ ಸೈರಂಧ್ರಿಯು ನನ್ನೊಡನೆ ಹೇಳಿದಳು. ಸೈರಂಧ್ರಿಗೆ ಎಲ್ಲಾ ವಿಷಯವು ಗೊತ್ತಿದೆ. 'ಪ್ರಸಿದ್ಧನಾದ ದೇವೇಂದ್ರನ ಸಾರಥಿಯಾದ ಮಾತಲಿಯೂ, ಪರುಶುರಾಮದೇವರ ಸಾರಥಿಯಾದ ಸುಮಹನೂ, ರಾಮದೇವರ ಮಂತ್ರಿಯಾದ ಸುಮಂತ್ರನೂ, ಸೂರ್ಯನಿಗೆ ಸಾರಥಿಯಾದ ಅರುಣನೂ ಇವರೆಲ್ಲಾ ಸಾರಥಿಯರೂ ಬೃಹನ್ನಳೆಗೆ ಸಮಾನರಲ್ಲ' ಎಂದು ಸೈರಂಧ್ರಿಯು ಹೇಳಿರುವಳು. ಈರೀತಿಯಾಗಿ ಸೈರಂಧ್ರಿಯು ಹೇಳಿದ ಕಾರಣ ಬೇಗನೆ ನಾನು ನಿನ್ನನ್ನು ಬರಮಾಡಿದೆನು. ನೀನು ನನ್ನೊಡನೆ ಯುದ್ಧರಂಗಕ್ಕೆ ಬರುವವನಾಗ ಬೇಕು. ಕೌರವರಿಂದ ಗೋವುಗಳು ಬಹುದೂರ ಹೋಗುತ್ತಿರುವುವು'' ಎಂದು ಹೇಳಿದನು. ಆಗ ಅರ್ಜುನನು ರಾಜಪುತ್ರನೊಡನೆ 'ಯುದ್ಧರಂಗದಲ್ಲಿ ಸಾರಥ್ಯವನ್ನು ಮಾಡಲಿಕ್ಕೆ ನನಗೆಲ್ಲಿ ಸಾಮರ್ಥ್ಯವಿದೆ? ನಾನು ಬೇಕಾದರೆ ನರ್ತನ ಮಾಡುವೆನು. ಹಾಡನ್ನು ಹೇಳುವೆನು. ವಾದ್ಯಬಾರಿಸುವೆನು. ಸಾರಥ್ಯಮಾಡಲಿಕ್ಕೆ ನನಗೆ ಎಲ್ಲಿ ಸಾಮರ್ಥ್ಯವಿದೆ' ಎಂದು ಹೇಳಿಬಿಟ್ಟನು.

ಉತ್ತರಕುಮಾರನು 'ನೀನು ನರ್ತನ ಮಾಡುವವನಾಗು ಅಥವಾ ಹಾಡು ಹೇಳಿಕೊಡುವವನಾಗು. ಹೇಗೆ ಇದ್ದರೂ ಬೇಗನೇ ಕವಚವನ್ನು ಧರಿಸು. ನನ್ನ ಹತ್ತಿರ ಈಗ ಹೆಂಗಸರು ನಿನ್ನ ಪೌರುಷವನ್ನು ಬಹಳವಾಗಿ ಹೊಗಳುತ್ತಿರುವರು' ಎಂದು ಹೇಳಿದನು.

ಈರೀತಿಯಾಗಿ ಹೇಳಿ ಮಂದಹಾಸವನ್ನು ಮಾಡುತ್ತಾ ಉತ್ತರಕುಮಾರನು ಅರ್ಜುನನನ್ನು ಸಂತೋಷಪಡಿಸಿದನು. ಬಂಗಾರದಿಂದ ವಿಚಿತ್ರವಾದ ಕವಚವನ್ನು ತಾನೇ ಬೃಹನ್ನಳೆಗೆ ಕೊಟ್ಟನು. ಅರ್ಜುನನು ಸಾರಥ್ಯವನ್ನು ಮಾಡಲಿಕ್ಕೆ ಮನಸ್ಸಿಲ್ಲದವ ನಂತೆ ತೋರಿಸುತ್ತಾ ಉತ್ತರಕುಮಾರನ ಆಜ್ಞೆಯಿಂದ ಕವಚವನ್ನು ತೆಗದುಕೊಂಡನು. ಉತ್ತರಕುಮಾರನೊಡನೆ 'ಯುದ್ಧದಲ್ಲಿ ನಿನಗೆ ಪರಾಕ್ರಮವಿರುವದಾದರೆ ಶತ್ರುಗಳನ್ನು ಜಯಿಸುವುದು ನಿನ್ನ ಶಕ್ಯವಾದ ಪಕ್ಷದಲ್ಲಿ ನೀನು ಹೋಗುವಲ್ಲಿಗೆ ನಾನು ಬರುವೆನು' ಎಂದು ಹೇಳಿದನು.

ತರುವಾಯ ಅರ್ಜುನನು ಎಲ್ಲವನ್ನೂ ತಿಳಿದವನಾಗಿದ್ದರೂ ಉತ್ತರೆಯು ಮುಂಭಾಗದಲ್ಲಿ (ಮುಂದೆ) ಒಂದನ್ನು (ಏನನ್ನೂ) ತಿಳಿಯದವರಂತೆ ಬಹಳ ವಿನೋದಕರವಾದ ಕಾರ್ಯಗಳನ್ನು ಮಾಡಿದನು. ಅವನು ಕವಚವನ್ನು ತಲೆಕೆಳಗಾಗಿ ಧರಿಸುವುದನ್ನು ನೋಡಿ ಹೆಂಗಸರೆಲ್ಲರೂ ಬಹಳವಾಗಿ ನಗುವವರಾದರು. ಅರ್ಜುನನು ಕವಚವನ್ನು ಅಡ್ಡವಾಗಿ ಹಾಕಿಕೊಂಡು ಆಮೇಲೆ ಪುನಃ ತಲೆಕೆಳಗಾಗಿ ಹಾಕಿ ಸೆಳೆಯುತ್ತಿದ್ದನು. ಪುನಃ ಮೇಲೆ ಹಾರಿಸಿದನು. ಹೀಗೆಯೇ ಇನ್ನು ಅನೇಕ ಪ್ರಕಾರವಾಗಿ ಮಾಡುತ್ತಿರಲು ಹೆಂಗಸರೆಲ್ಲರೂ ಅದನ್ನು ನೋಡಿ ನಗುತ್ತಿದ್ದರು. ಆದರೆ ಉತ್ತರನು ಮಾತ್ರ ಅವನನ್ನು ತಿರಸ್ಕರಿಸಲಿಲ್ಲ. ತಾನೇ ಅವನಿಗೆ ಕವಚಾದಿಗಳನ್ನು ಧರಿಸುವಂತೆ ಮಾಡಿದನು. ಬೇಗನೇ ರಥಕ್ಕೆ ಬಂಗಾರದ ಸಾಮಗ್ರಿಯುಳ್ಳ ಕುದುರೆಗಳನ್ನು ಕಟ್ಟಿದನು. ಬಂಗಾರದ ಸಿಂಹಧ್ವಜವನ್ನು ರಥದಲ್ಲಿ ಏರಿಸಿದನು. ವಿಚಿತ್ರಗಳಿಂದ ಧನುಸ್ಸುಗಳನ್ನು ಮನೋಹರಗಳಾದ ಬಾಣಗಳನ್ನು ಇತರ ಆಯುಧಗಳನ್ನು ಇಟ್ಟನು. ಆಮೇಲೆ ಬೃಹನ್ನಳೆಯನ್ನು ಸಾರಥಿಯನ್ನಾಗಿ ಮಾಡಿಕೊಂಡು ರಥವನ್ನು ಏರಿಹೋದನು. ಆಗ ಉತ್ತರೆಯೂ ಭೀಷ್ಮಾದಿದ್ರೋಣಾದಿಗಳನ್ನು ಜಯಿಸಿ ನಮಗೆ ಬೊಂಬೆಗಳಿಗೆ ತೆಳ್ಳಗಿರುವ ವಸ್ತ್ರಗಳನ್ನು ಚಿಕ್ಕಚಿಕ್ಕ ರತ್ನಗಳನ್ನು ತರುವವಳಾಗು' ಎಂದು ಹೇಳಿದರು. ಆಗ ಅರ್ಜುನನು 'ಯುದ್ಧದಲ್ಲಿ ಈ ಉತ್ತರನು ಮಹಾರಥಿಕರನ್ನು ಜಯಿಸಿದರೆ ನಾನು ವಸ್ತ್ರಗಳನ್ನು ಸೂಕ್ಷ್ಮ ಆಭರಣಗಳನ್ನು ತರುವೆನು' ಎಂದು ಹೇಳಿದನು.

ಉತ್ತರಕುಮಾರನು ಬಂಗಾರವೈಡೂರ್ಯಮಣಿಗಳಿಂದ ಪರಿಷ್ಕೃತವಾದ ಕವಚವನ್ನು ಧರಿಸಿಕೊಂಡು ರಥವನ್ನು ಏರಿ ಅರ್ಜುನನನ್ನು ಸಾರಥಿಯನ್ನಾಗಿ ಮಾಡಿಕೊಂಡು ಹೋದನು. ಉತ್ತಮವಾದ ರಥದಲ್ಲಿ ಕೂತಿದ್ದ ಉತ್ತರಕುಮಾರನನ್ನು ಬೃಹನ್ನಳೆಯನ್ನು ನೋಡಿ ಮಹಾಜನರೂ ಕನ್ಯೆಯರೂ ಹೆಂಗಸರೂ ಬ್ರಾಹ್ಮಣರೂ

ಪ್ರದಕ್ಷಿಣೆಯಾಗಿ ಬಂದು ಮಂಗಲವಾಗುವಂತೆ ಸತ್ಕರಿಸಿದರು. 'ಖಾಂಡವವನವನ್ನು ಸುಡುವಾಗ ಅರ್ಜುನನಿಗೆ ಯಾವ ಮಂಗಳವು ಉಂಟಾಯಿತೋ ಆ ಮಂಗಳವೇ ಉತ್ತರನಿಂದ ಸಹಿತನಾಗಿ ಕೌರವರನ್ನು ಹೊಂದಿ ಬೃಹನ್ನಳೆಯೇ ನಿನಗೆ ಆಗಲಿ' ಎಂದು ಎಲ್ಲರೂ ಹೇಳಿದರು.



## ಕುರುಸೈನ್ಯವನ್ನು ನೋಡಿ ಉತ್ತರನು ಓಡಿಹೋದದ್ದು[1]

ಉತ್ತರಕುಮಾರನು ಅಂಜಿಕೆಯಿಲ್ಲದೆ ರಾಜಧಾನಿಯಿಂದ ಹೊರಗೆ ಬಂದು 'ಬೃಹನ್ನಳೆಯೇ! ಕೌರವರು ಹೋಗಿರುವ ಸ್ಥಳಕ್ಕೆ ಬೇಗನೇ ಕುದುರೆಗಳನ್ನು ಓಡಿಸು. ಜಯಿಸಬೇಕೆಂಬ ಆಸೆಯಿಂದ ಬಂದಿರುವ ಆ ಕೌರವರೆಲ್ಲರನ್ನು ನಾನು ಬೇಗನೇ ಜಯಿಸಿ ಗೋವುಗಳನ್ನು ಬಿಡಿಸಿಕೊಂಡು ಊರಿಗೆ ಪುನಃ ಬಂದು ಸೇರುವೆನು' ಎಂದು ಹೇಳಿದನು. ತರುವಾಯ ಅರ್ಜುನನು ಆ ಉತ್ತಮ ಕುದುರೆಗಳನ್ನು ಓಡಿಸಿದನು. ಅರ್ಜುನನಿಂದ ಪ್ರೇರಿಸಲ್ಪಟ್ಟ ಬಂಗಾರದ ಮಾಲೆಯುಳ್ಳ ಆ ಕುದುರೆಗಳು ಆಕಾಶವನ್ನು ಮುಟ್ಟುವಂತೆ ಹಾರಿ ಹೋಗುತ್ತಿದ್ದವು. ಅಷ್ಟರವರೆಗೆ ಭಯ ರಹಿತನಾಗಿದ್ದ ಉತ್ತರಕುಮಾರನೂ ಸರ್ವದಾ ಭಯರಹಿತನಾದ ಅರ್ಜುನನೂ ಸ್ವಲ್ಪದೂರ ಹೋಗುವವರಾಗಿ ಸ್ಮಶಾನದಲ್ಲಿ ಸುತ್ತಲೂ ನಿಂತಿದ್ದ ಬಲಿಷ್ಠರಾದ ಕೌರವರ ಮಹತ್ತಾದ ಸೈನ್ಯವನ್ನು ನೋಡಿದರು. ಮಹತ್ತಾದ ವಿಸ್ತೃತವಾಗಿದ್ದ ಸಮುದ್ರದಂತೆ ಇರುವ, ಆಕಾಶದಲ್ಲಿ ಸಂಚರಿಸುತ್ತಿರುವ ಬಹುವೃಕ್ಷಗಳಿಂದ ಕೂಡಿದ ವನದಂತೆಯೂ ಇರುವ ಆ ಸೈನ್ಯವನ್ನು ನೋಡಿದರು. ಆ ಸೈನ್ಯವು ನಡೆಯುತ್ತಿರುವಾಗ ಧೂಳಿಯು ಏಳುವುದು ಕಾಣಿಸುತ್ತಿತ್ತು. ಅದು ಆಕಾಶವನ್ನು ಮುಟ್ಟುತ್ತಿತ್ತು. ಅದರಿಂದ ನೋಡುವವರ ಕಣ್ಣು ಮುಚ್ಚಿಹೋಗುತ್ತಿತ್ತು.

ಆನೆ ಕುದುರೆ ರಥಗಳಿಂದ ತುಂಬಿದ್ದ, ಕರ್ಣ ದುರ್ಯೋಧನ ಕೃಪರಿಂದಲೂ, ಭೀಷ್ಮಾಚಾರ್ಯರಿಂದಲೂ, ದ್ರೋಣಾಚಾರ್ಯರಿಂದಲೂ, ಅಶ್ವತ್ಥಾಮಾಚಾರ್ಯ ರಿಂದಲೂ, ರಕ್ಷಿತವಾಗಿದ್ದ ಆ ಮಹಾಸೈನ್ಯವನ್ನು ನೋಡಿ ಉತ್ತರುಕುಮಾರನು ಭಯದಿಂದ ನಡುಗಲಿಕ್ಕೆ ಆರಂಭಿಸಿದನು. ಮೈಯೆಲ್ಲಾ ರೋಮಾಂಚನವುಳ್ಳವ ನಾದನು. ಎರಡೂ ಕಣ್ಣುಗಳನ್ನು ಮುಚ್ಚಿಕೊಂಡನು. ಆಮೇಲೆ ಅವನು ಅರ್ಜುನನೊಡನೆ 'ಬೃಹನ್ನಳೆಯೇ! ನಾನು ಕೌರವರೊಡನೆ ಯುದ್ಧವನ್ನು ಮಾಡಲಿಕ್ಕೆ

1. ಭಾ.ವಿ.ಪ ಅ-38

ಉತ್ಸಾಹಿಯಾಗಿಲ್ಲ. ನನ್ನ ಮೈಯಲ್ಲಿ ಉಂಟಾಗಿರುವ ರೋಮಾಂಚನವನ್ನು ನೋಡು. ಅನೇಕ ವೀರರಿಂದ ಯುಕ್ತವಾದ ಅತಿಭಯಂಕರವಾದ ದೇವತೆಗಳಿಂದಲೂ ಎದುರಿಸಲಿಕ್ಕೆ ಅಶಕ್ಯವಾದ ಭಯಂಕರವಾದ ಕುರುಸೈನ್ಯದೊಡನೆ ನಾನು ಪ್ರತಿಯುದ್ಧವನ್ನು ಮಾಡಲಿಕ್ಕೆ ಸಮರ್ಥನಾಗಿಲ್ಲ. ಭಯಂಕರ ಧನುಸ್ಸುಗಳನ್ನು ಧರಿಸಿಕೊಂಡಿರುವ ಭಾರತವಂಶದವರ ಸೇನೆಯನ್ನು ಪ್ರವೇಶಿಸಲಿಕ್ಕೆ ನಾನು ಅಪೇಕ್ಷಿಸುವುದಿಲ್ಲ. ಇಂದ್ರದೇವರಿಂದ ಸಹಿತರಾದ ದೇವತೆಗಳಿಂದಲೂ ಆ ಸೇನೆಯನ್ನು ಪ್ರವೇಶಿಸಲಿಕ್ಕೆ ಆಗಲಾರದು. ಮನುಷ್ಯರಿಂದ ಹೇಗೆ ಆಗುವುದು? ರಥ ಆನೆ ಕುದುರೆಗಳಿಂದ ತುಂಬಿರುವ, ಪದಾತಿಗಳಿಂದಲೂ ಧ್ವಜಗಳಿಂದಲೂ ಯುಕ್ತವಾಗಿರುವ, ಶತ್ರುಸೈನ್ಯವನ್ನು ನೋಡಿಯೇ ನನ್ನ ಮನಸ್ಸು ವ್ಯಥೆಯನ್ನು ಹೊಂದುತ್ತದೆ. ಯಾವ ಸೈನ್ಯದಲ್ಲಿ ದ್ರೋಣಾಚಾರ್ಯರೂ, ಭೀಷ್ಮಾಚಾರ್ಯರೂ, ಕೃಪಾಚಾರ್ಯರೂ, ಕರ್ಣನೂ, ವಿವಿಂಶತಿಯೂ, ಅಶ್ವತ್ಥಾಮಾಚಾರ್ಯರೂ, ವಿಕರ್ಣನೂ, ಸೋಮದತ್ತನೂ, ಬಾಹ್ಲೀಕನೂ, ದುರ್ಯೋಧನನೂ, ದುರ್ಮರ್ಷಣನೂ, ಇರುವರೋ ಎಲ್ಲರೂ ಧೈರ್ಯಶಾಲಿಗಳೂ ಮಹಾಧನುರ್ಧಾರಿಗಳೂ, ಯುದ್ಧದಲ್ಲಿ ಪಂಡಿತರೂ, ನೀತಿವಂತರೂ, ಎಲ್ಲವನ್ನೂ ತಿಳಿದವರೂ, ಆಗಿರುವರೋ ಅವರೆಲ್ಲರನ್ನೂ ಜಯಿಸಬೇಕೆಂದು ದುರ್ಬುದ್ಧಿಯುಳ್ಳ ನಾನು ಬಂದಿರುವೆನು. ಈ ಕೌರವರೆಲ್ಲರನ್ನೂ ನೋಡುವ ಮಾತ್ರದಿಂದಲೇ 'ನನ್ನ ಮೈಯಲ್ಲಿ ರೋಮಾಂಚವುಂಟಾಗಿರುವುದು. ಮನಸ್ಸಿನಲ್ಲಿ ಮೂರ್ಛೆಯು ಬರುವಂತೆ ಆಗಿರುವುದು' ಎಂದು ಹೇಳಿದನು.

ದೃಢಧನುರ್ಧಾರಿಗಳಾದ ಕೌರವರ ಮಹತ್ತಾದ ಸೈನ್ಯವನ್ನು ನೋಡಿ ಅಲ್ಪನಾದ ಉತ್ತರಕುಮಾರನು ಅರ್ಜುನನ ಸಮೀಪದಲ್ಲಿ ಅಳುವವನಾದನು. 'ನನ್ನ ತಂದೆಯು ನನ್ನನ್ನು ಒಬ್ಬನನ್ನೇ ಇಟ್ಟು ತ್ರಿಗರ್ತದೇಶದವರೊಡನೆ ಯುದ್ಧಕ್ಕೆ ಹೋಗಿರುವನು. ಎಲ್ಲಾ ಸೈನಿಕರನ್ನು ಅವನೇ ಕರಕೊಂಡು ಹೋಗಿರುವನು. ನನಗೆ ಸೈನಿಕರೇ ಇಲ್ಲ. ನಾನೊಬ್ಬನೇ ಇರುವೆನು. ಬಾಲಕನಾಗಿರುವೆನು. ಯುದ್ಧದಲ್ಲಿ ಶ್ರಮಪಟ್ಟವನಲ್ಲ. ಅಸ್ತ್ರವನ್ನು ತಿಳಿದವರಾದ ಬಹುಜನರೊಡನೆ ಯುದ್ಧ ಮಾಡಲಿಕ್ಕೆ ಸಮರ್ಥನಲ್ಲ. ರಥವನ್ನು ಹಿಂದೆ ತಿರುಗಿಸು' ಎಂದನು.

ಹಾಗೆ ಹೇಳುತ್ತಿದ್ದ ಉತ್ತರಕುಮಾರನೊಡನೆ ಸರ್ವಲೋಕದಲ್ಲಿ ಮಹಾರಥಿಕನಾದ ಅರ್ಜುನನು ನಗುತ್ತಾ 'ಭಯದಿಂದ ದೈನಯುಕ್ತವಾದ ರೂಪವುಳ್ಳವನಾಗಿರುವಿ. ಶತ್ರುಗಳಿಗೆ ಸಂತೋಷವನ್ನು ಹೆಚ್ಚಿಸುತ್ತಿರುವಿ. ಯುದ್ಧರಂಗದಲ್ಲಿ

ಶತ್ರುಗಳು ಇನ್ನೂ ಒಂದೂ ಮಾಡಿಲ್ಲವಲ್ಲಾ! ನೀನೇ ನನ್ನೊಡನೆ ಕೌರವರ ಬಳಿಗೆ ಕರೆದುಕೊಂಡು ಹೋಗಬೇಕೆಂದು ಹೇಳಿರುವಿ. ಅದರಿಂದ ಆ ಬಹಳ ಧ್ವಜಗಳು ಕಾಣಿಸುವಲ್ಲಿಗೆ ರಥವನ್ನು ತೆಗೆದುಕೊಂಡು ಹೋಗಿ ನಿಲ್ಲಿಸುವೆನು. ಹೆಂಗಸರ ಬಳಿಯಲ್ಲಿ ಗಂಡಸರು ಕೇಳುವಂತೆ ಪ್ರತಿಜ್ಞೆಯನ್ನು ಮಾಡಿ ಬೇಕಾದಷ್ಟು ಹೊಗಳಿಕೊಂಡು ಈಗ ಹಿಂದೆ ಹೋಗಿ ಏನು ಹೇಳುವಿ? ಹೆಂಗಸರಲ್ಲಿಯೂ ಗಂಡಸರಲ್ಲಿಯೂ ಹಾಗೇ ಪ್ರತಿಜ್ಞೆಯನ್ನು ಮಾಡಿ ರಥವನ್ನು ಏರಿಕೊಂಡು ಬಂದ ನಿನಗೆ ಏಕೆ ತಿಳಿಯುವುದಿಲ್ಲ? ನೀನೀಗ ಗೋವುಗಳನ್ನು ಜಯಿಸದೆ ಊರಿಗೆ ಹೋದಿಯಾದರೆ ಹೆಂಗಸರೂ ಗಂಡಸರೂ ನಿನ್ನನ್ನು ನೋಡಿ ನಗುವರು. ಸೈರಂಧ್ರಿಯು ನನ್ನನ್ನು ಸಾರಥ್ಯ ವಿಷಯದಲ್ಲಿ ಸ್ತೋತ್ರ ಮಾಡಿರುವಳು. ಆದುದರಿಂದ ನಾನು ಗೋವುಗಳನ್ನು ಜಯಿಸದೆ ಊರಿಗೆ ಹೋಗಲಾರೆನು. ಸೈರಂಧ್ರಿಯು ಮಾಡಿದ ಸ್ತೋತ್ರದಿಂದಲೂ ನಿನ್ನ ಮಾತಿನಿಂದಲೂ ನಾನೇ ಬೇಕಾದರೆ ಯುದ್ಧ ಮಾಡುತ್ತೇನೆ. ನೀನು ಸ್ಥಿರನಾಗಿ ಇರು' ಎಂದು ಹೇಳಿದನು.

ಉತ್ತರಕುಮಾರನು 'ಬಂದಿರುವ ಆ ಬಹಳ ಜನರು ಇಚ್ಛಾನುಸಾರವಾಗಿ ಗೋವುಗಳನ್ನು ಅಪಹರಿಸಲಿ. ನನ್ನನ್ನು ನೋಡಿ ಹೆಂಗಸರೂ ಗಂಡಸರೂ ನಗಲಿ. ನನಗೆ ಯುದ್ಧಮಾಡಿ ಒಂದೂ ಆಗುವುದು ಬೇಡ. ಗೋವುಗಳೆಲ್ಲವೂ ಹೋಗಲಿ. ನೀನು ನೋಡುತ್ತಿರುವಂತೆಯೇ ನಾನು ಊರನ್ನು ಪ್ರವೇಶಿಸುವೆನು' ಎಂದು ಹೇಳಿ ಭಯವುಳ್ಳವನಾಗಿ ಅಭಿಮಾನವನ್ನು ಬಿಟ್ಟು ರಥದಿಂದ ಕೆಳಗೆ ಹಾರಿ ಧನುರ್ಬಾಣಗಳನ್ನು ಬಿಟ್ಟು ಊರಿನ ಕಡೆಗೆ ಓಡಿದನು.



## ಅರ್ಜುನನು ಉತ್ತರನನ್ನು ಕರೆದುಕೊಂಡು ಬಂದದ್ದು [1]

ಉತ್ತರಕುಮಾರನು ರಥದಿಂದ ಕೆಳಗೆ ಹಾರಿ ಊರಿನ ಕಡೆಗೆ ಓಡಿಹೋಗುತ್ತಿರಲು ಅರ್ಜುನನು 'ಕ್ಷತ್ರಿಯನಾದವನು ಶತ್ರುವನ್ನು ನೋಡಿ ಓಡಿಹೋಗುವುದು ಶೂರರಿಗೆ ಹೇಳಿದ ಧರ್ಮವಲ್ಲ. ಯುದ್ಧದಲ್ಲಿ ಸಾಯುವುದು ಲೇಸು. ಭಯದಿಂದ ಓಡಿಹೋಗಬಾರದು' ಎಂದು ಹೇಳಿ ತಾನೂ ರಥದಿಂದ ಕೆಳಗೆ ಹಾರಿ ಓಡುತ್ತಿದ್ದ ಉತ್ತರಕುಮಾರನನ್ನು ಅಟ್ಟಿಸಿಕೊಂಡು ಹೋದನು. ಉದ್ದವಾಗಿರುವ ಜಡೆಯನ್ನು

1. ಭಾ.ವಿ.ಪ ಅ-38

ಸರಿಮಾಡಿಕೊಂಡು ಕೆಂಪುವಸ್ತ್ರಗಳನ್ನೂ ಸರಿಮಾಡಿಕೊಂಡು ಹೆಜ್ಜೆಗಳಿಂದ ಭೂಮಿಯನ್ನು ನಡುಗಿಸುತ್ತಾ ಹೋದನು. ಕೌರವ ಪಕ್ಷದಲ್ಲಿ ಇದ್ದ ಕೆಲವರು ಜಡೆಯನ್ನು ಸರಿಮಾಡಿಕೊಂಡು ಹೋಗುತ್ತಿದ್ದ ಸ್ತ್ರೀರೂಪವುಳ್ಳ ಅರ್ಜುನನನ್ನು ನೋಡಿ ಅರ್ಜುನನಿವನೆಂದು ತಿಳಿಯದೆ ನಗುವವರಾದರು. ಶೀಘ್ರವಾಗಿ ಓಡುತ್ತಿದ್ದ ಉತ್ತರಕುಮಾರನನ್ನು ನೋಡಿ ಕೌರವರು 'ಮೊದಲು ರಥವನ್ನು ಬಿಟ್ಟು ಓಡುತ್ತಿರುವವನು ಯಾರು? ಅವನನ್ನು ಅಟ್ಟಿಸಿಕೊಂಡು ಹೋಗುತ್ತಿರುವುದು ಯಾರು? ಇವನ ಕೆಲವು ಅಂಶವು ಹೆಂಗಸರಂತೆ ಇದೆ. ಕೆಲವು ಅಂಶವು ಗಂಡಸಿನಂತೆ ಇದೆ' ಎಂದು ಹೇಳಿಕೊಂಡರು. ಈರೀತಿಯಾಗಿ ಹೇಳುತ್ತಿದ್ದ ಸೈನಿಕರೊಡನೆ ದ್ರೋಣಾಚಾರ್ಯರು 'ನಿಮಗೆ ಈ ವಿಚಾರವು ಏನು (ಏಕೆ) ಬೇಕಾಗಿದೆ? ಭಯವುಳ್ಳವನು ಓಡುತ್ತಿರುವನು. ಭಯರಹಿತನಾದವನು ಅವನನ್ನು ಹಿಡಿಯಲಿಕ್ಕೆ ಓಡುತ್ತಿರುವನು. ಜಡೆಯನ್ನು ಸರಿಮಾಡಿಕೊಂಡು ಹೋಗುತ್ತಿರುವನು. ಅವನ ಆಕಾರವು ಅರ್ಜುನನ ಆಕಾರದಂತೆ ಇದೆ. ನಪುಂಸಕರೂಪವನ್ನು ಧರಿಸಿರುವನು. ರೂಪದಿಂದ ಅರ್ಜುನನಿಗೆ ಸದೃಶನಾಗಿರುವನು. ಸ್ತ್ರೀವೇಷದಿಂದ ಅಲಂಕೃತನಾಗಿರುವನು. ಅದೇ ತಲೆಯು ಅದೇ ಕುತ್ತಿಗೆಯು. ಪರಿಘದಂತೆ ಇರುವ ಅದೇ ಕೈಗಳು. ಅದೇ ನಡೆಯು. ಇವನು ಅರ್ಜುನನು ಹೊರತು ಬೇರೊಬ್ಬನಲ್ಲ' ಎಂದು ಹೇಳಿದರು. 'ದೇವತೆಗಳ ಮಧ್ಯದಲ್ಲಿ ಇಂದ್ರದೇವರಂತೆ ಮನುಷ್ಯರ ಮಧ್ಯದಲ್ಲಿ ಶ್ರೇಷ್ಠನಾದವನು ಅರ್ಜುನನು. ಲೋಕದಲ್ಲಿ ಅರ್ಜುನನ್ನು ಬಿಟ್ಟು ಮತ್ತೆ ಯಾವಾತನು(ಯಾರು) ನಮ್ಮ ಬಳಿಗೆ ಒಬ್ಬನೇ ಬರುವನು?' ಎಂದು ಹೇಳಿದರು.

ಅದನ್ನು ಕೇಳಿ ಕರ್ಣನು 'ಒಬ್ಬನು ವಿರಾಟರಾಜನ ಮಗನು. ಅವನು ಒಬ್ಬನೇ ಊರಿನಲ್ಲಿ ಇದ್ದನು. ಅವನು ಹುಡುಗಾಟಿಕೆಯಿಂದ ಹೊರಟು ಬಂದನು. ಪೌರುಷದಿಂದ ಅಲ್ಲ. ನಪುಂಸಕನನ್ನು ಸಾರಥಿಯನ್ನಾಗಿ ಮಾಡಿಕೊಂಡು ಹೊರಟು ಬಂದನು. ನಪುಂಸಕವೇಷದಿಂದ ಓಡುತ್ತಿರುವವನು ಅರ್ಜುನನೆಂದೇ ತಿಳಿಯಿರಿ. ಮತ್ತೆ ಯಾರೂ ನಮ್ಮ ಹತ್ತಿರ ಬರಲಿಕ್ಕೆ ಸಮರ್ಥರಾಗಲಾರರು. ಒಬ್ಬನೇ ಬಂದು ನಮ್ಮೆಲ್ಲರ ಹತ್ತಿರ ಯುದ್ಧ ಮಾಡುವವನು ಬೇರೆ ಯಾರು ಇರುವರು? ಉತ್ತರನು ಅವನನ್ನು ಸಾರಥಿಯನ್ನಾಗಿ ಮಾಡಿಕೊಂಡು ಬಂದನು. ನಮ್ಮ ಧ್ವಜಗಳನ್ನು ನೋಡಿ ಭಯಪಟ್ಟು ಓಡುತ್ತಿರುವನೆಂದು ಭಾವಿಸುವೆನು' ಎಂದನು.

ಆಗ ಕೃಪಾಚಾರ್ಯರು 'ಅರ್ಜುನನು ಓಡುತ್ತಿರುವ ಉತ್ತರನನ್ನು ಹೋಗಿ ಹಿಡಿಯುವನು. ಅವನನ್ನೇ ಸಾರಥಿಯನ್ನಾಗಿ ಮಾಡಿಕೊಂಡು ತಾನೇ ಯುದ್ಧವನ್ನು

ಮಾಡಲಿಕ್ಕೆ ಇಚ್ಛಿಸುವನು' ಎಂದರು.

ತರುವಾಯ ಕೌರವರೆಲ್ಲರೂ ಪ್ರತ್ಯೇಕ ಪ್ರತ್ಯೇಕವಾಗಿ ಯೋಚಿಸುವವರಾಗಿ ಅವನು ಅರ್ಜುನನೋ ಅಲ್ಲವೋ ಎಂದು ನಿಶ್ಚಯಿಸಿ ಅಸಮರ್ಥರಾಗಿದ್ದರು ದುರ್ಯೋಧನನು ಸೈನಿಕರೊಡನೆ 'ಅರ್ಜುನನಾಗಲೀ, ಕೃಷ್ಣನಾಗಲೀ, ಬಲರಾಮ ನಾಗಲೀ, ಪ್ರದ್ಯುಮ್ನನಾಗಲೀ, ನಮ್ಮ ಹತ್ತಿರ ಯುದ್ಧ ಮಾಡಲಿಕ್ಕೆ ಬರಲು ಸಮರ್ಥ ರಾಗಲಾರರು. ಇನ್ನೊಬ್ಬನು ಯಾರಾದರೂ ನಪುಂಸಕ ವೇಷದಿಂದ ಬಂದವನಾಗಿದ್ದರೂ ಅವನನ್ನು ತೀಕ್ಷ್ಣ ಶಸ್ತ್ರಗಳಿಂದ ಬಡೆದು ರಥದಿಂದ ಕೆಳಗೆ ಬೀಳಿಸುವೆನು. ಯಾರೇ ಆಗಲಿ ಒಬ್ಬನು ಬಂದು ಸಮಸ್ತರಾದ ಕೌರವರೊಡನೆ ಹೇಗೆ ಯುದ್ಧ ಮಾಡುವನು?' ಎಂದು ಹೇಳಿದನು.

ವೇಷಾಂತರದಿಂದ ಬರುತ್ತಿದ್ದ ಅರ್ಜುನನನ್ನು ನೋಡಿ ಸೈನಿಕರೂ ಕೂಡ ಅರ್ಜುನನು ಹೌದೋ ಅಲ್ಲವೋ ಎಂದು ನಿಶ್ಚಯಿಸಲು ಅಸಮರ್ಥರಾಗಿದ್ದರು. ದೃಢವಾಗಿ ಬಡೆಯುವವನಾದ ಇಂದ್ರನಿಗೆ ಸಮಾನವಾದ ಪರಾಕ್ರಮವುಳ್ಳ ಅರ್ಜುನನು ಯುದ್ಧಕ್ಕೆ ಬರುವ ಪಕ್ಷದಲ್ಲಿ ನಮ್ಮ ಬಲವೆಲ್ಲವೂ ಸಂಶಯಿತ ವಾಗಿರುವುದು ಎಂದುಕೊಂಡರು. ಅವನು ಅರ್ಜುನನಲ್ಲವೆಂದೂ ನಿಶ್ಚಯಿಸುವಂತೆ ಇರಲಿಲ್ಲ.

ಇಲ್ಲಿ ಅರ್ಜುನನು ನೂರುಹೆಜ್ಜೆ ಓಡಿಹೋಗುತ್ತಿದ್ದ ಉತ್ತರಕುಮಾರನನ್ನು ಅಟ್ಟಿಸಿಕೊಂಡು ಹೋಗಿ ಅವನ ತಲೆಕೂದಲಿನಲ್ಲಿ(ಲನ್ನು) ಹಿಡಿದನು. ಆಗ ಅವನು 'ಬೃಹನ್ನಳೆಯೇ! ನನ್ನನ್ನು ಹಿಡಿಯಬೇಡ. ನಿನಗೆ ಮಂಗಲವಾಗಲಿ. ನಾನು ನಿನ್ನ ದಾಸನು' ಎಂದು ಹೇಳುತ್ತಾ ಓಡುತ್ತಲೇ ಇದ್ದ ಅವನನ್ನು ಅರ್ಜುನನು ಓಡಿದುಬಿಟ್ಟನು. ಅರ್ಜುನನು ಹಿಡಿದ ಕೂಡಲೇ ಅವನು ಬಹಳವಾಗಿ ಕೃಪೆಯುಂಟಾಗುವಂತೆ ಅಳುವವನಾದನು. ಬಹಳ ಹಣವನ್ನು ಕೊಡುವೆನೆಂದನು. 'ಬೃಹನ್ನಳೆಯೇ! ಬಂಗಾರ ಮುತ್ತು ರತ್ನಗಳ ಮಧ್ಯದಲ್ಲಿ ನೀನು ಯಾವುದನ್ನು ಇಚ್ಛಿಸುವಿಯೋ ಅದನ್ನು ನಿನಗೆ ಕೊಡುವೆನು. ಆನೆಗಳನ್ನು, ಕುದುರೆಗಳನ್ನೂ, ರಥಗಳನ್ನೂ, ಗೋವುಗಳನ್ನೂ, ಅಲಂಕೃತರಾದ ಸ್ತ್ರೀಯರನ್ನೂ, ನೂರು ಬಂಗಾರದ ನಾಣ್ಯಗಳನ್ನು, ನೂರು ಬೆಳ್ಳಿಯ ನಾಣ್ಯಗಳನ್ನು, ನಿನಗೆ ನಾನು ಕೊಡುತ್ತೇನೆ. ನೀನು ನನ್ನನ್ನು ಬಿಟ್ಟುಬಿಡು. ಅಲಂಕೃತರಾದ ಅರವತ್ತು ಕನ್ಯೆಯರನ್ನು ಕೊಡುತ್ತೇನೆ. ಒಂದು ಗ್ರಾಮವನ್ನು ಕೊಡುವೆನು. ಪರವಶನಾದ ದೀನನಾದ ಭಯಗ್ರಸ್ತನಾದ ನನ್ನನ್ನು ಬಿಟ್ಟುಬಿಡುವವನಾಗು. ನಿನಗೆ ಎಂಟು ವೈಢೂರ್ಯ ಮಣಿಗಳನ್ನು ಬಂಗಾರದ

ದಂಡದಿಂದ ಕೂಡಿದ ಕುದುರೆಗಳನ್ನು ಕಟ್ಟಿರುವ ರಥವನ್ನೂ ಮದಭರಿತಗಳಾದ ಹತ್ತು ಆನೆಗಳನ್ನು ಕೊಡುವೆನು. ನನ್ನನ್ನು ಬಿಟ್ಟುಬಿಡು. ನಾನೀಗ ತಾಯಿಯನ್ನು ನೋಡಲಿಕ್ಕೆ ಮನೆಗೆ ಹೋಗಿ ಸೇರುವೆನು. ನಾನೊಬ್ಬನೇ ನನ್ನ ತಾಯಿಗೆ ಮಗನು. ನಾನೇನು ಹೇಳಲಿ. ವಿಧಿಯು ಇಂತಹ ಸಮಯದಲ್ಲಿ ನನ್ನನ್ನು ನಿನ್ನ ವಶ ಮಾಡಿದೆಯಲ್ಲಾ! ನಾನು ಮತ್ಸ್ಯರಾಜನ ಮಗನು. ಚಿಕ್ಕಹುಡುಗನು. ಅವನಿಂದ ಚೆನ್ನಾಗಿ ಪೋಷಿಸಲ್ಪಟ್ಟವನು. ತಾಯಿಯ ಬಳಿಯಲ್ಲಿಯೇ ಮಲಗುವವನು. ಬಿಸಿಲು ಗಾಳಿಗಳನ್ನು ಮುಟ್ಟಿದವನಲ್ಲ. ನಾನು ಬಾಲಕರ ಜಗಳವನ್ನೂ ನೋಡಿದವನೂ ಅಲ್ಲ. ಕೌರವರ ಹತ್ತಿರ ಹೇಗೆ ಯುದ್ಧ ಮಾಡುವುದು? ನಾನು ತಾಯಿಯ ಬಳಿಗೆ ಹೋಗುವೆನು. ಬೃಹನ್ನಳೆಯೇ! ನನ್ನನ್ನು ಬಿಡು. ಕೌರವರ ಸೈನ್ಯವು ಪ್ರಲಯಕಾಲದ ಸಮುದ್ರದಂತೆ ಇರುವುದು. ನಾನು ಹೆಂಗಸರ ಮಧ್ಯದಲ್ಲಿ ತಿಳಿಯದೆ ಯೌವನ ಗರ್ವದಿಂದ ವೀರ್ಯಶೌರ್ಯಗಳಿಂದ ಕೂಡಿದ ಮಾತುಗಳನ್ನು ಆಡಿದೆನು. ಕೌರವರನ್ನು ಯಾರು ಜಯಿಸುವರು? ನೀನು ನನ್ನನ್ನು ಬಿಟ್ಟು ಬಿಡದೆ ಕರೆದುಕೊಂಡು ಹೋಗುವಿಯಾದರೆ ನಿನ್ನ ಮುಂಭಾಗದಲ್ಲಿಯೇ ನಾನು ಪ್ರಾಣವನ್ನು ಬಿಡುವೆನು' ಎಂದು ಹೇಳಿದನು.

ಹೀಗೆ ಅಳುತ್ತಿದ್ದ ಉತ್ತರನನ್ನು ಅರ್ಜುನನು ಬಲಾತ್ಕಾರದಿಂದ ರಥದ ಬಳಿಗೆ ಎಳೆದುಕೊಂಡು ಬಂದನು. ತರುವಾಯ ಭಯಪೀಡಿತನಾಗಿ ಜ್ಞಾನಶೂನ್ಯನಾಗಿದ್ದ ಅವನೊಡನೆ ಅರ್ಜುನನು 'ನಾನು ಕೌರವರೊಡನೆ ಯುದ್ಧ ಮಾಡುವೆನು. ನೀನು ಕುದುರೆಗಳನ್ನು ಓಡಿಸು' ಎಂದು ಹೇಳಿ ನನ್ನನ್ನು ಕರೆದುಕೊಂಡು ಬಂದು ಈಗ ಯಾಕೆ ಓಡಿ ಹೋಗುತ್ತಿರುವಿ? ಕೌರವರೊಡನೆ ಯುದ್ಧವನ್ನು ಮಾಡು. ನಿನಗೆ ಜಯವಾಗುವುದು. ನಾನು ಯಾವ ರಾಜನಿಗೋ ರಾಜಪುತ್ರನಿಗೋ ಯುದ್ಧದಲ್ಲಿ ಸಾರಥಿಯಾಗಿ ಕುದುರೆಗಳನ್ನು ಓಡಿಸುವೆನೋ ಅವನಿಗೆ ಯುದ್ಧದಲ್ಲಿ ನಿಶ್ಚಯವಾಗಿಯೂ ಜಯವಾಗುವುದು. ಉತ್ತರ! ನೀನು ನನ್ನನ್ನು ಸಾರಥಿಯನ್ನಾಗಿ ಮಾಡಿಕೊಂಡು ಕೌರವರ ಹತ್ತಿರ ಯುದ್ಧವನ್ನು ಮಾಡು. ಭೂಮಿಯನ್ನು ಜಯಿಸಿ ಕೀರ್ತಿಯನ್ನು ಪಡೆದು ಸಕಲವಾದ ಭೂಮಿಯನ್ನು ಆಳುವಿ. ಅಥವಾ ಸತ್ತರೂ ಸ್ವರ್ಗವನ್ನು ಹೊಂದುವಿ. ನೀನು ಓಡಿಹೋಗುವುದು ಶ್ರೇಯಸ್ಸಲ್ಲ. ನೀನೀಗ ಸರ್ವಕೌರವರನ್ನು ಜಯಿಸುವಂತೆ ನಾನು ಪ್ರಯತ್ನ ಮಾಡುತ್ತೇನೆ. ಸಹಾಯ ಮಾಡುತ್ತೇನೆ. ನೀನು ಶತ್ರುಗಳೊಡನೆ ಯುದ್ಧ ಮಾಡಲಿಕ್ಕೆ ಉತ್ಸಾಹಿಯಾಗಿರದಿದ್ದರೆ ನಾನು ಯುದ್ಧವನ್ನು ಮಾಡುವೆನು. ನೀನು ಸಾರಥ್ಯವನ್ನು ಮಾಡುವವನಾಗು. ನನ್ನ

ಬಾಹುಗಳಿಂದ ರಕ್ಷಿತನಾಗಿ ಘೋರ ಮಹಾರಥಿಕರಿಂದ ರಕ್ಷಿತವಾದ ಆ ರಥ ಸಮೂಹಕ್ಕೆ ಎದುರಾಗಿ ಹೋಗು. ರಾಜಪುತ್ರ! ಭಯಪಡಬೇಡ. ಕ್ಷತ್ರಿಯನಾಗಿರುವಿಯಲ್ಲಾ! ನಾನು ಕೌರವರ ಹತ್ತಿರ ಯುದ್ಧವನ್ನು ಮಾಡುವೆನು. ನಿನ್ನ ಗೋವುಗಳನ್ನು ಹಿಂದೆ ತಿರುಗಿಸಿ ಕರೆದುಕೊಂಡು ಬರುವೆನು. ಈ ರಥ ಸಮೂಹವನ್ನು ಪ್ರವೇಶಿಸು. ನೀನು ಸಾರಥಿಯಾಗು, ನಾನು ಯುದ್ಧ ಮಾಡುವೆನು. ಶೂರರಾದವರನ್ನು ಯಮಲೋಕಕ್ಕೆ ಕಳುಹಿಸುವೆನು' ಎಂದು ಹೇಳುತ್ತಾ ಸಮಾಧಾನಪಡಿಸಿದನು. ಆಚೆ ಈಚೆ ಹೊರಳಾಡುತ್ತಿದ್ದ ರಥದ ಮೇಲೆ ಕೂತುಕೊಳ್ಳಲಿಕ್ಕೆಯೇ ಇಚ್ಛೆಯಿಲ್ಲದ ಭಯಪೀಡಿತನಾಗಿದ್ದ ಉತ್ತರಕುಮಾರನನ್ನು ಅರ್ಜುನನು ಎತ್ತಿ ರಥದಮೇಲೆ ಕೂತುಕೊಳ್ಳಿಸಿದನು. ಅವನಿಗೆ ಸಮಾಧಾನ ಹೇಳಿ ಸಾರಥ್ಯವನ್ನು ಮಾಡುವಂತೆ ಹೇಳಿ ಗಾಂಡೀವಧನುಸ್ಸನ್ನು ತೆಗೆಯುವುದಕ್ಕಾಗಿ ಶಮೀವೃಕ್ಷದ ಬಳಿಗೆ ಹೋದನು.



## ಬೃಹನ್ನಳೆಯನ್ನು ನೋಡಿ ಭೀಷ್ಮಾದಿಗಳು ಯೋಚಿಸಿದ್ದು [1]

ಉತ್ತರನನ್ನು ರಥದಲ್ಲಿ ಕೂತುಕೊಳ್ಳಿಸಿಕೊಂಡು ಶಮೀವೃಕ್ಷಕ್ಕೆ ಅಭಿಮುಖವಾಗಿ ಹೋಗುತ್ತಿದ್ದ ನಪುಂಸಕವೇಷದಿಂದ ಇದ್ದ ರಥದಲ್ಲಿ ಕೂತಿದ್ದ ಅರ್ಜುನನನ್ನು ನೋಡಿ ಕೌರವಸೈನ್ಯದಲ್ಲಿ ಇದ್ದ ದ್ರೋಣಾಚಾರ್ಯರು ಭೀಷ್ಮಾಚಾರ್ಯರು ಮೊದಲಾದವರು ಅರ್ಜುನನ ಭಯದಿಂದ ವಿಷಾದವುಳ್ಳವರಾದರು. ಉತ್ಸಾಹ ರಹಿತರಾದ ಜನರನ್ನೂ ಆಶ್ಚರ್ಯಕರಗಳಾದ ಉತ್ಪಾತಗಳನ್ನು ನೋಡಿ ಶಸ್ತ್ರಧಾರಿಗಳಲ್ಲಿ ಶ್ರೇಷ್ಠರಾದ ಗುರುಗಳಾದ ದ್ರೋಣಾಚಾರ್ಯರು 'ಕ್ರೂರವಾದ ಗಾಳಿಯು ಬೀಸುತ್ತಿದೆ. ಭಸ್ಮದ ಮಳೆಯು ಬಂದು ಆಕಾಶದಲ್ಲೆಲ್ಲಾ ಕತ್ತಲೆಯು ಕವಿದುಕೊಂಡಿದೆ. ಭಯಂಕರ ಬಣ್ಣವುಳ್ಳ ಆಶ್ಚರ್ಯಕರಗಳಾದ ಮೇಘಗಳು ಕಾಣಿಸುತ್ತಿವೆ. ಕೋಶಗಳಿಂದ ಶಸ್ತ್ರಗಳು ಹೊರಗೆ ಬರುತ್ತಿವೆ. ಹೆಣ್ಣುನರಿಗಳು ಅಮಂಗಲವಾಗಿ ಕೂಗುತ್ತಿವೆ. ಕುದುರೆಗಳು ಕಣ್ಣೀರು ಸುರಿಸುತ್ತಿವೆ. ಧ್ವಜಗಳು ಸುಮ್ಮನೆ ಹಾರುತ್ತಿವೆ. ನಾನಾ ವಿಧಗಳಿಂದ ಅಪಶಕುನಗಳು ಕಾಣಿಸುತ್ತಿವೆ. ಇದರಿಂದ ಯುದ್ಧವು ಸಮೀಪಿಸಿತೆಂದು ತಿಳಿಯುತ್ತೇನೆ. ನೀವೆಲ್ಲರೂ ಯುದ್ಧಕ್ಕೆ ಸಿದ್ಧರಾಗಿರಿ. ರಾಜನನ್ನು ರಕ್ಷಿಸಿರಿ. ಸೈನ್ಯವನ್ನು ವ್ಯೂಹವನ್ನಾಗಿ ಮಾಡಿರಿ. ಯುದ್ಧವನ್ನು ಎದುರು

1. ಭಾ.ವಿ.ಪ ಅ-39, 40, 45

ನೋಡುತ್ತಾ ಇರಿ. ಗೋವುಗಳನ್ನು ರಕ್ಷಿಸಿರಿ. ಇವನು ನಪುಂಸಕವೇಷದಿಂದ ಬರುತ್ತಿರುವವನು ಮಹಾಧನುರ್ಧಾರಿಯಾದ ಸರ್ವಶಸ್ತ್ರಧಾರಿಗಳಲ್ಲಿ ಶ್ರೇಷ್ಠನಾದ ಅರ್ಜುನನೇ. ಇದರಲ್ಲಿ ಸಂದೇಹವೇ ಇಲ್ಲ' ಎಂದು ಭೀಷ್ಮಾಚಾರ್ಯರೊಡನೆ ಎಲ್ಲರಿಗೂ ತಿಳಿಯದಂತೆ ಸಂಜ್ಞೆಯಿಂದ ಸ್ತ್ರೀವೇಷಧಾರಿಯಾದ ಅರ್ಜುನನು ಬಂದು ದುರ್ಯೋಧನನನ್ನು ಜಯಿಸಿ ಗೋವುಗಳನ್ನು ಅಪಹರಿಸಿಕೊಂಡು ಹೋಗುವನು. ದುರ್ಯೋಧನನನ್ನು ರಕ್ಷಿಸಬೇಕು ಎಂದು ಹೇಳಿ ಸುಮ್ಮನೆ ಆದರು. ಆಗ ಭೀಷ್ಮಾಚಾರ್ಯರೂ ಸಂಜ್ಞೆಯಿಂದಲೇ 'ನಾವು ನಮ್ಮ ದೇಶವನ್ನು ದಾಟಿ ದೇಶಾಂತರಕ್ಕೆ ಬಂದಿರುವೆವು. ಸಭೆಯಲ್ಲಿ ನಾವು ಹೇಳಿರುವ ಸಮಯವೂ ದಾಟಿಹೋಯಿತು. ಶತ್ರುವಿನಿಂದ ಭಯಪಡಬೇಕಾಗಿಲ್ಲ. ಸಂದೇಹವನ್ನು ಬಿಡಿ' ಎಂದು ಹೇಳಿದರು.

ತರುವಾಯ ದ್ರೋಣಾಚಾರ್ಯರು ದುರ್ಯೋಧನನನ್ನು ನೋಡಿ ಸಂಜ್ಞೆಯಿಂದ 'ನಪುಂಸಕವೇಷದಿಂದ ಬರುತ್ತಿರುವವನು ಮಹಾಧನುರ್ಧಾರಿಯಾದ ಅರ್ಜುನನೇ. ಈ ವಿಷಯದಲ್ಲಿ ಸಂದೇಹವೇ ಬೇಡ. ಈ ಅರ್ಜುನನು ಮಹಾಪರಾಕ್ರಮಶಾಲಿಯು. ಇತರ ರಾಜರನ್ನು ಜಯಿಸುತ್ತಿದ್ದ ಕೌರವರು ಇವನಿಂದ ಸತ್ತರೆಂದೇ ತಿಳಿಯಬೇಕು. ಇವನು ಹುಟ್ಟಿದಾಗ ಭೂಮಿಯೆಲ್ಲವೂ ಸಂತೋಷವನ್ನು ಹೊಂದಿತು. ಇವನೇ ತನ್ನ ಸಾಮರ್ಥ್ಯದಿಂದ ದ್ರುಪದರಾಜನನ್ನು ಜಯಿಸಿ ನನಗೆ ಗುರುದಕ್ಷಿಣೆಯನ್ನು ಕೊಟ್ಟಿರುವನು. ಸ್ವಯಂವರದಲ್ಲಿ ಮತ್ಸ್ಯಯಂತ್ರವನ್ನು ಭೇದಿಸಿ ರಾಜರೆಲ್ಲರನ್ನು ಜಯಿಸಿ ದ್ರೌಪದೀದೇವಿಯನ್ನು ಮದುವೆಯಾಗಿರುವನು. ಖಾಂಡವ ವನದಲ್ಲಿ ಇಂದ್ರಾದಿದೇವತೆಗಳನ್ನು ಜಯಿಸಿ ಅಗ್ನಿದೇವರನ್ನು ತೃಪ್ತಿಪಡಿಸಿರುವನು. ಯಾದವರನ್ನು ಜಯಿಸಿ ಸುಭದ್ರೆಯನ್ನು ಮದುವೆಯಾಗಿರುವನು. ರುದ್ರದೇವರನ್ನು ಯುದ್ಧದಲ್ಲಿ ಸಂತೋಷಪಡಿಸಿರುವನು. ಮೂರುಕೋಟಿ ನಿವಾತ ಕವಚರೆಂಬ ದಾನವರನ್ನು ಹಿರಣ್ಯಪುರವಾಸಿಗಳಾದ ಕಾಲಕೇಯರನ್ನು ಸಂಹರಿಸಿರುವನು. ನಿನ್ನನ್ನೂ ಕೂಡ ಚಿತ್ರಸೇನ ಗಂಧರ್ವನಿಂದ ಬಿಡಿಸಿರುವನು. ರಾಜರನ್ನು ಜಯಿಸಿ ಧರ್ಮರಾಜನಿಂದ ರಾಜಸೂಯಯಾಗವನ್ನು ಮಾಡಿಸಿರುವನು. ಇವನು ಶೌರ್ಯಾದಿ ಮಹಾಗುಣವುಳ್ಳವನು. ಆ ಅರ್ಜುನನೇ ಈಗ ಬರುತ್ತಿರುವವನು. ಸಂಶಯವೇ ಇಲ್ಲ. ಎಲ್ಲಾ ದೇವತೆಗಳೂ ಬಂದರೂ ಈಗ ಅವರನ್ನು ಈ ಅರ್ಜುನನು ಜಯಿಸದೆ ಹೋಗಲಾರನು. ವನದಲ್ಲಿ ಬಹಳ ಕ್ಲೇಶಪಟ್ಟಿರುವನು. ಇಂದ್ರದೇವರಿಂದ ಶಿಕ್ಷಿತನಾಗಿರುವನು. ಕೋಪಪರವಶನಾಗಿರುವನು. ಈಗ ಯುದ್ಧ ಮಾಡುವನು. ಸಂದೇಹವೇ ಇಲ್ಲ. ಹಿಮವತ್ಪರ್ವತದಲ್ಲಿ ಕಿರಾತವೇಷದಿಂದ ಬಂದ ರುದ್ರದೇವರೂ

ಯುದ್ಧದಲ್ಲಿ ಅರ್ಜುನನಿಂದ ಸಂತೋಷಪಟ್ಟರು ಎಂದು ಕೇಳಿರುವೆವು' ಎಂದು ಹೇಳಿದರು.

ಅದನ್ನು ಕೇಳಿ ಕರ್ಣನು ಕೋಪಿಸಿಕೊಂಡು 'ನೀವು ಯಾವಾಗಲೂ ನಮ್ಮಲ್ಲಿ ಅರ್ಜುನನ ಗುಣಗಳನ್ನು ಹೇಳುತ್ತಿರುವಿರಿ. ಅರ್ಜುನನು ನನಗೂ ದುರ್ಯೋಧನ ನಿಗೂ ಹದಿನಾರನೇ ಒಂದು ಭಾಗ ಬಲಕ್ಕೂ ಸಮಾನನಾಗಲಾರನು' ಎಂದನು.

ಆಗ ದುರ್ಯೋಧನನು 'ಕರ್ಣ! ಬಂದವನು ಅರ್ಜುನನಾದರೆ ನನ್ನ ಕಾರ್ಯವಾಯಿತು. ಪಾಂಡವರು ಪುನಃ ಹನ್ನೆರಡು ವರ್ಷ ವನವಾಸ ಮಾಡುವರು. ಅಥವಾ ಬೇರೆಯಾರಾದರೂ ಆಗಿದ್ದರೆ ನಪುಂಸಕವೇಷದಿಂದ ದೇವೇಂದ್ರನೇ ಬರಲಿ. ಇವನನ್ನು ತೀಕ್ಷ್ಣ ಬಾಣಗಳಿಂದ ಭೂಮಿಯಲ್ಲಿ ಬೀಳಿಸುವೆನು' ಎಂದನು.

ದುರ್ಯೋಧನನು ಆರೀತಿಯಾಗಿ ಹೇಳಲು ಭೀಷ್ಮಾಚಾರ್ಯರೂ ದ್ರೋಣಾ ಚಾರ್ಯರೂ ಕೃಪಾಚಾರ್ಯರೂ ಅಶ್ವತ್ಥಾಮಾಚಾರ್ಯರೂ ದುರ್ಯೋಧನನ ಪೌರುಷವನ್ನು ಹೊಗಳಿದರು.



## ಉತ್ತರನು ಆಯುಧಗಳನ್ನು ತೆಗೆದದ್ದು [1]

ತೆರುವಾಯ ಅರ್ಜುನನು ಶಮೀವೃಕ್ಷದ ಬಳಿಗೆ ಹೋಗಿ ಉತ್ತರನೊಡನೆ 'ಭೂಮಿಂಜಯ! ನೀನು ಈ ದೊಡ್ಡ ಶಮೀವೃಕ್ಷವನ್ನು ಏರುವವನಾಗಿ ಗಾಂಡೀವ ಧನುಸ್ಸನ್ನು ತೆಗೆದುಕೊಂಡು ಬಾ. ಈ ಧನುಸ್ಸುಗಳು ನನ್ನ ಬಲವನ್ನು ತಾಳಲಾರವು. ಈ ಧನುಸ್ಸುಗಳೂ ನಿನ್ನ ಆಯುಧಗಳೂ ಅತಿಚಿಕ್ಕವಾಗಿರುವುವು. ಮೃದುವಾಗಿರುವುವು. ಆದುದರಿಂದ ನೀನು ಈ ಮರದ ಮೇಲೆ ಹತ್ತಿಹೋಗು. ಈ ಮರದಲ್ಲಿ ಐದು ಜನ ಪಾಂಡವರ ಧನುಸ್ಸುಗಳೂ ಆಯುಧಗಳೂ ಇರುತ್ತವೆ. ಅಲ್ಲಿಯೇ ಮಹಾ ವೀರ್ಯವುಳ್ಳ ಮಹಾಭಾರವುಳ್ಳ ಅರ್ಜುನನ ಗಾಂಡೀವಧನಸ್ಸೂ ಇರುತ್ತದೆ' ಎಂದನು. ಉತ್ತರನು 'ಈ ಶಮಿಯಲ್ಲಿ ಒಣಗಿದ ಹೆಣವು ಜೋಲುತ್ತಿರುವುದು. ರಾಜಪುತ್ರನಾದ ನಾನು ಹೆಣವನ್ನು ಕೈಯಿಂದ ಹೇಗೆ ಮುಟ್ಟಲಿ? ನನ್ನಿಂದ ಇಂತಹ ಕಾರ್ಯವನ್ನು ಮಾಡಿಸಬೇಡ. ಹೆಣವನ್ನು ಮುಟ್ಟಿದರೆ ನಾನು ಹೆಣಹೊರುವವನಂತೆ ಅಶುದ್ಧನಾಗುವೆನು' ಎಂದು ಹೇಳಿದನು.

1. ಭಾ.ವಿ.ಪ ಅ-40, 41, 42, 43, 44

ಆಗ ಅರ್ಜುನನು 'ನಾನು ನಿನ್ನನ್ನೆಲ್ಲವನ್ನೂ ತಿಳಿದಿರುವೆನು. ನಿನ್ನಿಂದ ನಾನು ಪಾಪಕಾರ್ಯವನ್ನು ಯಾಕೆ ಮಾಡಿಸುವೆನು? ಅದು ಶರೀರವಲ್ಲ, ಅವು ಧನುಸ್ಸುಗಳು. ಮತ್ಸ್ಯರಾಜನ ಮಗನಾದ ನಿನ್ನಿಂದ ನಿಂದ್ಯವಾದ ಕಾರ್ಯವನ್ನು ನಾನೇಕೆ ಮಾಡಿಸುವೆನು?' ಎಂದು ಹೇಳಿದನು.

ತರುವಾಯ ಉತ್ತರನು ಮರದ ಮೇಲೆ ಹತ್ತಿಹೋದನು. ಚರ್ಮದಿಂದ ಸುತ್ತಿಟ್ಟಿದ್ದ ಧನುಸ್ಸನ್ನು ತೆಗೆದನು. ಅರ್ಜುನನ ಮಾತಿನಂತೆ ಸುತ್ತಿದ್ದ ಚರ್ಮವನ್ನು ಬಿಡಿಸಿದನು. ಚರ್ಮವನ್ನು ಬಿಡಿಸಲು ಆ ಧನುಸ್ಸುಗಳು ಪ್ರಭೆಗಳು ಹೊರಗೆ ಬಂದವು. ಹಾವುಗಳಂತೆ ಆ ಧನುಸ್ಸುಗಳು ಕಾಣಿಸುತ್ತಿದ್ದವು. ಅವನ್ನು ನೋಡಿ ಉತ್ತರನು ರೋಮಾಂಚಿತಗಾತ್ರನಾದನು. ಭಯದಿಂದ ನಡುಗಿ ಹೋದನು. ಆಗ ಅರ್ಜುನನು ಅವನನ್ನು ಸಮಾಧಾನಪಡಿಸಿದನು. ತರುವಾಯ ಉತ್ತರಕುಮಾರನು ಮೆಲ್ಲನೆ ಕಣ್ಣು ಮುಚ್ಚಿಕೊಂಡು ಆ ಧನುಸ್ಸುಗಳನ್ನು ಮುಟ್ಟಿಮುಟ್ಟಿ ಮುಟ್ಟಲಿಕ್ಕೆ ಅಭ್ಯಾಸ ಮಾಡಿಕೊಂಡನು. ಆಮೇಲೆ ಅರ್ಜುನನೊಡನೆ ಉತ್ತರಕುಮಾರನು 'ಸಾರಥಿಯೇ ಇದೇನು? ಸರ್ಪವೋ ಧನುಸ್ಸೋ? ಈ ಧನುಸ್ಸುಗಳೂ ಬಾಣಗಳೂ ಖಡ್ಗಗಳೂ ಯಾರವು? ಎಂದು ಒಂದೊಂದರ ಲಕ್ಷಣವನ್ನು ಹೇಳಿ ಕೇಳಿದನು. ಅರ್ಜುನನು ಅವುಗಳ ಲಕ್ಷಣಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಹೇಳಿ ಧರ್ಮರಾಜ ಭೀಮಸೇನ ದೇವರು ಮೊದಲಾದವರ ಎಲ್ಲರ ಆಯುಧಗಳನ್ನು ಹೇಳಿದನು. ತನ್ನ ಆಯುಧಗಳನ್ನು ಅರ್ಜುನನದ್ದು ಎಂದು ಹೇಳಿದನು. ಆದರೂ ಉತ್ತರಕುಮಾರನಿಗೆ ಬೃಹನ್ನಳೆಯೇ ಅರ್ಜುನನೆಂದು ತಿಳಿಯಲಿಲ್ಲ. ಅವನು ಅರ್ಜುನನೊಡನೆ 'ಮಹಾನುಭಾವರಾದ ಪಾಂಡವರ ಮನೋಹರಗಳಾದ ಈ ಆಯುಧಗಳು ಪ್ರಕಾಶಮಾನಗಳಾಗಿವೆ. ಶೂರರಾದ ಯುದ್ಧಗಳಲ್ಲಿ ಪರಾಜಯ ಶೂನ್ಯರಾದ ಆ ಪಾಂಡವರು ಈಗ ಎಲ್ಲಿರುವರು? ಆ ಧರ್ಮಜ್ಞರು ಈಗ ಯಾವ ದೇಶದಲ್ಲಿ ವಾಸಮಾಡುತ್ತಿರುವರು? ಅವರು ಪಗಡೆ ಆಟದಲ್ಲಿ ಸೋತು ವನಕ್ಕೆ ಹೋದರು ಎಂದು ಕೇಳಿರುವೆನು. ಬೃಹನ್ನಳೆಯೇ! ಪಾಂಡವರು ಎಲ್ಲಿರುವರೆಂದು ನಿನಗೆ ತಿಳಿದಿದ್ದರೆ ಸತ್ಯವನ್ನು ಹೇಳು. ಆ ಮಹಾನುಭಾವರ ಆಯುಧಗಳು ಇಲ್ಲಿಗೆ ಹೇಗೆ ಬಂದವು? ಇಲ್ಲಿ ಇರುವುದು ನಿನಗೆ ಹೇಗೆ ತಿಳಿಯಿತು?' ಎಂದು ಕೇಳಿದನು.

ಅದನ್ನು ಕೇಳಿ ಅರ್ಜುನನು ನಗುತ್ತಾ 'ರಾಜಪುತ್ರ! ನನ್ನ ಮಾತನ್ನು ಕೇಳು. ನೀನು ಭಯಪಡಬೇಡ. ನಿನಗೆ ಎಲ್ಲವನ್ನು ಹೇಳುವೆನು. ನಾವೇ ಪಾಂಡವರು. ವನವಾಸವನ್ನು ಮುಗಿಸಿಕೊಂಡು ಬಂದಿರುವೆವು. ಹನ್ನೆರಡುವರ್ಷ ವನವಾಸವಾದ

ಯುದ್ಧದಲ್ಲಿ ಅರ್ಜುನನಿಂದ ಸಂತೋಷಪಟ್ಟರು ಎಂದು ಕೇಳಿರುವೆವು' ಎಂದು ಹೇಳಿದರು.

ಅದನ್ನು ಕೇಳಿ ಕರ್ಣನು ಕೋಪಿಸಿಕೊಂಡು 'ನೀವು ಯಾವಾಗಲೂ ನಮ್ಮಲ್ಲಿ ಅರ್ಜುನನ ಗುಣಗಳನ್ನು ಹೇಳುತ್ತಿರುವಿರಿ. ಅರ್ಜುನನು ನನಗೂ ದುರ್ಯೋಧನ ನಿಗೂ ಹದಿನಾರನೇ ಒಂದು ಭಾಗ ಬಲಕ್ಕೂ ಸಮಾನನಾಗಲಾರನು' ಎಂದನು.

ಆಗ ದುರ್ಯೋಧನನು 'ಕರ್ಣ! ಬಂದವನು ಅರ್ಜುನನಾದರೆ ನನ್ನ ಕಾರ್ಯವಾಯಿತು. ಪಾಂಡವರು ಪುನಃ ಹನ್ನೆರಡು ವರ್ಷ ವನವಾಸ ಮಾಡುವರು. ಅಥವಾ ಬೇರೆಯಾರಾದರೂ ಆಗಿದ್ದರೆ ನಪುಂಸಕವೇಷದಿಂದ ದೇವೇಂದ್ರನೇ ಬರಲಿ. ಇವನನ್ನು ತೀಕ್ಷ್ಣ ಬಾಣಗಳಿಂದ ಭೂಮಿಯಲ್ಲಿ ಬೀಳಿಸುವೆನು' ಎಂದನು.

ದುರ್ಯೋಧನನು ಆರೀತಿಯಾಗಿ ಹೇಳಲು ಭೀಷ್ಮಾಚಾರ್ಯರೂ ದ್ರೋಣಾ ಚಾರ್ಯರೂ ಕೃಪಾಚಾರ್ಯರೂ ಅಶ್ವತ್ಥಾಮಾಚಾರ್ಯರೂ ದುರ್ಯೋಧನನ ಪೌರುಷವನ್ನು ಹೊಗಳಿದರು.



## ಉತ್ತರನು ಆಯುಧಗಳನ್ನು ತೆಗೆದದ್ದು [1]

ತೆರುವಾಯ ಅರ್ಜುನನು ಶಮೀವೃಕ್ಷದ ಬಳಿಗೆ ಹೋಗಿ ಉತ್ತರನೊಡನೆ 'ಭೂಮಿಂಜಯ! ನೀನು ಈ ದೊಡ್ಡ ಶಮೀವೃಕ್ಷವನ್ನು ಏರುವವನಾಗಿ ಗಾಂಡೀವ ಧನುಸ್ಸನ್ನು ತೆಗೆದುಕೊಂಡು ಬಾ. ಈ ಧನುಸ್ಸುಗಳು ನನ್ನ ಬಲವನ್ನು ತಾಳಲಾರವು. ಈ ಧನುಸ್ಸುಗಳೂ ನಿನ್ನ ಆಯುಧಗಳೂ ಅತಿಚಿಕ್ಕವಾಗಿರುವುವು. ಮೃದುವಾಗಿರುವುವು. ಆದುದರಿಂದ ನೀನು ಈ ಮರದ ಮೇಲೆ ಹತ್ತಿಹೋಗು. ಈ ಮರದಲ್ಲಿ ಐದು ಜನ ಪಾಂಡವರ ಧನುಸ್ಸುಗಳೂ ಆಯುಧಗಳೂ ಇರುತ್ತವೆ. ಅಲ್ಲಿಯೇ ಮಹಾ ವೀರ್ಯವುಳ್ಳ ಮಹಾಭಾರವುಳ್ಳ ಅರ್ಜುನನ ಗಾಂಡೀವಧನಸ್ಸೂ ಇರುತ್ತದೆ' ಎಂದನು. ಉತ್ತರನು 'ಈ ಶಮಿಯಲ್ಲಿ ಒಣಗಿದ ಹೆಣವು ಜೋಲುತ್ತಿರುವುದು. ರಾಜಪುತ್ರನಾದ ನಾನು ಹೆಣವನ್ನು ಕೈಯಿಂದ ಹೇಗೆ ಮುಟ್ಟಲಿ? ನನ್ನಿಂದ ಇಂತಹ ಕಾರ್ಯವನ್ನು ಮಾಡಿಸಬೇಡ. ಹೆಣವನ್ನು ಮುಟ್ಟಿದರೆ ನಾನು ಹೆಣಹೊರುವವನಂತೆ ಅಶುದ್ಧನಾಗುವೆನು' ಎಂದು ಹೇಳಿದನು.

---

1. ಭಾ.ವಿ.ಪ ಅ-40, 41, 42, 43, 44

ಆಗ ಅರ್ಜುನನು 'ನಾನು ನಿನ್ನನ್ನೆಲ್ಲವನ್ನೂ ತಿಳಿದಿರುವೆನು. ನಿನ್ನಿಂದ ನಾನು ಪಾಪಕಾರ್ಯವನ್ನು ಯಾಕೆ ಮಾಡಿಸುವೆನು? ಅದು ಶರೀರವಲ್ಲ. ಅವು ಧನುಸ್ಸುಗಳು. ಮತ್ಸ್ಯರಾಜನ ಮಗನಾದ ನಿನ್ನಿಂದ ನಿಂದ್ಯವಾದ ಕಾರ್ಯವನ್ನು ನಾನೇಕೆ ಮಾಡಿಸುವೆನು?' ಎಂದು ಹೇಳಿದನು.

ತರುವಾಯ ಉತ್ತರನು ಮರದ ಮೇಲೆ ಹತ್ತಿಹೋದನು. ಚರ್ಮದಿಂದ ಸುತ್ತಿಟ್ಟಿದ್ದ ಧನುಸ್ಸನ್ನು ತೆಗೆದನು. ಅರ್ಜುನನ ಮಾತಿನಂತೆ ಸುತ್ತಿದ್ದ ಚರ್ಮವನ್ನು ಬಿಡಿಸಿದನು. ಚರ್ಮವನ್ನು ಬಿಡಿಸಲು ಆ ಧನುಸ್ಸುಗಳು ಪ್ರಭೆಗಳು ಹೊರಗೆ ಬಂದವು. ಹಾವುಗಳಂತೆ ಆ ಧನುಸ್ಸುಗಳು ಕಾಣಿಸುತ್ತಿದ್ದವು. ಅವನ್ನು ನೋಡಿ ಉತ್ತರನು ರೋಮಾಂಚಿತಗಾತ್ರನಾದನು. ಭಯದಿಂದ ನಡುಗಿ ಹೋದನು. ಆಗ ಅರ್ಜುನನು ಅವನನ್ನು ಸಮಾಧಾನಪಡಿಸಿದನು. ತರುವಾಯ ಉತ್ತರಕುಮಾರನು ಮೆಲ್ಲನೆ ಕಣ್ಣು ಮುಚ್ಚಿಕೊಂಡು ಆ ಧನುಸ್ಸುಗಳನ್ನು ಮುಟ್ಟಿಮುಟ್ಟಿ ಮುಟ್ಟಲಿಕ್ಕೆ ಅಭ್ಯಾಸ ಮಾಡಿಕೊಂಡನು. ಆಮೇಲೆ ಅರ್ಜುನನೊಡನೆ ಉತ್ತರಕುಮಾರನು 'ಸಾರಥಿಯೇ ಇದೇನು? ಸರ್ಪವೋ ಧನುಸ್ಸೋ? ಈ ಧನುಸ್ಸುಗಳೂ ಬಾಣಗಳೂ ಖಡ್ಗಗಳೂ ಯಾರವು? ಎಂದು ಒಂದೊಂದರ ಲಕ್ಷಣವನ್ನು ಹೇಳಿ ಕೇಳಿದನು. ಅರ್ಜುನನು ಅವುಗಳ ಲಕ್ಷಣಗಳನ್ನು ಪ್ರತ್ಯೇಕಪ್ರತ್ಯೇಕವಾಗಿ ಹೇಳಿ ಧರ್ಮರಾಜ ಭೀಮಸೇನ ದೇವರು ಮೊದಲಾದವರ ಎಲ್ಲರ ಆಯುಧಗಳನ್ನು ಹೇಳಿದನು. ತನ್ನ ಆಯುಧಗಳನ್ನು ಅರ್ಜುನನದ್ದು ಎಂದು ಹೇಳಿದನು. ಆದರೂ ಉತ್ತರಕುಮಾರನಿಗೆ ಬೃಹನ್ನಳೆಯೇ ಅರ್ಜುನನೆಂದು ತಿಳಿಯಲಿಲ್ಲ. ಅವನು ಅರ್ಜುನನೊಡನೆ 'ಮಹಾನುಭಾವರಾದ ಪಾಂಡವರ ಮನೋಹರಗಳಾದ ಈ ಆಯುಧಗಳು ಪ್ರಕಾಶಮಾನಗಳಾಗಿವೆ. ಶೂರರಾದ ಯುದ್ಧಗಳಲ್ಲಿ ಪರಾಜಯ ಶೂನ್ಯರಾದ ಆ ಪಾಂಡವರು ಈಗ ಎಲ್ಲಿರುವರು? ಆ ಧರ್ಮಜ್ಞರು ಈಗ ಯಾವ ದೇಶದಲ್ಲಿ ವಾಸಮಾಡುತ್ತಿರುವರು? ಅವರು ಪಗಡೆ ಆಟದಲ್ಲಿ ಸೋತು ವನಕ್ಕೆ ಹೋದರು ಎಂದು ಕೇಳಿರುವೆನು. ಬೃಹನ್ನಳೆಯೇ! ಪಾಂಡವರು ಎಲ್ಲಿರುವರೆಂದು ನಿನಗೆ ತಿಳಿದಿದ್ದರೆ ಸತ್ಯವನ್ನು ಹೇಳು. ಆ ಮಹಾನುಭಾವರ ಆಯುಧಗಳು ಇಲ್ಲಿಗೆ ಹೇಗೆ ಬಂದವು? ಇಲ್ಲಿ ಇರುವುದು ನಿನಗೆ ಹೇಗೆ ತಿಳಿಯಿತು?' ಎಂದು ಕೇಳಿದನು.

ಅದನ್ನು ಕೇಳಿ ಅರ್ಜುನನು ನಗುತ್ತಾ 'ರಾಜಪುತ್ರ! ನನ್ನ ಮಾತನ್ನು ಕೇಳು. ನೀನು ಭಯಪಡಬೇಡ. ನಿನಗೆ ಎಲ್ಲವನ್ನು ಹೇಳುವೆನು. ನಾವೇ ಪಾಂಡವರು. ವನವಾಸವನ್ನು ಮುಗಿಸಿಕೊಂಡು ಬಂದಿರುವೆವು. ಹನ್ನೆರಡುವರ್ಷ ವನವಾಸವಾದ

ಮೇಲೆ ಹದಿಮೂರನೇ ವರ್ಷದಲ್ಲಿ ನಿನ್ನ ಮನೆಯಲ್ಲಿ ಅಜ್ಞಾತವಾಸಮಾಡಿದೆವು. ಭಯರಹಿತನಾಗಿ ಎಲ್ಲವನ್ನು ಕೇಳು. ನಾನೇ ಅರ್ಜುನನು. ಕಂಕ ಎಂದು ಹೆಸರುಳ್ಳವರೇ ಧರ್ಮರಾಜರು. ವಲಲ ಎಂದು ಹೆಸರಿನಿಂದ ಅಡಿಗೆ ಮಾಡುತ್ತಿದ್ದವರೇ ಭೀಮಸೇನರು. ಕುದುರೆಗಳನ್ನು ನೋಡಿಕೊಂಡು ಇದ್ದವನೇ ನಕುಲನು. ದನಗಳ ಯಜಮಾನನಾಗಿದ್ದವನೇ ಸಹದೇವನು. ಸೈರಂಧ್ರಿಯನ್ನೇ ದ್ರೌಪದೀದೇವಿಯೆಂದು ತಿಳಿ. ದ್ರೌಪದೀದೇವಿಯ ನಿಮಿತ್ತದಿಂದಲೇ ದುಷ್ಟನಾದ ಕೀಚಕನು ತನ್ನ ಸಹೋದರರಿಂದ ಸಹಿತನಾಗಿ ಭೀಮಸೇನರಿಂದ ಕೊಲ್ಲಲ್ಪಟ್ಟನು' ಎಂದು ಹೇಳಿದನು.

ತರುವಾಯ ಉತ್ತರನು ಅರ್ಜುನನೊಡನೆ ಅವನ ಹತ್ತು ಹೆಸರುಗಳನ್ನು ಕೇಳಲು ಅರ್ಜುನನು 'ಅರ್ಜುನ, ಫಲ್ಗುಣ, ಜಿಷ್ಣು, ಕಿರೀಟೀ, ಶ್ವೇತವಾಹನ, ಭೀಭತ್ಸು, ವಿಜಯ, ಪಾರ್ಥ, ಸವ್ಯಸಾಚೀ, ಧನಂಜಯ' ಎಂದು ಹತ್ತು ಹೆಸರುಗಳನ್ನು ಹೇಳಿ ಎಲ್ಲ ದೇಶಗಳನ್ನು ಜಯಿಸಿ ಹಣವನ್ನು ತಂದ ಕಾರಣ ಧನಂಜಯ ಎಂಬ ಹೆಸರು ಬಂದಿದೆಯೆಂದೂ, ಯುದ್ಧಕ್ಕೆ ಹೋದವನು ಶತ್ರುವನ್ನು ಜಯಿಸದೆ ಹಿಂದೆ ಬಾರದೆ ಇರುವ ಕಾರಣ ವಿಜಯ ಎಂದೂ, ಯುದ್ಧಮಾಡುವಾಗ ರಥದ ಬಳಿ ಕುದುರೆಗಳನ್ನು ಕಟ್ಟಿರುವ ಕಾರಣ ಶ್ವೇತವಾಹನ ಎಂಬ ಹೆಸರೂ, ಯುದ್ಧ ಮಾಡುತ್ತಿರುವಾಗ ಇಂದ್ರದೇವರು ಕೊಟ್ಟಿರುವ ಅಮೂಲ್ಯವಾದ ಕಿರೀಟವು ಸೂರ್ಯನಂತೆ ಪ್ರಕಾಶಿಸುತ್ತಿರುವ ಕಾರಣ ಕಿರೀಟೀ ಎಂಬ ಹೆಸರೂ, ಯುದ್ಧ ಮಾಡುತ್ತಿರುವಾಗ ನಿಂದ್ಯವಾದ ಕಾರ್ಯವನ್ನು ಮಾಡದ ಕಾರಣ ಭೀಭತ್ಸ ಎಂಬ ಹೆಸರೂ, ಯುದ್ಧಮಾಡುವಾಗ ಎರಡು ಕೈಗಳಿಂದಲೂ ಬಾಣಗಳನ್ನು ಬಿಟ್ಟರೂ ಎಡಕೈಯಿಂದ ವಿಶೇಷವಾಗಿ ಬಿಡುವಾಗ ಸವ್ಯಸಾಚೀ ಎಂಬ ಹೆಸರೂ, ಪೃಥಿವಿಯಲ್ಲಿಯೇ ದುರ್ಲಭವಾದ ಶುದ್ಧವಾದ ರೂಪವಿರುವ ಕಾರಣ ಅರ್ಜುನ ಎಂಬ ಹೆಸರೂ ಉತ್ತರ ಫಲ್ಗುಣೀ ನಕ್ಷತ್ರದಲ್ಲಿ ಹುಟ್ಟಿದ ಕಾರಣ ಫಲ್ಗುಣ ಎಂಬ ಹೆಸರೂ, ಎಲ್ಲರನ್ನೂ ಜಯಿಸಿರುವ ಕಾರಣ ಜಿಷ್ಣು ಎಂಬ ಹೆಸರೂ, ತಾಯಿಯ ಹೆಸರು ಪೃಥೆಯೆಂದು ಇರುವ ಕಾರಣ ಅವಳ ಮಗನಾದ ತನಗೆ ಪಾರ್ಥ ಎಂಬ ಹೆಸರೂ ಬಂದಿರುವುದೆಂದು ಹೇಳಿದನು. ಮತ್ತು ತನ್ನ ಪರಾಕ್ರಮಗಳನ್ನು ಹೇಳಿಕೊಂಡವನಾಗಿ ಕೌರವರೆಲ್ಲರನ್ನು ಜಯಿಸಿ ಗೋವುಗಳನ್ನು ಹಿಂದೆ ತಿರುಗಿಸಿ ಕರಕೊಂಡು ಬರುವೆನೆಂದು ಹೇಳಿದನು.

ತರುವಾಯ ಉತ್ತರನು ಅರ್ಜುನನಿಗೆ ನಮಸ್ಕಾರ ಮಾಡಿ 'ನಾನು ತಿಳಿಯದೆ

ಹೇಳಿರುವ ಮಾತುಗಳೆಲ್ಲವನ್ನು ಕ್ಷಮಿಸಬೇಕು. ನೀನು ಪೂರ್ವದಲ್ಲಿ ಯುದ್ಧದಲ್ಲಿ ವಿಚಿತ್ರಕರ್ಮವನ್ನು ಮಾಡಿದವನಾದ ಕಾರಣ ನನ್ನ ಭಯವೆಲ್ಲವೂ ಹೋಯಿತು. ಪ್ರೀತಿಯು ಹೆಚ್ಚಾಗಿರುವುದು. ನಾನು ನಿನ್ನ ದಾಸನಾಗಿರುವೆನು. ನನ್ನನ್ನು ದಯೆಯಿಂದ ನೋಡಬೇಕು. ನಾನು ಪೂರ್ವದಲ್ಲಿ ಮಹಾಯುದ್ಧದಲ್ಲಿ ಇಂದ್ರಪುತ್ರನಾದ ಅರ್ಜುನನಿಗೆ ಸಾರಥ್ಯವನ್ನು ಮಾಡುವೆನೆಂದು, ಪ್ರತಿಜ್ಞೆಯನ್ನು ಮಾಡಿದ್ದೆನು. ಆ ಪ್ರತಿಜ್ಞೆಯು ಈಗ ನಿನಗೆ ಸಾರಥ್ಯ ಮಾಡಿ ಸಂಪೂರ್ಣ ಮಾಡಿಕೊಳ್ಳುವೆನು. ನನ್ನನ್ನು ಸಾರಥಿಯನ್ನಾಗಿ ಮಾಡಿಕೊಂಡು ಯುದ್ಧದಲ್ಲಿ ದುರ್ಯೋಧನನನ್ನು ಜಯಿಸಿ ನನ್ನ ಗೋವುಗಳನ್ನು ಹಿಂದೆ ತಿರುಗಿಸು' ಎಂದು ಹೇಳಿದನು.

ಅರ್ಜುನನು 'ರಾಜಪುತ್ರನೇ! ನಾನು ಪ್ರೀತನಾಗಿರುವೆನು. ನಿನಗೀಗ ಭಯವಿರುವುದಿಲ್ಲ. ನಿನ್ನ ಶತ್ರುಗಳೆಲ್ಲರನ್ನೂ ಜಯಿಸುವೆನು. ನೀನು ಸ್ವಸ್ಥನಾಗಿ ಇರು. ನಾನು ಶತ್ರುಗಳೊಡನೆ ಯುದ್ಧವನ್ನು ಮಾಡುವುದನ್ನು ನೋಡು. ಗಾಂಡೀವಧನುಸ್ಸನ್ನು ದೇವದತ್ತ ಎಂಬ ಶಂಖವನ್ನೂ ಬಂಗಾರದಿಂದ ಅಲಂಕೃತಗಳಾಗಿರುವ ಬಾಣಗಳನ್ನೂ ಬಾಣದ ಚೀಲಗಳನ್ನು ತಂದು ರಥದಲ್ಲಿ ಇಡು. ಒಂದು ಖಡ್ಗವನ್ನು ತೆಗೆದುಕೊಂಡು ಬಾ. ನಾನು ಎಲ್ಲಾ ಕೌರವರೊಡನೆ ಯುದ್ಧ ಮಾಡುತ್ತೇನೆ. ನಿನ್ನ ಗೋವುಗಳನ್ನು ಬಿಡಿಸುತ್ತೇನೆ. ರಾಜನನ್ನು ಸಂತೋಷಪಡಿಸುತ್ತೇನೆ. ಪುನಃ ನಗರವನ್ನು ಪ್ರವೇಶಿಸುತ್ತೇನೆ. ನಾನು ಗಾಂಡೀವ ಧನುಸ್ಸನ್ನು ಹಿಡಿದುಕೊಂಡು ರಥದಲ್ಲಿ ಕೂತುಕೊಂಡರೆ ಒಬ್ಬರೂ ಜಯಿಸಲಿಕ್ಕೆ ಆಗಲಾರದು. ನೀನು ಭಯವನ್ನು ಬಿಡು' ಎಂದು ಹೇಳಿದನು.

ಉತ್ತರನು 'ಅರ್ಜುನ! ನಾನು ಹೆಚ್ಚಿಗೆ ಯಾಕೆ ಹೇಳಲಿ? ದೇವೇಂದ್ರನೇ ಬಂದರೂ ನಾನೀಗ ಭಯಪಡುವವನಲ್ಲ. ಕುಬೇರಾದಿ ದೇವತೆಗಳಿಂದಲೂ ದ್ರೋಣಭೀಷ್ಮರು ನೂರು ಜನರು ಬಂದರೂ ನಾನು ಭಯಪಡುವುದಿಲ್ಲ. ಆದರೆ ನನಗೆ ಇದೊಂದು ವಿಷಯ ಎಷ್ಟು ಯೋಚನೆ ಮಾಡಿದರೂ ಮನಸ್ಸಿಗೇ ತಿಳಿಯುವುದಿಲ್ಲ. ಅಂತಹ ಸುಂದರರೂಪವುಳ್ಳವನಾದ ನಿನಗೆ ಈ ನಪುಂಸಕರೂಪವು ಹೇಗೆ ಬಂದಿತು?' ಎಂದನು.

ಅರ್ಜುನನು 'ಅಣ್ಣನ ಆಜ್ಞೆಯಿಂದ ಒಂದು ವರ್ಷ ಬ್ರಹ್ಮಚರ್ಯ ವ್ರತವನ್ನು ಅನುಷ್ಠಾನ ಮಾಡುತ್ತಿರುವೆನು. ನಾನು ಸ್ವಾಭಾವಿಕವಾಗಿ ನಪುಂಸಕನಲ್ಲ. ಊರ್ವಶಿಯ ಶಾಪದಿಂದ ಈ ಒಂದು ವರ್ಷ ನಪುಂಸಕತ್ವವು ಬಂದಿರುವುದು. ಪೂರ್ವದಲ್ಲಿ ನಾನು ಅಣ್ಣನ ಆಜ್ಞೆಯಿಂದ ಸ್ವರ್ಗಲೋಕಕ್ಕೆ ಹೋಗಿದ್ದೆನು. ಸುಧರ್ಮಾಸಭೆಯಲ್ಲಿ

ಕೂತುಕೊಂಡು ಅಲ್ಲಿ ನರ್ತನ ಮಾಡುತ್ತಿದ್ದ ಪರಮಸುಂದರಿಯಾದ ನಮ್ಮ ವಂಶಕ್ಕೆ ಮೂಲಭೂತಳಾದ ಉರ್ವಶಿಯನ್ನು ಕಣ್ಣಿನ ರೆಪ್ಪೆ ಹಾಕದೆ ಸ್ವಲ್ಪ ಹೊತ್ತು ನೋಡಿದೆನು. ರಾತ್ರಿಯಲ್ಲಿ ಅವಳು ನನ್ನೊಡನೆ ರಮಿಸಬೇಕೆಂದು ಬಂದಳು. ನಾನು ಅವಳಿಗೆ ನಮಸ್ಕರಿಸಿ ತಾಯಿಗೆ ಮಾಡುವ ಸತ್ಕಾರವನ್ನು ಮಾಡಿದೆನು. ಆಗ ಅವಳು ಕೋಪಿಸಿಕೊಂಡು ನನಗೆ ನಪುಂಸಕನಾಗು ಎಂದು ಶಾಪವನ್ನು ಕೊಟ್ಟಳು. ಅದನ್ನು ಕೇಳಿ ಇಂದ್ರದೇವರು 'ಅರ್ಜುನ! ನೀನು ಭಯಪಡಬೇಡ. ನಿನಗೆ ಈ ಶಾಪವು ಅಜ್ಞಾತವಾಸ ಮಾಡುವಾಗ ಉಪಕಾರಕ್ಕೆ ಆಗುವುದು' ಎಂದು ನನಗೆ ಅನುಗ್ರಹಿಸಿ ಕಳುಹಿಸಿದರು. ಆದುದರಿಂದ ನನಗೆ ನಪುಂಸಕತ್ವವು ಬಂದಿತು. ಈಗ ಅದು ಮುಗಿಯಿತು' ಎಂದು ಹೇಳಿದನು.

ಅದನ್ನು ಕೇಳಿ ಉತ್ತರಕುಮಾರನು ಸಂತೋಷವುಳ್ಳವನಾಗಿ ತಾನು ಸಾರಥ್ಯವನ್ನು ಮಾಡುವೆನೆಂದು ಹೇಳಿಕೊಂಡನು. ನೀನು ಈ ರಥದಲ್ಲಿ ಕೂತುಕೊಂಡು ಯುದ್ಧಮಾಡಬೇಕೆಂದು ಹೇಳಿಕೊಂಡನು. ಅರ್ಜುನನು ಹೇಳಿದ ಆಯುಧಗಳನ್ನು ತೆಗೆದುಕೊಟ್ಟನು.

ತರುವಾಯ ಅರ್ಜುನನು ರಥದಿಂದ ಕೆಳಗೆ ಹಾರಿ ದೇವತೆಗಳಿಗೆ ನಮಸ್ಕರಿಸಿ ಗಾಂಡೀವ ಧನುಸ್ಸನ್ನು ಹಿಡಿದುಕೊಂಡು ಶೋಭಿಸಿದನು. ಕೈಗಳಿಂದ ಬಳೆಗಳನ್ನು ತೆಗೆದುಹಾಕಿದನು. ಕವಚವನ್ನು ಧರಿಸಿದನು. ಇಂದ್ರದೇವರು ಕೊಟ್ಟಿರುವ ದಿವ್ಯಕುಂಡಲಗಳನ್ನು ಧರಿಸಿದನು. ಮೃದುವಾದ ಉದ್ದವಾಗಿರುವ ಕೂದಲುಗಳನ್ನು ಬಿಳಿವಸ್ತ್ರವನ್ನು ಸುತ್ತಿ ಕಟ್ಟಿಕೊಂಡನು. ತರುವಾಯ ಶುದ್ಧವಾಗಿ ಪೂರ್ವಾಭಿಮುಖನಾಗಿ ಎಲ್ಲಾ ಅಸ್ತ್ರಾಭಿಮಾನಿದೇವತೆಗಳನ್ನು ಧ್ಯಾನಮಾಡಿದನು. ಆಗ ಅವರು ನಾವು ಸಿದ್ಧರಾಗಿರುವೆವು ಎಂದರು. ಅರ್ಜುನನು ಅವರಿಗೆ ನಮಸ್ಕರಿಸಿ ಕೈಯಿಂದ ಸ್ಪರ್ಶಮಾಡಿ ಎಲ್ಲರೂ ನನ್ನ ಮನಸ್ಸಿನಲ್ಲಿ ಸನ್ನಿಹಿತರಾಗಿ ಇರಿ ಎಂದು ಹೇಳಿಕೊಂಡನು. ಈರೀತಿಯಾಗಿ ಅಸ್ತ್ರಾಭಿಮಾನಿದೇವತೆಗಳನ್ನು ಸ್ವೀಕರಿಸಿ ಸಂತೋಷಯುಕ್ತವಾದ ಮನಸ್ಸುಳ್ಳವನಾದನು. ಗಾಂಡೀವಧನುಸ್ಸಿಗೆ ಹಗ್ಗವನ್ನು ಬಿಗಿದು ಸೆಳೆದುಬಿಟ್ಟನು. ಆಗ ಪರ್ವತವು ಸೀಳಿಹೋಗುವ ಆಗುವ ಶಬ್ದದಂತೆ ಶಬ್ದವಾಯಿತು. ಭೂಮಿಯಲ್ಲಿ ಮೇಘವಿಲ್ಲದೆ ಮೇಘಗರ್ಜನೆಯಾಯಿತು. ಭಯಂಕರವಾಗಿ ಗಾಳಿಯು ಬೀಸಿತು. ಪಕ್ಷಿಗಳೆಲ್ಲವೂ ಹಾರಿಹೋದವು. ದೊಡ್ಡ ಮರಗಳೂ ನಡುಗಿದವು. ಕೌರವರು ಈ ಭಯಂಕರವಾದ ಶಬ್ದವನ್ನು ಕೇಳಿ ದೈನ್ಯಯುಕ್ತವಾದ ಮನಸ್ಸುಳ್ಳವರಾಗಿ ಭಯಗ್ರಸ್ತರಾದರು.

ಆಗಲೂ ಉತ್ತರನು ಅರ್ಜುನನೊಡನೆ 'ಒಬ್ಬನೇ ಆದ ನೀನು ಬಹುಜನರಾದ ಕೌರವರನ್ನು ಯುದ್ಧದಲ್ಲಿ ಹೇಗೆ ಜಯಿಸುವಿ? ನಿನಗೆ ಸಹಾಯಕ್ಕೆ ಒಬ್ಬರೂ ಇಲ್ಲ. ಅವರು ಸಹಾಯವುಳ್ಳವರಾಗಿರುವರು' ಎಂದು ಕೇಳಿದನು.

ಅದಕ್ಕೆ ಅರ್ಜುನನು ಗಟ್ಟಿಯಾಗಿ ನಗುವವನಾಗಿ 'ಕುಮಾರ! ಭಯಪಡಬೇಡ. ಪೂರ್ವದಲ್ಲಿ ಗಂಧರ್ವರೊಡನೆ ಯುದ್ಧವನ್ನು ಮಾಡುವಾಗ ಯಾರು ಸಹಾಯಕ್ಕೆ ಇದ್ದರು? ಖಾಂಡವವನದಲ್ಲಿ ಯುದ್ಧಮಾಡುವಾಗ ಯಾರು ಸಹಾಯಕರಿದ್ದರು? ಇಂದ್ರದೇವರಿಗಾಗಿ ನಿವಾತಕವಚರೆಂಬ ರಾಕ್ಷಸರೊಡನೆ ಯುದ್ಧಮಾಡುವಾಗ ಯಾರು ಸಹಾಯವನ್ನು ಮಾಡುವವರಾದರು? ದ್ರೌಪದಿಯ ಸ್ವಯಂವರದಲ್ಲಿ ರಾಜರೊಡನೆ ಯುದ್ಧವನ್ನು ಮಾಡುವಾಗ ಯಾರು ಸಹಾಯ ಮಾಡಿದರು? ಗುರುಗಳಾದ ದ್ರೋಣಾಚಾರ್ಯರನ್ನೂ ಕೃಪಾಚಾರ್ಯರನ್ನು ಇಂದ್ರ ಕುಬೇರ ವರುಣ ಅಗ್ನಿದೇವತೆಗಳನ್ನು ರುದ್ರದೇವರನ್ನೂ ಶ್ರೀಕೃಷ್ಣಪರಮಾತ್ಮನನ್ನು ಆಶ್ರಯಿಸಿದವನಾಗಿ ಈ ಕೌರವರೊಡನೆ ಯಾಕೆ ಯುದ್ಧ ಮಾಡಲಾರೆನು? ಬೇಗನೇ ರಥವನ್ನು ಓಡಿಸು. ಮನಸ್ಸಿನಲ್ಲಿರುವ ಭಯವನ್ನು ಬಿಡು' ಎಂದು ಹೇಳಿದನು.



# ಅರ್ಜುನನು ಯುದ್ಧಕ್ಕೆ ಹೋದದು [1]

ತರುವಾಯ ಅರ್ಜುನನು ಉತ್ತರನನ್ನು ಸಾರಥಿಯನ್ನಾಗಿ ಮಾಡಿಕೊಂಡು ಶಮೀವೃಕ್ಷಕ್ಕೆ ಪ್ರದಕ್ಷಿಣೆ ಬಂದು ಸಮಸ್ತ ಆಯುಧವನ್ನು ಹಿಡಿದುಕೊಂಡು ಅಲ್ಲಿಂದ ಹೋದನು. ವಿರಾಟರಾಜನ ಸಿಂಹಧ್ವಜವನ್ನು ಸಹೋದರರ ಆಯುಧಗಳನ್ನು ಶಮೀವೃಕ್ಷದ ಮಧ್ಯದಲ್ಲಿಯೇ ಇಟ್ಟು ಹೋಗಲಿಕ್ಕೆ ಆರಂಭಿಸಿದನು. ತರುವಾಯ ಬಂಗಾರದ ಬಾಲವುಳ್ಳ ದಿವ್ಯವಾದ ಮಾಯಾಮಯವಾದ ವಿಶ್ವಕರ್ಮರಚಿತವಾದ ಅಗ್ನಿದೇವರು ಅನುಗ್ರಹಮಾಡಿ ತಂದುಕೊಟ್ಟಿರುವ ಹನುಮದ್ಧ್ವಜವನ್ನು ಸ್ಮರಿಸಿದನು. ರಥದಲ್ಲಿ ಹನುಮದ್ಧ್ವಜವುಳ್ಳವನಾದನು. ಧ್ವಜದಲ್ಲಿ ಭೂತಗಳೂ ಬಂದು ವಾಸಮಾಡಿದವು. ಅರ್ಜುನನು ರಥದಲ್ಲಿ ಕೂತುಕೊಂಡು ಆಯುಧಧಾರಿಯಾಗಿ ಉತ್ತರದಿಕ್ಕಿಗೆ ಹೋದನು. ಕೌರವರ ಸೈನ್ಯದ ಬಳಿಗೆ ಹೋಗಿ ಶಂಖವನ್ನು ಊದಿದನು. ಅರ್ಜುನನ ಶಂಖದ ಶಬ್ದದಿಂದಲೂ, ಧನುಸ್ಸಿನ ಶಬ್ದದಿಂದಲೂ,

1. ಭಾ.ವಿ.ಪ ಅ-45

ಧ್ವಜದಲ್ಲಿದ್ದ ಹನುಮಂತ ದೇವರ ಶಬ್ದದಿಂದಲೂ, ರಥಚಕ್ರಗಳ ಶಬ್ದದಿಂದಲೂ, ಎಲ್ಲರಿಗೂ ಭಯವನ್ನು ಉಂಟುಮಾಡಿದನು. ಅರ್ಜುನನ ಶಂಖದ ಶಬ್ದದಿಂದ ರಥಕ್ಕೆ ಕಟ್ಟಿದ್ದ ಕುದುರೆಗಳು ಮುಖಕ್ಕೆ ನೆಲಕ್ಕೆ ಊರಿ ಬಿದ್ದು ಬಿಟ್ಟವು. ಉತ್ತರನೂ ಭಯವುಳ್ಳವನಾಗಿ ರಥದಲ್ಲಿ ಕೂತುಕೊಂಡುಬಿಟ್ಟನು. ತರುವಾಯ ಅರ್ಜುನನು ಕುದುರೆಗಳ ಹಗ್ಗವನ್ನು ಹಿಡಿದು ಸೆಳೆದು ಅವುಗಳನ್ನು ಎಬ್ಬಿಸಿದನು. ಶಂಖಧ್ವನಿಯಿಂದ ಭಯಪಟ್ಟಿರುವ ಗಾಂಢೀವ ಧನುಸ್ಸಿನ ಹಗ್ಗವನ್ನು ಸೆಳೆಯುವಾಗ ಆಗುವ ಶಬ್ದದಿಂದ ಮೂರ್ಛಿತನಾದ ಉತ್ತರಕುಮಾರನನ್ನು ಆಲಿಂಗಿಸಿ ಸಮಾಧಾನಪಡಿಸಿದನು. 'ರಾಜಕುಮಾರ! ಭಯಪಡಬೇಡ. ನೀನು ಕ್ಷತ್ರಿಯನಾಗಿರುವಿಯಲ್ಲಾ! ಶತ್ರುಗಳ ಮಧ್ಯದಲ್ಲಿ ಹೇಗೆ ವಿಷಾದವನ್ನು ಹೊಂದುವಿ? ಎಷ್ಟೋ ಶಂಖಶಬ್ದಗಳನ್ನೂ ನಗಾರಿಗಳ ಶಬ್ದಗಳನ್ನೂ ಆನೆಗಳು ಕೂಗುವ ಶಬ್ದಗಳನ್ನೂ ಕೇಳಿರುವಿಯಲ್ಲಾ! ಈ ಶಂಖಶಬ್ದದಿಂದ ಪಾಮರಪುರುಷನಂತೆ ಹೇಗೆ ಭಯವುಳ್ಳವನಾಗಿರುವಿ?' ಎಂದು ಹೇಳಿದನು.

ಅದಕ್ಕೆ ಉತ್ತರನು 'ನಾನು ಎಷ್ಟೋ ಶಂಖದ ಶಬ್ದಗಳನ್ನೂ ನಗಾರಿಗಳ ಶಬ್ದಗಳನ್ನೂ ಆನೆಯ ಶಬ್ದಗಳನ್ನೂ ಕೇಳಿರುವೆನು. ಆದರೆ ನಾನು ಇಂತಹ ಶಂಖ ಶಬ್ದಗಳನ್ನು ಇಷ್ಟರವರೆಗೆ ಯುದ್ಧರಂಗಲ್ಲಿ ಕೇಳಲೇ ಇಲ್ಲ. ಇಂತಹ ಧ್ವಜದ ರೂಪವನ್ನು ನೋಡಿದ್ದಿಲ್ಲ. ಈರೀತಿಯ ಧನುಸ್ಸಿನ ಶಬ್ದವನ್ನು ಕೇಳಿದ್ದಿಲ್ಲ. ಈ ಶಂಖ ಶಬ್ದದಿಂದ, ಧನುಸ್ಸಿನ ಶಬ್ದದಿಂದ, ಧ್ವಜದಲ್ಲಿ ವಾಸಿಸುವ ಭೂತಗಳ ಶಬ್ದದಿಂದಲೂ, ರಥದ ಚಕ್ರಗಳ ಶಬ್ದದಿಂದಲೂ, ನನಗೆ ಮೂರ್ಛೆಯು ಬರುವಂತೆ ಆಗುತ್ತದೆ. ದಿಕ್ಕುಗಳು ವ್ಯಾಕುಲವಾಗಿವೆ. ಎದೆಯು ನಡುಗುತ್ತಿದೆ. ಧ್ವಜದಿಂದಾಗಿ ದಿಕ್ಕುಗಳೇ ಕಾಣಿಸುವುದಿಲ್ಲ. ಗಾಂಡೀವಧನುಸ್ಸಿನ ಶಬ್ದದಿಂದ ನನ್ನ ಎರಡು ಕಿವಿಗಳೂ ಕಿವುಡಾಗಿರುವುವು' ಎಂದು ಹೇಳಿದನು. ಪುನಃ ಪುನಃ ಧ್ವಜವನ್ನು ಧನುಸ್ಸನ್ನು ಶಂಖವನ್ನು ಉತ್ತರನು ನೋಡಿದನು. ಒಂದು ಮುಹೂರ್ತವಾದ ಮೇಲೆ ಅರ್ಜುನನು ಉತ್ತರನೊಡನೆ 'ಏಕಾಂತದಲ್ಲಿ ಕಾಲನ್ನು ಊರಿಕೊಂಡು ಗಟ್ಟಿಯಾಗಿ ಕೂತುಕೊಳ್ಳು. ಗಟ್ಟಿಯಾಗಿ ಕುದುರೆಗಳ ಹಗ್ಗಗಳನ್ನು ಹಿಡಿದುಕೊ. ನಾನು ಶಂಖವನ್ನು ಪುನಃ ಊದುವೆನು' ಎಂದು ಹೇಳಿ ಗಟ್ಟಿಯಾಗಿ ಶಂಖವನ್ನು ಊದಿದನು. ಎಲ್ಲರನ್ನೂ ಮೋಹಗೊಳಿಸಿದನು. ಭಯಪಟ್ಟ ಉತ್ತರನನ್ನು ಸಮಾಧಾನಪಡಿಸಿದನು. ಶಂಖದ ಶಬ್ದದಿಂದಲೂ, ರಥದ ಚಕ್ರದ ಶಬ್ದದಿಂದಲೂ, ಗಾಂಡೀವಧನುಸ್ಸಿನ ಶಬ್ದದಿಂದಲೂ, ಭೂಮಿಯು ನಡುಗಿಹೋಯಿತು.



# ದ್ರೋಣಾಚಾರ್ಯರು ದುರ್ನಿಮಿತ್ತಗಳನ್ನು ಹೇಳಿದ್ದು [1]

ತರುವಾಯ ದ್ರೋಣಾಚಾರ್ಯರು ದುರ್ಯೋಧನನನ್ನು ನೋಡಿ 'ರಥದ ಶಬ್ದವು ಕೇಳಿಸುತ್ತಿದೆ. ಶಂಖದ ಶಬ್ದವು ಕೇಳಿಸುತ್ತಿದೆ. ಭೂಕಂಪವಾಗುತ್ತಿದೆ. ಬರುತ್ತಿರುವವನು ಅರ್ಜುನನಲ್ಲದೆ ಬೇರೊಬ್ಬನಲ್ಲ. ರಾಜನೇ ! ನಮಗೆ ಬಹಳವಾಗಿ ಅಪಶಕುನಗಳು ಆಗುತ್ತಿವೆ. ಇದರಿಂದ ನಮ್ಮ ಸೈನ್ಯದಲ್ಲಿ ಜಯವಾಗುವಂತೆ ಕಾಣಿಸುವುದಿಲ್ಲ. ಶಸ್ತ್ರಗಳು ಪ್ರಕಾಶಿಸುವುದಿಲ್ಲ. ವಾಹನಗಳು ಸಂತೋಷಪಡುವುದಿಲ್ಲ. ಎಷ್ಟು ಉರಿಸಿದರೂ ಅಗ್ನಿಗಳು ಪ್ರಕಾಶಿಸುವುದಿಲ್ಲ. ಘೋರಮೃಗಗಳು ನಮ್ಮ ಬಳಿಯಲ್ಲಿ ಸೂರ್ಯನ ಎದುರಾಗಿ ಕೂಗುತ್ತಾ ಇವೆ. ಪಕ್ಷಿಗಳು ಬಲಪಾರ್ಶ್ವಕ್ಕೆ ಬಂದು ಭಯವನ್ನು ಸೂಚನೆ ಮಾಡುತ್ತಿವೆ. ಈ ನರಿಯು ನಮ್ಮ ಸೈನ್ಯಮಧ್ಯದಲ್ಲಿ ಕೂಗುತ್ತಾ ಹೋಗುತ್ತಿದೆ. ಚಾಪ ಎಂಬ ಪಕ್ಷಿಗಳೂ ನಮಗೆ ಭಯಬರುವುದನ್ನು ಸೂಚಿಸುತ್ತಾ ಆಕಾಶದಲ್ಲಿ ಕೂಗುತ್ತಿವೆ. ನಿಮ್ಮೆಲ್ಲರ ಮೈಯಲ್ಲಿ ರೋಮಾಂಚವುಂಟಾಗಿರುವಂತೆ ಕಾಣಿಸುತ್ತಿದೆ. ಬಿಸಿಲು ಇಲ್ಲದೇ ಮೈಯೆಲ್ಲಾ ಬೆವರುತ್ತಿದೆ. ಎಲ್ಲರಿಗೂ ಪುನಃ ಪುನಃ ಆಕಳಿಕೆಯು ಬರುತ್ತಿದೆ. ಆನೆಗಳೂ ಕೂಗುತ್ತಿವೆ. ಕುದುರೆಗಳು ಕಣ್ಣೀರನ್ನು ಸುರಿಸುತ್ತಿವೆ. ಮತ್ತು ಮತ್ತು ಮಲಮೂತ್ರ ಗಳನ್ನು ವಿಸರ್ಜನೆ ಮಾಡುತ್ತಿವೆ. ಭೂಮಿಯೆಲ್ಲವೂ ಕೆಂಪಾಗಿ ಕಾಣಿಸುತ್ತಿದೆ. ದಿಕ್ಕುಗಳಲ್ಲಿ ಹೊಗೆಯು ಬರುತ್ತಿದೆ. ಸೈನಿಕರೆಲ್ಲರೂ ಭಯಪಟ್ಟಿರುವರು. ನಮ್ಮ ಸೈನ್ಯವೆಲ್ಲವೂ ಸೋತುಹೋಗಿರುವುದು ಒಬ್ಬರಿಗೂ ಯುದ್ಧ ಮಾಡುವ ಅಭಿಪ್ರಾಯ ವಿರುವಂತೆ ಇಲ್ಲ. ಎಲ್ಲಾ ಸೈನಿಕರೂ ವಿಷಾದಯುಕ್ತವಾದ ಮುಖವುಳ್ಳವರಾಗಿ ಸರಿಯಾದ ಜ್ಞಾನದಿಂದ ರಹಿತರಾಗಿ ಪುನಃ ಪುನಃ ದಕ್ಷಿಣದಿಕ್ಕನ್ನೇ ನೋಡುತ್ತಿರುವರು. ಮೃಗಗಳೂ ಪಕ್ಷಿಗಳೂ ನಮ್ಮ ಎಡಭಾಗಕ್ಕೇ ಹೋಗುತ್ತಿವೆ. ವಾದ್ಯಗಳನ್ನು ಎಷ್ಟು ಗಟ್ಟಿಯಾಗಿ ಊದಿದರೂ ಸರಿಯಾದ ಶಬ್ದವೇ ಆಗುವುದಿಲ್ಲ. ಧ್ವಜಗಳ ಮೇಲೆ ಕಾಗೆಗಳು ಬಂದು ಕೂತುಕೊಳ್ಳುತ್ತಿವೆ. ಮೇಘಧ್ವನಿಯಂತೆ ಗಂಭೀರವಾಗಿ ಬರುವ ರಥದ ಶಬ್ದವು ಕೇಳಿಸುತ್ತಿದೆ. ಬರುತ್ತಿರುವವನು ಅರ್ಜುನನಲ್ಲದೆ ಬೇರೊಬ್ಬನಲ್ಲ. ಅರ್ಜುನನನ್ನು ಹೊತ್ತುಕೊಂಡು ಬರುವ ಕುದುರೆಗಳು ಕೂಗುವ ಶಬ್ದದಂತೆಯೇ ಬರುವ ರಥದ ಕುದುರೆಗಳ ಶಬ್ದವು ಕೇಳಿಸುತ್ತಿದೆ. ರಥದಲ್ಲಿ ದಿವ್ಯವಾದ ಕಪಿಯ ಗರ್ಜನೆಯು ಕೇಳಿಸುತ್ತಿದೆ. ಅರ್ಜುನನು ಶಂಖವನ್ನು ಊದುವ ಶಬ್ದದಿಂದ ನನ್ನ ಕಿವಿಗಳು ಕಿವುಡಾದವು. ನಮ್ಮ ಸೈನ್ಯವೆಲ್ಲವೂ ಭಯಪಟ್ಟಿರುವುದು. ಬರುತ್ತಿರುವವನು

---

1. ಭಾ.ವಿ.ಪ ಅ-46

ಅರ್ಜುನನಲ್ಲದೆ ಬೇರೊಬ್ಬನಲ್ಲ. ರಾಜನನ್ನು ಮುಂದೆ ಮಾಡಿಕೊಂಡು ಗೋವುಗಳನ್ನು ಕಳುಹಿಸಿ ಸೈನ್ಯವನ್ನು ಮೂರಾಗಿ ವಿಭಾಗ ಮಾಡಿ ನಿಂತುಕೊಳ್ಳುವ. ಆದರೂ ಅರ್ಜುನನು ಬಂದು ತೀಕ್ಷ್ಣಬಾಣಗಳಿಂದ ಈ ಸೈನ್ಯವನ್ನು ಸಂತಾಪಗೊಳಿಸಿ ಎಲ್ಲಾ ರಾಜರ ತಲೆಯ ಮೇಲೆ ಎಡಪಾದವನ್ನು ಇಡುವನು. ಈ ಅರ್ಜುನನನ್ನು ದೇವಾಸುರರೂ ಜಯಿಸಲಿಕ್ಕೆ ಆಗಲಾರದು. ದಿಕ್ಕುದಿಕ್ಕುಗಳಲ್ಲಿ ಸೈನ್ಯಗಳನ್ನು ನಿಲ್ಲಿಸಿ ಯುದ್ಧವನ್ನು ಮಾಡುವ' ಎಂದು ಹೇಳಿದರು.



# ದುರ್ಯೋಧನನು ಸೈನಿಕರನ್ನು ಯುದ್ಧಕ್ಕೆ ಪ್ರೋತ್ಸಾಹಪಡಿಸಿದ್ದು [1]

ತರುವಾಯ ದುರ್ಯೋಧನನು ಭೀಷ್ಮದ್ರೋಣಕೃಪರೊಡನೆ 'ಆಚಾರ್ಯರೇ! ಈ ವಿಷಯವನ್ನು ನಾನೂ ಕರ್ಣನೂ ಅನೇಕಬಾರಿ ಹೇಳಿರುವರು.(ಹೇಳಿದ್ದೇವೆ) ಇನ್ನೂ ಹೇಳುವೆನು. ಎಷ್ಟು ಬಾರಿ ಹೇಳಿದರೂ ನನಗೆ ತೃಪ್ತಿಯಾಗುವುದಿಲ್ಲ. ಪಗಡೆ ಆಟದಲ್ಲಿ ನಾವು ಸೋತುಹೋದವರು. ಹನ್ನೆರಡುವರ್ಷಕಾಲ ವನವಾಸ ಮಾಡಬೇಕೆಂದೂ ಒಂದು ವರ್ಷಕಾಲ ಅಜ್ಞಾತವಾಸಮಾಡಬೇಕೆಂದೂ ಪ್ರತಿಜ್ಞೆಯನ್ನು ಮಾಡಿ ಕೊಂಡಿರುವೆವು. ಅವರ ಹದಿಮೂರನೇ ವರ್ಷವು ಇನ್ನೂ ಮುಗಿದಿಲ್ಲ. ಅಜ್ಞಾತ ವಾಸದ ಅವಧಿಯು ಮುಗಿಯುವ ಮೊದಲೇ ಅರ್ಜುನನು ಬಂದವನಾದರೆ ಪುನಃ ಪಾಂಡವರು ಹದಿನೆರಡು ವರ್ಷ ವನವಾಸ ಮಾಡುವರು. ಲೋಭದಿಂದ ಅವರಿಗೆ ಸಮಯವು ತಿಳಿಯಲಿಲ್ಲವೋ ಅಥವಾ ನಮಗೆ ಮೋಹವುಂಟಾಗಿರುವುದೋ ಆ ವಿಷಯವನ್ನು ಹೆಚ್ಚು ಕಡಿಮೆಯಾದದ್ದನ್ನು ತಾತಂದಿರಾದ ಭೀಷ್ಮಾಚಾರ್ಯರೇ ನೋಡಿಹೇಳಬೇಕು.

ನಾವು ಯೋಚನೆ ಮಾಡಿದ್ದು ಒಂದಾಯಿತು. ಆಗುವ ಕಾರ್ಯವು ಮತ್ತೊಂದು ಆಯಿತು. ಉತ್ತರಕುಮಾರನನ್ನು ಹುಡುಕಿಕೊಂಡು ಮಾತ್ಸ್ಯಸೇನೆಯೊಡನೆ ಯುದ್ಧಕ್ಕೆ ನಾವು ಬಂದಿರುವಾಗ ಅರ್ಜುನನು ಬಂದರೆ ನಾವು ಏನು ಮಾಡಲಿಕ್ಕೆ ಇದೆ? ಮತ್ಸ್ಯದೇಶದವರು ತ್ರಿಗರ್ತದೇಶದ ಸುಶರ್ಮನನ್ನು ತುಂಬಾ ಪೀಡಿಸಿದ್ದರು. ಭಯಪಟ್ಟಿದ್ದ ತ್ರಿಗರ್ತದೇಶದವರು ನಮ್ಮನ್ನು ಸಹಾಯ ಮಾಡಬೇಕೆಂದು ಮೊರೆ

1. ಭಾ.ವಿ.ಪ ಅ-47

ಹೊಂದಿದರು. ನಾವು ಆಗ ಅವರು ಅಷ್ಟಮೀದಿನ ಸಾಯಂಕಾಲದಲ್ಲಿ ವಿರಾಟನ ಗೋವುಗಳನ್ನು ಅಪಹರಿಸಬೇಕೆಂದೂ ನವಮೀ ದಿನದಲ್ಲಿ ಸೂರ್ಯೋಧಯ ಸಮಯದಲ್ಲಿ ಗೋವನ್ನು ಅಪಹರಿಸಬೇಕೆಂದು ಮಾತಾಡಿಕೊಂಡೆವು.

ಈಗ ತ್ರಿಗರ್ತದೇಶದವರು ಗೋವುಗಳನ್ನು ತೆಗೆದುಕೊಂಡು ಹೋಗುತ್ತಿದ್ದಾರೋ? ಅಥವಾ ಸೋತುಹೋದರೋ? ಅಥವಾ ವಿರಾಟನು ಅವರನ್ನು ಜಯಿಸಿ ಸೈನ್ಯಸಹಿತವಾಗಿ ನಮ್ಮೊಡನೆ ಯುದ್ಧಮಾಡಲಿಕ್ಕೆ ಇಚ್ಛಿಸುವನೋ? ಅವರ ಮಧ್ಯದಲ್ಲಿ ಯಾರಾದರೂ ಒಬ್ಬ ಮಹಾಪರಾಕ್ರಮಶಾಲಿಯು ನಮ್ಮನ್ನು ಜಯಿಸಲಿಕ್ಕಾಗಿ ಬಂದಿರಬಹುದು. ಅಥವಾ ವಿರಾಟರಾಜನೇ ಬಂದಿರಲೂಬಹುದು. ವಿರಾಟರಾಜನು ಬರಲಿ, ಅರ್ಜುನನೇ ಬರಲಿ ನಾವೆಲ್ಲರೂ ಸೇರಿ ಯುದ್ಧವನ್ನು ಮಾಡಬೇಕೆಂದು ಮೊದಲೇ ಮಾತಾಡಿಕೊಂಡಿರುವೆವು. ಈಗ ಅರ್ಜುನನು ಬಂದಿರುವಾಗ ಭೀಷ್ಮದ್ರೋಣ ಕೃಪ ಕರ್ಣ ವಿಕರ್ಣ ಅಶ್ವತ್ಥಾಮರೆಲ್ಲರೂ ಯಾಕೆ ಭಯವುಳ್ಳವರಾಗಿ ರಥದಲ್ಲಿ ಸುಮ್ಮನೆ ಕೂತಿರುವರು? ಯುದ್ಧಕ್ಕೆ ಹೆಚ್ಚಾದ ಶ್ರೇಯಃ ಸಾಧನವು ಮತ್ತೊಂದು ಇಲ್ಲವೆಂದು ಎಲ್ಲರೂ ಮನಸ್ಸಿಗೆ ತಂದುಕೊಳ್ಳಿರಿ. ಎಲ್ಲಾ ಜನರೂ ಯುದ್ಧಕ್ಕೆ ಬರಲಿ. ಅಥವಾ ಇಂದ್ರಾದಿದೇವತೆಗಳೇ ಯುದ್ಧಕ್ಕೆ ಬರಲಿ. ನಮ್ಮ ಧನವನ್ನು ಜಯಿಸದೆ ಯಾರು ಹಸ್ತಿನಾವತಿಗೆ ಹೋಗುವರು? ಈ ಆಚಾರ್ಯರನ್ನು ಹಿಂದೆ ಮಾಡಿ ನೀತಿಯನ್ನು ಮಾಡಬೇಕು. ಇವರ ಅಭಿಪ್ರಾಯವೆಲ್ಲವನ್ನು ನಾನು ತಿಳಿದಿರುವೆನು. ನಮ್ಮೆಲ್ಲರನ್ನು ಇವರು ಹೆದರಿಸುತ್ತಿರುವರು. ಆಚಾರ್ಯರಿಗೆ ಅರ್ಜುನನಲ್ಲಿ ಅಧಿಕವಾಗಿ ಪ್ರೀತಿಯಿರುವುದನ್ನು ತಿಳಿದಿರುವೆನು. ಆದುದರಿಂದಲೇ ಅರ್ಜುನನು ಬರುತ್ತಿರುವುದನ್ನು ನೋಡಿ ಅವನನ್ನು ಹೊಗಳುತ್ತಿರುವರು. ಇವರ ಮಾತನ್ನು ಕೇಳಿ ಸೇನೆಯು ಭಯಪಟ್ಟು ಓಡಿಹೋಗದಂತೆ ನೋಡಿಕೊಳ್ಳಬೇಕು. ಬರುತ್ತಿರುವ ರಥದ ಕುದುರೆಗಳು ಕೂಗುತ್ತಿರುವುದನ್ನು ನೋಡಿ ಹೊಗಳಲಿಕ್ಕೆ ಏನಿದೆ? ಕುದುರೆಗಳು ಎಲ್ಲಿಗೆ ಹೋಗುವಾಗಲೂ ಕೂಗುತ್ತಿರುತ್ತಿವೆ. ಯಾವಾಗಲೂ ಗಾಳಿಯು ಬೀಸುತ್ತಿರುತ್ತದೆ. ಯಾವಾಗಲೂ ಮಳೆಯು ಬರುತ್ತಿದೆ. ಮೇಘಗರ್ಜನೆಗಳೂ ಆಗಾಗ್ಗೆ ಕೇಳಿಸುತ್ತಿರುತ್ತವೆ. ಇವೆಲ್ಲವೂ ಅಪಶಕನಗಳಾಗುವುದೇ?

ಆಚಾರ್ಯರೇ! ನೀವು ಈ ಜನರೆಲ್ಲರನ್ನು ಪಾಂಡವರಿಂದ ಭಯಪಡಿಸುತ್ತಾ ಬಹು ಅಪದ್ಧ ಮಾತುಗಳನ್ನು ಹೇಳುತ್ತಿರುವಿರಿ. ಹೇಗೆ ಕುದುರೆಗಳನ್ನೇ ಹುಡುಕಿಕೊಂಡು ಹೋಗುವವರಿಗೆ ಕುದುರೆಯು ಕೂಗುವಂತೆ ಶಬ್ದವೂ ಕೇಳಿಸುವುದೋ ಹಾಗೆಯೇ ಯಾರು ಬಂದರೂ ಅರ್ಜುನನು ಬಂದಂತೆಯೇ ಕಾಣಿಸುತ್ತಿದೆ. ಪ್ರಕೃತ

ಅರ್ಜುನನಲ್ಲಿ ಏನು ಮಹತ್ವವುಂಟಾಯಿತು. ಅವನಲ್ಲಿ ಸ್ನೇಹದಿಂದಲೋ ನಮ್ಮಲ್ಲಿ ಇರುವ ದ್ವೇಷದಿಂದಲೋ ಹೊರತು ಈಗ ಅರ್ಜುನನನ್ನು ಹೊಗಳಲು ಕಾರಣವೇನಿದೆ? ಆಚಾರ್ಯರು ಮಹಾಕರುಣೆಯುಳ್ಳವರು. ಜ್ಞಾನಿಗಳು ಯಾವಾಗಲೂ ಅವರಿಗೆ ಅಪಾಯವೇ ತೋರುತ್ತಿರುವುದು. ಅವರನ್ನು ಎಷ್ಟು ಮಾತ್ರಕ್ಕೂ ಘೋರವಾದ ಯುದ್ಧದ ವಿಷಯದಲ್ಲಿ ಪ್ರಶ್ನೆ ಮಾಡಬಾರದು. ವಿಚಿತ್ರ ಮಾಳಿಗೆ ಮನೆಗಳಲ್ಲಿ ಕೂತುಕೊಂಡು ಹರಟೆಮಾತು ಪಾನಭೋಜನ ಇತ್ಯಾದಿ ವಿಷಯವಾಗಿ ವಿಚಿತ್ರವಾಗಿ ಮಾತಾಡಲಿಕ್ಕೆ ಬಹು ಪಂಡಿತರಾಗಿರುವರು. ಸಭೆಯಲ್ಲಿ ಬಹು ಆಶ್ಚರ್ಯವಾಗಿ ಮಾತಾಡುವರು. ಅಲ್ಲಿ ಯುದ್ಧದ ವಿಷಯವಾಗಿಯೂ ವಿಚಿತ್ರವಾಗಿ ಮಾತಾಡುವರು. ಇನ್ನೊಬ್ಬರ ದೋಷವನ್ನು ಕಂಡುಹಿಡಿಯುವ ವಿಷಯದಲ್ಲಿಯೂ ಅನ್ನದ ದೋಷವನ್ನು ಹೇಳಲಿಕ್ಕೂ ಪಂಡಿತರು ಬಹು ಸಮರ್ಥರಾಗಿರುವರು. ಶತ್ರುಗಳ ಗುಣವನ್ನು ಹೇಳುತ್ತಿರುವ ಇಂತಹ ಪಂಡಿತರನ್ನು ವಿಚಾರಿಸದೆ ದೂರಮಾಡಿ ನಾವು ಶತ್ರುವನ್ನು ಸಂಹರಿಸುವಂತೆ ನೀತಿಯನ್ನು ಮಾಡಬೇಕು. ಗೋವುಗಳನ್ನು ಕಳುಹಿಸಿರಿ. ಸೈನ್ಯಕ್ಕೆ ರಕ್ಷೆಯನ್ನು ಮಾಡಿಕೊಳ್ಳಿರಿ. ಸೈನ್ಯವೆಲ್ಲವೂ ವ್ಯೂಹವಾಗಿ ನಿಲ್ಲಲಿ' ಎಂದು ಹೇಳಿದನು.



# ಕರ್ಣನು ಪ್ರತಿಜ್ಞಾ ಮಾಡಿದ್ದು [1]

ಆಗ ಕರ್ಣನು ಹೇಳಿದನು. 'ಆಯುಷ್ಯವಂತರಾದ ನೀವೆಲ್ಲರೂ ಯುದ್ಧದಲ್ಲಿ ಮನಸ್ಸಿಲ್ಲದವರಾಗಿಯೂ ಭಯಪಟ್ಟವರಾಗಿಯೂ ಇರುವಂತೆ ಕಾಣಿಸುತ್ತಿದೆ. ಬರುವವನು ಪರಶುರಾಮದೇವರೇ ಆಗಲಿ. ದೇವೇಂದ್ರನಾಗಲಿ, ಕೃಷ್ಣನಿಂದ ಸಹಿತನಾಗಿ ಅರ್ಜುನನಾಗಿರಲಿ, ನಾನು ಅವನನ್ನು ತಡೆಯುವೆನು. ಅರ್ಜುನನ ಆಯುಷ್ಯವನ್ನು ಅಪಹರಿಸುವ ಬಂಗಾರದ ಪುಂಖವುಳ್ಳ ನಾನು ಬಿಟ್ಟ ಬಾಣಗಳು ಸೂರ್ಯನನ್ನು ಮರೆಮಾಡಲಿ. ಶ್ವಾಸಬಿಡುವ ಸರ್ಪಗಳಂತೆ ಇರುವ ನಾನು ಬಿಡುವ ಬಾಣಗಳು ಹಿಂದೆ ಬರುವುದೇ ಇಲ್ಲ. ಬಾಣಬಿಡುವಾಗ ನಗಾರಿಯ ಶಬ್ದದಂತೆ ಶಬ್ದವಾಗುವುದು. ನನ್ನ ಒಂದೊಂದು ಬಾಣಕ್ಕೆ ನಾಲ್ಕು ಐದು ಅರುವತ್ತು ನೂರು ಹೀಗೆ ಮತ್ಸ್ಯದೇಶದವರು ಸಾಯುವುದನ್ನು ನೋಡಿರಿ. ನಾನು ಬಿಟ್ಟ ಬಾಣಗಳಿಂದ

1. ಭಾ.ವಿ.ಪ ಅ-48

ಆಕಾಶವು ಪ್ರಕಾಶಿಸಲಿ. ಧ್ವಜದಲ್ಲಿರುವ ಕಪಿಯು ನನ್ನ ಭಲ್ಲದಿಂದ ಬಡಿಯಲ್ಪಟ್ಟು ಭಯಂಕರವಾಗಿ ಗರ್ಜನೆ ಮಾಡುತ್ತಾ ಕೆಳಗೆ ಬೀಳಲಿ ಧ್ವಜದಲ್ಲಿ ವಾಸಿಸುವ ಭೂತಗಳು ಕೂಗುತ್ತಾ ದಿಕ್ಕುದಿಕ್ಕುಗಳಿಗೆ ಓಡಿಹೋಗಲಿ. ಅವುಗಳ ಶಬ್ದವು ಸ್ವರ್ಗದವರೆಗೆ ಹೋಗಲಿ. ನಾನು ಕೋಪಿಸಿಕೊಂಡು ಅಸ್ತ್ರವನ್ನು ಬಿಟ್ಟರೆ ಅದು ಸಂಪೂರ್ಣವಾದ ಭೂಮಿಯನ್ನೇ ಸುಟ್ಟುಹಾಕುವುದು. ಹೀಗಿರುವಾಗ ಯುದ್ಧರಂಗ ದಲ್ಲಿ ನಿಂತಿರುವ ಅರ್ಜುನನೊಬ್ಬನನ್ನು ಏನು ಹೇಳಬೇಕು? ಹದಿಮೂರು ವರ್ಷ ಅರ್ಜುನನು ವಿಶ್ರಾಂತಿಯುಳ್ಳವನಾಗಿ ಈಗ ಯುದ್ಧದಲ್ಲಿ ಸ್ನೇಹವುಳ್ಳವನಾಗಿ ನನ್ನ ಹತ್ತಿರ ತನ್ನ ಸಾಮರ್ಥ್ಯವನ್ನು ತೋರಿಸಲಿಕ್ಕೆ ಬಂದಿರುವನು. ಅವನು ಗುಣವಂತನಾದ ಬ್ರಾಹ್ಮಣನಂತೆ ಸತ್ಪಾತ್ರನಾಗಿರುವನು. ನಾನು ಬಿಟ್ಟ ಬಾಣಗಳ ಮಾಲೆಯನ್ನು ಸ್ವೀಕರಿಸಲಿ. ಇವನೂ ಮೂರುಲೋಕದಲ್ಲಿ ಪ್ರಸಿದ್ಧನಾದ ಮಹಾಧನುರ್ಧಾರಿ ಯಾಗಿರುವನು. ನಾನೂ ಯಾವ ವಿಷಯದಲ್ಲಿಯೂ ಅರ್ಜುನನಿಗಿಂತ ಕಡಿಮೆ ಯಾಗಿರುವವನಲ್ಲ. ನಾನು ಬಿಡುವ ಬೆಂಕಿಯ ಜ್ವಾಲೆಯಂತೆ ಇರುವ ಬಾಣಗಳು ಹಿಂದೆ ತಿರುಗಿ ಬರಲಾರವು. ನಾನು ಬಿಡುವ ಬಾಣಗಳ ಶಬ್ದವು ಗಾಯನ ಮಾಡುವ ಭ್ರಮರಗಳ ಶಬ್ದಗಳಂತೆ ಕೇಳಿಸಲಿ. ನಾನು ಈಗ ಯುದ್ಧದಲ್ಲಿ ಅರ್ಜುನನನ್ನು ಸಂಹರಿಸಿ ದುರ್ಯೋಧನನ ಋಣವನ್ನು ಪರಿಹರಿಸಿಕೊಳ್ಳುವೆನು. ಬೆಂಕಿ ಕೊಳ್ಳಿಗಳಿಂದ ಆನೆಗಳನ್ನು ಪೀಡಿಸುವಂತೆ ಬಾಣಗಳಿಂದ ಅರ್ಜುನನನ್ನು ಪೀಡಿಸುವೆನು. ಅರ್ಜುನನನ್ನು ಪರವಶನಾಗುವಂತೆ ಮಾಡುವೆನು. ನಾನು ಬಿಡುವ ಚಿಕ್ಕಚಿಕ್ಕ ಭಲ್ಲಗಳಿಂದ ಅರ್ಜುನನಿಗೆ ಏನು ಮಾಡಬೇಕೆಂದು ತೋರದೆ ಹೋಗಲಿ. ನಾನು ದುರ್ಯೋಧನನ ಹೃದಯದಲ್ಲಿ ಇರುವ ಶೋಕವನ್ನು ಬೇರುಸಹಿತವಾಗಿ ಕಿತ್ತುಹಾಕಿಬಿಡುವೆನು. ನಾನು ಬಿಟ್ಟ ಬಾಣಗಳಿಂದ ಈಗ ಕುದುರೆಯು ಸತ್ತುಹೋಗಿ ರಥವು ಪುಡಿಯಾಗಿ ಹಾವಿನಂತೆ ಶ್ವಾಸಬಿಡುತ್ತಿರುವ ಅರ್ಜುನನನ್ನು ಜನರೆಲ್ಲರೂ ನೋಡಲಿ. ನಾನು ಪರಶುರಾಮದೇವರಿಂದ ಪಡೆದ ಅಸ್ತ್ರದ ಬಲದಿಂದ ಇಂದ್ರದೇವರೊಡನೆಯೂ ಯುದ್ಧ ಮಾಡುವೆನು. ಕೌರವರೆಲ್ಲರೂ ಗೋವುಗಳನ್ನು ಹಿಡಿದುಕೊಂಡು ಇಚ್ಛಾನುಸಾರವಾಗಿ ಹೋಗಿರಿ. ಅಥವಾ ರಥಗಳಲ್ಲಿ ಕೂತು ಕೊಂಡು ನಾನು ಯುದ್ಧ ಮಾಡುತ್ತಿರುವುದನ್ನು ನೋಡುತ್ತಾ ಇರಿ' ಎಂದು ಹೇಳಿದನು.



# ಕೃಪಾಚಾರ್ಯರು ಕರ್ಣನನ್ನು ನಿಂದಿಸಿದ್ದು [1]

ಕರ್ಣನ ಮಾತುಗಳನ್ನು ಕೇಳಿ ನೀತಿಶಾಸ್ತ್ರವಿಶಾರದರಾದ ಕೃಪಾಚಾರ್ಯರು 'ರಾಧೇಯ! ನಿನಗೆ ಯಾವಾಗಲೂ ಯುದ್ಧದಲ್ಲಿಯೇ ಅತಿಕ್ರೂರವಾದ ಬುದ್ಧಿಯಿರುವುದು. ಸಂದರ್ಭವನ್ನು ನೋಡುವುದಿಲ್ಲ, ವಸ್ತು ಸ್ವಭಾವವನ್ನು ನೋಡುವುದಿಲ್ಲ, ಶಾಸ್ತ್ರಗಳಲ್ಲಿ ಅನೇಕ ಉಪಾಯಗಳನ್ನು ವಿಚಾರಮಾಡಿರುವರು. ಅವುಗಳಲ್ಲಿ ಯುದ್ಧವು ಬಹಳ ಪಾಪಿಷ್ಠವಾದದ್ದೆಂದು ಪೂರ್ವಿಕರು ಹೇಳುತ್ತಿರುವರು. ಸರಿಯಾದ ದೇಶಕಾಲಗಳಲ್ಲಿ ಮಾಡುವ ಯುದ್ಧವು ಜಯಕ್ಕೆ ಕಾರಣವಾಗುವುದು. ದೇಶಕಾಲಗಳನ್ನು ತಪ್ಪಿ ಮಾಡುವ ಯುದ್ಧವು ಪರಾಜಯಕ್ಕೆ ಕಾರಣವಾಗುವುದು. ರಥಮಾಡಿಕೊಟ್ಟವನು ಈ ರಥವು ಬಹುಶ್ರೇಷ್ಠವಾದದ್ದು. ಇದರಲ್ಲಿ ಕೂತುಕೊಂಡು ಯುದ್ಧಮಾಡಿದರೆ ದೇವತೆಗಳನ್ನು ಜಯಿಸಬಹುದು ಎಂದು ಹೇಳಿದರೂ ಯುದ್ಧಮಾಡುವವರು ಅವನ ಮಾತನ್ನೇ ನಂಬದೆ ದೇಶಕಾಲ ತಮ್ಮ ಸಾಮರ್ಥ್ಯಗಳನ್ನು ನೋಡಿಕೊಳ್ಳದೆ ಯುದ್ಧಮಾಡಲಾರರೋ ಆರೀತಿಯಾಗಿ ಬರೇ ನಿನ್ನ ಮಾತನ್ನೇ ನಂಬಿ ಈಗ ಯುದ್ಧವನ್ನು ಮಾಡಲಿಕ್ಕೆ ಆಗಲಾರದು. ನಾವೆಲ್ಲರೂ ಯೋಚನೆ ಮಾಡಿಕೊಂಡು ಅರ್ಜುನನೊಡನೆ ಯುದ್ಧ ಮಾಡುವುದು ಉಚಿತವಾದದ್ದು. ಅರ್ಜುನನು ಒಬ್ಬನೇ ಯುದ್ಧದಲ್ಲಿ ಶತ್ರುಗಳನ್ನು ಜಯಿಸಲಿಕ್ಕೆ ಸಮರ್ಥನು. ಯಾಕೆಂದರೆ ಅವನು ಒಬ್ಬನೇ ಕೌರವರನ್ನು ರಕ್ಷಿಸಿದನು. ಖಾಂಡವವನದಲ್ಲಿ ಅಗ್ನಿಯನ್ನು ಸಂತೋಷಪಡಿಸಿದನು. ಒಬ್ಬನೇ ಐದು ವರ್ಷ ಬ್ರಹ್ಮಚರ್ಯವನ್ನು ಧರಿಸಿ ಇಂದ್ರದೇವರಿಂದ ವಿದ್ಯಾಭ್ಯಾಸ ಮಾಡಿದನು. ಒಬ್ಬನೇ ಸುಭದ್ರೆಯನ್ನು ಮದುವೆ ಮಾಡಿಕೊಂಡು ಬಂದನು. ಒಬ್ಬನೇ ಶತ್ರುಗಳನ್ನು ಜಯಿಸಿ ಕೌರವರಿಗೆ ಕೀರ್ತಿಯನ್ನು ಉಂಟುಮಾಡಿದನು. ಒಬ್ಬನೇ ಗಂಧರ್ವರಾಜನಾದ ಚಿತ್ರಸೇನನನ್ನು ಅವನ ಪರಿವಾರದವರನ್ನು ಜಯಿಸಿದನು. ಒಬ್ಬನೇ ಸ್ವಯಂವರದಲ್ಲಿ ಕ್ಷತ್ರಿಯರನ್ನು ಜಯಿಸಿ ದ್ರೌಪದಿಯನ್ನು ಮದುವೆಯಾದನು. ಆಗ ನೀನು ಎಲ್ಲಿಗೆ ಹೋಗಿದ್ದಿ? ಹಾಗೆಯೇ ಅವನು ಒಬ್ಬನೇ ದೇವತೆಗಳಿಂದಲೂ ಅವಧ್ಯರಾದ ನಿವಾತಕವಚ ಕಾಲಕೇಯ ಎಂಬ ದಾನವರನ್ನು ಯುದ್ಧದಲ್ಲಿ ಸಂಹರಿಸಿರುವನು. ಕರ್ಣ! ಹಾಗೆ ನೀನು ಒಬ್ಬನಾಗಿ ಯಾವ ಮಹಾಕಾರ್ಯವನ್ನು ಮಾಡಿರುವಿ? ಹೇಳು. ಇಂದ್ರದೇವರೂ ಕೂಡ ಅರ್ಜುನನೊಡನೆ ಯುದ್ಧಮಾಡಲಿಕ್ಕೆ ಆಗಲಾರದು. ಯಾರು ಅರ್ಜುನನೊಡನೆ ಯುದ್ಧಮಾಡಲು ಅಪೇಕ್ಷಿಸುವನೋ ಅವನಿಗೆ

1. ಭಾ.ವಿ.ಪ ಅ-49

ಔಷಧವನ್ನು ಮಾಡಬೇಕು. ಕರ್ಣನೇ! ಅರ್ಜುನನೊಡನೆ ಯುದ್ಧಮಾಡಲು ಬಯಸುವ ನೀನು ಕೋಪಿಸಿಕೊಂಡು ಬಂದಿರುವ ಸರ್ಪದ ಬಾಯಿಯೊಳಗೆ ಬೆರಳನ್ನು ಹಾಕಿ ಅದರ ಹಲ್ಲನ್ನು ಕೀಳಲಿಕ್ಕೆ ಇಚ್ಛಿಸುವವನಂತೆ ಇರುವಿ. ಅಥವಾ ಕಾಡಿನಲ್ಲಿ ಸಂಚರಿಸುತ್ತಿರುವ ಮದಭರಿತವಾದ ಆನೆಯ ಮೇಲೆ ಕೈಯಲ್ಲಿ ಅಂಕುಶವಿಲ್ಲದೆ ಕೂತುಕೊಂಡು ಊರಿಗೆ ಹೋಗಬೇಕೆಂದು ಇಚ್ಛಿಸುವವನಂತೆ ಇರುವಿ. ಮೈಯೆಲ್ಲಾ ತುಪ್ಪವನ್ನು ಹಚ್ಚಿಕೊಂಡು ನಾರುವಸ್ತ್ರವನ್ನು ಉಟ್ಟುಕೊಂಡವನಾಗಿ ತುಪ್ಪಮೇದಸ್ಸುಗಳಿಂದ ಉರಿಯುತ್ತಿರುವ ಬೆಂಕಿಯ ಮಧ್ಯದಲ್ಲಿ ಹೋಗಲಿಕ್ಕೆ ಇಚ್ಛಿಸುವಿ. ಕುತ್ತಿಗೆಗೆ ದೊಡ್ಡ ಕಲ್ಲನ್ನು ಕಟ್ಟಿಕೊಂಡು ಸಮುದ್ರದಲ್ಲಿ ಬಾಹುಗಳಿಂದ ಈಸಿಕೊಂಡು ಹೋಗುವೆನೆಂದು ಹೋದರೆ ಆಗ ಏನು ಪೌರುಷವು ನಡೆಯುವುದು? ಹದಿಮೂರು ವರ್ಷ ಅರ್ಜುನನು ನಮ್ಮಿಂದ ತಿರಸ್ಕೃತನಾಗಿರುವನು. ಈಗ ಅವನು ಹಗ್ಗದಿಂದ ತಪ್ಪಿಸಿಕೊಂಡು ಬಂದ ಸಿಂಹದಂತೆ ನಮ್ಮನ್ನು ಒಬ್ಬರನ್ನು ಉಳಿಸಲಾರನು. ಬಾವಿಯಲ್ಲಿ ಮರೆಯಾಗಿರುವ ಬೆಂಕಿಯಂತೆ ಎಲ್ಲಿಯೋ ಮರೆಯಾಗಿದ್ದ ಅರ್ಜುನನನ್ನು ಅಜ್ಞಾನದಿಂದ ಹೊಂದಿರುವ ನಮಗೆ ಮಹಾಭಯವು ಸಮೀಪಿಸಿರುವುದು. ದೊಡ್ಡ ಹತ್ತಿಯರಾಶಿಯಲ್ಲಿ ಬಿದ್ದಿರುವ ಬೆಂಕಿಯನ್ನು ಒಬ್ಬನು ಹೋಗಿ ಹೇಗೆ ಆರಿಸುವುದು? ಆದುದರಿಂದ ನಾವೆಲ್ಲರೂ ಸೇರಿಕೊಂಡು ಯುದ್ಧವನ್ನು ಮಾಡುವ ದ್ರೋಣಾಚಾರ್ಯರು ದುರ್ಯೋಧನನೂ ಭೀಷ್ಮಾಚಾರ್ಯರೂ ನೀನೂ ಅಶ್ವತ್ಥಾಮನೂ ನಾನೂ ಒಟ್ಟಿಗೆ ಆರು ಜನರು ರಥಿಕರು ಒಟ್ಟಿಗೆ ಸೇರಿ ಯುದ್ಧವನ್ನು ಮಾಡುವ ಕರ್ಣ! ಸಾಹಸಕಾರ್ಯವನ್ನು ಮಾಡಬೇಡ. ನಾವು ಆರು ಜನರು ಒಟ್ಟಿಗೆ ಸೇರದೆ ಅರ್ಜುನನನ್ನು ಜಯಿಸಲಿಕ್ಕೆ ಆಗಲಾರದು. ಒಟ್ಟಿಗೆ ಸೇರಿದರೆ ನಾವು ಜಯಿಸುವೆವು' ಎಂದು ಹೇಳಿದರು.



## ಕರ್ಣನು ಕೃಪಾಚಾರ್ಯರನ್ನು ನಿಂದಿಸಿದ್ದು [1]

ಕೃಪಾಚಾರ್ಯರು ಹೇಳಿದ ಮಾತನ್ನು ಕೇಳಿ ಕರ್ಣನು ಕೋಪಿಸಿಕೊಂಡವನಾಗಿ ಬ್ರಾಹ್ಮಣರಾದ ಕೃಪಾಚಾರ್ಯರನ್ನು ನಿಂದಿಸಿ ಪುನಃ ಹೇಳಿದನು— 'ಆಚಾರ್ಯರು ಭಯದಿಂದ ಶತ್ರುವಿನಲ್ಲಿ ಭಕ್ತಿಯನ್ನು ಹೊಂದಿರುವಂತೆ ಕಾಣಿಸುತ್ತದೆ. ಅಂಜಿಕೆಯುಳ್ಳ ನೀನು ಯುದ್ಧಮಾಡಬೇಕಾಗಿಲ್ಲ. ನಾನು ಅರ್ಜುನನೊಡನೆ ಯುದ್ಧವನ್ನು ಮಾಡು

1. ಭಾ.ವಿ.ಪ ಅ-48

ವೆನು. ಬಲಹೀನನಾದ ನಿನಗೆ ನೀನು ಅಭ್ಯಾಸಮಾಡಿರುವ ವಾರುಣ ಆಗ್ನೇಯ ಯಾಮ್ಯ ವಾಯುವ್ಯ ಬ್ರಹ್ಮಶಿರ ಎಂಬ ಅಸ್ತ್ರಗಳೆಲ್ಲವೂ ವ್ಯರ್ಥವಾಗಿರುವುವು. ತಂದೆಮಕ್ಕಳು ನೀನು ಎಲ್ಲರೂ ಸರಿಯಾಗಿ ಮಿತ್ರಕಾರ್ಯವನ್ನು ಮಾಡಿದಿರಿ. ದುರ್ಯೋಧನನ ಮನೆಯ ಪಿಂಡವನ್ನು ತಿಂದದ್ದಕ್ಕೆ ಸರಿಯಾಗಿ ಪ್ರತ್ಯುಪಕಾರ ಮಾಡಿರಿ. ಇನ್ನು ಇಚ್ಛಾನುಸಾರವಾಗಿ ನೀವು ಎಲ್ಲಿಗೆ ಬೇಕಾದರೂ ಹೊರಟು ಹೋಗಬಹುದು. ನೀನು ಹೋಗಿ ಭಿಕ್ಷೆಯನ್ನು ಬೇಡು. ಯಾಗಗಳು ನಡೆಯುವಲ್ಲಿಗೆ ಹೋಗು. ಬ್ರಾಹ್ಮಣಾರ್ಥವನ್ನು ಭೋಜನ ಮಾಡು. ನಮ್ಮನ್ನೆಲ್ಲರನ್ನೂ ಯುದ್ಧದಲ್ಲಿ ಭಯಪಡಿಸಬೇಡ. ನಾನು ಭಾರ್ಗವಾಸ್ತ್ರವನ್ನು ಬಿಟ್ಟೆನಾದರೆ ಭೂಮಿಯನ್ನೇ ಸುಟ್ಟುಹಾಕುವುದು. ಹೀಗಿರುವಾಗ ಪಾಂಡವರಲ್ಲಿ ಒಬ್ಬನಾದ ಅರ್ಜುನನನ್ನು ಸಂಹರಿಸುವುದು. ಏನು ಅತಿಶಯವು? ಪಾಂಡವರನ್ನು ಆಶ್ರಯಿಸಿಕೊಂಡು ಮತ್ಸ್ಯದೇಶದವರೆಲ್ಲರೂ ಯುದ್ಧಕ್ಕೆ ಬರಲಿ. ನಾನು ಅವರೆಲ್ಲರನ್ನೂ ಕೊಲ್ಲುತ್ತೇನೆ. ನೀನು ಮನೆಗೆ ಹೋಗಬಹುದು. ಶತ್ರುಗಳಲ್ಲಿ ಸ್ನೇಹದಿಂದ ಮಾತಾಡುವ ವೇದಓದಿಕೊಂಡವರಿಗೆ ಇಲ್ಲಿ ಏನು ಕಾರ್ಯವಿದೆ?' ಎಂದು ಹೇಳಿದನು.



# ಅಶ್ವತ್ಥಾಮಾಚಾರ್ಯರು ಕರ್ಣ ದುರ್ಯೋಧನರನ್ನು ನಿಂದಿಸಿದ್ದು [1]

ಕರ್ಣನ ಮಾತನ್ನು ಕೇಳಿ ಪ್ರತಾಪಶಾಲಿಯಾದ ಅಶ್ವತ್ಥಾಮಾಚಾರ್ಯರು ದುರ್ಯೋಧನನನ್ನು ನೋಡಿ 'ಕರ್ಣ! ಇನ್ನು ಗೋವುಗಳನ್ನು ಜಯಿಸಲಿಲ್ಲ, ವಿರಾಟನಗರದ ಎಲ್ಲೆಯನ್ನು ದಾಟಿಹೋಗಲಿಲ್ಲ, ಹಸ್ತಿನಾವತಿಗೆ ಬಂದು ಸೇರಲಿಲ್ಲ, ಅಷ್ಟರಲ್ಲಿಯೇ ಇಷ್ಟು ಜಂಭವನ್ನು ಕೊಚ್ಚಿಕೊಳ್ಳುತ್ತಿರುವಿಯಲ್ಲಾ! ಬ್ರಾಹ್ಮಣಶ್ರೇಷ್ಠರು ಬಹಳ ಧರ್ಮಶಾಸ್ತ್ರಗಳನ್ನು ಹೇಳುತ್ತಿರುವುದು. ಕಪಟದ್ಯೂತದಲ್ಲಿ ರಾಜನನ್ನು ಜಯಿಸಬೇಕೆಂದು ಯಾವ ಧರ್ಮಶಾಸ್ತ್ರದಲ್ಲಿ ಹೇಳಿರುತ್ತದೆ? ಬಹಳ ಯುದ್ಧಗಳನ್ನು ಮಾಡಿ ಬಹಳ ಧನವನ್ನು ಹೊಂದಿ ಸಂಪೂರ್ಣ ಭೂಮಿಯನ್ನು ಜಯಿಸಿದ ರಾಜರೂ ನೀನು ಹೊಗಳಿಕೊಂಡಷ್ಟು ಹೊಗಳಿಕೊಳ್ಳುವುದಿಲ್ಲ. ಅಗ್ನಿಯು ತನ್ನನ್ನು ಹೊಗಳಿಕೊಳ್ಳದೆ ಸುಡುತ್ತಿರುವುದು. ಸೂರ್ಯನೂ ತನ್ನನ್ನು ಹೊಗಳಿಕೊಳ್ಳದೆ

1. ಭಾ.ವಿ.ಪ ಅ-50

ಬೆಳಕನ್ನು ಉಂಟುಮಾಡುತ್ತಿರುವನು. ಭೂಮಿಯೂ ಮಾತಾಡದೆ ಚರಾಚರ ಪ್ರಾಣಿಗಳನ್ನು ಧರಿಸಿಕೊಂಡು ಇರುವುದು. ನಾಲ್ಕುವರ್ಣದವರೂ(ರಿಗೆ) ಹಣವನ್ನು ಸಂಪಾದಿಸುವ ಉಪಾಯಗಳನ್ನು ಹೇಳಿರುವರು. ಹಾಗೆ ಸಂಪಾದಿಸಿದರೆ ದೋಷವುಂಟಾಗಲಾರದು. ಬ್ರಾಹ್ಮಣನು ವೇದಗಳ ಅಧ್ಯಯನಮಾಡಿ ಯಜ್ಞವನ್ನು ಮಾಡಬೇಕು ಅಥವಾ ಇನ್ನೊಬ್ಬರಿಂದ ಮಾಡಿಸಬೇಕು. ಕ್ಷತ್ರಿಯನು ಹಣವನ್ನು ಸಂಪಾದಿಸಿ ಯಜ್ಞವನ್ನು ತಾನು ಮಾಡಬೇಕು. ಇನ್ನೊಬ್ಬರಿಗೆ ಮಾಡಿಸಬಾರದು. ವೈಶ್ಯನು ಹಣವನ್ನು ಸಂಪಾದಿಸಿ ವ್ಯಾಪಾರವನ್ನು ಮಾಡಬೇಕು. ಶೂದ್ರನು ಮೂರು ಜಾತಿಯವರ ಸೇವೆಯನ್ನು ಮಾಡಬೇಕು. ಈ ಸೂತಜಾತಿಯು ಯಾವ ಜಾತಿಯಲ್ಲಿ ಸೇರಿದ್ದು. ಈ ಜಾತಿಗೆ(ಯಾವ) ಏನು (ಮಂತ್ರ)ಮಾತ್ರಗಳಿವೆ? ಯಾವ ಸತ್ಕರ್ಮಗಳು ಇವೆ? ರಾಜನೊಡನೆ ಸಂಭಾಷಣೆ ಭೋಜನ ಇತ್ಯಾದಿಗಳನ್ನು ಮಾಡಲಿಕ್ಕೆ ಇದೆ. ವರ್ಣ ಗಳಲ್ಲಿ ಯಾವುದರಲ್ಲಿ ಸೇರಿದೆ?' ಎಂದು ಹೇಳಿದವರಾಗಿ ದುರ್ಯೋಧನನ್ನೂ ಕರ್ಣನನ್ನು ನೋಡಿ ಕುರುಸಭೆಯಲ್ಲಿ ಅತ್ಯಂತ ಕೋಪವುಳ್ಳವನಾಗಿ ದುರ್ಯೋಧನನನ್ನು ಅತ್ಯಂತ ಬೆದರಿಸಿದರು.

'ಪಗಡೆ ಆಟದಿಂದ ರಾಜ್ಯವನ್ನು ಅಪಹರಿಸಿದ ಯಾವ ರಾಜನು ಸ್ತೋತ್ರಕ್ಕೆ ಅರ್ಹನಾಗುವನು? ಹಾಗೆ ಮಾಡಿದವನು ಈ ಕ್ರೂರವಾದ ದಯಾಹೀನನಾದ ದುರ್ಯೋಧನನು. ಬೇಡ ಜಾತಿಯವನು ಹಿಂಸೆಯಿಂದ ಹಣಸಂಪಾದಿಸುವಂತೆ ಕಪಟದಿಂದ ರಾಜ್ಯವನ್ನು ಹೊಂದಿದ ಯಾವಾತನು ಹೊಗಳಿಕೊಳ್ಳುವನು? ದುರ್ಯೋಧನ! ನೀನು ಯಾವ ದ್ವಂದ್ವ ಯುದ್ಧದಲ್ಲಿ ಅರ್ಜುನನನ್ನು ಜಯಿಸಿರುವಿ? ನಕುಲನನ್ನೋ ಸಹದೇವನನ್ನೋ ಜಯಿಸಿರುವಿ. ಅವರ ಹಣವನ್ನು ಅಪಹರಿಸಿರುವಿ ಯಲ್ಲಾ! ಯಾವ ಯುದ್ಧದಲ್ಲಿ ಧರ್ಮರಾಜನನ್ನು ಜಯಿಸಿದಿ? ಯಾವ ಯುದ್ಧದಲ್ಲಿ ಆ ಬಲಿಷ್ಠರಲ್ಲಿ ಶ್ರೇಷ್ಠರಾದ ಭೀಮಸೇನದೇವರನ್ನು ಜಯಿಸಿರುವಿ? ಯಾವ ಯುದ್ಧದಲ್ಲಿ ದ್ರೌಪದೀದೇವಿಯನ್ನು ಜಯಿಸಿರುವಿ? ನೀಚಕರ್ಮವುಳ್ಳವನೇ! ಏಕವಸ್ತ್ರವುಳ್ಳ ರಜಸ್ವಲೆಯಾದ ಆ ದೇವಿಯನ್ನು ಸಭೆಗೆ ಕರೆಸಿದಿಯಲ್ಲಾ! ಕಪಟದ್ಯೂತವನ್ನು ಆಡಿದ ಈ ದುರ್ಯೋಧನನು ಮಹತ್ತಾದ ಧರ್ಮದ ಮೂಲವನ್ನೇ ಕಿತ್ತುಹಾಕಿದನು. ಆಗ ವಿದುರನು ಈ ದ್ಯೂತವು ನಾಶಕ್ಕೆ ಮೂಲವೆಂದು ಹೇಳಲಿಲ್ಲವೇ? ಮನುಷ್ಯರಿಗೂ ಇತರ ಪ್ರಾಣಿಗಳಿಗೂ ತಮ್ಮ ಶಕ್ತಿಯನ್ನು ಅನುಸರಿಸಿ ಕೋಪವಿರುವುದನ್ನು ನೋಡಿರುವೆವು. ಆದುದರಿಂದ ಪಗಡೆ ಆಟದ ಸಭೆಯಲ್ಲಿ ದ್ರೌಪದೀದೇವಿಗೆ ಪಡಿಸಿದ ಕ್ಲೇಶವನ್ನು ಅರ್ಜುನನು ಸಹಿಸಲಾರೆನು. ಧೃತರಾಷ್ಟ್ರನ ಮಕ್ಕಳನ್ನು ಕೊಂದು

ಹಾಕಲಿಕ್ಕೆಯೇ ಈಗ ಅರ್ಜುನನು ಬರುತ್ತಿರುವನು. ನೀನು ಪಂಡಿತನಾಗಿ ಆಚಾರ್ಯರನ್ನು ಆಕ್ಷೇಪಿಸುವಿ? ಅರ್ಜುನನು ವೈರದ ಕೊನೆಯಲ್ಲಿ ಮಾಡುವನು. ನಮ್ಮನ್ನು ಉಳಿಸಲಾರನು. ಈಗ ದೇವತೆಗಳಾಗಲೀ ಗಂಧರ್ವರಾಗಲೀ ಅಸುರರಾಗಲೀ ರಾಕ್ಷಸರಾಗಲೀ ಅಂಜಿಕೆಯಿಂದ ಅರ್ಜುನನೊಡನೆ ಯುದ್ಧವನ್ನು ಮಾಡಲಾರರು. ಅವನೊಬ್ಬನೇ ಕೋಪಿಸಿಕೊಂಡು ಯುದ್ಧದಲ್ಲಿ ಪ್ರತಿಯೊಬ್ಬನನ್ನು ಕೊಂದು ಹಾಕುವನು. ಪರಾಕ್ರಮದಿಂದ ನಿನಗಿಂತ ಅಧಿಕವಾಗಿರುವ ಧನುರ್ವಿದ್ಯೆ ಯಲ್ಲಿ ಇಂದ್ರನಿಗೆ ಸಮಾನನಾದ ಯುದ್ಧದಿಂದ ಸ್ವಲ್ಪ ಕೃಷ್ಣನಂತೆ ಇರುವ ಅರ್ಜುನನನ್ನು ಯಾರು ಪೂಜಿಸಲಾರರು? ಯಾವಾತನು ದೇವತೆಯೊಡನೆ ದೇವತಾಸಾಮರ್ಥ್ಯದಿಂದ ಯುದ್ಧ ಮಾಡುವನೋ, ಮನುಷ್ಯನೊಡನೆ ಮನುಷ್ಯ ಸಾಮರ್ಥ್ಯದಿಂದ ಯುದ್ಧ ಮಾಡುವನೋ, ಅಸ್ತ್ರವನ್ನು ಪ್ರತಿಅಸ್ತ್ರದಿಂದ ನಾಶ ಮಾಡುವನೋ, ಆ ಅರ್ಜುನನಿಗೆ ಸಮಾನನಾದ ಪುರುಷನು ಯಾರು ಇರುವನು?

ಶಿಷ್ಯನು ಮಗನಿಗಿಂತ ಕಡಿಮೆಯಿಲ್ಲವೆಂದು ಧರ್ಮಜ್ಞಾನಿಗಳು ತಿಳಿದಿರುವರು. ಆದುದರಿಂದಲೂ ದ್ರೋಣಾಚಾರ್ಯರಿಗೆ ಅರ್ಜುನನು ಪ್ರಿಯನಾಗಿರುವನು. ನೀನು ಹೇಗೆ ಪಗಡೆ ಆಟವನ್ನು ಆಡಿಸಿದೆಯೋ, ಇಂದ್ರಪ್ರಸ್ಥವನ್ನು ಅಪಹರಿಸಿದೆಯೋ, ದ್ರೌಪದೀ ದೇವಿಯನ್ನು ಸಭೆಗೆ ಕರೆಸಿದಿಯೋ, ಹಾಗೆಯೇ ಅರ್ಜುನನೊಡನೆ ಯುದ್ಧವನ್ನು ಮಾಡು. ಈ ನಿನ್ನ ಸೋದರಮಾವನಾದ ಪಂಡಿತನಾದ ಕ್ಷತ್ರಧರ್ಮ ವನ್ನು ತಿಳಿದವನಾದ ಕಪಟದ್ಯೂತವನ್ನು ಆಡಿದವನಾದ ಗಾಂಧಾರದೇಶದವನಾದ ಶಕುನಿಯು ಯುದ್ಧಮಾಡಲಿ. ಗಾಂಡೀವಧನುಸ್ಸು ಪಗಡೆಕಾಳನ್ನು ಬಿಡುವುದಲ್ಲ, ಕೃತ ದ್ವಾಪರ ಇತ್ಯಾದಿ ಹೆಸರುಳ್ಳ ಪಾಶಗಳನ್ನು ಬಿಡುವುದಲ್ಲ, ಜ್ವಲಿಸುವ ತೀಕ್ಷ್ಣಗಳಾದ ಬಾಣಗಳನ್ನು ಬಿಡುವುದು. ಗಾಂಡೀವಧನುಸ್ಸಿನಿಂದ ಬಿಡಲ್ಪಟ್ಟ ಹದ್ದುಪಕ್ಷಿಯ ರೆಕ್ಕೆಗಳುಳ್ಳ ಬೆಟ್ಟಗಳನ್ನು ಸೀಳಿಹಾಕುವ ಬಾಣಗಳು ಮಧ್ಯದಲ್ಲಿ ನಿಲ್ಲುವುದಿಲ್ಲ. ಯಮನೋ ವಾಯುವೋ ಮೃತ್ಯುವೋ ವಡವಾ ಮುಖ ಅಗ್ನಿಯೋ ಸ್ವಲ್ಪವಾದರೂ ಉಳಿಸುವರು. ಕೋಪಿಸಿಕೊಂಡು ಬಂದ ಅರ್ಜುನನು ಮಾತ್ರ ಸ್ವಲ್ಪವನ್ನೂ ಉಳಿಸಲಾರನು. ಸಭೆಯಲ್ಲಿ ಮಾವನಿಂದ ಸಹಿತನಾಗಿ ಕಪಟದ್ಯೂತವನ್ನು ಆಡಿದಿಯೋ ಹಾಗೆಯೇ ಶಕುನಿಯಿಂದ ರಕ್ಷಿತನಾಗಿ ಯುದ್ಧರಂಗದಲ್ಲಿ ಯುದ್ಧವನ್ನು ಮಾಡು. ಆಚಾರ್ಯರು ಬೇಕಾದರೆ ಯುದ್ಧಮಾಡಲಿ. ನಾನು ಅರ್ಜುನನೊಡನೆ ಯುದ್ಧಮಾಡಲಾರೆನು. ವಿರಾಟರಾಜನು ಗೋವುಗಳನ್ನು ಬಿಡಿಸಿಕೊಂಡು ಹೋಗಲಿಕ್ಕೆ ಬಂದರೆ ಮಾತ್ರ ನಾವು ಯುದ್ಧ ಮಾಡುವೆವು' ಎಂದು ಹೇಳಿದರು.



# ಭೀಷ್ಮಾಚಾರ್ಯರು ಸಮಾಧಾನಪಡಿಸಿದ್ದು [1]

ತರುವಾಯ ಭೀಷ್ಮಾಚಾರ್ಯರು ಕುರುಸಭೆಯಲ್ಲಿ ದುರ್ಯೋಧನನೊಡನೆ ಧರ್ಮಾರ್ಥಯುಕ್ತವಾದ ಹಿತಕರವಾದ ಮಾತನ್ನು ಆಡಿದರು. 'ದ್ರೋಣಾಚಾರ್ಯರು ಸರಿಯಾಗಿ ತಿಳಿದಿರುವರು. ಕೃಪಾಚಾರ್ಯರು ಸರಿಯಾಗಿ ತಿಳಿದವರಾಗಿರುವರು. ಕರ್ಣನು ಕೇವಲ ಕ್ಷತ್ರಿಯ ಧರ್ಮದಿಂದ ಯುದ್ಧಮಾಡಲಿಕ್ಕೆ ಇಚ್ಛಿಸುವನು. ತಿಳಿದ ಪುರುಷನು ಆಚಾರ್ಯರನ್ನು ಅವಮಾನಮಾಡಬಾರದು. ದೇಶಕಾಲಗಳನ್ನು ನೋಡಿಕೊಂಡು ಯುದ್ಧಮಾಡಬೇಕೆಂದು ನನ್ನ ಅಭಿಪ್ರಾಯವು. ಯಾರಿಗೆ ಸೂರ್ಯನಂತೆ ಇರುವ ಐದು ಜನರು ಶತ್ರುಗಳು ಯುದ್ಧಕ್ಕೆ ಸಿದ್ಧರಾಗಿರುವರೋ ಅಂತಹ ಶತ್ರುಗಳ ಅಭ್ಯುದಯಸಮಯದಲ್ಲಿ ಪಂಡಿತನಿಗೂ ಯಾಕೆ ಮೋಹವುಂಟಾಗಲಾರದು? ಧರ್ಮವನ್ನು ತಿಳಿದ ಜನರೂ ಕೂಡ ತಮ್ಮ ಕಾರ್ಯವನ್ನು ಮಾತ್ರ ಸರಿಯಾಗಿ ತಿಳಿಯುವುದಿಲ್ಲ. ಆದುದರಿಂದ ರಾಜನು ಸರಿಯಾದ ವಿಷಯವನ್ನು ತಿಳಿಯುವುದಿಲ್ಲ. ದುರ್ಬುದ್ಧಿಯುಳ್ಳ ದುರ್ಯೋಧನನು ಬರುತ್ತಿರುವ ಅರ್ಜುನನನ್ನು ನೋಡಿದರೂ ಕ್ರೋಧವಶನಾಗಿ ತಿಳಿಯದೆ ಇರುವನು? ಈರೀತಿಯಾಗಿ ದುರ್ಯೋಧನನೊಡನೆ ಹೇಳಿ ಅಶ್ವತ್ಥಾಮಾಚಾರ್ಯರೊಡನೆ ಕೈಮುಗಿದುಕೊಂಡು ಸಮಾಧಾನದಿಂದ 'ಕರ್ಣನು ತಮ್ಮೊಡನೆ ಹೇಳಿದ ಮಾತು ತಮ್ಮ ತೇಜಸ್ಸನ್ನು ಅಭಿವೃದ್ದಿಪಡಿಸಲಿಕ್ಕೆ. ಆಚಾರ್ಯಪುತ್ರರು ಕ್ಷಮಿಸಬೇಕು. ನಮಗೆ ಈಗ ಮಹಾಕಾರ್ಯವು ಆಗಲಿದೆ. ಅರ್ಜುನನು ಬರುತ್ತಿರುವನು. ಈ ಸಮಯದಲ್ಲಿ ನಾವು ವಿರೋಧ ಮಾಡಿಕೊಳ್ಳುವುದು ಉಚಿತವಲ್ಲ. ತಾವು ಕ್ಷಮಿಸಬೇಕು. ದ್ರೋಣಾಚಾರ್ಯರೂ ಕೃಪಾಚಾರ್ಯರೂ ಕ್ಷಮಿಸಬೇಕು. ನಿಮ್ಮೆಲ್ಲರ ಅಸ್ತ್ರಸಾಮರ್ಥ್ಯ ಸೂರ್ಯನ ಪ್ರಕಾಶದಂತೆ ಪ್ರಸಿದ್ಧವಾದುದು. ಯಾರೊಬ್ಬರೂ ಇಲ್ಲವೆನ್ನಲಿಕ್ಕೆ ಆಗಲಾರದು. ಹೇಗೆ ಚಂದ್ರನಕಾಂತಿಯು ಸರ್ವಥಾ ಚಂದ್ರನನ್ನು ಬಿಟ್ಟುಹೋಗಲಾರದೋ ಹಾಗೆಯೇ ನಿಮ್ಮಲ್ಲಿ ಬ್ರಹ್ಮತೇಜಸ್ಸೂ ಬ್ರಹ್ಮಾಸ್ತ್ರವೂ ಸರ್ವದಾ ಇರುತ್ತಿರುವುದು. ನಾಲ್ಕು ವೇದಗಳು ಒಬ್ಬರಲ್ಲಿ ಇರುತ್ತವೆ. ಕ್ಷತ್ರಿಯ ಧರ್ಮವು ಇನ್ನೊಬ್ಬರಲ್ಲಿ ಇರುತ್ತದೆ. ಅವು ಎರಡೂ ಕೂಡ ದ್ರೋಣಾಚಾರ್ಯರನ್ನು ಅವರ ಪುತ್ರರನ್ನು ಬಿಟ್ಟು ಇನ್ನೊಬ್ಬರಲ್ಲಿ ಒಟ್ಟಿಗೆ ಸೇರಿರುವುದು ಇಲ್ಲ. ವೇದಾಂತಗಳನ್ನು ಪುರಾಣಗಳನ್ನು ಇತಿಹಾಸಗಳನ್ನು ತಿಳಿದವರಾದ ದ್ರೋಣಾಚಾರ್ಯರಿಗಿಂತ

---

1. ಭಾ.ವಿ.ಪ ಅ-51

ಪರಶುರಾಮದೇವರನ್ನು ಬಿಟ್ಟರೆ ಉತ್ತಮರಾದವರು ಮತ್ತೆ ಯಾರು ಇರುವರು? ಬ್ರಹ್ಮಾಸ್ತ್ರವೂ ವೇದಗಳೂ ಒಟ್ಟಿಗೆ ಸೇರಿರುವುದು. ಇತರರಲ್ಲಿ ಕಾಣಿಸುವುದೇ ಇಲ್ಲ. ಆಚಾರ್ಯಪುತ್ರರು ಕ್ಷಮಿಸಬೇಕು. ನಾವು ಪರಸ್ಪರ ವಿರೋಧ ಮಾಡಿಕೊಳ್ಳಲಿಕ್ಕೆ ಇದು ಸಮಯವಲ್ಲ. ನಾವೆಲ್ಲರೂ ಒಟ್ಟಿಗೆ ಸೇರಿದವರಾಗಿ ಬಂದಿರುವ ಅರ್ಜುನನೊಡನೆ ಯುದ್ಧಮಾಡುವ. ಸೈನಿಕರಿಗೆ ಇರುವ ವ್ಯಸನಗಳಲ್ಲಿ ಪರಸ್ಪರ ವಿರೋಧ ಮಾಡಿಕೊಳ್ಳುವುದೇ ಮುಖ್ಯವಾದ ವ್ಯಸನವು ಎಂದು ಹೇಳಿದರು.

ಆಗ ಅಶ್ವತ್ಥಾಮಾಚಾರ್ಯರು 'ನಮಗೆ ಹೀಗೆ ಹೇಳುವುದು ನ್ಯಾಯವಲ್ಲ. ದೋಷಯುಕ್ತರಾದ ಗುರುಗಳು ಗುಣಗಳನ್ನು ಹೇಳಿದರು. ಶತ್ರುವಿನಲ್ಲಿಯಾದರೂ ಇದ್ದ ಗುಣಗಳನ್ನು ಹೇಳಬೇಕು. ಗುರುವಿನಲ್ಲಿಯಾದರೂ ದೋಷವಿದ್ದರೆ ಹೇಳಬೇಕು. ಸರ್ವಪ್ರಯತ್ನದಿಂದ ಮಗನಿಗೂ ಶಿಷ್ಯನಿಗೂ ಹಿತವನ್ನು ಹೇಳಬೇಕು. ಆಚಾರ್ಯರ ಹತ್ತಿರ ಕ್ಷಮೆಯನ್ನು ಕೇಳಿಕೊಳ್ಳಿರಿ. ಅವರನ್ನು ಸಮಾಧಾನಪಡಿಸಿರಿ. ಅವರು ಸಮಾಧಾನಪಟ್ಟರೆ ಎಲ್ಲವೂ ಸರಿಯಾಗುವುದು' ಎಂದರು.

ತರುವಾಯ ದುರ್ಯೋಧನನು ಕರ್ಣನಿಂದಲೂ, ಭೀಷ್ಮಾಚಾರ್ಯರಿಂದಲೂ, ಸಹಿತನಾಗಿ ದ್ರೋಣಾಚಾರ್ಯರೊಡನೆಯೂ ಕೃಪಾಚಾರ್ಯರೊಡನೆಯೂ ಕ್ಷಮೆಯನ್ನು ಕೇಳಿಕೊಂಡನು.

ಆಗ ದ್ರೋಣಾಚಾರ್ಯರು 'ಭೀಷ್ಮಾಚಾರ್ಯರು ಮೊದಲು ಹೇಳಿದ ಮಾತಿನಿಂದ ನಾನು ಶಾಂತನಾಗಿರುವೆನು. ಮುಂದೆ ಆಗಬೇಕಾದ ಕಾರ್ಯವು ನಡೆಯಲಿ. ಅರ್ಜುನನು ದುರ್ಯೋಧನನ ಬಳಿಗೆ ಬಾರದಂತೆ ಸಾಹಸದಿಂದಲೋ ನೀತಿಯಿಂದಲೋ ಮಾಡಬೇಕು. ವನವಾಸ ಅಜ್ಞಾತವಾಸಗಳ ಸಮಯವು ಮುಗಿಯದಿದ್ದರೆ ಸರ್ವಥಾ ಅರ್ಜುನನು ನಮ್ಮ ಎದುರು ಬರಲಾರನು. ಈಗ ಬಂದವನು ಗೋಧನಗಳನ್ನು ಹೊಂದದೆ ಸರ್ವಥಾ ಹಿಂದೆ ಹೋಗಲಾರನು. ಆದುದರಿಂದ ಅವನು ಹೇಗೆ ದುರ್ಯೋಧನನ ಹತ್ತಿರ ಬರಲಾರನೋ ಸೈನಿಕರನ್ನು ಕೊಲ್ಲಲಾರನೋ ಆ ಪ್ರಕಾರ ನೀತಿಯನ್ನು ಮಾಡಬೇಕು. ಈ ವಿಷಯವನ್ನು ದುರ್ಯೋಧನನೂ ಮೊದಲು ಹೇಳಿರುವನು. ಹಾಗೆ ಪಾಂಡವರ ಅವಧಿಯು ಮುಗಿಯಿತೋ ಇಲ್ಲವೋ ಎಂಬುದನ್ನು ಭೀಷ್ಮಾಚಾರ್ಯರೇ ಯೋಚಿಸಿ ಹೇಳಬೇಕು' ಎಂದು ಹೇಳಿದರು.



# ಭೀಷ್ಮಾಚಾರ್ಯರ ಪ್ರತಿವಚನವು[1]

ಕಲಾ, ಕಾಷ್ಠ, ಮುಹೂರ್ತ, ದಿನ, ಅರ್ಧಮಾಸ, ಮಾಸ, ನಕ್ಷತ್ರ, ಗ್ರಹ, ಋತುಸಂವತ್ಸಗಳು ಹೋಗುತ್ತಾ ಇರುತ್ತವೆ. ಈರೀತಿಯಾಗಿ ಕಾಲವಿಭಾಗದಿಂದ ಕಾಲಚಕ್ರವು ನಡೆಯುತ್ತಿದೆ. ಹೀಗೆ ನಡೆಯುವಾಗ ಐದೈದು ವರ್ಷಗಳಿಗೆ ಎರಡು ತಿಂಗಳು ಅಧಿಕಮಾಸಗಳು ಬರುವುವು. ಹೀಗೆ ಹದಿಮೂರು ವರ್ಷಗಳಿಗೆ ಐದು ತಿಂಗಳೂ ಹನ್ನೆರಡು ರಾತ್ರಿಗಳೂ ಹೆಚ್ಚಿಗೆ ಆಗುವುವು. ಆ ಅಧಿಕಮಾಸವನ್ನು ಬಿಟ್ಟು ಸರಿಯಾಗಿ ಹದಿಮೂರು ವರ್ಷಗಳು ನಿನ್ನೆ ದಿವಸವೇ ಮುಗಿದಿರುವುದು. ಆಮೇಲೆಯೇ ಅರ್ಜುನನು ಬಂದಿರುವನು. ಪಾಂಡವರು ತಾವು ಪ್ರತಿಜ್ಞೆ ಮಾಡಿದಂತೆ ವನವಾಸವನ್ನೂ ಅಜ್ಞಾತವಾಸವನ್ನೂ ಚೆನ್ನಾಗಿ ಮಾಡಿರುವರು. ಈರೀತಿಯಾಗಿ ಎಲ್ಲವನ್ನೂ ತಿಳಿದುಕೊಂಡೇ ಅರ್ಜುನನು ಬಂದಿರುವನು. ಐದು ಜನ ಪಾಂಡವರೂ ಧರ್ಮವನ್ನು ತಿಳಿದವರು. ಧರ್ಮರಾಜನು ಇರುವಾಗ ಅವರು ಧರ್ಮದಲ್ಲಿ ಯಾಕೆ ಅಪರಾಧವನ್ನು ಮಾಡುವರು? ಕಾಮದಿಂದಲೋ ಕ್ರೋಧದಿಂದಲೋ ಲೋಭದಿಂದಲೋ ಭಯದಿಂದಲೋ ಸ್ನೇಹದಿಂದಲೋ ಮೋಹದಿಂದಲೋ ಧರ್ಮರಾಜನು ಧರ್ಮವನ್ನು ಮೀರುವವನಲ್ಲ.

ಪಾಂಡವರು ಲೋಭವುಳ್ಳವರಲ್ಲ. ಇನ್ನೊಬ್ಬರಿಂದ ಮಾಡಲಿಕ್ಕೆ ಆಗದ ಕಾರ್ಯವನ್ನು ಮಾಡಿರುವರು. ಅವರು ಕೇವಲ ಅಧರ್ಮದಿಂದ ರಾಜ್ಯವನ್ನು ಇಚ್ಛಿಸುವವರಲ್ಲ. ಇಲ್ಲದಿದ್ದರೆ ಅವರು ಪಗಡೆ ಆಟದ ಸಭೆಯಲ್ಲಿ ಆಗಲೇ ಪರಾಕ್ರಮವನ್ನು ತೋರಿಸಲಿಕ್ಕೆ ಬಯಸುತ್ತಿದ್ದರು. ಧರ್ಮಪಾಶಬದ್ಧರಾಗಿ ಆಗ ತಮ್ಮ ಪ್ರತಿಜ್ಞೆಯನ್ನು ಮೀರಲಿಲ್ಲ. ಸುಳ್ಳು ಹೇಳುವವನು ಪರಾಜಯವನ್ನು ಹೊಂದುವನು. ಪಾಂಡವರು ಮರಣವನ್ನಾದರೂ ಸ್ವೀಕರಿಸುವರು. ಸುಳ್ಳು ಹೇಳಲಾರರು. ಉಚಿತವಾದ ಕಾಲವು ಬಂದಾಗ ಇಂದ್ರದೇವರೇ ರಕ್ಷಣೆ ಮಾಡುತ್ತಿದ್ದರೂ ತಮ್ಮ ಧನವನ್ನು ಬಿಡಲಾರರು. ಪಾಂಡವರು ಅಂತಹ ಪರಾಕ್ರಮವುಳ್ಳವರಾಗಿರುವರು. ಆದುದರಿಂದ ನಮಗೆ ಈಗ ಹೇಗೆ ಮಾಡಿದರೆ ಕ್ಷೇಮವಾಗುವುದೋ ಹಾಗೆ ಮಾಡಿರಿ. ಬೇಗನೇ ಮಾಡಿರಿ. ನಮ್ಮ ಧನವು ಶತ್ರು ವಶವಾಗದೆ ಇರಲಿ. ಯುದ್ಧದಲ್ಲಿ ಯಾವಾಗಲೂ ಜಯವೇ ಆಗುತ್ತಿದೆ ಎಂದು ಹೇಳಲಿಕ್ಕೆ ಆಗಲಾರದು. ಅರ್ಜುನನು ಬಂದುಬಿಟ್ಟನು. ಯುದ್ಧವು ನಡೆದ ಮೇಲೆ ಜಯವೋ ಪರಾಜಯವೋ ಯಾವುದು

1. ಭಾ.ವಿ.ಪ ಅ-52

ಪರಶುರಾಮದೇವರನ್ನು ಬಿಟ್ಟರೆ ಉತ್ತಮರಾದವರು ಮತ್ತೆ ಯಾರು ಇರುವರು? ಬ್ರಹ್ಮಾಸ್ತ್ರವೂ ವೇದಗಳೂ ಒಟ್ಟಿಗೆ ಸೇರಿರುವುದು. ಇತರರಲ್ಲಿ ಕಾಣಸುವುದೇ ಇಲ್ಲ. ಆಚಾರ್ಯಪುತ್ರರು ಕ್ಷಮಿಸಬೇಕು. ನಾವು ಪರಸ್ಪರ ವಿರೋಧ ಮಾಡಿಕೊಳ್ಳಲಿಕ್ಕೆ ಇದು ಸಮಯವಲ್ಲ. ನಾವೆಲ್ಲರೂ ಒಟ್ಟಿಗೆ ಸೇರಿದವರಾಗಿ ಬಂದಿರುವ ಅರ್ಜುನನೊಡನೆ ಯುದ್ಧಮಾಡುವ. ಸೈನಿಕರಿಗೆ ಇರುವ ವ್ಯಸನಗಳಲ್ಲಿ ಪರಸ್ಪರ ವಿರೋಧ ಮಾಡಿಕೊಳ್ಳುವುದೇ ಮುಖ್ಯವಾದ ವ್ಯಸನವು ಎಂದು ಹೇಳಿದರು.

ಆಗ ಅಶ್ವತ್ಥಾಮಾಚಾರ್ಯರು 'ನಮಗೆ ಹೀಗೆ ಹೇಳುವುದು ನ್ಯಾಯವಲ್ಲ. ದೋಷಯುಕ್ತರಾದ ಗುರುಗಳು ಗುಣಗಳನ್ನು ಹೇಳಿದರು. ಶತ್ರುವಿನಲ್ಲಿಯಾದರೂ ಇದ್ದ ಗುಣಗಳನ್ನು ಹೇಳಬೇಕು. ಗುರುವಿನಲ್ಲಿಯಾದರೂ ದೋಷವಿದ್ದರೆ ಹೇಳಬೇಕು. ಸರ್ವಪ್ರಯತ್ನದಿಂದ ಮಗನಿಗೂ ಶಿಷ್ಯನಿಗೂ ಹಿತವನ್ನು ಹೇಳಬೇಕು. ಆಚಾರ್ಯರ ಹತ್ತಿರ ಕ್ಷಮೆಯನ್ನು ಕೇಳಿಕೊಳ್ಳಿರಿ. ಅವರನ್ನು ಸಮಾಧಾನಪಡಿಸಿರಿ. ಅವರು ಸಮಾಧಾನಪಟ್ಟರೆ ಎಲ್ಲವೂ ಸರಿಯಾಗುವುದು' ಎಂದರು.

ತರುವಾಯ ದುರ್ಯೋಧನನು ಕರ್ಣನಿಂದಲೂ, ಭೀಷ್ಮಾಚಾರ್ಯರಿಂದಲೂ, ಸಹಿತನಾಗಿ ದ್ರೋಣಾಚಾರ್ಯರೊಡನೆಯೂ ಕೃಪಾಚಾರ್ಯರೊಡನೆಯೂ ಕ್ಷಮೆಯನ್ನು ಕೇಳಿಕೊಂಡನು.

ಆಗ ದ್ರೋಣಾಚಾರ್ಯರು 'ಭೀಷ್ಮಾಚಾರ್ಯರು ಮೊದಲು ಹೇಳಿದ ಮಾತಿನಿಂದ ನಾನು ಶಾಂತನಾಗಿರುವೆನು. ಮುಂದೆ ಆಗಬೇಕಾದ ಕಾರ್ಯವು ನಡೆಯಲಿ. ಅರ್ಜುನನು ದುರ್ಯೋಧನನ ಬಳಿಗೆ ಬಾರದಂತೆ ಸಾಹಸದಿಂದಲೋ ನೀತಿಯಿಂದಲೋ ಮಾಡಬೇಕು. ವನವಾಸ ಅಜ್ಞಾತವಾಸಗಳ ಸಮಯವು ಮುಗಿಯದಿದ್ದರೆ ಸರ್ವಥಾ ಅರ್ಜುನನು ನಮ್ಮ ಎದುರು ಬರಲಾರನು. ಈಗ ಬಂದವನು ಗೋಧನಗಳನ್ನು ಹೊಂದದೆ ಸರ್ವಥಾ ಹಿಂದೆ ಹೋಗಲಾರನು. ಆದುದರಿಂದ ಅವನು ಹೇಗೆ ದುರ್ಯೋಧನನ ಹತ್ತಿರ ಬರಲಾರನೋ ಸೈನಿಕರನ್ನು ಕೊಲ್ಲಲಾರನೋ ಆ ಪ್ರಕಾರ ನೀತಿಯನ್ನು ಮಾಡಬೇಕು. ಈ ವಿಷಯವನ್ನು ದುರ್ಯೋಧನನೂ ಮೊದಲು ಹೇಳಿರುವನು. ಹಾಗೆ ಪಾಂಡವರ ಅವಧಿಯು ಮುಗಿಯಿತೋ ಇಲ್ಲವೋ ಎಂಬುದನ್ನು ಭೀಷ್ಮಾಚಾರ್ಯರೇ ಯೋಚಿಸಿ ಹೇಳಬೇಕು' ಎಂದು ಹೇಳಿದರು.



# ಭೀಷ್ಮಾಚಾರ್ಯರ ಪ್ರತಿವಚನವು [1]

ಕಲಾ, ಕಾಷ್ಠ, ಮುಹೂರ್ತ, ದಿನ, ಅರ್ಧಮಾಸ, ಮಾಸ, ನಕ್ಷತ್ರ, ಗ್ರಹ, ಋತುಸಂವತ್ಸಗಳು ಹೋಗುತ್ತಾ ಇರುತ್ತವೆ. ಈರೀತಿಯಾಗಿ ಕಾಲವಿಭಾಗದಿಂದ ಕಾಲಚಕ್ರವು ನಡೆಯುತ್ತಿದೆ. ಹೀಗೆ ನಡೆಯುವಾಗ ಐದ್ಯೆದು ವರ್ಷಗಳಿಗೆ ಎರಡು ತಿಂಗಳು ಅಧಿಕಮಾಸಗಳು ಬರುವುವು. ಹೀಗೆ ಹದಿಮೂರು ವರ್ಷಗಳಿಗೆ ಐದು ತಿಂಗಳೂ ಹನ್ನೆರಡು ರಾತ್ರಿಗಳೂ ಹೆಚ್ಚಿಗೆ ಆಗುವುವು. ಆ ಅಧಿಕಮಾಸವನ್ನು ಬಿಟ್ಟು ಸರಿಯಾಗಿ ಹದಿಮೂರು ವರ್ಷಗಳು ನಿನ್ನೆ ದಿವಸವೇ ಮುಗಿದಿರುವುದು. ಆಮೇಲೆಯೇ ಅರ್ಜುನನು ಬಂದಿರುವನು. ಪಾಂಡವರು ತಾವು ಪ್ರತಿಜ್ಞೆ ಮಾಡಿದಂತೆ ವನವಾಸವನ್ನೂ ಅಜ್ಞಾತವಾಸವನ್ನೂ ಚೆನ್ನಾಗಿ ಮಾಡಿರುವರು. ಈರೀತಿಯಾಗಿ ಎಲ್ಲವನ್ನೂ ತಿಳಿದುಕೊಂಡೇ ಅರ್ಜುನನು ಬಂದಿರುವನು. ಐದು ಜನ ಪಾಂಡವರೂ ಧರ್ಮವನ್ನು ತಿಳಿದವರು. ಧರ್ಮರಾಜನು ಇರುವಾಗ ಅವರು ಧರ್ಮದಲ್ಲಿ ಯಾಕೆ ಅಪರಾಧವನ್ನು ಮಾಡುವರು? ಕಾಮದಿಂದಲೋ ಕ್ರೋಧದಿಂದಲೋ ಲೋಭದಿಂದಲೋ ಭಯದಿಂದಲೋ ಸ್ನೇಹದಿಂದಲೋ ಮೋಹದಿಂದಲೋ ಧರ್ಮರಾಜನು ಧರ್ಮವನ್ನು ಮೀರುವವನಲ್ಲ.

ಪಾಂಡವರು ಲೋಭವುಳ್ಳವರಲ್ಲ. ಇನ್ನೊಬ್ಬರಿಂದ ಮಾಡಲಿಕ್ಕೆ ಆಗದ ಕಾರ್ಯವನ್ನು ಮಾಡಿರುವರು. ಅವರು ಕೇವಲ ಅಧರ್ಮದಿಂದ ರಾಜ್ಯವನ್ನು ಇಚ್ಛಿಸುವವರಲ್ಲ. ಇಲ್ಲದಿದ್ದರೆ ಅವರು ಪಗಡೆ ಆಟದ ಸಭೆಯಲ್ಲಿ ಆಗಲೇ ಪರಾಕ್ರಮವನ್ನು ತೋರಿಸಲಿಕ್ಕೆ ಬಯಸುತ್ತಿದ್ದರು. ಧರ್ಮಪಾಶಬದ್ಧರಾಗಿ ಆಗ ತಮ್ಮ ಪ್ರತಿಜ್ಞೆಯನ್ನು ಮೀರಲಿಲ್ಲ. ಸುಳ್ಳು ಹೇಳುವವನು ಪರಾಜಯವನ್ನು ಹೊಂದುವನು. ಪಾಂಡವರು ಮರಣವನ್ನಾದರೂ ಸ್ವೀಕರಿಸುವರು. ಸುಳ್ಳು ಹೇಳಲಾರರು. ಉಚಿತವಾದ ಕಾಲವು ಬಂದಾಗ ಇಂದ್ರದೇವರೇ ರಕ್ಷಣೆ ಮಾಡುತ್ತಿದ್ದರೂ ತಮ್ಮ ಧನವನ್ನು ಬಿಡಲಾರರು. ಪಾಂಡವರು ಅಂತಹ ಪರಾಕ್ರಮವುಳ್ಳವರಾಗಿರುವರು. ಆದುದರಿಂದ ನಮಗೆ ಈಗ ಹೇಗೆ ಮಾಡಿದರೆ ಕ್ಷೇಮವಾಗುವುದೋ ಹಾಗೆ ಮಾಡಿರಿ. ಬೇಗನೇ ಮಾಡಿರಿ. ನಮ್ಮ ಧನವು ಶತ್ರು ವಶವಾಗದೆ ಇರಲಿ. ಯುದ್ಧದಲ್ಲಿ ಯಾವಾಗಲೂ ಜಯವೇ ಆಗುತ್ತಿದೆ ಎಂದು ಹೇಳಲಿಕ್ಕೆ ಆಗಲಾರದು. ಅರ್ಜುನನು ಬಂದುಬಿಟ್ಟನು. ಯುದ್ಧವು ನಡೆದ ಮೇಲೆ ಜಯವೋ ಪರಾಜಯವೋ ಯಾವುದು

---

1. ಭಾ.ವಿ.ಪ ಅ-52

ಆಗುತ್ತದೆ ಎಂದು ನಿಶ್ಚಯವಾಗಿ ಹೇಳಲಿಕ್ಕೆ ಆಗಲಾರದು. ಆದುದರಿಂದ ಯುದ್ಧಕ್ಕೆ ಬೇಕಾದ ಸನ್ನಾಹವನ್ನೇ ಬೇಗನೇ ಮಾಡಬೇಕು. ಅರ್ಜುನನು ಬಂದುಬಿಟ್ಟನು. ಅರ್ಜುನನು ಒಬ್ಬನೇ ಯುದ್ಧದಲ್ಲಿ ಬಾಣಗಳಿಂದ ಭೂಮಿಯನ್ನು ಸುಟ್ಟುಹಾಕುವನು. ಸಹೋದರರಿಂದ ಸಹಿತನಾಗಿ ಬಂದರೆ ಕೌರವರನ್ನು ಜಯಿಸುವನೆಂದು ಹೇಳಬೇಕೆ? ದುರ್ಯೋಧನ! ಆದುದ ರಿಂದ ನಿನಗೆ ಅಭಿಪ್ರಾಯವಿದ್ದರೆ ಪಾಂಡವರೊಡನೆ ರಾಜಿ ಮಾಡಿಕೊಳ್ಳುವವನಾಗು' ಎಂದು ಹೇಳಿದರು.

ಆಗ ದುರ್ಯೋಧನನು 'ತಾತ! ನಾನು ಪಾಂಡವರಿಗೆ ರಾಜ್ಯವನ್ನು ಕೊಡಲಾರೆನು. ಗ್ರಾಮವನ್ನೂ ಸೇನೆಯನ್ನೂ ದಾಸರನ್ನು ಕೊಡಲಾರೆನು. ಸ್ವಲ್ಪ ದ್ರವ್ಯವನ್ನು ಕೊಡಲಾರೆನು. ಯುದ್ಧಕ್ಕೆ ಬೇಕಾದ ಸನ್ನಾಹವೆಲ್ಲವನ್ನು ಮಾಡಿರಿ' ಎಂದುಬಿಟ್ಟನು.

ತರುವಾಯ ದ್ರೋಣಾಚಾರ್ಯರು 'ಯುದ್ಧಮಾಡುವ ಅಭಿಪ್ರಾಯವೇ ಇದ್ದ ನನ್ನ ಅಭಿಪ್ರಾಯವನ್ನು ಹೇಳುವೆನು. ಅದನ್ನು ಇಷ್ಟವಿದ್ದರೆ ಕೇಳಿರಿ. ರಾಜನು ಸೈನ್ಯದಲ್ಲಿ ನಾಲ್ಕನೇ ಒಂದು ಭಾಗವನ್ನು ಹಿಡಿದುಕೊಂಡು ಬೇಗನೇ ಹೊರಟುಹೋಗಲಿ. ಮತ್ತೆ ನಾಲ್ಕನೇ ಒಂದು ಭಾಗ ಸೈನ್ಯವು ಗೋವುಗಳನ್ನು ತೆಗೆದುಕೊಂಡು ಹೋಗಲಿ. ನಾವು ಅರ್ಧಸೈನ್ಯದಿಂದ ಸಹಿತರಾಗಿ ಯುದ್ಧವನ್ನು ಮಾಡುವ. ನಾನೂ ಭೀಷ್ಮಾಚಾರ್ಯರೂ ಕರ್ಣನೂ ಅಶ್ವತ್ಥಾಮನೂ ಕೃಪಾಚಾರ್ಯರೂ ಸೇರಿ ಬಂದಿರುವ ಅರ್ಜುನನನ್ನು ಎದುರಿಸಿ ಯುದ್ಧಮಾಡುವ. ಹೀಗೆ ಮಾಡಿದರೆ ರಾಜನು ಸುರಕ್ಷಿತನಾಗಿರುವನು. ವಿರಾಟರಾಜನು ಬರಲಿ ಅಥವಾ ದೇವೇಂದ್ರನೇ ಬರಲಿ ನಾನು ಅವನನ್ನು ತಡೆಯುವೆನು' ಎಂದು ಹೇಳಿದರು.

ದ್ರೋಣಾಚಾರ್ಯರು ಹೇಳಿದ ಮಾತು ಎಲ್ಲರಿಗೂ ಸರಿಯೆಂದು ತೋರಿತು. ದುರ್ಯೋಧನನು ಹಾಗೆಯೇ ಮಾಡಿದನು. ಭೀಷ್ಮಾಚಾರ್ಯರು ರಾಜನನ್ನು ಗೋವುಗಳನ್ನು ಕಳುಹಿಸಿ ಮುಖ್ಯಸೈನಿಕರನ್ನು ನಿಲ್ಲಿಸಿ ವ್ಯೂಹವನ್ನು ಮಾಡಲಿಕ್ಕೆ ಆರಂಭಿಸಿದರು. ಭೀಷ್ಮಾಚಾರ್ಯರು 'ಆಚಾರ್ಯರೇ! ನೀವು ಮಧ್ಯದಲ್ಲಿ ನಿಲ್ಲಿರಿ. ನಿಮ್ಮ ಎಡಭಾಗದಲ್ಲಿ ಅಶ್ವತ್ಥಾಮಾಚಾರ್ಯರು ನಿಲ್ಲಲಿ. ನಿಮ್ಮ ಬಲಪಾರ್ಶ್ವದಲ್ಲಿ ಕೃಪಾಚಾರ್ಯರು ನಿಲ್ಲಲಿ. ವಿಕರ್ಣನೂ ದುರ್ಮುಖನೂ ಶಕುನಿಯೂ ದುಃಸಹನೂ ದ್ರೋಣಾಚಾರ್ಯರ ಪಾರ್ಶ್ವವನ್ನೇ ರಕ್ಷಿಸುತ್ತಾ ಇರಲಿ. ಮುಂಭಾಗದಲ್ಲಿ ಕರ್ಣನು ನಿಲ್ಲಲಿ. ನಾನು ಎಲ್ಲಾ ಸೈನ್ಯದ ಹಿಂಭಾಗದಲ್ಲಿ ರಕ್ಷಣೆ ಮಾಡುತ್ತಾ ಇರುವನು. ಎಲ್ಲಾ ಶೂರರೂ ಪ್ರಯತ್ನಪೂರ್ವಕವಾಗಿ ಅರ್ಜುನನೊಡನೆ ಯುದ್ಧಮಾಡಲಿ' ಎಂದು

ಹೇಳಿ ಶತ್ರುಗಳಿಂದ ಭೇದಿಸಲಿಕ್ಕೆ ಅಶಕ್ಯವಾದ ವಜ್ರಗರ್ಭವಾದ ವ್ರೀಹಿಮುಖವಾದ ಪದ್ಮಚಂದ್ರಾರ್ಧಮಂಡಲವೆಂಬ ವ್ಯೂಹವನ್ನು ಮಾಡಿ ಹಿಂದಿನ ಪಾರ್ಶ್ವದಲ್ಲಿ ರಥದಲ್ಲಿ ಸುವರ್ಣದ ತಾಳಧ್ವಜವನ್ನು ಏರಿಸಿ ಶೋಭಿಸುತ್ತಾ ಇದ್ದರು.



## ಅರ್ಜುನನ ಪರಾಕ್ರಮವು [1]

ತರುವಾಯ ಇಂದ್ರದೇವರು ಸುದರ್ಶನ ಎಂದು ಹೆಸರುಳ್ಳ ಮಹಾವಿಮಾನದಲ್ಲಿ ಕೂತುಕೊಂಡು ದೇವತೆಗಳಿಂದಲೂ ರಾಜರ್ಷಿಗಳಿಂದಲೂ ಗಂಧರ್ವಾದಿ ಗಳಿಂದಲೂ ಸಹಿತರಾಗಿ ಬಂದು ಆಕಾಶಮಾರ್ಗದಲ್ಲಿ ಇದ್ದುಕೊಂಡು ಅರ್ಜುನನು ಕೌರವರೊಡನೆ ಮಾಡುವ ಯುದ್ಧವನ್ನು ನೋಡುತ್ತಿದ್ದರು.

ಅರ್ಜುನನು ಕೌರವಸೇನೆಯಿದ್ದಲ್ಲಿಗೆ ಹೋದನು. ಅಲ್ಲಿ ದುರ್ಯೋಧನನನ್ನು ಕಾಣದೆ ಭೀಷ್ಮಾಚಾರ್ಯರಿಗೂ ದ್ರೋಣಾಚಾರ್ಯರಿಗೂ ಕೃಪಾಚಾರ್ಯರಿಗೂ ಎರಡು ಎರಡು ಬಾಣಗಳಿಂದ ನಮಸ್ಕಾರ ಮಾಡಿದನು. ಅವನನ್ನು ನೋಡಿ ದ್ರೋಣಾಚಾರ್ಯರು ವಿಶೇಷವಾಗಿ ಪ್ರಶಂಸಿದರು.

ಅರ್ಜುನನು ಸೇನಾಮಧ್ಯದಲ್ಲಿ ದುರ್ಯೋಧನನನ್ನು ಕಾಣದೆ ಅವನು ಗೋವುಗಳನ್ನು ತಗೆದುಕೊಂಡು ಹೋಗಿರಬಹುದೆಂದು ಊಹಿಸಿ ರಥದ ಗೋವುಗಳು ಕಾಣಿಸುತ್ತಿರುವಲ್ಲಿಗೆ ಹೋದನು. ಆಗ ಭೀಷ್ಮಾಚಾರ್ಯರು ಅರ್ಜುನನ ಅಭಿಪ್ರಾಯವನ್ನು ತಿಳಿದು ಸೈನ್ಯಸಹಿತವಾಗಿ ಅವನ ಹಿಂದೆಯೇ ಓಡಿದರು. ಅರ್ಜುನನು ಗೋವುಗಳ ಸಮೀಪಕ್ಕೆ ಹೋಗಿ ಗೋವುಗಳನ್ನು ರಕ್ಷಿಸುತ್ತಿದ್ದ ಸೈನಿಕರನ್ನು ಬಾಣಗಳಿಂದ ಬಡಿದು ಗೋವುಗಳನ್ನು ಊರಿಗೆ ತಿರುಗಿಸಿದನು.

ಆಮೇಲೆ ಅರ್ಜುನನು ಉತ್ತರನೊಡನೆ ದ್ರೋಣಕರ್ಣಾದಿಗಳ ರಥಗಳ ಧ್ವಜಗಳ ಚಿಹ್ನೆಯನ್ನು ತೋರಿಸಿ ಅವರ ಪರಾಕ್ರಮವನ್ನು ವಿವರಿಸಿ ಹೇಳಿದನು. ತರು ವಾಯ ಭೀಷ್ಮದ್ರೋಣಾದಿಗಳೊಡನೆ ಯುದ್ಧವನ್ನು ಮಾಡಿದನು. ಕರ್ಣನು ಅರ್ಜುನ ನೊಡನೆ ಯುದ್ಧವನ್ನು ಮಾಡಿ ಪರಾಜಿತನಾದನು. ವಿಕರ್ಣಾದಿಗಳನ್ನು ಪರಾಜಯ ಗೊಳಿಸಿ ಕರ್ಣನ ಸಹೋದರನನ್ನು ಸಂಹರಿಸಿದನು. ಆಮೇಲೆ ಕರ್ಣನು ಭಯಂಕರ ವಾಗಿ ಯುದ್ಧಮಾಡಿ ಅರ್ಜುನನ ಬಾಣದಿಂದ ಸಂತಪ್ತನಾಗಿ ಹೊರಟು ಹೋದನು.

---

1. ಭಾ.ವಿ.ಪ ಅ-53-65

ತರುವಾಯ ದ್ರೋಣಾಚಾರ್ಯರಿಗೂ ಅರ್ಜುನನಿಗೂ ಯುದ್ಧವು ನಡೆಯಿತು. ಅರ್ಜುನನ ಬಾಣಗಳಿಂದ ದ್ರೋಣಾಚಾರ್ಯರು ವಿಷಾದವನ್ನು ಹೊಂದಲು ಅವರನ್ನು ರಕ್ಷಿಸಲಿಕ್ಕಾಗಿ ಅಶ್ವತ್ಥಾಮಾಚಾರ್ಯರು ಯುದ್ಧಕ್ಕೆ ಬಂದರು. ಆಗ ಅರ್ಜುನನ ಅವಕಾಶವನ್ನು ಕೊಡಲು ದ್ರೋಣಾಚಾರ್ಯರು ಯುದ್ಧವನ್ನು ಬಿಟ್ಟು ಹೊರಟು ಹೋದರು. ತರುವಾಯ ಅಶ್ವತ್ಥಾಮಾಚಾರ್ಯರೂ ಸೋತು ಹೋದರು. ತರುವಾಯ ಕೃಪಾಚಾರ್ಯರು ಅರ್ಜುನನೊಡನೆ ಯುದ್ಧಮಾಡಿ ಸೋತುಹೋದರು. ಚಂದ್ರಕೇತು, ಸುಕೇತು ಚಿತ್ರಾಶ್ವ ಮಣಿಮಾನ್ ಮುಂಜಮೌಲಿ ಹೇಮವರ್ಣ ಸುರಥ ಸುಷೇಮ ಅರಿಷ್ಟ ನೃಕೇತು ಮೊದಲಾದವರು ಸೈನ್ಯಸಹಿತವಾಗಿ ಮೃತರಾದರು. ಅನಂತರ ಭೀಷ್ಮಾಚಾರ್ಯರ ಮಾತಿನಿಂದ ದ್ರೋಣಾಚಾರ್ಯರೇ ಮೊದಲಾದವರು ಎಲ್ಲರೂ ಒಟ್ಟಿಗೆ ಸೇರಿ ಯುದ್ಧಮಾಡಿದರು. ಅರ್ಜುನನು ಭೀಷ್ಮಾಚಾರ್ಯರೊಡನೆ ಯುದ್ಧಮಾಡಿ ಅವರನ್ನೂ ಪರಾಜಯಗೊಳಿಸಿದನು. ಪುನಃ ದ್ರೋಣಾದಿಗಳೊಡನೆ ಯುದ್ಧಮಾಡಿದನು. ಭಯಪಟ್ಟ ಉತ್ತರನನ್ನು ಸಮಾಧಾನ ಪಡಿಸಿ ದುರ್ಯೋಧನನ ಬಳಿಗೆ ಯುದ್ಧಕ್ಕೆ ಹೋಗಲು ಪ್ರೇರಿಸಿದನು. ತನ್ನ ಬಾಣಗಳ ಪ್ರಹಾರವನ್ನು ತಡೆಯಲಾರದೆ ಓಡುತ್ತಿರುವ ದುರ್ಯೋಧನನನ್ನು ನೋಡಿ ಅವನನ್ನು ಅಪಹಾಸ ಮಾಡಿ ಕೂಗಿದನು. ಆಗ ದುರ್ಯೋಧನನು ಪುನಃ ಹಿಂದೆ ತಿರುಗಿಬಂದು ಯುದ್ಧಕ್ಕೆ ಬಂದನು. ಆಗ ಅವನನ್ನು ರಕ್ಷಿಸಲಿಕ್ಕೆ ಭೀಷ್ಮಾದಿಗಳು ಸುತ್ತಲೂ ಬಂದರು.

ಅರ್ಜುನನು ಅವರೊಡನೆ ಬಹುಹೊತ್ತು ಯುದ್ಧಮಾಡಿ ಆಮೇಲೆ ಸಂಮೋಹನಾಸ್ತ್ರವನ್ನು ಬಿಟ್ಟನು. ಆ ಸಂಮೋಹನಾಸ್ತ್ರದ ಪ್ರಭಾವದಿಂದ ಎಲ್ಲರೂ ಮೂರ್ಛಿತರಾಗಿ ಬಿದ್ದರು. ಆಗ ಅರ್ಜುನನು ಉತ್ತರೆಯು ಹೇಳಿದ್ದ ಮಾತನ್ನು ಸ್ಮರಿಸಿಕೊಂಡು ಭೀಷ್ಮಾಚಾರ್ಯರು ಒಬ್ಬರನ್ನು ಬಿಟ್ಟು ಮತ್ತೆಲ್ಲರ ಉತ್ತರೀಯವಸ್ತ್ರವನ್ನು ತೆಗೆದುತರಲಿಕ್ಕೆ ಉತ್ತರನೊಡನೆ ಹೇಳಿದನು. ಉತ್ತರನು ಹಾಗೆಯೇ ಮಾಡಿದನು. ತರುವಾಯ ಉತ್ತರನು ರಥವನ್ನು ಓಡಿಸಿದನು. ಆಗ ಭೀಷ್ಮಾಚಾರ್ಯರು ಎದ್ದು ಬಾಣಗಳಿಂದ ಬಡೆಯುವವರಾದರು. ಆಗ ಅರ್ಜುನನೂ ಭೀಷ್ಮಾಚಾರ್ಯರ ಕುದುರೆಗಳನ್ನು ಸಂಹರಿಸಿ ಭೀಷ್ಮಾಚಾರ್ಯರಿಗೆ ಹತ್ತು ಬಾಣಗಳಿಂದ ಬಡೆದನು. ತರುವಾಯ ಅರ್ಜುನನು ಯುದ್ಧದಲ್ಲಿ ಭೀಷ್ಮಾಚಾರ್ಯರನ್ನು ಬಿಟ್ಟು ಅವರ ಸಾರಥಿಯನ್ನು ಬಡೆದು ರಥಗಳ ಸಮೂಹಕ್ಕಿಂತ ದೂರದಲ್ಲಿ ಹೋಗಿ ನಿಂತುಕೊಂಡನು. ಆಮೇಲೆ ಸ್ವಲ್ಪ ಹೊತ್ತಿನ ಮೇಲೆ ದುರ್ಯೋಧನನು ಜ್ಞಾನವನ್ನು ಹೊಂದಿ ದೂರದಲ್ಲಿ ನಿಂತಿರುವ ಅರ್ಜುನನ್ನು ನೋಡಿ 'ಅರ್ಜುನನು ಕಷ್ಟದಿಂದ

ತಪ್ಪಿಸಿಕೊಂಡು ಹೋಗುತ್ತಿದ್ದಾನೆ. ಇವನನ್ನು ಕಟ್ಟಿಹಾಕಿರಿ. ಬಿಡಬೇಡಿರಿ' ಎಂದು ಹೇಳಿದನು.

ಆಗ ಭೀಷ್ಮಾಚಾರ್ಯರು ನಗುವವರಾಗಿ 'ರಾಜನೇ! ಇಷ್ಟರವರೆಗೆ ನಿನ್ನ ಬುದ್ಧಿಯೂ ವೀರ್ಯವೂ ಎಲ್ಲಿಗೆ ಹೋಗಿತ್ತು? ಧನುರ್ಬಾಣಗಳನ್ನು ಕೆಳಗೆ ಹಾಕಿ ಶಾಂತವಾಗಿ ಮಲಗಿದ್ದಿಯಲ್ಲಾ! ಅರ್ಜುನನಿಗೆ ಪಾಪಕಾರ್ಯವನ್ನು ಮಾಡಲಿಕ್ಕೆ ಮನಸ್ಸು ಹೋಗಲಾರದು. ಸ್ವರ್ಗಕ್ಕಾಗಿಯೂ ಅವನು ಧರ್ಮವನ್ನು ಬಿಡಲಾರನು. ಆದುದರಿಂದಲೇ ಮೂರ್ಛಿತನಾಗಿ ಮಲಗಿದ್ದ ನಿಮ್ಮನ್ನು ಅವನು ಸಂಹರಿಸಲಿಲ್ಲ. ಬೇಗನೇ ಕುರುದೇಶಕ್ಕೆ ಹೋಗು. ಅರ್ಜುನನು ಗೋವುಗಳನ್ನು ಜಯಿಸಿಕೊಂಡು ಹೋಗಲಿ. ನೀವು ಸಂಮೋಹನಾಸ್ತ್ರದಿಂದ ಮೂರ್ಛಿತರಾಗಿ ಮಲಗಿದ್ದಿರಿ. ನಿಮಗೊಂದೂ ತಿಳಿಯಲಿಲ್ಲ. ನೀವು ಮಲಗಿರುವಾಗ ಉತ್ತರಕುಮಾರನು ಬಂದು ನಿಮ್ಮ ವಸ್ತ್ರಗಳನ್ನು ಆಭರಣಗಳನ್ನು ಅಪಹರಿಸಿದ್ದನ್ನು ನಾನು ನೋಡಿರುವೆನು. ನೀವೆಲ್ಲರೂ ಮೂರ್ಛಿತರಾಗಿ ಮಲಗಿದ್ದಾಗ ಅರ್ಜುನನು ನಿಮ್ಮೆಲ್ಲರನ್ನು ಕೊಂದು ಹಾಕಬಹುದಿತ್ತು. ಆದರೂ ಧರ್ಮಿಷ್ಠನಾದ ಕಾರಣ ಹಾಗೆ ಮಾಡಲಿಲ್ಲ. ಇನ್ನು ಮೇಲೆ ನಿಮ್ಮೊಡನೆ ರಾಜಿಯನ್ನು ಮಾಡಿಕೊಳ್ಳಬಹುದು ಎಂಬ ಅಭಿಪ್ರಾಯದಿಂದ ನಿಮ್ಮ ಭಾಗ್ಯದಿಂದ ಅರ್ಜುನನು ನಿಮ್ಮನ್ನು ಕೊಲ್ಲದೆ ಬಿಟ್ಟಿರುವನು. ಆದುದರಿಂದ ನೀವೆಲ್ಲರೂ ಸತ್ತು ಉಳಿದ ಸೈನಿಕರಿಂದ ಸಹಿತರಾಗಿ ಹಸ್ತಿನಾವತಿಗೆ ಹೋಗಿರಿ' ಎಂದು ಹೇಳಿದರು.

ದುರ್ಯೋಧನನು ಭೀಷ್ಮಾಚಾರ್ಯರ ಮಾತನ್ನು ಕೇಳಿ ತಾನು ಯೋಚಿಸಿದ ಕಾರ್ಯವಾಗಲಿಲ್ಲವೆಂದು ದೀರ್ಘಶ್ವಾಸವನ್ನು ಬಿಟ್ಟು ಸುಮ್ಮನೆ ಆದನು. ಭೀಷ್ಮಾಚಾರ್ಯರ ಮಾತನ್ನು ಕೇಳಿ ಜ್ವಲಿಸುತ್ತಿರುವ ಅರ್ಜುನನನ್ನು ನೋಡಿ ಎಲ್ಲರೂ ದುರ್ಯೋಧನನನ್ನು ರಕ್ಷಿಸುವುದಕ್ಕಾಗಿ ಹಿಂದೆ ತಿರುಗಿ ಹೋಗಲಿಕ್ಕೆಯೇ ಅಭಿಪ್ರಾಯ ಪಟ್ಟರು. ಎಲ್ಲರೂ ಹೊರಟದ್ದನ್ನು ನೋಡಿ ಅರ್ಜುನನು ಪ್ರೀತಿಯುಕ್ತವಾದ ಮನಸ್ಸುಳ್ಳವನಾಗಿ ಹೋಗಿಬರುತ್ತೇನೆ ಎಂದು ಹೇಳಿಕೊಂಡು ಗಾಂಡೀವಧನುಸ್ಸಿನ ಶಬ್ದವನ್ನು ಮಾಡಿ ಅವರ ಸೈನ್ಯವನ್ನು ನೋಡಿ ನಗುತ್ತಾ ಬಲವಾಗಿ ಶಂಖವನ್ನು ಊದಿದನು. ಕೌರವರು ಮಹತ್ತಾದ ಶಂಖಧ್ವನಿಯನ್ನು ಅರ್ಜುನನ ಧ್ವಜದ ಶಬ್ದವನ್ನು ಕೇಳಿ ಪುನಃಪುನಃ ಗಾಂಡೀವದ ಶಬ್ದದಿಂದ ಭಯಪಡುತ್ತಾ ಸಮಸ್ತಧನ ವನ್ನು ಬಿಟ್ಟು ಹೊರಟುಹೋದರು. ಅರ್ಜುನನು ಅವರನ್ನು ಬಹುದೂರ ಓಡಿಸಿ ಧನವನ್ನು ಹಿಂದೆ ತಿರುಗಿಸಿ ಎಲ್ಲರ ಹತ್ತಿರ ಹೋಗಿಬರುತ್ತೇನೆ ಎಂದು ಹೇಳಿ

ಉರುಗಳೆಲ್ಲರನ್ನೂ ಬಾಣಗಳಿಂದ ನಮಸ್ಕರಿಸಿ ಹೊರಟುಹೋದನು. ರಾಜ ವಂಶದವನಲ್ಲದ ನಿನಗೆ ಕಿರೀಟವೇಕೆಂದು ಹೇಳುತ್ತಾ ದುರ್ಯೋಧನನ ತಲೆಯಲ್ಲಿ ಇಟ್ಟಿದ್ದ ಕಿರೀಟವನ್ನು ಕತ್ತರಿಸಿ ಬೀಳಿಸಿದನು. ಅದನ್ನು ನೋಡಿ ಉತ್ತರನು ಅತ್ಯಂತ ಸಂತೋಷವನ್ನು ಹೊಂದಿದನು. ರಾಜರೆಲ್ಲರೂ ಜಯಶೀಲನಾದ ಅರ್ಜುನನನ್ನು ನೋಡಲಿಕ್ಕೇ ಅಸಮರ್ಥರಾಗಿ ಹೊರಟುಹೋದರು. ತರುವಾಯ ಅರ್ಜುನನು ಉತ್ತರನೊಡನೆ ಕುದುರೆಗಳನ್ನು ಹಿಂದೆ ತಿರುಗಿಸು. ನಿನ್ನ ಗೋವುಗಳನ್ನು ಜಯಿಸಿಯಾಯಿತು. ಶತ್ರುಗಳು ಹೊರಟುಹೋದರು. ನೀನು ಸಂತೋಷವನ್ನು ಊರನ್ನು ಪ್ರವೇಶಿಸು. ನಿನ್ನ ಜಯವಾಯಿತೆಂದೇ ಡಂಗುರ ಸಾರಿಸು. ನಿನಗೇನೇ ಜನರು ಗಂಧಪುಷ್ಪಗಳಿಂದ ಸತ್ಕರಿಸಲಿ. ನಿನ್ನ ತಾಯಿಯೂ ಬಂಧುಗಳೂ ಸಂತೋಷಯುಕ್ತನಾದ ನಿನ್ನನ್ನು ನೋಡಿ ಸಂತೋಷಪಡಲಿ' ಎಂದನು.



## ಅರ್ಜುನನು ಯುದ್ಧವನ್ನು ಮುಗಿಸಿ ಬಂದದ್ದು [1]

ಈರೀತಿಯಾಗಿ ಅರ್ಜುನನು ಯುದ್ಧದಲ್ಲಿ ಜಯಿಸಿ ವಿರಾಟನನ್ನು ಧನವನ್ನು [2]ತೆಗೆದುಕೊಂಡು ಬಂದನು. ದುರ್ಯೋಧನಾದಿಗಳು ಸೋತವರಾಗಿ ಹೊರಟು ಹೋಗಲು ಅಲ್ಲಲ್ಲಿ ಕಾಡಿನಿಂದ ಕೌರವ ಸೈನಿಕರು ಹೊರಗೆ ಬಂದರು. ಎಲ್ಲರೂ ಭಯದಿಂದ ಬಂದರು. ತಲೆಬಿಚ್ಚಿಕೊಂಡು ಕೈಮುಗಿದುಕೊಂಡು ಹಸಿವೆದಾಹಗಳಿಂದ ಶ್ರಮವುಳ್ಳವರಾಗಿ ಕಾಣಿಸಿಕೊಂಡರು. ಅವರೆಲ್ಲರೂ ಅರ್ಜುನನಿಗೆ ಕೈಮುಗಿದು 'ಅರ್ಜುನ! ನಾವು ಏನು ಮಾಡಲಿ? ನಮ್ಮ ಪ್ರಾಣಗಳನ್ನು ಬೇಡಿಕೊಳ್ಳುತ್ತೇವೆ. ನಾವು ನಿನ್ನ ದಾಸರು ಅನಾಥರೂ ನಮ್ಮನ್ನು ನೀನು ರಕ್ಷಿಸಬೇಕು' ಎಂದು ಹೇಳಿಕೊಂಡರು.

ಆಗ ಅರ್ಜುನನು 'ನಾನು ಅನಾಥರಾದವರನ್ನು, ದುಃಖಿತರನ್ನು, ದೀನರನ್ನೂ, ಕೃಶರಾದವರನ್ನೂ, ವೃದ್ಧರಾಗಿರುವವರನ್ನೂ, ಪರಾಜಿತರನ್ನೂ, ಶಸ್ತ್ರವನ್ನು ಪರಿತ್ಯಜಿಸಿದವರನ್ನೂ, ನಿರಾಶರನ್ನೂ, ಕೈಮುಗಿದವರನ್ನೂ ಸಂಹರಿಸುವುದಿಲ್ಲ. ನೀವು ವಿಶ್ವಾಸದಿಂದ ಭಯವಿಲ್ಲದೆ ಹೋಗಿರಿ. ನನ್ನ ಪಾದಧೂಳಿಯಿಂದ ಭೂಮಿಯಲ್ಲಿ ಬಹುಕಾಲ ಬದುಕಿಕೊಂಡು ಇರಿ' ಎಂದು ಹೇಳಿದನು. ಈರೀತಿಯಾಗಿ ಅಭಯಪ್ರದವಾದ ಅರ್ಜುನನ ಮಾತನ್ನು ಕೇಳಿ ಸೈನಿಕರೆಲ್ಲರೂ ನಿನ್ನ ಆಯುಷ್ಯವೂ,

1. ಭಾ.ವಿ.ಪ ಅ-66, 67     2. ಕರೆದುಕೊಂಡು

ಕೀರ್ತಿಯೂ, ಅಭಿವೃದ್ಧಿಯನ್ನು ಹೊಂದಲಿ ಎನ್ನುತ್ತಾ ಹೊರಟುಹೋದರು. ಯುದ್ಧದಲ್ಲಿ ಸತ್ತವರು ಸ್ವರ್ಗವನ್ನು ಹೊಂದಿದರು.

ಈರೀತಿಯಾಗಿ ಮಹಾನುಭಾವನಾದ ಅರ್ಜುನನು ಮಹಾಕಾರ್ಯವನ್ನು ಮಾಡಿ ಒಬ್ಬನೇ ಕೌರವಸೈನ್ಯವನ್ನು ಓಡಿಸಿ ಹೊರಟುಹೋದನು. ತರುವಾಯ ಉತ್ತರನೊಡನೆ 'ನಿನಗೀಗ ನಿನ್ನ ತಂದೆಯ ಬಳಿಯಲ್ಲಿ ಪಾಂಡವರು ವಾಸಮಾಡುತ್ತಿರುವರೆಂದು ತಿಳಿದಿರುವುದು. ನೀನು ಹೋದಕೂಡಲೇ ನಿನ್ನ ತಂದೆಯ ಬಳಿಯಲ್ಲಿ ಈ ವಿಷಯವನ್ನು ತಿಳಿಸಬೇಡ. ಒಮ್ಮೆಯೇ ತಿಳಿಸಿಬಿಟ್ಟರೆ ನಿನ್ನ ತಂದೆಯು ಭಯದಿಂದ ಪ್ರಾಣವನ್ನು ಬಿಡಬಹುದು. ನೀನೇ ಕೌರವರ ಸೈನ್ಯವನ್ನು ಜಯಿಸಿದಂತೆಯೂ ಗೋವುಗಳನ್ನು ಬಿಡಿಸಿಕೊಂಡು ಬಂದಂತೆಯೂ ತಿಳಿಸುವವನಾಗು' ಎಂದು ಹೇಳಿದನು.

ಆದಕ್ಕೆ ಉತ್ತರಕುಮಾರನು 'ನೀನು ಮಾಡಿರುವ ಮಹಾಕರ್ಮವನ್ನು ಮಾಡಲಿಕ್ಕೆ ನನಗೆ ಶಕ್ತಿಯಿರುವುದಿಲ್ಲ. ಆದರೂ ನೀನು ಹೇಳುವವರೆಗೆ ನನ್ನ ತಂದೆಯ ಬಳಿಯಲ್ಲಿ ನಿನ್ನ ವಿಷಯವನ್ನು ಹೇಳುವುದಿಲ್ಲ' ಎಂದು ಹೇಳಿದನು.

ತರುವಾಯ ಅರ್ಜುನನು ಕೌರವರ ಧನವೆಲ್ಲವನ್ನೂ ಹಿಡಿದುಕೊಂಡು ಸ್ಮಶಾನದಲ್ಲಿ ಇರುವ ಆ ಶಮೀವೃಕ್ಷದ ಬಳಿಗೆ ಬಂದು ನಿಂತನು. ತರುವಾಯ ರಥದಲ್ಲಿ ಕೂತಿದ್ದ ಅಗ್ನಿಯಂತೆ ಜ್ವಲಿಸುತ್ತಿದ್ದ ಹನುಮಂತದೇವರು ಭೂತಗಳಿಂದ ಕೂಡಿಕೊಂಡು ಆಕಾಶಕ್ಕೆ ಹಾರಿಹೋದರು. ರಥದಲ್ಲಿ ಸಿಂಹಧ್ವಜವೇ ಇಡಲ್ಪಟ್ಟಿತು. ಅರ್ಜುನನು ತನ್ನ ಆಯುಧಗಳನ್ನು ಶಮೀವೃಕ್ಷದಲ್ಲಿಯೇ ಇಟ್ಟು ಪೂರ್ವದಂತೆಯೇ ಬೃಹನ್ನಲಾರೂಪವುಳ್ಳವನಾಗಿ ಕುದುರೆಗಳನ್ನು ಓಡಿಸುತ್ತಾ ವಿರಾಟನಗರವನ್ನು ಪ್ರವೇಶಿಸಲಿಕ್ಕೆ ಹೋದನು.

ತರುವಾಯ ಇಲ್ಲಿ ಸೋತುಹೋದ ಕೌರವರು ಶಾಂತರಾಗಿ ಉತ್ತರೀಯ ವಸ್ತ್ರರಹಿತರಾಗಿ ಒಬ್ಬೊರನ್ನೊಬ್ಬರು ನೋಡುತ್ತಾ ಹೊರಟುಹೋದರು. ದಾರಿಯಲ್ಲಿ ಅರ್ಜುನನು ಉತ್ತರನೊಡನೆ 'ರಾಜಪುತ್ರನೇ! ಈ ಹಣವನ್ನು ಗೋವುಗಳನ್ನು ಗೋಪಾಲರಿಂದ ಸಹ ಸ್ವೀಕರಿಸು. ನಾವು ಕುದುರೆಗಳಿಗೆ ನೀರು ಕುಡಿಸಿ ಶ್ರಮಪರಿಹಾರ ಮಾಡಿ ಮಧ್ಯಾಹ್ನವಾದ ಮೇಲೆ ಹೋಗೋಣ. ದೂತರು ಗೋಪಾಲರು ನಿನ್ನ ಜಯವನ್ನು ತಿಳಿಸುವುದಕ್ಕಾಗಿ ಬೇಗನೇ ಮುಂದೆ ಹೋಗಲಿ' ಎಂದು ಹೇಳಿದನು. ತರುವಾಯ ಉತ್ತರನು ಅರ್ಜುನನ ಮಾತಿನಿಂದ ತನ್ನ ಜಯವನ್ನು ತಿಳಿಸುವುದಕ್ಕಾಗಿ ದೂತರನ್ನು ಬೇಗನೇ ಕಳುಹಿಸಿದನು. 'ನಾನು

ಯುದ್ಧದಲ್ಲಿ ಕೌರವರನ್ನು ಜಯಿಸಿದೆನು. ಗೋವುಗಳನ್ನು ಜಯಿಸಿ ಕರಕೊಂಡು ಬಂದೆನು' ಎಂದು ನಗರವನ್ನು ಪ್ರವೇಶಿಸಿ ಹೇಳಿರಿ ಎಂದು ಹೇಳಿ ಕಳುಹಿಸಿದನು.



## ವಿರಾಟನು ಸುಶರ್ಮನನ್ನು ಜಯಿಸಿ ಬಂದುದು [1]

ಇತ್ತ ವಿರಾಟನು ಸುಶರ್ಮನನ್ನು ತ್ರಿಗರ್ತದೇಶದವರನ್ನು ಜಯಿಸಿ ಸಂತೋಷದಿಂದ ನಾಲ್ಕು ಜನರ ಪಾಂಡವರಿಂದ ಸಹಿತನಾಗಿ ಗೋವುಗಳನ್ನು ಧನವನ್ನು ತೆಗೆದು ಕೊಂಡು ನಗರಕ್ಕೆ ಬಂದು ಸೇರಿದನು. ಪಾಂಡವರಿಂದ ಸಹಿತನಾಗಿ ಪ್ರಕಾಶಿಸಿದನು. ಸಭೆಯಲ್ಲಿ ಕೂತಿರುವ ಅವನ ಬಳಿಗೆ ಪ್ರಜೆಗಳೂ ಬ್ರಾಹ್ಮಣರೂ ಬಂದರು. ಬಂದವರಿಂದ ಸತ್ಕೃತನಾಗಿ ತಾನೂ ಅವರಿಗೆ ಸತ್ಕಾರ ಮಾಡಿ ಕಳುಹಿಸಿದನು. ತರುವಾಯ ಅವನು ನೂರಾರು ಸ್ತ್ರೀಯರಿಂದ ಅಲಂಕೃತವಾದ ಅಂತಃಪುರವನ್ನು ಪ್ರವೇಶಿಸಿ ಅಲ್ಲಿ ಉತ್ತರಕುಮಾರನನ್ನು ನೋಡಲಿಲ್ಲ. ಅವನೆಲ್ಲಿ ಹೋಗಿರುವನೆಂದು ಕೇಳಿದನು. ಆಗ ಅಲ್ಲಿದ್ದ ಸ್ತ್ರೀಯರು ಮತ್ತು ಅಂತಃಪುರದಲ್ಲಿ ಇದ್ದ ಜನರು ಸಂತೋಷದಿಂದ 'ಕುಮಾರನು ಕೌರವರು ಗೋವುಗಳನ್ನು ಅಪಹಾರ ಮಾಡಿಕೊಂಡು ಹೋದುದನ್ನು ಕೇಳಿ ಕೋಪವುಳ್ಳವನಾಗಿ ಒಬ್ಬನೇ ಸಾಹಸದಿಂದ ಬೃಹನ್ನಳೆಯನ್ನು ಸಹಾಯಕ್ಕೆ ಮಾಡಿಕೊಂಡು, ಅತಿರಥರಾದ ದ್ರೋಣಾಚಾರ್ಯ ರನ್ನು, ಭೀಷ್ಮಾಚಾರ್ಯರನ್ನು, ಕೃಪಾಚಾರ್ಯರನ್ನು, ಕರ್ಣನನ್ನು, ದುರ್ಯೋಧನ ನನ್ನು, ಅಶ್ವತ್ಥಾಮಾಚಾರ್ಯರನ್ನು ಯುದ್ಧದಲ್ಲಿ ಜಯಿಸುವುದಕ್ಕಾಗಿ ಹೋಗಿರುವನು' ಎಂದು ಹೇಳಿದರು.

ಅದನ್ನು ಕೇಳಿ ವಿರಾಟರಾಜನು ಅತ್ಯಂತ ಸಂತಾಪವುಳ್ಳವನಾಗಿ ಎಲ್ಲಾ ಮಂತ್ರಿಗಳೊಡನೆ 'ಯುದ್ಧದಲ್ಲಿ ಚತುರರಾದ ಎಲ್ಲಾ ಕೌರವರೂ ಬಂದು ನನ್ನ ಮಗನನ್ನು ತಿರಸ್ಕರಿಸಿ ನಮ್ಮ ನೂರು ಸಾವಿರ ಗೋವುಗಳನ್ನು ಅಪಹರಿಸುತ್ತಿರುವರು. ಈಗ ಯುದ್ಧದಲ್ಲಿ ಗಾಯವನ್ನು ಹೊಂದದೆ ಇರುವ ಸೈನಿಕರೆಲ್ಲರೂ ಮಹಾಸೈನ್ಯದಿಂದ ಸಹಿತರಾಗಿ ಉತ್ತರನನ್ನು ರಕ್ಷಿಸುವುದಕ್ಕಾಗಿ ಹೋಗಿರಿ' ಎಂದು ಹೇಳಿದನು. ಕುದುರೆಗಳನ್ನು ಆನೆಗಳನ್ನು ರಥಗಳನ್ನು ವಾದ್ಯಗಳನ್ನು ವಿಚಿತ್ರ ಆಭರಣಗಳಿಂದ ಅಲಂಕರಿಸಿ ಬೇಗನೇ ಮಗನಿಗಾಗಿ ಕೊಟ್ಟು ಕಳುಹಿಸಿದನು. ಈರೀತಿಯಾಗಿ

1. ಭಾ.ವಿ.ಪ ಅ-68

ಚತುರಂಗ ಸೈನ್ಯವನ್ನು ಕೊಟ್ಟು ಕಳುಹಿಸಿದನು. 'ಬೇಗನೇ ಹೋಗಿ ಕುಮಾರನು ಬದುಕಿರುವನೋ ಇಲ್ಲವೋ ನೋಡಿರಿ. ಯಾವಾತನಿಗೆ ನಪುಂಸಕನು ಸಾರಥಿಯಾಗಿ ಹೋಗಿರುವನೋ ಅವನು ಬದುಕಿರಲಾರನೆಂದು ಯೋಚಿಸುವೆನು' ಎಂದು ಹೇಳಿದನು.

ಆಗ ಧರ್ಮರಾಜನು ಕೌರವರಿಂದ ವಿರಾಟರಾಜನು ಭಯಪಟ್ಟು ದುಃಖ ಪಡುವುದನ್ನು ನೋಡಿ 'ರಾಜನೇ! ಬೃಹನ್ನಳೆಯು ಸಾರಥಿಯಾಗಿ ಹೋಗಿದ್ದರೆ ಈಗ ನಿನ್ನ ಗೋವುಗಳನ್ನು ಶತ್ರುಗಳನ್ನು ತೆಗೆದುಕೊಂಡು ಹೋಗುವುದಿಲ್ಲ. ಆ ಸಾರಥಿಯಿದ್ದರೆ ನಿನ್ನ ಮಗನು ಸಮಸ್ತರಾಜರನ್ನು ಕೌರವರನ್ನು ಹಾಗೆಯೇ ದೇವಾಸುರನಾಗಯಕ್ಷರನ್ನು ಯುದ್ಧದಲ್ಲಿ ಜಯಿಸಲಿಕ್ಕೆ ಸಮರ್ಥನಾಗುವನು. ಕೌರವರೋ, ಇತರ ರಾಜರೋ, ತ್ರಿಗರ್ತದೇಶದವರು ಸೋತು ಹೋದದ್ದನ್ನು ಕೇಳಿ ನಿಲ್ಲಲಾರರು' ಎಂದು ಹೇಳಿದನು.

ಅಷ್ಟರಲ್ಲಿ ಉತ್ತರಕುಮಾರನಿಂದ ಕಳುಹಿಸಲ್ಪಟ್ಟ ಶೀಘ್ರಗಾಮಿಗಳಾದ ದೂತರು ವಿರಾಟನಗರನ್ನು ಪ್ರವೇಶಿಸಿ ಜಯವನ್ನು ತಿಳಿಸಿದರು. ಮಂತ್ರಿಗಳಿಂದ ಸಹಿತನಾದ ರಾಜನೊಡನೆ ನಮಗೆ ಜಯವಾಯಿತೆಂದೂ ಕೌರವನಿಗೆ ಪರಾಜಯವಾಯಿತೆಂದೂ ಉತ್ತರಕುಮಾರನು ಬರುತ್ತಿರುವನೆಂದೂ ಗೋವುಗಳೂ ಬರುತ್ತಿರುವವೆಂದೂ ಕೌರವರು ಸೋತು ಓಡಿಹೋದರೆಂದೂ ಉತ್ತರನು ಸಾರಥಿಯಿಂದ ಸಹಿತನಾಗಿ ಕ್ಷೇತ್ರದಿಂದ ಇರುತ್ತಿರುವನೆಂದೂ ತಿಳಿಸಿದರು.

ಆಗ ಕಂಕ ಎಂದು ಹೆಸರುಳ್ಳ ಧರ್ಮರಾಜನು 'ರಾಜನೇ! ದೈವೇಚ್ಛೆಯಿಂದ ನಿನ್ನ ಮಗನು ಗೋವುಗಳನ್ನು ಬಿಡಿಸಿದನು. ಕೌರವರನ್ನು ಜಯಿಸಿದನು. ಜಯಶೀಲ ನಾಗಿರುವನು. ನಿನ್ನ ಮಗನು ಕೌರವರನ್ನು ಜಯಿಸಿದ್ದು ಆಶ್ಚರ್ಯವಲ್ಲವೆಂದು ನನ್ನ ಅಭಿಪ್ರಾಯವು. ಯಾಕೆಂದರೆ ಯಾರಿಗೆ ಬೃಹನ್ನಳೆಯು ಸಾರಥ್ಯವನ್ನು ಮಾಡುವಳೋ ಅವನಿಗೆ ನಿಶ್ಚಯವಾಗಿಯೂ ಜಯವೇ ಲಭಿಸುವುದು. ದೇವೇಂದ್ರನ ಸಾರಥಿಯಾದ ಮಾತಲಿಯೂ, ಶ್ರೀಕೃಷ್ಣನ ಸಾರಥಿಯಾದ ದಾರುಕನೂ, ಬೃಹನ್ನಳೆಗೆ ಸಮಾನರಾಗ ಲಾರರು' ಎಂದು ಹೇಳಿದನು.

ವಿರಾಟರಾಜನು ಮಗನ ವಿಜಯವರ್ತಮಾನವನ್ನು ಕೇಳಿ ಸಂತೋಷದಿಂದ ರೋಮಾಂಚವುಳ್ಳವನಾದನು. ದೂತರಿಗೆ ಹಣವನ್ನು ರತ್ನವನ್ನು ಕೊಟ್ಟು ಸಂತೋಷಪಡಿಸಿ ಕಳುಹಿಸಿದನು. ಅವರು ಹೊರಟುಹೋದ ಮೇಲೆ ಉತ್ತರನ ಜಯದಿಂದ ಪ್ರೀತಿಯುಳ್ಳವನಾದ ವಿರಾಟರಾಜನು 'ರಾಜಮಾರ್ಗಗಳೆಲ್ಲವನ್ನೂ

ಅಲಂಕರಿಸಿರಿ. ದೇವರ ಗುಡಿಗಳಲ್ಲೆಲ್ಲಾ ಅರ್ಚನೆ ಮಾಡಿಸಿರಿ. ಕುಮಾರರೂ ಸೈನಿಕರೂ ವೇಶ್ಯಾಸ್ತ್ರೀಯರೂ ನನ್ನ ಮಗನನ್ನು ಎದುರುಗೊಂಡು ತರಲಿಕ್ಕೆ ಹೋಗಲಿ. ವಾದ್ಯಗಳೂ ಹೋಗಲಿ. ನನ್ನ ಮಗನು ಜಯವನ್ನು ಹೊಂದಿರುವಾಗ ನಮ್ಮ ಊರಲ್ಲಿರುವ ಎಲ್ಲಾ ಗಂಡಸರೂ ಹೆಂಗಸರೂ ಶುದ್ಧವಾದ ವಸ್ತ್ರವನ್ನು ಧರಿಸಿಕೊಂಡು ಇರಬೇಕು. ಹೆಂಗಸರೆಲ್ಲರೂ ವಾಸನೆಯುಳ್ಳ ಪುಷ್ಪಗಳನ್ನು ಆಭರಣಗಳನ್ನು ಧರಿಸಿಕೊಂಡು ಇರಬೇಕು. ಎಲ್ಲಾ ಕನ್ಯೆಯರೂ, ವೇಶ್ಯಾಸ್ತ್ರೀಯರೂ, ಇತರ ಸ್ತ್ರೀಯರೂ ನನ್ನ ಮಗನನ್ನು ಎದುರುಗೊಂಡು ಕರತರಲಿಕ್ಕೆ ಹೋಗಲಿ. ಆನೆಯ ಮೇಲೆ ಕೂತುಕೊಂಡು ಎಲ್ಲಾ ಬೀದಿಗಳಲ್ಲಿ ನನ್ನ ಜಯವನ್ನು ಹೇಳಲಿ. ಉತ್ತರೆಯೂ ಬಹು ಆಭರಣಗಳಿಂದ ಅಲಂಕೃತಳಾಗಿ ಕುಮಾರಿಯರಿಂದ ಸಹಿತಳಾಗಿ ಯುದ್ಧದಲ್ಲಿ ಜಯವನ್ನು ಹೊಂದಿಬರುತ್ತಿರುವ ಸಖಿಯಾದ ಬೃಹನ್ನಳೆಯನ್ನು ಎದುರುಗೊಂಡು ಕರತರಲಿ' ಎಂದು ಹೇಳಿದನು. ರಾಜನ ಮಾತನ್ನು ಕೇಳಿ ಊರಿನ ಜನರು ಸಂತೋಷವುಳ್ಳವರಾಗಿ ಹಾಗೆಯೇ ಮಾಡಿದರು. ವಿರಾಟನಗರದಲ್ಲಿ ಇದ್ದ ಸೂತರೂ, ಮಾಗಧರೂ, ಊರಿನ ಜನರೂ ಸಂತೋಷದಿಂದ ಹೋದರು. ನಾನಾ ವಾದ್ಯಗಳು ಹೋದವು. ಹೆಂಗಸರೂ, ಗಂಡಸರೂ ಅಲಂಕಾರ ಮಾಡಿಕೊಂಡರು. ಹೆಂಗಸರೂ ರಾಜಪುತ್ರನನ್ನು ಎದುರುಗೊಂಡು ಕರತರಲಿಕ್ಕೆ ನಾನಾವಾದ್ಯಗಳಿಂದ ಸಹ ಊರಿನ ಹೊರಗೆ ಹೋದರು. ವೇದಾಧ್ಯಯನಾದಿಗಳನ್ನು ಮಾಡಿದ್ದ ಬ್ರಾಹ್ಮಣರೂ ಹೋದರು.



## ಧರ್ಮರಾಜನು ವಿರಾಟನೊಡನೆ ಪಗಡೆ ಆಟವಾಡಿದ್ದು[1]

ವಿರಾಟರಾಜನು ಸೇನೆಯನ್ನು ಕನ್ಯೆಯರನ್ನು ಅಲಂಕರಿಸಲ್ಪಟ್ಟ ವೇಶ್ಯಾ ಸ್ತ್ರೀಯರನ್ನು ಕಳುಹಿಸಿ ಸಂತೋಷದಿಂದ ಧರ್ಮರಾಜನೊಡನೆ 'ಬ್ರಾಹ್ಮಣ! ತ್ರಿಗರ್ತದೇಶದವರೂ ಕೌರವರೂ ಯುದ್ಧದಲ್ಲಿ ಜಯಿಸಲ್ಪಟ್ಟರು. ಸಂತೋಷದಿಂದ ಅಂತಃಪುರವನ್ನು ಪ್ರವೇಶಿಸಿ ಪಗಡೆ ಆಟವನ್ನು ಆಡುವ. ಸೈರಂಧ್ರಿ! ಪಗಡೆಕಾಳುಗಳನ್ನು ತೆಗೆದುಕೊಂಡು ಬಾ ಆಸನವನ್ನು ಸರಿಪಡಿಸು. ಬೀಸಣಿಗೆಯನ್ನು ಹಿಡಿದುಕೊಂಡು ಬೀಸುತ್ತಾ ನಿಂತಿರು' ಎಂದು ಹೇಳಿದನು. ಹಾಗೆ ಹೇಳುತ್ತಿರುವ ವಿರಾಟನನ್ನು ನೋಡಿ ಧರ್ಮರಾಜನು

1. ಭಾ.ವಿ.ಪ ಅ-68

'ರಾಜನೇ! ಸಂತೋಷದಿಂದ ಇರುವಾಗ ಪಗಡೆ ಆಟವನ್ನು ಆಡಬಾರದು. ಆದುದರಿಂದ ಈಗ ಸಂತೋಷದಿಂದ ಇರುವ ನಿನ್ನೊಡನೆ ನಾನು ಪಗಡೆ ಆಟವಾಡಲಿಕ್ಕೆ ಉತ್ಸಾಹಿಯಾಗಿಲ್ಲ. ನಿನಗೆ ಬೇರೆ ಯಾವ ಪ್ರಿಯವನ್ನು ಮಾಡಲಿಕ್ಕೂ ಸಿದ್ಧನಿರುವೆನು. ಸಭೆಯಲ್ಲಿ ಪಗಡೆ ಆಟವನ್ನು ಮಾತ್ರ ಆಡಲಾರೆನು' ಎಂದನು.

ಅದಕ್ಕೆ ವಿರಾಟನು 'ಸ್ತ್ರೀಯರೋ, ಗೋವುಗಳೋ, ಬಂಗಾರವೋ, ಇತರ ವಸ್ತುವೋ, ಯಾವುದೂ ನನಗೆ ಬೇಕಾಗಿಲ್ಲ. ನನಗೆ ಬೇಕಾದುದು ಪಗಡೆ ಆಟವೇ' ಎಂದನು.

ಅದಕ್ಕೆ ಧರ್ಮರಾಜನು 'ರಾಜಶ್ರೇಷ್ಠನೇ! ಬಹುದೋಷವುಳ್ಳ ಪಗಡೆ ಆಟವು ನಿನಗೆ ಏಕೆ ಬೇಕಾಗಿದೆ? ಪಗಡೆ ಆಟದಲ್ಲಿ ಬಹಳ ದೋಷವಿದೆ. ಆದುದರಿಂದ ಅದನ್ನು ಪರಿತ್ಯಜಿಸಬೇಕು. ನೀನು ಧರ್ಮರಾಜನನ್ನು ಕೇಳಿರಬಹುದು ಅಥವಾ ನೋಡಿರಬಹುದು. ಅವನು ತನ್ನ ರಾಜ್ಯವೆಲ್ಲವನ್ನೂ ಪಗಡೆ ಆಟದಲ್ಲಿ ಕಳೆದುಕೊಂಡನು. ತನ್ನ ಪ್ರೀತಿಪಾತ್ರಳಾದ ಹೆಂಡತಿಯನ್ನು ಸಹೋದರರನ್ನು ಆಟದಲ್ಲಿ ಸೋತನು. ಅವನು ಈಗ ನಿಶ್ಚಯವಾಗಿಯೂ ಪಶ್ಚಾತ್ತಾಪ ಪಡುತ್ತಾ ಇರುವನು. ಒಬ್ಬರೂ ನಂಬಲಾರರು. ಅವನು ಅಕ್ಷಯವಾದ ಹಣವನ್ನು ಒಂದೇ ದಿವಸದಲ್ಲಿಯೇ ಸೋತನು. ಆದುದರಿಂದ ಪಗಡೆ ಆಟವಾಡುವುದು ನನಗೆ ಇಷ್ಟವಲ್ಲ. ಅಥವಾ ನಿನಗೆ ಆಡಬೇಕೆಂದೇ ಇದ್ದರೆ ಆಡುವ' ಎಂದು ಹೇಳಿದನು. ತರುವಾಯ ಅವರಿಬ್ಬರು ಪಗಡೆ ಆಟವನ್ನು ಆಡಿಕೊಂಡರು.

ಪಗಡೆ ಆಟವು ನಡೆಯುತ್ತಿರಲು ವಿರಾಟರಾಜನು ಧರ್ಮರಾಜನೊಡನೆ 'ನೋಡು ನನ್ನ ಮಗನು ಯುದ್ಧದಲ್ಲಿ ಅಂತಹ ಕೌರವರನ್ನು ಜಯಿಸಿದನು. ಕೌರವರೆಲ್ಲರೂ ಮಹಾರಥಿಕರು. ದೇವತೆಗಳಿಂದಲೂ ಪರಾಜಯ ಶೂನ್ಯರು' ಎಂದು ಹೇಳಿದನು. ಆಗ ಧರ್ಮರಾಜನು 'ದೈವೇಚ್ಛೆಯಿಂದ ಗೋವುಗಳು ಹಿಂದೆ ಬಂದವು. ದೈವೇಚ್ಛೆಯಿಂದಲೇ ಕೌರವರೂ ಸೋತುಹೋದರು. ಉತ್ತರನು ಕೌರವರನ್ನು ಜಯಿಸಿದನೆಂದರೆ ತುಂಬಾ ಆಶ್ಚರ್ಯವೆಂದೇ ನಾನು ತಿಳಿಯುವೆನು. ಆದರೆ ಬೃಹನ್ನಳೆಯು ಸಾರಥಿಯಾಗಿರುವ ಕಾರಣ ಬಹುಕಷ್ಟದಿಂದ ಜಯಿಸಿರಬಹುದು' ಎಂದನು. ಅದನ್ನು ಕೇಳಿ ವಿರಾಟನಿಗೆ ಕೋಪವು ಬಂದಿತು. ಅಂತಹ ಮಹಾಧನುರ್ಧಾರಿಯಾದ ಬುದ್ಧಿವಂತನಾದ ನನ್ನ ಮಗನು ಯುದ್ಧದಲ್ಲಿ ಕೌರವರನ್ನು ಜಯಿಸಿದರೆ ಆಶ್ಚರ್ಯವೇನೋ? ಬ್ರಾಹ್ಮಣ'' ಎಂದನು.

ಧರ್ಮರಾಜನು 'ಅಂತಹ ಪರಾಕ್ರಮಶಾಲಿಯಾದ ಸಾರಥಿಯು ಯಾರ

ರಥದಲ್ಲಿ ಇರುವನೋ ಅವನು ಇತರರಿಂದ ಮಾಡಲಿಕ್ಕೆ ಅಶಕ್ಯವಾದ ಕಾರ್ಯವನ್ನು ಮಾಡಿದರೆ ಆಶ್ಚರ್ಯವಲ್ಲವೇ?' ಎಂದನು.

ಆಗ ವಿರಾಟನು 'ಕೆಟ್ಟ ಬ್ರಾಹ್ಮಣನೇ! ನಪುಂಸಕನಿಗೆ ಸಮವಾಗಿ ನನ್ನ ಮಗನನ್ನು ಸ್ತುತಿಸುವಿ. ಯಾವ ಮಾತನ್ನು ಆಡಬಹುದು, ಆಡಬಾರದು ಎಂಬುದನ್ನು ನೀನು ತಿಳಿದಿಲ್ಲ. ನನ್ನನ್ನು ಅವಮಾನ ಮಾಡುತ್ತಿರುವಿ. ನಾನು ಅನೇಕ ಪುರುಷರನ್ನು ಸಾರಥಿಗಳನ್ನು ನೋಡಿರುವೆನು. ಸಾರಥಿಯ ಪರಾಕ್ರಮದಿಂದ ಯುದ್ಧ ಮಾಡಿದ್ದನ್ನು ನಾನು ನೋಡಿಲ್ಲ. ರಾಜರಿಗೆ ಯಾವಾಗಲೂ ಅಪ್ರಿಯವನ್ನು ಮಾಡಬಾರದು. ಅನುಕೂಲವನ್ನೇ ಮಾಡಬೇಕು. ರಾಜರಿಗೆ ಅಪ್ರಿಯವನ್ನು ಮಾಡುವವನು ಸುಖ ದಿಂದ ಇರಲಾರನು. ನೀನು ನನ್ನ ಮಿತ್ರನಾದ ಕಾರಣ ನಿನ್ನ ಅಪರಾಧವೆಲ್ಲವನ್ನೂ ಕ್ಷಮಿಸಿರುವೆನು. ಇನ್ನು ಬದುಕಿರಬೇಕೆಂದು ಇಚ್ಛೆಯಿರುವುದಾದರೆ ಇಂತಹ ಮಾತು ಗಳನ್ನು ಆಡಬೇಡ' ಎಂದು ಹೇಳಿದನು.

ಆಗ ಧರ್ಮರಾಜನು ನಗುತ್ತಾ 'ರಾಜನೇ! ಹಾಗಾದರೆ ಬೃಹನ್ನಳೆಯೇ ಜಯಿಸಿದಳೆಂದು ಊರಲ್ಲಿ ಡಂಗುರ ಸಾರಿಸು. ನಿಶ್ಚಯವಾಗಿಯೂ ಉತ್ತರನ ಸಾರಥ್ಯವನ್ನು ಮಾಡಿರುವನು. ನನ್ನ ಊಹೆಯು ಸತ್ಯವಾದದ್ದು. ಅದು ಸುಳ್ಳಲ್ಲ. ಕೌರವರು ಸಾಮಾನ್ಯರಲ್ಲ. ಮಹಾಪರಾಕ್ರಮಶಾಲಿಗಳು. ದೇವತೆಗಳಿಂದಲೂ ಸೋಲುವವರಲ್ಲ. ಅವರ ಪಕ್ಷದಲ್ಲಿ ಭೀಷ್ಮಾಚಾರ್ಯರೂ, ದ್ರೋಣಾಚಾರ್ಯರೂ, ಕೃಪಾಚಾರ್ಯರೂ, ಅಶ್ವತ್ಥಾಮಾಚಾರ್ಯರೂ, ವಿಕರ್ಣನೂ, ಸೋಮದತ್ತನೂ, ಜಯದ್ರಥನೂ, ಭೂರಿಶ್ರವನೂ, ಶಲನೂ, ಭೂರಿಯೂ, ಜಲಸಂಧಿಯೂ, ದುರ್ಯೋಧನನೂ, ದುಃಶಾಸನನೂ, ವಿವಿಂಶಂತಿಯೂ, ವೃಷಸೇನನೂ, ಅಶ್ವಸೇನನೂ, ವಾಯುವೇಗನೂ, ಸುವರ್ಚಸನೂ, ಬಾಹ್ಲೀಕನೂ, ಶೂರಸೇನನೂ, ಯುಯುತ್ಸುವೂ, ಶಕುನಿಯೂ, ದ್ಯುಮತ್ಸೇನನೂ, ಇನ್ನು ಇತರ ರಾಜಪುತ್ರರೂ ಇರುವರು. ಮರುತ್ತುಗಳಿಂದ ಕೂಡಿಕೊಂಡು ಇಂದ್ರದೇವರೇ ಬಂದರೂ ಭೀಷ್ಮದ್ರೋಣಾದಿಗಳಿಂದ ಯುಕ್ತವಾಗಿರುವ ಕೌರವಸೇನೆಯನ್ನು ಜಯಿಸಲಿಕ್ಕೆ ಆಗಲಾರದು. ಅಂತಹ ಸೈನ್ಯದೊಡನೆ ಬೃಹನ್ನಳೆಯನ್ನು ಬಿಟ್ಟು ಬೇರೆ ಯಾವ ಮನುಷ್ಯನು ಯುದ್ಧ ಮಾಡುವನು? ಬಾಹುಬಲದಲ್ಲಿ ಆ ಬೃಹನ್ನಳೆಗೆ ಸಮಾನನಾದವನು ಯಾರೊಬ್ಬನೂ ಬರಲಾರನು. ಅವನಿಗೆ ಯುದ್ಧವನ್ನು ಕಂಡರೆ ಅತ್ಯಂತ ಸಂತೋಷವುಂಟಾಗುತ್ತದೆ. ಅಂತಹ ಪುರುಷನೇ ಭೂಮಿಯಲ್ಲಿಯೋ ಸ್ವರ್ಗದಲ್ಲಿಯೋ ಇರುವನೇ?' ಎಂದು ಹೇಳಿದನು.

ಆ ಮಾತನ್ನು ಕೇಳಿ ವಿರಾಟನಿಗೆ ಕೋಪವನ್ನು ತಡೆಯಲಾಗಲಿಲ್ಲ ಅವನು ಧರ್ಮರಾಜನೆಂಬುದನ್ನು ತಿಳಿಯದೆ ಕ್ರೂರವಾದ ಮಾತನ್ನು ಆಡಿದನು. 'ಕಂಕ! ನನಗೆ ವಿರುದ್ಧವಾಗಿ ಮಾತಾಡಬೇಡ. ಬ್ರಾಹ್ಮಣ! ಅನೇಕಬಾರಿ ಬೇಡವೆಂದು ಹೇಳಿದರೂ ನಿನ್ನ ಮಾತನ್ನು ನಿಲ್ಲಿಸುವುದಿಲ್ಲ. ಕೇಳುವವರು ಇಲ್ಲದಿದ್ದರೆ ಯಾರೂ ಧರ್ಮವನ್ನು ಮಾಡಲಾರರು' ಎಂದು ಹೇಳುತ್ತಾ ವಿರಾಟನು ಬಲಕೈಯನ್ನು ಎತ್ತಿ ಕೋಪದಿಂದ ಧರ್ಮರಾಜನ ಬಲಕಿವಿಯ ಹತ್ತಿರ ಮುಖಕ್ಕೆ ಬಡೆದನು. ಕೋಪದಿಂದ 'ಇನ್ನು ಮುಂದೆ ಹೀಗೆ ಮಾಡಬೇಡ' ಎಂದು ಹೇಳಿದನು. ವಿರಾಟನು ಬಲವಾಗಿ ಬಡೆದ ಕಾರಣ ಧರ್ಮರಾಜನ ಮೂಗಿನಿಂದ ರಕ್ತವು ಸುರಿಯಿತು. ವಿರಾಟನಿಂದ ಹೀಗೆ ಪಗಡೆಕಾಳಿನಿಂದ ಬಡೆಯಲ್ಪಟ್ಟ ಧರ್ಮರಾಜನು ಲೋಕರೀತಿ ಯಿಂದ ದುಃಖಯುಕ್ತರಾದ ದ್ರೌಪದೀದೇವಿಯನ್ನು ನೋಡುತ್ತಾ ಸುಮ್ಮನೆ ಕೂತಿದ್ದನು. ಮೂಗಿನಿಂದ ಸುರಿಯುತ್ತಿದ್ದ ರಕ್ತವನ್ನು ಕೆಳಗೆ ಬೀಳಲಿಕ್ಕೆ ಬಿಡದೆ ಕೈಗಳಲ್ಲಿ ಹಿಡಿದು ಪಾರ್ಶ್ವದಲ್ಲಿ ನಿಂತಿದ್ದ ದ್ರೌಪದೀದೇವಿಯರನ್ನು ನೋಡಿದನು. ಆಗ ದ್ರೌಪದೀದೇವಿಯರು ಧರ್ಮರಾಜನ ವೇದನೆಯನ್ನು ತಿಳಿದು ಲೋಕರೀತಿಯಿಂದ ವಿಷಾದವುಳ್ಳವರಾಗಿಯೂ, ಭಯವುಳ್ಳವರಾಗಿಯೂ, ಕೋಪವುಳ್ಳವರಾಗಿಯೂ, ಆಗಿ ಪತಿಯ ಶ್ರೇಯಸ್ಸನ್ನು ಬಯಸುವವರಾಗಿ ಕಣ್ಣೀರನ್ನು ಒರಸಿಕೊಂಡು ಆ ರಕ್ತವನ್ನು ತನ್ನ ಉತ್ತರೀಯವಸ್ತ್ರದಿಂದ ಹಿಡಿದರು. ಅದನ್ನು ಬಂಗಾರದ ಪಾತ್ರೆಯಲ್ಲಿ ಹಿಂಡಿದರು. ಅದನ್ನು ನೋಡಿ ವಿರಾಟನು 'ಸೈರಂಧ್ರಿ! ರಕ್ತವನ್ನು ಉತ್ತರೀಯ ವಸ್ತ್ರದಿಂದ ಯಾಕೆ ಹಿಡಿಯುವಿ? ಇದಕ್ಕೆ ಏನು ಕಾರಣ? ಸತ್ಯವನ್ನು ಹೇಳು' ಎಂದು ಕೇಳಿದನು.

ಅದಕ್ಕೆ ದ್ರೌಪದೀದೇವಿಯರು 'ಈ ಕಂಕಯತಿಗಳ ಎಷ್ಟು ರಕ್ತಬಿಂದುಗಳು ಭೂಮಿಯಲ್ಲಿ ಬೀಳುವುವೋ ಅಷ್ಟು ವರ್ಷ ನಿನ್ನ ರಾಷ್ಟ್ರದಲ್ಲಿ ಮಳೆಯು ಬರಲಾರದು. ಅದಕ್ಕಾಗಿ ನಿನಗೆ ನಾಶ ಏರ್ಪಡಬಾರದೆಂದು(ವಾಗಬಾರದೆಂದು) ಕಂಕಯತಿಗಳ ರಕ್ತವನ್ನು ಉತ್ತರೀಯವಸ್ತ್ರದಿಂದ ಹಿಡಿದಿರುವೆನು. ಯಾರು ಯತಿಶ್ರೇಷ್ಠರನ್ನು ಬಡಿಯುತ್ತಾರೋ ಅವರ ಆಯುಷ್ಯವು ನಷ್ಟವಾಗುವುದು. ಯಾರು ಯತಿಶ್ರೇಷ್ಠರನ್ನು ನಿಗ್ರಹಿಸುವರೋ ಅವರು(ಅವರಿಗೆ) ಸಾವಿರಾರು ನರಕಗಳಾಗುವುವು. ಯತಿಗಳ ರಕ್ತವನ್ನು ಸುರಿಸಿದರೆ ಆ ರಕ್ತದಲ್ಲಿ ಎಷ್ಟು ಧೂಳಿಯು ಒದ್ದೆಯಾಗುವುದೋ ಅಷ್ಟುಜನ ಪಿತೃಲೋಕದಲ್ಲಿ ಇರುವ ಪಿತೃಗಳು ನರಕಕ್ಕೆ ಬೀಳುವರು. ಇದನ್ನು ತಿಳಿದುಕೊಂಡು ನಾನು ನಿನ್ನಲ್ಲಿ ಭಕ್ತಿಯಿರುವ ಕಾರಣ ನಿನ್ನ ಹಿತಕ್ಕಾಗಿ ರಕ್ತವನ್ನು ಉತ್ತರೀಯವಸ್ತ್ರದಿಂದ ಹಿಡಿದಿರುವೆನು' ಎಂದು ಹೇಳಿದರು.



# ಉತ್ತರನು ನಗರಪ್ರವೇಶವನ್ನು ಮಾಡಿದ್ದು [1]

ಇಂದ್ರಾದಿದೇವತೆಗಳೂ ಋಷಿಗಳೇ ಮೊದಲಾದವರೂ ಒಬ್ಬನಾದ (ಒಬ್ಬನೇ) ಅರ್ಜುನನಿಗೂ ಅನೇಕರಾದ ಕೌರವರಿಗೂ ನಡೆದ ಯುದ್ಧವನ್ನು ನೋಡಿ ಸಂತುಷ್ಟರಾಗಿ ಹೊರಟುಹೋದರು. ಕೌರವರು ಅರ್ಜುನನ ಬಾಣಗಳಿಂದ ಗಾಯಹೊಂದಿದವರಾಗಿ ತಮ್ಮ ದೇಶಕ್ಕೆ ಹೊರಟುಹೋದರು.

ವಿರಾಟರಾಜನು ಕಳುಹಿಸಿದ ಸೇನೆಯು ಬೇಗನೇ ಹೋಗಿ ಉತ್ತರನಿದ್ದಲ್ಲಿಗೆ ಹೋಯಿತು. ನೂರಾರು ವಾದ್ಯಗಳಿಂದ ಕೂಡಿದ, ಆನೆ, ಕುದುರೆ, ರಥಗಳಿಂದ ಯುಕ್ತವಾಗಿದ್ದು ಆ ಸೈನ್ಯದಲ್ಲಿ ಹೆಂಗಸರಿಗೂ ಮಕ್ಕಳಿಗೂ ಬಹಳ ಸಂತೋಷವಿದ್ದಿತ್ತು. ಅರ್ಜುನನು ಸೈನ್ಯದ ಧೂಳಿಯನ್ನು ನೋಡಿ ಸೈನ್ಯದ ಧ್ವಜವನ್ನೂ ನೋಡಿ ಉತ್ತರನೊಡನೆ 'ನಗರದಲ್ಲಿ ಬಹಳ ಶಬ್ದವು ಕೇಳಿಸುತ್ತಿದೆ. ಧೂಳಿಯು ಆಕಾಶದವರೆಗೆ ಹೋಗುತ್ತಿದೆ. ಹೊರಟುಹೋದ ಕೌರವರು ನಗರಕ್ಕೆ ಬಂದು ಬಿಟ್ಟರೋ ಏನೋ! ಒಂದು ಬಾರಿ ಎಲ್ಲರೂ ಸೋತುಹೋದರು. ಕವಚವನ್ನು ಸರಿಯಾಗಿ ಧರಿಸು. ಕುದುರೆಗಳನ್ನು ಬೇಗನೇ ಓಡಿಸು. ಬೇಗನೇ ನಗರವನ್ನು ಹೊಂದು. ನಾನು ಹಸ್ತದ ಶಬ್ದವನ್ನಾಗಲೀ, ಗಾಂಡೀವಧನುಸ್ಸಿನ ಶಬ್ದವನ್ನಾಗಲೀ ಮಾಡುವುದಿಲ್ಲ. ಧ್ವಜವನ್ನು ತೋರಿಸುವುದಿಲ್ಲ. ಅಥವಾ ಬರುತ್ತಿರುವವರು ನಮ್ಮ ಜನರೇ ಆಗಿರಬಹುದು ಎಂದು ಹೇಳಿದನು.

ಆಗ ಉತ್ತರನು 'ಇದು ಮತ್ಸ್ಯದೇಶದ ಸೇನೆಯು. ವೇಶ್ಯಾಸ್ತ್ರೀಯರು ಅಲಂಕೃತರಾಗಿ ಬರುತ್ತಿರುವರು. ರಥಗಳಲ್ಲಿ ಕನ್ಯೆಯರೂ ಕಾಣಿಸುತ್ತಿರುವರು. ಸೈನಿಕರೂ ನಾನಾವಿಧ ವಸ್ತ್ರಗಳನ್ನು ಧರಿಸಿರುವರು. ಸಖಿಯರಿಂದ ಕೂಡಿಕೊಂಡು ಉತ್ತರೆಯೂ ಕಾಣಿಸುವಳು. ಆನೆ ಕುದುರೆಗಳು ಕವಚವುಳ್ಳವಾಗಿ ಕಾಣಿಸುತ್ತಿವೆ. ರಥಿಕರೂ ಪದಾತಿಗಳೂ ಬಹುಜನರಿದ್ದಾರೆ. ಆದರೆ ಆಯುಧಗಳನ್ನು ಧರಿಸಿಕೊಂಡು ಇಲ್ಲ. ವಿರಾಟರಾಜರ ಮಾತಿನಿಂದ ಎಲ್ಲರೂ ಸಂತೋಷದಿಂದ ಬಂದಿರುವಂತೆ ಕಾಣಿಸುತ್ತದೆ. ನಮಗೊಂದೂ ಇವರಿಂದ ವಿಘ್ನವಿಲ್ಲ' ಎಂದು ಹೇಳಿದನು.

ತರುವಾಯ ಬೇಗನೇ ಆ ಜನರೆಲ್ಲರೂ ಬಂದು ಉತ್ತರನನ್ನು ಆಲಿಂಗನ ಮಾಡಿದರು. 'ಉತ್ತರ. ನಿನಗೆ ಮಂಗಳವಾಗಲಿ. ದೈವೇಚ್ಛೆಯಿಂದ ಜಯಿಸಿರುವಿ. ದೈವೇಚ್ಛೆಯಿಂದ ಬೃಹನ್ನಳೆಯೂ ಸೌಖ್ಯದಿಂದ ಇರುವಳು. ದೈವೇಚ್ಛೆಯಿಂದಲೇ ನಿನಗೆ ಯುದ್ಧರಂಗಕ್ಕೆ ಹೋಗಿ ಸ್ವಲ್ಪವೂ ಭಯವುಂಟಾಗಲಿಲ್ಲ' ಎಂದು ಹೇಳಿದರು.

---

1. ಭಾ.ವಿ.ಪ ಅ-68

ಆಗ ಉತ್ತರನು 'ಈ ಮಹಾನುಭಾವನೇ ಒಬ್ಬನೇ ಯುದ್ಧದಲ್ಲಿ ಕೌರವರನ್ನು ಜಯಿಸಿದನು. ಗೋವುಗಳನ್ನು ಕರೆದುಕೊಂಡು ಬಂದನು. ದೇವಪುತ್ರನಂತೆ ಇರುವ ಈ ಮಹಾನುಭಾವನೇ ಈ ಮಹಾಕಾರ್ಯವನ್ನು ಮಾಡಿದನು. ನನ್ನನ್ನು ರಕ್ಷಿಸಿದನು' ಎಂದು ಹೇಳಿದನು.

ತರುವಾಯ ಉತ್ತರನಿಂದ ಪ್ರೇರಿತರಾದ ಜನರೂ ಕನ್ಯೆಯರೂ ಗಂಧಪುಷ್ಪಾದಿಗಳಿಂದ ಅರ್ಜುನನನ್ನು ಸತ್ಕರಿಸಿದರು. ಹಾಗೆಯೇ ವೈಭವದಿಂದ ನಗರದ್ವಾರಕ್ಕೆ ಬಂದರು.

ಅಲ್ಲಿರುವ ಜನರು ವಿಚಿತ್ರವಾಗಿ ಅಲಂಕರಿಸಿಕೊಂಡಿದ್ದ ಸ್ತ್ರೀಯರೂ ನಾನಾ ವಾದ್ಯಘೋಷಗಳಿಂದ ಸಹಿತರಾಗಿ ಬಂದು ಉತ್ತರನನ್ನು ಪ್ರಶಂಸಿಸಿದರು. ಜನರೆಲ್ಲರೂ ಜಯವಾಯಿತೆಂದು ಉತ್ತರನನ್ನು ಸ್ತುತಿಸುತ್ತಿರಲು ಉತ್ತರನು ಸಂತೋಷಪಡುತ್ತಿರಲಿಲ್ಲ. ಅರ್ಜುನನನ್ನೇ ನೋಡುತ್ತಿದ್ದನು. ಅರ್ಜುನನು ತಂದಿರುವ ಉತ್ತಮ ವಸ್ತ್ರಗಳನ್ನು ಉತ್ತರೆಗೂ ಇತರ ಸಖಿಯರಿಗೂ ಕೊಟ್ಟನು.



## ವಿರಾಟನು ಉತ್ತರನನ್ನು ಸತ್ಕರಿಸಿದ್ದು [1]

ಉತ್ತರನು ಊರಿನ ಜನರಿಂದಲೂ, ಹೆಂಗಸರಿಂದಲೂ, ಬಹುಮಾನ ಮಾಡಲ್ಪಡುತ್ತಾ ಅಂತಃಪುರದ ಬಾಗಿಲಿಗೆ ಬಂದು ತಂದೆಗೆ ಹೇಳಿಕಳುಹಿಸಿದನು. ದ್ವಾರಪಾಲಕನು ವಿರಾಟನ ಬಳಿಗೆ ಹೋಗಿ ನಮಸ್ಕರಿಸಿ ಕೈಮುಗಿದುಕೊಂಡು ಜಯವಾಗಲಿ ಎಂದು ಹೇಳಿ 'ಕೀರ್ತಿವಂತರಾದ ಮಹಾರಾಜರೇ! ರಾಜಕುಮಾರರು ಸಮಸ್ತಶತ್ರುಗಳನ್ನು ಜಯಿಸಿ ಸೂತನಿಂದ ಸಹಿತರಾಗಿ ಬಾಗಿಲಲ್ಲಿ ನಿಂತಿರುವರು. ಸೈನಿಕರೂ ಊರಜನರೂ ವೇಶ್ಯಾಸ್ತ್ರೀಯರೂ ಎಲ್ಲರೂ ಜಯಘೋಷ ಮಾಡುತ್ತಿರುವರು' ಎಂದು ಹೇಳಿದನು. ಅದನ್ನು ಕೇಳಿ ವಿರಾಟನು ಸಂತೋಷವುಳ್ಳವನಾಗಿ ಸಾರಥಿಯೊಡನೆ 'ಅವರಿಬ್ಬರನ್ನು ಒಳಗೆ ಕರೆದುಕೊಂಡು ಬಾ ಅವರಿಬ್ಬರನ್ನೂ ನಾನು ನೋಡಲಿಕ್ಕೆ ಆಸೆಪಡುವೆನು' ಎಂದು ಹೇಳಿದನು.

ಆಗ ಧರ್ಮರಾಜನು ಸಾರಥಿಯ ಕಿವಿಯ ಹತ್ತಿರ ಮೆಲ್ಲನೆ 'ಉತ್ತರನೊಬ್ಬನೇ ಒಳಗೆ ಬರಲಿ. ಬೃಹನ್ನಳೆಯು ಬೇಡ. ಯುದ್ಧರಂಗದಲ್ಲಿ ಬಿಟ್ಟು ಮತ್ತೆ ಎಲ್ಲಿಯಾದರೂ

1. ಭಾ.ವಿ.ಪ ಅ-68, 69

ನನ್ನ ಅಂಗದಲ್ಲಿ ರಕ್ತವನ್ನು ಉಂಟುಮಾಡಿದವನನ್ನು ಕೊಂದು ಹಾಕುವೆನೆಂದು ಆ ಬೃಹನ್ನಳೆಯ ಪ್ರತಿಜ್ಞೆಯಿದೆ. ಈಗ ನನ್ನ ಮುಖದಲ್ಲಿ ಇರುವ ರಕ್ತವನ್ನು ನೋಡಿ ಬೃಹನ್ನಳೆಯು ಸಪರಿವಾರನಾದ ವಿರಾಟರಾಜನನ್ನು ಕೊಂದು ಹಾಕುವನು. ಇಂದ್ರಾದಿದೇವತೆಗಳನ್ನು ಸಹ ಅವನು ಬಿಡಲಾರನು. ಆದುದರಿಂದ ಬೃಹನ್ನಳೆಯನ್ನು ಒಂದು ಕ್ಷಣ ಬಾಗಿಲಲ್ಲೇ ನಿಲ್ಲಿಸು. ಒಳಗೆ ಬಿಡಬೇಡ' ಎಂದನು. ಈರೀತಿಯಾಗಿ ಧರ್ಮರಾಜನು ವಿರಾಟನ ಮೇಲೆ ದಯೆಯಿಂದ ಹೇಳಿ ಸುಮ್ಮನೆ ಕೂತಿದ್ದನು. ತರುವಾಯ ಉತ್ತರನು ಒಳಗೆ ಪ್ರವೇಶಿಸಿ ತಂದೆಯ ಪಾದಗಳಿಗೆ ನಮಸ್ಕರಿಸಿದನು. ಧರ್ಮರಾಜನಿಗೂ ನಮಸ್ಕರಿಸಿದನು. ಧರ್ಮರಾಜನ ಮುಖದಲ್ಲಿ ರಕ್ತವನ್ನು ನೋಡಿ ಮೃತ್ಯುವು ಸಮೀಪಿಸಿದವನಂತೆ ಮನಸ್ಸಿನಲ್ಲಿಯೇ ದುಃಖವನ್ನು ಹೊಂದಿದನು. ಮುಖದಲ್ಲಿ ರಕ್ತವುಳ್ಳವನಾಗಿ ಏಕಾಂತದಲ್ಲಿ ಭೂಮಿಯಲ್ಲಿ ಕೂತಿದ್ದ ಸೈರಂಧ್ರಿಯಿಂದ ಸೇವಿತನಾದ ಧರ್ಮರಾಜನನ್ನು ನೋಡಿ ಉತ್ತರನು ಅವಸರದಿಂದ 'ಈ ಕಂಕರಿಗೆ ಯಾರು ಬಡೆದರು? ಯಾರು ಈ ಪಾಪಕಾರ್ಯವನ್ನು ಮಾಡಿದರು? ಯಾರು ಮೃತ್ಯುವನ್ನು ಹೊಂದಲು ಸಿದ್ಧರಿರುವರು? ಯಾರು ಹಾವನ್ನು ಕಾಲಿನಿಂದ ಒದೆದರು? ಶ್ರೋತ್ರಿಯರಾದ ಬ್ರಾಹ್ಮಣ ಶ್ರೇಷ್ಠರಾದ ಪೂಜ್ಯರಾದ ನಮಸ್ಕಾರ್ಯರಾದ ಇವರಿಗೆ ಹೀಗೆ ಮಾಡಬಾರದು' ಎಂದು ಹೇಳಿದನು.

ಮಗನ ಮಾತನ್ನು ಕೇಳಿ ವಿರಾಟನು ಭಯಗ್ರಸ್ತನಾಗಿ 'ಮಗ! ನಿನ್ನ ಜಯವನ್ನು ಕೇಳಿ ನಾನು ಬಹಳ ಸಂತೋಷವನ್ನು ಹೊಂದಿದೆನು. ಈ ಕಂಕನೊಡನೆ ಪಗಡೆ ಆಟವಾಡಿ ಕಾಲಕ್ಷೇಪ ಮಾಡಿದೆನು. ಉತ್ತರನು ಎಲ್ಲಾ ಕೌರವರನ್ನೂ ಜಯಿಸಿದನೆಂದು ನಾನು ಹೇಳಿದೆನು. ಅದಕ್ಕೆ ಈ ಕಂಕನು 'ಉತ್ತರನು ಜಯಿಸಿದ್ದಲ್ಲ, ಬೃಹನ್ನಲೆಯು ಜಯಿಸಿದ್ದು' ಎಂದು ಪುನಃ ಪುನಃ ಹೇಳಿದನು. ನಾನು ನಿನ್ನ ಜಯವನ್ನು ಪ್ರಶಂಸಿದರೆ, ಕಂಕನು ರೋಷದಿಂದ ಬೃಹನ್ನಳೆಯು ಜಯವನ್ನು ಪ್ರಶಂಸಿದನು. ನಾನು ನಿನ್ನನ್ನು ಸ್ತೋತ್ರಮಾಡಿದರೆ ಇವನು ಆ ನಪುಂಸಕನನ್ನು ಸುತ್ತಿಸಿದನು. ಆ ಬೃಹನ್ನಳೆಯನ್ನು ಪ್ರಶಂಸಾ ಮಾಡಿದ್ದರಿಂದ ನಾನು ಅಸೂಯೆಯುಳ್ಳವನಾಗಿ ಶತ್ರುಪಕ್ಷದವನಾದ ಇವನನ್ನು ಬಡೆದೆನು' ಎಂದು ಹೇಳಿದನು. ಅದನ್ನು ಕೇಳಿ ಉತ್ತರನು ತಂದೆಯ ಮೇಲೆ ತುಂಬಾ ಕೋಪಿಸಿಕೊಂಡವನಾಗಿ 'ರಾಜನೇ! ನೀನು ಮಾಡಿದ್ದು ತುಂಬಾ ಅನ್ಯಾಯವಾಯಿತು. ಬೇಗನೇ ಈ ಕಂಕರೊಡನೆ ಕ್ಷಮಾ ಕೇಳಿಕೊ. ಘೋರವಾದ ಬ್ರಹ್ಮವಿಷವು ನಿನ್ನನ್ನು ಮೂಲ ಸಹಿತವಾಗಿ ಸುಟ್ಟುಹಾಕದೆ ಇರಲಿ. ನಮ್ಮ ಮತ್ಸ್ಯವಂಶವೇ ನಾಶವಾಗಿ ಹೋಗುವ ಮೊದಲೇ ಇವರನ್ನು

ಪ್ರಸನ್ನೀಕರಿಸು. ಇವರ ಪಾದಗಳ ಮೇಲೆ ಬಿದ್ದು ನಾನು ಕ್ಷಮಿಸಿದೆನು ಎಂದು ಇವರು ಹೇಳುವವರೆಗೆ ಏಳಬೇಡ' ಎಂದು ಹೇಳಿದನು. ಮಗನ ಮಾತನ್ನು ಕೇಳಿ ವಿರಾಟನು ಭಯವುಳ್ಳವನಾಗಿ ಧರ್ಮರಾಜನೊಡನೆ ಕ್ಷಮೆಯನ್ನು ಕೇಳಿಕೊಂಡನು. ಆಗ ಧರ್ಮರಾಜನು 'ರಾಜನೇ! ನಾನು ಆಗಲೇ ಕ್ಷಮಿಸಿದ್ದೇನೆ. ನನಗೆ ಕೋಪವೇ ಇಲ್ಲ. ನನ್ನ ರಕ್ತವು ಕೆಳಗೆ ಬಿದ್ದರೆ ರಾಜ್ಯಸಹಿತವಾಗಿ ನೀನು ನಾಶವನ್ನು ಹೊಂದುತ್ತಿದ್ದಿ. ನಾನೊಂದೂ ನಿನ್ನನ್ನು ದೂಷಿಸುವುದಿಲ್ಲ. ದೂಷಣ ಮಾಡದೆ ಇದ್ದವನನ್ನು ಯಾರು ಬಡೆಯುವನೋ ಅವನು ಬೇಗನೇ ಅದರ ಕ್ರೂರವಾದ ಫಲವನ್ನು ಹೊಂದುವನು' ಎಂದನು.

ಆಮೇಲೆ ಧರ್ಮರಾಜನ ಮುಖದ ರಕ್ತವು ಆರಿದಮೇಲೆ ಬೃಹನ್ನಳೆಯು ಒಳಗೆ ಪ್ರವೇಶಿಸಿ ವಿರಾಟರಾಜನಿಗೆ ನಮಸ್ಕರಿಸಿ ಕಂಕನಿಗೂ ನಮಸ್ಕರಿಸಿದನು. ವಿರಾಟನು ಧರ್ಮರಾಜನೊಡನೆ ಕ್ಷಮಾಕೇಳಿ ಯುದ್ಧದಿಂದ ಬಂದಿರುವ ಉತ್ತರಕುಮಾರನನ್ನು ದೃಢವಾಗಿ ಆಲಿಂಗಿಸಿ ಅರ್ಜುನನು ಕೇಳುವಂತೆ ಉತ್ತರನನ್ನು ಸ್ತೋತ್ರಮಾಡಿದನು. 'ಮಗ! ನಿನ್ನಿಂದ ನಾನು ಸತ್ಪುತ್ರವಂತನಾಗಿದ್ದೇನೆ. ನನಗೆ ನಿನಗೆ ಸಮಾನನಾದ ಮಗನು ಇಷ್ಟರವರೆಗೆ ಹುಟ್ಟಲಿಲ್ಲ. ಇನ್ನು ಮುಂದೆ ಹುಟ್ಟುವುದಿಲ್ಲ. ಸಾವಿರಬಾಣ ಗಳನ್ನು ಬಿಡುವಾಗ ಒಂದು ಬಾಣವೂ ಗುರಿತಪ್ಪದೆ ಇರುವ ಆ ಕರ್ಣನೊಡನೆ ಹೇಗೆ ಯುದ್ಧ ಮಾಡಿದಿ? ಯುದ್ಧದಲ್ಲಿ ಯಾರನ್ನು ನೋಡಿದರೆ ವೀರ್ಯಪರಾಕ್ರಮ ರಹಿತರಾಗಿ ಭಯಪಡುವರೋ ಆ ಕೃಪಾಚಾರ್ಯರೊಡನೆ ಹೇಗೆ ಯುದ್ಧವನ್ನು ಮಾಡಿದಿ? ಯಾವ ಭೀಷ್ಮಾಚಾರ್ಯರ ಪರಾಕ್ರಮವು ಲೋಕಪ್ರಸಿದ್ಧವಾಗಿರುವುದು. ತಂದೆಗಾಗಿ ಘೋರಬ್ರಹ್ಮಚರ್ಯವನ್ನು ಧರಿಸಿರುವರು. ಪರಶುರಾಮದೇವರ ಹತ್ತಿರ ಯುದ್ಧ ಮಾಡಿರುವರು. ಯುದ್ಧದಲ್ಲಿ ಪರಾಜಯವನ್ನು ಹೊಂದಲಿಲ್ಲ. ಅಂತಹ ಕರುವೃದ್ಧರಾದ ಮಹಾಪರಾಕ್ರಮಶಾಲಿಗಳಾದ ಭೀಷ್ಮಾಚಾರ್ಯರೊಡನೆ ಹೇಗೆ ಯುದ್ಧವು ನಡೆಯಿತು? ಯಾವ ರಾಜಪುತ್ರನು ಬಾಣಗಳಿಂದ ಪರ್ವತಗಳನ್ನು ಸೀಳಿಹಾಕುವನೋ ಅಂತಹ ದುರ್ಯೋಧನನೊಡನೆ ಹೇಗೆ ಯುದ್ಧವನ್ನು ಮಾಡಿದಿ? ಯಾರು ಯಾದವ ಶ್ರೇಷ್ಠರಿಗೂ ಪಾಂಚಾಲದೇಶದವರಿಗೂ, ಕೌರವರಿಗೂ, ಪಾಂಡವರಿಗೂ, ಸರ್ವಕ್ಷತ್ರಿಯರಿಗೂ, ಗುರುಗಳಾಗಿರುವರೋ, ಸರ್ವಶಸ್ತ್ರಧಾರಿಗಳಿಗೂ, ಶ್ರೇಷ್ಠರಾಗಿರುವರೋ, ಸರ್ವಲೋಕಗಳಲ್ಲಿ ಪ್ರಸಿದ್ಧರಾಗಿರು ವರೋ, ಆ ದ್ರೋಣಾಚಾರ್ಯರೊಡನೆ ಹೇಗೆ ಯುದ್ಧವನ್ನು ಮಾಡಿದಿ? ಆಚಾರ್ಯಪುತ್ರರು ಅಶ್ವತ್ಥಾಮಾಚಾರ್ಯರೂ ಮಹಾಪರಾಕ್ರಮಶಾಲಿಗಳು.

ಆಚಾರ್ಯರಿಂದ ಕಡಿಮೆಯಾದವರಲ್ಲ. ಅವರೊಡನ ಹೇಗೆ ಯುದ್ಧಮಾಡಿದಿ? ಧೃತರಾಷ್ಟ್ರನ ಮಕ್ಕಳೆಲ್ಲರೂ ಮಹಾಪರಾಕ್ರಮಶಾಲಿಗಳು. ಆವರೊಡನೆ ಎಲ್ಲಾ ಹೇಗೆ ಯುದ್ಧಮಾಡಿರುವಿ?' ಎಂದು ಕೇಳಿದನು.

ಆದಕ್ಕೆ ಉತ್ತರಕುಮಾರನು 'ನಾನು ಕೌರವರನ್ನು ಜಯಿಸಲಿಲ್ಲ. ಗೋವುಗಳನ್ನು ಕರೆತರಲೂ ಇಲ್ಲ. ಇದು ನಾನು ಮಾಡಿದ ಕಾರ್ಯವಲ್ಲ. ಈ ಎಲ್ಲಾ ಕಾರ್ಯವನ್ನೂ ಒಬ್ಬ ದೇವಪುತ್ರನು ಮಾಡಿರುವನು. ಭೀಷ್ಮದ್ರೋಣ ಕೃಪಾದಿಗಳನ್ನು ನೋಡಿ ವಿಷಾದವುಳ್ಳವನಾಗಿ ಭಯವುಳ್ಳವನಾಗಿ ಓಡುತ್ತಿದ್ದ ನನ್ನನ್ನು ಆ ದೇವಪುತ್ರನು ತಡೆಯುವವನಾದನು. ಇಂದ್ರದೇವರಂತೆ ಇದ್ದ ಆ ದೇವದೂತನು ರಥದಲ್ಲಿ ಕೂತುಕೊಂಡು ಯುದ್ಧಮಾಡಿ ಕೌರವರನ್ನು ಜಯಿಸಿ ಗೋವುಗಳನ್ನು ತಿರುಗಿಸಿದನು. ಈಪ್ರಕಾರವಾಗಿ ಗೋವುಗಳನ್ನು ಬಿಡಿಸಿದ್ದು ಆ ದೇವಪುತ್ರನು ಮಾಡಿದ ಕಾರ್ಯವು. ನಾನು ಮಾಡಿದ ಕಾರ್ಯವಲ್ಲ. ಆದೇವಪುತ್ರನು ಕೃಪಾಚಾರ್ಯರನ್ನು ದ್ರೋಣಾ ಚಾರ್ಯರನ್ನು, ಅಶ್ವತ್ಥಾಮಾಚಾರ್ಯರನ್ನೂ, ಕರ್ಣನನ್ನೂ, ಭೀಷ್ಮಾಚಾರ್ಯರನ್ನೂ, ಬಾಣಗಳಿಂದ ಪರಾಜ್‌ಮುಖರನ್ನಾಗಿ ಮಾಡಿದನು. ದುರ್ಯೋಧನನು ಯುದ್ಧದಲ್ಲಿ ಭಯಪಟ್ಟು ಸೋತು ಓಡುತ್ತಿರಲು ಅವನನ್ನು ಕೂಗಿ 'ನೀನು ಹಸ್ತಿನಾವತಿಗೆ ಹೋದರೂ ಒಬ್ಬರೂ ರಕ್ಷಕರು ಇರುವುದಿಲ್ಲ. ಓಡಿ ಹೋಗಿ ನೀನು ಹಸ್ತಿನಾವತಿಯಲ್ಲಿ ಭೋಗಗಳನ್ನು ಅನುಭವಿಸಲಿಕ್ಕೆ ಆಗಲಾರದು. ಯುದ್ಧವನ್ನು ಮಾಡಿ ಪ್ರಾಣವನ್ನು ಉಳಿಸಿಕೊ. ಓಡಿಹೋಗಿ ನೀನು ತಪ್ಪಿಸಿಕೊಳ್ಳಲಿಕ್ಕೆ ಆಗಲಾರದು. ಯುದ್ಧಮಾಡು. ಜಯಿಸಿದರೆ ಗೋವುಗಳನ್ನು ಹೊಂದುವಿ. ಸತ್ತರೆ ಸ್ವರ್ಗವನ್ನು ಹೊಂದುವಿ' ಎಂದು ಹೇಳಿದನು. ಅದನ್ನು ಕೇಳಿ ದುರ್ಯೋಧನನು ಹಿಂದೆ ತಿರುಗಿ ವಜ್ರದಂತೆ ಇರುವ ಬಾಣಗಳನ್ನು ಬಿಡುತ್ತಾ ಭೀಷ್ಮಾದಿಗಳಿಂದ ಸಹಿತನಾಗಿ ಯುದ್ಧಮಾಡಿದನು. ಆ ಯುದ್ಧವನ್ನು ನೋಡಿ ನನಗೆ ರೋಮಾಂಚನವುಂಟಾಯಿತು. ಕಾಲು ನಡುಗಿತು. ಆ ದೇವಪುತ್ರನು ಎಲ್ಲಾ ಕೌರವರನ್ನು ಜಯಿಸಿದನು. ಶೂರನಾದ ಅವನೊಬ್ಬನೇ ಆರು ರಥಿಕರನ್ನು ಸಂಹರಿಸಿದನು. ಕುದುರೆಗಳೂ ಆನೆಗಳೂ ಪದಾತಿಗಳೂ ಸಾವಿರಾರು ಜನರು ಸತ್ತರು. ಕರ್ಣನನ್ನು ನೂರು ಬಾಣಗಳಿಂದ ಬಡೆದು ಕುದುರೆಗಳನ್ನು ಸಂಹರಿಸಿ, ಅಸ್ತ್ರದಿಂದ ಮೋಹಗೊಳಿಸಿ ಅವನ ಕೆಂಪಾದ ವಸ್ತ್ರವನ್ನು ಅಪರಹಿಸಿದನು. ನಾಲ್ಕು ಬಾಣಗಳಿಂದ ಭೀಷ್ಮಾಚಾರ್ಯರನ್ನು ಬಡಿದು ಕುದುರೆಗಳನ್ನು ಬಡೆದು ಅವರ ವಸ್ತ್ರವನ್ನು ಅಪಹರಿಸಲಿಲ್ಲ. ದುರ್ಯೋಧನನನ್ನು ಏಳು ಬಾಣಗಳಿಂದ ಬಡೆದು ಕುದುರೆಗಳನ್ನು ಬಡೆದು ಅವನ ಅರಸಿನ ಬಣ್ಣದ

ವಸ್ತ್ರವನ್ನು ಅಪಹರಿಸಿದನು. ದ್ರೋಣಾಚಾರ್ಯರನ್ನು, ಕೃಪಾಚಾರ್ಯರನ್ನು, ಸೋಮದತ್ತನನ್ನು, ಜಯದ್ರಥನನ್ನು, ಭೂರಿಶ್ರವನನ್ನು, ಶಕುನಿಯನ್ನೂ, ದುಃಶಾಸನನೇ ಮೊದಲಾದವರನ್ನು ಮೂರು ಮೂರು ಬಾಣಗಳಿಂದ ಬಡೆದು ನಾನಾವಿಧ ವಸ್ತ್ರಗಳನ್ನು ಅಪಹರಿಸಿದನು. ಅಶ್ವತ್ಥಾಮಾಚಾರ್ಯರನ್ನು ಎರಡು ಬಾಣಗಳಿಂದ ಬಡೆದು ವಿಕರ್ಣನ ನೀಲವಸ್ತ್ರವನ್ನು ಅಪಹರಿಸಿದನು' ಎಂದು ಹೇಳಿದನು.

ಆಗ ವಿರಾಟನು 'ಯಾರು ಕೌರವರ ಕೈಗೆ ಸಿಕ್ಕಿದ ನನ್ನ ಮಗನನ್ನು ಬಿಡಿಸಿದನೋ ಆ ಶೂರನಾದ ದೇವಪುತ್ರನು ಈಗ ಎಲ್ಲಿರುವನು? ಮಗನೇ! ನಿನ್ನನ್ನೂ ಗೋವುಗಳನ್ನೂ ಬಿಡಿಸಿದ ಆ ದೇವಪುತ್ರನನ್ನು ನೋಡಬೇಕೆಂದು ಆಸೆಯುಳ್ಳವನಾಗಿರುವೆನು. ಅವನಿಗೆ ನನ್ನ ಮಗಳನ್ನೇ ಕೊಡುತ್ತೇನೆ. ಗ್ರಾಮಗಳನ್ನೂ, ಬಂಗಾರವನ್ನೂ, ಕಟಿಸೂತ್ರವನ್ನೂ, ನೂರುಸಾವಿರ ಸ್ತ್ರೀಯರನ್ನು ಕೊಡುವೆನು' ಎಂದು ಹೇಳಿದನು.

ಉತ್ತರನು 'ಪ್ರತಾಪಶಾಲಿಯಾದ ಅವನು ಮರೆಯಾಗಿ ಹೋದನು. ಈ ದಿನದಲ್ಲಿಯೇ, ನಾಳೆಯೋ, ನಾಡದೋ ಅವನು ಕಾಣಿಸುವವನು' ಎಂದನು.

ಈ ಪ್ರಕಾರವಾಗಿ ಉತ್ತರನು ಹೇಳುತ್ತಿರಲು ವೇಷಾಂತರವನ್ನು ಧರಿಸಿರುವ ಅರ್ಜುನನೇ ಈ ಕಾರ್ಯವನ್ನು ಮಾಡಿದ್ದು ಎಂಬುದನ್ನು ವಿರಾಟನು ತಿಳಿಯಲಿಲ್ಲ. ತರುವಾಯ ಅರ್ಜುನನು ವಿರಾಟನಿಂದ ಅನುಜ್ಞೆಯನ್ನು ಪಡೆದು ಹೋಗಿ ಉತ್ತರಕುಮಾರನೊಡನೆ ಯೋಚಿಸಿ ವಿರಾಟನೊಡನೆ ಹೀಗೆ ಹೇಳು ಎಂದು ಹೇಳಬೇಕಾದುದನ್ನು ಹೇಳಿ ಅಂತಃಪುರವನ್ನು ಪ್ರವೇಶಿಸಿ ವಸ್ತ್ರಗಳನ್ನು ರತ್ನಗಳನ್ನೂ ತಾನು ತಂದಿದ್ದನ್ನು ಉತ್ತರೆಗೆ ಕೊಟ್ಟನು. ಉತ್ತರೆಯು ತುಂಬಾ ಬೆಲೆ ಬಾಳುವ ಆ ವಸ್ತ್ರಗಳನ್ನು ಆಭರಣಗಳನ್ನು ತೆಗೆದುಕೊಂಡು ಸಖಿಯರಿಂದ ಕೂಡಿಕೊಂಡು ಪ್ರೀತಿಯುಳ್ಳವಳಾದಳು.



# ಧರ್ಮರಾಜನ ಗಾಯದಿಂದ ಭೀಮಾರ್ಜುನರು ಕೋಪಿಸಿದ್ದು [1]

ಅರ್ಜುನನು ಅಂತಃಪುರದಲ್ಲಿ ಉತ್ತರೆಗೂ ಇತರ ಸಖಿಯರಿಗೂ ವಸ್ತ್ರಗಳನ್ನೂ, ಆಭರಣಗಳನ್ನೂ, ಕೊಟ್ಟು ಧರ್ಮರಾಜನನ್ನು ನೋಡಲಿಕ್ಕೆ ಹೋದನು. ಧರ್ಮರಾಜನನ್ನು ನೋಡಲಿಕ್ಕೆ ಹೋದವನು ಭೀಮಸೇನದೇವರನ್ನು ನೋಡಿ ಅರ್ಜುನನು ಅವರೊಡನೆ 'ಧರ್ಮರಾಜನು ನನ್ನನ್ನು ನೋಡಿ ಮುಖವನ್ನು ಮುಚ್ಚಿಕೊಂಡು ಇದ್ದುಬಿಟ್ಟನು. ಪೂರ್ವದಂತೆ ನನ್ನೊಡನೆ ಯಾಕೆ ಮಾತಾಡಲಿಲ್ಲ?' ಎಂದು ಹೇಳಿದನು. ಅದನ್ನು ಕೇಳಿ ಧರ್ಮರಾಜನು ರಕ್ತವನ್ನು ವರೆಸಿಕೊಂಡು ಭೀಮಾರ್ಜುನರನ್ನು ನೋಡಿ 'ಅರ್ಜುನ! ನಿನ್ನನ್ನು ನಾನು ಹೊಗಳುತ್ತಿರಲು ದುರಾತ್ಮನಾದ ವಿರಾಟರಾಜನು ನನಗೆ ಬಡೆದನು. ಆ ಪ್ರಹಾರದಿಂದ ರಕ್ತದ ಹನಿಗಳು ಉಂಟಾದವು. ಅವು ನೆಲಕ್ಕೆ ಬೀಳಬಾರದೆಂದು ಮುಖವನ್ನು ಮುಚ್ಚಿಕೊಂಡು ಕೋಪವನ್ನು ಅಡಗಿಸಿಕೊಂಡು ಕೂತಿದ್ದೆನು. ನಾವು ಯಾವ ರಾಜ್ಯದಲ್ಲಿ ಸುಖವಾಗಿ ಇದ್ದೆವೋ ಆ ರಾಜ್ಯವು ನಾಶವನ್ನು ಹೊಂದಬಾರದೆಂದು ಹೀಗೆ ಮಾಡಿದೆನು. ಮತ್ತು ನೀನು ಕೋಪಿಸಿಕೊಂಡರೆ ವಿರಾಟರಾಜನು ಕ್ಷೇಮವನ್ನು ಹೊಂದಲಾರನು. ಯುದ್ಧದಲ್ಲಿ ನಮ್ಮ ಸಾಮರ್ಥ್ಯವನ್ನು ತಿಳಿಯದೆ ವಿರಾಟನು ಈ ಕಾರ್ಯವನ್ನು ಮಾಡಿರುವನು. ಇದರಿಂದ ನಾನು ಆಗ ನಿನ್ನನ್ನು ನೋಡಿ ಹರ್ಷವನ್ನು ಹೊಂದಲಿಲ್ಲ' ಎಂದು ಹೇಳಿದನು.

ಈರೀತಿಯಾಗಿ ಧರ್ಮರಾಜನು ಶಾಂತನಾಗಿ ಹೇಳಲು ಭೀಮಸೇನದೇವರು ಕೋಪಿಸಿಕೊಳ್ಳುವವರಾಗಿ, ಕೋಪಗೊಂಡಿರುವ ಅರ್ಜುನನೊಡನೆ 'ಅರ್ಜುನ! ಜ್ಞಾನಿಗಳಲ್ಲಿ ಶ್ರೇಷ್ಠರಾದ ಬೃಹಸ್ಪತ್ಯಾಚಾರ್ಯರು ನಿತ್ಯವೂ ಕ್ಷಮಿಸುವ ಸಮಯವಲ್ಲ ವೆಂದಿರುವರು. ಕ್ಷಮಾಗುಣವುಳ್ಳವನು ಎಲ್ಲರಿಂದಲೂ ತಿರಸ್ಕೃತನಾಗುವನು. ಮಕ್ಕಳು ಮೊಮ್ಮಕ್ಕಳಿಂದ ಸಹಿತನಾದ ವಂಶಸಹಿತನಾದ ಸೈನ್ಯಸಹಿತನಾದ ವಿರಾಟನನ್ನು ಈಗಲೇ ಸಂಹರಿಸಿ ಈಗ ಧರ್ಮರಾಜನಿಗೆ ಪಟ್ಟಾಭಿಷೇಕ ಮಾಡಿಬಿಡುತ್ತೇನೆ. ಈ ವಿರಾಟರಾಜನು ಶತ್ರುವಾಗಿರುವನು. ಕೀಚಕನು ಬಲಾತ್ಕಾರ ಮಾಡಲು ಬರಲು ಇವನು ದ್ರೌಪದಿಯನ್ನು ಉಪೇಕ್ಷಾ ಮಾಡಿರುವರು. ಆದುದರಿಂದ ಇವನು ರಾಜ ಎಂಬ ಹೆಸರಿಗೆ ಅರ್ಹನಾಗಿಲ್ಲ. ಧರ್ಮರಾಜನೇ ರಾಜನಾಗಲಿ. ವಿರಾಟನ ದೇಹವನು ನೂರಾಗಿ ಸೀಳಿಹಾಕಿಬಿಡುತ್ತೇನೆ' ಎಂದು ಹೇಳಿದರು.

---

1. ಭಾ.ವಿ.ಪ ಅ-69

ಅರ್ಜುನನೂ ಧರ್ಮರಾಜನೊಡನೆ 'ರಾಜನೇ! ನಿನ್ನ ಕ್ಷಮೆಯಿಂದ ನಮಗೆ ಬಹಳ ಆಪತ್ತುಗಳು ಬಂದವು. ಸಪರಿವಾರನಾದ ವಿರಾಟನನ್ನು ಮೊದಲು ಸಂಹರಿಸಿ ಆಮೇಲೆ ಕೌರವರನ್ನು ಸಂಹರಿಸುವೆನು' ಎಂದನು. ಭೀಮಸೇನದೇವರೂ ಹಾಗೆಯೇ ಎಂದರು.

ಆಗ ಕ್ಷಮಾಗುಣವುಳ್ಳವ ಧರ್ಮರಾಜನು 'ಭೀಮ! ನಾಳೆ ಅವನು ಪತ್ನಿಯರಿಂದ ಸಹಿತನಾಗಿ ಬಂದು ನಿಜರೂಪವನ್ನು ಧರಿಸಿರುವ ನಮ್ಮಲ್ಲಿ ಕ್ಷಮಾಕೇಳಿಕೊಳ್ಳದೆ ಇದ್ದರೆ ಅವನನ್ನು ಸಂಹಾರಮಾಡುವಿ. ಅರ್ಜುನ! ನೀನೂ ಕೂಡ ಹಾಗೆಯೇ ಮಾಡು. ನಾಳೆ ಪ್ರಾತಃಕಾಲದಲ್ಲಿ ರಾಜವೇಷವುಳ್ಳವರಾಗಿ ಅವನ ಸಭೆಯಲ್ಲಿ ಸಿಂಹಾಸನದಲ್ಲಿ ಕೂತುಕೊಳ್ಳುವ. ಆಗ ವಿರಾಟರಾಜನು ನಮ್ಮನ್ನು ಬಹುಮಾನಿಸದಿದ್ದರೆ ಆಮೇಲೆ ಅವನನ್ನು ಸಂಹರಿಸುವ' ಎಂದು ಹೇಳಿದನು. ಈರೀತಿಯಾಗಿ ಯೋಚನೆ ಮಾಡಿ ಪಾಂಡವರು ರಾತ್ರಿಯಲ್ಲಿ ಹಾಗೆಯೇ ವಾಸಮಾಡಿದರು. ವಿರಾಟರಾಜನೂ ಮಗನಿಂದ ಸಹಿತನಾಗಿ ಬಹುಸಂತೋಷದಿಂದ ಆ ರಾತ್ರಿಯಲ್ಲಿ ವಾಸಮಾಡಿದನು.



## ಪಾಂಡವರು ಸಿಂಹಾಸನದಲ್ಲಿ ಕೂತದ್ದು [1]

ತರುವಾಯ ಮರುದಿವಸದಲ್ಲಿ ಪಾಂಡವರೆಲ್ಲರೂ ಸ್ನಾನವನ್ನು ಮಾಡಿ ಬಿಳಿಯಾದ ವಸ್ತ್ರವನ್ನು ಧರಿಸಿದವರಾಗಿ ಸರ್ವಾಭರಣಗಳಿಂದ ಅಲಂಕೃತರಾಗಿ ಧರ್ಮರಾಜನನ್ನು ಮುಂದೆ ಮಾಡಿಕೊಂಡು ಸಭೆಗೆ ಬಂದರು. ಧರ್ಮರಾಜನು ವಿರಾಟನು ಕೂತು ಕೊಳ್ಳುವ ಸಿಂಹಾಸನದಲ್ಲಿ ಕೂತುಕೊಂಡನು. ಇತರರು ರಾಜರಿಗೆ ಯೋಗ್ಯಗಳಾದ ಇತರ ಆಸನಗಳಲ್ಲಿ ಕೂತುಕೊಂಡರು.

ವಿರಾಟರಾಜನೂ ಆದಿನದಲ್ಲಿ ಬೆಳಿಗ್ಗೆ ಬೇಗನೇ ಎದ್ದು ಪ್ರಾತಃಸ್ನಾನಾದಿಗಳನ್ನು ತೀರಿಸಿ ಗೋದಾನಸುವರ್ಣದಾನಾದಿಗಳನ್ನು ಬ್ರಾಹ್ಮಣರಿಗೆ ಮಾಡಿ ಉತ್ತರನನ್ನು ಕರೆದುಕೊಂಡು ಸಭಾಸ್ಥಾನಕ್ಕೆ ಬಂದನು. ವಿರಾಟನು ಸಭೆಯಲ್ಲಿ ಅಗ್ನಿಯಂತೆ ಜ್ವಲಿಸುವ ರಾಜವೇಷದಿಂದ ಕೂತಿರುವ ಪಾಂಡವರನ್ನು ನೋಡಿ ಪರಮಾಶ್ಚರ್ಯ ವುಳ್ಳವನಾದನು. ಏನಿದು? ಎಂದು ಹೇಳುತ್ತಾ ಪಾಂಡವರನ್ನು ನೋಡಿ ವಿರಾಟನು

1. ಭಾ.ವಿ.ಪ ಅ-70

ಸ್ವಲ್ಪ(ವುಳ್ಳವನಾಗಿ) ವಿಷಾದವನ್ನು ಹೊಂದಿದನು. ತರುವಾಯ ಅವನು ಧರ್ಮರಾಜನನ್ನು ನೋಡಿ 'ನೀನು ನನ್ನೊಡನೆ ಸಭೆಯಲ್ಲಿ ಕೂತುಕೊಂಡು ಪಗಡೆಆಟವನನು ಆಡುತ್ತಾ ಇದ್ದ ಕಂಕನಷ್ಟೆ! ನೀನು ಯಾಕೆ ಅಲಂಕಾರ ಮಾಡಿಕೊಂಡು ಸಿಂಹಾಸನದಲ್ಲಿ ಕೂತುಕೊಂಡು ಇರುವಿ' ಎಂದು ಕೇಳಿದನು.

ಆಗ ಅರ್ಜುನನು ಮಂದಹಾಸವನ್ನು ಮಾಡಿ 'ರಾಜನೇ! ಇವನು ಇಂದ್ರದೇವರ ಅರ್ಧಆಸನದಲ್ಲಿ ಕೂತುಕೊಳ್ಳುವ ಯೋಗ್ಯವುಳ್ಳವನು ಬ್ರಾಹ್ಮಣರಿಗೆ ಹಿತಮಾಡುವವನು. ಶಾಸ್ತ್ರಗಳನ್ನು ಓದಿಕೊಂಡವನು. ಬೇಕಾದ ದಾನಗಳನ್ನು ಮಾಡಿದವನು. ಸರ್ವಲೋಕದಲ್ಲಿ ಪೂಜಿತನಾದವನು. ಇವನೇ ಮೂರ್ತಿಮತ್ತಾದ ಧರ್ಮವಾಗಿರುವನು. ಇವನು ಬಹುಅಸ್ತ್ರಗಳನ್ನು ತಿಳಿದಿರುನು. ಇವನು ತಿಳಿದಷ್ಟು ಯಾರೂ ತಿಳಿದಿರಲಾರರು. ಇವನು ಕುರುವಂಶದಲ್ಲಿ ಶ್ರೇಷ್ಠನಾದವನು. ಇವನ ಕೀರ್ತಿಯು ಸರ್ವತ್ರ ವ್ಯಾಪಿಸಿರುವುದು. ಇವನು ಹೋಗುತ್ತಿರುವಾಗ ಇವನ ಹಿಂದೆಯೇ ಮೂವತ್ತುಸಾವಿರ ಆನೆಗಳು ಹೋಗುತ್ತಿದ್ದವು. ಮೂವತ್ತು ಸಾವಿರ ರಥಿಕರೂ ಹೋಗುತ್ತಿದ್ದರು. ನೂರಾರು ಕುದುರೆಗಳು ಹೋಗುತ್ತಿದ್ದವು. ಸೂತರೂ ಮಾಗಧರೂ ಎಲ್ಲರೂ ಇವರನ್ನು ಸ್ತೋತ್ರಮಾಡುತ್ತಿದ್ದರು. ಕೌರವರೆಲ್ಲರೂ ಇವನನ್ನು ಸೇವಿಸುತ್ತಿದ್ದರು. ಎಂಬತ್ತೆಂಟು ಸಾವಿರ ಸ್ನಾತಕರು ಇವನಲ್ಲಿ ಜೀವಿಸುತ್ತಿದ್ದರು. ಇವನು ಅನಾಥರನ್ನು ವಯಸ್ಸಾದವರನ್ನೂ, ಅಂಗಹೀನರನ್ನು, ಮಕ್ಕಳನ್ನು, ರಕ್ಷಿಸುವಂತೆ ರಕ್ಷಿಸುತ್ತಿದ್ದನು. ಇವನೇ **ಧರ್ಮರಾಜನು.** ಈ ಪುರುಷಶ್ರೇಷ್ಠನು ಸಿಂಹಾಸನದಲ್ಲಿ ಕೂತುಕೊಳ್ಳಲಿಕ್ಕೆ ಯಾಕೆ ಅರ್ಹನಾಗಲಾರನು ಎಂದು ಹೇಳಿದನು.

ಆಗ ವಿರಾಟನು 'ಇವನು ಧರ್ಮರಾಜನಾಗಿದ್ದರೆ ಇವನ ತಮ್ಮನಾದ ಬಲಿಷ್ಠ ನಾದ ಭೀಮನು ಯಾರು? ಅರ್ಜುನನು ಯಾರು? ನಕುಲನು ಯಾರು? ಸಹದೇವನು ಯಾರು? ದ್ರೌಪದೀದೇವಿಯು ಯಾರು? ಅವರು ಪಗಡೆ ಆಟದಲ್ಲಿ ಸೋತುಹೋದ ವರ್ತಮಾನವನ್ನು ಕೇಳಿರುವೆನು. ಆಮೇಲಿನ ವರ್ತಮಾನವನ್ನೇ ಕೇಳಲಿಲ್ಲ' ಎಂದು ಹೇಳಿದನು.

ಆಗ ಅರ್ಜುನನು 'ನಿನ್ನ ಮನೆಯಲ್ಲಿ ತೊವ್ವೆ ಮಾಡುತ್ತಿದ್ದ ವಲಲನೇ ಭೀಮಸೇನದೇವರು' ಎಂದು ಹೇಳಿ ಅವರ ಮಹಿಮೆಯನ್ನು ವಿಸ್ತರಿಸಿ ಹೇಳಿದನು. ಆಮೇಲೆ 'ಕುದುರೆಗಳಿಗೆ ಯಜಮಾನನಾಗಿದ್ದವನೇ ನಕುಲನು. ಗೋಪಾಲಕನಾಗಿ ದ್ದವನೇ ಸಹದೇವನು. ಸೈರಂಧ್ರಿಯೇ ದ್ರೌಪದಿಯು. ಈ ದ್ರೌಪದಿಯ ನಿಮಿತ್ತ ವಾಗಿಯೇ ಕೀಚಕರು ಮೃತರಾದರು' ಇತ್ಯಾದಿ ವಿಷಯಗಳನ್ನು ವಿವರಿಸಿ ಹೇಳಿದನು.

ಆಮೇಲೆ ಭೀಮಸೇನದೇವರು 'ಬೃಹನ್ನಳೆಯೆಂದು ಹೆಸರಿನಿಂದ ಇಲ್ಲಿ ಇವನೇ ಅರ್ಜುನನು' ಎಂದು ಹೇಳಿ ಅವನ ಪರಾಕ್ರಮವೆಲ್ಲವನ್ನೂ ಹೇಳಿ 'ರಾಜನೇ! ನಾವು ಗರ್ಭವಾಸ ಮಾಡುವಂತೆ ನಿನ್ನ ಮನೆಯಲ್ಲಿ ಅಜ್ಞಾತವಾಸವನ್ನು ಮಾಡಿ ಮುಗಿಸಿರುವೆವು' ಎಂದು ಹೇಳಿದರು.

ತರುವಾಯ ಉತ್ತರನು ಪುನಃ ಎಲ್ಲಾ ಪಾಂಡವರ ಲಕ್ಷಣವನ್ನು ಹೇಳಿ ಎಲ್ಲರ ಹೆಸರನ್ನು ಹೇಳಿ ತೋರಿಸಿದನು. ಆಮೇಲೆ ಅವನು ಅರ್ಜುನನ ಪರಾಕ್ರಮವನ್ನು ವರ್ಣಿಸಿದನು. 'ಇವನೇ ಯುದ್ಧದಲ್ಲಿ ಸಿಂಹದಂತೆ ಸಂಚರಿಸಿ ಕೌರವರನ್ನು ಜಯಿಸಿ ಗೋವುಗಳನ್ನು ಬಿಡಿಸಿಕೊಂಡು ಬಂದವನು. ಇವನಿಂದ ಬಡೆಯಲ್ಪಟ್ಟ ಎಷ್ಟೋ ದೊಡ್ಡ ದೊಡ್ಡ ಆನೆಗಳು ಯುದ್ಧರಂಗದಲ್ಲಿ ದಂತಗಳನ್ನು ಕೆಳಗೆ ಊರಿ ಬಿದ್ದುಬಿಟ್ಟವು. ಇವನ ಶಂಖದ ಶಬ್ದದಿಂದ ನನ್ನ ಕಿವಿಗಳು ಕಿವುಡಾದವು. ಇವನ ಧನುಸ್ಸಿನ ಶಬ್ದವನ್ನು ಇವನ ಧ್ವಜದಲ್ಲಿ ಭೂತಗಳಿಂದ ಕೂಡಿಕೊಂಡು ಹನುಮಂತದೇವರು ಗರ್ಜನೆ ಮಾಡುವ ಶಬ್ದವನ್ನು ಸ್ಮರಿಸಿಕೊಂಡರೆ ನನಗೆ ಈಗಲೂ ರೋಮಾಂಚವುಂಟಾಗುವುದು. ಇವನು ಯಾವಾಗ ಧನುಸ್ಸನ್ನು ಸೆಳೆಯುವನು, ಯಾವಾಗ ಬಾಣಗಳನ್ನು ಧನುಸ್ಸಿಗೆ ಜೋಡಿಸುವನು? ಯಾವಾಗ ಬಾಣಗಳನ್ನು ಬಿಡುವನು ಎಂದು ಒಂದೂ ಗೊತ್ತಾಗುತ್ತಿದ್ದಿಲ್ಲ. ಅಷ್ಟು ಅವಸರದಿಂದ ಬಾಣಗಳನ್ನು ಬಿಡುತ್ತಿದ್ದನು. ಇವನೇ ಭೀಷ್ಮದ್ರೋಣಾದಿಗಳನ್ನೂ ದುರ್ಯೋಧನನನ್ನೂ ಜಯಿಸಿದನು. ಇವನನ್ನೇ ನಾನು ನಿನ್ನೆ ದೇವಪುತ್ರನೆಂದು ಹೇಳಿದೆನು. ಇವನೇ ಭಯದಿಂದ ಓಡಿಬರುತ್ತಿದ್ದ ನನ್ನನ್ನು ತಡೆದನು. ಇವನ ಬಾಹುಬಲದಿಂದಲೇ ನಾನು ಬದುಕಿ ಬಂದಿರುವೆನು' ಎಂದು ಹೇಳಿದನು.

ಉತ್ತರನು ಹೇಳಿದ ಮಾತನ್ನು ಕೇಳಿ ಪ್ರತಾಪಶಾಲಿಯಾದ ವಿರಾಟರಾಜನು ಅರ್ಜುನನನ್ನು ಆಲಿಂಗಿಸಿ ಎಲ್ಲಾ ಪಾಂಡವರನ್ನೂ ಆಲಿಂಗಿಸಿದನು. ಧರ್ಮರಾಜನನ್ನು ನಮಸ್ಕರಿಸಿ ಸಿಂಹಾಸನದಲ್ಲಿ ಕೂತಿದ್ದ ಅವನನ್ನು ಎಷ್ಟು ನೋಡಿದರೂ ತೃಪ್ತಿರಹಿತನಾಗಿ ಇದ್ದನು. ಬಹಳ ಪ್ರೀತಿಯುಳ್ಳವನಾಗಿ ಧರ್ಮರಾಜನೊಡನೆ 'ದೈವೇಚ್ಛೆಯಿಂದ ನೀವೆಲ್ಲರೂ ಸುಖವಾಗಿ ವನವಾಸವನ್ನು ಮುಗಿಸಿಕೊಂಡು ಬಂದಿರುವಿರಿ. ಈ ರಾಜ್ಯವು ನಿಮಗೆ ಸೇರಿದ್ದು. ಎಲ್ಲಾ ವಸ್ತುವೂ ನಿಮಗೂ ಸೇರಿದ್ದು. ನಾವಿಬ್ಬರೂ ಅನುಭವಿಸುವ' ಎಂದು ಹೇಳಿದನು.



# ಧರ್ಮರಾಜನು ಅಭಯಪ್ರದಾನ ಮಾಡಿದ್ದು [1]

ವಿರಾಟರಾಜನ ಮಾತನ್ನು ಕೇಳಿ ಉತ್ತರನು ಹೇಳಿದನು. 'ರಾಜನೇ! ನೀನು ಧರ್ಮರಾಜನಲ್ಲಿ ಅಪರಾಧವನ್ನು ಮಾಡಿದವನಾದ ಕಾರಣ ಅವನನ್ನು ಹೇಗಾದರೂ ಸಂತೋಷಪಡಿಸುವುದು ಅಗತ್ಯವಾಗಿರುವುದು. ಅರ್ಜುನನು ತೇಜಸ್ವಿಯಾಗಿಯೂ ಬಲಿಷ್ಠನಾಗಿಯೂ ಪರಾಕ್ರಮಶಾಲಿಯಾಗಿಯೂ ಇರುವನು. ಅವನಿಗೆ ನನ್ನ ತಂಗಿಯಾದ ಉತ್ತರೆಯನ್ನು ನಮಸ್ಕಾರಮಾಡಿ ಮದುವೆ ಮಾಡಿಕೊಡುವ. ಹಾಗೆ ಮಾಡಿದರೆ ನಾವು ಶಿಷ್ಯರಾಗುವೆವು. ನಾವೆಲ್ಲರೂ ಮಂತ್ರಿಗಳಿಂದ ಸಹಿತರಾಗಿ ಧರ್ಮರಾಜನನ್ನು ಸಂತೋಷಪಡಿಸುವ. ರಾಜನೇ! ನೀನೂ ಯುದ್ಧದಲ್ಲಿ ಶತ್ರು ವಶನಾದವನು ಧರ್ಮರಾಜನಿಂದ ಬಿಡಿಸಲ್ಪಟ್ಟಿರುವಿ. ಈ ಪಾಂಡವರ ಪರಾಕ್ರಮದಿಂದಲೇ ನೀನು ಗೋವುಗಳನ್ನು ಬಿಡಿಸಿಕೊಂಡು ಬಂದಿರುವಿ. ಇವರ ಅನುಗ್ರಹದಿಂದಲೇ ಕೌರವರನ್ನು ಜಯಿಸಿದೆವು. ಆದುದರಿಂದ ಪಾಂಡವರು ಪೂಜ್ಯರು. ಬಹುಮಾನಕ್ಕೆ ಅರ್ಹರು. ಅವರನ್ನು ಪೂಜಿಸುವ ಸಮಯವು ಈಗ ಬಂದಿದೆ. ಇವರು ಕೋಪಿಸಿಕೊಂಡರೆ ಹಾವುಗಳಂತೆ ನಮ್ಮನ್ನು ಒಬ್ಬರನ್ನೂ ಉಳಿಸಲಾರರು. ಆದುದರಿಂದ ಬೇಗನೆ ಧರ್ಮರಾಜನನ್ನು ಮೊರೆಹೊಂದುವ. ನಾನು ಮಂಗಳಸ್ನಾನ ಮಾಡಿರುವ ಉತ್ತರೆಯನ್ನು ಮುಂದೆ ಮಾಡಿಕೊಂಡು ಕೈಮುಗಿದುಕೊಂಡು ಧರ್ಮರಾಜನನ್ನು ಪ್ರಾರ್ಥಿಸುವೆನು. ನಾನು ಎಲ್ಲಾ ಪಾಂಡವರ ಬಲಪೌರುಷಗಳನ್ನು ದೊಡ್ಡವಂಶದಲ್ಲಿ ಹುಟ್ಟಿರುವುದನ್ನು ಅರ್ಜುನನ ಪರಾಕ್ರಮವನ್ನು ತಿಳಿದಿರುವೆನು' ಎಂದು ಹೇಳಿದನು.

ವಿರಾಟನು ಉತ್ತರನಿಂದ ಅವರು ಪಾಂಡವರೆಂಬುದನ್ನು ತಿಳಿದು ಅವನನ್ನು ನೋಡಿ ಮಾಡಬೇಕಾದುದನ್ನು ಯೋಚಿಸಿದನು. ತಲೆಗೆ ಸ್ನಾನಮಾಡಿದ್ದ ಉತ್ತರೆ ಯನ್ನು ಮುಂದೆ ಮಾಡಿಕೊಂಡು ಕೈಮುಗಿದುಕೊಂಡು ಧರ್ಮರಾಜನ ಬಳಿಯಲ್ಲಿ ನೆಲದಲ್ಲಿ ಉದ್ದಕ್ಕೆ ನಮಸ್ಕರಿಸಿ 'ಧರ್ಮರಾಜ ಮಹಾರಾಜನು ಪ್ರಸನ್ನನಾಗಬೇಕು. ಬೇರೆ ವೇಷವನ್ನು ಹಾಕಿಕೊಂಡು ಇದ್ದಕಾರಣ ಹುಲ್ಲಿನಿಂದ ಮುಚ್ಚಿಹೋದ ಹುಲ್ಲಿನಂತೆ ನಮಗೆ ತಿಳಿಯಲಿಲ್ಲ. ಸಪರಿವಾರನಾಗಿ ಮಗನಿಂದ ಸಹಿತನಾಗಿ ಶಿರಸಾ ನಮಸ್ಕರಿಸಿರುವೆನು. ನಾವು ತಿಳಿಯದೆ ಮಾಡಿರುವ ಅವಮಾನವೆಲ್ಲವನ್ನೂ ಕ್ಷಮಿಸಬೇಕು. ನನ್ನ ಸಮಸ್ತ ರಾಜ್ಯವನ್ನು ಕೋಶವನ್ನು ಬಿಟ್ಟುಬಿಟ್ಟಿದ್ದೇನೆ. ನಾನು ನಿನ್ನ

---

1. ಭಾ.ವಿ.ಪ ಅ-71

ವಶನಾಗಿರುವೆನು. ಮಂತ್ರಿಗಳಿಂದ ಸಹಿತರಾಗಿ ಎಲ್ಲರೂ ಮೊರೆಹೊಂದಿರುವೆವು' ಎಂದು ಹೇಳಿದನು.

ಬಂಧುಗಳಿಂದ ಸಹಿತನಾಗಿ ಭೂಮಿಯಲ್ಲಿ ಉದ್ದಕ್ಕೆ ನಮಸ್ಕಾರ ಮಾಡಿರುವ ವಿರಾಟನನ್ನು ನೋಡಿ ಧರ್ಮರಾಜನು ಕೋಪಶೋಕಾದಿಗಳಿಂದ ರಹಿತನಾಗಿ 'ನಿನಗೆ ಈಗ ಭಯವಿರುವುದಿಲ್ಲ. ನಾನು ಯಾರು ಎಂಬುದನ್ನು ನೀನು ಈಗ ತಿಳಿದಿರುವಿ. ತಿಳಿದಮೇಲೆ ಮಂತ್ರಿಗಳಿಂದಲೂ ಪಂಡಿತರಾದ ಬ್ರಾಹ್ಮಣರಿಂದಲೂ ಉಚಿತವಾದ ಕಾರ್ಯವನ್ನು ಮಾಡಿರುವಿ. ಅಲಂಕೃತಳಾದ ಈ ನಿನ್ನ ಮಗಳನ್ನೂ ನೋಡಿ ನಾನು ಬಹಳ ಸಂತೋಷವನ್ನು ಹೊಂದಿರುವೆನು. ನೀನು ಹೇಳಿದಂತೆಯೇ ನಿನ್ನನ್ನು ನಾನು ಕ್ಷಮಿಸಿರುವೆನು. ನನಗೆ ನಿನ್ನ ಮೇಲೆ ಸ್ವಲ್ಪವೂ ಕೋಪವು ಇರುವುದಿಲ್ಲ' ಎಂದು ಹೇಳಿದನು.

ತರುವಾಯ ವಿರಾಟರಾಜನು ಎದ್ದು ಪರಮಸಂತೋಷವುಳ್ಳವನಾಗಿ ಸಮಸ್ತರಾಜ್ಯವನ್ನು ಕೋಶವನ್ನೂ ತಾನು ಬಿಟ್ಟುಬಿಟ್ಟನು.



## ಉತ್ತರೆಯನ್ನು ಅರ್ಜುನನು ಮಗನಿಗಾಗಿ ಸ್ವೀಕರಿಸಿದ್ದು[1]

ಆಮೇಲೆ ವಿರಾಟರಾಜನು ಧರ್ಮರಾಜನೊಡನೆ 'ಧರ್ಮರಾಜನೇ! ನನ್ನ ಮಾತಿನಲ್ಲಿ ಸಂದೇಹಪಡಬಾರದು. ಈ ಸಮಸ್ತ ರಾಜ್ಯವನ್ನು ನಿಮಗೆ ಕೊಟ್ಟುಬಿಡುತ್ತೇನೆ. ನೀವು ಕೊಟ್ಟದ್ದನ್ನು ನಾನು ಅನುಭವಿಸುತ್ತಾ ಇರುತ್ತೇನೆ. ನಾನು ಮುದುಕನಾಗಿರುವೆನು. ಬೇಕಾದಷ್ಟು ಭೋಗಗಳನ್ನು ಅನುಭವಿಸಿರುವೆನು. ರಾಜ್ಯವನ್ನು ನಿಮಗೆ ಕೊಟ್ಟು ಕಾಡಿಗೆ ಹೋಗುವೆನು. ಅರ್ಜುನನು ಉತ್ತರೆಯನ್ನು ಸ್ವೀಕರಿಸಲಿ. ಅವನು ಅವಳಿಗೆ ಯೋಗ್ಯ ವರನಾಗಿರುವನು' ಎಂದು ಹೇಳಿದನು.

ಆಗ ಧರ್ಮರಾಜನು ಅರ್ಜುನನ ಮುಖವನ್ನು ನೋಡಿದನು. ಅರ್ಜುನನು ಧರ್ಮರಾಜನ ಅಭಿಪ್ರಾಯವನ್ನು ತಿಳಿದುಕೊಂಡು ವಿರಾಟರಾಜನೊಡನೆ 'ರಾಜನೇ! ವನವಾಸವನ್ನು ಮುಗಿಸಿಕೊಂಡು ಬಂದಿರುವ ನಾವು ನಿನ್ನ ರಾಜ್ಯವನ್ನು ಸ್ವೀಕರಿಸುವುದಿಲ್ಲ. ದುರ್ಯೋಧನಾದಿಗಳ ರಾಜ್ಯವನ್ನು ತೆಗೆದುಕೊಳ್ಳುವೆವು. ನಿನ್ನ ಮಗಳನ್ನು ನಾವು ನನ್ನ ಮಗನಿಗಾಗಿ ಸ್ವೀಕರಿಸುವೆನು. ಮತ್ಸ್ಯವಂಶಕ್ಕೂ ಭಾರತವಂಶಕ್ಕೂ ಸಂಬಂಧವಾಗುವುದು ಉಚಿತವಾಗಿರುವುದು' ಎಂದನು.

1. ಭಾ.ವಿ.ಪ ಅ-71

ಆಗ ವಿರಾಟನು ಅರ್ಜುನನೊಡನೆ ನನ್ನ ಮಗಳನ್ನು ನೀನು ಪತ್ನಿಯನ್ನಾಗಿ ಯಾಕೆ ಸ್ವೀಕರಿಸುವುದಿಲ್ಲ' ಎಂದು ಕೇಳಿದನು.

ಅದಕ್ಕೆ ಅರ್ಜುನನು 'ರಾಜನೇ! ನಾನು ಅಂತಃಪುರದಲ್ಲಿ ಯಾವಾಗಲೂ ನಿನ್ನ ಮಗಳನ್ನು ನೋಡುತ್ತಾ ವಾಸಮಾಡುತ್ತಿದ್ದೆನು. ರಹಸ್ಯದಲ್ಲಿ ಪ್ರಕಾಶದಲ್ಲಿಯೂ ಅವಳು ಯಾವಾಗಲೂ ನನ್ನಲ್ಲಿ ತಂದೆಯಲ್ಲಿ ವಿಶ್ವಾಸಮಾಡುವಂತೆ ಮಾಡುತ್ತಿದ್ದಳು. ನರ್ತನ ಗಾಯನ ಇತ್ಯಾದಿಗಳ ವಿಷಯದಲ್ಲಿ ನಾನು ಅವಳಿಗೆ ಪ್ರಿಯನಾಗಿದ್ದೆನು. ಬಹುಮಾನಕ್ಕೆ ಪಾತ್ರನಾಗಿದ್ದೆನು. ನಿತ್ಯವೂ ನನ್ನನ್ನು ಅವಳು ಗುರುವಿನಂತೆ ನೋಡಿಕೊಳ್ಳುತ್ತಿದ್ದಳು. ಮಿತ್ರೆಯಾದ ಅವಳೊಡನೆ ನಾನು ಒಂದುವರ್ಷಕಾಲ ವಾಸಮಾಡಿದೆನು. ಅದರಿಂದ ನಾನೀಗ ಮದುವೆಯಾಗಲಿಕ್ಕೆ ಸಮ್ಮತಿಸುವುದಾದರೆ ಲೋಕದ ಜನರಿಗೂ ನಿನಗೂ ಸಹ ಮೊದಲೇ ನನಗೆ ಉತ್ತರೆಯ ಸಂಬಂಧವಾಗಿರಬಹುದೆಂದು ಶಂಕಿಸಲಿಕ್ಕೆ ಕಾರಣವಿದೆ. ಆದುದರಿಂದ ಅಂತಹ ಸಂದೇಹವನ್ನು ಪರಿಹರಿಸುವುದಕ್ಕಾಗಿ ನನ್ನ ಮಗನ ಹೆಂಡತಿಯಾಗಲಿ ಎಂದು ಹೇಳುತ್ತಿರುವೆನು. ಇದರಿಂದ ನಾನೂ ಶುದ್ಧನಾಗುವೆನು. ಅವಳೂ ಶುದ್ಧಳೆಂದು ಗೊತ್ತಾಗುವುದು. ಸೊಸೆಯಲ್ಲಿಯೂ ಮಗಳಲ್ಲಿಯೂ ಸಂದೇಹ ಬರುವಂತಿಲ್ಲ. ಆದುದರಿಂದ ಶುದ್ಧಿಯು ಏರ್ಪಡುವುದು. ಆದುದರಿಂದ ಜನರ ಅಪವಾದದಿಂದ ಭಯಪಟ್ಟಿರುವ ನಾನು ನಿನ್ನ ಮಗಳನ್ನು ಸೊಸೆಯನ್ನಾಗಿ ಸ್ವೀಕರಿಸುವೆನು. ನನ್ನ ಮಗನೂ ಸಾಮಾನ್ಯನಲ್ಲ. ಶ್ರೀಕೃಷ್ಣಪರಮಾತ್ಮನ ಸೋದರ ಅಳಿಯನು ಶ್ರೀಭಗವಂತನಿಗೆ ಪ್ರಿಯನಾದನು ಬಲಿಷ್ಠನು. ಅಸ್ತ್ರವಿದ್ಯೆಯಲ್ಲಿ ಪಂಡಿತನು. ನಿನಗೆ ಯೋಗ್ಯ ಅಳಿಯನು. ನಿನ್ನ ಮಗಳಿಗೆ ಯೋಗ್ಯನಾದ ಗಂಡನು' ಎಂದು ಹೇಳಿದನು.

ಅದಕ್ಕೆ ವಿರಾಟನು ಒಪ್ಪಿಕೊಂಡನು. ನಿನ್ನ ಸಂಬಂಧವು ಏರ್ಪಟ್ಟಕಾರಣ ನನ್ನ ಎಲ್ಲಾ ಅಭೀಷ್ಟಗಳೂ ಸಿದ್ಧಿಸಿದವು ಎಂದು ಅರ್ಜುನನೊಡನೆ ಹೇಳಿಕೊಂಡನು. ಆಗ ಧರ್ಮರಾಜನೂ ಈ ಸಂಬಂಧವನ್ನು ಒಪ್ಪಿಕೊಂಡನು. ಎಲ್ಲಾ ಮಿತ್ರರಿಗೂ ಕೃಷ್ಣಪರಮಾತ್ಮನಿಗೂ ದೂತರನ್ನು ಕೊಟ್ಟುಕಳುಹಿಸಿದನು. ಅರ್ಜುನನೂ ಉತ್ತರೆಯನ್ನು ಸೊಸೆಯನ್ನಾಗಿ ಸ್ವೀಕರಿಸಿ ತನ್ನ ಶುದ್ಧಿಯನ್ನು ಲೋಕಕ್ಕೆ ಪ್ರಸಿದ್ಧಿ ಪಡಿಸಿ ಸಂತೋಷದಿಂದ ಇದ್ದನು.

ಆಮೇಲೆ ಧರ್ಮರಾಜನು ವಿರಾಟನೊಡನೆ 'ರಾಜನೇ! ನಾನು ತುಂಬಾ ಪ್ರೀತಿಯುಳ್ಳವನಾಗಿರುವೆನು. ನೀನು ನನಗೆ ಮಿತ್ರನಾಗಿರುವಿ. ನಾವೆಲ್ಲರೂ ನಿನ್ನ ಬಳಿಯಲ್ಲಿ ಸುಖವಾಗಿ ಅಜ್ಞಾತವಾಸವನ್ನು ಕಳೆದವು' ಎಂದು ಹೇಳಿದನು.

ಆಪ್ರಕಾರವಾಗಿ ಹೇಳುತ್ತಿದ್ದ ಧರ್ಮರಾಜನನ್ನು ವಿರಾಟರಾಜನು ಸ್ನೇಹದಿಂದ ಎರಡು ಕೈಗಳಿಂದ ಆಲಿಂಗಿಸಿ ಪರಮಸಂತೋಷದಿಂದ ಬೇಕಾದಷ್ಟು ಹಣವನ್ನು ಕೊಟ್ಟನು.



# ದುರ್ಯೋಧನನು ವಿರಾಟನಗರಕ್ಕೆ ದೂತನನ್ನು ಕಳುಹಿಸಿದ್ದು [1]

ಯುದ್ಧದಿಂದ ಹೊರಟುಹೋದ ಕೌರವರು ಎಲ್ಲರೂ ಒಟ್ಟಿಗೆ ಸೇರಿ ಯೋಚನೆ ಮಾಡಿದವರಾಗಿ ಧರ್ಮರಾಜನಿಗೆ ಒಬ್ಬ ದೂತನನ್ನು ಕೊಟ್ಟು ಕಳುಹಿಸಿದರು. ಧರ್ಮರಾಜನು ಸಂತೋಷದಿಂದ ದುರ್ಯೋಧನನಿಂದ ಕಳುಹಿಸಲ್ಪಟ್ಟ ದೂತನನ್ನು ನೋಡಿದನು. ಆ ದೂತನು ಬಂದು ಧರ್ಮರಾಜನೊಡನೆ 'ಧರ್ಮರಾಜನೇ! ನೀನು ಅರ್ಜುನನಿಂದಾಗಿ ಪುನಃ ವನಕ್ಕೆ ಹೋಗಬೇಕಾಗಿರುವುದು. ನೀನು ಮಾಡಿರುವ ಪ್ರತಿಜ್ಞೆಯಂತೆ ನಡೆಯುವವನಾಗು. ಹದಿಮೂರನೇ ವರ್ಷವು ಸಂಪೂರ್ಣವಾಗುವ ಮೊದಲೇ ಅರ್ಜುನನು ನಮಗೀಗ ಕಾಣಿಸಿದನು' ಎಂದು ದುರ್ಯೋಧನನು ಹೇಳಿರುವನಾಗಿ ತಿಳಿಸಿದನು.

ಅದನ್ನು ಕೇಳಿ ಧರ್ಮರಾಜನು ನಗುವವನಾಗಿ 'ನೀನು ಬೇಗನೇ ಹೋಗಿ ದುರ್ಯೋಧನನಿಗೆ ತಿಳಿಸು. ನಮ್ಮ ತಾತಂದಿರಾದ ಭೀಷ್ಮಾಚಾರ್ಯರು ನಮ್ಮ ಸಮಯವು ಸಂಪೂರ್ಣವಾಯಿತೋ ಇಲ್ಲವೋ ಎಂಬುದನ್ನು ತಿಳಿಸಲಿ. ಒಂದು ವರ್ಷವು ಸಂಪೂರ್ಣವಾಗಿ ಕಳೆದುಹೋದ ಮೇಲೆಯೇ ಅರ್ಜುನನು ಯುದ್ಧ ಮಧ್ಯದಲ್ಲಿ ಗಾಂಡೀವನ ಧ್ವನಿಯನ್ನು ಮಾಡಿದನು. ಭೀಷ್ಮಾಚಾರ್ಯರು ಹೇಗೆ ಹೇಳುತ್ತಾರೋ ಹಾಗೆ ಆಗಲಿ. ಅವರ ಮಾತು ನಮಗೆ ಪ್ರಮಾಣವು' ಎಂದು ಹೇಳಿದನು. ತರುವಾಯ ಆ ದೂತನು ಹಿಂದೆ ಬಂದವನಾಗಿ ಆ ಮಾತನ್ನು ದುರ್ಯೋಧನನೊಡನೆ ತಿಳಿಸಿದನು. ಆಗ ದುರ್ಯೋಧನನು ಪುನಃ ಭೀಷ್ಮ, ಕರ್ಣ, ದ್ರೋಣ, ಭೂರಿಶ್ರವ ಮೊದಲಾದವರೊಡನೆ ರಾತ್ರಿಯಲ್ಲಿ ಯೋಚನೆ ಮಾಡಿದನು. ಆಗ ಭೀಷ್ಮಾಚಾರ್ಯರು 'ಅರ್ಜುನನು, ನಮ್ಮ ಪ್ರತಿಜ್ಞೆಯು ಸಂಪೂರ್ಣವಾಗಿ ಮುಗಿದ ಮೇಲೆಯೇ ಯುದ್ಧರಂಗಕ್ಕೆ ಬಂದು ಗಾಂಡೀವದ

1. ಮ.ತಾ.ನಿ. ಅ.23

ಧ್ವನಿಯನ್ನು ಮಾಡಿರುವನು. ಪಾಂಡವರು ಸುಳ್ಳು ಹೇಳಿ ಸ್ವರ್ಗಲೋಕವನ್ನಾಗಲೀ, ಬ್ರಹ್ಮದೇವರ ಲೋಕವನ್ನಾಗಲೀ ಅಪೇಕ್ಷಿಸಲಾರರು. ದುರ್ಯೋಧನ! ನಿನಗೆ ನಾನು ಸತ್ಯವಾಗಿಯೂ ಹಿತಕರವಾದ ಮಾತನ್ನು ಹೇಳುತ್ತೇನೆ. ಪಾಂಡವರೊಡನೆ ನೀನು ರಾಜಿಯನ್ನು ಮಾಡಿಕೊ. ಪಾಂಡವರಿಂದ ಕೂಡಿಕೊಂಡು ರಾಜ್ಯವನ್ನು ಅನುಭವಿಸು. ಬಲಿಷ್ಠರಾದ ಮಹಾನುಭಾವರಾದ ಆ ಪಾಂಡವರಿಗೆ ಸೇರಿದ ರಾಜ್ಯವನ್ನು ಕೊನೆಯವರೆಗೆ ಕಪಟದಿಂದ ಅನುಭವಿಸಲಿಕ್ಕೆ ಆಗಲಾರದು. ಒಂದೋ ಶತ್ರುಗಳನ್ನು ಜಯಿಸಿ ರಾಜ್ಯವನ್ನು ಅನುಭವಿಸು. ಅಥವಾ ಯುದ್ಧದಲ್ಲಿ ಸತ್ತು ಸ್ವರ್ಗಲೋಕವನ್ನು ಹೊಂದುವಿ' ಎಂದರು.

ಭೀಷ್ಮಾಚಾರ್ಯರ ಮಾತನ್ನು ಕೇಳಿ ದುರ್ಯೋಧನನು ತಂದೆ ತಾಯಿಗಳ ಮುಂಭಾಗದಲ್ಲಿ ಭೀಷ್ಮಾಚಾರ್ಯರೊಡನೆ 'ನಾನು ಪಾಂಡವರಿಗೆ ಸ್ವಲ್ಪವೂ ಭೂಮಿಯನ್ನು ಕೊಡಲಾರೆನು. ಒಂದೋ ನಾನು ಪಾಂಡವರನ್ನು ಕೊಂದುಹಾಕುವೆನು. ಅಥವಾ ಅವರಿಂದ ಸತ್ತು ಇಂದ್ರಲೋಕವನ್ನು ಹೊಂದುವೆನು' ಎಂದು ಹೇಳಿದನು. ತರುವಾಯ ಅವರೆಲ್ಲರೂ ತಮ್ಮ ತಮ್ಮ ಮನೆಗೆ ಹೋದರು.



## ಉತ್ತರಾಕಲ್ಯಾಣವು [1]

ತರುವಾಯ ಹದಿಮೂರನೇ ವರ್ಷವು ಮುಗಿಯಲು ಪಾಂಡವರು ವಿರಾಟ ರಾಜನಿಗೆ ಸೇರಿದ ಉಪಪ್ಲಾವ್ಯನಗರಕ್ಕೆ ಬಂದು ವಾಸಮಾಡಿದರು. ವಿರಾಟರಾಜನೂ ಧರ್ಮರಾಜನೂ ಉತ್ತರೆಯ ಮದುವೆಗಾಗಿ ಸಂಬಂಧಿಗಳಾದ ಜನರಿಗೆಲ್ಲರಿಗೂ ದೂತರನ್ನು ಕೊಟ್ಟು ಕಳುಹಿಸಿದರು. ತರುವಾಯ ಶ್ರೀಕೃಷ್ಣಪರಮಾತ್ಮನು ದೂತವಚನವನ್ನು ಕೇಳಿ ತನಗೆ ಪ್ರಿಯನಾದ ಸೋದರ ಅಳಿಯನಾದ ಸುಭದ್ರೆಯ ಮಗನಾದ ಅಭಿಮನ್ಯುವನ್ನು ಕರೆದುಕೊಂಡು ಬಲರಾಮದೇವರಿಂದಲೂ ಸಹಿತನಾಗಿ ಸಮಸ್ತ ಯಾದವರಿಂದಲೂ ಯುಕ್ತನಾಗಿ ಉಪಪ್ಲಾವ್ಯಕ್ಕೆ ಬಂದನು. ಎಲ್ಲರೂ ಪಾಂಡವರನ್ನು ನೋಡಲಿಕ್ಕೆ ಬಂದರು. ಇಂದ್ರಸೇನನೇ ಮೊದಲಾದ ಪಾಂಡವರ ಸಾರಥಿಗಳೂ ರಥಗಳಿಂದ ಸಹಿತರಾಗಿ ಪಾಂಡವರಿದ್ದಲ್ಲಿಗೆ ಬಂದರು. ಹತ್ತುಸಾವಿರ ಆನೆಗಳೂ ಇಪ್ಪತ್ತುಸಾವಿರ ಕುದುರೆಗಳೂ ಲಕ್ಷ ರಥಗಳೂ ನಿಖರ್ವ ಪದಾತಿಗಳೂ

1. ಭಾ.ವಿ.ಪ ಅ-72 ಮ.ತಾ.ನಿ. ಅ.23

ನೂರಾರು ಯಾದವರೂ ಶ್ರೀಕೃಷ್ಣಪರಮಾತ್ಮನ ಹಿಂದೆಯೇ ಬಂದರು. ಹಾಗೆ ಶ್ರೀಭಗವಂತನು ಬರುತ್ತಿರುವುದನ್ನು ಕೇಳಿ ಪಾಂಡವರು ವಿರಾಟನಿಂದ ಸಹಿತರಾಗಿ ಶಂಖ ದುಂದುಭಿ ಮೊದಲಾದ ವಾದ್ಯಗಳ ಮಂಗಲಘೋಷದಿಂದ ಸಂತೋಷ ದಿಂದ ಎದುರುಗೊಂಡು ಕರಕೊಂಡು ಬಂದರು. ವಿರಾಟನಿಂದ ಸಹಿತರಾಗಿ ಆನಂದಬಾಷ್ಪವನ್ನು ಸುರಿಸುತ್ತಾ ಶ್ರೀಭಗವಂತನ ಪಾದಗಳಿಗೆ ನಮಸ್ಕರಿಸಿದರು.

ಶ್ರೀಭಗವಂತನು ನಮಸ್ಕರಿಸಿದ ಎಲ್ಲರನ್ನೂ ಸಂತೋಷದಿಂದ ಬೇಗನೇ ಆಲಿಂಗನ ಮಾಡಿ ಸತ್ಕರಿಸಿದನು. ಪಾಂಡವರು 'ಶ್ರೀಭಗವಂತನೇ! ನಿನ್ನ ಅನುಗ್ರಹ ದಿಂದಲೇ ಇಷ್ಟು ಸಮಯ ವನವಾಸವನ್ನು ಮುಗಿಸಿದೆವು. ಈ ಹದಿಮೂರನೇ ವರ್ಷವನ್ನೂ ಮುಗಿಸಿದೆವು. ನೀನೇ ನಮ್ಮನ್ನು ರಕ್ಷಿಸಬೇಕು. ನಾವು ನಿನ್ನನ್ನು ಮೊರೆಹೊಂದಿರುವೆವು' ಎಂದರು.

ಶ್ರೀಭಗವಂತನು ಸಂತೋಷದಿಂದ ಎಲ್ಲರೂ ಯಥೋಚಿತವಾಗಿ ಸತ್ಕರಿಸಿದನು. ಸಮಸ್ತ ಯಾದವರೂ ಹಾಗೆಯೇ ಮಾಡಿದರು. ದ್ರೌಪದೀದೇವಿ ಯರೂ ಬಂದು ಶ್ರೀಭಗವಂತನ ಪಾದಗಳಿಗೆ ನಮಸ್ಕರಿಸಿದರು. ಆಗ ಭಗವಂತನು 'ಕಲ್ಯಾಣಿ! ದುಃಖವನ್ನು ಹೊಂದಬೇಡ. ಬೇಗನೇ ನಾನು ಅರ್ಜುನನಿಂದ ಸಹಿತನಾಗಿ ದುರ್ಯೋಧನಾದಿಗಳನ್ನು ಬೇಗನೇ ಸಂಹಾರ ಮಾಡಿಸುವವನಾಗಿ ಧರ್ಮರಾಜನಿಗೆ ರಾಜ್ಯವನ್ನು ಕೊಡುತ್ತೇನೆ. ಅಭಿಮನ್ಯುವಿನ, ಅರ್ಜುನನ ಮತ್ತು ಪ್ರದ್ಯುಮ್ನನ ಆಣೆಯನ್ನು ಇಟ್ಟು ಹೇಳುತ್ತೇನೆ. ನನ್ನ ಮಾತು ಸತ್ಯವೆಂದು ನಂಬು' ಎಂದು ಹೇಳಿ ಅವರ ಕಣ್ಣೀರನ್ನು ವರಸಿ, ಕಳುಹಿಸಿ, ಯಾದವರಿಂದ ಸಹಿತನಾಗಿ ಧರ್ಮರಾಜ ನೊಡನೆ ಇದ್ದನು. ತರುವಾಯ ಕಾಶಿರಾಜನೂ, ಶೈಬ್ಯನೂ, ಎರಡು ಅಕ್ಷೌಹಿಣೀ ಸೈನ್ಯಸಹಿತರಾಗಿ ಬಂದರು. ದ್ರುಪದರಾಜನು ಮೂರು ಅಕ್ಷೌಹಿಣೀ ಸೈನ್ಯ ಸಹಿತನಾಗಿ ಬಂದನು. ಮತ್ತು ದ್ರೌಪದೀದೇವಿಯರ ಮಕ್ಕಳೂ, ಶಿಖಂಡಿಯೂ, ಧೃಷ್ಟದ್ಯುಮ್ನನೂ, ಪಾಂಡವರಿಗಾಗಿ ಉಪಪ್ಲಾವ್ಯನಗರಕ್ಕೆ ಬಂದರು. ತರುವಾಯ ನೂರಾರು ಜನ ಯೋಧರು ಬಂದರು. ನೂರಾರು ಜನ ರಾಜರೂ ಬಂದರು. ಬಂದವರಿಗೆಲ್ಲರಿಗೂ ಧರ್ಮರಾಜನು ಯಥೋಚಿತರಾಗಿ ಸತ್ಕಾರ ಮಾಡಿದನು. ಬಂದವರೆಲ್ಲರೂ ಸಂತೋಷಪಟ್ಟರು. ಕೃಷ್ಣಪರಮಾತ್ಮನು ಪಾಂಡವರಿಗೆ ಬೇಕಾದ ರತ್ನಗಳನ್ನೂ, ಸ್ತ್ರೀಯರನ್ನೂ, ವಸ್ತ್ರಗಳನ್ನೂ, ಉಡುಗೊರೆಯಾಗಿ ಕೊಟ್ಟನು. ಎಲ್ಲಾ ರಾಜರೂ ಬಂದಿರಲು ಶುಭಮುಹೂರ್ತದಲ್ಲಿ ಉತ್ತರೆಗೂ ಅಭಿಮನ್ಯುವಿಗೂ ವಿವಾಹವು ಉಂಟಾಯಿತು. ಆಗ ಬೇಕಾದ ವಾದ್ಯಗಳನ್ನು ಬಾರಿಸಿದರು.

ಮಹಾವೈಭವವು ನಡೆಯಿತು. ಎಲ್ಲಾ ಹೆಂಗಸರೂ ಅಲಂಕಾರ ಮಾಡಿಕೊಂಡು ಸುದೇಷ್ಣೆಯನ್ನು ಮುಂದೆ ಮಾಡಿಕೊಂಡು ಬಂದರು. ಅವರೆಲ್ಲರಲ್ಲಿಯೂ ದ್ರೌಪದೀದೇವಿಯರೇ ಅತಿರೂಪವತಿಯಾಗಿ ಇದ್ದರು. ವಿರಾಟರಾಜನು ಅರ್ಜುನನ ಕೈಯಲ್ಲಿ ನೀರನ್ನು ಹಾಕಿ ಉತ್ತರೆಯನ್ನು ಒಪ್ಪಿಸಿದನು. ಅರ್ಜುನನು ತನ್ನ ಮಗನಿಗಾಗಿ ಅಂಗೀಕರಿಸಿದನು. ಅಭಿಮನ್ಯುವು ಉತ್ತರೆಯ ಪಾಣಿಗ್ರಹಣವನ್ನು ಮಾಡಿದನು. ವಿರಾಟನು ಪ್ರೀತಿಯಿಂದ ಅಭಿಮನ್ಯುವಿಗೆ ತನ್ನ ಮಗಳನ್ನು ದಾನ ಮಾಡಿದನು. ಬಹಳ ವೈಭವದಿಂದ ವಿವಾಹವು ನಡೆಯಿತು. ಧೌಮ್ಯಾಚಾರ್ಯರು ವಿವಾಹಾಂಗ ಹೋಮವನ್ನು ಮಾಡಿಸಿದರು. ವಿರಾಟನು ಸಂತೋಷದಿಂದ ಮಗಳಿಗಾಗಿ ಬೇಕಾದಷ್ಟು ಹಣವನ್ನು ಕೊಟ್ಟನು. ಆ ಸಮಯದಲ್ಲಿ ಧರ್ಮರಾಜನೂ ಬ್ರಾಹ್ಮಣರಿಗೆ ಬೇಕಾದಷ್ಟು ದಾನ ಮಾಡಿದನು. ಎಲ್ಲರಿಗೂ ಬೇಕಾದಷ್ಟು ಬಹುಮಾನ ಮಾಡಿದನು. ಬಹುವೈಭವದಿಂದ ವಿವಾಹವು ಮುಗಿಯಿತು.

## ॥ ಶ್ರೀಕೃಷ್ಣಾರ್ಪಣಮಸ್ತು ॥

''ಧರ್ಮೋ ವಿವರ್ಧತಿ ಯುಧಿಷ್ಠಿರ ಕೀರ್ತನೇನ
ಪಾಪಂ ವಿನಶ್ಯತಿ ವೃಕೋದರ ಕೀರ್ತನೇನ ।
ಶತ್ರುರ್ವಿನಶ್ಯತಿ ಧನಂಜಯಕೀರ್ತನೇನ
ಮಾದ್ರೀಸುತೌ ಕಥಯತಾಂ ನ ಭವಂತಿ ರೋಗಾಃ''॥

# ಆಧಾರ ಗ್ರಂಥಗಳು

01. ಮಹಾಭಾರತ ಮೂಲಗ್ರಂಥ - ವಿವಿಧ ಸಂಪಾದನೆಗಳು.

(ಅ) ಶ್ರೀ ಟಿ.ಆರ್.ಕೃಷ್ಣಾಚಾರ್ 1991 (ಪುನರ್ಮುದ್ರಣ)

(ಆ) ಗೀತಾಪ್ರೆಸ್, ಗೋರಖಪುರ, 1957

(ಇ) ಪೂನಾ ಭಾಂಡಾರಕರ್ ಸಂಪಾದನೆ

02. ಮಹಾಭಾರತ ತಾತ್ಪರ್ಯ ನಿರ್ಣಯ

03. ಪುರಾಣನಾಮ ಚೂಡಾಮಣಿ

04. Encyclopedia of Puranic Words by - Vettam Mani Motilal Banarasidas Publishers-Delhi. 1993.

ಇತ್ಯಾದಿ



# ನಮ್ಮ ಪ್ರಕಟಣೆಗಳು

01. ಗಾಯತ್ರೀ ಹೃದಯ
02. ಗಾಯತ್ರೀ ಭಾವತಿಲಕಂ (ಸಂಸ್ಕೃತ)
03. ಅಹಂ ಬ್ರಹ್ಮಾಸ್ಮಿ
04. ಗುರಿಯಿಲ್ಲದ ದಾರಿ
05. ಗಾಯತ್ರಿಯಲ್ಲಿ ಅಧ್ಯಾತ್ಮದೀಪ
06. ಗಾಯತ್ರಿಯಲ್ಲಿ ವ್ಯಾಸಚಿಂತನೆ
07. ಹರಿನಾಮ ರಹಸ್ಯ
08. ಗೀತಾರ್ಥ ವೈಭವ
09. ಗೀತಾಸಾರ ಸೌರಭ
10. ಭಾಗವತವು ಬೆಳಗಿದ ವೇದಾಂತ ದೀಪಾವಳಿ
11. ಗೀತೆಯಲ್ಲಿ ಪ್ರಾಣತತ್ತ್ವದ ಹಿರಿಮೆ
12. ಭಗವಂತನು ನಿರ್ಗುಣ, ನಿರಾಕಾರನೇ ?
13. ವಾಸುದೇವನಲ್ಲಿ ಗೀತಾಕಟಾಕ್ಷ
14. ಹರಿತತ್ತ್ವ ಚೂಡಾಮಣಿ
15. ಹರಿತೀರ್ಥ ವಿವೇಕ
16. ಭಾಗವತ ರಸ ಸಂದೇಶ
17. ಶಿವರಾತ್ರಿ ರಹಸ್ಯ
18. ವಿರೋಧೋದ್ಧಾರ (ಸಂಸ್ಕೃತ)
19. ಸುಲಲಿತಂ ಶ್ರೀಮದ್ಭಾಗವತಂ – 7 ಸಂಪುಟಗಳಲ್ಲಿ
(ಸಮಗ್ರ ಭಾಗವತದ ಕನ್ನಡಾನುವಾದ)



